ಶ್ರೀ ಪಶುಪತಯೇ ನಮಃ

# ಝಾನ್ಸಿಯ ರಾಣಿ

## ಲಕ್ಷ್ಮೀಬಾಯಿ 

ಮೂಲ ಹಿಂದೀ ಲೇಖಕರು :

**ವೃಂದಾವನಲಾಲ್ ವರ್ಮಾ**

ಅನುವಾದಕರು :

**ಮೇಜರ್ ಎನ್. ಜಿ. ಗೋವಿಂದರಾಜ್**



ಕಾವ್ಯಾಲಯ : : ಪ್ರಕಾಶಕರು

ಮೈಸೂರು

ಮೊದಲನೆಯ ಮುದ್ರಣ—೧೯೫೬



This Kannada translation of "*Jhansi ki Rani, Lakshmi Bai*" by Sri Vrindavanlal Varma is published by kind permission of the author and the Government of India.

*Published by :*

K. CHIDAMBARAM

KAVYALAYA, MYSORE

ಬೆಲೆ : ೩.-೭೫

ಮುದ್ರಣಕಾರರು

ಜಿ. ಎಚ್. ರಾಮರಾವ್, ಬಿ.ಎಸ್‌ಸಿ.

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

# ಅರ್ಪಣೆ

ಈ ಗ್ರಂಥಾನುವಾದವನ್ನು
ದಿವಂಗತರೂ ಪೂಜ್ಯರೂ
ಆದ ನನ್ನ ತಂದೆ ತಾಯಿಗಳಿಗೆ
ಭಕ್ತಿಪೂರ್ವಕವಾಗಿ ಸಮರ್ಪಿಸಿದ್ದೇನೆ

**—ಎ. ಜಿ. ಗೋವಿಂದರಾಜ್**

# FOREWORD

It was by mere chance that I met Major N. G. Govindaraj DADMS, in Jhansi. The memory of that meeting is very happy indeed. He was intensely interested in the history of Jhansi, particularly of Rani Lakshmi Bai. He knows Hindi very well and his wife too. I presented them my Hindi novel '*Jhansi ki Rani Lakshmi Bai*'. They read it out in a short time. Major Govindaraj in a rapture asked me to allow him to translate it into the Kannada language. I still remember the pleasure with which I accorded my permission.

Jhansi has become famous throughout our country on account of our highly venerated heroine Rani Lakshmi Bai. She died fighting on the battle field of Gwalior when she was only 22 years and 7 months old! She was opposed by the greatest British General of 1857—Sir Hugh Rose. The Genral in one of his despatches remarked—' she is the best man amongst them 'and after her death he observed " she was the best and the bravest of them all ". Spirituality and action, humility and heroism, intelligence and alertness, high character and sociability were integrated in her to a wonderful extent. It is difficult indeed to find her parallel in the history of the world.

There was magic in her personality. She influenced all who came within the aura of her sphere. General Rose while fighting against her in Jhansi wrote in a despatch :—' women are seen working in the batteries and supplying ammunition.' She had the magic to convert ' mere wood into steel ' as a proverb goes in Jhansi.

My great-grand-father Diwan Ananda Rao (his name was Ananda Rai, but the Rani changed the Rai into Rao) died fighting for the cause, so sacred to her. Several months after her

death in Gwalior, Major Pinkney, the office Superintendent of General Rose, in one of his reports says that the area between the Betwa and Dhasan (Vetravati Dasharna of the Mahābhārat) is in open insurrection'. This state of affairs continued up to December 1858. "Even the proclamation of amnesty could not induce the fighters of this area to submit to the British Rulers.' So says Major Pinkney also in one of his despatches. A part of the fighters' army was led by my great-grand-father. When some body told him, why fight now, since the Rani has died,

"But I am still alive. So long as I have life, the English shall not be allowed to proceed," was his answer.

Such was the influence of the Rani.

She is still memorialised and shall be so amongst our folks in their folk songs. I give here a free rendering of one such song prevalent in the area which she has sanctified by her memory.

'Bai saheb our Jhansi's queen
She has left her memory green
There still stands her great fortress
In which presided the Eternal Goddess
In there also is Shaker's statue
Ganesh's idol and Bhairava's too
Always there they have been
And Lakshmi Bai our Jhansi's queen
When she saw som e gun's blank fuss
She in her heart became a little nervous
For Dulhaju had turned traitorous
Oh ! his treachery made the British victors
It was he that traitor mean
Oh ! Bai saheb our Jhansi's queen
She then put on male's attire

And gave the British Pluto's fire
With righteous indignation in her heart
She showered her sword's smashing blast
Such was Bai Saheb our Jhansi Queen
She has left her memory green.'

The kind reader will find in the following pages something about their Rani Lakshmi Bai which, I hope, they will treasure in their heart. The traitor who 'fired blank fuss' from his gun and made General Rose's army enter Jhansi will also be found in the book.

JHANSI
24th MAY 1957

VRINDAVAN LAL, VARMA

ಶ್ರೀಃ

# ಪರಿಚಯ

ದಿವಾನ್ ಆನಂದರಾಯರು ಮೂಲ ಗ್ರಂಥಕರ್ತ ಶ್ರೀ ಬೃಂದಾವನಲಾಲ್ ವರ್ಮರ ಮುತ್ತಾತಂದಿರು. ಅವರು ರಾಣೀ ಲಕ್ಷ್ಮೀಬಾಯಿಯ ಪರವಾಗಿ ಸನ್ ೧೮೫೭ರಲ್ಲಿ ಮಹುವಿನ ಯುದ್ಧದಲ್ಲಿ ಭಾಗವಹಿಸಿ ಮಡಿದರು. ಅವರ ಪತ್ನಿ ಸ್ವರ್ಗಸ್ಥರಾದಾಗ ಗ್ರಂಥಕರ್ತರು ೮–೧೦ ವರ್ಷದ ಬಾಲಕರು, ತಮ್ಮ ಮುತ್ತಜ್ಜಿಯಿಂದ ರಾಣಿಯ ವಿಷಯವಾಗಿ ಅನೇಕ ಕಥೆಗಳನ್ನು ಕೇಳಿದ್ದರು. ಮತ್ತು ಆ ವೃದ್ಧಮಾತೆಯು ರಾಣಿಯನ್ನು ನೋಡಿಯೂ ಇದ್ದರು.

ಈ ಕಥೆಗಳೆಲ್ಲವೂ ಗ್ರಂಥಕರ್ತರ ಅಜ್ಜಿಯ ನೆನಪಿನಲ್ಲಿಯೇ ಇದ್ದು ಆಗಿಂದಾಗ್ಗೆ ಗ್ರಂಥಕರ್ತರಿಗೆ ದೊರಕುತ್ತಿದ್ದುವು. ಅಜ್ಜಿಯು ಕಾಲವಾಗುವ ವೇಳೆಗೆ ಶ್ರೀ ವರ್ಮರು ವಕಾಲತ್ತನ್ನು ಪ್ರಾರಂಭಿಸಿ ಸುಮಾರು ೬ ವರ್ಷಗಳಾಗಿದ್ದವು.

ವಂಶಪಾರಂಪರ್ಯವಾಗಿ ಕೇಳಿಬಂದ ಕಥೆಗಳೆಲ್ಲವೂ ಅದ್ಭುತವಾಗಿದ್ದರೂ ಕೂಡ ಅಸ್ಪಷ್ಟವಾಗಿ ಮಬ್ಬಾಗಿ ಇದ್ದು, ಸತ್ಯಾಂಶವು ಕಡಮೆಯಾಗಿಯೂ ಭಕ್ತಿರಸ ಅಧಿಕವಾಗಿಯೂ ಇದ್ದವು. ಆದರೆ ಇತಿಹಾಸದ ಅಧ್ಯಯನವೂ ಮತ್ತು ಸತ್ಯಾಂಶ ಪರಿಶೋಧನೆಗಳೂ ಈ ಕಥೆಗಳ ಮೂಲ್ಯವನ್ನು ಕಡಿಮೆಮಾಡಿದವು. "ರಾಣೀ ಲಕ್ಷ್ಮೀಬಾಯಿಯ ಜೀವನ ಚರಿತ್ರೆ" ಎಂಬ ಪಾರ್ಸನೀಸನ ಪುಸ್ತಕವನ್ನೇನೋ ಗ್ರಂಥಕರ್ತರು ಓದಿದ್ದರು. ಅದು ಕೇವಲ ಚರಿತ್ರೆಯ ಸ್ಥೂಲ ಪರಿಚಯವಾಗಿದ್ದು, ಅಜ್ಜಿ ಮುತ್ತಜ್ಜಿಯರು ಹೇಳುತ್ತಿದ್ದ ಕಥೆಗಳಿಗೆ ವಿರುದ್ಧವಾಗಿದ್ದಿತು. ಪಾರ್ಸನೀಸನ ಅನ್ವೇಷಣಗಳು ಅಮೂಲ್ಯವಾಗಿದ್ದರು ಕೂಡ ಅವನ ಅಭಿಪ್ರಾಯದಲ್ಲಿ, ರಾಣಿಯು ಅಂಗ್ಲೇಯರ ಪರವಾಗಿ ವಿಪ್ಲವಕಾಲದಲ್ಲಿ ಝಾನ್ಸಿಯನ್ನು ಆಳುತ್ತಿದ್ದಳು ಎಂಬುದು ವೇದ್ಯವಾಗುವುದು. ಆದರೆ ಅದು ಅಜ್ಜಿಯರು ಹೇಳುತ್ತಿದ್ದ ಕಥೆಗಳಂತೆ ಮನಸೆಳೆಯುತ್ತಿರಲಿಲ್ಲ. ಬಹುಶಃ ಈ ಕಥೆಗಳು ಜನತೆಯ ಇಚ್ಛಾಪೂರ್ವಕ ಕಲ್ಪನೆಯ ಫಲವಿರಬಹುದು.

ಆದುದರಿಂದಲೇ ಚಿಕ್ಕಂದಿನಿಂದ ಶ್ರೀ ವರ್ಮರು ಯಾವ ಮೂರ್ತಿಯನ್ನು ನಿಷ್ಠೆಯಿಂದ ಪೂಜೆಮಾಡುತ್ತಿದ್ದರೋ ಅದಕ್ಕೆದುರಾಗಿ ಸ್ವಲ್ಪ ನಾಸ್ತಿಕತೆಯು ತಲೆಯೆತ್ತಿಕೊಂಡಿತು.

ರಾಣಿಯು ಸ್ವರಾಜ್ಯಕ್ಕಾಗಿ ಯುದ್ಧ ಮಾಡಿದಳೆಂದು ಶ್ರೀ ವರ್ಮರು ಕೇಳಿದ್ದರು. ಪಾರ್ಸನೀಸನ ಪುಸ್ತಕದಲ್ಲಿಯಾದರೋ ಆವಳ ಶೌರ್ಯವು ಕೇವಲ ಪರಿಸ್ಥಿತಿಯ ವಿವಶತೆಯಿಂದ ಉತ್ಪನ್ನವಾಯಿತೆಂದು ಓದಿದ್ದರು. ಅವರು ಬೋರ್ಡಿಂಗ್ ಹೌಸಿನಲ್ಲಿ ಓದುತ್ತಿದ್ದಾಗ ಒಂದು ಸ್ವಪ್ನವನ್ನು ಕಂಡರಂತೆ—"ಹಾಕೀ ಮೈದಾನದಲ್ಲಿ ಯುದ್ಧವು

ನಡೆಯುತ್ತಿದೆ. ಅದರಲ್ಲಿ ರಾಣಿಯ ಪರವಾಗಿ ಯುದ್ಧಮಾಡುತ್ತಾ ನಾನು ಗಾಯಗೊಂಡೆ. ಎಚ್ಚರಗೊಂಡು ಆಶ್ಚರ್ಯಚಕಿತನಾದೆ. ಅಂದಿನ ದಿನದ ಆಟದಲ್ಲಿ ನಾನು ಒಂದೇಟನ್ನೂ ತಿಂದಿರಲಿಲ್ಲ." ಈ ಸ್ವಪ್ನವೂ ಕೂಡ ಗ್ರಂಥಕರ್ತರಿಗೆ ಸ್ಫೂರ್ತಿದಾಯಕವಾಗಿರಬಹುದು.

ಸರ್ ೧೯೩೨ ರವರೆಗೆ ವಿಚಾರವು ಅವರ ಮನಸ್ಸಿನಲ್ಲಿ ಸುಷುಪ್ತ ರೂಪದಲ್ಲಿ ಎಲ್ಲಿಯೋ ಅಡಗಿದ್ದಿತು.

ಒಂದು ದಿನ ಒಬ್ಬ ಮುಸಲ್ಮಾನ ಸಾಹೇಬನು ಸರ್ ೧೮೫೮ ರಲ್ಲಿ ಯಾವನೋ ಆಂಗ್ಲೇಯ ಅಧಿಕಾರಿಯು ಝಾನ್ಸಿಯನ್ನು ಅಧಿಕೃತವಾಗಿ ವಶಮಾಡಿಕೊಂಡನಂತರ ಪ್ರತಿ ದಿನವೂ ಗೌರ್ನರಿಗೆ ಬರೆಯುತ್ತಿದ್ದ ಕಾಗದ ಪತ್ರಗಳು ಸುಮಾರು ೪೦–೫೦, ಜಡ್ಜಿ ಕಛೇರಿಯ ಅಲಮಾರಿನೊಂದರಲ್ಲಿ ಬಿದ್ದಿವೆಯೆಂದು ಹೇಳಿದನು.

ಶ್ರೀ ವರ್ಮರು ಆ ಪತ್ರಗಳನ್ನು ನಕಲು ಮಾಡಿಸಿದರು. ಆದರೆ ಅವುಗಳಲ್ಲಿ ಅವರಿಗೆ ಹೆಚ್ಚು ವಿಷಯಗಳೇನೂ ದೊರಕದಿದ್ದರೂ ರಾಣಿಯ ಶೌರ್ಯವು ಪರಿಸ್ಥಿತಿಯ ವಿವಶತೆಯಿಂದ ಉತ್ಪನ್ನವಾಗಲಿಲ್ಲವೆಂಬುದು ಸ್ಪಷ್ಟವಾಯಿತು.

ಆ ಕಛೇರಿಯಲ್ಲಿ ನವಾಬ್ ಬನ್ನೇ ಎಂಬುವನು ಅರ್ಜೀ ಸಲ್ಲಿಸುವ ಕೆಲಸಮಾಡುತ್ತಿದ್ದನು. ಅವನನ್ನು ಶ್ರೀ ವರ್ಮರು ದಿನವೂ ಸಾಧಾರಣವಾಗಿ ಕಛೇರಿಯಲ್ಲಿ ನೋಡುತ್ತಿದ್ದರು. ಆತನು ರಾಜಾ ರಘುನಾಥರಾಯನ ಪುತ್ರ ನವಾಬ್ ಅಲೀಬಹದ್ದೂರನ ಮಗಳ ಮಗನೆಂದು ಅವರಿಗೆ ತಿಳಿದು ಬಂದಿತು. ಈತನ ಬಳಿಯೂ ರಾಣಿಗೆ ಸಂಬಂಧಿಸಿದ ವಿಷಯಗಳು ದೊರಕಬಹುದೆಂದು ಆತನನ್ನು ಪ್ರಶ್ನಿಸಿದಾಗ ನವಾಬ್ ಅಲೀಬಹದ್ದೂರನ ದಿನಚರಿಯ ಪುಸ್ತಕಗಳು ಆತನ ಬಳಿಯಿರುವುವೆಂದು ತಿಳಿದು ಬಂದಿತು. ಶ್ರೀ ವರ್ಮರು ಉತ್ಸುಕತೆಯಿಂದ ಆ ಪುಸ್ತಕಗಳನ್ನು ತರಿಸಿ ಓದಿಸಿ ನೋಡಿದಾಗ ನವಾಬ್ ಅಲೀಬಹದ್ದೂರನು ಹೇಗಿದ್ದನು; ಆತನ ಸೇವಕ ಪೀರಾಲಿಯು ಎಂತಹ ವ್ಯಕ್ತಿ; ರಾಣಿ ಲಕ್ಷ್ಮೀಬಾಯಿಯ ವಿಲಕ್ಷಣತೆ; ಮತ್ತು ಆ ಕಾಲದ ಸಮಾಜದ ಪ್ರಗತಿ, ಚಲನವಲನ ಮುಂತಾದುವು ಗೋಚರವಾದುವು. ದಿನಚರಿಯ ಪುಸ್ತಕಗಳು ಗೆದ್ದಲು ಹಿಡಿದು, ಅಲ್ಲಲ್ಲಿ ನಶಿಸಿಹೋಗಿದ್ದು ಪ್ರಥಮ ಭಾಗವು ಪೂರ್ಣವಾಗಿ ನಷ್ಟವಾಗಿದ್ದಿತು. ಆದರೆ ಶ್ರೀ ವರ್ಮರು ಅದರ ಉಪಯುಕ್ತ ಭಾಗಗಳನ್ನು ಬರೆದಿಟ್ಟಿರುವರು.

೧೮೫೮ ರಲ್ಲಿ ನವಾಬ್ ಅಲೀಬಹದ್ದೂರನು ತನ್ನ ರಾಜಭಕ್ತಿಯ ಪ್ರಮಾಣವಾಗಿ ಹೇಳಿಕೆಯೊಂದನ್ನಿತ್ತಿದ್ದನು. ಅದರಲ್ಲಿ ಪೀರಾಲಿಯನ್ನು ಉಲ್ಲೇಖಿಸಿರುವನು. ಆ ಹೇಳಿಕೆಯೂ ಶ್ರೀ ವರ್ಮರಿಗೆ ದೊರಕಿತು. ಇದಕ್ಕಿಂತಲೂ ಮಿಗಿಲಾಗಿ ಅವರಿಗೆ ತುರಾಬಾಲಿ ದರೋಗ ಎಂಬಾತನ ಪರಿಚಯವಾಯಿತು. ಈತನು ಕೆಲವು ವರ್ಷಗಳ ಹಿಂದೆ ತನ್ನ ೧೧೫ ನೇ ವರ್ಷದಲ್ಲಿ ಪರಲೋಕವಾಸಿಯಾದನು. ವಿಪ್ಲವ ಕಾಲದಲ್ಲಿ

ಈತನು ಆಂಗ್ಲೇಯರ ಪರವಾಗಿ ಪೋಲೀಸ್ ಠಾಣೇದಾರನಾಗಿದ್ದನು. ಈತನಿಂದ ರಾಣಿಗೆ ಸಂಬಂಧ ಪಟ್ಟ ಮತ್ತು ಅವರ ಅಜ್ಜ ಮುತ್ತಜ್ಜಿಯರ ಕಥೆಗಳನ್ನು ಪೋಷಿಸು ವಂತಹ ವಿಷಯಗಳನೇಕವು ದೊರೆತವು. ಅದೂ ಆಂಗ್ಲೇಯರ ಠಾಣೇದಾರನಿಂದ!

ಅದೇ ಸಮಯದಲ್ಲಿ ಝಾನ್ಸಿಯಲ್ಲಿಯೇ ಆಜೀಮುಲ್ಲ ಎಂಬ ಮತ್ತೊಬ್ಬರ ಪರಿಚಯವು ಶ್ರೀವರ್ಮರಿಗೆ ದೊರಕಿತು. ಇವರಿಗೆ ತುರಾಬಾಲಿಗಿಂತ ಹೆಚ್ಚು ವಿಷಯ ಗಳು ತಿಳಿದಿದ್ದು ಇವರು ರಾಣಿಯನ್ನೂ ಕಂಡಿದ್ದರು. ಆದರೆ ಆಗ ಅವರಿಗೆ ಬಹಳ ಚಿಕ್ಕ ವಯಸ್ಸು. ತುರಾಬಾಲಿಯು ರಾಣಿಯನ್ನು ನೂರಾರು ಬಾರಿ ಕಂಡಿದ್ದನು. ಇದರ ನಂತರ ಶ್ರೀ ವರ್ಮರು ಝಾನ್ಸಿಯ ವೃದ್ಧ ವೃದ್ಧೆಯರನ್ನೆಲ್ಲಾ ಈ ವಿಷಯಕ್ಕಾಗಿ ತೊಂದರೆ ಪಡಿಸಿದರೆಂದು ಬರೆದಿದ್ದಾರೆ.

ರಾಣಿಯು ಸ್ವರಾಜ್ಯಕ್ಕಾಗಿ ಯುದ್ಧಮಾಡಿದಳೋ ಅಥವಾ ಆಂಗ್ಲೇಯರ ಪರ ವಾಗಿ ಝಾನ್ಸಿಯನ್ನಾಳುತ್ತಾ ಜನರಲ್ ರೋಜನೊಂದಿಗೆ ಪರಿಸ್ಥಿತಿಯೊದಗಿ ಬಂದು ಯುದ್ಧಮಾಡಿದಳೋ ಎಂಬುದೇ ಹಿರಿದಾದ ಪ್ರಶ್ನೆಯಾಯಿತು.

ರಾಣಿಯು ಬಾನ್ಪುರದ ಮರ್ದನಸಿಂಹನಿಗೆ ಯುದ್ಧಕ್ಕೆ ಸಹಾಯವನ್ನಪೇಕ್ಷಿಸಿ ಬರೆದಿದ್ದ ಪತ್ರದಲ್ಲಿ ಸ್ವರಾಜ್ಯವೆಂಬ ಶಬ್ದವನ್ನು ಉಪಯೋಗಿಸಿರುವಳು. ಈ ಪತ್ರವು ಈ ಪ್ರಶ್ನೆಗೆ ನಿರಂತರವೂ ಉತ್ತರಕೊಡುವುದು.

ಕರೇರದ ರಾಜಾಸಾಹೇಬನು ತಮಗೆ ದೊರಕಿದ್ದ ಒಂದು ಸನ್ನದ್ದಿನಿಂದ ಗಂಗಾ ಧರರಾಯನ ಹಸ್ತಾಕ್ಷರವನ್ನು ಶ್ರೀ ವರ್ಮರಿಗೆ ತೋರಿಸಿರುವನು. ಅವರೊಡನೆ ಈ ಸನ್ನದ್ದಿನ ನಕಲೂ ಇರುವುದು. ಆದರಿಂದ ಆ ಕಾಲದಲ್ಲಿ—ಎಂದರೆ ಈಗ ಸುಮಾರು ೧೦೦ ವರ್ಷಗಳ ಹಿಂದೆ—ಈಗಿನಂತೆಯೇ ಹಿಂದಿಯನ್ನು ಬರೆಯುತ್ತಿದ್ದರು ಎಂಬುದು ವ್ಯಕ್ತವಾಗುವುದು.

ವಿಷ್ಣುರಾವ್ ಗೋಡಶೆಯು ಬರೆದಿರುವ "ಮಾಝಾಪ್ರವಾಸ" ವೆಂಬ ಪುಟ್ಟ ಗ್ರಂಥವೊಂದು ಮರಾಠಿ ಭಾಷೆಯಲ್ಲಿರುವುದು. ರಾಣಿಯು ರೋಜನೊಂದಿಗೆ ಯುದ್ಧ ಮಾಡಿದಾಗ ಗೋಡಶೆಯು ರಾಣಿಯ ಜೊತೆಯಲ್ಲಿ ಕಿಲ್ಲೆಯಲ್ಲಿಯೇ ಇದ್ದನು. ಈ ಪುಸ್ತಕದಲ್ಲಿ ಗ್ರಂಥಕರ್ತರು "ಮಾಝಾಪ್ರವಾಸ"ದ ಉಪಯೋಗವನ್ನು ಪಡೆದಿರು ವರು.

ಮೋತೀಬಾಯಿಯು ಐತಿಹಾಸಿಕವ್ಯಕ್ತಿ. ಅಕಸ್ಮಾತ್ತಾಗಿ ಆಕೆಯ ವಿಷಯವು ಗ್ರಂಥಕರ್ತರಿಗೆ ತಿಳಿಯಿತು. ಓರ್ಛಾಹೆಬ್ಬಾಗಿಲಿನ ಬಳಿ ಒಂದು ಮಸೀದಿ ಇದೆ. ಅದರ ಜಮೀನಿನ ವಿಚಾರವಾಗಿ ಒಂದು ಮೊಕದ್ದಮೆಯು ಕಛೇರಿಯಲ್ಲಿ ನಡೆಯುತ್ತಿ ದ್ದಿತು. ಗ್ರಂಥಕರ್ತರು ಮಸೀದಿಯವರಕಡೆ ವಕಾಲತ್ತನ್ನು ವಹಿಸಿದ್ದರು. ಝಾನ್ಸಿ ಯಲ್ಲಿ ಈ ಜಮೀನಿನ ನಕ್ಷೆ ಮತ್ತು ದಾನ ಪತ್ರಗಳು ಇರದೆ, ಗ್ವಾಲಿಯರಿನಲ್ಲಿದ್ದವು.

ಅದರಲ್ಲಿ ಜಮೀನಿನ ಸ್ವಾಮಿನಿಯು ನಾಟಕಶಾಲೆಯ ಮೋತೀಬಾಯಿಯೆಂದು ಬರೆದಿದ್ದಿತು. ಗಂಗಾಧರರಾಯನಿಗೆ ನಾಟಕವನ್ನು ನೋಡುವುದಕ್ಕೂ, ಪ್ರದರ್ಶಿಸುವುದಕ್ಕೂ ಬಹಳ ಆಶೆ. ಸ್ತ್ರೀ ಭೂಮಿಕೆಯನ್ನು ಸ್ತ್ರೀಯರೇ ನಡೆಸುತ್ತಿದ್ದರು. ಈ ಸ್ತ್ರೀಯರಲ್ಲಿ ಮೋತೀಬಾಯಿಯೂ ಒಬ್ಬಳು. ಆಕೆಯ ವಿಷಯವಾಗಿ ಪತ್ತೆಹಚ್ಚುತ್ತಾ ಜೂಹಿ, ದುರ್ಗಿ, ಮೃಗಲಖಾನ್ ಮುಂತಾದವರ ವಿಷಯವೂ ಹೊರಕ್ಕೆಬಂದಿತು. ಇವರ ವಿಷಯವಾಗಿ ಉಪನ್ಯಾಸದಲ್ಲಿ ಬರೆದಿರುವ ಸಂಗತಿಗಳೆಲ್ಲವೂ ಸತ್ಯಾಂಶವೇ.

ಸನ್ ೧೯೩೨ ರಿಂದ ಶ್ರೀ ವರ್ಮರು ಈ ಅನುಸಂಧಾನದಲ್ಲಿಯೇ ತೊಡಗಿದರು.

ಒಂದು ದಿನ ಶ್ರೀ ವರ್ಮರಿಗೆ ರಾಣೀ ಲಕ್ಷ್ಮೀಬಾಯಿಯ ಸೋದರಳಿಯನ ಭೇಟಿಯು ಝಾನ್ಸಿಯಲ್ಲಿಯೇ ಆಯಿತು. ಆತನು ರಾಣಿಯ ವಿಷಯವಾಗಿ ಪ್ರಬಂಧವೊಂದನ್ನು ಬರೆಯ ಬೇಕೆಂದಿದ್ದನು. ರಾಣಿಯು ಏತಕ್ಕಾಗಿ ಯುದ್ಧ ಮಾಡಿದಳೆಂಬ ವಿಷಯದಲ್ಲಿ ಅವರಿಬ್ಬರೂ ಏಕಾಭಿಪ್ರಾಯವುಳ್ಳವರಾಗಿದ್ದರು.

ಪುನಃ ಡಾಕ್ಟರ್ ಸವಾರ್‌ಕರರ ಸೆಕ್ರೆಟರಿಯೂ ಝಾನ್ಸಿಯಲ್ಲಿ ಶ್ರೀ ವರ್ಮರಿಗೆ ದೊರಕಿದರು. ಅವರು ಮರಾಠಿಯಲ್ಲಿ '೧೮೫೭' ಎಂಬುದನ್ನು ಬರೆಯುತ್ತಿದ್ದರು. ಅವರ ಗ್ರಂಥಕ್ಕೆ ಅವಶ್ಯಕವಾದ ವಿಷಯವನ್ನು ಶ್ರೀ ವರ್ಮರು ದೊರಕಿಸಿಕೊಟ್ಟರು. ಮತ್ತು "ರಾಣಿಯ ವಿಷಯವಾಗಿ ಅನೇಕರು ಗ್ರಂಥಗಳನ್ನು ಬರೆದಿರುವರು ಮತ್ತು ಬರೆಯುತ್ತಲೂ ಇರುವರು. ಹೀಗಿರುವಲ್ಲಿ ನಾನೇತಕ್ಕೆ ಬರೆಯಬೇಕು?" ಎಂಬ ಯೋಚನೆಯೂ ಗ್ರಂಥಕರ್ತರಿಗೆ ಮೂಡಿತು. ಕೆಲವು ದಿನಗಳನಂತರ ಈ ನಿರ್ಧಾರವು ಬದಲಾಯಿತು.

ಕಲೆಕ್ಟರ್ ಕಛೇರಿಯಲ್ಲಿಯೂ ಕೆಲವು ಸಾಮುಗ್ರಿ ದೊರಕಿತು. ೧೮೫೮ ರಲ್ಲಿ ಪ್ರಜೆಗಳ ಹೇಳಿಕೆಯನ್ನು ಕೇಳಿ ತೆಗೆದುಕೊಳ್ಳಲಾಗಿದ್ದಿತು. ಅದನ್ನು ಓದಿದನಂತರ ಗ್ರಂಥಕರ್ತರ ನಿರ್ಧಾರವು ಇನ್ನೂ ದೃಢಪಟ್ಟು ರಾಣಿಯು ಸ್ವರಾಜ್ಯಕ್ಕಾಗಿ ಯುದ್ಧ ಮಾಡಿದಳೆಂಬುದು ನಿಶ್ಚಯವಾಯಿತು.

ಹಾಕೀ ಮೈದಾನದ ಭೂಮಿಕೆಯಲ್ಲಿ ಕಂಡ ಸ್ವಪ್ನವು ಪುನಃ ಜಾಗೃತವಾಯಿತು. ಇತಿಹಾಸಕ್ಕೆ ನಿಕಟ ಸಂಬಂಧವಿರುವ ಉಪನ್ಯಾಸಬರೆಯಬೇಕೆಂಬ ತೀರ್ಮಾನಕ್ಕೆ ಬಂದರು. ರಕ್ತ ಮಾಂಸಗಳನ್ನು ತುಂಬಿ ಇತಿಹಾಸಕ್ಕೆ ಸರಿಯಾದ ಒಂದು ರೂಪ ಕೊಡಲು ಉಪನ್ಯಾಸವೇ ತಕ್ಕ ಸಾಧನವೆಂದು ಮನಸ್ಸಿಗೆ ಹೊಳೆದು ಅದನ್ನು ಕಾರ್ಯಗತಮಾಡಿ ವಾಚಕರ ಮುಂದಿರಿಸಿರುವರು.

ಆನಂದರಾಯನು ರಾಣಿಗಾಗಿ ತನ್ನ ಪ್ರಾಣವನ್ನೇ ಪಣವಾಗಿಟ್ಟನು. ಗ್ರಂಥಕರ್ತರು ತಮ್ಮ ಬರಹ ಲೇಖನಿಗಳನ್ನು ತ್ಯಾಗ ಮಾಡಿದ್ದಾರೆ.—ಅಳಿಲು ಭಕ್ತಿ ಮಳಲು ಸೇವೆ ಎಂಬುದನ್ನು ಪಾಠಕರು ನೆನಪಿನಲ್ಲಿಡಲಿ.

# ಮುನ್ನುಡಿ

೧೯೫೪ ನೇ ಇಸವಿ ಅಕ್ಟೋಬರ್ ತಿಂಗಳಲ್ಲಿ ನನಗೆ ಶ್ರೀ ವೃಂದಾವನಲಾಲ್ ವರ್ಮರ ಪರಿಚಯವು ಅಕಸ್ಮಾತ್ತಾಗಿ ಲಭಿಸಿತು. ಝಾನ್ಸಿಯ ಕೋಟೆಯನ್ನು ನಾನು ಹಿಂದೆ ಹಲವಾರು ಬಾರಿ ನೋಡಿದ್ದೆ. ಆದರೆ ಅಂದು ಆ ಅಕ್ಟೋಬರ್ ತಿಂಗಳು ೧೦ ನೇ ತಾರೀಖು—ನನ್ನ ಸ್ನೇಹಿತರೊಬ್ಬರು ಬಂದು ನನ್ನನ್ನು ಝಾನ್ಸಿಯ ಕೋಟೆಯನ್ನು ನೋಡಿಕೊಂಡು ಬರಲು ಕರೆದರು. ಮೊಟ್ಟ ಮೊದಲು ನಾನು ಬರುವುದಿಲ್ಲವೆಂದೆ. ಆದರೆ ಅವರು ನನ್ನನ್ನು ಒತ್ತಾಯಪಡಿಸುತ್ತಾ, "ಇಂದು ಕೋಟೆಯ ಎಲ್ಲಾ ಭಾಗ ಗಳನ್ನೂ ಮತ್ತು ಚರಿತ್ರೆಯನ್ನೂ ಸುಸೂಕ್ಷ್ಮವಾಗಿ ತಿಳಿಸಲು ಶ್ರೀ ವೃಂದಾವನಲಾಲ್ ವರ್ಮರು ಬರುತ್ತಾರೆ, ಅವರು ಝಾನ್ಸಿಯ ರಾಣಿಯ ವಿಷಯವಾಗಿ ಹಿಂದೀ ಭಾಷೆ ಯಲ್ಲಿ "ಝಾನ್ಸಿಕಿ ರಾಣಿ—ಲಕ್ಷ್ಮೀಬಾಯಿ" ಎಂಬ ಪುಸ್ತಕವನ್ನು ಬರೆದು ಪ್ರಸಿದ್ಧರಾಗಿ ದ್ದಾರೆ. ಅವರಿಂದ ನಿಮಗೆ ಝಾನ್ಸಿಯಲ್ಲಿ ೧೮೫೭ ರಲ್ಲಿ ನಡೆದ ಕ್ರಾಂತಿಕದನಗಳ ವಿಷಯವು ಚೆನ್ನಾಗಿ ಅರಿವಾಗುವುದು. ಖಂಡಿತ ಬರಬೇಕು" ಎಂದರು. ನಾನು ನನ್ನ ಪತ್ನಿಯೊಡನೆ ಸ್ನೇಹಿತರನ್ನು ಹಿಂಬಾಲಿಸಿದೆ.

ಶ್ರೀ ವರ್ಮರವರನ್ನು ಸಂದರ್ಶಿಸುವ ಮೊದಲು ಅಲ್ಪ ಸ್ವಲ್ಪ ಝಾನ್ಸಿಯ ಕ್ರಾಂತಿ ಕದನಗಳ ವಿಷಯವನ್ನು ಓದಿ ತಿಳಿದುಕೊಂಡಿದ್ದೆ. ಅಂದು ನನ್ನ ಕುತೂಹಲವು ಇಮ್ಮಡಿಸಿ ಇನ್ನೂ ಹೆಚ್ಚು ವಿಷಯವನ್ನು ಅರಿಯಬೇಕೆಂದು ಆಸೆ ಆಯಿತು. ಶ್ರೀ ವರ್ಮರು ನಮಗೆ ಕೋಟೆಯ ಎಲ್ಲಾ ಭಾಗಗಳನ್ನೂ ವಿಶದವಾಗಿ ತೋರಿಸಿ ಅಲ್ಲಿ ನಡೆದ ಘಟನೆಗಳನ್ನು ವರ್ಣಿಸಿದರು. ನಂತರ ನಾವು ಅವರ ಮುದ್ರಣಾಲಯಕ್ಕೆ ಹೋದೆವು. ಅಲ್ಲಿ ಅವರು ನಮಗೆ ತಾವು ಬರೆದ ಕಾದಂಬರಿ "ಝಾನ್ಸಿಕಿರಾಣಿ ಲಕ್ಷ್ಮೀಬಾಯಿ" ಎಂಬ ಪುಸ್ತಕವನ್ನು ಅಭಿಮಾನದಿಂದ ಕೊಟ್ಟರು. ಅದನ್ನು ಓದಿದನಂತರ ಅವರನ್ನು ಆ ಪುಸ್ತಕವನ್ನು ಕನ್ನಡಕ್ಕೆ ಭಾಷಾಂತರ ಮಾಡಿರುವರೆ? ಎಂದು ಕೇಳಿದೆ. ಯಾರೂ ಅದುವರೆಗೂ ಭಾಷಾಂತರಿಸಿಲ್ಲವೆಂದು ಅರಿತಮೇಲೆ ನಾನು ಅವರಿಂದ ಆ ಪುಸ್ತಕವನ್ನು ಕನ್ನಡದಲ್ಲಿ ಪರಿವರ್ತಿಸಿ ಬರೆಯುಲು ಅಪ್ಪಣೆಯನ್ನು ಪಡೆದೆ. ಅವರೇನೋ ಸಂತೋಷ ದಿಂದ ಸಮ್ಮತಿಯಿತ್ತರು. ಭಾಷಾಂತರ ಮಾಡುವುದು ಎಷ್ಟು ಕಠಿಣವೆಂಬುದು ನನಗೆ ಆಗ ತಿಳಿದಿರಲಿಲ್ಲ. ಉತ್ಸಾಹಭರಿತನಾಗಿ ಕೇಳಿದೆ. ಅನುಮತಿ ದೊರಕಿತು. ಆದರೆ ಭಾಷಾಂತರ ಮಾಡಲು ಕುಳಿತಾಗ ಅದು ಎಷ್ಟು ಕಷ್ಟವಾದ ಕೆಲಸವೆಂಬುದು ತಿಳಿ ಯಿತು. ಹಿಂದೆ ಎಂದೂ ನಾನು ಈ ವಿಧವಾದ ಕೆಲಸವನ್ನು ಕೈಹಿಡಿದಿರಲಿಲ್ಲ.

ಮುಖ್ಯವಾಗಿ ನಾನು ಸಂಸ್ಕೃತದ ವಿದ್ಯಾರ್ಥಿ. ಅದೂ ಕಾಲೇಜಿನಲ್ಲಿರುವಾಗ

ಸಂಸ್ಕೃತ ಭಾಷೆಯಲ್ಲಿರುವ ಶ್ರೀ ಕಾಳಿದಾಸ ಮಹಾಕವಿಯ "ಮಾಲವಿಕಾಗ್ನಿಮಿತ್ರ" ವೆಂಬ ನಾಟಕವನ್ನು ಕನ್ನಡಕ್ಕೆ ಗದ್ಯರೂಪದಲ್ಲಿ ಭಾಷಾಂತರಮಾಡಲು ಪ್ರಯತ್ನಪಟ್ಟೆ. ಅದು ನನ್ನ ಮೊಟ್ಟಮೊದಲನೆಯ ಪ್ರಯತ್ನವಾಗಿದ್ದು ಅದನ್ನು ಹೊರಗೆಡಹಲು ಹಿಂತೆಗೆದು ಅದು ಹಾಗೆಯೇ ನಿಂತಿತು.

ನಂತರ ವೈದ್ಯ ವೃತ್ತಿಯನ್ನು ಕೈಕೊಂಡಮೇಲೆ ಅಗಾಗ್ಗೆ ಯಾವುದಾದರೂ ಕಾದಂಬರಿಗಳನ್ನು ಓದುತ್ತಿದ್ದೆ. ಇದು ಹೊರತು ಕನ್ನಡಕ್ಕೂ ನನಗೂ ಯಾವವಿಧವಾದ ಸಂಬಂಧವೂ ಇರಲಿಲ್ಲ.

ಈ ಪುಸ್ತಕವನ್ನು ಬರೆಯಲು ೧೯೫೪ ರಲ್ಲಿ ಜಲಂಧರಿನಲ್ಲಿರುವಾಗ ಪ್ರಾರಂಭಿಸಿ ನೇಪಾಳರಾಜ್ಯದ ಕಟ್ಮಂಡುವಿನಲ್ಲಿ ೧೯೫೬ ರಲ್ಲಿ ಮುಕ್ತಾಯಗೊಳಿಸಿದೆ. ಈ ಕೆಲಸ ದಲ್ಲಿ ನನ್ನ ನೆರವಿಗೆ ಬಂದವಳು ನನ ಪತ್ನಿ ಶ್ರೀಮತಿ ಕ್ಷಮಾದೇವಿ. ಆಕೆಯು ಮೈಸೂರು ವಿಶ್ವವಿದ್ಯಾನಿಲಯದ ಪದವೀಧರಳು. ಕನ್ನಡವನ್ನು ತನ್ನ ಮುಖ್ಯ ಭಾಷೆಯನ್ನಾಗಿ ಓದಿ ಚೆನ್ನಾಗಿ ಅರಿತಿರುವಳು. ಹಿಂದೀ ಭಾಷೆಗೆ ನಾವಿಬ್ಬರೂ ಅಪರಿಚಿತರೇ. ಆದರೂ ನನ್ನೊಡನೆ ಕುಳಿತು ಕೆಲಸಮಾಡಿದಳು. ಹಲವಾರು ಸಲ ಈ ಕೆಲಸವನ್ನು ಮುಕ್ತಾಯಗೊಳಿಸಲು ನನ್ನಿಂದ ಆಗುವುದಿಲ್ಲವೆಂದು ಬಿಟ್ಟಾಗ ಪ್ರೋತ್ಸಾಹನೆಯನ್ನು ಕೊಟ್ಟು, ತನ್ನ ಮನೆಗೆಲಸದ ಜೊತೆಗೆ ಇದನ್ನೂ ಒಂದು ಮುಖ್ಯ ಕೆಲಸವೆಂದು ಗಣಿಸಿ, ನನಗೆ ಅತ್ಯಂತ ಸಹಾಯ ಮಾಡಿದಳು. ಆಕೆಗೆ ನಾನು ಎಷ್ಟು ವಂದನೆಗಳನ್ನರ್ಪಿಸಿದರೂ ಸಾಲದು.

ಇದಲ್ಲದೆ ಹಲವಾರು ಜನ ಸ್ನೇಹಿತರು ವಿಧವಿಧವಾಗಿ ಈ ಕೆಲಸದಲ್ಲಿ ನನ್ನ ನೆರ ವಿಗೆ ಬಂದರು ಹೀಗೆ ತಕ್ಕ ಸಮಯಕ್ಕೆ ಹಿಂದೀ ಶಬ್ದಕೋಶವನ್ನು ಕೊಟ್ಟು ಸಹಾಯ ಮಾಡಿದವರಲ್ಲಿ ಪ್ರೊಫೆಸರ್ ಶ್ರೀ ಎಂ. ಶ್ರೀನಿವಾಸಯ್ಯ ಮತ್ತು ಶ್ರೀ ಎ. ಆರ್. ಎಸ್. ಮೂರ್ತಿ ಯವರನ್ನು ನಾನು ಎಂದಿಗೂ ಮರೆಯುವಂತಿಲ್ಲ.

ಶ್ರೀಮಾನ್ ಡಿ. ವಿ. ಗುಂಡಪ್ಪನವರು ನಮ್ಮ ಮನೆತನದ ಸ್ನೇಹಿತರು. ಭಾಷಾಂತರ ಮಾಡಿದನಂತರ ಅದನ್ನು ಓದಿ ದೋಷಗಳನ್ನು ತಿದ್ದಿ, ಓದಲು ಅರ್ಹ ವಾಗುವಂತೆ ಮಾಡಬೇಕೆಂದು ಅವರನ್ನು ಪ್ರಾರ್ಥಿಸಿದೆ. ಅವರು ಒಡನೆಯೇ ಸಂತೋಷ ದಿಂದ ಸಮ್ಮತಿಯಿತ್ತರು. ಅವರಿಂದ ನನಗೆ ಶ್ರೀ ಚಿದಂಬರಂ ಅವರ ಪರಿಚಯ ವಾಯಿತು. ಇವರೀರ್ವರ ಸಹಾಯದಿಂದ ಈ ಐತಿಹಾಸಿಕ ಕಾದಂಬರಿಯನ್ನು ವಾಚ ಕರ ಮುಂದಿಡಲು ನನಗೆ ಅವಕಾಶವಾಯಿತು. ಅವರಿಗೆ ನಾನು ಚಿರಋಣಿಯಾಗಿ ದ್ದೇನೆ.

ಶ್ರೀಮಾನ್ ಚಿದಂಬರಂ ಅವರು ಈ ಪುಸ್ತಕವನ್ನು ತಿದ್ದುವುದಲ್ಲದೆ ಅತಿ ಜಾಗ್ರತೆ ಯಾಗಿ ಮುದ್ರಿಸಿ ನಿಮ್ಮ ಮುಂದಿರಿಸಲು ಅತ್ಯಂತ ಸಹಾಯಮಾಡಿರುವರು. ಇದಕ್ಕಾಗಿ

ಅವರಿಗೂ ಅವರ ಮುದ್ರಣಾಲಯದವರಿಗೂ ನನ್ನ ಅನಂತಾನಂತ ವಂದನೆಗಳು.

ಈ ಭವ್ಯವಾದ ಕಾದಂಬರಿಯನ್ನು ಕನ್ನಡಾಭಿಮಾನಿಗಳ ಗಮನಕ್ಕೆಳೆಯುವ ಸದವಕಾಶವನ್ನಿತ್ತು, ಭಾಷಾಂತರಮಾಡುವಾಗ ಅನೇಕ ಸಲಹೆಗಳನ್ನಿತ್ತ ಶ್ರೀ ವೃಂದಾವನಲಾಲ್ ವರ್ಮರಿಗೆ ಸಾಕಷ್ಟು ವಂದನೆಗಳನ್ನರ್ಪಿಸಲು ಅಸಮರ್ಥನಾಗಿರುವೆನು. ಇವರು ಹಿಂದೀ ಭಾಷೆಯಲ್ಲಿ ಅನೇಕ ಪ್ರಸಿದ್ಧ ಕಾದಂಬರಿಗಳನ್ನು ಬರೆದು ಜನರ ಅಪಾರ ಪ್ರಶಂಸೆಗೆ ಒಳಗಾಗಿರುವರು. ಅವರಿಗೆ ಭಗವಂತನು ಆಯುರಾರೋಗ್ಯ ಭಾಗ್ಯಗಳನ್ನಿತ್ತು ಇನ್ನೂ ಈ ವಿಧವಾದ ಹಿಂದೂಸ್ಥಾನೀಯರ ಶೌರ್ಯ ವೀರ್ಯ ಪ್ರತಾಪಗಳನ್ನು ವಿವರಿಸುವ ಕಾದಂಬರಿಗಳನ್ನು ಬರೆಯುವಂತೆ ಮಾಡಲೆಂದು ಹಾರೈಸುತ್ತೇನೆ.

ಕಟ್ಮಂಡು (ನೇಪಾಳ)
೩೧_೫_೫೭.

ಎನ್. ಜಿ. ಗೋವಿಂದರಾಜ್

## ಕೃತಜ್ಞತೆ

ಸ್ಮರಣೀಯವಾದ ಈ ಐತಿಹಾಸಿಕ ಕಾದಂಬರಿಯನ್ನು ಕಾರ್ಯಾಲಯದ ಮೂಲಕ ಪ್ರಕಟಿಸಲು ನೆರವಾದ ಶ್ರೀಮಾನ್ ಡಿ. ವಿ. ಜಿ. ಅವರಿಗೂ ಮೇಜರ್ ಶ್ರೀ ಎಸ್. ಜಿ. ಗೋವಿಂದರಾಜ್ ಅವರಿಗೂ ಕೃತಜ್ಞರಾಗಿದ್ದೇವೆ. ಅತ್ಯಲ್ಪಾವಕಾಶದಲ್ಲಿ ಇದನ್ನು ಸುಂದರನಾಗಿ ಮುದ್ರಿಸಿಕೊಟ್ಟ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಅಧಿಕಾರಿಗಳ ಉಪಕಾರ ವಿಶೇಷವಾಗಿ ನೆನೆಯತಕ್ಕದ್ದಾಗಿದೆ.

ಪ್ರಕಾಶಕರು

# ವಿಷಯ ಸೂಚಿಕೆ



## ಚಿತ್ರಗಳು



ಗಂಗಾಧರರಾಯ



ರಾಣಿ ಲಕ್ಷ್ಮೀಬಾಯಿ ಯುದ್ಧಮಾಡುತ್ತಿರುವುದು

# ಝಾನ್ಸಿಯ ರಾಣಿ

## ೧

ಝಾನ್ಸಿಯ ಮಂಡಲಾಧಿಪತಿ ರಾಮಚಂದ್ರರಾಯನ ಬಳಿಗೆ ಈಸ್ಟ್ ಇಂಡಿಯಾ ಕಂಪೆನಿಯ ಪ್ರತಿನಿಧಿಯಿಂದ ಒಂದು ಓಲೆ ಬಂತು. ಅದರ ಒಕ್ಕಣೆ ಈ ರೀತಿಯಾಗಿತ್ತು—"ಗವರ್ನರ್ ಜನರಲ್ ಸಾಹೇಬ ವಿಲಿಯಂ ಬೆಂಟಿಂಕರು ಇಂದಿನಿಂದ ತಮಗೆ 'ರಾಜಾ' ಎಂಬ ಬಿರುದನ್ನು ದಯಪಾಲಿಸಿರುವರು. ಕಂಪೆನಿಯ ಮೈತ್ರಿಯ ಕಟ್ಟಳೆಯಂತೆ ತಮಗೆ ಯೂನಿಯನ್ ಜಾಕ್ ಧ್ವಜವು ಭೇಟಿಮಾಡಿಸಲ್ಪಡುವುದು. ಇದರ ಗೌರವವನ್ನು ಕಾಪಾಡುವುದು ತಮ್ಮ ಕರ್ತವ್ಯ."

ಸನ್ ೧೮೩೨ ನೇ ಇಸವಿಯಲ್ಲಿ ಝಾನ್ಸಿಯ ಕೋಟೆಯ ಅರಮನೆಯ ಮೈದಾನದಲ್ಲಿ ಬಹಳ ವಿಜೃಂಭಣೆಯಿಂದ ನಡೆದ ದರ್ಬಾರಿನಲ್ಲಿ ಮೇಲ್ಕಂಡ ಸುದ್ದಿಯು ಘೋಷಿಸಲ್ಪಟ್ಟಿತು. ರಾಮಚಂದ್ರರಾಯನು ಸಂತೋಷದಿಂದ ಬಿರುದನ್ನೂ ಪತಾಕೆಯನ್ನೂ ಸ್ವೀಕರಿಸಿದನು. ಝಾನ್ಸಿಯ ಮಾಂಡಲೀಕನೊಂದಿಗೆ ಕಂಪೆನಿಯವರ ಮೊದಲನೆಯ ಸಂಧಿಯು ೧೮೦೪ ನೇ ಇಸವಿಯಲ್ಲಿ ನಡೆದಿತ್ತು. ಆ ಸಮಯದಲ್ಲಿ ಪಂತಪ್ರಧಾನನಾದ ಪೇಶ್ವೆ ಎರಡನೆ ಬಾಜೀರಾಯನ ಆಳ್ವಿಕೆಯಲ್ಲಿ ಶಿವರಾವ್‌ಭಾವುವು ಝಾಂಸಿಯ ಮಾಂಡಲೀಕನಾಗಿದ್ದನು. ಅವನನ್ನು ಸುಬೇದಾರನೆಂದು ಸಂಬೋಧಿಸಲಾಗುತ್ತಿತ್ತು. ಪರಸ್ಪರ ಸಹಾಯ ಮತ್ತು ಮಂತ್ರಾಲೋಚನೆ ಇವೇ ಆಧಾರವಾಗಿ ಈ ಸಂಧಿಯು ಏರ್ಪಟ್ಟಿದ್ದಿತು. ಪೇಶ್ವೆಗಳ ಆಡಳಿತವು ಬಿಗಿತಪ್ಪಿ ಸುಬೇದಾರನು ಪರಾಕ್ರಮಪರನಾಗಿದ್ದನು. ಬುಂದೇಲುಖಂಡವನ್ನು ಸ್ವಾಧೀನಮಾಡಿಕೊಳ್ಳಲು ಆಂಗ್ಲೇಯರಿಗೆ ಝಾನ್ಸಿ ಸರದಾರನ ಮೈತ್ರಿಯು ಅವಶ್ಯಕವಾಗಿದ್ದಿತು. ಈ ಸಂಧಿಯ ಪ್ರಭಾವವು ಬುಂದೇಲುಖಂಡದ ಸಂಸ್ಥಾನದ ಮೇಲೆ ಬಿದ್ದಿತು. ೧೮೧೮ ನೇ ಜೂನ್ ತಿಂಗಳಲ್ಲಿ ಪ್ರಧಾನ ಬಾಜೀರಾಯನಿಗೂ ಮತ್ತು ಆಂಗ್ಲೇಯರಿಗೂ ಅಂತಿಮ ಸಂಧಿಯು ನಡೆಯಿತು. ಈ ಸಂಧಿಯಿಂದ ಬಾಜೀರಾಯನಿಗೆ ಪ್ರಾಪ್ತವಾಗಿದ್ದ ಬುಂದೇಲುಖಂಡದ ಅಧಿಕಾರ ಮತ್ತು ಬಳುವಳಿ ಕಂಪೆನಿಯ ಕೈವಶವಾಯಿತು. ಬಾಜೀರಾಯನಿಗಾದರೋ ೮ ಲಕ್ಷ ರೂಪಾಯಿಗಳ ವಾರ್ಷಿಕ ವೇತನ, ಬಿಟ್ಟೂರಿನ ಖಾಸಾ ಜಹಗೀರು ಮತ್ತು ಪುಣೆಯ ತ್ಯಾಗ, ಬಿಟ್ಟೂರಿಗೆ ಪ್ರವಾಸ ಇವು ದೊರಕಿದವು.

ಅದೇ ವರ್ಷ ನವೆಂಬರು ತಿಂಗಳಿನಲ್ಲಿ ಶಿವರಾವ್‌ಭಾವುವಿನ ಅಪ್ರಾಪ್ತವಯಸ್ಕನಾಗಿದ್ದ ಮೊಮ್ಮಗ ರಾಮಚಂದ್ರರಾಯನೊಡನೆ ಮತ್ತೊಂದು ಒಪ್ಪಂದ ನಡೆದು

ಅದರ ಪರಿಣಾಮವಾಗಿ ಪೇಶ್ವೆಯು ಕಂಪೆನಿಯ ಆಡಳಿತಕ್ಕೊಳಗಾಯಿತು. ಈ ಒಡಂಬಡಿಕೆಯ ಶರತ್ತುಗಳಲ್ಲಿ ಝಾಂಸಿಯ ರಾಜ್ಯವು ರಾಮಚಂದ್ರರಾಯನ ಕುಟುಂಬದಲ್ಲಿಯೇ ಇರಬೇಕೆಂದೂ ಮತ್ತು ಉತ್ತರಾಧಿಕಾರಿಯು ಸಂತಾನನಾಗಲಿ, ಸಗೋತ್ರಜನಾಗಲಿ ಅಥವಾ ದತ್ತು ಸ್ವೀಕೃತನಾಗಲಿ ಆತನ ಕುಟುಂಬಕ್ಕೆ ಸೇರಿದವನೇ ಆಗಿರಬೇಕೆಂದೂ ನಿಷ್ಕರ್ಷೆಯಾಯಿತು.

೧೮೩೨ ನೇ ಇಸವಿಯಲ್ಲಿ ರಾಮಚಂದ್ರರಾಯ ಮತ್ತು ಅವನ ಉತ್ತರಾಧಿಕಾರಿಗಳಿಗೆ "ರಾಜಾ" ಎಂಬ ಬಿರುದು ಕೊಡಲಾಯಿತು.

ಆ ದರ್ಬಾರಿನಲ್ಲಿ ಶಿವರಾವ್ ಭಾವುವಿನ ಮಕ್ಕಳು ರಘುನಾಥರಾವ್ ಮತ್ತು ಗಂಗಾಧರರಾವ್ ಎಂಬಿಬ್ಬರೂ ಹಾಜರಿದ್ದರು. ಶಿವರಾವ್ ಭಾವುವಿನ ಹಿರಿಯ ಮಗನಾದ ಕೃಷ್ಣರಾವೆಂಬಾತನು ಕಾಲಾಧೀನನಾಗಿದ್ದನು. ರಾಮಚಂದ್ರರಾಯನು ಈತನ ಪುತ್ರನು. ಆದುದರಿಂದ ಈತನಿಗೆ ಝಾನ್ಸಿಯ ಗಾದಿಯು ದೊರಕಿತು. ದರ್ಬಾರಿನಲ್ಲಿ "ರಾಜಾ" ಎಂಬ ಬಿರುದು ದೊರಕಿದ ಪ್ರಯುಕ್ತ ಹಿರಿಯ ಕಿರಿಯ ಎಲ್ಲಾ ಜಮಿಾನುದಾರರಿಗೂ ಸನ್ಮಾನಗಳು ದೊರಕಿದವು. ಕಿರಿಯ ಜಮಿಾನ್ದಾರರ ಪೈಕಿ ಮಹುವಿನ ಕಾಯಸ್ಥ ಜಾತಿಯ ಯುವಕ ಆನಂದರಾಯನೂ ಒಬ್ಬನಾಗಿದ್ದನು.

ರಾಮಚಂದ್ರರಾಯನ ಅಪ್ರಾಪ್ತವಯಸ್ಸಿನಲ್ಲಿ ರಾಜ್ಯಾಡಳಿತವು ಅವನ ತಾಯಿ ಸಖೂಬಾಯಿಯ ಕೈಯ್ಯಲ್ಲಿದ್ದಿತು. ಅವನು ಪ್ರಾಪ್ತವಯಸ್ಕನಾದ ನಂತರವೂ ಅವಳು ಅಧಿಕಾರ ಲೋಲುಪತೆಯನ್ನು ತ್ಯಜಿಸಲು ಸಿದ್ಧಳಾಗಿರಲಿಲ್ಲ. ರಾಮಚಂದ್ರರಾಯನು ರಾಜ್ಯಸೂತ್ರವನ್ನು ಸ್ವಾಧೀನ ಪಡಿಸಿಕೊಂಡು ಕೆಲವು ದಿನಗಳಲ್ಲಿಯೇ ಖಜಾನೆಯನ್ನೂ ಬರಿದುಮಾಡಿದನು. ಆದರೆ ಸಖೂಬಾಯಿಗೆ ಖಜಾನೆಯು ಬರಿದಾದುದಕ್ಕಿಂತ ರಾಜ್ಯಸೂತ್ರವು ಕೈಬಿಟ್ಟು ಹೋದುದು ಹೆಚ್ಚು ಅಸಹನೀಯವಾಯಿತು. ಸಖೂಬಾಯಿಯು ಸ್ವಲ್ಪ ಕಾಲ ಮಾತ್ರ ರಾಜ್ಯವಾಳಿದರೂ ಬಹು ದರ್ಪಶಾಲಿಯಾದ ರಾಜಮಾತೆಯಾಗಿದ್ದಳು. ಅವಳ ಮುಖ ಚಹರೆಯಲ್ಲಿದ್ದ ಒಂದೊಂದು ಗೆರೆಯೂ, ಸುಕ್ಕೂ ಅವಳ ಕಠೋರತೆಯನ್ನು ವ್ಯಕ್ತಪಡಿಸುತ್ತಿದ್ದವು. ಅವಳ ಕಠಿಣ ಹೃದಯವು ವಿಖ್ಯಾತವಾಗಿದ್ದಿತು. ಸಖೂಬಾಯಿಗೆ ರಾಮಚಂದ್ರರಾಯನು ರಾಜ್ಯಕ್ಕೆ ಬರುವುದು ಅಸಹನೀಯವಾಗಿದ್ದಿತು. ಅವಳು ರಾಮಚಂದ್ರರಾಯನ ಮರಣಕ್ಕೆ ಷಡ್ಯಂತರವನ್ನು ರಚಿಸಿದಳು.

ಝಾನ್ಸಿಯ ಕೋಟೆಯ ಲಕ್ಷ್ಮೀಹೆಬ್ಬಾಗಿಲಿನ ಆಚೆ, ಲಕ್ಷ್ಮೀ ಕೆರೆಯ ಆಗ್ನೇಯ ದಿಕ್ಕಿನ ಬದುವಿನ ಮೇಲೆ, ಮಹಾಲಕ್ಷ್ಮಿಯ ದೇವಾಲಯವಿದೆ. ಈ ಮಂದಿರದ ಆವರಣದಲ್ಲಿನ ಕೊಳದಲ್ಲಿ ತನ್ನ ಪುತ್ರನ ವಧೆಗಾಗಿ ಭಲ್ಲೆಗಳನ್ನು ನೀರಿನಲ್ಲಿ ನೆಡಸಿದ್ದಳು. ರಾಮಚಂದ್ರರಾಯನಿಗಾದರೋ ವಿಶೇಷವಾಗಿ ರಾತ್ರಿಯ ವೇಳೆಯಲ್ಲಿ ದೋಣಿಯಲ್ಲಿ ವಿಹರಿಸುವುದಕ್ಕೆ ಆಸೆಯಿದ್ದಿತು. ಆತನು ಆರೀತಿ ವಿಹಾರಕ್ಕೆ ಹೋದಾಗ ಅವನ ಗತಿ

ಸಮಾಪ್ತವಾಗುತ್ತದೆಂದು ಇದಿರು ನೋಡಿದ್ದಳು.

ಆದರೆ ಮಹುವಿನ ಲಾಲುಕೋದೇಲ್ಕರ್ ಎಂಬ ಮರಾಠಯುವಕ ಮತ್ತು ಮೇಲೆಹೇಳಿದ ಆನಂದರಾಯ ಇವರುಗಳ ಸಹಾಯದಿಂದ ರಾಮಚಂದ್ರರಾಯನ ಜೀವವು ಉಳಿಯಿತು. ಎರಡು ದಿನಗಳ ತರುವಾಯ ಸಖೂಬಾಯಿಯು ಕೋದೇಲ್ಕ ರನನ್ನೂ ಕೊಲ್ಲಿಸಿದಳು. ಆನಂದರಾಯನಾದರೋ ತಲೆತಪ್ಪಿಸಿಕೊಂಡು ಓಡಿ ಹೋದನು. ಲಾಲುಕೋದೇಲ್ಕರನಿಗೆ ಮೂವರು ದರಿದ್ರರಾದ ಬಂಧುಗಳಿದ್ದರು. ಅವರು ಝಾನ್ಸಿಯಿಂದ ತಲೆ ತಪ್ಪಿಸಿಕೊಂಡು ಓಡಿಹೋದರು. ಲಾಲುಕೋದೇಲ್ಕರನ ಮರಣದ ತರುವಾಯ ಇವರು ಒಬ್ಬೊಬ್ಬರಿಗೂ ಒಂದೊಂದು ಹೆಣ್ಣುಮಗುವಿನ ಜನನ ವಾಯಿತು. ಈ ಮೂವರೂ ಚೆಲುವಾದ ಮಕ್ಕಳು. ಹೆಸರು ಕಾಶಿ, ಸುಂದರಿ, ಮುಂದರಿ. ಇವರ ಪಾಲಿನ ಪ್ರೋಷಣೆಗಳು ಬಹಳ ದಾರಿದ್ರ್ಯದಲ್ಲಿ ನಡೆದವು. ಸಖೂಬಾಯಿಯ ಕ್ರೋಧವು ಕೋದೇಲ್ಕರನೊಂದಿಗೇ ತಣಿಯಲಿಲ್ಲ. ಅವನ ಬಂಧುಗಳವರೆಗೂ ಪ್ರಸರಿ ಸಿತು. ಆದುದರಿಂದ ಅವರಿಗೆ ರಾಜಾಶ್ರಯವೂ ತಪ್ಪಿತು.

ಸಖೂಬಾಯಿಯು ಪುತ್ರನಮೇಲೆ ಇಷ್ಟು ಕ್ರೋಧವನ್ನು ತೋರಿಸಿದ್ದರೂ ಅವನು ತಾಯಿಯನ್ನು ನೋಯಿಸಲು ಇಚ್ಛಿಸಲಿಲ್ಲ. ಆದರೆ ಅವನ ಚಿಕ್ಕಪ್ಪಂದಿರಾದ ರಘುನಾಥರಾಯ ಗಂಗಾಧರರಾಯರಿಬ್ಬರೂ ದಿವಾನರಾಗಿದ್ದು ಸಖೂಬಾಯಿಯು ಸ್ವತಂತ್ರಳಾಗಿರಲು ಒಪ್ಪಲಿಲ್ಲ. ಅವಳನ್ನೂ ಬಂಧನದಲ್ಲಿಡಿಸಿ ಲಾಲೂಕೋದೇಲ್ಕರನ ಬಂಧುಗಳನ್ನೂ ಝಾನ್ಸಿಗೆ ಕರೆಸಿದರು. ಮತ್ತು ಆನಂದರಾಯನಿಗೆ ಸಂರಕ್ಷಣೆಯು ದೊರಕಿತು.

ರಾಮಚಂದ್ರರಾಯನು ೧೮೩೫ ರಲ್ಲಿ ನಿಸ್ಸಂತಾನನಾಗಿ ಕಾಲಗತಿಯನ್ನೈದಿದನು. ಅವನ ವಿಧವೆಪತ್ನಿಯು ಕೃಷ್ಣರಾಯನೆಂಬ ಬಾಲಕನನ್ನು ದತ್ತು ಸ್ವೀಕಾರಮಾಡಿದಳು. ಕಂಪೆನಿಸರ್ಕಾರವು ಈಸ್ವೀಕಾರವನ್ನು ಒಪ್ಪಲಿಲ್ಲ. ಗಂಗಾಧರರಾಯನಿಗಿಂತ ಹಿರಿಯ ನಾದ ರಘುನಾಥರಾಯನನ್ನು ಉತ್ತರಾಧಿಕಾರಿಯನ್ನುಮಾಡಿ ಗಾದಿಗೆ ಏರಿಸಿತು.

ಯಾವಾಗ ಶಿವರಾವ್‌ಭಾವುವಿನ ಅಗ್ರಜ ರಘುನಾಥಹರಿಯು (೧೭೬೯–೧೭೯೬) ಝಾನ್ಸಿಯ ಸುಬೇದಾರನಾಗಿ ಬಂದನೋ ಆಗ ರೈತರಿಂದ ವಸೂಲಾಗದ ಕಂದಾ ಯವು ಬಹಳ ವೃದ್ಧಿಯಾಗಿದ್ದಿತು. ಎಲ್ಲವೂ, ಯಾವಾಗಲೂ, ಒಟ್ಟಾಗಿ ವಸೂಲಾ ಗುತ್ತಿರಲಿಲ್ಲ. ಪೂರಾ ೨೦ ಲಕ್ಷ ರೂಪಾಯಿಗಳ ವರ್ಷಗಂದಾಯವನ್ನು ರಾಮಚಂದ್ರ ರಾಯನು ಅಪ್ರಾಪ್ತವಯಸ್ಕನಾಗಿದ್ದಾಗ ಸಖೂಬಾಯಿಯು ವಸೂಲುಮಾಡಲು ಬಹಳ ಪ್ರಯಾಸಪಟ್ಟಳು. ಗ್ರಾಮಪಂಚಾಯ್ತಿಯು ಹಾಹಾಕಾರವನ್ನೆಬ್ಬಿಸಿತು. ಆದರೆ ಆ ಸಾಮಂತಕಾಲದಲ್ಲಿ ರೈತರು ಸುಲಿಗೆಗೆ ಬಲಿಯಾಗಿ ದರೋಡೆಕಾರರ ಹಾವಳಿಯಂತೂ ಹೇಳತೀರದು. ಹೀಗಿರುವ ಪರಿಸ್ಥಿತಿಯಲ್ಲಿ ಯಾರೂ ಏನುಮಾಡಲೂ ಸಾಧ್ಯವಿರಲಿಲ್ಲ.

ರಾಮಚಂದ್ರರಾಯನು ರಾಜ್ಯಕ್ಕೆ ಬಂದಮೇಲೆ ಕಂದಾಯದ ವಸೂಲಿಯು ಇನ್ನು ಕಡಿಮೆಯಾಯಿತು. ಖಜಾನೆಯಲ್ಲಿದ್ದ ಅಲ್ಪಸ್ವಲ್ಪ ಹಣದಲ್ಲಿಯೂ ಸಖೂಬಾಯಿಯು ಒಂದಂಶವನ್ನು ಬಲಾತ್ಕಾರದಿಂದ ತೆಗೆದುಕೊಂಡಳು. ಅಧಿಕಾಂಶವನ್ನೂ ರಾಮಚಂದ್ರರಾಯನು ಖರ್ಚುಮಾಡಿದನು. ಬಾಕಿಯು ರಘುನಾಥರಾಯನ ಶಿಥಿಲಶಾಸನದಲ್ಲಿ ನಿಶ್ಶೇಷವಾಯಿತು.

ರಘುನಾಥರಾಯನು ವಿಷಯ ಲೋಲುಪನಾಗಿದ್ದನು. ಅವನ ವೇಶ್ಯೆಯರಲ್ಲಿ ಲಚ್ಚಿ ಎಂಬ ಹೆಸರಿನ ಒಬ್ಬ ಮುಸಲ್ಮಾನ ಸ್ತ್ರೀಯು ಇದ್ದಳು. ಅವಳಲ್ಲಿ ರಘುನಾಥರಾಯನಿಗೆ ಇಬ್ಬರು ಪುತ್ರರೂ ಮತ್ತು ಪುತ್ರಿಯರೂ ಜನಿಸಿದರು. ಹಿರಿಯ ಪುತ್ರನ ಹೆಸರು ನವಾಬ್ ಆಲೀಬಹದ್ದೂರ್. ರಘುನಾಥರಾಯನು ೧೮೩೫ ರಲ್ಲಿ ಝಾಂಸಿಯ ರಾಜನಾಗುವವೇಳೆಗೆ ಆಲೀಬಹದ್ದೂರನು ೨೨ ವರ್ಷಗಳ ಯುವಕನಾಗಿದ್ದನು. ಲಚ್ಚೆಯ ಗೋರಿಯು ಈಗಲೂ ಅಂತಿಯಾ ಕೆರೆಯ ಬದುವಿನ ಕೆಳಗೆ ಮೆಹದಿ ಉದ್ಯಾನವನದಲ್ಲಿದೆ. *ಲಚ್ಚೆಯು ಒಂದಾನೊಂದು ಕಾಲದಲ್ಲಿ ಹೊಸ ಅರಮನೆಯಲ್ಲಿ ವಾಸಿಸುತ್ತಿದ್ದಳು. ಮತ್ತು ಮೆಹದಿ ಉದ್ಯಾನವನದ ಹೂವು ಆಮಹಲಿನ ಮೇಲೆ ವರ್ಷಿಸುತ್ತಿದ್ದಿತು. ಈಗ ಅವಳ ಜೀರ್ಣವಾದ ಗೋರಿಯ ಮೇಲೆ ಹುಲ್ಲು ಬೆಳೆದಿರುವುದು. ರಘುನಾಥರಾವ್ ಮತ್ತು ಲಚ್ಚಿಯ ಮಹಲು ಶಿಥಿಲವಾಗಿರುವುದು. ಅಲ್ಲಿ ದನಕರುಗಳು ಮೇಯುತ್ತವೆ; ಝಾನ್ಸಿಯ ಮುನಿಸಿಪಾಲಿಟಿಯ ಗಾಡಿಗಳು ಅಲ್ಲಿ ನಿಲ್ಲುವುವು. ಅಲ್ಲವೆ ಎತ್ತುಗಳನ್ನು ಕಟ್ಟಿ ಅವುಗಳಿಗೆ ಮೇವನ್ನು ಶೇಖರಿಸುತ್ತಾರೆ.

ಸಖೂಬಾಯಿಯು ರಾಜ್ಯಾಡಳಿತಕಾಲದಲ್ಲಿ ಗಂಗಾಧರರಾಯ ಮತ್ತು ರಘುನಾಥರಾಯ, ಈ ಸಹೋದರರುಗಳ ಮನೋವೃತ್ತಿಯು ಒಂದೇ ತರಹವಾಗಿದ್ದು ಇಬ್ಬರೂ ಆಮೋದಪ್ರಮೋದಗಳಲ್ಲಿ ತಲ್ಲೀನರಾಗಿದ್ದರು ಪ್ರಜೆಗಳನ್ನು, ಅದರಲ್ಲೂ ರೈತರನ್ನು ಸಂತುಷ್ಟಿಯಲ್ಲಿಟ್ಟಿದ್ದ ಕಾರಣ ಯಾವ ಜಗಳಗಳಿಗೂ ಅವಕಾಶವಿರಲಿಲ್ಲ.

ರಾಜ್ಯದಲ್ಲ ಬಿಗಿ ತಪ್ಪಿದ್ದಿತು. ಒಳ್ಳೆಯ ಶಾಸನವಿರಲಿಲ್ಲ. ಆದರೆ ಗ್ರಾಮ ಪಂಚಾಯಿತಿಗಳೇನೋ ಇದ್ದವು. ಕಂದಾಯವು ಸಂಪೂರ್ಣವಾಗಿ ವಸೂಲಾಗುತ್ತಿರಲಿಲ್ಲ. ಪಂಚಾಯಿತಿಯ ರಕ್ಷಣೆಯು ಗ್ರಾಮಕ್ಕೇ ಸೇರಿದ್ದಿತು. ಪಂಚಾಯಿತಿಯವರ ಅಧಿಕಾರವು ಕುಸಿದುಬಿದ್ದು ವ್ಯವಹಾರಗಳು ಕೋರ್ಟು ಕಛೇರಿಗಳಿಗೆ ತಲಪುತ್ತಲೇ ಇರಲಿಲ್ಲ. ಚಿಕ್ಕಪುಟ್ಟ ವ್ಯವಹಾರಗಳಿಗೆಲ್ಲಾ ರಾಜ್ಯದ ಪದಾಧಿಕಾರಿಗಳ ಮನೆಯಲ್ಲಿ

---

* ಝಾನ್ಸಿಯ ಸದರ್ ಆಸ್ಪತ್ರೆಯ ಆವರಣದಲ್ಲಿ ಗಜರಾವೇಶ್ಯೆಯ ಗೋರಿಯು ಇದೆ. ಅದನ್ನೂ ಗಂಗಾಧರರಾಯನ ತಂದೆ ಶಿವರಾವ್‌ಭಾವು ಕಟ್ಟಿಸಿದ್ದು. ಅನೇಕ ಐತಿಹಾಸಿಕ ಲೇಖಕರು ಭಾವಿಸಿರುವಂತೆ ಅದು ರಘುನಾಥರಾವ್ ಅಥವಾ ಗಂಗಾಧರರಾವ್ ನಿರ್ಮಿಸಿದ್ದಲ್ಲ.

ಹಾಜರಿಯಾಗಬೇಕಾದುದೇನೂ ಇರಲಿಲ್ಲ. ಶರತ್ತು, ಕಾಯಿದೆ, ಮಾಮೂಲಿ ಇವುಗಳ ಪ್ರಕಾರ ತೆರಬೇಕಾದ ಹಣವನ್ನು ತೆತ್ತು ರೈತರು ಹಲವು ವೇಳೆ ಸುಖವಾಗಿಯೂ, ಹಲವು ವೇಳೆ ಕಷ್ಟದಲ್ಲಿಯೂ ತೊಳಲುತ್ತಿದ್ದರು.

ರಾಜ್ಯಾಡಳಿತ ಮತ್ತು ನ್ಯಾಯಾಧಿಕಾರಗಳು ಕೇಂದ್ರೀಕೃತವಾಗಿರಲಿಲ್ಲ. ಜನಗಳಿಗೆ ಅವರವರ ಶಕ್ತಿ ಪರಾಕ್ರಮಗಳನ್ನು ತೋರಿಸಿಕೊಳ್ಳಲು ಅವಕಾಶಗಳು ಹೇರಳವಾಗಿ ಸಿಕ್ಕುತ್ತಿದ್ದವು. ಸಮಾಜದಲ್ಲಿ ಸಂತುಷ್ಟಿ ಯಥೇಚ್ಛೆಗಳು ಇರಲಿಲ್ಲ. ಆದರೆ ಮೇಲುಕೀಳೆಂಬ ಭಿನ್ನಭೇದಗಳು ಸ್ಪಷ್ಟವಾಗಿ ಗೋಚರಿಸುತ್ತಿದ್ದವು. ಧನಿಕವರ್ಗದಲ್ಲಿ ಒಗ್ಗಟ್ಟು ಬಿಗಿಯಾಗಿದ್ದಿತು. ಧನವು ಧನಿಕರಲ್ಲಿ ವೃದ್ಧಿಯಾಗುತ್ತಿದ್ದಿತು. ಆದರಿಂದ ಇವರ ಬಳಿಯಲ್ಲಿ ಆಶ್ರಿತವೃಂದವು ನೂರಾರು ಮಂದಿಯಾಗಿ ಸೇರಿ ಅವರಿಗೆ ಅಂಟಿಕೊಂಡಿದ್ದಿತು. ಆಶ್ರಯದಾತರೂ ಆಶ್ರಿತರೂ ಕ್ರಿಯಾಶೀಲರಾಗಿದ್ದರು. ಆಶ್ರಯದಾತನು ಯಾವಾಗ ದುಶ್ಶೀಲನೂ, ಪ್ರಯತ್ನರಹಿತನೂ, ಶ್ರಮಹೀನನೂ ಆದನೋ ಆಗ ಆತನ ಸ್ಥಾನವನ್ನು ಮತ್ತೊಬ್ಬ ಪ್ರಬಲನಾದವನು ಗ್ರಹಿಸುತ್ತಿದ್ದನು. ಪೊಳ್ಳು ಜಂಭವು ಅಲ್ಪಕಾಲ ಮಾತ್ರ ಜರುಗುತ್ತಿದ್ದಿತು.

ಈ ರೀತಿ ಆಶ್ರಯದಾತನಾದ ರಘುನಾಥರಾಯನು ತನ್ನ ಸೋಮಾರಿತನದಿಂದ ಎರಡು ವರ್ಷಗಳ ಕಾಲವನ್ನು ಕಷ್ಟದಿಂದ ಕಳೆದನು. ಝಾನ್ಸಿಯ ಅಕ್ಕಪಕ್ಕದಲ್ಲಿ ಲೂಟಿ, ದರೋಡೆ ಮುಂತಾದವು ಪ್ರಾರಂಭವಾಗಿದ್ದವು. ಝಾನ್ಸಿಯ ರಾಜ್ಯದ ಮೇಲೆ ಅನೇಕ ಸಾಹುಕಾರರ ಅರ್ಜಿ, ಫಿರ್ಯಾದುಗಳು ಹೆಚ್ಚಿದವು. ಆದುದರಿಂದ ೧೮೩೭ ನೇ ಇಸವಿಯಲ್ಲಿ ಝಾನ್ಸಿ ರಾಜ್ಯವು ಕೋರ್ಟಿನ ವಶವಾಯಿತು.

ರಘುನಾಥರಾಯನು ರಾಜ್ಯವು ಕೋರ್ಟಿನ ವಶವಾಗುವ ಮೊದಲೇ ಝಾನ್ಸಿಯ ಅಳಿದುಳಿದ ಖಜಾನೆ, ಭಂಡಾರ ಇವುಗಳನ್ನು ತನ್ನ ಆಶ್ರಿತರಿಗೆ ಹಂಚಿ ಕೊಟ್ಟನು. ಮತ್ತು ತನ್ನ ಪುತ್ರ ಆಲೀಬಹದ್ದೂರನಿಗೆ ಕರೇಶ, ಪಿಚೋರ್, ಡಾಮರೋನ ಪರಗಣಗಳ ೮೫ ಹಳ್ಳಿಗಳ ಜಹಗೀರನ್ನೂ ಕೊಟ್ಟನು. ಆ ಜಹಗೀರಿನ ವಾರ್ಷಿಕ ವರಮಾನವು ೬೪ ೧/೨ ಸಾವಿರಗಳಷ್ಟು ಇದ್ದಿತು.

ರಘುನಾಥರಾಯನು ಸಖೂಬಾಯಿಯನ್ನೂ ಬಿಡುಗಡೆ ಮಾಡಿದನು. ಆತನು ೧೮೩೮ ರಲ್ಲಿ ಕಾಲವಾದನು.

## ೨

ರಘುನಾಥರಾಯನ ನಂತರ ರಾಜ್ಯಕ್ಕೆ ಹಕ್ಕುದಾರರಾಗಿ ನಾಲ್ಕು ಜನರಿದ್ದರು. ಗಂಗಾಧರರಾಯ (ಸಹೋದರ) ಕೃಷ್ಣರಾಯ (ರಾಮಚಂದ್ರರಾಯನ ದತ್ತುಪುತ್ರ)

ಆಲೀಬಹದ್ದೂರ್ ಮತ್ತು ರಘುನಾಥರಾಯನ ವಿಧವೆ ರಾಣಿ.

ಕೃಷ್ಣರಾಯನ ಬೆಂಬಲಿಗಳಾಗಿ ಸಖೂಬಾಯಿಯು ಇದ್ದಳು. ಅವಳ ತುರಂಗ ವಾಸವು ಅವಳಲ್ಲಿ ಯಾವ ಮಾರ್ಪಾಡನ್ನೂ ಉಂಟು ಮಾಡಿರಲಿಲ್ಲ. ಆದರೆ ಆಕೆಯು ಇನ್ನೂ ಅಧಿಕ ತೇಜೋವಂತಳೂ, ಜಾಗ್ರತಳೂ ಮತ್ತು ಆವೇಶಭರಿತಳೂ ಆಗಿದ್ದಳು.

ಸಖೂಬಾಯಿಯು ತನ್ನ ಪ್ರಭಾವ ಬೀರಿದುದರ ಕಾರಣ ರಘುನಾಥರಾಯನ ಅಂತ್ಯಕ್ರಿಯೆಗಳು ಸಾಂಗೋಪಾಂಗವಾಗಿ ನೆರವೇರಲಿಲ್ಲ. ಖಜಾನೆಯನ್ನೂ ತನ್ನ ವಶಪಡಿಸಿಕೊಂಡು, ತೋಪುಗಳ ಮೇಲೆ ತನ್ನವರಾದ ತೋಪುಗಾರರನ್ನು ನಿಲ್ಲಿಸಿದಳು.

ಗಂಗಾಧರರಾಯನು ಶಹರಿನ ಅರಮನೆಯಲ್ಲಿದ್ದನು. ಅವನಿಗೆ ತನ್ನ ಗೃಹದಲ್ಲಿಯೇ ಬಂಧನವೇರ್ಪಟ್ಟಂತೆ ಭಾಸವಾಗುತ್ತಿದ್ದಿತು.

ಸಖೂಬಾಯಿಯನ್ನು ಕಾರಾಗೃಹದಲ್ಲಿಡಲು ನಿರ್ಣಯಿಸಿದವರಲ್ಲಿ ಗಂಗಾಧರರಾಯನೂ ಒಬ್ಬನಾಗಿದ್ದನು. ಆದರೆ ಈಗ ಸಖೂಬಾಯಿಯು ಪ್ರತಿಹಿಂಸೆಗೆ ಭಯಪಟ್ಟು ನಿಸ್ಸಹಾಯಕನಾಗಿ ಅವನು ತಲೆಮರೆಸಿಕೊಂಡು ಓಡಿ ಹೋಗಿ ಕಾನ್ಪುರದಲ್ಲಿ ಆಂಗ್ಲೇಯರ ಬಳಿಸೇರಿದನು. ಆ ಸಮಯದಲ್ಲಿ ಕಾನ್ಪುರವು ಆಂಗ್ಲೇಯರ ಬಲವಾದ ಕೇಂದ್ರವಾಗಿದ್ದಿತು.

ಆಲೀಬಹದ್ದೂರನು ಕರೇಶದುರ್ಗದಲ್ಲಿ ಮರೆಹೊಕ್ಕು ಸೈನ್ಯ ಸಂಗ್ರಹಣದಲ್ಲಿ ತೊಡಗಿದನು. ಸೈಮರ್ ಫ್ರೇಜರನು ಆಗ ಮಧ್ಯಭಾರತದ ಗವರ್ನರ್ ಜನರಲ್ಲಿನ ಏಜೆಂಟನಾಗಿದನು—ಸನ್ ೧೮೫೭ ನೇ ವಿಪ್ಲವಕಾಲದಲ್ಲಿ ಈತನು ಆಗ್ರಾವಿನ ಲೆಫ್ಟಿನೆಂಟ್ ಗೌರ್‍ನರ್ ಆಗಿದ್ದನು.

ಈ ಗಡಿಬಿಡಿಯ ಸಮಾಚಾರವನ್ನು ಕೇಳಿ ಫ್ರೇಜರನು ಝಾನ್ಸಿಗೆ ಬಂದನು. ಕಂಪೆನಿ ಸರ್ಕಾರದ ಪ್ರಾಬಲ್ಯವೂ ಮತ್ತು ಶಕ್ತಿಯ ಥೋರಣೆಯೂ ಅದರ ಅಧಿಕಾರಿಗಳನ್ನು ಉದ್ಧಟರನ್ನಾಗಿ ಮಾಡಿದ್ದಿತು. ಫ್ರೇಜರನು ಕೆಲವು ಮಂದಿ ಸಿಪಾಯಿಗಳೊಡನೆ ದುರ್ಗವನ್ನು ಹೊಕ್ಕು ಸಖೂಬಾಯಿಯನ್ನು ಅಡಗಿಸಿದನು. ಆದರೆ ಸಖೂ ಆ ಬೆದರಿಕೆಗೆ ಸಗ್ಗಲಿಲ್ಲ.

ಮಧುಮಾಸದ ಸಮಯ. ಕಾಮನ ಹುಣ್ಣಿಮೆ ಕಳೆದಿದ್ದಿತು. ಜನರು ರಂಗಿನ ಆಟದಲ್ಲಿ ಮತ್ತರಾಗಿದ್ದರು. ಸಖೂಬಾಯಿಯು ಅಪ್ಪಣೆಯ ಮೇರೆ, ಫ್ರೇಜರನು ದುರ್ಗದಿಂದ ಹೊರಗೆ ಬಂದೊಡನೆಯೇ ಆತನಿಗೆ ಅತ್ಯಂತ ದುರ್ಗತಿಯುಂಟಾಯಿತು.

ಫ್ರೇಜರನು ಸೈನ್ಯ ಮತ್ತು ಮದ್ದು ಗುಂಡುಗಳ ಸಮೇತ ಹಿಂದಿರುಗಿ ಬಂದನು. ಇದನ್ನು ಕಂಡು ಸಖೂಬಾಯಿಯು ಕಿಲ್ಲೆಯನ್ನು ತ್ಯಜಿಸಿ ಓಡಿಹೋದಳು. ಆಲೀಬಹದ್ದೂರನು ಕರೇಶದುರ್ಗವನ್ನು ಬಿಟ್ಟು ಕಂಪೆನಿಯ ಸರ್ಕಾರದ ಮರೆಹೊಕ್ಕನು. ಇದರ ಪರಿಣಾಮವಾಗಿ ಆತನಿಗೆ ಮಾಹೆಯಾನ ೫೦೦ ರೂಪಾಯಿಗಳ ವೇತನವು

ದೊರಕಿತು. ಝಾನ್ಸಿ ರಾಜ್ಯದ ಮಾಮಲೆಯನ್ನು ನಿರ್ಣಯಿಸಲು ಒಂದು ಸಮಿತಿಯು ಏರ್ಪಟ್ಟಿತು. ಈ ಸಮಿತಿಯು ಗಂಗಾಧರರಾಯನನ್ನು ಝಾನ್ಸಿಯ ಉತ್ತರಾಧಿಕಾರಿ ಯೆಂದು ಘೋಷಿಸಿತು.

ಗಂಗಾಧರರಾಯನು ಕಾನ್ಪುರದಿಂದ ಝಾನ್ಸಿಗೆ ಹಿಂದಿರುಗಿದನು. ಮತ್ತು ಅವನ ಪಟ್ಟಾಭಿಷೇಕವು ಬಹು ವಿಜೃಂಭಣೆಯಿಂದ ನೆರವೇರಿತು. ಆದರೆ ಝಾನ್ಸಿಯ ರಾಜ್ಯದಲ್ಲಿ ಪುನಃ ಅನಾಯಕತ್ವವು ಹೆಚ್ಚಿ, ಋಣವೂ ಹೆಚ್ಚಿ ಸರ್ ಗಿಲ್ಬರ್ಟ್ ರಲ್ಲಿ ರಾಜ್ಯವು ಕೋರ್ಟಿನ ವಶವಾಯಿತು.

ಗಂಗಾಧರರಾಯನು ಸಾಹಿತ್ಯ ಮತ್ತು ಲಲಿತಕಲೆಗಳಲ್ಲಿ ರಸಿಕನೂ, ಪ್ರೇಮಿಯೂ ಆಗಿದ್ದನು. ಸುಖಲಾಲ್‌ಕಾಥಿಯು ಆತನ ಚಿತ್ರಕಾರನಾಗಿದ್ದನು. ಈತನು ಅವಿದ್ಯಾವಂತನಾಗಿದ್ದರೂ ಕುಂಜದ ಕಲೆಯಲ್ಲಿ ಪಾರಂಗತನಾಗಿದ್ದನು. ಗಾಯಕರೂ, ವಾದಕರೂ ಆದರಲ್ಲಿಯೂ ಧ್ರುವಪದ, ವೀಣೆ, ಕುಖಾವಜದ ಉಸ್ತಾದರೂ, ಮತ್ತು ರೀತಿರಸ, ಭಕ್ತಿರಸ ಲಾಲಸರೂ ಗಂಗಾಧರರಾಯನ ಆಸ್ಥಾನದಲ್ಲಿ ಆಶ್ರಯಹೊಂದಲಾರಂಭಿಸಿದರು. ಅವನು ದೂರದೇಶಗಳಿಂದ ನಾನಾವಿಧವಾದ ಹಸ್ತಲಿಖಿತ ಗ್ರಂಥಗಳನ್ನು ಶೇಖರಿಸಿ ಒಂದು ಭವ್ಯವಾದ ಪುಸ್ತಕ ಭಂಡಾರವನ್ನು ನಿರ್ಮಿಸಿದನು. ವೇದ, ಉಪನಿಷತ್ತು, ದರ್ಶನ, ಪುರಾಣ, ತಂತ್ರ, ಆಯುರ್ವೇದ, ಜ್ಯೋತಿಷ, ವ್ಯಾಕರಣ, ಇತ್ಯಾದಿ ಪುಸ್ತಕಗಳು ಹೇರಳವಾಗಿ ತುಂಬಿದ್ದುದರಿಂದ ಆ ಪುಸ್ತಕಾಲಯಕ್ಕೆ ದೂರದೇಶಗಳಿಂದ ವಿದ್ವಾಂಸರು ಪ್ರತಿಲಿಪಿಗಳನ್ನು ಪಡೆಯುವುದಕ್ಕಾಗಿ ಬರಲಾರಂಭಿಸಿದರು.

ಗಂಗಾಧರರಾಯನಿಗೆ ನಾಟಕಗಳಲ್ಲಿ ಹೆಚ್ಚಾಗಿ ಆಸಕ್ತಿಯಿದ್ದಿತು. ಸಂಸ್ಕೃತ ನಾಟಕಗಳನ್ನು ಹಿಂದೀ ಮತ್ತು ಮರಾಠಿ ಭಾಷೆಗಳಿಗೆ ಅನುವಾದಮಾಡಿಸುತ್ತಿದ್ದುದಲ್ಲದೆ, ಅಭಿನಯವನ್ನೂ ಮಾಡಿಸುತ್ತಿದ್ದನು. ಶಹರಿನ ಅರಮನೆಯ ಹಿಂಭಾಗದಲ್ಲಿ ಪಶ್ಚಿಮ ದಿಕ್ಕಿನಲ್ಲಿ ನಾಟಕಶಾಲೆಯು ಇದ್ದಿತು. ಗಂಗಾಧರರಾಯನೂ ಸ್ವತಃ ಅಭಿನಯಿಸುತ್ತಿದ್ದನು. ಪುರುಷರು ಮಾತ್ರ ಅಭಿನಯದಲ್ಲಿ ಪಾತ್ರವಹಿಸುತ್ತಿದ್ದುದು ರುಚಿಸದಿದ್ದುದರಿಂದ ಸ್ತ್ರೀಯರೂ ಪಾತ್ರವಹಿಸಿ ರಂಗಭೂಮಿಯ ಮೇಲೆ ಬರುತ್ತಿದ್ದರು. ಸ್ತ್ರೀಪಾತ್ರ ವಹಿಸುವುದಕ್ಕಾಗಿ ಚೆನ್ನಾಗಿ ನಾಟ್ಯ ಸಂಗೀತ ಬಲ್ಲ ಸುಂದರಿಯರನ್ನು ನಿಯುಕ್ತಮಾಡಿದನು. ಇವರಲ್ಲಿ ಮೋತೀಬಾಯಿಯು ಅತ್ಯಂತ ಪ್ರಸಿದ್ಧಳಾಗಿದ್ದಳು.*

ಅವಳ ಸೌಂದರ್ಯವು ಅಪ್ಸರೆಯರ ಸೌಂದರ್ಯವನ್ನು ಹೋಲುತ್ತಿದ್ದಿತು. ಅರಳಿದ ಹೂವಿನಂತಹ ಕೋಮಲಗಾತ್ರಳು. ಶಾರೀರವು ಚಾಂಚಲ್ಯ ಮೋಹಕತೆ

---

* ಝಾನ್ಸಿಯ ಜನತೆಯಲ್ಲಿ ಈಕೆಯು ನಾಟ್ಯಶಾಲೆಯ ಮೋತೀಬಾಯಿಯೆಂದು ವಿಖ್ಯಾತಳಾಗಿದ್ದಳು.

ಗಳಿಂದ ಕೂಡಿದ್ದಿತು. ವೇಶ್ಯಾಪುತ್ರಿಯಾಗಿದ್ದರೂ ಕುಮಾರಿಯಾಗಿದ್ದು ನಾಟಕ ಶಾಲೆಯನ್ನು ಬಿಟ್ಟು ಬಾಕಿಯವೇಳೆಗಳಲ್ಲಿ ಅವಕುಂಠನವನ್ನು ಧರಿಸುತ್ತಿದ್ದಳು. ಅತ್ಯಂತ ಕುಶಲ ಕಲಾವತಿಯೇ ಆಗಿದ್ದರೂ ಗಂಗಾಧರರಾಯನು ತಾನೆ ಅಭಿನಯಿಸಿ, ಅವಳಿಗೆ ಉದಾಹರಣೆತೋರಿ, ತಕ್ಕ ಅಭಿನಯವನ್ನು ಕಲಿಸುತ್ತಿದ್ದನು.

ಮೋತೀಬಾಯಿಯು ರಂಗಭೂಮಿಯನ್ನು ಚಿಕ್ಕವಯಸ್ಸಿನಲ್ಲಿಯೇ ಪ್ರವೇಶಿಸಿದಳು. ಗಂಗಾಧರರಾಯನ ಕೃಪೆಯಿಂದ ನಾಟಕಶಾಲೆಯನ್ನು ಹೊಕ್ಕು ನಾಟಕ ನೋಡಿ ರಮಿಸಿದವರೆಲ್ಲರೂ ಹೊರಗೆ ಬಂದನಂತರ ಅವಳ ರೂಪಲಾವಣ್ಯ ಹಾವಭಾವ ಅಭಿನಯಗಳನ್ನು ಮುಕ್ತಕಂಠರಾಗಿ ಹೊಗಳದೇ ಹೋಗುತ್ತಿರಲಿಲ್ಲ.

## ೩

ಝಾನ್ಸಿಯ ಗಾದಿಯಮೇಲೆ ರಾಜಾ ಗಂಗಾಧರರಾಯನನ್ನು ಕುಳ್ಳಿರಿಸಿದ ಮೇಲೆ ಆ ರಾಜ್ಯಸೂತ್ರವು ಆಂಗ್ಲೇಯರ ಮೂಲಕ ಪ್ರಾರಂಭವಾಗಿ ಏಳೆಂಟು ವರ್ಷಗಳಾದವು. ನಗರಾಡಳಿತವು ಗಂಗಾಧರರಾಯನ ಕೈಯಲ್ಲಿದ್ದು ಬಾಕಿ ರಾಜ್ಯಾಡಳಿತವು ಕಂಪೆನಿಯವರ ಕೈಯಲ್ಲಿದ್ದಿತು.

ಚೈತ್ರಮಾಸವು ಉದಯಿಸಿತು. ವಸಂತನು ಬೆಟ್ಟಗುಡ್ಡಗಳ ಮೇಲೆಲ್ಲಾ ಪುಷ್ಪದ ಮಳೆಗರೆದಿದ್ದನು. ಮುತ್ತುಗದ ಹೂವುಗಳು ಗಗನ ಚುಂಬಿತವಾಗಿದ್ದವು. ಮತ್ತು ಭೂಮಿಯಮೇಲೆ ಬಣ್ಣ ಬಣ್ಣದ ಬಟ್ಟೆಹಾಸಿದಂತೆ ಗೋಚರಿಸುತ್ತಿದ್ದಿತು. ವಾಯುವು ಸುಗಂಧ ಭರಿತವಾಗಿ, ಹಗಲೂರಾತ್ರೆ ಸಂಗೀತದಿಂದ ಪುಳಕಿತವಾಗಿದ್ದಿತು.

ಅಂದು ರಾತ್ರೆ ನಾಟಕಶಾಲೆಯಲ್ಲಿ ರತ್ನಾವಳಿನಾಟಕದ ಅಭಿನಯ—ಹಿಂದೀ ಭಾಷೆಯಲ್ಲಿ. ಮೋತೀಬಾಯಿಯು ರತ್ನಾವಳಿಯ ಪಾತ್ರವನ್ನು ವಹಿಸಬೇಕಾಗಿದ್ದಿತು—ರಾಜನದೇ ನಿರ್ದೇಶನ. ನೃತ್ಯಗೀತವಾದಗಳು ಹೆಸರುವಾಸಿಯಾದ ಆಚಾರ್ಯರ ನೇತೃತ್ವದಲ್ಲಿ ತಯಾರಿಸಲ್ಪಟ್ಟಿದ್ದಿತು.

ಪ್ರೇಕ್ಷಕರು ನಿಮಂತ್ರಣದ ಮೂಲಕ ಆಹ್ವಾನಿಸಲ್ಪಟ್ಟಿದ್ದರು. ರಾಜ ಗಂಗಾಧರ ರಾಯನು ಅಗ್ರಾಸನವನ್ನು ಅಲಂಕರಿಸಿದ್ದನು. ಆತನು ಮಧ್ಯವಯಸ್ಕನಾದರೂ, ಸುಂದರನೂ ರಾಜಕಳೆಯಿಂದಕೂಡಿದವನೂ ಆಗಿದ್ದನು. ಹಿಂದೆ ಸಮೀಪದಲ್ಲಿ ಅವನ ಸ್ನೇಹಿತರಾದ ಖುದಾಬಕ್ಷ, ದಿವಾನ್ ರಘುನಾಥಸಿಂಹ, ರಾವ್ ದುಲ್ಹಾಜು, ಮೊದಲಾದವರು ಮಂಡಿಸಿದ್ದರು. ಎಲ್ಲರೂ ಯುವಕರು; ದೇಹಪುಷ್ಟಿ ಮತ್ತು ಯೌವ್ವನ ಮದದಿಂದ ತುಂಬಿದ್ದರು. ಮೋತೀಬಾಯಿಯ ಸೌಂದರ್ಯ, ಯೌವ್ವನ ತುಂಬಿ

ತುಳುಕುವ ವಯ್ಯಾರ ಒನಪುಗಳನ್ನು ನೋಡಲು ಕಾತರರಾಗಿದ್ದರು. ಪರದೆ ತೆರೆಯಿತು; ಸೂತ್ರಧಾರನು ಮಂಗಳಗೀತೆಯನ್ನು ಹಾಡಿದನು. ಸ್ವಲ್ಪ ಕಾಲಾ ನಂತರ ಮೋತೀಬಾಯಿಯು ರಂಗದಮೇಲೆ ರತ್ನಾವಳಿ ಪಾತ್ರಧಾರಿಯಾಗಿ ಬಂದಳು. ಹಠಾತ್ತನೆ ಖುದಾಬಕ್ಷನ ಬಾಯಿಯಿಂದ 'ವಹವ್ವಾ' ಎಂಬ ಶ್ಲಾಘನೆಯ ಶಬ್ದವು ಹೊರಬಿದ್ದಿತು. ಮೋತೀಬಾಯಿಯು ಖುದಾಬಕ್ಷನನ್ನು ಈಕ್ಷಿಸಿದಳು. ಖುದಾಬಕ್ಷನ ದೃಷ್ಟಿಯೂ ಅಲ್ಲಿಯೇ ನೆಟ್ಟಿತು. ಯಾವ ಯಾವ ದೃಶ್ಯದಲ್ಲಿ ರಂಗ ಮಂಟಪದಮೇಲೆ ಮೋತೀಬಾಯಿಯು ಬರುತ್ತಿದ್ದಳೋ ಆಗಲೆಲ್ಲ ಪ್ರೇಕ್ಷಕರೆಲ್ಲರ ಮೇಲೆ ದೃಷ್ಟಿಹರಿಸಿ ಕಡೆಗೆ ಖುದಾಬಕ್ಷನಮೇಲೆ ಅದನ್ನು ತಂದು ನಿಲ್ಲಿಸುತ್ತಿದ್ದಳು.

ಮೋತೀಬಾಯಿಯ ನೃತ್ಯವು ಬಹಳ ಮೋಹಕರವಾಗಿದ್ದಿತು. ನೃತ್ಯ ಮಾಡು ವಾಗ ಪ್ರೇಕ್ಷಕರನ್ನು ಮನೋನ್ಮತ್ತರನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದಳು. ಮತ್ತು ಕಣ್ಣುಗಳನ್ನು ಆಗಾಗ್ಗೆ ಅರ್ಧಮುಕುಳಿತವಾಗಿ ಹಾರಿಸುತ್ತಿದ್ದಳು. ಖುದಾಬಕ್ಷನು ಮತ್ತೆ ಮೆಚ್ಚಿಗೆಯನ್ನು ಸೂಚಿಸಿ 'ವಹವ್ವಾ' ಎಂದನು. ರಾಜನಿಗೆ ಇದು ಸರಿಬೀಳಲಿಲ್ಲ. ಆತನು "ನೀನು ಮೂರ್ಖನು, ರಾಜನೊಂದಿಗೆ ವಿವಾಹವಾಗ ಬೇಕಾದ ರತ್ನಾವಳಿಯು ಸಾಮಾನ್ಯ ವೇಶ್ಯೆಯಂತೆ ಕಣ್ಣು ಹಾರಿಸಬಹುದೋ" ಎಂದು ಅವನನ್ನು ಕೇಳಿದನು.

ಅಂದಿನ ನಾಟಕವು ಸಫಲನಾಗಿ ಅಭಿನಯಿಸಲ್ಪಟ್ಟಿ ಗಾಯನ ವಾದನಗಳೂ ಅಂತೆಯೆ ಮನೋಹರವಾಗಿದ್ದುವೆಂದು ಪ್ರೇಕ್ಷಕರ ಅಭಿಮತವಾಗಿದ್ದಿತು. ಪ್ರೇಕ್ಷಕರು ನಾಟಕ ಶಾಲೆಯಿಂದ ಹೊರಬಿದ್ದರು. ರಾಜಾ ಗಂಗಾಧರರಾಯನು ರಂಗ ಮಂಟಪ ವನ್ನು ಪ್ರವೇಶಿಸಿ ನಟನಟಿಯರ ಅಲಂಕಾರದ ಕೊಠಡಿಯನ್ನು ಹೊಕ್ಕನು. ಮೋತೀ ಬಾಯಿಯು ನತಮಸ್ತಕಳಾಗಿ ವಂದಿಸಿದಳು. ತಾನು ಪರಿಪೂರ್ಣತೆಯಿಂದ ನಟಿಸಿರು ವೆನೆಂಬ ವಿಶ್ವಾಸವು ಅವಳಿಗಿದ್ದು ಮುಗುಳು ನಗೆಯಿಂದ ಅವಳ ಮುಖವು ಪ್ರಫುಲ್ಲ ವಾಯಿತು. ರಾಜನ ಬಾಯಿಯಿಂದ ಪ್ರಶಂಸೆಯ ಎರಡು ಮಾತುಗಳನ್ನು ಕೇಳಲು ತವಕಿಸುತ್ತಿದ್ದಳು.

ರಾಜನು 'ಇಂದೇನು ಮದ್ಯಪಾನ ಮಾಡಿ ಬಂದಿರುವೆಯಾ?' ಎಂದು ಕೇಳಿದನು.

ಮೋತೀಬಾಯಿಯು ಮೌನವನ್ನು ಧರಿಸಿದಳು. ಮುಖವು ಬಾಡಿತು. ನಂತರ ಆ ಕೋಮಲೆಯು ಮಧುರಸ್ವರದಿಂದ 'ಮಹಾಪ್ರಭು ನಾನೆಂದೂ ಮದ್ಯಪಾನ ಮಾಡಿಲ್ಲ. ಇಂದೇಕೆ ಮಾಡಲಿ?' ಎಂದು ಉತ್ತರಿಸಿದಳು.

'ಆದರೆ ಇಂದೇಕೆ ನಿನ್ನ ಕಣ್ಣುಗಳನ್ನು ಅಷ್ಟು ವಿಲಾಸ ಪೂರಿತವಾಗಿ ಹಾರಿಸಿದೆ?' ಎಂದು ರಾಜನು ಪ್ರಶ್ನಿಸಿದನು.

ಮೋತೀಬಾಯಿಯ ಮುಖದಿಂದ ಕೇಳಿಯೂ, ಕೇಳಿಸದಂತೆ 'ಹಾ!' ಎಂಬ ಶಬ್ದವು ಹೊರಟು 'ನಾನು ಮರೆತೆ'ನೆಂದಳು.

ರಾಜನಿಗೆ ಆ ಮಾತು ಕೇಳಿ ಸ್ವಲ್ಪ ಶಾಂತವಾಯಿತು. 'ಯಾವ ಪಾತ್ರವನ್ನು ನೀನು ಅಭಿನಯಿಸುವೆಯೋ ಅದರ ಚರಿತ್ರೆಯನ್ನು ಎಂದಿಗೂ ಮರೆಯಬೇಡ. ನಟಿಸುವಾಗ ನಟಿಯು ತನ್ನನ್ನು ತಾನು ಮರೆತು, ತಾನು ವಹಿಸಿರುವ ಭೂಮಿಕೆಯ ಒಂದೊಂದು ಲಕ್ಷಣವನ್ನೂ ನೆನಪಿನಲ್ಲಿಟ್ಟು ಅದರಂತೆ ನಟಿಸಿದರೆ ಆಗ ಅದು ಮೇಲ್ತರದ ಅಭಿನಯವೆನಿಸುವುದು. ಅದರಲ್ಲಿ ತನ್ಮಯರಾಗ ಬೇಕು. ನಾನು ಮೊದಲೇ ಇದನ್ನೂ ನಿನಗೆ ತಿಳಿಯ ಪಡಿಸಿದ್ದೆ. ಅರ್ಥವಾಯಿತೆ?' ಎಂದು ಕೇಳಿದನು.

ಮೋತೀಬಾಯಿಯ ಮನವು ಎದುರಾಡಿತು. ಆದರೆ ತನ್ನನ್ನು ತಾನೇ ಸಮಾಧಾನ ಮಾಡಿಕೊಂಡು ನಮ್ರತೆಯಿಂದ "ಅಪ್ಪಣೆ. ಮಹಾಸ್ವಾಮಿ, ಮುಂದೆಂದೂ ಮರೆಯುವುದಿಲ್ಲ" ಎಂದಳು.

'ಈ ಬಾರಿ ಕಾಳಿದಾಸನ ಅಭಿಜ್ಞಾನ ಶಾಕುಂತಲ ನಾಟಕವು ಅಭಿನಯಿಸಲಾಗುವುದು. ನೀನು ಶಕುಂತಳೆಯ ಪಾತ್ರವನ್ನು ವಹಿಸಬೇಕು' ಎಂದನು.

ಮೋತೀಬಾಯಿಯು ತನ್ನ ದುಃಖವನ್ನು ಮರೆತಳು. ಮಕ್ಕಳಂತೆ ಸರಳ ಪ್ರಫುಲ್ಲತೆಯಿಂದ ''ಮಹಾರಾಜ, ನಾನು ಸರ್ವ ಪ್ರಯತ್ನಮಾಡುತ್ತೇನೆ. ತಮ್ಮ ದಿಗ್ದರ್ಶನಕ್ಕೆ ಅಪಮಾನವೆಂದಿಗೂ ಆಗುವುದಿಲ್ಲ' ಎಂದಳು.

ರಾಜನು ಪ್ರಶಾಂತನಾಗಿ ಹೊರಟುಹೋದನು. ನಟನಟಿಯರು ರಾಜಾ ಗಂಗಾಧರರಾಯನಿಗೆ ಜಯಘೋಷವನ್ನು ಮಾಡಿದರು.

ನಿಯುಕ್ತ ತಿಥಿ ಮತ್ತು ಸಮಯದಲ್ಲಿ ಶಾಕುಂತಳ ನಾಟಕದ ಅಭಿನಯವಾಯಿತು. ಹೆಚ್ಚು ಕಡಿಮೆ ಅದೇ ಪ್ರೇಕ್ಷಕರ ಸಂದಣಿ ಕೂಡಿದ್ದಿತು.

ನಿರಾಭರಣಳಾಗಿದ್ದರೂ, ಮೋತೀಬಾಯಿಯು ಪುಷ್ಪಾಲಂಕೃತಳಾಗಿ ತಪೋವನದ ಸಖಿಯರೊಂದಿಗೆ ಲತಾಬಳ್ಳಿಗಳಿಗೆ ನೀರೆರೆಯುತ್ತಾ ಪ್ರೇಕ್ಷಕರ ಮನಸ್ಸನ್ನು ಸೆಳೆಯಲಾರಂಭಿಸಿದಳು. ಆದರೆ ಖುದಾಬಕ್ಷನು ಆ ರಾತ್ರೆಯ ರತ್ನಾವಳಿಯ ಪ್ರಮತ್ತನೇತ್ರಚಲನವನ್ನು ಕಾಣಲು ಕಾತರನಾಗಿದ್ದನು.

ನಾಟಕವು ಮುಂದುವರಿಯುತ್ತಾ ಕಡೆಯ ಅಂಕವು ಸಮೀಪಿಸಿತು. ಸುರಾಸುರರ ಯುದ್ಧದಲ್ಲಿ ಇಂದ್ರನಿಗೆ ಸಹಾಯವೆಸಗಿದ ಮೇಲೆ ದುಷ್ಯಂತನು ಹಿಂದಿರುಗಿದನು. ಆಶ್ರಮದಲ್ಲಿ ಸಿಂಹದ ಮರಿಗಳೊಂದಿಗೆ ಆಡುತ್ತಿದ್ದ ಹುಡುಗನಲ್ಲಿ ಸ್ನೇಹವು ಉಕ್ಕಿಬಂದಿತು. ಬಾಲಕನ ಕೈಯ್ಯಲ್ಲಿದ್ದ ತಾಯಿತಿಯು ಕೆಳಗೆ ಬಿದ್ದಿತು. ಅದನ್ನು ದುಷ್ಯಂತನು ಕೈಗೆ ತೆಗೆದುಕೊಂಡನು. ಆದರೆ ಅದು ಸರ್ಪಾಕಾರಕ್ಕೆ ಪರಿವರ್ತಿಸಲಿಲ್ಲ. ಈ ಅದ್ಭುತವನ್ನು ನೋಡಿದ ಶಕುಂತಳೆಯ ಸಖಿಯೊಬ್ಬಳಿಗೆ ವಿಸ್ಮಯವಾಯಿತು. ದುಷ್ಯಂತನಿಗೆ ಆ ಬಾಲಕನ ಮಾತೆಯ ಹೆಸರು ತಿಳಿದುಹೋಯಿತು. ಮಲಿನವಸ್ತ್ರಧಾರಿಯಾದ ಶಕುಂತಳೆಯು ತಲೆಗೂದಲು ಹರಡಿದ್ದಂತೆಯೇ ಬಂದಳು. ದುಷ್ಯಂತ

ನಿಗೆ ಅವಳ ಗುರುತು ಸಿಕ್ಕಿ ಅವನಿಗೆ ಪರಿತಾಪವಾಯಿತು. ಶಕುಂತಳೆಯು ತನ್ನ ದುಃಸ್ಥಿತಿಯ ಕಾರಣವು ತನ್ನ ದೌರ್ಭಾಗ್ಯದ ಫಲವೆಂದು ಹೇಳಿದಳು. ಆದರೆ ಅದರಿಂದ ದುಷ್ಯಂತನಿಗೆ ಸಂತೋಷವಾಗಲಿಲ್ಲ. ಪ್ರಾಯಶ್ಚಿತ್ತಕ್ಕಾಗಿಯೂ, ಕ್ಷಮೆ ಬೇಡುವುದಕ್ಕಾಗಿಯೂ ಅವಳ ಪಾದಗಳಿಗೆರಗುತ್ತಿರುವಾಗ, ಮೋತಿಬಾಯಿಯ ದೃಷ್ಟಿಯು ಕ್ಷಣಮಾತ್ರ ಖುದಾಬಕ್ಷನ ಮೇಲೆ ಅಂಕುರಿಸಿತು. ಅವಳ ಕಣ್ಣು ಅಶ್ರುಪೂರಿತವಾಗಿದ್ದಿತು. ಮತ್ತು ಅನೇಕ ಪ್ರೇಕ್ಷಕರೂ ಕೂಡ ತಾವು ಸ್ತ್ರೀಯರೊಡನೆ ನಡೆಸಿದ ದುರ್ವ್ಯಾಪಾರಕ್ಕಾಗಿ ಪ್ರಾಯಶ್ಚಿತ್ತರೂಪವಾಗಿ ಕಣ್ಣೀರು ಮಿಡಿದರು.

ಗಂಗಾಧರರಾಯನು ಖುದಾಬಕ್ಷನ ಕಡೆಗೆ ತಿರುಗಿ "ಏನಯ್ಯಾ ಹೇಗಿದ್ದಿತು ?" ಎಂದನು.

ಮೋತೀಬಾಯಿಯ ಅಶ್ರುಪೂರಿತನಯನಗಳೆಡೆ ಮತ್ತೊಂದು ಬಾರಿ ಅವಲೋಕಿಸಿ ರುದ್ಧಕಂಠನಾಗಿ "ಮಹಾರಾಜಾ, ಬಹಳ ಚೆನ್ನಾಗಿದ್ದಿತು" ಎಂದನು.

"ಆದರೆ ಈ ದಿನವೇಕೆ "ವಹಸ್ವಾ" ಎಂಬ ನಿನ್ನ ಮೆಚ್ಚುಗೆಯನ್ನು ತೋರ್ಪಡಿಸಲಿಲ್ಲ" ಎಂದು ರಾಜನು ಕೇಳಿದನು

ಖುದಾಬಕ್ಷನು ಸ್ವಲ್ಪ ಲಜ್ಜಿತನಾದನು. ಅದನ್ನು ಮರೆಸುವುದಕ್ಕಾಗಿ ನಸುನಗುತ್ತಾ "ಹುಜೂರ್, ಅದಕ್ಕೆ ಅವಕಾಶ ಒದಗಲಿಲ್ಲ" ಎಂದನು.

ರಾಜನು ಈಮಾತನ್ನು ಕೇಳಿ ಸುಮ್ಮನಾದನು. ನಾಟಕವು ಸಮಾಪ್ತವಾದನಂತರ ಶೃಂಗಾರದ ಕೊಟ್ಟಡಿಯನ್ನು ಒಳಹೊಕ್ಕನು. ಮೋತೀಬಾಯಿಯು ಈಗಲೂ ಮಲಿನ ವಸ್ತ್ರಧಾರಿಯಾಗಿಯೇ ಇದ್ದಳು. ಅಭಿನಯದ ವಿಚಾರವಾಗಿ ಸಮ್ಮತಿಯ ನುಡಿಯನ್ನು ರಾಜನಿಂದ ಕೇಳಲು ತವಕಿಸುತ್ತಾ ಸನ್ಮುಖದಲ್ಲಿ ಬಂದು ನಮಸ್ಕರಿಸಿದಳು. ರಾಜನು ಅವಳ ಬೆನ್ನು ಚಪ್ಪರಿಸಿ "ಶಾಭಾಸ್ ! ನಿನ್ನ ಈ ದಿನದ ಅಭಿನಯವು ಸ್ವಾಭಾವಿಕವಾಗಿ ಚೆನ್ನಾಗಿದ್ದಿತು. ಕಾಳಿದಾಸನು ಮಹಾನುಭಾವನು. ಅವನು ಶಕುಂತಳೆಯ ಹೃದಯದಲ್ಲಿ ಆ ಸಮಯದಲ್ಲಿ ಯಾವ ಭಾವವನ್ನು ಉತ್ಪನ್ನಮಾಡಿದ್ದನೋ ಅದನ್ನು ನಿನ್ನ ಅಭಿನಯದ ಮೂಲಕ ನಿನ್ನ ನೇತ್ರಗಳು ಇಮ್ಮಡಿಯಾಗಿ ತೋರ್ಪಡಿಸಿವೆ" ಎಂದನು. ಮೋತೀಬಾಯಿಯು ಪ್ರಸನ್ನಳಾದಳು. ಅವಳ ಮುಖವು ಅರಳಿತು.

ರಾಜನು ಅವಳಿಗೆ ಒಂದು ತೋಟವನ್ನು ಜಹಗೀರಾಗಿ ಬಹುಮಾನಮಾಡಿದನು.*

---

* ಈ ತೋಟವು ಓರ್ಛಾ ಹೆಬ್ಬಾಗಿಲಿನ ಒಳಗಡೆಗೆ ಅದಕ್ಕೆ ಸೇರಿದಂತೆ ಇದ್ದಿತು. ಈಗ ಇದಕ್ಕೆ ಒಂದು ಭಾಗದಲ್ಲಿ ರಸ್ತೆಯಪಕ್ಕದಲ್ಲಿ ಒಂದು ಮಸೀದಿ ಇದೆ. ಮಿಕ್ಕ ಜಮೀನಿನಲ್ಲಿ ತರಕಾರಿಯ ತೋಟವಿದೆ.

ಮರುದಿನ ರಾಜನು ಖುದಾಬಕ್ಷನನ್ನು ತನ್ನ ದರ್ಬಾರಿನಿಂದ ಬೇರ್ಪಡಿಸಿದನು. ಮತ್ತು ಖುದಾಬಕ್ಷನು ಝಾನ್ಸಿಯ ಶಹರಿನ ಬೀದಿಗಳಲ್ಲಿ ಕಣ್ಣಿಗೆ ಬಿದ್ದುದೇ ಆದರೆ ಅವನನ್ನು ನಗ್ನ ಶರೀರದಲ್ಲಿ ಕೊರಡೆಗಳಿಂದ ಹೊಡೆಯಿಸುವದಾಗಿ ಡಂಗುರವನ್ನು ಹಾಕಿಸಿದನು. ಜನರಿಗೆ ಈ ಆಜ್ಞೆಯನ್ನು ಕೇಳಿ ಮಹದಾಶ್ಚರ್ಯವಾಯಿತು. ಆದರೆ ಜನರಿಗೆ ರಾಜನ ಮುಂಗೋಪದ ಅನುಭವವು ಇದ್ದುದರಿಂದ ಇದಕ್ಕೆ ಮುಖ್ಯಕಾರಣ ವನ್ನು ತಿಳಿದು ಕೊಳ್ಳಲು ಆಸಕ್ತರಾಗಿರಲಿಲ್ಲ.

ದಿವಾನ ರಘುನಾಥಸಿಂಹ ಮತ್ತು ರಾವ್‌ದುಲ್ಹಾಜುರವರು ಮನದಲ್ಲಿ ಇದರ ನಿಜ ಕಾರಣವನ್ನು ಊಹಿಸಿದ್ದರೂ ಅದನ್ನು ಬಹಿರಂಗ ಪಡಿಸಲಿಲ್ಲ. ಅವರು ಈ ನಾಟಕ ಶಾಲೆಯಿಂದ ದೂರದಲ್ಲೇ ಇದ್ದು ರಾಜನ ಆಹ್ವಾನವನ್ನು ಹೇಗೆ ನಿರಾಕರಿಸು ವುದು ? ಎಂಬ ಶಂಕೆಯಲ್ಲಿದ್ದರು.

ಮೋತೀಬಾಯಿಯು ಶ್ರದ್ಧೆಯಿಂದಲೂ, ಜಾಗರೂಕತೆಯಿಂದಲೂ ನಾಟಕ ಶಾಲೆಯಲ್ಲಿ ಕೆಲಸಮಾಡುತ್ತಲೇ ಇದ್ದಳು. ಆದರೆ ಪ್ರೇಕ್ಷಕರಲ್ಲಿ ಖುದಾಬಕ್ಷನನ್ನು ಪುನಃ ಯಾವಾಗಲೂ ನೋಡಲೇ ಇಲ್ಲ. ಮತ್ತು ಗಂಗಾಧರರಾಯನು ಪುನಃ ಯಾವಾ ಗಲೂ, ಯಾವ ಪ್ರೇಕ್ಷಕರ ಮೇಲೆಯೂ ಮೋತೀಬಾಯಿಯ ದೃಷ್ಟಿಯು ಅಂಕುರಿಸಲು ಅವಕಾಶಕೊಡಲಿಲ್ಲ. ಪ್ರಯತ್ನಿಸಿದರೂಕೂಡ ಮೋತೀಬಾಯಿಯು ರಂಗಮಂಟಪದ ಮೇಲೆ ಮತ್ತೊಮ್ಮೆ ಹಿಂದಿನಂತೆ ದೊಡ್ಡದೊಡ್ಡ ಅಶ್ರುಬಿಂದುಗಳನ್ನು ತರಲಾಗಲಿಲ್ಲ.

ಇನೇ ಸಮಯದಲ್ಲಿ ನಾಟಕಶಾಲೆಯಲ್ಲಿ ಜೂಹಿ ಎಂಬ ತರುಣಿಯು ನರ್ತಕಿ ಯಾಗಿ ಬಂದು ಸೇರಿದಳು. ಅವಳ ಮನೆಯಲ್ಲಿ ಅವಳಿಗೆ ನರ್ತಿಸಲು ಮತ್ತು ಹಾಡಲು ಅನುಮತಿದೊರಕಿತು. ಜೂಹಿಯು ಉನಾವ್‌ಬಾಗಿಲಿನ ಒಳಗೆ ಮೇವಾತಿಪುರದ ಕೊನೆಯಲ್ಲಿ ವಾಸಿಸುತ್ತಿದ್ದಳು. ಇವಳ ಮನೆಯು ಮಾಧವರಾವ್‌ಬಿಡೆಯ ತೋಟಕ್ಕೆ ಸೇರಿದಂತಿದ್ದಿತು. ಅವಳು ಅಪಕೀರ್ತಿಯ ಭಯಕ್ಕಾಗಿ ಹೊರಗೆ ಹೆಜ್ಜೆಯನ್ನಿಡುತ್ತಿರ ಲಿಲ್ಲ. ರಂಗಮಂಟಪದ ಮೇಲೆ ಇವಳ ಅಭಿನಯಕ್ಕಿಂತ ಇವಳ ನೃತ್ಯಗಾಯನಗಳು ಹೆಚ್ಚಾಗಿನಡೆಯುತ್ತಿದ್ದವು.

# ಉದಯ

## ೧

ಮಳೆಗಾಲವು ಕೊನೆಗೊಂಡಿದ್ದಿತು. ಆಶ್ವೀಜಮಾಸವು ಮುಗಿಯುತ್ತಾ ಬಂದಿದ್ದಿತು. ಆಗಲೇ ಹವಾ ಬದಲಾಯಿಸುತ್ತಿದ್ದಿತು. ಆದರೂ ಆ ದಿನ ಸಂಧ್ಯಾ ಕಾಲದಲ್ಲಿ ಆಕಾಶವು ನಿರ್ಮಲವಾಗಿದ್ದಿತು. ಸೂರ್ಯಾಸ್ತಮವಾಗಲು ಹೆಚ್ಚು ವಿಳಂಬ ವಿರಲಿಲ್ಲ. ಆಗ ಬಿಟ್ಟೂರಿನ ಆಚೆ, ಗಂಗಾನದಿಯ ತೀರದಲ್ಲಿ, ಮೂವರು ಅಶ್ವಾರೋಹಿಗಳು ತೀವ್ರವೇಗದಿಂದ ಸಾಗುತ್ತಿದ್ದರು. ಮೂವರೂ ಬಾಲ್ಯಾವಸ್ಥೆಯಲ್ಲಿದ್ದರು ; ಒಬ್ಬಳು ಬಾಲಕಿ, ಇಬ್ಬರು ಬಾಲಕರು. ಒಬ್ಬ ಹುಡುಗನ ವಯಸ್ಸು ಹದಿನಾರು ಹದಿನೇಳು ವರ್ಷಗಳಿರಬಹುದು. ಮತ್ತೊಬ್ಬನಿಗೆ ಹದಿನಾಲ್ಕಕ್ಕೆ ಸ್ವಲ್ಪ ಹೆಚ್ಚು. ಬಾಲಕಿಗೆ ಹದಿಮೂರಕ್ಕೂ ಕಮ್ಮಿ ಇದ್ದಿತು.

ದೊಡ್ಡ ಹುಡುಗನು ಸ್ವಲ್ಪ ಮುಂದೆ ಹೋದುದರಿಂದ ಬಾಲಕಿಯು ತನ್ನ ಕುದುರೆಯನ್ನು ಹಿಮ್ಮಡಿಯಿಂದು ಚಬುಕಾಯಿಸುತ್ತಾ, "ಹೇಗೆ ಮುಂದು ಹೋಗುತ್ತೀಯಾ, ನೊಡೋಣ?" ಎಂದು ಮುಂದೆ ಓಡಿಸಿಕೊಂಡು ಹೊರಟು ಹೋದಳು. ಬಾಲಕನು ಅವಳನ್ನು ಸೋಲಿಸಲು ಪ್ರಯಾಸ ಪಟ್ಟನು. ಆದರೆ ಕುದುರೆಯು ಮುಗ್ಗರಿಸಿದುದರಿಂದ ಅವನು ಕೆಳಗೆ ಬಿದ್ದುಬಿಟ್ಟನು. ಅವನ ತಲೆಗೆ ಒಣಗಿದ ಕಟ್ಟಿಗೆಯೊಂದು ತಗುಲಿ ಗಾಯವಾಗಿ ನೆತ್ತರು ಹರಿಯಲು ಆರಂಭಿಸಿತು. ಕುದುರೆಯು ನಾಗಾಲೋಟದಿಂದ ಮನೆಯ ಕಡೆಗೆ ಧಾವಿಸಿತು. ಬಾಲಕನು "ಮನೂ, ನಾನು ಸತ್ತೆ" ಎಂದು ಚೀತ್ಕಾರಮಾಡಿದನು.

ತಕ್ಷಣವೇ ಬಾಲಕಿಯು ತನ್ನ ಕುದುರೆಯನ್ನು ಹಿಂದಿರುಗಿಸಿ ಬಾಲಕನ ಸಮೀಪವನ್ನೈದಿದಳು. ನಿಮಿಷಾರ್ಧದಲ್ಲಿ ಕುದುರೆಯಿಂದ ಧುಮುಕಿ ಒಂದು ಕೈಯ್ಯಲ್ಲಿ ಕುದುರೆಯ ಲಗಾಮನ್ನು ಹಿಡಿದು ಬಗ್ಗಿ ಗಾಯಗೊಂಡ ಬಾಲಕನನ್ನು ಗಮನಿಸಿ ನೋಡಿದಳು. ತಲೆಗೆ ಜೋರಾದ ಪೆಟ್ಟು ಬಿದ್ದಿದ್ದಿತು. ಮತ್ತು ಆದರಿಂದ ರಕ್ತವು ಚಿಮ್ಮುತ್ತಿದ್ದಿತು. ಬಾಲಕಿಯು ಮೃದುವಾದ ಸ್ವರದಿಂದ "ಗಾಯವು ಅಷ್ಟೇನೂ ಬಲವಾಗಿಲ್ಲ. ಅತಿಯಾಗಿ ರಕ್ತ ಸ್ರಾವವಾಗುವ ಭಯವೇನಿಲ್ಲ. ಗಾಬರಿಯಾಗ ಬೇಡ" ಎಂದು ಸಂತೈಸಿದಳು.

ಆವೇಳೆಗೆ ಇನ್ನೊಬ್ಬ ಹುಡುಗನೂ ಅಲ್ಲಿಗೆ ಬಂದು ಕುದುರೆಯಿಂದ ಇಳಿದು, ವಿಹ್ವಲನಾಗಿ, ತನ್ನ ಸಂಗಾತಿಯ ಗಾಯವನ್ನೇ ನೋಡುತ್ತಾ ನಿಂತುಕೊಂಡನು.

"ನಾನಾ, ನಿನಗೆ ಜೋರಾದ ಪೆಟ್ಟು ಬಿದ್ದಂತೆ ಇದೆ" ಎಂದು ಆ ಹುಡುಗನು ಹೇಳಿದನು.

ಹುಡುಗಿಯು ಮುಗುಳ್ನಗೆ ನಗುತ್ತಾ "ಇಲ್ಲ. ಹೆಚ್ಚೇನೂ ಇಲ್ಲ. ಈಗಲೇ ಅವನನ್ನು ಮನೆಗೆ ಕರೆದುಕೊಂಡು ಹೋಗಿ ಔಷಧೋಪಚಾರಮಾಡಿಸುತ್ತೇನೆ. ಶೀಘ್ರದಲ್ಲಿಯೇ ಗುಣವಾಗುವುದು" ಎಂದಳು.

"ಹೇಗೆ ಕರೆದುಕೊಂಡು ಹೋಗುವೆ, ಮನೂ?" ಎಂದು ಕಾತರಸ್ವರದಿಂದ ಗಾಯಗೊಂಡಿದ್ದವನು ಕೇಳಿದನು.

ಮನುವು "ನೀನು ಎದ್ದು ನನ್ನ ಕುದುರೆಯ ಮೇಲೆ ಕುಳಿತುಕೊ. ನಾನು ಅದರ ಲಗಾಮನ್ನು ಹಿಡಿದು ಈಗಲೇ ನಿನ್ನನ್ನು ಮನೆಗೆ ಕರೆದೊಯ್ಯುವೆನು" ಎಂದು ಉತ್ತರವಿತ್ತಳು.

"ನನ್ನ ಕುದುರೆಯೆಲ್ಲಿ?" ಎಂದು ಗಾಯಗೊಂಡವನು ಅದೇ ಸ್ವರದಲ್ಲಿ ಪ್ರಶ್ನಿಸಿದನು.

"ಅದು ಓಡಿಹೋಯಿತು. ಆದರೆ ಈಗ ಚಿಂತಿಸಬೇಡ. ಬೇಕಾದಷ್ಟು ಕುದುರೆಗಳಿವೆ. ತ್ವರೆಮಾಡು, ನಾನಾ. ಈಗ ನನ್ನ ಕುದುರೆಯ ಮೇಲೆ ಕುಳಿತುಕೊ" ಎಂದಳು ಮನು.

ನಾನಾ—"ನಾನು ಅಲುಗಲಾರೆ" ಎಂದನು.

ಮನುವು "ನಾನು ಸಹಾಯಮಾಡುತ್ತೇನೆ. ಏಳು" ಎಂದಳು.

ನಾನಾ ಎದ್ದನು. ಮನುವು ಒಂದು ಕೈಯ್ಯಲ್ಲಿ ಲಗಾಮನ್ನು ಹಿಡಿದು ಮತ್ತೊಂದು ಕೈಯಿಂದ ರಕ್ತದ ಮಡುವಿನಲ್ಲಿದ್ದ ನಾನಾವನ್ನು ಎತ್ತಿ ಬಹಳ ಜಾಗರೂಕತೆಯಿಂದ ಕುದುರೆಯ ಮೇಲೆ ಕುಳ್ಳಿರಿಸಿ ಅತ್ಯಂತ ಚತುರತೆಯಿಂದ ಅವನನ್ನು ಹಿಡಿದುಕೊಂಡೇ ತಾನೂ ಅವನ ಹಿಂದೆ ಕುದುರೆಯ ಮೇಲೆ ಹಾರಿ ಕುಳಿತಳು. ಕುದುರೆಯನ್ನು ಹತೋಟಿಯಲ್ಲಿಟ್ಟುಕೊಂಡು ನಾನಾವಿಗೂ ಆಸರೆ ಕೊಟ್ಟುಕೊಂಡು ಹಳ್ಳಿಯ ಕಡೆ ಹೊರಟಳು. ಅವಳ ಹಿಂದೆ ಚಿಕ್ಕ ಬಾಲಕನೂ ವ್ಯಾಕುಲಚಿತ್ತನಾಗಿ ಹೊರಟನು. ಇವರು ಹಳ್ಳಿಯ ಹತ್ತಿರ ಬಂದಾಗ ಒಬ್ಬ ಅಶ್ವಾರೋಹಿ ಸಿಪಾಯಿಯು ಬಾಲಕರ ಹತ್ತಿರ ಬಂದು "ಗಾಯವಾಗಿಲ್ಲವಲ್ಲ? ಎಂದು ಕೇಳಿದನು. ನಂತರ ನಾನಾವನ್ನು ನೋಡಿ "ಓಹೋ, ಬಹಳ ನೆತ್ತರು ಸುರಿದಿವೆ. ಬನ್ನಿ ನಾನು ನಿಮ್ಮನ್ನು ಕರೆದುಕೊಂಡು ಹೋಗುತ್ತೇನೆ" ಎಂದನು.

"ಕುದುರೆಯು ಮನೆಯ ಬಳಿಗೆ ಬಂದಾಗಲೇ ಯಾವುದೋ ಒಂದು ದುರ್ಘಟನೆಯು ನಡೆದಿರಬೇಕೆಂದು ನಾವು ತಿಳಿದುಕೊಂಡೆವು" ಎಂದು ಆಗಂತುಕನು ಹೇಳಿದನು.

ಆತನು ಬಲಾತ್ಕರಿಸಿದರೂ ಕೂಡ ಮನುವು ನಾನಾವನ್ನು ತನ್ನ ಕುದುರೆಯ

ಮೇಲೆಯೇ ಕುಳ್ಳಿರಿಸಿಕೊಂಡು ಕರೆತಂದಳು. ಮನೆಯ ಬಾಗಿಲಿಗೆ ಬಂದು ಕುದುರೆ ಯಿಂದ ಇಳಿಯುತ್ತಿರುವಾಗಲೇ ಒಬ್ಬ ಮಧ್ಯವಯಸ್ಕ ಮತ್ತು ಒಬ್ಬ ವೃದ್ಧ—ಇಬ್ಬರೂ ಇವರನ್ನು ಸಂಧಿಸಿದರು. ಇಬ್ಬರೂ ಲಲಾಟದಲ್ಲಿ ತ್ರಿಪುಂಡ್ರವನ್ನು ಧರಿಸಿದ್ದರು. ವೃದ್ಧನು ರೇಷ್ಮೆಯ ವಸ್ತ್ರಗಳನ್ನು ಉಟ್ಟಿದ್ದನು. ಕಂಠದಲ್ಲಿ ಮುತ್ತಿನ ಕಂಠೀಸರವು ರಾರಾಜಿಸುತ್ತಿದ್ದಿತು. ಮಧ್ಯವಯಸ್ಕನು ಸಾಧಾರಣ ವಸ್ತ್ರಗಳನ್ನು ಧರಿಸಿ ವೃದ್ಧನಿ ಗಿಂತ ಸ್ವಲ್ಪ ಕೀಳು ದರ್ಜೆಯವನಂತೆ ತೋರುತ್ತಿದ್ದನು. ವೃದ್ಧನು ಮಧ್ಯವಯಸ್ಕ ನನ್ನು ಕುರಿತು "ಏನು, ಎಲ್ಲರೂ ಬಂದರೆ, ಮೋರೋಪಂತ್ ?" ಎಂದು ಕೇಳಿದನು.

ಮೋರೋಪಂತನು "ಹಾ, ಮಹರಾಜ್" ಎಂದನು.

ಮಕ್ಕಳು ಸಮೀಪಿಸಲು "ಹಾ! ಇದೇನು ? ಮನೂ ಮತ್ತು ನಾನಾ ಇಬ್ಬರೂ ರಕ್ತಸಿಕ್ತರಾಗಿದ್ದಾರೆ" ಎಂದು ಮೋರೋಪಂತನು ನುಡಿದನು.

ಮೋರೋಪಂತನು ಯಾರನ್ನು "ಮಹರಾಜ್" ಎಂದು ಸಂಬೋಧಿಸಿದನೋ ಆತನು ಎರಡನೆಯ ಪೇಷ್ವೆ ಬಾಜೀರಾಯನಾಗಿದ್ದನು.

ಆತನೂ ರಕ್ತದಲ್ಲಿ ತೊಯ್ದ ಮಕ್ಕಳನ್ನು ಕಂಡು ಕಾತರಗೊಂಡನು.

ಸಿಪಾಯಿಗಳು ನಾನಾವನ್ನು ಕುದುರೆಯಿಂದ ಇಳಿಸಿದರು. ಮನೂ ಕುದುರೆ ಯಿಂದ ಕೆಳಗೆ ಧುಮುಕಿದಳು.

ಮೋರೋಪಂತನು ನಾನಾವನ್ನು ಮಲಗಿಸಿ ಒಡನೆಯೇ ಮನುವನ್ನೂ "ಎಲ್ಲಿ ಗಾಯವಾಗಿದೆ ಮನು ?" ಎಂದು ಕೇಳಿದನು.

ಮನುವು ಮುಗುಳ್ನಗೆ ನಗುತ್ತಾ "ನನಗೆ ಸ್ವಲ್ಪವೂ ಪೆಟ್ಟಾಗಿಲ್ಲ ಚಿಕ್ಕಪ್ಪಾ, ಆದರೆ ನಾನಾವಿಗೆ ಪೆಟ್ಟಾಗಿದೆ, ಅದೂ ಬಹಳವಾಗಿಲ್ಲ." ಎಂದಳು.'

ಬಾಜೀರಾಯನು "ಹೇಗೆ ಪೆಟ್ಟಾಯಿತು. ಮಗು ?" ಎಂದು ಪ್ರಶ್ನಿಸಿದನು.

ಮನುವು ಕೊಟ್ಟಡಿಯನ್ನೂ ಪ್ರವೇಶಿಸುತ್ತಾ "ಅದೇನು ಮಹಾ ! ಕುದುರೆ ಮುಗ್ಗರಿಸಿತು. ಅವನು ಅದನ್ನು ಹತೋಟಿಗೆ ತರಲಾರದೆ ಬಿದ್ದನು. ಕುದುರೆಯು ಓಡಿ ಹೋಯಿತು. ಅದು ಓಡಿದುದು ನೋಡಿ ನನಗೆ ಹೊಟ್ಟೆ ಹಿಡಿಸಲಾರದಷ್ಟು ನಗು ಬಂದಿತು" ಎಂದು ಉತ್ತರವಿತ್ತಳು.

ಮೋರೋಪಂತನು ಮನುವಿನ ಈ ಹುಡುಗಾಟಕ್ಕೆ ಗಮನ ಕೊಡಲಿಲ್ಲ. ನಾನಾ ವನ್ನೂ ತನ್ನ ಕುದುರೆಯ ಮೇಲೆ ಕರೆತಂದಳಲ್ಲಾ ಎಂಬ ವಿಚಾರದಲ್ಲಿ ಎಲ್ಲರೂ ಸಂತುಷ್ಟರಾಗಿದ್ದರು.

ಮೋರೋಪಂತನು ಬಾಜೀರಾಯನಿಗೆ ಕೇಳಿಸುವಂತೆ ಮನುವನ್ನು ಕುರಿತು "ನೀನು ಹೇಗೆ ನಾನಾಸಾಹೇಬನನ್ನು ಎತ್ತಿ ಕೂರಿಸಿಕೊಂಡು ಬಂದೆ" ಎಂದು ಕೇಳಿದನು.

'ಹೇಗೂ ಇಲ್ಲ, ಅವನು ಎದ್ದು ಕುಳಿತುಕೊಂಡನು. ನಾನು ಹಿಂದೆ ಕುಳಿತು

ಕೊಂಡೆನು. ಒಂದು ಕೈಯ್ಯಲ್ಲಿ ಲಗಾಮು ಹಿಡಿದು ಇನ್ನೊಂದು ಕೈಯ ಲ್ಲಿ ಅವನಿಗೆ ಆಸರೆ ಕೊಟ್ಟೆ. ಅಷ್ಟೆ' ಎಂದಳು.

ನಾನಾವನ್ನು ಹಾಸಿಗೆಯಲ್ಲಿ ಮಲಗಿಸಿ ಗಾಯವನ್ನು ತೊಳೆದು ಪಟ್ಟಿ ಕಟ್ಟಿದರು. ಗಾಯವು ಅಪಾಯಕರವಲ್ಲದ್ದಾದರೂ, ಉದ್ದವಾಗಿಯೂ ಮತ್ತು ಸ್ವಲ್ಪ ಆಳವಾಗಿಯೂ ಇದ್ದಿತು. ಬಾಜೀರಾಯನು ಬಹಳ ಚಿಂತಾಕ್ರಾಂತನಾಗಿ ಕಂಬನಿ ಸುರಿಸುವುದರಲ್ಲಿದ್ದನು.

ಮೋರೋಪಂತನಿಗೆ ಗಾಯವು ಅಷ್ಟು ಗಭೀರವಾದುದಲ್ಲವೆಂದು ತಿಳಿದಿದ್ದರೂ ಕೂಡ ಬಾಜೀರಾಯನಿಗೆ ತನ್ನ ಸಹಾನುಭೂತಿಯನ್ನು ವ್ಯಕ್ತಪಡಿಸಲು ತಾನೂ ಚಿಂತಾಕ್ರಾಂತನಾದನು.

ಮನುವೂ ಮತ್ತು ಮೋರೋಪಂತನೂ ತಮ್ಮ ಕೊಠಡಿಗೆ ಹೋದನಂತರ ಮನುವು 'ಇಷ್ಟು ಅಲ್ಪಗಾಯಕ್ಕೆ ಇಷ್ಟೊಂದು ಗಾಬರಿಯಾಗಿ ಕಂಬನಿ ಸುರಿಸಬೇಕೆ?' ಎಂದು ಕೇಳಿದಳು.

'ಮಗೂ, ಪೆಟ್ಟು ಅಲ್ಪವಾಗಿಲ್ಲ, ಎಷ್ಟು ರಕ್ತಸುರಿದುಹೋಯಿತು !'

'ನೀವುಗಳು ಪುರಾಣ ಇತಿಹಾಸಗಳನ್ನು ಹೇಳುತ್ತೀರಲ್ಲ, ಅದರಲ್ಲೇನು ಯುದ್ಧ ವನ್ನು ರೇಷ್ಮೆಯ ಹಗ್ಗ ಮತ್ತು ಹತ್ತಿಯ ಬಾಣಗಳಿಂದ ನಡೆಸುತ್ತಿದ್ದರೇನು ?'

"ಇಲ್ಲಾ ಮನು, ಆತನಿನ್ನೂ ಬಾಲಕನಲ್ಲವೆ ?"

"ಬಾಲಕ ! ಎಲ್ಲಿಯ ಬಾಲಕ ? ನನಗಿಂತ ಹಿರಿಯನು. ಮಲ್ಲಕಂಭ, ಕುಸ್ತಿ ಇತ್ಯಾದಿಗಳನ್ನು ಮಾಡುತ್ತಾನೆ. ಬಾಲಗುರುಗಳು ಅವನಿಗೆ 'ಶಹಭಾಸ್' ಎನ್ನುತ್ತಾರೆ. ಅಭಿಮನ್ಯುವೇನು ಇವನಿಗಿಂತ ದೊಡ್ಡವನಿದ್ದನೆ ?"

"ಮನೂ, ಈಗ ಆ ಕಾಲವಲ್ಲ, ಕಾಲಬದಲಾಯಿಸಿದೆ".

"ಅದು ಹೇಗೆ ಚಿಕ್ಕಪ್ಪ ? ಅದೇ ಆಕಾಶ, ಅದೇ ಪೃಥ್ವಿ, ಅದೇ ಸೂರ್ಯ, ಚಂದ್ರ ಮತ್ತು ನಕ್ಷತ್ರ, ಎಲ್ಲವೂ ಅದೇ. ಹಾಗೆಯೇ ಇವೆ."

"ನೀನು ಬಹಳ ಹಟವಾದಿ."

"ನಾನು ಯಾವಾಗಲೂ ಪ್ರಶ್ನಿಸುತ್ತೇನೆ; ಆಗ ನೀವು ಹೀಗೆ ಹೇಳಿ ನನ್ನ ಬಾಯಿ ಕಟ್ಟುತ್ತೀರಿ. ನಾನು ಇದನ್ನು ಒಪ್ಪುವುದಿಲ್ಲ. ಈಗೇನಾಗಿದೆ ಎಂಬುದನ್ನು ನನಗೆ ತಿಳಿಯ ಹೇಳಿ".

"ಈಗ ನಮ್ಮ ದೇಶದ ಭಾಗ್ಯವು ಅದೃಶ್ಯವಾಗಿದೆ. ಆಂಗ್ಲೇಯರ ಭಾಗ್ಯೋದಯ ವಾಗಿದೆ. ಅವರ ಪ್ರತಾಪದೆದುರಿಗೆ ನಮ್ಮ ಜನರೆಲ್ಲರೂ ನಿಸ್ತೇಜಿತರಾಗಿದ್ದಾರೆ."

"ಒಬ್ಬರ ಭಾಗ್ಯವನ್ನು ಮತ್ತೊಬ್ಬರು ಅಪಹರಿಸಿಲ್ಲ. ಇದೆಲ್ಲವೂ ಊಹೆ. ಭೀರುಗಳ ಪೊಳ್ಳುಜಂಭ."

"ನೀನು ಯಾವಾಗ ದೊಡ್ಡವಳಾಗುವೆಯೋ, ಆಗ ಸಂಸಾರದ ಅನುಭವವು ನಿನಗೆ ಇದೆಲ್ಲವನ್ನೂ ಸ್ಪಷ್ಟಪಡಿಸುವುದು."

"ನಾನೆಂದಿಗೂ ಹೇಡಿಯಾಗುವುದಿಲ್ಲ. ನೀವು, 'ಮನೂ, ನೀನು ತಾರಾಬಾಯಿ, ಜೀಜಾಬಾಯಿ, ಸೀತೆ ಇವರುಗಳಂತಾಗಬೇಕು' ಎಂದು ಹೇಳುತ್ತಿದ್ದಿರಿ. ಏನು, ಅವರುಗಳೆಲ್ಲಾ ಹೇಡಿಗಳೆ? ಈ ಸುಳ್ಳು ಏತಕ್ಕೆ?"

"ಮಗೂ, ಇವರೆಲ್ಲರೂ ಮಹಾಸತಿಗಳು ಮತ್ತು ವೀರಾಗ್ರಣಿಗಳು. ಆದರೆ ಕಾಲವು ಬದಲುತ್ತಾ ಇರುತ್ತದೆ, ಬದಲಿಯೂ ಇದೆ."

'ಇದು ಪುನಃ ಪುನಃ ಅದೇ ಮೂಢತರ್ಕಕ್ಕೆ ಬಂದಿತು'.

'ಇನ್ನಾವಾಗಲಾದರೂ ಪುನಃ ಹೇಳುತ್ತೇನೆ.'

"ನಾನು ಇಂತಹ ಪೊಳ್ಳು ಮಾತುಗಳನ್ನು ಯಾವಾಗಲೂ ಕೇಳುವುದೇ ಇಲ್ಲ. ಏಕೆಂದರೆ—"

"ನೀನು ಮಲಗುವೆಯೋ ಇಲ್ಲ ರಾತ್ರಿಯೆಲ್ಲಾ ಚರ್ಚಿಸುತ್ತಲೇ ಇರುವೆಯೋ?" ಎಂದು ಅಂತ್ಯದಲ್ಲಿ ಬರಸೆಳೆದು ಪ್ರೇಮದಿಂದ ಕೇಳಿದನು.

ಮನು ಕಿಲಕಿಲನೆ ನಕ್ಕಳು. ನಂತರ "ಚಿಕ್ಕಪ್ಪಾ, ನೀವೇನೋ ಈ ಚರ್ಚೆಯನ್ನು ಮುಂದು ಹಾಕಿದಿರಿ, ನಾನು ಈ ಪ್ರಸಂಗವನ್ನು ಕುರಿತು ಪುನಃ ಮಾತನಾಡುತ್ತೇನೆ. ಇದೋ ಮಲಗಿಕೊಂಡೆ" ಎಂದು ಪಕ್ಕಕ್ಕೆ ತಿರುಗಿ ಮಲಗಿದಳು.

ಪುನಃ ಒಂದು ಕ್ಷಣ ಬಿಟ್ಟು "ನಾನಾ ಮಲಗಿದನೋ ಇಲ್ಲವೋ, ನಿಮಗೆ ನಿದ್ರೆ ಬರುತ್ತಿದ್ದರೆ ನಾನು ಓಡಿಹೋಗಿ ನೋಡಿಕೊಂಡು ಬರಲೆ?" ಎಂದು ಕೇಳಿದಳು.

ಮೋರೋಪಂತನು ಮನುವನ್ನು ಹೋಗಬಿಡದೆ ತಾನೇ ಹೋಗಿ ನೋಡಿಕೊಂಡು ಬಂದು ನಾನಾಸಾಹೇಬನು ಮಲಗಿ ನಿದ್ರೆ ಮಾಡುತ್ತಿದ್ದಾನೆ" ಎಂದು ಹೇಳಿದನು.

ಮನುವು ಮಲಗಿದಳು. ಮೋರೋಪಂತನಿಗೆ ನಿದ್ರೆ ಹತ್ತಲಿಲ್ಲ. ಯೋಚನೆ ಮಾಡುತ್ತಾ ಮಲಗಿದ್ದನು. "ಮನುವಿನ ಬುದ್ಧಿಯು ಅವಳ ವಯಸ್ಸಿಗೆ ಬಹಳ ಮೀರಿದೆ. ಅವಳಿಗೆ ಈವರೆಗೆ ಯೋಗ್ಯನಾದ ವರನು ಯಾರೂ ದೊರಕಲಿಲ್ಲ. ದಕ್ಷಿಣ ದೇಶಕಾದ್ದರೂ ಹೋಗಿ ನೋಡಬೇಕು" ಎಂಬ ಈ ಯೋಚನೆಯಲ್ಲಿಯೇ ರಾತ್ರಿಯ ಬಹಳ ಕಾಲವನ್ನು ತಳ್ಳಿದನು. ಬಹು ಪ್ರಯಾಸದಿಂದ ಕಡೆಯ ಜಾವದಲ್ಲಿ ನಿದ್ರೆ ಹತ್ತಿತು.

೨

ಮುಂಜಾನೆ ಮನೂಬಾಯಿಯು ನಾನಾ ಹೇಗಿದ್ದಾನೆಂದು ನೋಡಲು ಹೋದಾಗ ಆತನು ಎಚ್ಚರವಾಗಿದ್ದರೂ ಹಾಸಿಗೆಯಲ್ಲಿಯೇ ಮಲಗಿದ್ದನು. ಮನುವು ಅವನ ತಲೆಯನ್ನು ನೇವರಿಸಿ "ರಾತ್ರಿ ಚೆನ್ನಾಗಿ ನಿದ್ರಿಸಿದೆಯಾ ?" ಎಂದು ಕೇಳಿದಳು.

ನಾನಾ—ಮಲಗಿದ್ದೆ, ನಿದ್ರೆಯೇನೋ ಬಂದಿತು: ಆದರೆ ನಿರಾಳವಾದ ನಿದ್ರೆಯಿಲ್ಲ. ನೋವೇನೊ ಇದ್ದೇ ಇದ್ದಿತು.

ಮನು—ನೋವು ಮಧ್ಯಾಹ್ನದ ವೇಳೆಗೆ ಇಳಿದು ಹೋಗುವುದು. ಮೂರನೆಯ ಜಾವದಲ್ಲಿ ತಿರುಗಾಡಲು ಬರುತ್ತೀಯಾ ? ಹೊತ್ತು ಮುಳುಗುವ ಮುಂಚೆಯೆ ಹಿಂದಿರುಗಿ ಬರೋಣ.

ನಾನಾ—ಕುದುರೆ ಸವಾರಿ ಮಾಡಿದರೆ ನೋವು ಹೆಚ್ಚಾಗುವುದೆಂದು ಭಯವಾಗುತ್ತದೆ.

ಮನು—ಪ್ರಾರಂಭದಲ್ಲಿ ಯಾವಾಗಲೂ ಸ್ವಲ್ಪ ತೊಂದರೆಯಾಗುವುದು. ಆದರೆ ಶೀಘ್ರದಲ್ಲಿಯೇ ಅದನ್ನು ತಡೆಯಬಲ್ಲೆ; ಮತ್ತೆ ಓಡಲು ಪ್ರಾರಂಭಿಸಿದಾಗ ಪೆಟ್ಟು ತಗುಲಿದ್ದಿತೆಂಬ ನೆನಪೂ ಬರುವುದಿಲ್ಲ.

ನಾನಾ—ನೋವು ಹೆಚ್ಚಾದರೆ ಏನುಮಾಡಲಿ ?

ಮನು—ಸಹಿಸಬೇಕು. ಹಾಗೆ ಸಹಿಸಿದರೆ ಮುಂದೆ ಯಾವಾಗಲಾದರೂ ಪೆಟ್ಟು ಬಿದ್ದರೆ ಆಗ ಅದು ಕಡಿಮೆಯಾಗಿ ತೋರುವುದು.

ನಾನಾ—ನೆನ್ನೆಯಂತೆ ಮರಳಿ ಮುಗ್ಗರಿಸಿದರೆ ಏನು ಮಾಡಲಿ ?

ಮನು—ಪುನಃ ನಾನು ನಿನ್ನನ್ನು ಎತ್ತಿ ಕೊಂಡು ಬರುವೆನು, ಚಿಂತಿಸಬೇಡ.

ನಾನಾ—ಒಂದು ವೇಳೆ ನೀನೇ ಮುಗ್ಗರಿಸಿದರೆ ಆಗ ?

ಮನು—ನಾನು ಒಬ್ಬರ ಸಹಾಯವೂ ಇಲ್ಲದೆ ಕುದುರೆಯನ್ನು ಸವಾರಿ ಮಾಡುತ್ತಲೇ ಮನೆಗೆ ಬರುವೆನು.

ನಾನಾ—ಸಾಕು, ನನಗೆ ಮತ್ತೇನೂ ಹೇಳಬೇಡ.

ಮನು—ಲಡ್ಡು ತಿನ್ನುತ್ತೀಯಾ ?

ನಾನಾ—ಇಚ್ಛೆಯಿಲ್ಲ.

ಮನು—ಮತ್ತೇನು ಇಚ್ಛೆ ?

ನಾನಾ—ನನ್ನನ್ನು ಸುಮ್ಮನೆ ಮಲಗಿರಲು ಬಿಡು.

ಮನು—ಎಲ್ಲಿಯವರೆಗೆ ?

ನಾನಾ—ಮೂರು ನಾಲ್ಕು ದಿನಗಳವರೆಗೆ.

ಮನು—ಯಾರು ಹೇಳಿದರು?

ನಾನಾ—ಚಿಕ್ಕಪ್ಪನು ಹೇಳುತ್ತಿದ್ದನು. ವೈದ್ಯನೂ ಅದನ್ನೇ ಹೇಳಿದನು.

ಮನು—ವೈದ್ಯನೇನೋ ಹಣದ ದುರಾಶೆಯಿಂದ ಹೇಳಿರಬಹುದು ಆದರೆ ಅಜ್ಜನೇಕೆ ಹಾಗೆ ಹೇಳಿದರು?

ನಾನಾ—ಅವರಿಂದಲೇ ಕೇಳಿಕೋ; ನನ್ನ ತಲೆ ತಿನ್ನಬೇಡ.

ಮನುವು ನಗಲಾರಂಭಿಸಿದಳು; ಮತ್ತೆ ಸ್ವಲ್ಪ ಮುಗುಳ್ನಗೆಯಿಂದ, ವ್ಯಂಗ್ಯವಾಗಿ, "ಬಾಜೀಪ್ರಭು ದೇಶಪಾಂಡೆಗಿಂತ ಕೀರ್ತಿಯನ್ನು ಸಂಪಾದಿಸಿ ಯಶೋವಂತನಾಗುವೆನು, ತಾನಾಜಿ ಮಾಲ್ಸೂರೆಯನ್ನು ಸೋಲಿಸುವೆನು, ಸ್ವರ್ಗವಾಸಿ ಛತ್ರಪತಿ ಶಿವಾಜಿಗೆ ನನ್ನ ಕೃತ್ಯಗಳಿಂದ ಹೃದಯ ಕಂಪನಮಾಡುವೆನು, ಶ್ರೀಮಂತ ಪಂತಪ್ರಧಾನ ಮೊದಲನೇ ಬಾಜೀರಾಯನ ಸರಿಸಾಟಿಯಾಗುವೆನು, ಎಂದು ಹೆಮ್ಮೆ ಕೊಚ್ಚಿಕೊಳ್ಳುತ್ತಿದ್ದೆ" ಎಂದು ನುಡಿದಳು.

ಅಷ್ಟರಲ್ಲಿಯೇ ಅಲ್ಲಿಗೆ ಬಾಜೀರಾಯನು ಬಂದನು. ಮನುವು ಭರದಿಂದ ನುಡಿಯುತ್ತಿದ್ದ ಮಾತಿನ ಕಡೆಯ ವಾಕ್ಯವು ಅವನ ಕಿವಿಗೆ ಬಿದ್ದಿತು.

"ನಿನ್ನ ಚಪಲತೆಯು ಎಂದು ಕಡಿಮೆಯಾಗುವುದೋ ಗೊತ್ತಿಲ್ಲ; ಏನು ನೀನು ಅಷ್ಟು ಹರಟುತ್ತಿರುವುದು" ಎಂದನು.

ಮನುವು ಸ್ವಲ್ಪವೂ ಹಿಂಜರಿಯದೆ "ತಾತಾ, ಇದಕ್ಕೆ ನೀವು ಕಾಡು ಹರಟೆ ಎಂದು ಹೇಳುವಿರಾ? ನೀವೇ ನಮ್ಮೆಲ್ಲರಿಗೂ ಇವುಗಳನ್ನು ಚಿಕ್ಕಂದಿನಿಂದ ತಿಳಿಸುತ್ತಿದ್ದಿರಿ. ನಾನು ಅದನ್ನೇ ಮತ್ತೊಮ್ಮೆ ಹೇಳುತ್ತಿದ್ದೇನೆ. ನೀವು ಇದನ್ನು ತಲೆಹರಟೆ ಎಂದು ಏತಕ್ಕೆ ಹೇಳುತ್ತಿದ್ದೀರಿ" ಎಂದಳು.

ಬಾಜೀರಾಯನು "ಮಗಳೆ, ಇಂದು ಆ ಮಾತುಗಳನ್ನು ಸ್ಮರಿಸಿ ಜೀವನವನ್ನು ನಡೆಸುವ ಸಮಯವೆ? ಮಹಾಭಾರತದ ಕಥೆಯನ್ನೂ, ನಿನ್ನ ಪೂರ್ವಿಕರ ಪವಿತ್ರ ಕಥೆಯನ್ನೂ ಕೇಳು, ಒಳ್ಳೆಯ ಮಾರ್ಗವನ್ನು ಅನುಸರಿಸಿ ಪವಿತ್ರ ಜೀವನವನ್ನು ಉಲ್ಲಾಸದಿಂದ ನಡೆಸು, ಸುಮ್ಮನೆ ನಾನಾವನ್ನು ಕಾಡಿಸಬೇಡ" ಎಂದನು.

ಮನುವು ಮುಗುಳ್ನಗೆ ನಕ್ಕು ಸ್ವಲ್ಪ ತುಟಿಕಚ್ಚಿ ಸಂಕೋಚದಿಂದ ಬಾಜೀರಾಯನನ್ನು ಸಮೀಪಿಸಿ "ಏನು ತಾತಾ, ನಮಗೆ ಉಂಡು, ಮಲಗಿ, ಕಾಲಕಳೆಯುವ ಜೀವನವನ್ನೇ ಕಲಿಸುತ್ತೀರಾ?" ಎಂದಳು.

ಬಾಜೀರಾಯನಿಗೆ ನಗುಬಂದಿತು. ಏನೋ ಹೇಳಬೇಕೆಂದಿರುವಾಗ ಮೋರೋಪಂತನು "ನಾನಾ ಸಾಹೇಬನಿಗೆ ಸ್ವಲ್ಪ ಆನೆಯ ಮೇಲೆ ಸವಾರಿ ಮಾಡಿ ಕೊಂಡು ಬರಲಿ ಬಿಡಿ. ಆನೆಯೂ ತಯಾರಾಗಿದೆ" ಎಂದು ಹೇಳುತ್ತಲೇ ಬಂದನು.

ಬಾಜೀರಾಯನು "ಆನೆಯ ಸವಾರಿಯಿಂದ ಗಾಯಕ್ಕೆ ತೊಂದರೆಯೇನಿಲ್ಲವೇ

ನಷ್ಟೆ ?" ಎಂದು ಕೇಳಿದನು.

ಮೋರೋಪಂತನು "ಇಲ್ಲ, ಅಂಬಾರಿಯಲ್ಲಿ ಮೃದುವಾದ ಮೆತ್ತೆದಿಂಬುಗಳನ್ನು ಸಜ್ಜುಗೊಳಿಸಲಾಗಿವೆ ಮತ್ತು ಆನೆಯನ್ನು ನಿಧಾನವಾಗಿ ನಡೆಸುವರು" ಎಂದನು.

ಮನುವು ಆನೆಯನ್ನು ನೋಡಲು ಹೊರಗೆ ಓಡಿದಳು. ನಾನಾ ವಿಹಾರಕ್ಕೆ ಹೊರಡಲು ಎದ್ದು ತಯಾರಾದನು. ಮನುವು ಹಿಂದೆ ಅನೇಕ ಬಾರಿ ಆನೆಗಳನ್ನು ನೋಡಿದ್ದರೂ ಈ ಆನೆಯನ್ನು ಬಳಸಿ ಬಳಸಿ ನೋಡುತ್ತಾ ಅದರ ಸ್ಥೂಲಕಾಯ, ವಿಚಿತ್ರ ಚಲನವಲನಗಳನ್ನು ನೋಡಿ ನಗುತ್ತಲಿದ್ದಳು.

ಸ್ವಲ್ಪ ಹೊತ್ತಿನ ತರುವಾಯ ಬಾಜೀರಾಯನು ನಾನಾವನ್ನು ಕರೆದುಕೊಂಡು ಬಂದನು. ಅವರ ಹಿಂದೆಯೇ ಚಿಕ್ಕಹುಡುಗನೂ ಮತ್ತು ಮೋರೋಪಂತನೂ ಬಂದರು. ಮೊದಲು ನಾನಾವನ್ನು ಆನೆಯ ಮೇಲೆ ಕುಳ್ಳಿರಿಸಿದರು. ನಂತರ ಚಿಕ್ಕ ಹುಡಗನೂ ಹತ್ತಿ ಕುಳಿತನು. ಮಾಹುತನು ಆನೆಯನ್ನೂ ಅಂಕುಶದಿಂದ ತಿವಿದೆಬ್ಬಿಸಿದನು.

ಮನುವು "ನಾನೂ ಆನೆಯ ಮೇಲೆ ಕುಳಿತುಕೊಳ್ಳುತ್ತೇನೆ, ಚಿಕ್ಕಪ್ಪಾ" ಎಂದಳು. ಬಾಜಿರಾಯನ ಮಂಡಿಯನ್ನು ಸವರುತ್ತಾ "ತಾತಾ, ನಾನೂ ಕುಳಿತು ಕೊಳ್ಳುತ್ತೇನೆ" ಎಂದಳು.

ನಾನಾ ಅಂಬಾರಿಯಲ್ಲಿ ಮಾಹುತನ ಬಳಿ ಕುಳಿತಿದ್ದನು. ಆತನು ಮಾಹುತನನ್ನು ಜಾಗ್ರತೆಯಾಗಿ ಹೊರಡಲು ಆದೇಶಮಾಡಿದನು. ಮನುವಿನ ಕಡೆಯೂ ತಿರುಗಿ ನೋಡಲಿಲ್ಲ. ಬಾಜೀರಾಯನು ನಾನಾವನ್ನು ಕುರಿತು "ಮನುವನ್ನೂ ಕರೆದೊಯ್ಯಬಾರದೇ ?" ಎಂದನು. ನಾನಾ ಮುಖವನ್ನು ತಿರುಗಿಸಿದನು. ಆಗ ಬಾಜೀರಾಯನು ಚಿಕ್ಕಹುಡುಗನನ್ನು ಉದ್ದೇಶಿಸಿ "ರಾವ್‌ಸಾಹೇಬ್, ಮನುವನ್ನೂ ಕರೆದುಕೊಂಡು ಹೋದರೆ ಚೆನ್ನಾಗಿರುತ್ತದೆ" ಎಂದನು.

ಮಾಹುತನು ಆ ಮಾತನ್ನು ಕೇಳಿ ಸ್ವಲ್ಪ ಅನುಮಾನಿಸಲು ನಾನಾವು ಅವನ ಪಕ್ಕೆಯನ್ನು ಬೆರಳಿನಿಂದ ತಿವಿದು ಹೊರಡಲು ಆಜ್ಞಾಪಿಸಿದನು. ಅವನು ನಾನಾ ಸಾಹೇಬ್ ಮತ್ತು ರಾವ್‌ಸಾಹೇಬರನ್ನು ಕರೆದುಕೊಂಡು ಹೊರಟನು. ಮನುವಿನ ಕಣ್ಣುಗಳು ಪರಿತಾಪದಿಂದ ಕೂಡಿದವು. ಮೋರೋಪಂತನ ಕೈಗಳನ್ನು ಹಿಡಿದುಕೊಂಡು "ಚಿಕ್ಕಪ್ಪಾ, ಆನೆಯನ್ನು ಹಿಂದಿರುಗಿಸ ಹೇಳು. ನಾನು ಖಂಡಿತ ಆನೆ ಸವಾರಿಮಾಡಬೇಕು" ಎಂದು ಗೋಗರೆದಳು.

ಬಾಜೀರಾಯನು ಮನೆಯೊಳಗೆ ಹೊರಟುಹೋದನು.

ಮೋರೋಪಂತನಿಗೆ ದುಃಖವಾಯಿತು. ಆತನು ಅವಳನ್ನು ಸಮಾಧಾನ ಪಡಿಸುತ್ತಾ "ಅವರು ಹೊರಟು ಹೋದರು ಮಗುವೇ" ಎಂದನು.

ಮನುವು ಮೋರೋಪಂತನ ಕೈಗಳನ್ನು ಎಳೆಯುತ್ತಾ "ಮಾಹುತನನ್ನು ಕರೆದು

ಹೇಳಿ. ಅವನು ನಿಲ್ಲಿಸುತ್ತಾನೆ. ನಾನು ಆನೆ ಸವಾರಿ ಮಾಡಿಯೇ ಮಾಡಬೇಕು" ಎಂದು ಬಲಾತ್ಕರಿಸಿದಳು.

ಮೋರೋಪಂತನ ಕ್ರೋಭೆ ಹೆಚ್ಚಿತು. ಆದನ್ನು ನಿಗ್ರಹಿಸಿಕೊಂಡನು. ಮನುವು ಪುನಃ ಆನೆಯಮೇಲೆ ಕುಳಿತು ಕೊಳ್ಳಲು ಹಠಮಾಡಿದಳು. ಮೋರೋ ಪಂತನು ಕ್ರುದ್ಧಸ್ವರದಿಂದ "ನಿನ್ನ ಹಣೆಯಲ್ಲಿ ಆನೆಯ ಮೇಲೆ ಕುಳಿತು ಕೊಳ್ಳುವ ಭಾಗ್ಯವು ಬರೆದಿಲ್ಲ. ವೃಥಾ ಏಕೆ ಹಟಮಾಡುತ್ತೀಯಾ ?" ಎಂದು ಆಗ್ರಹಗೊಂಡನು.

ಮನುವು ನಿವಿುರಿನಿಂತಳು. ಅವಳು ಏನನ್ನೋ ಬಡಬಡಿಸ ಹೋದಳು. ಆದರೆ ಕ್ಷಣಕಾಲ ತುಟಿಗಳನ್ನು ತೆರೆಯಲಾಗಲಿಲ್ಲ.

ಮೋರೋಪಂತನು ಅವಳನ್ನು ಸಮಾಧಾನ ಪಡಿಸುವುದಕ್ಕಾಗಿ ಮಂದ ಸ್ವರದಿಂದ ಹಾಗೂ ಕೋಪಪೂರಿತನಾಗಿ "ಸಮಯಾನುಸಾರ ವರ್ತಿಸಬೇಕೆಂದು ನಾನು ಸಾವಿರ ಸಲ ಹೇಳಿದ್ದೇನೆ. ನಾವು ಚಕ್ರವರ್ತಿಗಳೂ ಅಲ್ಲ. ಸಾಮಂತ ಸರದಾರರೂ ಅಲ್ಲ. ಆದುದರಿಂದ ಸಾಧಾರಣ ಗೃಹಸ್ಥರಂತೆ ಸಂಸಾರದಲ್ಲಿರುವುದಕ್ಕೆ ಸಹನೆ ಹೊಂದ ಬೇಕು. ಓದಿ ಬರೆದಿದ್ದರೂ ಹೇಳಿದ ಮಾತನ್ನು ಏಕೆ ಅರ್ಥಮಾಡಿ ಕೊಳ್ಳಲಾರೆ ? ನಿನ್ನ ಭಾಗ್ಯದಲ್ಲಿ ಆನೆಯ ಸವಾರಿಯು ಬರೆದಿಲ್ಲವೆಂದು ಹೇಳಲಿಲ್ಲವೆ, ಹಟಮಾಡಬೇಡ" ಎಂದು ಹೇಳಿದನು.

ಮನುವಿನ ತುಟಿಯು ಅದುರಿತು. ಶೋಕದಿಂದ ಹೇಳಿದಳು "ನನ್ನ ಭಾಗ್ಯದಲ್ಲಿ ಒಂದಲ್ಲ ಹತ್ತು ಆನೆಗಳು ಬರೆದಿವೆ."

ಮೋರೋಪಂತನ ಕ್ರೋಭವೂ, ಆಗ್ರಹವೂ ಇಳಿದು ಅವನು ನಗಲಾರಂಭಿ ಸಿದನು. ಮನುವನ್ನು ಬಾಚಿ ತಬ್ಬಿಕೊಂಡು "ಈಗ ಹೋಗಿ ಯಾವುದಾದರೂ ಶಾಸ್ತ್ರ ಪುರಾಣಗಳನ್ನು ಓದು. ಅಷ್ಟರಲ್ಲಿ ಅವರಿಬ್ಬರೂ ಬಂದು ಬಿಡುವರು" ಎಂದನು.

ಮನುವು ಪುನಃ ಹಠದಿಂದ ಹೇಳಿದಳು "ನಾನು ಕುದುರೆಯ ಮೇಲೆ ಸವಾರಿ ಮಾಡಿಕೊಂಡು ಹೋಗಿ ಅವರ ಆನೆಯನ್ನು ಹಿಡಿಸುತ್ತೇನೆ."

ಮೋರೋಪಂತನು ಅವಳನ್ನು ಒಂದೇ ಮಾತಿನಲ್ಲಿ ಖಂಡಿಸಬೇಕೆಂದು ನೋಡಿ ದನು. ಆದರೆ ಇದರಿಂದ ಪ್ರಯೋಜನವಿಲ್ಲವೆಂದರಿತು ಉಪಾಯದಿಂದ ಅವಳ ಮನಃ ಪರಿವರ್ತನೆಮಾಡಲು ನೋಡಿದನು.

"ಕುದುರೆಯಿಂದ ಆನೆಯು ಬೆದರಿದರೆ ನೀನೇನೋ ಓಡಿ ಅಪಾಯದಿಂದ ಪಾರಾ ಗುತ್ತೀ. ಆದರೆ ನಾನಾಸಾಹೇಬ್, ರಾವ್‌ಸಾಹೇಬ್ ಮತ್ತು ಮಾಹುತನು ಹತ ರಾಗುತ್ತಾರಲ್ಲ ?"

ಮನುವು ಈ ಮಾತಿಗೆ ಸಮ್ಮತಿಸಿದಳು.

"ಅವರು ಬರುವವರೆಗೆ ಪುಸ್ತಕವನ್ನೇನೋ ಓದುವುದಿಲ್ಲ. ಆದರೆ ಬೇರೇ

ನಾದರೂ ಮಾಡುತ್ತೇನೆ, ಬಂದೂಕದಿಂದ ಗುರಿ ಹಿಡಿದು ಹೊಡೆಯುವುದನ್ನು ಅಭ್ಯಾಸಿಸುತ್ತೇನೆ" ಎಂದಳು ಮನು.

೩

ಸ್ವಲ್ಪ ಹೊತ್ತಿನಲ್ಲಿಯೇ ಘಂಟಾನಾದದಿಂದ ಆನೆಯು ಹಿಂದಿರುಗಿತು. ಮನುವು ಹೊರಗೆ ಓಡಿಬಂದಳು. ಕ್ಷಣಕಾಲ ನಿಂತು ನೋಡಿ "ಹಾ!" ಎನ್ನುತ್ತಾ ಒಳಕ್ಕೆ ಹೊರಟುಹೋದಳು. ನಾನಾ ಮತ್ತು ರಾವ್‌ಸಾಹೇಬರೂ ತಮ್ಮ ತಮ್ಮ ನಿರ್ದಿಷ್ಟ ಸ್ಥಾನಗಳಿಗೆ ಹೊರಟುಹೋದರು. ಬಾಜೀರಾಯನು ನಾನಾವನ್ನು ಕರೆದು "ನೋವೇನೂ ಹೆಚ್ಚಲಿಲ್ಲವಲ್ಲ" ಎಂದು ಕೇಳಿದನು.

ನಾನಾ "ಹೆಚ್ಚೇನೂ ಇಲ್ಲ. ಈಗ ಉತ್ತಮಗೊಂಡಿದ್ದೇನೆ. ಮನುವೆಲ್ಲಿ ?" ಎಂದು ಕೇಳಿದನು.

ಬಾಜೀರಾಯ—ಒಳಗಿರಬಹುದು.

ರಾವ್‌ಸಾಹೇಬ್—ಬಹುಶಃ ಅವಳಿಗೆ ಕೋಪಬಂದಿರಬಹುದು. ನಾನೇನೋ ಹೇಳಿದೆ. ಆದರೆ ನಾನಾ ಅವಳನ್ನು ಕರೆದುಕೊಂಡು ಹೋಗಲಿಲ್ಲ.

ನಾನಾ—ಅವಳು ಬೆಳಗ್ಗಿನಿಂದ ಒಂದೇ ಸಮನೆ ನನ್ನನ್ನು ಕೀಟಲೆಮಾಡುತ್ತಿದ್ದಳು.

ಬಾಜೀರಾಯ—ಏನು? ಹೇಗೆ?

ನಾನಾ—ಅವಳ ಸ್ವಭಾವವೇ ಹಾಗೆ.

ಸ್ವಲ್ಪ ಹೊತ್ತಿನನಂತರ ಮನುವು ಅಲ್ಲಿಗೆ ಬಂದಳು. ನಾನಾ ನಗುತ್ತಾ ಅವಳನ್ನು ಕುರಿತು "ಸುಂದರಿ, ಏನು ಯಾವುದಾದರೂ ಗ್ರಂಥಪಠನ ಮಾಡುತ್ತಿದ್ದೆಯಾ?" ಎಂದು ಕೇಳಿದನು.

ಮನುವು ತೀಕ್ಷ್ಣತೆಯಿಂದ "ನನ್ನನ್ನು ಸುಂದರಿ ಎನ್ನಬೇಡ" ಎಂದಳು.

ನಾನಾ ಇನ್ನೂ ನಗುತ್ತಲೇ ಕೇಳಿದನು "ಏತಕ್ಕೆ ಹೇಳಬಾರದು? ಇದು ನಿನ್ನ ಚಿಕ್ಕ ವಯಸ್ಸಿನಿಂದಲೂ ಬಂದಿರುವ ಹೆಸರು."

ಮನುವಿನ ಕಣ್ಣುಗಳು ಕೆಂಡದಂತಾದುವು "ನನಗೆ ಈ ಹೆಸರು ಪ್ರಿಯವಲ್ಲ" ಎಂದಳು.

ನಾನಾ ಗಂಭೀರಸ್ವರದಿಂದ "ನನಗೇನೋ ಈ ಹೆಸರೇ ಪ್ರಿಯವಾಗಿದೆ. ಸುಂದರಿ! ಸುಂದರಿ! ಸುಂದರಿ!" ಎಂದನು.

"ಈ ಹೆಸರಿನಿಂದ ಸಂಬೋಧಿಸಿದರೆ ನಾನು ಉತ್ತರ ಕೊಡುವುದಿಲ್ಲ" ಎಂದು

ಒಳಕ್ಕೆ ಹೊರಡಹತ್ತಿದಳು. ಆ ವೇಳೆಗೆ ಸರಿಯಾಗಿ ಬಾಜೀರಾಯನು ಅವಳನ್ನು ಹಿಡಿದನು. ಅವಳು ಹಿಡಿತದಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದಳು. ಆದರೆ ಸಾಧ್ಯವಾಗಲಿಲ್ಲ. ಆಗ ನಾನಾವು ಕೂಡ ಅವಳನ್ನು ಹಿಡಿದುಕೊಂಡನು.

"ಏಕೆ, ಮನು ದುರಭಿಪ್ರಾಯಪಟ್ಟೆಯಾ ?" ಎಂದು ನಾನಾ ಸ್ನೇಹಪೂರಿತನಾಗಿ ಕೇಳಿದನು.

ಮನುವು ತುಟಿಕಚ್ಚಿಕೊಂಡು ಕ್ರುದ್ಧಳಾಗಿ "ಹೌದು. ಖಂಡಿತವಾಗಿ ಇನ್ನು ಮುಂದೆ ಈ ಹೆಸರಿನಿಂದ ನನ್ನನ್ನು ಯಾವಾಗಲೂ ಕರೆಯಬಾರದು" ಎಂದು ಹೇಳಿದಳು.

ಈ ವೇಳೆಗೆ ಕಾವಲುಭಟನೊಬ್ಬನು ಬಂದು ಬಾಜೀರಾಯನನ್ನು ಕುರಿತು "ಮಹಾಪ್ರಭು, ಝಾನ್ಸಿಯಿಂದ ಮಹಾಶಯರೊಬ್ಬರು ದಯಮಾಡಿಸಿದ್ದಾರೆ. ಅವರಿಗೆ ತಾತ್ಯಾದೀಕ್ಷಿತರೆಂಬ ನಾಮಧೇಯ" ಎಂದು ಅರಿಕೆಮಾಡಿಕೊಂಡನು.

ನಾನಾಸಾಹೇಬನು "ಮನೂ, ಒಬ್ಬರಿಂದ ಇಬ್ಬರು ತಾತ್ಯಾವಾದರು" ಎಂದನು.

ಮನುವಿನ ಕ್ಷೋಭೆಯು ಸ್ವಲ್ಪ ಇಳಿಮುಖವಾಯಿತು. ಬಾಜೀರಾಯನು ಪಹರೆಯವನಿಗೆ ಝಾನ್ಸಿಯ ಸಂಭಾವಿತನಿಗೆ ಆಸನ ಕೊಟ್ಟು ಉಪಚರಿಸುವಂತೆ ಆಜ್ಞೆ ಮಾಡಿದನು.

ಮನುವು "ಝಾನ್ಸಿಯ ತಾತ್ಯಾ ಕುಸ್ತಿಮಾಡುವವನಿರಬಹುದು" ಎಂದಳು.

ರಾವ್‌ಸಾಹೇಬ್–ಝಾನ್ಸಿಯಲ್ಲಿ ಮತ್ತೊಬ್ಬ ಬಾಲಗುರು ಇದ್ದಿದ್ದರೆ ಕುಸ್ತಿಯು ನಡೆಯುತ್ತಿತ್ತು. ಅದಾದರೋ ರಾಜಧಾನಿ.

ನಾನಾ—ಅದೇನು ದೊಡ್ಡ ರಾಜ್ಯವೊ?

ಬಾಜೀರಾಯ—ದೊಡ್ಡದೇನಲ್ಲ, ಆದರೆ ಮುಖ್ಯವಾದುದು. ಅಲ್ಲಿ ನಮ್ಮ ಪೂರ್ವೀಕರು ಮುಖಂಡರಾಗಿದ್ದರು. ಇದು ನಿಮಗೂ ತಿಳಿದಿರಬಹುದು.

ರಾವ್‌ಸಾಹೇಬ್—ಅದು ಪುನಃ ನಮಗೆ ದೊರೆಯಲಾರದೆ?

ಮನು—ದಾನವಾಗಿ ಕೊಟ್ಟಿರತಕ್ಕದ್ದು ಪುನಃ ಹೇಗೆ ಸಿಕ್ಕೀತು?

ಬಾಜೀರಾವ್—ಹಾಂಕಿ ಪುನಃ ಹಿಂದಿರುಗಿ ಸಿಕ್ಕಲಾರದು. ಝಾನ್ಸಿಯ ರಾಜನು ನಮ್ಮ ಸುಬೇದಾರನಾಗಿದ್ದನು. ಈ ವೇಳೆಗೆ ಝಾನ್ಸಿಯಲ್ಲಿ ನಮ್ಮ ಆಳ್ವಿಕೆ ಇದ್ದಿದ್ದರೆ ನಮಗೆ ಹೇರಳವಾದ ಸನ್ಮಾನವಿರುತ್ತಿದ್ದಿತು. ಆದರೆ ಅದು ಬಹಳ ಕಾಲದಿಂದಲೂ ಆಂಗ್ಲೇಯರ ಅಧೀನದಲ್ಲಿದೆ.

ಮನು—ಗವಾಲಿಯರ್, ಇಂದೋರ್, ಬರೋಡ, ನಾಗಪುರ, ಸತಾರ, ಇತ್ಯಾದಿ ರಾಜ್ಯಗಳಿದ್ದರೂ ಕೂಡ ಹಲವೇ ಆಂಗ್ಲೇಯರು ನಿಮ್ಮೆಲ್ಲರನ್ನು ಮೆಟ್ಟಿಬಿಟ್ಟರು.

ಬಾಜೀ—ಅವರು ನಮಗಿಂತ ಯುಕ್ತಿವಂತರೆಂಬುದನ್ನು ಒಪ್ಪಲೇಬೇಕು.

ಅವರ ಬಳಿ ಒಳ್ಳೊಳ್ಳೆಯ ಶಸ್ತ್ರಾಸ್ತ್ರಗಳಿವೆ. ಅವರು ವೀರರು ಮತ್ತು ಭಾಗ್ಯಲಕ್ಷ್ಮಿಯು ಅವರಿಗೊಲಿದಿದ್ದಾಳೆ ಮತ್ತು ನಮ್ಮ ನಮ್ಮಲ್ಲೇ ವೈಮನಸ್ಯ.

ಮನು—ತಾತಾ, ಏನು ಶೂರವೀರರಾಗುವುದೂ ಲಲಾಟಲಿಖಿತವೆ? ಹೀಗಿದ್ದ ಪಕ್ಷದಲ್ಲಿ ಅನೇಕ ನರಿಗಳು ಸಿಂಹಗಳೂ ಮತ್ತು ಸಿಂಹಗಳು ನರಿಗಳೂ ಆಗುತ್ತಿದ್ದವು.

ಬಾಜೀ—ನರಿಗೆ ಹುಚ್ಚು ಹಿಡಿದರೆ ಅದಕ್ಕೆ ಸಿಂಹವೂ ಹೆದರಬೇಕಾಗುತ್ತದೆ.

ಮನು—ಅದಕ್ಕೆ ಹುಚ್ಚು ಹಿಡಿಯುವುದೂ ಅದರ ಭಾಗ್ಯವೊ, ಇಲ್ಲ ಬೇರೇನಾದರೂ ಕಾರಣವುಂಟೋ?

ಬಾಜೀರಾಯನು ನಕ್ಕುಬಿಟ್ಟನು.

ಈ ವೇಳೆಗೆ ಮೋರೋಪಂತನು ಬಂದು "ದಾದಾಸಾಹೇಬರೇ ತಾತ್ಯಾದೀಕ್ಷಿತರು ಝಾನ್ಸಿಯಿಂದ ದಯಮಾಡಿರುವರು" ಎಂದು ಹೇಳಿದನು.

ಬಾಜೀರಾಯನು, "ಅವರಿಗೆ ಆಸನಕೊಟ್ಟು ಉಪಚರಿಸುವಂತೆ ಹೇಳಿರುವೆನು. ಇಲ್ಲೇ ಇರುವುದಕ್ಕೆ ವಸತಿ ಮತ್ತು ಭೋಜನ ಮುಂತಾದುವನ್ನು ಗಮನಿಸಿಕೊಳ್ಳಿ" ಎಂದನು.

ಮೋರೋಪಂತನು "ಈ ತಾತ್ಯಾನನ್ನು ಒಂದು ಬಾರಿ ಕಾಶಿಯಲ್ಲಿ ಸಂಧಿಸಿದ್ದೆನು. ಆತನು ಯಾತ್ರೆಗಾಗಿ ಬಂದಿದ್ದನು. ವಿದ್ಯಾಪರಿಪೂರ್ಣನೂ, ಸಜ್ಜನನೂ ಆದ ಅವನಿಗೆ ರಾಜಮರ್ಯಾದೆಯುಂಟು" ಎಂದನು.

ಮನುವು ನಗುತ್ತಾ "ಆತನು ಕುಸ್ತಿಮಾಡಬಲ್ಲನೆ? ಕತ್ತಿವರಸೆ ಬರುತ್ತದೆಯೆ? ಕುದುರೆ ಸವಾರಿಯಲ್ಲಿ ಪರಿಣತನೆ?" ಎಂದು ಕೇಳಿದಳು.

ಮೋರೋಪಂತನು ನಗುತ್ತಾ "ಹೋಗೆ, ಹುಚ್ಚಿ, ಇವುಗಳನ್ನು ಅರಿಯದಿದ್ದವನು ಮನುಷ್ಯನಲ್ಲವೆ? ದೀಕ್ಷಿತರು ಸದ್ಬ್ರಾಹ್ಮಣರೂ, ಆಚಾರ್ಯಪುರುಷರೂ, ಶಾಸ್ತ್ರಪಾರಂಗತರೂ, ಪೂಜ್ಯರೂ ಆಗಿರುವರು" ಎಂದನು.

ನಾನಾ ಮನುವನ್ನು ನೋಡುತ್ತಾ "ಏನು ಬ್ರಾಹ್ಮಣರು ಅಸ್ತ್ರವನ್ನು ಹಿಡಿದರೆ ಸದ್ಬ್ರಾಹ್ಮಣರಿಂದ ಅಬ್ರಾಹ್ಮಣರಾಗುತ್ತಾರೆಯೆ, ಮನು ನೀನು ಹೇಳು" ಎಂದನು.

ಮನುವೂ, ಬಾಜೀರಾಯನೂ ನಕ್ಕರು. ಮೋರೋಪಂತನು ಮುಗುಳ್ನಗುತ್ತಾ "ಈ ಹುಡುಗಿಯಂತೆ ವಾಚಾಳಿ ಯಾರೂ ಇರಲಾರರು" ಎಂದನು.

ಮನುವು ತುಟಿಗಳನ್ನು ಮೀರಿ ಬರುತ್ತಿದ್ದ ನಗೆಯನ್ನು ಅದುಮಿ ಕತ್ತನ್ನು ತಿರುಗಿಸಿ "ತಾರಾಬಾಯಿಯು ಹೀಗಿದ್ದಳು, ಜೀಜಾಬಾಯಿಯು ಹಾಗಿದ್ದಳು, ಅಹಲ್ಯಾ, ಮೀರಾ ಇವರುಗಳು ಹೀಗಿದ್ದರು ಎಂದು ನೀವೆ ಹೇಳುತ್ತೀರಲ್ಲಾ, ಅವರೇನು ಬಾಯಿಗೆ ಮುದ್ರೆ ಹಾಕಿಕೊಂಡಿದ್ದರೆ?" ಎಂದಳು.

೪

ಭೋಜನಾನಂತರ ತಾತ್ಯಾದೀಕ್ಷಿತನೊಂದಿಗೆ ಬಾಜೀರಾವ್ ಮತ್ತು ಮೋರೋ ಪಂತರು ಮಾತುಕತೆಗೆ ಪ್ರಾರಂಭಿಸಿದರು. ತಾತ್ಯಾದೀಕ್ಷಿತನು ಜ್ಯೋತಿಷ್ಯ ಮತ್ತು ಮಂತ್ರತಂತ್ರ ವಿದ್ಯೆಗಳಲ್ಲಿ ಪಾರಂಗತನಾಗಿದ್ದನು. ಕಾಶಿ, ನಾಗಪುರ, ಪುಣೆ, ಇತ್ಯಾದಿ ನಗರಗಳಲ್ಲಿ ಸಂಚರಿಸಿ ಮಹಾರಾಷ್ಟ್ರ ಸಮಾಜದಲ್ಲಿ ಪರಿಚಿತನಾಗಿದ್ದನು. ಬಿಟ್ಟೂರಿನಲ್ಲಿ (ಬ್ರಹ್ಮಾವರ್ತ) ಬಾಜೀರಾಯನೊಡನೆ ಒಂದು ತಂಡ ದಕ್ಷಿಣ ದೇಶದ ಬ್ರಾಹ್ಮಣರು ಬಂದು ನೆಲೆಸಿದ್ದರು.* ಆ ಕಾಲದಲ್ಲಿ ಮಲ್ಲಕಂಭ, ಮತ್ತು ಮಲ್ಲಯುದ್ಧಗಳ ಆಚಾರ್ಯರಾದ ಬಾಲಗುರುವಿನ ಗರಡಿಯು ದಕ್ಷಿಣ ಮತ್ತು ಉತ್ತರ ಹಿಂದೂ ಸ್ಥಾನೀಯರಿಂದ ತುಂಬಿದ್ದಿತು. ಗುರುಗಳು ಬಲ, ಯೌವನ, ಮತ್ತು ಸ್ವಾಭಿಮಾನಗಳಿಗೆ ಪ್ರೋತ್ಸಾಹವನ್ನು ಕೊಡುತ್ತಿದ್ದರು. ಬಾಲಗುರುವು ಸ್ವಯಂ ದೃಢನೂ, ಬಲಿಷ್ಠನೂ ಮತ್ತು ಸ್ವಾಭಿಮಾನಿಯೂ ಆಗಿ ಮನಬಂದರೆ ನಿದ್ರೆಯನ್ನು ತಿರಸ್ಕರಿಸಿ ಕುಳಿತಲ್ಲೇ ತೂಕಡಿಸಿ ಎದ್ದುಬಿಡುತ್ತಿದ್ದನು.

ಮೋರೋಪಂತನು ಸಮಯನೋಡಿ ದೀಕ್ಷಿತರೊಂದಿಗೆ

“ದೀಕ್ಷಿತರೆ, ನನಗೆ ನನ್ನ ಪುತ್ರಿ ಮನೂಬಾಯಿಯ ವಿವಾಹದ ವಿಚಾರವಾಗಿ ಬಹಳ ಚಿಂತೆಯಾಗಿದೆ. ನಾನು ಎಲ್ಲೆಲ್ಲಿಯೂ ಹುಡುಕಿ ನೋಡಿದೆ ಆದರೆ ಸರಿಯಾದ ಯೋಗ್ಯ ವರನು ಸಿಕ್ಕಲಿಲ್ಲ. ಈಗಲೂ ವರಾನ್ವೇಷಣೆ ಮಾಡುತ್ತಲೇ ಇರುವೆನು. ನಿಮಗೆ ನಮ್ಮ ಸಮಾಜದಲ್ಲಿ ಅನೇಕ ಪರಿಚಿತರಿರುವರು. ತಾವು ಈ ಕನ್ಯೆಗಾಗಿ ಒಳ್ಳೆಯ ವರನನ್ನು ಹುಡುಕಿಕೊಟ್ಟರೆ ಬಹಳ ಅನುಗ್ರಹಮಾಡಿದಂತಾಗುವುದು” ಎಂದು ಪ್ರಾರ್ಥಿಸಿಕೊಂಡನು.

ಬಾಜೀರಾಯನೂ ಕೂಡ “ಹುಡುಗಿಯು ಬಹಳ ಸುಂದರಿ, ಕುಶಾಗ್ರಮತಿ, ಮತ್ತು ದೂರದೃಷ್ಟಿಯುಳ್ಳವಳು. ಅವಳಿಗೆ ತಕ್ಕ ಯೋಗ್ಯ ವರನನ್ನು ಹುಡುಕಬೇಕು” ಎಂದನು.

ಮೋರೋಪಂತನು ಹೇಳಿದನು “ಎಲ್ಲಾ ಶಸ್ತ್ರಾಸ್ತ್ರಗಳನ್ನೂ ಚೆನ್ನಾಗಿ ಪ್ರಯೋಗಿಸಬಲ್ಲಳು. ಕುದುರೆ ಸವಾರಿಯಲ್ಲಿ ಯಾವ ಗಂಡಸನ್ನೂ ಸೋಲಿಸುವಳು. ಇವಳು ನಾಲ್ಕು ವರ್ಷದ ಹಸುಳೆಯಾಗಿದ್ದಾಗ ಇವಳ ತಾಯಿಯು ಸ್ವರ್ಗಸ್ಥಳಾದಳು. ಆದುದರಿಂದ ನಾನೇ ಅವಳನ್ನು ಅಹೋರಾತ್ರೆ ಲಾಲಿಸಿಪಾಲಿಸಿದ್ದೇನೆ. ಇವಳಿಗೆ ಮರಾಠಿ,

* ಇವರು ಸುಮಾರು ಎಂಟು ಸಹಸ್ರ ಮಂದಿ ಇದ್ದರು. ಮತ್ತು ಬಾಜೀರಾಯನ ಮಾಶಾಸನದಲ್ಲಿ ಮುಕ್ಕಾಲು ಭಾಗವು ಇವರಿಗಾಗಿ ವೆಚ್ಚವಾಗುತ್ತಿತ್ತು.

ಸಂಸ್ಕೃತ ಮತ್ತು ಹಿಂದೀ ಭಾಷೆಗಳಲ್ಲಿ ವಿದ್ಯಾಭ್ಯಾಸವಾಗಿದೆ. ಧರ್ಮಗ್ರಂಥಗಳಲ್ಲಿ ಅವಳಿಗೆ ಅಭಿರುಚಿಯುಂಟು."

ಬಾಜೀರಾವ್ "ಹೆಣ್ಣು ಮಗು ಆದುದರಿಂದ ಆ ವಯಸ್ಸಿಗೆ ಎಷ್ಟು ಸಾಧ್ಯವೋ ಅಷ್ಟು ಕಲಿತಿದ್ದಾಳೆ. ಆದರೆ ಬಹಳ ಚುರುಕು ಬುದ್ಧಿ. ಗ್ರಂಥಪಠನ, ಮತ್ತು ಪೂಜೆಗಳನ್ನು ಬಹಳ ಶ್ರದ್ಧಾಭಕ್ತಿಗಳಿಂದ ಮಾಡುತ್ತಾಳೆ" ಎಂದು ಹೇಳಿದನು.

ಬಾಜೀರಾಯನು ಮನುವಿನ ದೈವಭಕ್ತಿ ಪೂಜೆಗಳ ವಿಚಾರವಾಗಿ ಅವಳನ್ನು ಬಹಳವಾಗಿ ಪ್ರಶಂಸಿಸಿದನು. ಆದರೆ ಅವಳ ಅಶ್ವಾರೋಹಿತ್ವ ಇವುಗಳ ವಿಚಾರ ಹೆಚ್ಚಾಗಿ ಹೇಳಲಿಲ್ಲ.

ತಾತ್ಯಾದೀಕ್ಷಿತನು ಅವಳ ಜಾತಕವನ್ನು ಕೇಳಲು ಮೋರೋಪಂತನು ಅದನ್ನು ತಂದುಕೊಟ್ಟನು. ದೀಕ್ಷಿತನು ಅದನ್ನು ಪರಿಶೀಲಿಸಿ "ಈ ರೀತಿಯ ಜನ್ಮಪತ್ರವನ್ನು ನಾನು ಯಾವಾಗಲೋ ಈ ಮೊದಲು ನೋಡಿದ್ದೇನೆ. ಇವಳು ಯಾವುದೋ ರಾಜ್ಯದ ರಾಣಿಯಾಗಲೇ ಬೇಕು" ಎಂದನು.

ಮೋರೋಪಂತನ ಮುಖವರಳಿತು. ಬಾಜೀರಾಯನಿಗೂ ಸಂತೋಷವಾಯಿತು. ಆತನು "ತಾವು ಹೋಗುವಾಗ ಈ ಜಾತಕವನ್ನು ತೆಗೆದುಕೊಂಡು ಹೋಗಿ ಯೋಗ್ಯ ವರನನ್ನು ಅನ್ವೇಷಣಮಾಡಿ ನಮಗೆ ತಿಳಿಸಿ" ಎಂದನು.

ದೀಕ್ಷಿತನು ಜಾತಕವನ್ನು ತೆಗೆದಿರಿಸಿಕೊಂಡನು.

ಆ ವೇಳೆಗೆ ಮನುವೂ ಮತ್ತು ರಾವ್‌ಸಾಹೇಬನೂ ಅಲ್ಲಿಗೆ ಬಂದರು.

ಬಾಜೀರಾಯನು ದೀಕ್ಷಿತನಿಗೆ ಮನುವನ್ನು "ಇವಳೆ ಆ ಕನ್ಯೆ" ಎಂದು ಪರಿಚಯಮಾಡಿಕೊಟ್ಟನು.

ದೀಕ್ಷಿತನು ಮನೂಬಾಯಿಯ ವಿಶಾಲ ನೇತ್ರದ್ವಯ, ಕಪ್ಪಗೆ ಹೊಳೆಯುವ ನಿಬಿಡವಾದ ಕೂದಲು, ಗೌರವವರ್ಣ ಇವುಗಳಿಂದ ಕೂಡಿದ ಸುಂದರವಾದ ಚಹರೆಯನ್ನು ಕಂಡು ಸಂತೋಷವನ್ನು ವ್ಯಕ್ತಪಡಿಸಿದನು.

ಆತನು ಮಮತೆಯನ್ನು ವ್ಯಕ್ತಪಡಿಸುತ್ತಾ "ಬಾ, ಮಗು ಬಾ, ನೀನು ಧರ್ಮಗ್ರಂಥಗಳನ್ನು ವ್ಯಾಸಂಗಮಾಡಿರುವೆ. ಉಚ್ಚಕುಲದ ಬ್ರಾಹ್ಮಣ ಕನ್ಯೆಗೆ ಇದು ಉಪಯುಕ್ತವಾಗಿದೆ" ಎಂದನು.

ಮನು ಮತ್ತು ರಾವ್‌ಸಾಹೇಬರಿಬ್ಬರೂ ಬಾಜೀರಾಯನ ಹತ್ತಿರ ಆಸನದಲ್ಲಿ ಕುಳಿತರು.

ಮನುವು ಯಾವ ಸಂಕೋಚವೂ ಇಲ್ಲದೆ "ನಾನು ಆಗ್ರಂಥಗಳನ್ನು ವಿವರವಾಗಿ ಓದಿದ್ದೇನೆ. ನನಗೆ ತುಳಸೀದಾಸರ ರಾಮಾಯಣವು' ಬಹಳ ಪ್ರಿಯವಾಗಿದೆ. ಆದರೆ ಕತ್ತಿವರಸೆ, ಮಲ್ಲಕಂಭ, ಕುದುರೆಸವಾರಿ ಇವುಗಳು ಅದಕ್ಕಿಂತಲೂ ಹೆಚ್ಚು ಉತ್ತಮ

ವೆಂದು ತೋರುತ್ತದೆ" ಎಂದಳು.

ಬಾಜೀರಾಯನು ನಗುತ್ತಾ ಅವಳ ಮಾತನ್ನುತಡೆದು "ತಲೆ ಹರಟೆ ಮಾಡುವುದು ಇವೆಲ್ಲಕ್ಕಿಂತಲೂ ಉತ್ತಮ" ಎಂದನು.

ಮೋರೋಪಂತನಿಗೆ ಮನದಲ್ಲಿಯೇ ಕೋಪ ಉಂಟಾಯಿತು. ದೀಕ್ಷಿತನ ಇದುರಿನಲ್ಲಿ ಮನುವು ಲಜ್ಜಾ ಭರಿತಳಾಗಿ, ಶೀಲಯುಕ್ತಳಾಗಿ ಆತನು ವರ್ತಿಸುವಳೆಂದು ಅಪೇಕ್ಷಿಸಿದ್ದನು.

ನಗುತ್ತಾ ದೀಕ್ಷಿತನು "ಇನ್ನೂ ಬಾಲಿಕೆ, ಅವಳಿಗೆ ಸಂಸಾರದ ಅನುಭವವಾದರೂ ಏನಿದೆ?" ಎಂದನು.

ಮೋರೋಪಂತನು "ಇನ್ನೂ ವಿವೇಕ ತಿಳಿದವಳಲ್ಲ. ವಯಸ್ಸಿಗೆ ಬಂದನಂತರ ತನ್ನಮನೆ ಬಾಗಿಲುಗಳನ್ನು ಚೆನ್ನಾಗಿ ನೋಡಿಕೊಳ್ಳುತ್ತಾಳೆ." ಎಂದನು.

ತಾತ್ಯಾದೀಕ್ಷಿತನು ಉತ್ಸಾಹದಿಂದ "ಭವಿಷ್ಯದ್ವಾಣಿಯಂತೆ ಇವಳು ಯಾವುದಾದರೂ ರಾಜ್ಯದ ರಾಣಿಯಾಗುವಳು" ಎಂದು ನುಡಿದನು.

ರಾವ್‌ಸಾಹೇಬನು ಇದುವರೆಗೂ ಸುಮ್ಮನೆ ಕುಳಿತಿದ್ದವನು "ಇದ್ದ ರಾಜ್ಯವೆಲ್ಲಾ ಆಂಗ್ಲೇಯರ ವಶವಾಗಿದೆ ಇನ್ನು ಹೊಸರಾಜ್ಯವು ಎಲ್ಲಿಯದು" ಎಂದನು.

ತಾತ್ಯಾದೀಕ್ಷಿತನು ಪುನಃ ನಗುತ್ತಾ "ರಾಜ್ಯಗಳಿಗೂ, ಮತ್ತು ರಾಜ್ಯ ನಿರ್ಮಾಪಕರಿಗೂ, ಕೊರತೆಯೇನಿಲ್ಲ; ಮುಂದೆ ಕೊರತೆ ಇರುವುದೂ ಇಲ್ಲ" ಎಂದು ಹೇಳಿದನು.

ಮನುವು ಮುಗುಳ್ನಗೆ ಸೂಸುತ್ತಾ "ಮತ್ತೆ ಆಂಗ್ಲೇಯರು ಮತ್ಯಾರೂ ತಲೆ ಎತ್ತಲೇ ಸಾಧ್ಯವಿಲ್ಲದಂತೆ ರಾಜ್ಯ ರಚನೆ ಮಾಡಿರುವರೆಂದು ಕೆಲವರು ಹೇಳುತ್ತಾರಲ್ಲ?" ಎಂದಳು.

ಬಾಜೀರಾಯನು ವಿಷಯವನ್ನು ಬದಲಿಸಲು ಇಚ್ಛಿಸುತ್ತಾ ಕೇಳಿದನು:

"ಝಾನ್ಸಿಯಲ್ಲಿ ತೋಟತುಡಿಕೆಗಳು ಎಷ್ಟಿವೆ?"

ತಾತ್ಯಾ—ಬೇಕಾದಷ್ಟಿವೆ. ರಾಜನ ಖಾಸಾ ತೋಟಗಳಿವೆ, ಸರದಾರರ, ಶ್ರೇಷ್ಠವರ್ತಕರ, ಸೇಠುಗಳ ಮತ್ತು ಶ್ರೀಮಂತರ ತೋಟಗಳಿವೆ. ನಗರದ ಒಳಗೂ ಅನೇಕ ತೋಟಗಳಿವೆ.

ಮನೂ—ಅಲ್ಲಿಯ ಸೇನೆಯು ದೊಡ್ಡದಾಗಿವೆಯೆ?

ತಾತ್ಯಾ—ಸಾಧಾರಣವಾಗಿವೆ.

ಮನು—ಕುದುರೆಗಳು ಉತ್ಕೃಷ್ಟವಾಗಿವೆಯೆ?

ರಾವ್—ಆನೆ?

ತಾತ್ಯಾ—ಹೇರಳವಾಗಿವೆ.

ಮನು—ಎಷ್ಟು?

ಇಷ್ಟರಲ್ಲಿ ಅಲ್ಲಿಗೆ ದೃಢಕಾಯನಾದ ಯುವಕನೊಬ್ಬನು ಬಂದನು. ಬಾಜೀರಾಯನು ಅವನನ್ನು ಕುರಿತು "ಏನು ವಿಶೇಷ ತಾತ್ಯಾ" ಎಂದನು.

ತನ್ನ ಹೆಸರಿನ ಮತ್ತೊಂದು ವ್ಯಕ್ತಿಯನ್ನು ಕಂಡು ದೀಕ್ಷಿತನು ಚಕಿತನಾದನು. ಮನುವು ಅಷ್ಟರಲ್ಲಿಯೇ ಹೇಳಿದಳು "ಇವರು ಗುರುವಿನ ಗರಡಿಯ ಮುಖ್ಯಸ್ಥರು. ನಿಮ್ಮದೇ ನಾಮಧೇಯವನ್ನು ಹೊಂದಿದ್ದಾರೆ."

ತಾತ್ಯಾದೀಕ್ಷಿತನು ಮನಸ್ಸಿನಲ್ಲಿಯೇ ಈ ಹುಡುಗಿ ಇನ್ನು ಹೆಚ್ಚು ಮಾತನಾಡದಿದ್ದರೆ ಸಾಕು ಎಂದುಕೊಂಡನು.

ಯುವಕ ತಾತ್ಯಾನು ಪೇಶ್ವೆಯೊಂದಿಗೆ "ಮಹರಾಜ್, ಝಾನ್ಸಿಯಿಂದ ಬಂದಿರುವ ಆಚಾರ್ಯರು ನಮ್ಮ ಗರಡಿಗೆ ದರ್ಶನವಿತ್ತು ಆಶೀರ್ವದಿಸಬೇಕೆಂದು ನಮ್ಮ ಗುರುಗಳು ಹೇಳಿಕಳುಹಿಸಿದ್ದಾರೆ" ಎಂದನು.

ದೀಕ್ಷಿತನು ಅದಕ್ಕೆ ಸಮ್ಮತಿಸಿದನು. ಮೂರನೆಯ ಜಾವದ ಹೊತ್ತಿಗೆ ಎಲ್ಲರೂ ಅಖಾಡದಲ್ಲಿ ಸೇರಿದರು. ಅಲ್ಲಿ ಮಲ್ಲಯುದ್ಧ, ಮಲ್ಲಕಂಭಗಳ ಪ್ರದರ್ಶನ ವೇರ್ಪಟ್ಟಿದ್ದಿತು.

## ೫

ಮಹಾರಾಷ್ಟ್ರದಲ್ಲಿ ಸತಾರೆಗೆ ಸಮೀಪವಾಗಿ ವಾಯಿ ಎಂಬ ಹಳ್ಳಿಯಿದೆ. ಪೇಶ್ವೆಯ ರಾಜ್ಯಾಡಳಿತದಲ್ಲಿ, ಅಲ್ಲಿನ ಕೃಷ್ಣರಾವ್ ತಾಂಬೆ ಎಂಬಾತನಿಗೆ ಒಂದು ಉನ್ನತ ಪದವಿಯು ದೊರಕಿದ್ದಿತು. ಅವನ ಮಗ ಬಲವಂತರಾಯನು ಬಹು ಪರಾಕ್ರಮಿ.

ಬಲವಂತರಾಯನು ಪೇಶ್ವೆಯ ಸೈನ್ಯದಲ್ಲಿ ಉನ್ನತ ಪದವೀಧರನಾದನು. ಅವನಿಗೆ ಮೋರೋಪಂತ್ ಮತ್ತು ಸದಾಶಿವನೆಂಬ ಇಬ್ಬರು ಪುತ್ರರಿದ್ದರು. ಅವರಿಬ್ಬರೂ ಪುಣೆಯ ಸರ್ಕಾರದ ಕೃಪಾಪಾತ್ರರಾಗಿದ್ದರು.

ಆ ಕಾಲದಲ್ಲಿ ಪೇಶ್ವೆ ಎರಡನೆಯ ಬಾಜೀರಾಯನು ಪುಣೆಯಲ್ಲಿರುತ್ತಿದ್ದನು. ಸನ್ ೧೮೧೮ ರಲ್ಲಿ ಕಂಪೆನಿ ಸರ್ಕಾರದವರು ಪೇಶ್ವಾಡಳಿತವನ್ನು ಸಮಾಪ್ತಿಗೊಳಿಸಿ ಬಾಜೀರಾಯನಿಗೆ ಎಂಟು ಲಕ್ಷ ರೂಪಾಯಿಗಳ ವರ್ಷಾಶನವನ್ನೂ ಮತ್ತು ಬಿಟ್ಟೂರಿನ ಜಹಗೀರಿಯನ್ನೂ ಕೊಟ್ಟರು. ಅದರನಂತರ ಬಾಜೀರಾಯನು ಬ್ರಹ್ಮಾವರ್ತ (ಬಿಟ್ಟೂರ್) ದಲ್ಲಿ ಬಂದು ನೆಲಸಿದನು. ಬಾಜೀರಾಯನ ಖಾಸಾ ಸಹೋದರ ಚೀಮಾಜಿ ಆಪಾ ಸಾಹೇಬನೆಂಬುವನು ಬನಾರಸ್ಸಿಗೆ ಹೊರಟುಹೋದನು. ಅವನಿಗೆ ಮೋರೋಪಂತ್ ತಾಂಬೆಯಲ್ಲಿ ಬಹಳ ವಿಶ್ವಾಸವಿದ್ದಿತು. ಮೋರೋಪಂತನು ಚೀಮಾಜಿಯ ಜೊತೆಯಲ್ಲಿ ಕಾಶಿಗೆ ಹೋಗಿ ಅವನ ಸೇವೆಮಾಡುತ್ತಿದ್ದನು. ಇದರ

ಫಲವಾಗಿ ಅವನಿಗೆ ೫೦ ರೂಪಾಯಿಗಳ ಮಾಸಾಶನವು ದೊರಕುತ್ತಿದ್ದಿತು. ಈ ಮೋರೋಪಂತನೇ ಮನೂಬಾಯಿಯ ತಂದೆ.

ಮೋರೋಪಂತನ ಪತ್ನಿ ಭಾಗೀರಥಿಯು ಸುಶೀಲೆ, ಚತುರೆ ಮತ್ತು ರೂಪವತಿಯಾಗಿದ್ದಳು.

ಮನೂಬಾಯಿಯು ಸ್ರ ೧೮೯೧ ರ ಕಾರ್ತೀಕ ಶುದ್ಧ ೧೪ ನೇ ತಾರೀಖು (೧೯ ನೇ ನವಂಬರು ೧೮೩೫) ಕಾಶಿಯಲ್ಲಿ ಈ ದಂಪತಿಗಳಲ್ಲಿ ಜನ್ಮತಾಳಿದಳು.

ಚೀಮಾಜಿಯು ಕಾಲಗತಿಯನ್ನೈದಿದನು. ಮೋರೋಪಂತನಿಗೆ ಕಾಶಿಯಲ್ಲಿ ತನ್ನ ಸಂಸಾರ ನಿರ್ವಹಿಸಲು ಯಾವ ಆಸರೆಯೂ ಇಲ್ಲದಂತಾಯಿತು. ಆದುದರಿಂದ ಅವನ ಮೇಲೆ ಕೃಪೆಯಿಟ್ಟಿದ್ದ ಬಾಜೀರಾಯನು ಆತನನ್ನೂ ಬಿಟ್ಠೂರಿಗೆ ಕರೆಸಿಕೊಂಡನು.

ಮನೂಬಾಯಿಗೆ ನಾಲ್ಕು ವರ್ಷಗಳಾಗಿದ್ದಾಗಲೇ ಅವಳ ತಾಯಿ ಭಾಗೀರಥಿಬಾಯಿಯು ಸ್ವರ್ಗಸ್ಥಳಾದಳು. ಮನುವಿನ ಲಾಲನಪಾಲನಗಳು ಅಂದಿನಿಂದ ಮೋರೋಪಂತನದಾಯಿತು. ಮೋರೋಪಂತನು ಅವಳನ್ನು ಚಿಕ್ಕವಯಸ್ಸಿನಿಂದಲೂ ಬಹಳ ಪ್ರೀತಿಯಿಂದ ಪೋಷಿಸಿದ್ದನು.

ಮನೂಬಾಯಿಯು ಚಿಕ್ಕವಯಸ್ಸಿನಿಂದಲೂ ಅಪ್ರತಿಮ ಸುಂದರಿಯಾಗಿದ್ದುದರಿಂದ ಬಾಜೀರಾಯನು ಮೊದಲುಗೊಂಡು ಎಲ್ಲರೂ ಅವಳನ್ನು ಪ್ರೀತಿಗಾಗಿ "ಸುಂದರಿ" ಎಂದು ಕರೆಯುತ್ತಿದ್ದರು.

ಬಾಜೀರಾಯನು ನಿಸ್ಸಂತಾನನಾಗಿದ್ದನು. ಆದುದರಿಂದ ಆತನು ನಾನಾ ಘೋಂಡೂಪಂತ್ ಎಂಬ ಒಬ್ಬ ಬಾಲಕನನ್ನು ದತ್ತು ಸ್ವೀಕಾರಮಾಡಿದ್ದನು. ಅವನಿಗೆ ಬಾಲಾ, ಮತ್ತು ರಾವ್‌ಸಾಹೇಬರೆಂಬ ಇಬ್ಬರು ಸಹೋದರರಿದ್ದರು. ಆಸಮಯದಲ್ಲಿ ಬಾಲಾ ಬಿಟ್ಠೂರಿನಲ್ಲಿರಲಿಲ್ಲ. ರಾವ್‌ಸಾಹೇಬನು ಮಾತ್ರ ನಾನಾವಿನೊಂದಿಗಿದ್ದನು.

ಮನೂ ಮತ್ತು ಈ ಇಬ್ಬರು ಬಾಲಕರು ಒಟ್ಟಿಗೆ ಆಟ ಪಾಠ ಊಟಗಳನ್ನುನಡೆಸುತ್ತಿದ್ದರು. ಮಲ್ಲಕಂಭ, ಕುಸ್ತಿ, ಕತ್ತೀವರಸೆ, ಬಂದೂಕಪ್ರಯೋಗ, ಕುದುರೆಸವಾರಿ, ಓದು, ಬರಹ ಇತ್ಯಾದಿ ಎಲ್ಲವನ್ನೂ ಚಿಕ್ಕಂದಿನಿಂದಲೂ ಈ ಮೂವರೂ ಒಟ್ಟಿಗೆ ಕಲಿತರು. ಮನುವು ಹಠವಾದಿ, ಚಪಲೆ ಮತ್ತು ಕುಶಾಗ್ರಮತಿ. ಎಲ್ಲರಿಗಿಂತಲೂ ಕಿರಿಯವಳಾದರೂ ಈ ಕಲೆಗಳಲ್ಲಿ ಅವರೆಲ್ಲರಿಗಿಂತ ಮುಂದಾದಳು. ಅವಳಿಗೆ ಚಿಕ್ಕವಯಸ್ಸಿನಿಂದಲೂ ಹೆಣ್ಣುಮಕ್ಕಳ ಸಹವಾಸ ಹೆಚ್ಚಾಗಿ ದೊರಕವೇ ಇದ್ದುದರಿಂದ ಲಜ್ಜೆ, ಸಂಕೋಚ ಮುಂತಾದ ಹೆಂಗಳೆಯರ ಸ್ವಭಾವಗಳು ಅವಳಿಂದ ದೂರವಾಗಿದ್ದವು.

ನಾನಾವು ಎಂಟು ಲಕ್ಷ ರೂಪಾಯಿಗಳ ವಾರ್ಷಿಕ ವೇತನವು ತನ್ನ ಮತ್ತು ತನ್ನ ಸಹೋದರರ ಪರಂಪರೆಗಳ ಸುಖಜೀವನ ನಿರ್ವಹಣಕ್ಕೆ ಅತ್ಯಧಿಕವೆಂದು ಭಾವಿ

ಸಿದ್ದನು. ಬಾಜೀರಾಯನ ವೇತನವಾದರೋ "ಅವನ ಮತ್ತು ಅವನ ಕುಟುಂಬ ಕ್ಕಾಗಿ" ನಿಷ್ಕರಿಸಲ್ಪಟ್ಟದ್ದಿತು. ಯಾವ ಪ್ರಯತ್ನ ಪ್ರಯಾಸಗಳೂ ಇಲ್ಲದೆ ಎಂಟು ಲಕ್ಷ ರೂಪಾಯಿಗಳು ಬರುತ್ತಿದ್ದರೆ ಯಾವ ಮಹತ್ವಾಕಾಂಕ್ಷೆಗಾಗಿ ತಾನೇ ಶ್ರಮಪಡ ಬೇಕು ?

ಮನೂಬಾಯಿ ಈರೀತಿ ಯೋಚಿಸುತ್ತಿರಲಿಲ್ಲ. ಶಿವಾಜಿಯಂತಹ ಅಧುನಿಕ ಮತ್ತು ಭೀಮಾರ್ಜುನರಂತಹ ಪೌರಾಣಿಕ ವೀರರ ಆದರ್ಶವು ಮನುವಿನ ಕಲ್ಪನೆಯಲ್ಲಿ ಒಂದು ಪ್ರಚಂಡ ಹುರುಪನ್ನು ಉದ್ಗೋಳಿಸಿತ್ತು.

## ೬

ತಾತ್ಯಾದೀಕ್ಷಿತನು ಸಂಭಾವನೆ ಮತ್ತು ಆದರಗಳಿಂದ ಬಿಟ್ಠೂರನ್ನು ಬಿಟ್ಟು ಝಾನ್ಸಿಯನ್ನು ತಲಪಿದನು. ಅವನಿಗೆ ಮನೂಬಾಯಿಗೆ ಎಷ್ಟು ಉತ್ತಮ ವರನನ್ನು ದೊರಕಿಸಿ ಕೊಡುತ್ತೇನೋ ಅಷ್ಟು ಬಾಜೀರಾಯನು ಸಂತುಷ್ಟಗೊಳ್ಳುವನೆಂದು ಅರಿತಿದ್ದನು. ಈ ಸಂತುಷ್ಟಿಯ ಫಲವಾಗಿ ತನ್ನ ಆರ್ಥಿಕ ಸ್ಥಿತಿಯೂ ಉತ್ತಮ ಗೊಳ್ಳುವುದೆಂದು ಭಾವಿಸಿದ್ದನು.

ದೀಕ್ಷಿತನಿಗೆ ಮನಸ್ಸಿನಲ್ಲಿಯೇ ಗೊಂದಲವೇರ್ಪಟ್ಟಿತು. ಅನೇಕ ವರಗಳನ್ನು ತಾನು ಮನದಲ್ಲಿಯೇ ಒಪ್ಪಿದ್ದರೂ ಅವು ಪೇಶ್ವೆಗೆ ಒಪ್ಪಿತವಾಗುವುವೋ ಇಲ್ಲವೋ ಎಂಬ ಶಂಕೆಯು ಏರ್ಪಡುತ್ತಿದ್ದಿತು. ಬ್ರಾಹ್ಮಣ ಜಾತಿಯ ಉತ್ತಮ ಸರದಾರರ ಜಾತಕಗಳನ್ನು ತಂದು ಹೋಲಿಸಿ ನೋಡಿದರೂ ಯಾವುದೂ ಸರಿಯಾಗಿ ಕುದುರಲಿಲ್ಲ.

"ಶ್ರೀಮಂತ ಸರ್ಕಾರ್, ಗಂಗಾಧರರಾಯನ ಜನ್ಮ ಪತ್ರಿಕೆಯನ್ನು ತಂದು ಹೋಲಿಸಿ ನೋಡಲೆ? ಒಂದು ವೇಳೆ ಜಾತಕಗಳು ಕೂಡದೇ ಇರಬಹುದು" ಎಂದು ಯೋಚಿಸಿದನು. ಆದರೂ ಜನ್ಮ ಪತ್ರಿಕೆಯು ದೊರಕಿ ಎರಡು ಜಾತಕಗಳೂ ಚೆನ್ನಾಗಿ ಕೂಡಿಬಂದವು. ಪುನಃ ಮತ್ತೊಂದು ಶಂಕೆಯು ತಲೆದೋರಿತು; ಗಂಗಾಧರರಾಯನ ಧರ್ಮಪತ್ನಿಯು ಕಾಲವಾಗಿ ಅನೇಕ ವರ್ಷಗಳಾಗಿದ್ದವು. ಅವನು ಪುನರ್ವಿವಾಹವಾಗಲೇನೋ ಇಚ್ಛಿಸುತ್ತಿದ್ದನು. ಆದರೆ ಆತನ ಕಠೋರಸ್ವಭಾವದಿಂದಾಗಿ ಆತನು ಅಪಕೀರ್ತಿ ಪಡೆದಿದ್ದನು. ವಿದೂಷಕರು, ಹಾಸ್ಯಗಾರರು ಇವರುಗಳಿಂದ ಸುತ್ತುವರಿಯಲ್ಪಟ್ಟು ಹೆಚ್ಚು ಕಾಲವನ್ನು ನಾಟಕಶಾಲೆಯಲ್ಲಿ ಕಳೆಯುತ್ತಿದ್ದನು. ಇದರಿಂದಾಗಿ ಆತನ ಅಪಕೀರ್ತಿಯು ಇನ್ನೂ ಹೆಚ್ಚಿದ್ದಿತು.

ನಾಟಕದಲ್ಲಿನ ರುಚಿಯನ್ನು ಹೆಚ್ಚಿಸಲು ನಾಟಕಶಾಲೆಯಲ್ಲಿ ಸ್ತ್ರೀಭೂಮಿಕೆಯಲ್ಲಿ ನಟಿಸುವುದಕ್ಕಾಗಿ ಗಾಯಕಿ ನರ್ತಕಿಯರನ್ನು ನೇಮಿಸಿದ್ದುದು ಅನ್ಯಾಯವಾಗಿ ಆತನ

ಹೆಸರು ಕೆಡಲು ಕಾರಣವಾಯಿತು. ಇದರ ಜೊತೆಗೆ ಆತನ ಕಠೋರತೆಯೂ ಸೇರಿದ್ದಿತು. ದೀಕ್ಷಿತನು, ಈ ಸಂಬಂಧವನ್ನೇನಾದರೂ ಕೂಡಿಸಿಕೊಟ್ಟರೆ ನಿರಂತರವೂ ತಾನು ಸ್ಮರಿಸಲ್ಪಡುವನೆಂದು ಆಶಿಸಿದನು. ಅಲ್ಲದೆ ಮೋರೋಪಂತನೂ ಯಾವಾಗಲೂ ಕೃತಜ್ಞನಾಗಿರುವನು ಮತ್ತು ಬಾಜೀರಾಯನಲ್ಲಿಯೂ ತನ್ನ ಮರ್ಯಾದೆಯು ಹೆಚ್ಚುವುದು. ಮತ್ತೆ ಝಾನ್ಸಿಯಲ್ಲಿ ತನ್ನ ಸನ್ಮಾನಕ್ಕೇನು ಕಡಿಮೆ? ಮನೂಬಾಯಿಯು ಹಾಗೂ ಸುಂದರಿ, ರಾಣಿಯ ಯೋಗ್ಯತೆಗೆ ತಕ್ಕ ಗುಣಗಳು ಅವಳಲ್ಲಿವೆ. ಚಪಲೆ, ಚಂಚಲೆ ಮತ್ತು ಉದ್ಧಟಳು. ಮುಖವು ವರ್ಚಸ್ಸಿನಿಂದ ಕೂಡಿದೆ. ಮತ್ತಾವದಾದರೂ ಮನೆಯನ್ನೂ ಸೇರಿದ್ದೇ ಆದರೆ ತಾನು ಸುಖಿಯಾಗಳು ಮತ್ತು ಪತಿಯನ್ನು ಸುಖಪಡಿಸಲಾರಳು. ಗಂಗಾಧರರಾಯನನ್ನು ಮದುವೆಯಾದರೆ ಅವಳ ಚಪಲತೆಯು ದೂರವಾಗುವುದು ಮತ್ತು ಜೀವನದಲ್ಲಿ ಸಂಯಮವೇರ್ಪಡುವುದು. ಮನೂಬಾಯಿ ೧೩–೧೪ ವರ್ಷದ ಕನ್ಯೆ. ಗಂಗಾಧರರಾಯನಿಗಾದರೋ ವಯಸ್ಸು ೪೦ ಕ್ಕೆ ಮೀರಿರುವುದು. ಆದರೇನು ದೃಢಕಾಯನಾಗಿರುವನು. ಸ್ವಭಾವವೇನೋ ಕಠೋರವೇ ಸರಿ. ಆದರೆ ಇಂತಹ ಗಂಡುಬೀರಿಗೆ ಅಂತಹ ಪತಿಯೇ ಸರಿಯಾದವನು. ಕುದುರೆಯ ಸವಾರಿ, ಕತ್ತಿವರಸೆ, ಮಲ್ಲಕಂಭ ಇನ್ನೂ ಏನೇನೋ ಇವೆಯಲ್ಲ, ಇವೆಲ್ಲವೂ ಝಾನ್ಸಿಯ ರಾಜ್ಯದಲ್ಲಿ ಕಾಣಸಿಗುವುವೇ ಹೊರತು ಮತ್ತೆಲ್ಲಿಯೂ ಇಲ್ಲ. ಎಂದು ಇವೆಲ್ಲವನ್ನೂ ಯೋಚಿಸಿ ದೀಕ್ಷಿತನು ಝಾನ್ಸಿಯ ರಾಜನೊಂದಿಗೆ ಮನೂಬಾಯಿಯ ವಿವಾಹ ಸಂಬಂಧ ಮಾಡುವುದರಲ್ಲಿ ಯಾವ ಅಡ್ಡಿಯೂ ಇಲ್ಲವೆಂದು ನಿಶ್ಚಯಿಸಿದನು. ನಂತರ ಗಂಗಾಧರರಾಯನ ಬಳಿ ಬಂದು ಅವನು ಏಕಾಂತದಲ್ಲಿರುವಾಗ "ಮಹಾರಾಜನ ಬಳಿ ಒಂದು ವಿಚಾರ ನಿವೇದಿಸಿಕೊಳ್ಳಲು ಬಂದೆ" ಎಂದನು.

ರಾಜನು "ಹೇಳಿ ದೀಕ್ಷಿತರೆ" ಎಂದನು.

ದೀಕ್ಷಿತ್—ರಾಣೀವಾಸವು ರಾಣಿಯಿಲ್ಲದೆ ಶೂನ್ಯವಾಗಿ ಹೋಗಿ ಬಹುಕಾಲವಾಯಿತು. ಈಗ...........

ರಾಜ—ನಾನೇನು ಮಾಡಲಿ, ನನ್ನ ಜನ್ಮಪತ್ರಿಕೆಯಲ್ಲಿರುವಂತಹ ತೇಜಸ್ವಿ ಗ್ರಹಗಳಿಗೆ ಸರಿಹೊಂದುವ ಜಾತಕವು ಸಿಗುವುದೇ ದುರ್ಲಭ. ಒಂದೆರಡು ಬಾರಿ ಸಿಕ್ಕಿದರೂ ಸಹ ಕನ್ಯೆಯ ದರಿದ್ರಪಿತನು ನಾನು ಎಲ್ಲಾ ಕೆಲಸವನ್ನೂ ಬಿಟ್ಟು ಆತನನ್ನೂ ಆತನ ಪುತ್ರಿಯನ್ನೂ ಸೇವಿಸುವುದರಲ್ಲೇ ನನ್ನ ಪೂರ್ಣ ಜೀವಿತವನ್ನು ಕಳೆಯಬೇಕೆಂದು ಅಪೇಕ್ಷಿಸಿದನು. ಇದಕ್ಕಿಂತ ನನ್ನ ನಾಟಕಶಾಲೆಯೇ ಮೇಲು. ಅಪ್ಸರೆಯರ ಸುಂದರ ಅಭಿನಯ, ಸುಖಲಾಲನಿಂದ ತಯಾರಿಸಲ್ಪಟ್ಟ ಹೊಸ ಹೊಸ ಪರದೆಗಳು, ಮಧುರವಾದ ಗಾಯನವಾದನ ನರ್ತನಗಳು; ನೀವೂ ಅನೇಕ ಬಾರಿ ಇವುಗಳನ್ನು ರಂಗಮಂಟಪದ ಮೇಲೆ ನೋಡಿರಬಹುದಲ್ಲವೆ?

ದೀಕ್ಷಿತ—ಶ್ರೀಮಂತ ಸರ್ಕಾರ್, ವಂಶೋದ್ಧಾರಕ್ಕಾಗಿ ಶಾಸ್ತ್ರಸಮ್ಮತಿಗಳ ಪ್ರಕಾರ ವರ್ತಿಸುವುದು ಅನಿವಾರ್ಯ. ಪ್ರಜೆಗಳು ತಮ್ಮ ರಾಜನನ್ನು ರಾಜಪುತ್ರ ನೊಂದಿಗೆ ನೋಡಲು ಹಾತೊರೆಯುತ್ತಿದ್ದಾರೆ. ಇದರಿಂದ ತಮ್ಮ ಆಮೋದಪ್ರಮೋದ ಗಳಿಗೇನಡ್ಡಿಯಿಲ್ಲ ಪ್ರಭು.

'ಹಾ, ಸರಿಯೆ' ಎಂದು ಹೇಳಿ ಗಂಗಾಧರರಾಯನು ಯೋಚಿಸಲುಪಕ್ರಮಿಸಿದನು.

ಕೆಲವು ಕ್ಷಣಗಳ ತರುವಾಯ "ದೀಕ್ಷಿತರೆ ನೀವು ಕಾವ್ಯರಸಿಕರಲ್ಲವೆ? ಶ್ರೀ ಹರ್ಷನು ರಚಿಸಿರುವ ರತ್ನಾವಳಿ ನಾಟಕವು ಎಷ್ಟು ಕೋಮಲ, ಮಧುರ ಮತ್ತು ಮಂಜುಳ ಕಲ್ಪನೆಯಾಗಿದೆ? ಅಲ್ಲದೆ ಮೋತೀಬಾಯಿಯು ಈಗಲೂ ಎಷ್ಟು ಸುಂದರ ಮತ್ತು ಮನೋಹರವಾಗಿ ಅಭಿನಯಮಾಡುತ್ತಾಳೆ" ಎಂದನು.

ಮೋತೀಬಾಯಿಯಲ್ಲಿ ರಾಜನ ಉತ್ಸಾಹವನ್ನು ಕಂಡು ದೀಕ್ಷಿತನು "ಎಂತಹ ತೊಡಕಿಗೆ ಗುರಿಯಾದೆ" ಎಂದು ಯೋಚಿಸಲಾರಂಭಿಸಿದನು.

ದೀಕ್ಷಿತನು ಪುನಃ ಧೈರ್ಯವನ್ನು ತಂದುಕೊಂಡು "ಆದರೆ ಪ್ರಭು, ಅರಮನೆಯು ಎಷ್ಟು ಶೂನ್ಯವಾಗಿದೆ? ಅದನ್ನು ಸ್ವಜಾತಿಯ ಕನ್ಯೆಯೊಬ್ಬಳು ಜ್ಯೋತಿಯಂತೆ ಬೆಳಗಿಸಬಲ್ಲಳು" ಎಂದು ಹೇಳಿದನು.

ಗಂಗಾಧರರಾಯನ ಮೊದಲೇ ವಿಶಾಲವಾಗಿದ್ದ ಕೆಂಪುನಯನಗಳು ಮತ್ತೂ ಕೆಂಪಾದವು.

ರಾಜನು "ನಾನೇನು ಮಾಡಲಿ? ಸ್ವಜಾತಿಯ ಕನ್ಯೆಯನ್ನು ಬಲಾತ್ಕಾರವಾಗಿ ಹಿಡಿದುತರಲೆ?" ಎಂದು ಕೇಳಿದನು.

ದೀಕ್ಷಿತನು ತ್ವರೆಯಿಂದ "ಇಲ್ಲ, ಮಹಾರಾಜ, ನಾನೊಂದು ಕನ್ಯೆಯ ಜಾತಕ ದೊಂದಿಗೆ ತಮ್ಮ ಜಾತಕವನ್ನು ಪರೀಕ್ಷಿಸಿ ಸರಿಹೋಗುವುದನ್ನು ಮನಗಂಡಿದ್ದೇನೆ. ಕನ್ಯೆಯನ್ನೂ ನೋಡಿ ಬಂದಿದ್ದೇನೆ. ಆಕೆಯು ಕುಶಾಗ್ರಮತಿಯೂ, ಸುಂದರಿಯೂ, ರಾಣಿಯಾಗಲು ಸರ್ವಲಕ್ಷಣ ಸಂಪನ್ನಳೂ ಆಗಿದ್ದಾಳೆ" ಎಂದನು.

ರಾಜನು ಮಂದಹಾಸಯುಕ್ತನಾಗಿ "ಆಕೆ ಎಲ್ಲಿರುವಳು?" ಎಂದು ಕೇಳಿದನು.

ದೀಕ್ಷಿತನು ಧೈರ್ಯಗೊಂಡು ಹೇಳಿದನು. "ಮಹಾರಾಜ, ಈಗ ಆಕನ್ಯೆಯು ಬಿಟ್ಟೂರಿನಲ್ಲಿದ್ದಾಳೆ. ಆಕೆಯ ತಂದೆ ಮೋರೋಪಂತ ತಾಂಬೆಯು ಪಂತಪ್ರಧಾನ ಬಾಜೀರಾಯನ ಖಾಸಾ ಸೇವೆಮಾಡುತ್ತಿರುವನು. ಹುಡುಗಿಯು ವಿದ್ಯಾವಂತೆ, ಗುಣಸಂಪನ್ನೆ."

ರಾಜನು ಪ್ರಶ್ನಿಸಿದನು "ತಾಂಬೆಯು ಕುಲೀನನೆಂಬುದೇನೋ ತಿಳಿದಿದೆ. ಮೋರೋಪಂತನು ಶುದ್ಧವೈದೀಕನಲ್ಲವಲ್ಲ (ಭಿಕ್ಷುಕಭಟ್ಟ)."

ದೀಕ್ಷಿತನು "ಶ್ರೀಮಂತ ಪೇಶ್ವೆಬಾಜೀರಾಯನ ಯಜ್ಞಶಾಲೆಯಲ್ಲಿ ರಾಮುಭಟ್ಟ

ಘೊಡಸೆ ಎಂಬುವನಿರುವನು. ಈತನು ಮೋರೋಪಂತನ ಮಿತ್ರನು. ಆತನು ಈ ಕನ್ಯೆಗೆ ವಿದ್ಯಾಭ್ಯಾಸವನ್ನು ಮಾಡಿಸಿರುವನು. ಇದು ವಿನಹ ಮೋರೋಪಂತನಿಗೂ, ರಾಮಭಟ್ಟನಿಗೂ ಅಥವಾ ಮತ್ತಾವ ಭಟ್ಟನಿಗೂ ಯಾವ ವಿಧವಾದ ಸಂಬಂಧವೂ ಇರುವುದಿಲ್ಲ" ಎಂದನು.

ಗಂಗಾಧರರಾಯನು ಸ್ವಲ್ಪಕೋಪದಿಂದ "ನಾನು ಕೇಳುತ್ತಿರುವುದು ಕೇವಲ ಮೋರೋಪಂತನು ಗೊಡ್ಡು ಭಟ್ಟನೇ ಅಥವಾ ಅಲ್ಲವೇ ಎಂದು" ಹೇಳಿದನು.

ದೀಕ್ಷಿತನು ಖಂಡಿತವಾಗಿ "ಎಂದಿಗೂ ಅಲ್ಲ, ಸರ್ಕಾರ್" ಎಂದು ಹೇಳಿದನು.

ಗಂಗಾಧರರಾಯನು ಪುನಃ "ಪೇಶ್ವೆ ಮತ್ತು ಮೋರೋಪಂತರಲ್ಲಿ ಸ್ನೆಹಬಾಂಧವ್ಯವು ಹೇಗಿದೆ ?" ಎಂದು ಪ್ರಶ್ನಿಸಿದನು.

ದೀಕ್ಷಿತ—ಬಹಳ ಸಂಭಾವಿತ ಮಿತ್ರರಂತಿರುವರು. ಪೇಶ್ವೆಯು ಮಾಲೀಕನೂ, ಮತ್ತು ಮೋರೋಪಂತನು ಆತನ ಸೇವಾವೃತ್ತಿಯಲ್ಲಿರುವವನೂ ಎಂದು ಯಾರೂ ಹೇಳಲಾಗುವುದಿಲ್ಲ. ಈ ಕನ್ಯೆಯನ್ನಾದರೋ ಪೇಶ್ವೆಯು ತನ್ನ ಗರ್ಭಗತಪುತ್ರಿಯಂತೆಯೇ ಭಾವಿಸಿದ್ದಾನೆ. ಇದನ್ನು ನಾನೂ ಕಣ್ಣಾರ ಕಂಡಿದ್ದೇನೆ ಪ್ರಭು.

ರಾಜ—ಅವರುಗಳು ಈ ಸಂಬಂಧಕ್ಕೆ ಸಮ್ಮತಿಸುವರೆ ?

ದೀಕ್ಷಿತ—ಒಪ್ಪುತ್ತಾರೆ. ಈ ವಿಚಾರದಲ್ಲಿ ನನಗೆ ಸಂಪೂರ್ಣವಿಶ್ವಾಸವಿದೆ.

ರಾಜ—ಹಾಗಾದರೆ, ಈ ವಿವಾಹ ನಿಶ್ಚಯಿಸಿ ನೆಂಟಸ್ತಿಕೆ ಬೆಳಸುವುದಕ್ಕಾಗಿ ನೀವೆ ಬಿಟ್ಠೂರಿಗೆ ಹೋಗಬೇಕಾಗುವುದು.

ಸಂತೋಷದಿಂದ ದೀಕ್ಷಿತನ ಹೃದಯವು ತುಂಬಿಬಂತು. "ಅವಶ್ಯಕವಾಗಿ ಹೋಗಿಬರುತ್ತೇನೆ. ಪ್ರಭು" ಎಂದು ಗದ್ಗದಿತನಾಗಿ ಆನಂದ ಬಾಷ್ಪದಿಂದ ಕೂಡಿ ಹೇಳಿದನು.

"ಇದೇನು ದೀಕ್ಷಿತರೇ ?" ಎಂದು ರಾಜನು ಹಾಸ್ಯಪ್ರದವಾಗಿ ಕೇಳಿದನು.

ದೀಕ್ಷಿತನು ಗಂಟಲನ್ನು ಸರಿಪಡಿಸಿಕೊಂಡು "ಈ ಆನಂದದ ಸಂಗತಿಯು ಝಾಂಸಿಯ ಪ್ರಜೆಗಳಿಗೆ ಅತ್ಯಂತ ಸಂತೋಷವನ್ನುಂಟುಮಾಡುತ್ತದೆ, ಸರ್ಕಾರ್" ಎಂದನು.

## ೭.

ರಾಜ್ಯದ ಇತರ ಸಿಬ್ಬಂದಿಗಳೊಂದಿಗೆ ತಾತ್ಯಾ ದೀಕ್ಷಿತನು ಬಿಟ್ಠೂರನ್ನು ತಲಪಿ ಅಲ್ಲಿ ತನಗೂ ಗಂಗಾಧರರಾಯನಿಗೂ ಆದ ಸಂಭಾಷಣೆಯನ್ನು ಪೇಶ್ವೆ ಬಾಜೀರಾಯನಿಗೂ ಮತ್ತು ಮೋರೋಪಂತನಿಗೂ ತಿಳಿಸಿದನು. ಅವರುಗಳು ಈ ವಿವಾಹ ಸಂಬಂಧಕ್ಕೆ

ತಮ್ಮ ಒಪ್ಪಿಗೆಯನ್ನಿತ್ತರು. ಗಂಗಾಧರರಾಯನ ಪ್ರಾಯದ ವಿಷಯವಾಗಿ ಯಾರೂ ಟೀಕಿಸಲಿಲ್ಲ.

ಮನೂಬಾಯಿಯನ್ನು ಶೃಂಗರಿಸಿದರು. ರೇಶ್ಮೆಯ ಬಣ್ಣದ ಸೀರೆ, ಚಿನ್ನದ ಒಡವೆಗಳು, ಉತ್ಕೃಷ್ಟ ಮಾಣಿಕ್ಯ ಮುತ್ತು ಮುತ್ತಿನ ಕಂಠಿ ಮುಂತಾದ ತನ್ನವೇ ಆದ ಆಭರಣಗಳನ್ನು ಬಾಜೀರಾಯನು ಕನ್ಯೆಗೆ ಕೊಟ್ಟನು.

ಮನುವಿನ ವಿಶಾಲ ನೇತ್ರಗಳು ಅವಳ ಒಡವೆ ಮತ್ತು ಮಣಿಗಳಿಗೆ ಶೋಭೆಯನ್ನು ಕೊಡುತ್ತಿದ್ದವು. ನೋಡಲು ದುರ್ಗಾದೇವಿಯಂತೆ ರಾರಾಜಿಸಿದಳು.

ಮದುವೆಯ ನಿಶ್ಚಿತಾರ್ಥ ವಾಗ್ದಾನಗಳನಂತರ ಮನೂಬಾಯಿಯೂ ನಾನಾ ಸಾಹೇಬ್, ರಾವ್‌ಸಾಹೇಬ್ ಈ ಮೂವರೂ ಒಂದು ಕೊಠಡಿಯಲ್ಲಿ ಒಂದುಗೂಡಿದರು. ಬಾಲಕರು ಮಾತು ಕಥೆಗೆ ಆರಂಭಿಸಿದರು.

ನಾನಾ—ಮನು, ಇನ್ನು ಮೇಲೆ ನೀನು ಝಾನ್ಸಿಯಿಂದ ಬ್ರಹ್ಮಾವರ್ತಕ್ಕೆ ಆನೆಯ ಮೇಲೆ ಕುಳಿತುಬರುವೆ.

ಮನೂ—ಒಂದು ಆನೆಯಮೇಲೋ ಹತ್ತು ಆನೆಗಳ ಮೇಲೊ ?

ನಾನಾ—ಒಂದರ ಮೇಲೆ ನೀನು ಕುಳಿತು ಬರುವೆ. ಬಾಕಿ ಆನೆಗಳಮೇಲೆ ಮಂತ್ರಿ ಸೇನಾಪತಿ ಮುಂತಾದವರು ಬರುವರು.

ಮನೂ—ನನಗೇನೋ ಕುದುರೆಯ ಸವಾರಿಯೇ ಇಷ್ಟ !

ನಾನಾ—ಝಾನ್ಸಿಯಲ್ಲಿ ಸವಾರಿ ಮಾಡುತ್ತೀಯಾ ?

ಮನೂ—ಯಾರು ನನ್ನನ್ನು ತಡೆಯುವವರು ?

ನಾನಾ—ರಾಜನು ಬಹಳ ಮುಂಗೋಪಿಯೆಂದು ಕೇಳಿರುವೆನು, ಹುಷಾರ್.

ಮನೂ—ಆದರೇನು ? ನನ್ನನ್ನೇನು ಶೂಲಕ್ಕೇರಿಸುವರೆ ?

ರಾವ್—ಇಲ್ಲ. ಇಲ್ಲ. ಆದರ ತಗ್ಗಿ ನಡೆಯಬೇಕು.

ಮನುವು ತಲೆ ಬಗ್ಗಿಸಿ ನಾಚಿಕೆಯನ್ನು ಪ್ರದರ್ಶಿಸುತ್ತಾ ಕೊಠಡಿಯಲ್ಲಿ ಒಂದು ಬಾರಿ ತಿರುಗಾಡಿ ತೋರಿಸುತ್ತಾ "ಹೀಗಿರಬೇಕಲ್ಲವೆ ?" ಎಂದು ನಗುತ್ತಾ ಕೇಳಿದಳು.

ಆ ಬಾಲಕರಿಬ್ಬರೂ ನಕ್ಕುಬಿಟ್ಟರು. ಮನುವಿನ ಕಾಂತಿಯಿಂದ ಮೊದಲೇ ಶೋಭಾಯಮಾನವಾಗಿದ್ದ ಆ ಗೃಹವು ಆ ಬಾಲಕರು ಕಿಲಕಿಲನೆ ನಗಲು ಅವರ ದಂತ ಪಂಕ್ತಿಗಳಿಂದ ಹೊರಟ ಬೆಳಕಿನಿಂದ ವಿದ್ಯುತ್ತಿನಂತೆ ಜ್ವಲಿಸಿತು.

ರಾವ್‌ಸಾಹೇಬ್—ಮನೂ, ನೀನು ಈ ಮನೆಯಿಂದ ಹೊರಟು ಹೋದರೆ ಎಲ್ಲೆಲ್ಲಿಯೂ ಶೂನ್ಯವಾಗಿ ಕಾಣುವುದು.

ಮನೂ—ಹಾಗಾದರೆ, ನನ್ನ ಜೊತೆಯಲ್ಲಿಯೇ ಬಂದುಬಿಡಿ.

ನಾನಾ—ಚಿಕ್ಕಪ್ಪನು ನಮ್ಮನ್ನು ಒಂದು ತಿಂಗಳು ಹೋಗಿ ಬರಲು ಸಮ್ಮತಿಸ

ಬಹುದು. ಹೆಚ್ಚು ದಿನವಿರಲಾಗುವುದಿಲ್ಲ.

ಮನೂ—ನೀವು ಹೆಚ್ಚು ಸಮಯ ಇಲ್ಲೇ ಕಳೆಯಬೇಕು. ಇನ್ನೂ ನೀವು ಬಾಲಗುರುವಿನಿಂದ ಮಲ್ಲಕಂಭ, ಕುಸ್ತಿ ಮುಂತಾದವುಗಳನ್ನು ಕಲಿತು ಶರೀರವನ್ನು ಚೆನ್ನಾಗಿ ಪುಷ್ಟಿಮಾಡಿಕೊಳ್ಳಬೇಕು. ಅಲ್ಲಿ ಬಂದು ತಾನೆ ಏನುಮಾಡುವುದಿದೆ? ಚೆನ್ನಾಗಿ ಕತ್ತಿವರಸೆ ಕಲಿಯಿರಿ....

ನಾನಾ— ನಂತರ ದಿಲ್ಲಿಯಮೇಲೆ ಧಾಳಿಮಾಡು ಎಂದು ಬಿಡು.

ಮನೂ—ದಿಲ್ಲಿಯಲ್ಲೇನಿದೆ? ತಾತಾ, ಚಿಕ್ಕಪ್ಪ ಮತ್ತು ಅಖಾಡೆಯ ಹಿರಿಯರೆಲ್ಲರೂ ದಿಲ್ಲಿಯ ಮರದ ಪಂಜರದಲ್ಲಿ ಸೂತ್ರದ ಗೊಂಬೆಯೊಂದು ಕುಳಿತಿದೆಯೆಂದು ಹೇಳುತ್ತಾರೆ.

ನಾನಾ—ಈಗ ಎಲ್ಲಾ ಕಡೆಯೂ ಆಂಗ್ಲೇಯರ ಚಳವಳಿಯೇ ಆಗಿದೆ.

ಮನುವು ನಕ್ಕಳು.

ರಾವ್—ಏನು? ಆಂಗ್ಲೇಯರು ನಮ್ಮನ್ನು ಹಾಗೆಯೇ ಓಡಿಸಿಬಿಡುತ್ತಾರೇನು?

ಮನುವು ನಗುನಗುತ್ತಾ "ನಾನಾಸಾಹೇಬನಿಗೆ ಆಂಗ್ಲೇಯರನ್ನು ಸೋಲಿಸಲು ಸಾಧ್ಯ ಎಂಬ ಮಾತಿನಲ್ಲಿ ಸ್ವಲ್ಪವೂ ವಿಶ್ವಾಸವೇ ಇಲ್ಲ." ಎಂದಳು.

ನಾನಾಸಾಹೇಬನು ಸ್ವಲ್ಪವ್ಯಗ್ರವಾಗಿ ಹೇಳಿದನು "ಸುಂದರಿಗೆ ಜಂಭಕೊಚ್ಚಿಕೊಳ್ಳದೆ ಮಾತನಾಡುವುದಕ್ಕೆ ಬರುವುದೇ ಇಲ್ಲ."

ಮನುವು ತನ್ನ ವಿಶಾಲನೇತ್ರಗಳನ್ನು ಇನ್ನೂ ವಿಸ್ತರಿಸುತ್ತಾ "ಪುನಃ ಸುಂದರಿ ಎನ್ನುವೆಯಾ?" ಎಂದಳು.

ನಾನಾ ನಕ್ಕುಬಿಟ್ಟನು. "ಈವತ್ತು ನಿನ್ನ ಬಾಯಿಯಿಂದ "ಸುಂದರಿ" ಎಂದು ಹೇಳಿಬಿಟ್ಟೆ. ಅಯ್ಯೋ ಮೋಸಹೋದೆ." ಎಂದನು.

ಮನುವು ನಗುವಿನಿಂದ "ಮುಂದೆ ಎಂದೂ ಹಾಗೆ ಕರೆಯ ಬಾರದು" ಎಂದಳು.

ನಾನಾವು ಗಂಭೀರಮುದ್ರೆಯಿಂದ "ಇನ್ನು ಮುಂದೆ ಝಾನ್ಸಿಯ ಮಹಾರಾಣಿ" ಎಂದು ಕರೆಯುವೆನು ಎಂದನು.

ಮನುವು ಹುಸಿನಗೆ ನಕ್ಕಳು. ಆ ನಗೆಯಲ್ಲಿ ಝಾನ್ಸಿಯ ಎಂತಹ ಅಮರ ಇತಿಹಾಸವೂ ಮತ್ತು ಮಹತ್ವವೂ ಅಡಗಿದ್ದಿತು!

ಆ ವೇಳೆಗೆ ಅಲ್ಲಿಗೆ ಬಾಜೀರಾಯನೂ ಮತ್ತು ಮೋರೋಪಂತನೂ ಬಂದರು. ಬಾಜೀರಾಯನು ಪ್ರಸನ್ನನಾಗಿದ್ದನು. ಮೋರೋಪಂತನಾದರೋ ಆನಂದದಿಂದ ತುಂಬಿದ್ದನು. ಆ ಮಕ್ಕಳ ಆನಂದವನ್ನು ಕಂಡು ತಾವೂ ಆ ಕೊಠಡಿಯ ಆನಂದ ವಾತಾವರಣದಲ್ಲಿ ಬೆರೆತರು. ಬಾಜೀರಾಯನು "ಮನೂ, ನೀನು ಇತರರನ್ನು ಭಾಗ್ಯಶಾಲಿಗಳನ್ನಾಗಿಮಾಡುವ ಭಾಗ್ಯವತಿಯಾಗಿರು" ಎಂದು ಹರಸಿದನು.

ಮೋರೋಪಂತನು ಮನುವನ್ನು ಪರಿಹಾಸ್ಯಮಾಡುವ ನೆಪದಿಂದ "ಶ್ರೀಮಂತರು ಇವಳ ಚಿಕ್ಕ ವಯಸ್ಸಿನಲ್ಲಿ ಯಾವ ಹೆಸರಿಟ್ಟು ಕರೆಯುತಿದ್ದರೋ ಅದು ನನಗೆ ಮರೆತೆ ಹೋಯಿತಲ್ಲಾ" ಎಂದನು.

ಮನುವು ಕುತ್ತಿಗೆಯನ್ನು ತಿರುಗಿಸಿ ತುಟಿಯನ್ನು ಕಚ್ಚಿ ಕಣ್ಣಿನಲ್ಲಿ ಕ್ರೋಧ ವನ್ನು ಪ್ರದರ್ಶಿಸಲು ಪ್ರಯತ್ನಿಸುತ್ತಾ "ಊಂ" ಎನ್ನುತ್ತಾ ನಕ್ಕುಬಿಟ್ಟಳು.

ಬಾಜೀರಾಯನು "ಯಾವ ಹೆಸರು ಮನೂ? ನೀನೇ ಹೇಳು ಮಗು" ಎಂದನು.

ಬಾಜೀರಾಯನ ಎದೆಯ ಮೇಲೆ ತಲೆಯನ್ನಿಟ್ಟು "ಇಲ್ಲಾ ತಾತಾ, ಸುಂದರಿ ಎಂಬ ಹೆಸರು ನನಗೆ ಹಿಡಿಸುವುದಿಲ್ಲ" ಎಂದು ಅಂಗಲಾಚಿದಳು.

ಎಲ್ಲರೂ ಖಿಲಖಿಲನೆ ನಕ್ಕರು.

ಅಷ್ಟು ಹೊತ್ತಿಗೆ ತಾತ್ಯಾನು ಅಲ್ಲಿಗೆ ಬಂದು "ಸರ್ಕಾರ್ ಸಭೆಯು ಸೇರಿದೆ. ಮಾತುಕಥೆಗಳನ್ನು ಪ್ರಾರಂಭಿಸಬಹುದು" ಎಂದನು.

ಅವರು ಮೂವರೂ ಹೊರಟುಹೋದರು. ಸಭೆಯಲ್ಲಿ ಬ್ರಹ್ಮಾವರ್ತದ ನಿವಾಸಿ ಗಳಾದ ಮಹಾರಾಷ್ಟ್ರ ಬ್ರಾಹ್ಮಣರು ವಿವಾಹದ ಷರತ್ತುಗಳನ್ನು ಚರ್ಚಿಸುತ್ತಿದ್ದರು.

ಮೋರೋಪಂತನ ಬಳಿ ಹೆಚ್ಚು ದ್ರವ್ಯವಿರಲಿಲ್ಲ. ಆದರೆ ಇದ್ದ ಸ್ವಲ್ಪವನ್ನು ವಿವಾಹದಲ್ಲಿ ವೆಚ್ಚಮಾಡಲು ಸಿದ್ಧನಾಗಿದ್ದನು. ಬಿಟ್ಟೂರಿನ ಈ ಪ್ರಮುಖ ಬ್ರಾಹ್ಮಣರ ಮಧ್ಯಸ್ತಿಕೆಯಿಂದ ವಿವಾಹದ ಖರ್ಚೆಲ್ಲವನ್ನು ಝಾನ್ಸಿಯ ರಾಜನು ವಹಿಸಬೇಕೆಂದೂ, ವಿವಾಹವು ಝಾನ್ಸಿಯಲ್ಲೆ ನಡೆಯಬೇಕೆಂದೂ ನಿಶ್ಚಿತವಾಯಿತು ಮತ್ತು ಮೋರೋ ಪಂತನು ಇನ್ನು ಮೇಲೆ ಝಾನ್ಸಿಯಲ್ಲೇ ವಾಸಮಾಡಬೇಕೆಂದೂ, ಅವನನ್ನು ಝಾನ್ಸಿಯ ಮಾನ್ಯಸರದಾರನನ್ನಾಗಿ ಮಾಡಬೇಕೆಂದೂ ತೀರ್ಮಾನವಾಯಿತು.

ಝಾನ್ಸಿಯಿಂದ ಬಂದಿದ್ದ ನೆಂಟರು ಮೋರೋಪಂತನನ್ನು ಕನ್ಯೆಯೊಂದಿಗೆ ಕರೆದುಕೊಂಡು ಹೋಗಬೇಕೆಂದು ಯೋಚಿಸಿದರು. ಆದರೆ ಇದು ಸರಿಯಲ್ಲವೆಂದು ಭಾವಿಸಿ ಆತನು ಅವರೊಂದಿಗೆ ಹೋಗಲಿಲ್ಲ. ತನ್ನ ಕ್ಷೇಮಕ್ಕಾಗಿಯೇ ಇನ್ನೂ ಸ್ವಲ್ಪ ಕಾಲಾನಂತರ ಝಾನ್ಸಿಗೆ ಬರುವುದಾಗಿ ತಿಳಿಸಿದನು. ವಿವಾಹ ಮುಹೂರ್ತ ನಿಶ್ಚಯಿಸಿ ನೆಂಟರು ಝಾನ್ಸಿಗೆ ಮರಳಿದರು. ಬಾಜೀರಾಯನು ಬಾಲಗುರುವಿನ ಗರಡಿಯಲ್ಲಿದ್ದ ತಾತ್ಯಾವನ್ನು ಮೋರೋಪಂತನ ವಾಸಕ್ಕೆ ಝಾನ್ಸಿಯಲ್ಲಿ ತಕ್ಕ ವ್ಯವಸ್ಥೆ ಯನ್ನು ಮಾಡಲು ಆ ನೆಂಟರೊಂದಿಗೆ ಕಳುಹಿಸಿಕೊಟ್ಟನು. ಈತನು ಬ್ರಾಹ್ಮಣನು. ಮುಂದೆ ಇತಿಹಾಸದಲ್ಲಿ 'ತಾತ್ಯಾಟೋಪಿ' ಎಂಬ ಹೆಸರಿನಿಂದ ಪ್ರಸಿದ್ಧನಾದನು.

# ೮

ಆ ಕಾಲದಲ್ಲಿ ಝಾನ್ಸಿಯಲ್ಲಿ ಮಂತ್ರ ತಂತ್ರ ಶಾಸ್ತ್ರಜ್ಞರೂ, ವೈದ್ಯರೂ, ರಣ ಪಂಡಿತರೂ ಇತ್ಯಾದಿ ಅನೇಕ ವಿದ್ವಾಂಸರಿದ್ದರು. ಶಾಕ್ತರೂ, ಶೈವಮತದವರೂ, ವಾಮಮಾರ್ಗಿಗಳೂ, ವೈಷ್ಣವಸಂಪ್ರದಾಯದವರೂ ವಾಸಿಸುತ್ತಿದ್ದರು. ಅವರಲ್ಲಿ ಅಧಿಕಾಂಶ ವೈಷ್ಣವ ಮತ್ತು ಶೈವಮತದವರೇ ಆಗಿದ್ದರು; ಮತ್ತೆ ಕೆಲವರು ಮನೆಯಲ್ಲಿ ಶಾಕ್ತರಾಗಿಯೂ, ಹೊರಗಡೆ ಶೈವೋಪಾಸಕರಾಗಿಯೂ, ಸಭೆಯಲ್ಲಿ ವೈಷ್ಣವರಾಗಿಯೂ ವರ್ತಿಸುತ್ತಿದ್ದರು. ಈ ಮತಗಳ ಸಂಘರ್ಷಣೆಯಿಂದಾಗಿ ಅನೇಕ ಜಾತಿ, ಉಪಜಾತಿಗಳು ಶೂದ್ರರೆಂಬ ಹೆಸರಿನಲ್ಲಿ ಪ್ರಾಮುಖ್ಯತೆಯನ್ನುಗಳಿಸುತ್ತಿದ್ದವು. ವ್ಯಕ್ತಿಗತವಾದ ಚರಿತ್ರೆಯ ಸುಧಾರಣೆ, ಸಾಂಸಾರಿಕಜೀವನದಲ್ಲಿ ಹೆಚ್ಚು ಸುಖಶಾಂತಿಗಳನ್ನು ಏರ್ಪಡಿಸುವುದೂ, ಹಾಗೂ ಜಾತಿಯಲ್ಲಿ ಆದಷ್ಟು ಉತ್ತಮ ಶ್ರೇಣಿಯನ್ನುಗಳಿಸುವುದೂ ಇವೇ ಈ ಪ್ರಗತಿಯ ಮುಖ್ಯ ಆಕಾಂಕ್ಷೆಗಳಾಗಿದ್ದವು. ಬ್ರಾಹ್ಮಣ ಕ್ಷತ್ರಿಯ ವೈಶ್ಯರು ಜನಿವಾರವನ್ನು ಧರಿಸುತ್ತಿದ್ದರು. ಇದು ಇವರ ಉತ್ಕೃಷ್ಟತೆಯ ಚಿನ್ಹೆಯಾಗಿದ್ದಿತು. ಯಾರು ಯಜ್ಞೋಪವೀತವನ್ನು ಧರಿಸುತ್ತಿರಲಿಲ್ಲವೋ ಅವರೆಲ್ಲರೂ ನೀಚಜಾತಿಯವರೆಂದು ಪರಿಗಣಿಸಲ್ಪಟ್ಟಿದ್ದರು. ಆದುದರಿಂದ ಇವರಲ್ಲಿ ಕೆಲವರು ಯಜ್ಞೋಪವೀತಧಾರಿಗಳಿಂದ ಮುಟ್ಟಲ್ಪಟ್ಟ ಪಾನೀಯ ತಿಂಡಿ ತಿನಸುಗಳನ್ನು ಉಚ್ಚ ಜಾತಿಯ ಹಿಂದುಗಳು ಸ್ವೀಕರಿಸುತ್ತಾರೆಂದು ಬಗೆದು ತಾವೂ ಯಜ್ಞೋಪವೀತಧಾರಣೆಮಾಡಲು ಉಪಕ್ರಮಿಸಿದರು. ಇವರಿಗೆ ಕೆಲವು ಬುಂದೇಲು ಖಂಡದ ಮತ್ತು ಮಹಾರಾಷ್ಟ್ರದ ಬ್ರಾಹ್ಮಣರ ಬೆಂಬಲವಿದ್ದಿತು. ಝಾನ್ಸಿಯಲ್ಲಿ ಬ್ರಾಹ್ಮಣರ ಸಂಖ್ಯೆಯು ಅಧಿಕವಾಗಿದ್ದಿತು. ಇವರಲ್ಲಿ ಸುಮಾರು ಮುನ್ನೂರು ಮನೆಗಳಷ್ಟು ಮಹಾರಾಷ್ಟ್ರ ಸಂಸಾರಗಳೇ ಆಗಿದ್ದು ಅವರಲ್ಲಿ ಬಹಳಮಂದಿ ಈ ನೀತಿಗೆ ವಿರುದ್ಧವಾಗಿದ್ದರು.

ಇದರಿಂದ ಕ್ರಾಂತಿಯು ಏರ್ಪಟ್ಟು ಶೂದ್ರನು ಯಜ್ಞೋಪವೀತಧಾರಣೆಗೆ ಅರ್ಹನಲ್ಲ ಎಂಬ ಮತವು ಬಹುಭಾಗ ಪಂಡಿತರಿಂದ ಅಂಗೀಕೃತವಾಯಿತು. ಕ್ರಾಂತಿಕಾರರ ಪಕ್ಷದಲ್ಲಿ ವಿದ್ವಾನ್ ನಾರಾಯಣಶಾಸ್ತ್ರಿಯೆಂಬ ತಾಂತ್ರಿಕನಿದ್ದನು. ಅವನು ಶೃಂಗಾರರಸಪಾರಂಗತನೆಂದು ಪರಿಗಣಿಸಲ್ಪಟ್ಟಿದ್ದನು. ಛತ್ರಪತಿ ಶಿವಾಜಿಯ ಸುಪ್ರಸಿದ್ಧ ಅಮಾತ್ಯ ಬಾಲಾಜಿ ಆವುಜಿಯ ಆಶ್ರಯದಲ್ಲಿದ್ದ ಪಂಡಿತ ವಿಶ್ವೇಶ್ವರಭಟ್ಟನ * ತತ್ವಗಳನ್ನು ಅಲ್ಲಲ್ಲಿಯೇ ಈತನು ಪ್ರಚುರಪಡಿಸುತ್ತಿದ್ದನು.

---

* ಈತನ ಸಂಪೂರ್ಣ ನಾಮಧೇಯವು ಕಲಿಯುಗವ್ಯಾಸ ಬ್ರಹ್ಮದೇವ ವಿಶ್ವೇಶ್ವರಭಟ್ಟ. ಮಹಾರಾಷ್ಟ್ರದಲ್ಲಿ ಗಂಗಭಟ್ಟನೆಂಬ ಹೆಸರಿನಿಂದ ವಿಖ್ಯಾತನಾಗಿದ್ದನು.

ಈ ವಾದ ವಿವಾದಗಳು ಕೆಲವುದಿನ ಹೆಚ್ಚು ಉತ್ಕಟತೆಯನ್ನು ಹೊಂದದೆ ನಡೆಯುತ್ತಿದ್ದುವು. ಮಹಾರಾಜ ಗಂಗಾಧರರಾಯನ ಕಿವಿಗೂ ಈವರ್ತಮಾನ ತಲಪಿತು. ಆತನು ತಟಸ್ಥನಾಗಿದ್ದನು; ಕಡೆಗೊಮ್ಮೆ ನಿಷ್ಠುರಪಕ್ಷದ ಮುಖಂಡನ ಹಿಯ್ಯಾಳಿಕೆಯನ್ನು ಮಾಡಿದ್ದನು. ಇದರ ಪರಿಣಾಮವಾಗಿ ಎದುರಾಳಿಗಳ ಕ್ರೋಧವು ಉತ್ತೇಜಿತವಾಯಿತು. ಮನೆಮನೆಯಲ್ಲಿಯೂ ವಾದವಿವಾದಗಳು ಪ್ರಾರಂಭಿಸಿದವು. 'ಈತನು ಶೂದ್ರ, ಈತನು ಶೂದ್ರನಲ್ಲ' ಎಂಬ ವಿಚಾರವಾಗಿ ಅನೇಕ ತರ್ಕಗಳು ನಡೆದವು. ಮನೆಗಳಲ್ಲಿ, ಹೊರಗಡೆ, ಅಂಗಡಿ ಬೀದಿಗಳಲ್ಲಿ, ಪಾಠಶಾಲೆ ಮತ್ತು ದೇವಾಲಯಗಳಲ್ಲಿಯೂ ಈಮಾತೇ ಚರ್ಚಿಸಲ್ಪಡುತ್ತಿದ್ದಿತು. ಆಸಮಯದಲ್ಲಿ ಝಾನ್ಸಿಯಲ್ಲಿ ಇಬ್ಬರು ಕವಿವರ್ಯರಿದ್ದರು—ಹೀರಾಲಾಲ್‌ವ್ಯಾಸ್ ಮತ್ತು ಪಜನೇಶ. ಹೀರಾಲಾಲನು ತನ್ನನ್ನು ಹೃದಯೇಶನೆಂದು ಕರೆದು ಕೊಳ್ಳುತಿದ್ದನು. ಹೃದಯೇಶನಾದರೋ ಉದಾರಮತಾವಲಂಬಿ. ಎಂದರೆ ಆಸಮಯದಲ್ಲಿ ರಾಷ್ಟ್ರಪಕ್ಷಪಾತಿಯಾಗಿದ್ದನು.

ಪಜನೇಶನು ಶೃಂಗಾರರಸೋಪಾಸಕ. ಅನ್ಯಜಾತಿಯ ಮಹಿಳೆಯೊಬ್ಬಳನ್ನು ಗಣಿಕೆಯನ್ನಾಗಿಟ್ಟುಕೊಂಡಿದ್ದನು. ನಾರಾಯಣಶಾಸ್ತ್ರಿಯ ಮಿತ್ರನು. ಇಬ್ಬರೂ ರಸಿಕರು. ಇದರಿಂದಲೇ ಕಠೋರಪಕ್ಷದವರಿಗೆ ಪ್ರತಿಕೂಲರಾಗಿದ್ದರು. ಪಜನೇಶನು ಈವಿಷಯವಾಗಿ ಕಾವ್ಯಗಳನ್ನು ರಚಿಸಿದನು. ಆದರೆ ಆಸಮಯದ ವಾತಾವರಣಕ್ಕೆ ವಿರುದ್ಧವಾಗಿದ್ದುದರ ಕಾರಣ ಪಜನೇಶನ ಈತರ್ಕದ ಕಾವ್ಯವು ಹಿಂದೆಬಿದ್ದು ಹೋಯಿತು. ಇದರಿಂದ ನಿಷ್ಠುರಪಕ್ಷವು ವೃದ್ಧಿಯಾಗಲು ಅನುಕೂಲವಾಯಿತು. ಹೃದಯೇಶನ ಕಠೋರಪಂಥಕಾವ್ಯಗಳಮುಂದೆ ಇವು ನಿಲ್ಲಲಾರದೇಹೋದವು.

ದುರ್ಗೀ ಎಂಬ ಲಾವಣಿ ಹಾಡುವ ವೇಶ್ಯೆಯೊಬ್ಬಳಿದ್ದಳು. ಅವಳು ಉತ್ತಮ ಗಾಯಕಿ ಮತ್ತು ನರ್ತಕಿ. ಅವಳೂ ಕಠೋರ ಪಕ್ಷಪಾತಿಯಾಗಿದ್ದು ಹೃದಯೇಶನ ಕಾವ್ಯಗಳನ್ನು ಹಾಡುತ್ತಿದ್ದಳು. ಮತ್ತು ಆಗಾಗ್ಗೆ ತಾನೆ ರಚಿಸಿದ ಲಾವಣಿಗಳ ಮೂಲಕ ಎದುರು ಪಕ್ಷವನ್ನು ಹಿಯ್ಯಾಳಿಸುತ್ತಿದ್ದಳು. ನಾರಾಯಣಶಾಸ್ತ್ರಿಯು ತನ್ನ ಪಕ್ಷದ ಬೆಂಬಲಕ್ಕಾಗಿ ಕಷ್ಟಪಡುತ್ತಿದ್ದನು. ಪಜನೇಶನು ಆ ಪಕ್ಷಕ್ಕೆ ಬೆಂಬಲಕೊಡುವ ಕವಿತೆಗಳನ್ನು ರಚಿಸುವುದನ್ನು ನಿಲ್ಲಿಸಿಬಿಟ್ಟನು. ಪೇಟೆಯಲ್ಲಿ, ಮಂದಿರಗಳಲ್ಲಿ, ಎಲ್ಲೆಡೆಗಳಲ್ಲಿಯೂ ಈ ಚರ್ಚೆಗೆ ಇಷ್ಟುಪ್ರಾಮುಖ್ಯತೆ ಲಭಿಸುತ್ತಿದ್ದುದು ಪಜನೇಶನಿಗೆ ರುಚಿಸಲಿಲ್ಲ. ಅದರಲ್ಲೂ ದುರ್ಗಿಯಂತಹ ಪ್ರಸಿದ್ಧ ನರ್ತಕಿ ಮತ್ತು ಸುಂದರಿಯ ಮೂಲಕ ಹೃದಯೇಶನ ಕವಿತೆಗಳ ಹಾಡುಗಾರಿಕೆ ಅಸಹನೀಯವಾಗಿದ್ದಿತು. ಅವನು ನಾರಾಯಣಶಾಸ್ತ್ರಿಯ ಮನೆಗೆ ಈಚೆಗೆ ಇನ್ನೂ ಹೆಚ್ಚಾಗಿ ಬಂದು ಹೋಗಲು ಪ್ರಾರಂಭಿಸಿದನು. ನಾರಾಯಣಶಾಸ್ತ್ರಿಯಿಂದ ಶಾಸ್ತ್ರಗಳ ಸಮರ್ಥನೆಯನ್ನು ಕಲಿತು ಈ

ವಿಚಾರದ ವಾದವಿವಾದಗಳಲ್ಲಿ ಹೆಚ್ಚು ಹುರುಪಿನಿಂದ ಮಾತನಾಡುತ್ತಿದ್ದನು. ಒಂದು ದಿನ ಅವನ ಆವೇಶಗೊಂಡ ವಿರೋಧಿಯೊಬ್ಬರು ಅವನಿಗೆ ಉತ್ತರ ಕೊಡುತ್ತಾ ಹಠಾತ್ತನೆ "ನೀನು ಇಷ್ಟೆಲ್ಲಾ ಪ್ರಶಂಸೆಮಾಡುವ ನಾರಾಯಣಶಾಸ್ತ್ರಿಯು ಬ್ರಾಹ್ಮಣನೇ ಅಲ್ಲ" ಎಂದನು.

ಪಜನೇಶನು ಅತ್ಯಂತ ಕ್ರುದ್ಧನಾಗಿ "ಯಾಕಲ್ಲ ಎಂದು ಕೇಳಿದನು ?"

ಅವನು ಒಬ್ಬ ಝಾಡಮಾಲಿಸ್ತ್ರೀಯನ್ನು ವೇಶ್ಯೆಯನ್ನಾಗಿಟ್ಟು ಕೊಂಡಿದ್ದಾನೆ ಎಂದು ಪ್ರತ್ಯುತ್ತರ ದೊರಕಿತು.

ಈ ಅಪವಾದವು ಗುಸುಗುಸು ಎಂದು ಎಲ್ಲೆಡೆಗೂ ಹರಡಿತು. ಕೆಲವರು ಕಠೋರ ಪಂಥಿಗಳು ಇದನ್ನು ನಿಜವೆಂದರು; ಮತ್ತೆ ಕೆಲವರು ಅಸಂಭವವೆಂದು ನಂಬಲಿಲ್ಲ. ಪಜನೇಶನು ತಾನೇ ಇದನ್ನು ನಿರ್ಧರಿಸುತ್ತೇನೆ ಎಂದು ಯೋಚಿಸಿದನು. ನಾರಾಯಣ ಶಾಸ್ತ್ರಿಯ ಕಿವಿಗೂ ಈ ಅಪವಾದವು ಬಿದ್ದಿತು.

## ೬

ಒಂದು ದಿನ ಪ್ರಾತಃಕಾಲ ಪಜನೇಶನು ನಾರಾಯಣಶಾಸ್ತ್ರಿಯಾ ಮನೆಗೆ ಹೋದನು. ಶಾಸ್ತ್ರಿಯು ಯಾರ ಆಗಮನವನ್ನೋ ನಿರೀಕ್ಷಿಸುತ್ತಿದ್ದಂತೆ ಭಾಸವಾಗುತ್ತಿತ್ತು. ಆತನು ಪಜನೇಶನನ್ನು ಕಂಡು "ಬನ್ನಿ ಬನ್ನಿ" ಎಂದು ಮೇಲೆ ಮೇಲೆ ಕರೆದು ಕುಳ್ಳಿರಿಸಿದನು. ಆದರೆ ಪಜನೇಶನು ಆತನ ಕಣ್ಣುಗಳ ವಿಲಕ್ಷಣತೆಯನ್ನು ನೋಡಿದ್ದ ಪಕ್ಷದಲ್ಲಿ ತನ್ನ ಆಗಮನದಿಂದ ಶಾಸ್ತ್ರಿಗೆ ಆನಂದವೇನಾಗಿಲ್ಲವೆಂಬ ಅಂಶವು ಬಹಿರಂಗ ಪಡುತ್ತಿದ್ದಿತು. ಪಜನೇಶನು ಬೀದಿಯ ಬಾಗಿಲಿಗೆ ಬೆನ್ನುಮಾಡಿಕೊಂಡು ಕುಳಿತನು, ಶಾಸ್ತ್ರಿಯು ಬಾಗಿಲಿಗೆ ಎದುರಾಗಿ ಕುಳಿತನು. ನಂತರ ಪಜನೇಶನ ಮುಂದೆ ತಾಂಬೂಲದ ತಟ್ಟೆಯನ್ನಿಟ್ಟು ತಾಂಬೂಲವನ್ನು ಹಾಕಿಕೊಳ್ಳುವಂತೆ ಹೇಳಿದನು. ಪಜನೇಶನಿಗೆ ಮನಸ್ಸಿನಲ್ಲಿ ಒಂದು ಕ್ಷಣ ಅಸಹ್ಯತೆ ಉಂಟಾಯಿತು. ಅದನ್ನು ತೋರ್ಪಡಿಸದೆ ವೀಳ್ಯವನ್ನು ಸ್ವೀಕರಿಸಿದನು.

ಶಾಸ್ತ್ರಿಯು "ಏನಾದರೂ ಹೊಸ ಸಮಾಚಾರ ಉಂಟೆ ?" ಎಂದನು.

ಪಜನೇಶನು ಉತ್ತರಕೊಡುತ್ತಾ "ಈಗ ನಿಮ್ಮ ಹೆಸರಿಗೆ ಮಸೀ ಬಳಿಯುವ ಸನ್ನಾಹವು ನಡೆದಿದೆ" ಎಂದು ಮರುಗಿದನು. ಆತನು ಈ ವಿಷಯವನ್ನು ಮತ್ತಾವ ರೀತಿಯಿಂದಲಾದರೂ ಪ್ರಾರಂಭಿಸಬೇಕೆಂದು ಆಶಿಸಿದ್ದನು.

ಶಾಸ್ತ್ರಿಯು ಕಣ್ಣು ಹಾರಿಸುತ್ತಾ "ನಾನು ಕೇಳಿದ್ದೇನೆ" ಎಂದನು.

ಪಜನೇಶನು ನಿರಾಳವಾಗಿ ಶ್ವಾಸವನ್ನು ಎಳೆದುಕೊಂಡನು. ಶಾಸ್ತ್ರಿಯು

ಮುಂದುವರೆದು "ಮೂರ್ಖರಿಗೆ ಯಾವ ಉಪಾಯವೂ ತೋರದಿದ್ದರೆ ಮನಸ್ವೀ ನಿಷ್ಠುರ ಮಾಡಲು ಪ್ರಯತ್ನಿಸುತ್ತಾರೆ. ನಾನೇನು ಈ ನಿಷ್ಠುರವಾಕ್ಯಗಳನ್ನು ಕೇಳಿಕೊಂಡು ಶಾಸ್ತ್ರ ಸಮ್ಮತಿಗಳ ಚರ್ಚೆಯನ್ನು ಬಿಟ್ಟು ಬಿಡಲೆ? ಪುಂಡರಿಗೆ ಮುಖ ಮುರಿಯುವಂತೆ ಉತ್ತರ ಕೊಡುವೆನು. ವಿರೋಧಪಕ್ಷದಲ್ಲಿ ಎಷ್ಟು ಮಹಾ ಪಂಡಿತರಿದ್ದಾರೆ? ಮಹಾ ರಾಷ್ಟ್ರರೇ ಆಗಲಿ ಇತರ ದೇಶೀಯರೇ ಆಗಲಿ ಎಲ್ಲರೂ ಈ ವರ್ತಕ ಮಹಾಜನರಿಗೆ ಮತ್ತು ಸರದಾರರಿಗೆ ಒಂದಿಲ್ಲೊಂದು ರೀತಿಯಲ್ಲಿ ಆಶ್ರಿತರೇ ಆಗಿದ್ದಾರೆ. ಮತ್ತು ಈ ಹಳೆಯ ಆಶ್ರಯದಾತರೋ ಹಳೇ ಸಂಪ್ರದಾಯದ ಗೊಡ್ಡು ಪೂಜಾರಿಗಳು. ಚಾಚೂ ತಪ್ಪದಂತೆ ವರ್ತಿಸುವರು. ಇವರುಗಳು ಶಾಸ್ತ್ರಗಳನ್ನು ಓದುವುದಿಲ್ಲ ಅಥವಾ ಓದಿದರೂ ಕೂಡ ಆಶ್ರಯದಾತನ ಮುಖನೋಡಿ ಮಣೆಹಾಕುವರು. ವಾಸ್ತವಾಂಶ ಗಳನ್ನು ಹೇಳುವುದಿಲ್ಲ. ತಂತ್ರಶಾಸ್ತ್ರಗಳಮೂಲವು ಜ್ಞಾನ ವಿಜ್ಞಾನ ಸತ್ಯಗಳಲ್ಲಿವೆ. ಅವರು ಪುರಾಣಿಕ ಮತ್ತು ಕಥಾವಾಚಕರೊಡಗೂಡಿ ಅನೃತವನ್ನೆಂದಿಗೂ ಆಡುವುದಿಲ್ಲ.

ಪಜನೇಶ—ಆದರೆ ಈ ಅಪವಾದವನ್ನು ಹುಟ್ಟಡಗಿಸಲೇ ಬೇಕು.

ಶಾಸ್ತ್ರಿ—ವ್ಯರ್ಥಶ್ರಮ! ಬೇಕಾದವರು ಬೇಕಾದಂತೆ ಒದರಿಕೊಳ್ಳಲಿ. ನಾನು ಇದನ್ನು ಗಣನೆಗೆ ತರುವುದಿಲ್ಲ. ನಿನ್ನ ಕಾರ್ಯವನ್ನು ನೀನು ನೋಡಿಕೊ.

ಪಜ—ಇದರ ವಿಚಾರದಲ್ಲಿ ಶ್ರೀಮಂತ ಸರ್ಕಾರರಿಗೆ ಫಿರ್ಯಾದು ಕೊಡಲೇ ಬೇಕೆಂದು ನನ್ನ ಅಭಿಪ್ರಾಯ. ಅವರು ಯಾವಾಗ ಶಿಕ್ಷಿಸುವರೋ ಆಗ ಅಪವಾದವು ತಾನಾಗಿಯೇ ನಿರ್ನಾಮವಾಗುವುದು.

ಶಾಸ್ತ್ರಿ—ನಾನು ಈ ಅಲ್ಪವಿಚಾರವನ್ನು ರಾಜನ ಬಳಿ ತೆಗೆದುಕೊಂಡು ಹೋಗಲು ಇಷ್ಟಪಡುವುದಿಲ್ಲ. ರಾಜನಾದರೋ ಆ ಕಥಾವಾಚಕರಿಗೆ ಸರಿಯಾಗಿ ಮನಸ್ವೀ ವರ್ತಿಸುತ್ತಾನೆ.

ಪಜ—ಹಾಗಾದರೆ ನಾನು ಫಿರ್ಯಾದುಮಾಡುತ್ತೇನೆ.

ಶಾಸ್ತ್ರಿಗೆ ಈ ಪ್ರಸ್ತಾಪವು ಇಷ್ಟವಾಗಲಿಲ್ಲ: "ಇದು ಇನ್ನೂ ಕೆಡಕನ್ನುಂಟು ಮಾಡುವುದು. ರಾಜನು ಇದರಲ್ಲಿ ಏನೋ ರಹಸ್ಯವಿದೆ. ಆದುದರಿಂದಲೇ ತಾನು ಫಿರ್ಯಾದೆ ಮಾಡದೆ ಮಿತ್ರನಿಂದ ಹೇಳಿಸಿದ್ದಾನೆ ಎಂದು ಭಾವಿಸುವನು" ಎಂದು ಹೇಳಿ ಮಾತು ಬದಲಾಯಿಸುತ್ತಾ "ಇಂದು ಅದೇನು ಇಷ್ಟುಜಾಗ್ರತೆ ಮನೆಬಿಟ್ಟು ಹೊರಟೆ?" ಎಂದು ಕೇಳಿದನು.

ಪಜನೇಶನು "ಈ ಚರ್ಚೆಗೆ ಕಿವಿಗೊಡದಿದ್ದರೆ ನಿಮ್ಮ......" ಎಂದು ಉತ್ತರ ಕೊಡುತ್ತಿದ್ದಂತೆಯೆ ವಯಸ್ಸಾದ ಸ್ತ್ರೀಯೊಬ್ಬಳು ಒಂದು ಚಿಕ್ಕ ಬುಟ್ಟಿ ಮತ್ತು ಪರಕೆಯನ್ನು ಹೊತ್ತು ಬಾಗಿಲಬಳಿ ಬಂದವಳು ಹೊರಗಡೆಯೇ ನಿಂತಳು. ಅವಳ ಹಿಂದೆಯೇ ಮತ್ತೊಬ್ಬ ಯುವತಿಯು ಇದ್ದಳು. ಯುವತಿಯು ಸ್ವಲ್ಪ ಉತ್ತಮ ವಸ್ತ್ರ

ವನ್ನು ಧರಿಸಿ ಅಲ್ಪಸ್ವಲ್ಪ ಆಭರಣಗಳೊಂದಿಗೆ ಶುಭ್ರವಾಗಿದ್ದಳು. ಯುವತಿಯು ವೃದ್ಧೆಯ ಪಕ್ಕದಿಂದ ಮುಗುಳ್ನಗೆ ನಗುತ್ತಾ ಕೊಠಡಿಯೊಳಗೆ ಬಂದಳು. ಒಳಗೆ ಬರುವಾಗ ಅವಳು ಪಜನೇಶನನ್ನು ನೋಡಲಿಲ್ಲ. ಆದರೆ ಒಳಗೆ ಬಂದನಂತರ ಪಜನೇಶನ ಗುರುತು ಸಿಕ್ಕಿತು. ಒಮ್ಮಿಂದೊಮ್ಮೆ ಬೆಚ್ಚಿ ಹೊರಗೆ ಹೊರಡಲನುವಾದಳು. ಆದರೆ ಪುನಃ ಅಲ್ಲಿಯೇ ನಿಂತು ವೃದ್ಧೆಯನ್ನು ಕುರಿತು. "ಕೊಂಸಾ, ಕೊಠಡಿಯಲ್ಲಿ ಕಸವೇನಿಲ್ಲ" ಎಂದಳು"

ಕೊಂಸಾ, "ನಾನು ಬರುತ್ತೇನೆ, ತಾಳು" ಎಂದಳು.

ಪಜನೇಶನು ನೋಡಿದನು, ಆಕೆ ಉಚ್ಚಜಾತಿಯ ಸ್ತ್ರೀಯಂತೆಯೇ ಸುಂದರಳು. ನಾಯಿಕಾಭೇದನ ಉಪಮೇಯಗಳು ಸ್ಮರಣೆಗೆ ಬಂದವು—ಕಮಲಗಾತ್ರ, ಮೃಗನಯನ, ಕಪೋತಗ್ರೀವ, ಕಮಲನಾಳದಂತಹ ಕಟಿಪ್ರದೇಶ. ಆದರೆ ನಾಯಿಕಾಭೇದನ ಸಾಹಿತ್ಯವು ಇದಕ್ಕಿಂತ ಹೆಚ್ಚಾಗಿ ಹೋಲಲಿಲ್ಲ. ಪಜನೇಶನ ಮನವು ಆಕರ್ಷಣೆಯಿಂದ ತುಂಬಿಹೋಯಿತು.

ಶಾಸ್ತ್ರಿಯು ತನಗೆ ಉಂಟಾದ ಗಾಬರಿಯನ್ನು ಸಮುದಾಯಿಸಿಕೊಂಡು "ಭೋಟಿ, ಸ್ವಲ್ಪ ಹೊತ್ತಿನನಂತರ ಬಂದರೆ ನಿನ್ನ ಕೆಲಸವನ್ನು ಮಾಡಿಕೊಡುವೆನು" ಎಂದನು.

ಯುವತಿಯ ಮುಖವು ಕೆಂಪೇರಿತು "ಹಾಂ ?" ಎಂದು ಓಡಿಹೋದಳು.

ಶಾಸ್ತ್ರಿ ಮತ್ತು ಕವಿ ಒಂದು ತೊಡಕಿನಲ್ಲಿ ಸಿಕ್ಕಿಬಿದ್ದರು.

ಪಜನೇಶ—ಇವಳಾರು ?

ಶಾಸ್ತ್ರೀ—ಭೋಟಿ.

ಪಜ—ಅದು ಅವಳ ಹೆಸರು. ಆದರೆ ಅವಳಾರು ?

ಶಾಸ್ತ್ರೀ—ಸ್ತ್ರೀ.

ಪಜ—ಅದು ನನಗೂ ಕಾಣಿಸುತ್ತದೆ; ಆದರೆ ಯಾವ ಸ್ತ್ರೀ ?

ಶಾಸ್ತ್ರೀ—ಯಾವುದೊ ಒಂದು ಕೆಲಸಕ್ಕಾಗಿ ಬಂದಿರುವ ಹೆಂಗಸು.

ಪಜ—ಇದರಿಂದ ನನಗೇನೂ ಅರ್ಥವಾಗುವುದಿಲ್ಲ. ಆದರೆ ಯಾವ....

ಶಾಸ್ತ್ರೀ—ಆದರೆ ಯಾವ ಏನು? ನೀವು ಇವಳ ಮತ್ತು ನನ್ನ ಸಂಬಂಧದ ಬಗೆಗೆ ಸಂಶಯಪಡುತ್ತೀರಿ.

ಪಜನೇಶನು ಒಂದು ಕ್ಷಣ ಯೋಚಿಸಿ ಉತ್ತರವಿತ್ತನು: "ಊರಿನ ಜನರು ಏನೇನೊ ಈ ಹೆಂಗಸಿನ ವಿಚಾರ ಮಾತನಾಡಿ ನಿಮ್ಮ ಮೇಲೆ ಅಪವಾದ ಹೊರಸುತ್ತಿರುವರೆ ? ಹಾಗಿದ್ದ ಪಕ್ಷದಲ್ಲಿ ನೀವು ಎಚ್ಚರಿಕೆಯಿಂದಿರಬೇಕು. ಅವಳ ಜಾತಿಯವರು ಅವಳ ಸರ್ವನಾಶಮಾಡುವರು ಮತ್ತು ರಾಜನೂ ನಿಮ್ಮನ್ನು ಸರ್ವನಾಶಮಾಡಬಹುದು."

ಶಾಸ್ತ್ರಿಯು "ಸುಳ್ಳು ಆರೋಪಣೆ. ನಾನಾರಿಗೂ ಹೆದರುವುದಿಲ್ಲ" ಎಂದನು.

ಪಜನೇಶನು "ಇದು ನನ್ನ ಕರ್ತವ್ಯ ಆದುದರಿಂದ ತಿಳಿಸಿದೆ. ನಿಮಗೆ ಎಲ್ಲವೂ ತಿಳಿದಿರುವುದು" ಎಂದನು.

ಪಜನೇಶನು ಅಲ್ಲಿಂದ ಎದ್ದನು. ಶಾಸ್ತ್ರಿಯು ಮತ್ತೊಂದು ಬಾರಿ ತಾಂಬೂಲ ಚರ್ವಣಕ್ಕಾಗಿ ನಿರ್ಬಂಧಪಡಿಸಿದನು. ಆದರೆ ಪಜನೇಶನು ತಾಂಬೂಲವನ್ನು ಸ್ವೀಕರಿಸದೇ ಹೊರಟು ಹೊರಗೆ ಬಂದನು. ಅವನ ಕಣ್ಣುಗಳು ಆ ಸ್ತ್ರೀಗಾಗಿ ಹುಡುಕಾಡಿದವು. ಆದರೆ ಅವಳು ಕಾಣಿಸಲಿಲ್ಲ. ಆ ಜಾತಿಯಲ್ಲೂ ಪದ್ಮಿನಿ ಸ್ತ್ರೀಯು ಜನಿಸಬಲ್ಲಳೆ? ಎಂದು ಅವನಿಗೆ ಆಶ್ಚರ್ಯವಾಯಿತು.

## ೧೦

ಪಜನೇಶನು ಇದುವರೆಗೂ ಯಾವ ಪಕ್ಷವನ್ನು ತೀವ್ರತೆಯಿಂದ ಅವಲಂಬಿಸಿದ್ದನೋ ಅದನ್ನು ಈಗ ತ್ಯಾಗಮಾಡಿದನು. ನಾರಾಯಣಶಾಸ್ತ್ರಿಯೂ ಜಾಗ್ರತೆ ಶಾಂತನಾದನು. ಹೊಸದಾಗಿ ಪಂಥಕ್ಕೆ ಸೇರಿದವರು ಈ ಜಗಳವನ್ನು ಕೈಗೆ ತೆಗೆದುಕೊಂಡು ಆಗಾಗ್ಯೆ ಬಾಯಿಗೆ ಬಾಯಿಕೊಟ್ಟು ಜಗಳವಾಡುತ್ತಿದ್ದುದು ಕೈ ಕೈ ಮಿಲಾಯಿಸುವವರೆಗೂ ಈ ಚರ್ಚೆಯು ಉಗ್ರ ಪರಿಸ್ಥಿತಿಗೇರಿತು. ಗಂಗಾಧರರಾಯನಿಗೂ ವಿಷಯ ಮುಟ್ಟಿತು. ಆತನು ಇದು ಮತಧರ್ಮಗಳ ವಿಚಾರವಾದುದರಿಂದ ಈ ವಿವಾದ ತೀರ್ಮಾನಮಾಡಲು ಅಧಿಕಾರ ಹಸ್ತದಿಂದ ದೃಢಸಂಕಲ್ಪ ಮಾಡಿದನು. ಹೊಸ ಯಜ್ಞೋಪವೀತಧಾರಿಗಳ ಪಂಗಡದ ಮುಖಂಡರನ್ನೂ, ಪ್ರಮುಖ ಬ್ರಾಹ್ಮಣರನ್ನೂ ಕರೆಸಲಾಯಿತು.

ಆ ದಿನ ವಾದವಿವಾದಗಳು ನಡೆದವು. ಆದರೆ ರಾಜನು ಯಾವ ತೀರ್ಮಾನಕ್ಕೂ ಬರಲಿಲ್ಲ. ಘೋಟೆಯ ಜಾತಿಯವರೆಂದು ಕರೆಯಲ್ಪಟ್ಟ ಯಜ್ಞೋಪವೀತಧಾರಿಗಳು ನಾರಾಯಣಶಾಸ್ತ್ರಿಯ ಮೇಲೆ ದೂರು ಹೇಳುವುದಕ್ಕೆ ಪರವಾನೆ ಕೇಳಿದರು. ಒಂದು ದಿನದ ಅವಕಾಶ ದೊರಕಿತು. ಅವರು ನಾರಾಯಣಶಾಸ್ತ್ರಿಯೊಂದಿಗೆ ಸಹಜವಾದ ಒಪ್ಪಂದಕ್ಕೆ ಬಂದರು. ಆದಿನ ಬಿಟ್ಠೂರಿನಿಂದ ತಾತ್ಯಾದೀಕ್ಷಿತನೂ ಮತ್ತು ಯುವಕ ತಾತ್ಯಾನೂ ಝಾನ್ಸಿಗೆ ಬಂದರು. ದೀಕ್ಷಿತನು ಬಿಟ್ಠೂರಿನ ಸಂಗತಿಯನ್ನೆಲ್ಲವನ್ನೂ ರಾಜನಲ್ಲಿ ಅರಿಕೆಮಾಡಿಕೊಂಡನು. ರಾಜನು ಎಲ್ಲಾ ಶರತ್ತುಗಳಿಗೂ ಒಪ್ಪಿಗೆಯಿತ್ತನು. ನಿಶ್ಚಿತಾರ್ಥದ ದಿಬ್ಬಣವು ಬಿಟ್ಠೂರಿಗೆ ಹೋಗಿ ಬಂದಾಗಿದ್ದಿತು. ಆದರೆ ಸೀಮಂತ ಮುಂತಾದ ವಿವಾಹ ಕಾರ್ಯಗಳು ಝಾನ್ಸಿಯಲ್ಲೇ ನಡೆಯಬೇಕಾಗಿದ್ದುದರಿಂದ ಬೇಗರಿಗೆ ಎಲ್ಲಾ ವಸತಿಸೌಕರ್ಯಗಳನ್ನೂ ಏರ್ಪಡಿಸಲು ತಕ್ಕ ಕರ್ಮಚಾರಿಗಳಿಗೆ

ಅಪ್ಪಣೆಯಿತ್ತನು. ಇದಕ್ಕಾಗಿ ಯುವಕ ತಾತ್ಯಾ ಝಾನ್ಸಿಯಲ್ಲೇ ಒಂದೆರಡು ದಿನ ಉಳಿಯ ಬೇಕಾಯಿತು.

ಮಾರನೆಯ ದಿನ ಯಜ್ಞೋಪವೀತದ ಜಗಳ ನಿಷ್ಕರ್ಷೆಯಾಗಬೇಕಾಗಿದ್ದಿತು. ಯುವಕ ತಾತ್ಯಾನೂ ಈ ವಿಲಕ್ಷಣ ಮೊಕದ್ದಮೆಯನ್ನು ಕೇಳಲು ಆತುರನಾಗಿದ್ದನು. ಅವನಿಗೆ ಸೈನಿಕರ ಉಡುಗೆ ತೊಡುಗೆಗಳನ್ನು ಧರಿಸಲು ಆಸೆ ಇದ್ದಿತು; ಅದರಲ್ಲಿಯೂ ಫ್ರೆಂಚರ ಲೋಹದ ಟೋಪಿಯನ್ನು ಆದಿನ ರಾಜನ ಸಭೆಗೆ ಧರಿಸಿಕೊಂಡು ಹೋದನು.

ಗಂಗಾಧರರಾಯನು ಆತನನ್ನು ಆದರದಿಂದ ಬರಮಾಡಿಕೊಂಡನು—ಪೇಶ್ವೆ ಬಾಜೀರಾಯನ ಕರ್ಮಚಾರಿ ಮತ್ತು ಮುಂದೆ ಬೀಗರಾಗುವವರ ಕಡೆಯ ಬಂಧು ಎಂದು. ಪಂಡಿತರ ವಾದವಿವಾದಗಳನ್ನು ಸ್ವಲ್ಪ ಕೇಳಿದನಂತರ ನ್ಯಾಯ ನಿಷ್ಠುರತೆಗಳನ್ನು ನಿಷ್ಕರ್ಷೆಮಾಡಲು ಪ್ರಾರಂಭಿಸಿದನು.

ರಾಜನು ಅಧಿಕಾರಿಗಳನ್ನು ಕುರಿತು "ಏನು, ಬ್ರಾಹ್ಮಣರಾಗಬೇಕೆಂದು ಅಪೇಕ್ಷಿಸುತ್ತೀರಾ?" ಎಂದು ಪ್ರಶ್ನಿಸಿದನು. ಅಪರಾಧಿಗಳಲ್ಲಿ ಹೆಚ್ಚು ಸಾಹಸಿಯಾದ ಒಬ್ಬನು "ಇಲ್ಲ, ಮಹಾರಾಜ್" ಎಂದು ಉತ್ತರಿಸಿದನು.

'ಮತ್ತೇಕೆ ಈ ಅನುಚಿತ ಕಾರ್ಯವನ್ನು ಮಾಡಿದಿರಿ?'

'ಅನುಚಿತವಲ್ಲ ಪ್ರಭು'.

'ಏಕೆ ಅನುಚಿತವಲ್ಲ?'

'ಸರ್ಕಾರ್, ಬ್ರಾಹ್ಮಣ ಜಾತಿಯವರಲ್ಲದೇ ಬೇರೆ ಅನೇಕ ಜಾತಿಯವರು ಜನಿವಾರವನ್ನು ಧರಿಸುತ್ತಾರೆ.'

'ಮೂರ್ಖ, ಅವರ ಜಾತಿಗೆ ನೀನು ಸರಿಸಾಟಿಯೇನೋ?'

ಬಾಲಕನು ಸುಮ್ಮನಾದನು.

ಗಂಗಾಧರರಾಯನಿಗೆ ಒಂದು ಬಾರಿ ಕೋಪವು ಉಕ್ಕಿದರೆ ಅದು ಇಳಿಯುವುದು ಪ್ರಯಾಸಕರವಾಗಿದ್ದಿತು. ಆತನು "ಯಜ್ಞೋಪವೀತವನ್ನು ಕಿತ್ತು ಬಿಸಾಡು. ಮತ್ತೆ ಮುಂದೆಂದೂ ಧರಿಸಕೂಡದು" ಎಂದನು.

ಬಾಲಕನು ಕೈ ಜೋಡಿಸಿ ತಲೆಬಾಗಿದನು.

ರಾಜನು ಸಿಟ್ಟಿನಿಂದ "ಏನು, ನೀನೇ ಕಿತ್ತು ಬಿಸಾಡುವೆಯೋ ಇಲ್ಲ ಮತ್ತೆ ಯಾರಿಂದಲಾದರೂ ಆ ಕೆಲಸಮಾಡಿಸಬೇಕೊ?"

ಆತನು ಉತ್ತರಕೊಟ್ಟನು: "ನಮ್ಮ ಕೈಯ್ಯಿಂದಲೇನೋ ಜನಿವಾರವನ್ನು ತೆಗೆದು ಹಾಕುವುದಿಲ್ಲ, ಪ್ರಾಣ ಬೇಕಾದರೂ ಹೋಗಲಿ. ನೀವು ಪ್ರಭುಗಳು ಇಷ್ಟ ಬಂದಂತೆಮಾಡಬಹುದು."

ಗಂಗಾಧರರಾಯನು ಕಣ್ಣು ಗುಡ್ಡೆಗಳನ್ನು ಕೆಂಪಗೆಮಾಡಿಕೊಂಡು ಪಹರೆಯವನಿಗೆ "ಹಿತ್ತಾಳೆಯದೋ, ತಾಮ್ರದ್ದೋ, ಇಲ್ಲ ಕಬ್ಬಿಣದ್ದೋ, ಯಾವುದೋ ಒಂದು ಲೋಹದ ಕಂಬಿಯನ್ನು ತೆಗೆದು ಕೊಂಡು ಬಾ, ತ್ವರೆಮಾಡು" ಎಂದು ಆಜ್ಞೆಯಿತ್ತನು.

ಪಹರೆಯವನು ಅದನ್ನು ತರಲು, ಜನಿವಾರದಾಕಾರದಲ್ಲಿ ಅದನ್ನು ಬಗ್ಗಿಸಿ, ಬೆಂಕಿಯನ್ನು ತರಿಸಿ, ಅದರಲ್ಲಿಟ್ಟು ಕಾಯಿಸಿದನು. ನಂತರ "ಈ ಜನಿವಾರವನ್ನು ಇವನಿಗೆ ತೊಡಿಸಿರಿ" ಎಂದು ರಾಜನು ಆಜ್ಞೆಯಿತ್ತನು.

ಅಪರಾಧಿಯು ಗರ್ವದಿಂದ ತಲೆಯೆತ್ತಿ, ಒಂದು ಕ್ಷಣ ಕೈ ಜೋಡಿಸಿಕೊಂಡು ಆಕಾಶದಕಡೆ ನೋಡಿ ಪುನಃ ನತಮಸ್ತಕನಾದನು. ಆ ಕಾದಿರುವ ಜನಿವಾರವು ಹುಡುಗನ ಕತ್ತಿನಲ್ಲಿ ಬೀಳುವುದರಲ್ಲಿರುವಾಗ ಯುವಕ ತಾತ್ಯನು ಎದ್ದು ನಿಂತು ವಿನಯದಿಂದ "ಪ್ರಭು, ಧರ್ಮರಕ್ಷಣೆಮಾಡಿ ; ಇದು ತರವಲ್ಲ" ಎಂದು ಪ್ರಾರ್ಥಿಸಿದನು.

ಗಂಗಾಧರರಾಯನು ಆ ಸುಡುತ್ತಿರುವ ಯಜ್ಞೋಪವೀತದಧಾರಣೆಯನ್ನು ನಿಲ್ಲಿಸಿ ಯುವಕನನ್ನು ನೋಡಿ, "ಶ್ರೀಮಂತ ಪೇಶ್ವೆಯವರು ಈ ದಂಡನೆಯನ್ನೇ ವಿಧಿಸುತ್ತಿದ್ದರು" ಎಂದನು.

'ಇಲ್ಲ, ಪ್ರಭು,' ಯುವಕನು ನಿರ್ಭಯದಿಂದ ತನ್ನ ಅಭಿಪ್ರಾಯವನ್ನು ತಿಳಿಸಿದನು. 'ಮತಾವಲಂಬನೆ ಮಾಡುವುದು ಅವರವರ ವಿಶ್ವಾಸವನ್ನನುಸರಿಸಿರುವುದು. ಈ ವಿಚಾರದಲ್ಲಿ ಪ್ರಭುಗಳು ತಟಸ್ಥರಾಗಿರ ಬೇಕು' ಎಂದನು.

'ಲೋಕರೂಢಿಯ ವಿಚಾರದಲ್ಲಿಯೂ ಕೂಡ?' ಎಂದು ರಾಜನು ನಗೆಯಿಂದ ಪ್ರಶ್ನಿಸಿದನು.

'ಹೌದು, ಮಹಾರಾಜ, ಲೋಕಾಚಾರವೂಕೂಡ ಸಮಯೋಚಿತವಾಗಿ ಬದಲಿಸುತ್ತಿರುತ್ತದೆ' ಎಂದು ಉತ್ತರವಿತ್ತನು.

ಗಂಗಾಧರರಾಯನ ಕೋಪವು ಸ್ವಲ್ಪ ಇಳಿಮುಖವಾಯಿತು. ಆತನ ದೃಷ್ಟಿಯು ತಾತ್ಯನು ಧರಿಸಿದ್ದ ಟೋಪಿಯಕಡೆಗೆ ಹೋಯಿತು. ಕುತೂಹಲದಿಂದ, "ನೀನೇಕೆ ಈ ಟೋಪಿಯನ್ನು ಧರಿಸಿದ್ದೀಯಾ?" ಎಂದು ಕೇಳಿದನು.

ತಾತ್ಯಾನು, "ನಾನು ಸೈನಿಕ" ಎಂದನು.

ರಾಜನಿಗೆ ಈ ಉತ್ತರದಿಂದ ನಗು ಬಂದಿತು. ಆತನು "ನಮ್ಮಲ್ಲಿ ತಾತ್ಯಾ ದೀಕ್ಷಿತರೆಂಬ ಶಾಸ್ತ್ರಜ್ಞರು ಇರುತ್ತಾರೆ. ಅವರನ್ನು ನೀನು ಬಲ್ಲೆಯಷ್ಟೆ? ನೀನೊಬ್ಬ ಬ್ರಾಹ್ಮಣ ಸೈನಿಕನು. ಆದರೆ ನಿನ್ನ ಹೆಸರನ್ನು ಹಿಡಿದುಕೂಗಿದರೇ ಯಾವಾಗಲಾದರೂ ಗಡಿಬಿಡಿಯಾಗಬಹುದು. ಆದುದರಿಂದ ನಿನ್ನನ್ನು 'ಟೋಪಿವಾಲತಾತ್ಯಾ' ನೆಂದೋ ಅಥವಾ ಸುಮ್ಮನೇ 'ಟೋಪಿ' ಯೆಂದೋ ಕರೆದರೆ ಹೇಗೆ ಶೋಭಿಸುತ್ತದೆ?" ಎಂದು ಕೇಳಿದನು.

ಯುವಕನು ನಗುತ್ತಾ "ಆ ಪುಟ್ಟ ಹೆಸರಿನಿಂದಲೇ ಜನರು ಸಾಧಾರಣವಾಗಿ ನನ್ನನ್ನು ಸಂಬೋಧಿಸುತ್ತಾರೆ" ಎಂದನು.

'ನನಗೂ ಅದುಇಷ್ಟವಾಗಿದೆ' ಎಂದು ಹೇಳಿ ರಾಜನು ಯಜ್ಞೋಪವೀತದ ಮೊಕದ್ದಮೆಯ ಅಪರಾಧಿಗಳನ್ನು ಉದ್ದೇಶಿಸಿ "ಈ ಯುವಕನಿಂದ ನೀವು ಉಳಿದುಕೊಂಡಿರಿ. ಹೊರಡಿ ಆಚೆಗೆ" ಎಂದು ಗದ್ದರಿಸಿದನು.

ಅವರುಗಳು ಹೊರಟು ಹೋದರು. ನಂತರ ರಾಜನು ತಾತ್ಯಾವನ್ನು ನಾಟಕಶಾಲೆಗೆ ಆಹ್ವಾನಿಸುತ್ತಾ "ಟೋಪೆ, ನೀನು ಇಂದು ರಾತ್ರಿ ನಮ್ಮ ನಾಟಕಶಾಲೆಗೆ ಬಂದು ಅಲ್ಲಿ 'ರತ್ನಾವಳಿ' ನಾಟಕಾಭಿನಯವನ್ನು ನೋಡಬೇಕು. ಒಳ್ಳೆಯ ಅಭಿನಯ, ಮಧುರಗಾನ ಮತ್ತು ನೃತ್ಯಗಳಿವೆ. ಮೊದಲುಯಾವಾಗಲಾದರೂ ಇವನ್ನು ನೋಡಿದ್ದೆಯಾ ?" ಎಂದು ಕೇಳಿದನು.

ಟೋಪೆಯು "ಇಲ್ಲ, ಸರ್ಕಾರ್" ಎಂದನು.

ರಾಜನು "ನಾಟಕವನ್ನು ಓದಿದ್ದೀಯಾ ?" ಎಂದು ಹೇಳಿದನು.

ಪುನಃ ಟೋಪೆಯು "ಇಲ್ಲ ಸರ್ಕಾರ್" ಎಂದು ಕೇಳಿದನು.

ರಾಜನು "ಸಮಯಕ್ಕೆ ಸ್ವಲ್ಪ ಮುಂಚಿತವಾಗಿಯೇ ಬಂದು ಬಿಡು. ನಿನಗೆ ಅಲ್ಲೇ ಕಥಾವರ್ಣನೆಮಾಡುತ್ತೇನೆ" ಎಂದನು.

ಸಾಯಂಕಾಲಕ್ಕೆ ಸ್ವಲ್ಪ ಮುಂಚಿತವಾಗಿಯೇ ತಾತ್ಯಾ ನಾಟಕಶಾಲೆಯನ್ನು ಸೇರಿದನು. ಗಂಗಾಧರರಾಯನು ಆತನಿಗೆ ಅತ್ಯಂತ ಉತ್ಸಾಹದಿಂದ ಕಥೆಯನ್ನು ಬಣ್ಣಿಸಿದನು. ಅಲ್ಲದೆ ನಟನಟಿಯರ ಗುಣಗಾನಮಾಡುತ್ತಾ ಹೇಳಿದನು : "ರಾಣಿ ವಾಸವದತ್ತೆಯ ಪಾತ್ರವನ್ನು ನುರಿತ ಕಲಾವಿದೆ ಮೋತಿಭಾಯಿಯು ವಹಿಸುವಳು. ಸಾಗರಿಕೆ ಅರ್ಥಾತ್ ರತ್ನಾವಳಿಯ ಭೂಮಿಕೆಯಲ್ಲಿ ಜ್ಯೂಹಿಯು ಇರುವಳು. ಇವಳು ಒಳ್ಳೆಯ ಗಾಯಕಿ ಮತ್ತು ನರ್ತಕಿ, ನಾಟಕಶಾಲೆಗೆ ಈಗತಾನೇ ಸೇರಿರುವಳು."

ನಾಟಕವು ಸಮಯಕ್ಕೆ ಸರಿಯಾಗಿ ಪ್ರಾರಂಭವಾಯಿತು.

ರಾಜನ ಬಳಿಯಲ್ಲಿ ಕುಳಿತಿದ್ದ ಸುಂದರನೂ, ಉತ್ಸಾಹಶಾಲಿಯೂ ಬಲಿಷ್ಠನೂ ಮತ್ತು ವಿಲಕ್ಷಣವಾದ ಟೋಪಿಯನ್ನು ಧರಿಸಿದ್ದವನೂ ಆಗಿದ್ದ ಆಗಂತುಕನನ್ನು ಎಲ್ಲಾ ನಟನಟಿಯರೂ ಬಹಳವಾಗಿ ನೋಡುತ್ತಿದ್ದರು.

ವಾಸವದತ್ತೆಯ ಪಾತ್ರವನ್ನು ಮೋತೀಬಾಯಿಯು ಚೆನ್ನಾಗಿ ನಿರ್ವಹಿಸಿದಳು. ಮತ್ತು ಸಾಗರಿಕೆ (ರತ್ನಾವಳಿ)ಯ ಪಾತ್ರವನ್ನು ಜ್ಯೂಹಿಯು ಬಹು ರಮ್ಯವಾಗಿ ಅಭಿನಯಿಸಿದಳು. ನೃತ್ಯವನ್ನೂ ಚೆನ್ನಾಗಿಮಾಡಿದಳು. ಟೋಪೆಯ ಮನಸ್ಸಿಗೆ ಬಹಳ ಉಲ್ಲಾಸವಾಯಿತು. ಆದರೆ ಆತನ ಮುಖದಿಂದ 'ವಹ್' ಅಥವಾ 'ವಹವ್ವಾ' ಎಂಬ ಯಾವವಿಧವಾದ ಸಂತೋಷ ಸೂಚನೆಯ ಮೆಚ್ಚಿಗೆಯೂ ಹೊರಬೀಳಲಿಲ್ಲ.

ನಾಟಕವು ಸಮಾಪ್ತಿಯಾದ ಮೇಲೆ ಗಂಗಾಧರರಾಯನು ಎಂದಿನಂತೆ ರಂಗ ಮಂಟಪದ ಶೃಂಗಾರ ಕೊಠಡಿಯನ್ನು ಪ್ರವೇಶಿಸಿಲಿಲ್ಲ. ಟೋಪಿಯನ್ನು ನಾಟಕವು ಹೇಗಿದ್ದಿತೆಂದು ಕೇಳಿದನು.

ಟೋಪಿಯು "ಪ್ರಭುಗಳು ಹೇಗೆ ಅಪ್ಪಣೆ ಕೊಡಿಸಿದ್ದಿರೋ ಹಾಗೆಯೇ ಇದ್ದಿತು" ಎಂದು ಉತ್ತರವಿತ್ತನು.

'ಜ್ಯೂಹಿಯ ನೃತ್ಯವು ಹೇಗಿದ್ದಿತು ?'—ರಾಜನು ಪ್ರಶ್ನಿಸಿದನು.

ಟೋಪಿಯು ಸಾವಧಾನದಿಂದ "ನಾನು ಇದಕ್ಕೆ ಮೊದಲು ನೃತ್ಯವನ್ನೇ ನೋಡಿರಲಿಲ್ಲ. ಆದುದರಿಂದ ಬಹು ವಿಲಕ್ಷಣವಾಗಿ ಕಂಡಿತು" ಎಂದನು.

ರಾಜನು ಪ್ರಸನ್ನನಾಗಿ—'ಸ್ವಲ್ಪದಿನ ಝಾನ್ಸಿಯಲ್ಲೇ ತಂಗು, ನಂತರ ನಿನಗೆ ಅನೇಕ ಒಳ್ಳೆಒಳ್ಳೆಯ ಅಭಿನಯಗಳನ್ನು ನೋಡುವ ಅವಕಾಶ ದೊರೆಯುವುದು'.

ಟೋಪಿಯು ಕೃತಜ್ಞತೆಯಿಂದ ಸಮ್ಮತಿಸಿದನು.



ಜನಿವಾರದ ಮೊಕದ್ದಮೆಯಲ್ಲಿ ಕಠೋರಪಂಥಿಗಳು ಕಿಲ್ಲೆಯಿಂದ ಬಹು ಸಂತೋಷದಿಂದ ಹೊರಬಿದ್ದರು. ತಮ್ಮ ಪಕ್ಷದ ವಿಜಯವಾರ್ತೆಯನ್ನು ಗಾಂಭೀರ್ಯ ದಿಂದ ಕೊಚ್ಚಿಕೊಳ್ಳುತ್ತಲೂ, ವಿರೋಧಿಗಳ ಸೋಲನ್ನು ಬಣ್ಣಿಸಿ ಕಿಲಕಿಲನೆ ನಗುತ್ತಲೂ ಇದ್ದರು. ಪೇಟೆಯಲ್ಲಿ ಎಲ್ಲೆಲ್ಲಿಯೂ 'ರಾಜನು ತಾಮ್ರ ಮತ್ತು ಕಬ್ಬಿಣದ ಜನಿವಾರವನ್ನು ಬಿಸಿಮಾಡಿಸಿ ಇವರಿಗೆ ತೊಡಿಸಿದ್ದೇ ಸರಿಯಾಯಿತು. ಇಲ್ಲದಿದ್ದರೆ ಈ ಜನಗಳು ಇಂದು ಯಜ್ಞೋಪವೀತವನ್ನು ಧರಿಸುತ್ತಿದ್ದರು, ನಾಳೆ ವೇದದ ಮಂತ್ರ ಗಳನ್ನು ಹೇಳಿಕೊಂಡು ಗಲ್ಲಿಯಲ್ಲೂ ಅಲೆಯುತ್ತಿದ್ದರು' ಎಂದು ಮೂದಲಿಸುತ್ತಿದ್ದರು.

ಮತ್ತೆ ಕೆಲವರು 'ಈದಿನ ಬಹಳ ಒಳ್ಳೆಯ ದಿನವೆಂದೇ ಭಾವಿಸಬೇಕು. ಬಿಟ್ಠೂರಿನ ನಂಟನು ರಾಜಸಭೆಯಲ್ಲಿಲ್ಲದಿದ್ದರೆ ರಾಜನು ತಲೆಯನ್ನೇ ಕಡಿದು ಹೊರಗೆ ಬಿಸಾಡುವಂತೆ ಅಪ್ಪಣೆಮಾಡಿಬಿಡುತ್ತಿದ್ದ' ಎಂದು ಹೇಳುತ್ತಿದ್ದರು.

ನಾರಾಯಣಶಾಸ್ತ್ರಿಯು ಈ ಎಲ್ಲಾ ಮಾತುಗಳನ್ನೂ ಕೇಳಿಕೊಂಡು ಯಾವ ಟೀಕೆಯನ್ನೂ ಮಾಡದೆ ಮನೆಯನ್ನು ಸೇರಿದನು. ಬಹಳ ಬೇಸರಗೊಂಡಿದ್ದರಿಂದ ಬಾಗಿಲು ಹಾಕಿಕೊಂಡು ಮನೆಯೊಳಗಿದ್ದ ಜಗುಲಿಯ ಮೇಲಿನ ಚಾಪೆಯ ಮೇಲೆ, ಬಹಳ ಹೊತ್ತು ಮಲಗಿದ್ದನು. ಸಾಯಂಕಾಲವಾಗಿ ಕತ್ತಲಾಯಿತು. ಆತನು ಎದ್ದು ಸ್ವಲ್ಪ ಉಪಹಾರ ಸೇವಿಸಿ ಪುನಃ ಬಂದು ಕುಳಿತನು. ಯಾರೋ ಮೆಲ್ಲನೆ ಬಂದು ಬಾಗಿಲ ಚಿಲಕವನ್ನು ಶಬ್ದಮಾಡಿದರು. ನಾರಾಯಣಶಾಸ್ತ್ರಿಯು ಬಾಗಿಲನ್ನು

ತೆರೆದನು. ಹೊಸ್ತಿಲ ಮೇಲೆ ಘೋಟಿಯು ನಿಂತಿದ್ದಳು.

ಘೋಟಿಯು ಒಳಗೆ ಬಂದಳು. ನಾರಾಯಣಶಾಸ್ತ್ರಿಯು ಬಾಗಿಲನ್ನು ಬಂಧಿಸಿ ಅಗುಳಿಯನ್ನು ಭದ್ರಪಡಿಸಿದನು: ಅವಳೂ ಜಗುಲಿಯ ಮೇಲೆ ಕುಳಿತಳು. ಶಾಸ್ತ್ರಿಯ ಬೇಸರವೂ ಪರಿಹಾರವಾಗಿದ್ದಿತು. ಘೋಟಿಯ ಓರೆನೋಟದಲ್ಲಿ ಸರಳತೆಯಿದ್ದಿತು. ಅದರ ಹಿಂದೆ ಗರ್ವವೂ ಅಡಗಿದ್ದಿತು.

ಅವಳು ತನ್ನ ಮಂಡಿಯಮೇಲೆ ತಲೆಯನ್ನಿಟ್ಟುಕೊಂಡು ಕುಳಿತಿದ್ದಳು. ಕಣ್ಣೆವೆಗಳು ಹುಬ್ಬನ್ನು ಮುಟ್ಟುತ್ತಿದ್ದವು. "ಇದೇನು ಆಶ್ಚರ್ಯ, ಜನರು ನನ್ನನ್ನೂ ತೊಂದರೆ ಪಡಿಸುತ್ತಾರೆ. ನಿಮ್ಮ ಹೆಸರನ್ನು ಹೇಳಿ ಗೇಲಿ ಮಾಡುತ್ತಾರೆ" ಎಂದಳು. ಶಾಸ್ತ್ರಿಯು ಹುಬ್ಬು ಗಂಟಿಕ್ಕಿ, "ಅವರು ಬೊಗಳಲಿ, ನೀನು ಸ್ವಲ್ಪವೂ ಅದನ್ನು ಗಮನಿಸಬೇಡ" ಎಂದನು.

ಘೋಟಿಯು "ನನಗೆ ನಿಮ್ಮದೇ ಯೋಚನೆಯಾಗಿದೆ, ನನಗೇನೂ ತೊಂದರೆಯಿಲ್ಲ. ನನ್ನ ಜಾತಿಯವರು ನನ್ನನ್ನೂ ಜಾತಿಯಿಂದ ಹೊರಗೆ ಹಾಕಲು ಪ್ರಯತ್ನಿಸುತ್ತಿದ್ದಾರೆ. ಒಳಗೊಳಗೇ ಮಾತುಕತೆಗಳು ನಡೆಯುತ್ತಿವೆ", ಎಂದಳು.

'ಹಾಗಾದರೆ ಏನು ಮಾಡುವೆ?'

'ಏನು ಮಾಡಲಿ? ನೀವೆ ಹೇಳಿ.'

'ಆಗ ನೋಡಿಕೊಳ್ಳೋಣ'.

'ಯಾವಾಗ ?'

'ಯಾವಾಗ ಈ ಮಾತು ಕತೆಗಳು ಬಹಿರಂಗವಾಗುವುವೋ ಆಗ'.

'ನನ್ನನ್ನೂ ಅವಹೇಳನಮಾಡಿ ಪೀಡಿಸುತ್ತಾರಲ್ಲ. ಅವರಿಗೇನು ಮಾಡೋಣ ?'

'ಅವರನ್ನು ನೋಡಲೇ ಬೇಡ. ಕಿವಿ ಮುಚ್ಚಿಕೊಂಡು ನಿನ್ನ ದಾರಿಹಿಡಿದು ಬಾ'.

'ಹಾಗೆ ಮಾಡಲು ಬಲ್ಲೆ. ಹಾಗೆ ಮಾಡುತ್ತಲೂ ಇದ್ದೇನೆ. ಆದರೆ ಇವರುಗಳು ಪ್ರೇಮದ ಮಾತುಗಳನ್ನಾಡುತ್ತಾರಲ್ಲ ?'

'ಆಹಾ !'

'ಹೂಂ, ಕೆಲವರು ಅಪ್ಸರೆಯೆನ್ನುತ್ತಾರೆ ಮತ್ತು ಕೆಲವರು ಅಶ್ಲೀಲ ಕಾವ್ಯಗಳನ್ನೂ ಹೇಳುತ್ತಾರೆ. ಇನ್ನೂ ಕೆಲವರು ನಿನಗಾಗಿ ಸರ್ವವನ್ನೂ ತ್ಯಜಿಸಲು ಸಿದ್ಧ ಎನ್ನುತ್ತಾರೆ.'

'ನೀನು ಅದಕ್ಕೇನು ಉತ್ತರ ಕೊಡುತ್ತೀಯಾ ?'

'ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಹೇಳಿದ್ದೇನೆ. ಕೆಲವರನ್ನು ನನಗಾಗಿ ಜನಿವಾರವನ್ನು ತ್ಯಜಿಸುವೆಯಾ ಎಂದು ಕೇಳಿದ್ದೇನೆ'

'ಅವರುಗಳು ಈ ಸವಾಲಿಗೆ ಬದಲೇನು ಹೇಳಿದರು ?'

'ಜನಿವಾರವನ್ನು ಬಿಡುತ್ತೇವೆಂದರು'

ಭೋಟಿಗೆ ಮುಗುಳ್ನಗೆ ಬಂದಿತು. ಶಾಸ್ತ್ರಿಗಾದರೋ ಪರಮ ಕ್ರೋಧ ಉಂಟಾಯಿತು. ಸ್ವಲ್ಪ ಹೊತ್ತು ಯೋಚನೆಮಾಡುತ್ತಿದ್ದು ತಲೆಕೆರೆದುಕೊಳ್ಳುತ್ತಾ ಭೋಟಿಯನ್ನು ಉದ್ದೇಶಿಸಿ ಭೋಟಿ, "ಈಮಾತೇನಾದರೂ ಬಹಿರಂಗಪಟ್ಟರೆ ನಾನು ಸಾಯುವುದಕ್ಕೂ ಸಿದ್ಧನಿದ್ದೇನೆ. ನೀನು ಹೇಳಿದುದು ನಿಜವೆ?' ಎಂದು ಕೇಳಿದನು.

ಅವಳು ದೃಢತೆಯಿಂದ ಹೇಳಿದಳು 'ಏನು ನಾನಾವಾಗಲಾದರೂ ಹುಡುಗಾಟವಾಡಿದ್ದೇನೆಯೆ?

ಶಾಸ್ತ್ರಿಯು ಶಿರವನ್ನು ತಗ್ಗಿಸಿ ಹೇಳಿದನು "ಸುಮ್ಮನೆ ಕೇಳಿದೆ. ಈಗ ವೊಂದು ಕೆಲಸ ಮಾಡಬೇಕಾಗುವುದು."

ಭೋಟಿಯು ನಿಶ್ಚಿಂತೆಯಿಂದ 'ಏನು?' ಎಂದು ಕೇಳಿದಳು.

ಶಾಸ್ತ್ರಿಯು ಪ್ರಶ್ನೆಯ ರೂಪದಲ್ಲೇ ಉತ್ತರವಿತ್ತನು "ಏನು? ಈ ಜನರ ಯಜ್ಞೋಪವೀತವನ್ನು ವಿಸರ್ಜನೆ ಮಾಡಿಸಬಲ್ಲೆಯಾ?"

ಭೋಟಿಯು ಸಹಜತೆಯಿಂದ "ಜನಿವಾರ ತೆಗೆಸಿಹಾಕಬೇಕಾದರೆ ಏನಾದರೂ ಕೊಡಲೇಬೇಕಾಗುವುದು. ದೊಡ್ಡ ದೊಡ್ಡವರೇನು ಪ್ರತಿಫಲವಿಲ್ಲದೆ ತೆಗೆದು ಬಿಡುವರೆ?" ಎಂದು ಹೇಳಿದಳು.

'ಅಂತಹವರು ಯಾರಾರಿದ್ದಾರೆ? ಅವರ ಜಾತಿ ಮತ್ತು ಹೆಸರನ್ನಾದರೂ ತಿಳಿಸು' ಎಂದು ಶಾಸ್ತ್ರಿಯು ಕೇಳಿದನು.

ಭೋಟಿಯು ಸವಿಸ್ತಾರವಾದ ತಪಶೀಲನ್ನು ಒಪ್ಪಿಸಿದಳು. ಶಾಸ್ತ್ರಿಗೆ ಕೋಪ ಬಂದು ಸ್ವಲ್ಪಹೊತ್ತು ಉರಿದು ಬೀಳುತ್ತಿದ್ದನು.

ಅದೇ ಹೊತ್ತಿಗೆ ಹೊರಗಡೆ ಯಾರೋ ಬಾಗಿಲಿನ ಚಿಲಕವನ್ನು ಹಾಕಿ ಭದ್ರಪಡಿಸಿದಂತೆ ಭಾಸವಾಯಿತು. ಭೋಟಿಯು ಚಕಿತಳಾಗಿ ಶಾಸ್ತ್ರಿಗೆ ಸಂಜ್ಞೆಮಾಡಿದಳು. ಶಾಸ್ತ್ರಿಯು ಮೆಲ್ಲನೆ ಬಾಗಿಲಿನ ಬಳಿಗೆ ಹೋಗಿ ಆಲಿಸಿ ಕೇಳಿದನು. ಹೊರಗಡೆ ಜನರು ಗುಸುಗುಸು ಎಂದು ಮಾತನಾಡುವ ಶಬ್ದವೂ, ಹೆಜ್ಜೆಗಳ ಸಪ್ಪಳವೂ ಕೇಳಿಸಿತು. ಅವನು ಭೋಟಿಗೆ ಸಂಜ್ಞೆಮಾಡಲು ಅವಳು ಒಳ ಅಂಗಳಕ್ಕೆ ಹೊರಟು ಹೋದಳು. ಶಾಸ್ತ್ರಿಯು ಒಳಗಡೆಯ ಅಗುಳಿತೆಗೆದು ಬಾಗಿಲನ್ನು ತೆರೆಯಲು ಪ್ರಯತ್ನಿಸಿದನು. ಬಾಗಿಲು ತೆರೆಯಲಿಲ್ಲ. ಹೊರಗಡೆಯಿಂದ ಬಾಗಿಲು ಭದ್ರಪಡಿಸಿದ್ದಿತು. ಅವನು ಒಳಗಿನ ಅಗುಣಿಯನ್ನು ಪುನಃ ಹಾಕಿಬಿಟ್ಟು ಅಂಗಳಕ್ಕೆ ಭೋಟಿಯ ಬಳಿಗೆಹೋಗಿ 'ಭೋಟಿ, ಈ ಜನರು ಯಾವುದೋ ಹೀನ ವೃತ್ತಿಯಲ್ಲಿ ತೊಡಗಿದ್ದಾರೆ' ಎಂದನು.

ಭೋಟಿಯು ಸ್ವಲ್ಪ ಆತುರದಿಂದ 'ನಾನು ಈಗತಾನೆ ಇಂತಹ ಸಂದರ್ಭಬಂದರೆ ಏನು ಮಾಡಬೇಕೆಂದು ಕೇಳುತ್ತಿದ್ದೆ. ಈಗ ಆ ಸಮಯ ಬಂದಿದೆ, ಏನು ಮಾಡಬೇಕೋ ಹೇಳಿ' ಎಂದಳು.

ಶಾಸ್ತ್ರಿಗೆ ಹೊರಗಡೆ ಪೊಳ್ಳು ಧೈರ್ಯ, ಒಳಗಡೆ ಗಾಬರಿ, ಎರಡೂ ಕೂಡಿ ಏನೂ ಹೇಳಲಾರದೆ ಸುಮ್ಮನಾದನು.

ಭೋಟಿಯು ಶಾಂತಿಯಿಂದ ಹೇಳಿದಳು 'ನೀವು ನನ್ನ ಯೋಚನೆಯನ್ನು ಬಿಟ್ಟು ನಿಮ್ಮ ತಲೆ ಕಾದು ಕೊಳ್ಳಿ. ಬೇಕಾದರೆ ನನ್ನನ್ನು ತುಂಡುಮಾಡಿ ಮನೆಯ ಬಾವಿಯಲ್ಲಿ ಹಾಕಿ. ಭೋಟಿಯು ಇಲ್ಲಿ ಬರಲೇ ಇಲ್ಲವೆಂದು ಹೇಳಿಬಿಡಿ!'

ಶಾಸ್ತ್ರಿಯು ದೃಢ ಸ್ವರದಿಂದ "ಏನು ಹೇಳುತ್ತಿರುವೆ ಭೋಟಿ? ನನ್ನಲ್ಲಿಯೂ ಸಾಯುವ ಕಾಲದಲ್ಲಿ ಧೈರ್ಯವನ್ನೀಯುವ ಶಕ್ತಿಯು ಸ್ವಲ್ಪ ಉಳಿದಿದೆ. ಈಗ ಎಲ್ಲವೂ ಬಯಲಿಗೆ ಬಂದಿತು. ರಾಜನ ಮುಂದೆ ಹೋಗಲೇ ಬೇಕಾಗುವುದು. ನಿನ್ನ ಕೂದಲೂ ಕೊಂಕಬಾರದೆಂಬುದು ನನ್ನ ಇಚ್ಛೆ. ಶಾಸ್ತ್ರಿಯೇ ನಿನ್ನನ್ನು ಬಲಾತ್ಕರಿಸಿದನೆಂದು ಹೇಳು. ನಾನು ಹೇಗಿದ್ದರೂ ಮರಣ ಹೊಂದುತ್ತೇನೆ. ನೀನು ಈ ವಿಧವಾಗಿ ಉಳಿದು ಕೊಳ್ಳಬಹುದು" ಎಂದನು.

ಭೋಟಿಯು ಗರ್ವದಿಂದ "ಎಂದಿಗೂ ಆಗುವುದಿಲ್ಲ. ನಮ್ಮ ಜಾತಿಯಲ್ಲೇನಾದರೂ ಸದ್ಗುಣವಿದ್ದರೆ ಅದು ನಂಬಿಕೆ ದ್ರೋಹವನ್ನೆಸಗಬಾರದೆಂಬುದು" ಎಂದಳು.

ಶಾಸ್ತ್ರಿಯು ಯೋಚನೆಯಲ್ಲಿ ಮುಳುಗಿದ್ದನು. ಸ್ವಲ್ಪ ಹೊತ್ತಿನನಂತರ "ಏನಾದರೂ ಸುಳ್ಳು ಹೇಳಬೇಕಾಗಿ ಬರಬಹುದು" ಎಂದು ಸೂಚಿಸಿದನು.

ಭೋಟಿಯು "ಸುಳ್ಳೊಂದು ಬಿಟ್ಟು ಮತ್ತೇನಾದರೂ ಹೇಳಿ, ಮಾಡಲು ಸಿದ್ಧಳಿದ್ದೇನೆ." ಎಂದಳು.

ಶಾಸ್ತ್ರಿಯು "ನೀನು, ಯಾರಾದರೂ ವೈಶ್ಯರು ಬ್ರಾಹ್ಮಣರು ಇವರುಗಳಲ್ಲಿ ತಮ್ಮ ಜನಿವಾರವನ್ನೂ ತೆಗೆದು ನಿನ್ನನ್ನು ಹಿಂಬಾಲಿಸಿದ್ದಾರೆಂದು ಅವರ ಹೆಸರುಗಳನ್ನು ಹೇಳ ಬಲ್ಲೆಯಾ?" ಎಂದು ಕೇಳಿದನು.

ಭೋಟಿ ಹೇಳಿದಳು "ಯಾರಾರು ನನ್ನ ಸಂಗವನ್ನಪೇಕ್ಷಿಸಿದ್ದಾರೋ ಅವರುಗಳ ಹೆಸರುಗಳನ್ನೂ ಹೇಳಬಲ್ಲೆ. ಇದರಲ್ಲಿ ಜನಿವಾರವೆಲ್ಲಿ ಬಂದಿತು?"

ಶಾಸ್ತ್ರಿಯು ಸಮಾಧಾನದಿಂದ ಉತ್ತರವಿತ್ತನು "ಜನಿವಾರಗಳನ್ನು ನಾನು ಕೊಡುತ್ತೇನೆ. ಅವು ಹೊಸದಾಗಿವೆ, ಅವುಗಳನ್ನೂ ಸ್ವಲ್ಪ ಕೊಳೆಮಾಡಬೇಕು. ಕೆಲವು ಉಪಯೋಗಿಸಿ ತೆಗೆದಿರುವುವೂ ಇವೆ. ಅವನ್ನೂ ಇವುಗಳ ಜೊತೆಯಲ್ಲಿ ಸೇರಿಸಬೇಕು."

ಭೋಟಿಯು "ಜಾಗ್ರತೆ ಮಾಡಿ. ಈಗ ನಾನು ಹೊರಡುತ್ತೇನೆ" ಎಂದಳು.

ಶಾಸ್ತ್ರಿಯು 'ಹೇಗೆ?' ಎಂದು ಕೇಳಿದನು.

ಭೋಟಿಯು "ನೀವು ನಿಮ್ಮ ಕೆಲಸವನ್ನು ಗಮನಿಸಿರಿ; ನಾನು ಹೇಗೆಯೋ ಹೋಗುತ್ತೇನೆ" ಎಂದಳು.

ಶಾಸ್ತ್ರಿಯು ಅನೇಕ ಹೊಸ ಮತ್ತು ಹಳೇ ಯಜ್ಞೋಪವೀತಗಳನ್ನು ಘೋಟಿಗೆ ಕೊಟ್ಟನು. ಘೋಟಿಯು 'ನೀವು ಹೊರಗಡೆಯ ದೀಪವನ್ನು ಒಳಗೆ ತೆಗೆದಿಡಿ, ಬಾಗಿಲು ತೆಗೆಸುವ ಉಪಾಯಮಾಡಿ; ನಾನು ಆ ವೇಳೆಗೆ ಮಾಳಿಗೆಯಿಂದ ಧುಮುಕಿ ಮನೆ ಸೇರುತ್ತೇನೆ. ಹೊತ್ತಾದರೆ ಈ ಜನ ಬಾಗಿಲ ಬಳಿ ನಮ್ಮ ಜಾತಿಯವರನ್ನು ಜಮಾಯಿಸಿ ಬಿಡುತ್ತಾರೆ; ಮತ್ತು ನನಗೆ ಬಹಳ ಪೆಟ್ಟು ಬೀಳುತ್ತವೆ. ಈಗ ಯಾರೂ ನನ್ನನ್ನು ಮುಟ್ಟರು' ಎಂದಳು.

ಶಾಸ್ತ್ರಿಯು ಸಮ್ಮತಿಸಿದನು. ಅವನು ಬಾಗಿಲು ತೆರೆಯುವುದಕ್ಕೆ ಪ್ರಯತ್ನಿಸಿದನು. ಆದರೆ ಅದು ತೆರೆಯಲಿಲ್ಲ. ಗುಲ್ಲೆಬ್ಬಿಸುವುದು ಸರಿಯಲ್ಲವೆಂದು ಸುಮ್ಮನಾದನು. ಘೋಟಿಯು ಮಾಳಿಗೆಯ ಮೇಲಿನಿಂದ ಧುಮುಕಿ ಪಾರಾದಳು. ಅವಳನ್ನು ಮಾರ್ಗದಲ್ಲಿ ತಡೆಯುವ ಏರ್ಪಾಡು ನಡೆದಿದ್ದಿತು.

## ೧೨

ಯಜ್ಞೋಪವೀತದ ಸಮಸ್ಯೆಯು ಬಗೆಹರಿದಿರಲಿಲ್ಲ. ಅದು ಭೀಕರ ರೂಪವನ್ನು ತಾಳಿದ್ದಿತು. ಜೀವನದ ವಿವಿಧ ಸಮಸ್ಯೆಗಳನ್ನು ಎದುರಿಸುತ್ತಾ ಬಹು ಕಷ್ಟದಿಂದ ಕಾಲವನ್ನು ತಳ್ಳುತ್ತಿದ್ದ ಅಲ್ಪ ಸಂಖ್ಯಾತರು ನಾರಾಯಣಶಾಸ್ತ್ರಿಯ ನೀಚ ವರ್ತನೆಯನ್ನು ಖಂಡಿಸುತ್ತಲೇ ಇದ್ದರು. ಆದರೆ ಯಾರ ಜೀವನದ ಅಂತರಂಗ ಬಹಿರಂಗಗಳಲ್ಲಿ ವೈವಿಧ್ಯತೆ ಇದ್ದಿತೋ; ಯಾರು ಜೀವನದ ಮುಳ್ಳಿನ ಹಾಸಿಗೆಯ ಮೇಲೆ ಗುಲಾಬಿಯ ಹೂಗಳನ್ನು ಪಸರಿಸಿ ಮೋಹವೆಂಬ ಮಧುವಿನಿಂದ ಸವಿಯಾಗಿಸಿ ಪ್ರತಿಕ್ಷಣವನ್ನೂ ಸುಖಲೋಲುಪತೆಯಿಂದ ಕಳೆಯುತ್ತಿದ್ದರೋ, ಅವರು ಎಲ್ಲರಿಗಿಂತ ನಾರಾಯಣಶಾಸ್ತ್ರಿಯ ವರ್ತನೆಯನ್ನು ಖಂಡಿಸಿದರು. ಪಾಪಿ! ಧರ್ಮದ್ರೋಹಿ! ರಾಕ್ಷಸ! ಅವನಿಗೆ ಕನಿಷ್ಠಪಕ್ಷ ಪ್ರಾಣದಂಡನೆಯನ್ನು ವಿಧಿಸಲೇಬೇಕು ಎಂದು ಮನಸ್ವೀ ಬೈದರು. ಮತ್ತೆ ಘೋಟಿಗಾದರೋ ಅವಳನ್ನು ತುಂಡುತುಂಡಾಗಿ ಕತ್ತರಿಸಿ ನಾಯಿನರಿಗಳಿಗೆ ಹಂಚಬೇಕು, ಏತಕ್ಕೆಂದರೆ ಅವಳೇ ಒಬ್ಬ ಸದ್ಬ್ರಾಹ್ಮಣನನ್ನು ಪಾಪಕೂಪಕ್ಕೆ ತಳ್ಳಿದಳು ಎಂದರು.

ಇಷ್ಟು ದೊಡ್ಡ ವಿಷಯವು ರಾಜನ ಕಿವಿಗೆ ವಿಳಂಬವಿಲ್ಲದೇ ಮುಟ್ಟಿದುದು ಅಸಂಭವವೇನಲ್ಲ. ರಾಜನು ಇದನ್ನು ಕೇಳಿ ಹಲವು ವೇಳೆ ನಗಲಾರಂಭಿಸಿದನು. ಹಲವುವೇಳೆ ಕ್ರೋಧ ಸಂತಪ್ತನಾದನು.

ಘೋಟಿ ಮತ್ತು ನಾರಾಯಣ ಶಾಸ್ತ್ರಿಯನ್ನು ರಾಜನ ಸಮ್ಮುಖಕ್ಕೆ ಕಳುಹಿಸಲಾಯಿತು. ನಾರಾಯಣ ಶಾಸ್ತ್ರಿಯು ಹಲವೇ ಘಂಟೆಗಳಲ್ಲಿ ವೃದ್ಧನಾದಂತೆ

ತೋರುತ್ತಿದ್ದನು. ಘೋಟಿಯು ಚಿಂತಾಕ್ರಾಂತಳಾಗಿದ್ದಳು. ಆದರೆ ಅವಳ ಕಾಲು ಗಳು ಎಳೆದುಕೊಂಡು ಕಿಲ್ಲೆಯತ್ತ ಸಾಗಿದವು. ಯಾವಾಗ ಗಂಗಾಧರರಾಯನ ಸಮ್ಮುಖದಲ್ಲಿ ನಿಂತಳೋ ಆಗ ದೇಹಾದ್ಯಂತವೂ ಬೆವತು ಬಿಟ್ಟಿತು.

ಈ ಸಮಸ್ಯೆಯ ತೀರ್ಪನ್ನು ಕೇಳಲು ತಾತ್ಯಾಟೋಪೆಯೂ ಅರಮನೆಗೆ ಹೋಗಿದ್ದನು.

ನಾರಾಯಣ ಶಾಸ್ತ್ರಿಯ ಶೋಚನೀಯ ಪರಿಸ್ಥಿತಿಯನ್ನು ಕಂಡು ರಾಜನಿಗೆ ನಗು ಬರಲಾರಂಭಿಸಿತು. ಮುಖದಲ್ಲಿ ಕಠೋರತೆಯನ್ನು ಪ್ರದರ್ಶಿಸುತ್ತಾ ನಗುವನ್ನು ಅಡಗಿಸಿದನು. ಪ್ರಶ್ನೋತ್ತರಗಳು ಪ್ರಾರಂಭವಾದವು.

ರಾಜ—ಏನಾಯಿತು ಶಾಸ್ತ್ರಿ?

ಶಾಸ್ತ್ರೀ—ಏನು ಆಗಬೇಕೆಂದಿದ್ದಿತೋ ಅದು ಆಗಿಹೋಯಿತು, ಸರ್ಕಾರ್.

ರಾಜ—ಅದು ಹೇಗಾಯಿತು?

ಶಾಸ್ತ್ರೀ—ಏನು ಹೇಳಲೀ ಪ್ರಭು?

ರಾಜ—ಹೇಳಲೇ ಬೇಕು. ಇಲ್ಲದಿದ್ದರೆ ನಿನಗೆ ಹೆಚ್ಚು ನಷ್ಟವಾಗುವುದು.

ಶಾಸ್ತ್ರೀ—ಏನು ಹೇಳಲಿ, ಮಹಾರಾಜ?

ರಾಜ—ಇದು ಹೇಗಾಯಿತು?

ಶಾಸ್ತ್ರೀ—ತಪಸ್ಸು ಮತ್ತು ಸಂಯಮಗಳ ಅತಿಕ್ರಮಣೆಯಿಂದ. ಶರೀರವು ಯಾವಾಗ ಇಂದ್ರಿಯ ನಿಗ್ರಹಣ ಮಾಡಲಾಗಲಿಲ್ಲವೋ ಆಗ ಯಾವುದು ಅದರ ಪಥದಲ್ಲಿ ಬಿದ್ದಿತೋ ಅದನ್ನು ಗ್ರಹಣ ಮಾಡಿತು.

ರಾಜ—ನಿನ್ನನ್ನು ಜನರು ಬಹು ದಿವಸಗಳಿಂದ ಶೃಂಗಾರ ಶಾಸ್ತ್ರಿಯೆಂದು ಕರೆಯುತ್ತಾರಲ್ಲವೆ?

ಶಾಸ್ತ್ರೀ—ಅದು ಲಾಂಛನ ಮಾತ್ರ.

ರಾಜ—ನೀನು ಕೋಕ ಶಾಸ್ತ್ರಾಧ್ಯಯನ ಮಾಡಿರುವೆಯೆಂದು ಕೇಳಿದ್ದೇನೆ.

ಶಾಸ್ತ್ರೀ—ಹೌದು, ಪ್ರಭು.

ರಾಜ—ಏತಕ್ಕಾಗಿ ಆ ಶಾಸ್ತ್ರವನ್ನು ಓದಿರುವೆ?

ಶಾಸ್ತ್ರೀ—ಆ ಶಾಸ್ತ್ರದಲ್ಲಿ ನನಗೆ ಸಂಬಂಧಪಟ್ಟ ವಿಚಾರಗಳನ್ನು ತಿಳಿದುಕೊಳ್ಳುವುದಕ್ಕೂ ಮತ್ತು ವಾತ್ಸ್ಯಾಯನನಿಂದ ಕಾಮ ಸೂತ್ರವನ್ನು ಬರೆಸಿರುವ ಈ ಶಾಸ್ತ್ರದಲ್ಲಿ ಮಹತ್ವವೇನಿದೆ ಎಂಬುದನ್ನು ತಿಳಿದುಕೊಳ್ಳುವುದಕ್ಕೂ ಅಧ್ಯಯನ ಮಾಡಿದೆ.

ರಾಜ—ಅದರಲ್ಲೇನು ಕಂಡೆ?

ಶಾಸ್ತ್ರೀ—ಪ್ರಕೃತಿಯೊಂದಿಗೆ ಜೀವನದ ಪ್ರತಿದ್ವಂದ್ವತೆಯನ್ನು.

ರಾಜ—ಮುಂದೇನು ಮಾಡುವೆ?

ಶಾಸ್ತ್ರೀ—ಇದು ನನ್ನ ಕೈಯ್ಯಲ್ಲಿಲ್ಲ.

ರಾಜ—ಮತ್ತಾರ ಕೈಯ್ಯಲ್ಲಿದೆ?

ಶಾಸ್ತ್ರೀ—ಪ್ರಭುಗಳ ಕೈಯ್ಯಲ್ಲಿದೆ.

ರಾಜನು ಸ್ವಲ್ಪ ಹೊತ್ತು ಯೋಚಿಸಲಾರಂಭಿಸಿದನು. ಕುಳಿತಿದ್ದವರ ಮೇಲೆ ದೃಷ್ಟಿಯು ಚಲಿಸಿತು. ಭೋಟಿಯ ಅವಿನಯ ನೇತ್ರಗಳನ್ನು ಈಕ್ಷಿಸಿದನು. ದೊಡ್ಡ ರೆಪ್ಪೆ, ಬಾಗಿದ ಹುಬ್ಬುಗಳನ್ನು ಕಂಡ ತರುವಾಯ ತನ್ನ ಬ್ರಾಹ್ಮಣಿಕೆಯು ನೆನಪಾಯಿತು.

ತರುವಾಯ ಹೇಳಿದನು "ಈ ಹುಡುಗಿಯು ಕೂಡಲೇ ಝಾನ್ಸಿಯನ್ನು ತ್ಯಜಿಸಬೇಕಾಗುವುದು. ಈ ತಪ್ಪಿಗಾಗಿ ದೇಶತ್ಯಾಗಮಾಡುವುದು ನಿನಗೆ ತಕ್ಕ ಶಿಕ್ಷೆ...."

ಭೋಟಿಯು ತಕ್ಷಣವೇ ಗಟ್ಟಿಯಾಗಿ "ಪ್ರಭು ಶಾಸ್ತ್ರಿಯವರದು ಯಾವ ತಪ್ಪೂ ಇಲ್ಲ. ನಾನು ಇವರನ್ನು ಹಿಂಬಾಲಿಸಿ ಇವರ ಪತನ ಹೇತುವಾದೆ, ಆದುದರಿಂದ ನನ್ನ ದಂಡನೆಯನ್ನು ಹೆಚ್ಚಿಸಿ ಇವರನ್ನು ಮನ್ನಿಸಿ. ನಾನು ಶಿರಚ್ಛೇದನ ಮಾಡಿಕೊಳ್ಳುವುದಕ್ಕೂ ಸಿದ್ಧಳಿದ್ದೇನೆ" ಎಂದು ವಿಲಪಿಸಿದಳು.

ರಾಜನಿಗಾದರೋ ರತ್ನಾವಳೀ ನಾಟಕದ ಒಂದು ದೃಶ್ಯವು ಅಪ್ರಾಸಂಗಿಕವಾಗಿಯೊದರೂ ನೆನಪಿಗೆ ಬಂದಿತು. ಭಗವಂತನು ರತ್ನಾವಳಿಯನ್ನು ಆತ್ಮಹತ್ಯದಿಂದ ಕಾಪಾಡಿದ್ದನು.

ರಾಜ—ಸ್ವಲ್ಪ ನಿಲ್ಲು. ಹುಡುಗಿ. ಶಾಸ್ತ್ರೀ ನೀನು ವಿಧಿವತ್ತಾಗಿ ಪಂಚಕವ್ಯ ಇವುಗಳನ್ನು ಸ್ವೀಕರಿಸಿ ಪ್ರಾಯಶ್ಚಿತ್ತಮಾಡಿಕೊಳ್ಳಬೇಕಾಗುವುದು.

ಶಾಸ್ತ್ರಿ—ಮತ್ತೆ ಇವಳು ದೇಶದಿಂದ ಹೊರದೂಡಲ್ಪಡುವಳೆ?

ರಾಜ—ಹೂಂ!

ನತಮಸ್ತಕನಾಗಿದ್ದ ಅಪರಾಧಿಯು ಕೆಸರಿನಿಂದ ಕಮಲವು ಉದ್ಭವಿಸುವಂತೆ ತಲೆಯೆತ್ತಿ "ಸರ್ಕಾರ್ ನಾನು ಪ್ರಾಯಶ್ಚಿತ್ತಮಾಡಿಕೊಳ್ಳುವುದಿಲ್ಲ. ನಾನಾವ ಪಾಪವನ್ನೂ ಮಾಡಿಲ್ಲ. ನನಗೆ ಪ್ರಾಯಶ್ಚಿತ್ತಮಾಡಿಕೊಳ್ಳಬೇಕೆಂಬ ಆಜ್ಞೆಯನ್ನು ದಯಪಾಲಿಸುವ ಮುನ್ನ ಸುಮಾರು ಶಹರಿನ ಅರ್ಧ ಮಂದಿ ಜನರು ಪಂಚಕವ್ಯವನ್ನು ಸ್ವೀಕರಿಸಬೇಕಾಗುವುದು" ಎಂದನು.

ರಾಜನು ಸ್ವಲ್ಪ ವಿಸ್ಮಯದಿಂದ "ಏತಕ್ಕೆ" ಎಂದು ಕೇಳಿದನು.

ಶಾಸ್ತ್ರಿಯು ಭೋಟಿಯನ್ನು "ಮಹಾಪ್ರಭುಗಳಲ್ಲಿ ಅರಿಕೆಮಾಡಿಕೊ" ಎಂದು ಆಗ್ರಹಪಡಿಸಿದನು.

ಭೋಟಿಯು ತನ್ನ ವಸ್ತ್ರಗಳಲ್ಲಿ ಅಡಗಿಸಿಟ್ಟಿದ್ದ ಮಣ್ಣಿನ ಎರಡು ಭರಣಿಗಳನ್ನು ಹೊರತೆಗೆದು ಅವುಗಳಿಂದ ಜನಿವಾರಗಳನ್ನೂ ಹೊರಕ್ಕೆ ತೆಗೆದಳು.

ರಾಜನು ಉತ್ಸುಕತೆಯಿಂದ " ಇದೇನು ಹುಡುಗಿ ? " ಎಂದು ಕೇಳಿದನು.

ಭೋಟಿಯು ಕತ್ತನ್ನು ತಗ್ಗಿಸಿ, ದೃಷ್ಟಿಯನ್ನು ಕೆಳಗೆ ಮಾಡಿ ಹೇಳಿದಳು

"ಉತ್ತಮ ಜಾತಿಯ ಜನರು ಯಾರಾರು ನನ್ನನ್ನು ಬಲೆಗೆ ಹಾಕಿಕೊಳ್ಳಬೇಕೆಂದು ಪ್ರಯತ್ನಿಸಿದರೋ ಅವರೆಲ್ಲರ ಯಜ್ಞೋಪವೀತಗಳನ್ನು ನಾನು ತೆಗೆಸಿ ಈ ಭರಣಿಯಲ್ಲಿಟ್ಟಿದ್ದೇನೆ. "

ಕೇಳುತ್ತಿದ್ದವರೆಲ್ಲಾ ತೊಡಕಿಗೆ ಬಿದ್ದರು. ರಾಜನೂ ಅನುಮಾನಪಟ್ಟನು. ನಂತರ ಇದ್ದಕ್ಕಿದ್ದಂತೆಯೇ ನಕ್ಕು ಶಾಸ್ತ್ರಿಯನ್ನು ಕುರಿತು " ನೀನು ಈ ಸ್ತ್ರೀಗೆ ಕೇವಲ ನಿನ್ನ ತನುವನ್ನು ಕೊಟ್ಟಿರುವೆಯೋ, ಇಲ್ಲ ಮನವನ್ನೂ ಕೊಟ್ಟಿರುವೆಯೊ ? " ಎಂದು ಕೇಳಿದನು.

ಶಾಸ್ತ್ರಿಯು ಏನನ್ನೂ ಉತ್ತರ ಕೊಡಲಿಲ್ಲ. ಭೋಟಿಯು ಏನನ್ನೋ ಹೇಳ ಹೋದಳು ; ಆದರೆ ರಾಜನ ಕೈ ಸಂಜ್ಞೆಯಿಂದ ಸುಮ್ಮನಾದಳು. ರಾಜನು ಶಾಸ್ತ್ರಿಯನ್ನುದ್ದೇಶಿಸಿ ಪುನಃ ಕೇಳಿದಳು " ನೀನು ಈ ಹೆಂಗಸನ್ನು ಭ್ರಷ್ಟಳೆಂದು ತಿಳಿದಿರುವೆಯೋ ಇಲ್ಲವೊ ? "

ಶಾಸ್ತ್ರಿಯು ಒಡನೆಯೆ " ಇಲ್ಲ ಪ್ರಭು " ಎಂದನು.

ಗಂಗಾಧರರಾಯನು ಸ್ವಲ್ಪ ಹೊತ್ತು ವಿಚಾರ ಮಗ್ನನಾಗಿದ್ದು ನಂತರ ಗಂಭೀರ ಸ್ವರದಿಂದ ಹೇಳಿದನು. " ಈ ಹೆಂಗಸಿನ ಕೂಡ ಮತ್ತಾರ ಸಂಸರ್ಗವೂ ಇಲ್ಲ. ಈ ಯಜ್ಞೋಪವೀತಗಳ ಕಥೆಯು ನಿನ್ನ ಕಲ್ಪನೆಯೆಂದೇ ತಿಳಿದು ಬರುತ್ತದೆ. ನಾನು ಈ ದಾರದ ಹಗ್ಗಗಳನ್ನು ಮುಟ್ಟಲು ಅಪೇಕ್ಷಿಸುವುದಿಲ್ಲ. ಹಳೆಯವುಗಳಲ್ಲಿ ಬ್ರಹ್ಮಗಂಟು ಇರುತ್ತವೆ ಮತ್ತು ಹೊಸವುಗಳಲ್ಲಿ ಇರುವುದಿಲ್ಲ. ಇವುಗಳನ್ನೂ ಪರೀಕ್ಷಿಸಿದರೆ ನೀನೆ ಇವುಗಳನ್ನು ಅವಳಿಗೆ ಕೊಟ್ಟಂತಿವೆ. ನಾನು ಈ ನಿರ್ಧಾರಕ್ಕೆ ಬಂದಿದ್ದೇನೆ."

ಶಾಸ್ತ್ರಿಯು ಬೆವರಿನಿಂದ ತೊಯ್ದು ಹೋದನು.

ರಾಜನು ಮುಂದುವರಿಸುತ್ತಾ ಹೇಳಿದನು "ನೀನು ನಿನ್ನ ಹೊರತು ಮತ್ತೆಲ್ಲರೂ ಮೂರ್ಖರೆಂದು ಭಾವಿಸಿರುವೆ. ನಿನಗೆ ಖಂಡಿತವಾಗಿ ತೀವ್ರ ದಂಡನೆ ವಿಧಿಸಬೇಕು. ಆದರೆ ನಿನ್ನ ದಂಡನೆಯನ್ನು ಹೆಚ್ಚಿಸಿದರೆ ಈ ಅಭಾಗಿನಿಯ ದಂಡದ ಭಾರವು ಹೆಚ್ಚುವುದು.

ಭೋಟಿಯು ಅಳಲಾರಂಭಿಸಿದಳು " ನಾನು ಯಾವ ಶಿಕ್ಷೆಗೂ ಸಿದ್ಧಳಾಗಿದ್ದೇನೆ " ಎಂದಳು.

ರಾಜನು ತಗ್ಗಿದ ಧ್ವನಿಯಲ್ಲಿ ಶಾಸ್ತ್ರಿಯನ್ನು ಉದ್ದೇಶಿಸಿ "ನೀನು ಪಂಚಗವ್ಯವನ್ನು ಸ್ವೀಕರಿಸಿ ಪ್ರಾಯಶ್ಚಿತ್ತಮಾಡಿಕೊಳ್ಳಲು ಸಿದ್ಧನಾಗಿಲ್ಲವಾದುದರಿಂದ ಝಾನ್ಸಿ

ಯನ್ನು ತ್ಯಜಿಸಬೇಕು" ಎಂದು ಹೇಳಿದನು.

ಶಾಸ್ತ್ರಿಯು ಸಂತುಷ್ಟನಾದನು: "ತಮ್ಮಿಂದ ಮಹದುಪಕಾರವಾಯಿತು. ನಾನು ಇವಳೊಂದಿಗೇ ಝಾನ್ಸಿಯನ್ನು ಬಿಟ್ಟು ಹೊರಡುವೆನು" ಎಂದು ಹೇಳಿದನು. ನಂತರ ಅವರಿಬ್ಬರೂ ಅಲ್ಲಿಂದ ಹೊರಟುಹೋದರು.

ರಾಜನು ತಾತ್ಯಾಟೋಪೆಯ ಕಡೆಗೆ ನೋಡಿದನು. ಅವನು ಪೂರ್ಣ ಸಂತುಷ್ಟನಂತೆ ಕಂಡನು.

ಬಹಳ ಸುಲಭದಲ್ಲಿ ಶಾಸ್ತ್ರಿಯು ತಪ್ಪಿಸಿಕೊಂಡನು. ಆ ಹುಡುಗಿ ನೀಚ ಜಾತಿಯವಳಾದರೂ ಗುಣದಲ್ಲಿ ಈ ಬ್ರಾಹ್ಮಣನಿಗಿಂತ ಅತ್ಯುತ್ತಮಳು. ದೇಶದಿಂದ ಹೊರದೂಡಿದುದು ಅವಳಿಗೆ ಸಾಕಾದಷ್ಟು ಶಿಕ್ಷೆಯಾಯಿತು. ಬಿಟ್ಟೂರಿನವರೂ ಕೂಡ ಈ ನಿರ್ಧಾರವನ್ನು ಒಪ್ಪಿಕೊಳ್ಳುವರು. ಅತಿ ಉಗ್ರವಾದ ಶಿಕ್ಷೆಯಿತ್ತರೆ ಝಾನ್ಸಿಗೆ ಹೊರದೇಶಗಳಲ್ಲಿ ಅಪಕೀರ್ತಿ ಬರುವುದು. ಸಾಲದುದಕ್ಕೆ ಆಂಗ್ಲೇಯರು ........... ...........ಮುಂದೆ ಗಂಗಾಧರರಾಯನಿಂದ ಹೆಚ್ಚು ಯೋಚನೆ ಮಾಡಲಾಗಲಿಲ್ಲ.

ಮಾರನೆಯ ದಿನವೇ ಛೋಟಿ ಮತ್ತು ನಾರಾಯಣಶಾಸ್ತ್ರಿಯು ಝಾನ್ಸಿಯನ್ನು ಬಿಟ್ಟು ಹೊರಟುಹೋದರು.

## ೧೩

ಮೋರೋಪಂತ, ಮನೂಬಾಯಿ, ಮೊದಲಾದವರಿಗೆ ತಂಗಲು ಅರಮನೆಯ ಬಳಿ ಒಂದು ಭವ್ಯ ಭವನವು ಅತಿ ತ್ವರೆಯಿಂದ ಏರ್ಪಾಡಾಯಿತು. ತಾತ್ಯಾಟೋಪೆಯು ಕೆಲವು ದಿನ ಝಾನ್ಸಿಯಲ್ಲೇ ತಂಗಿದನು. ನಿವಾಸಸ್ಥಾನವು ಏರ್ಪಾಡಾಯಿತೆಂಬ ಸಮಾಚಾರವು ಬಿಟ್ಟೂರನ್ನು ಮುಟ್ಟಿತು.

ತಾತ್ಯಾಟೋಪೆಗೆ ಬಿಟ್ಟೂರಿಗಿಂತಲೂ ಝಾನ್ಸಿಯು ಹೆಚ್ಚು ಆಕರ್ಷಣೀಯವಾಗಿದ್ದಿತು. ಆತನಿಗೆ ಝಾನ್ಸಿಯ ವಾತಾವರಣವೂ, ಅಲ್ಲಿಯ ಜನರೂ, ನಡೆನುಡಿಗಳೂ, ಪ್ರಕೃತಿ ಸೌಂದರ್ಯವೂ, ಬ್ರಹ್ಮಾವರ್ತದಲ್ಲಿನ ಗಂಗಾನದಿಯ ದಡ ಪ್ರದೇಶಗಳಿಗಿಂತ ಹೆಚ್ಚು ಮನೋಹರವಾಗಿ ತೋರಿತು. ಅವನು ಬಿಟ್ಟೂರನ್ನು ಸೇರಿದ ಕೂಡಲೇ ನಾನಾಸಾಹೇಬ್ ಮತ್ತು ರಾವ್‌ಸಾಹೇಬ್ ಝಾನ್ಸಿಯ ವಿಷಯವಾಗಿ ಪ್ರಶ್ನಿಸಲಾರಂಭಿಸಿದರು.

ನಾನಾ—ಝಾನ್ಸಿಯು ಬಿಟ್ಟೂರಿಗಿಂತ ದೊಡ್ಡ ನಗರವೆ?

ತಾತ್ಯಾ—ಸ್ವಲ್ಪ ದೊಡ್ಡದಾಗಿಯೇ ಇದೆ. ಕೋಟೆ ದೊಡ್ಡದಾಗಿದೆ; ನಗರದ ಪ್ರಾಕಾರದ ಗೋಡೆಗಳಿವೆ. ಮನೆಗಳು ಬೆಟ್ಟದ ಮೇಲೂ ಮತ್ತು ತಪ್ಪಲಲ್ಲಿಯೂ

ಇವೆ. ಆದುದರಿಂದ ಹೆಚ್ಚುಕೊಚ್ಚೆಯಿಲ್ಲ. ಮನೆಮನೆಯಲ್ಲಿಯೂ ಭಾವಿಯಿದೆ. ಊರಿನ ಮಧ್ಯದಲ್ಲಿ ಅಲ್ಲಲ್ಲೇ ಹೂವು ಹಣ್ಣುಗಳ ತೋಟಗಳಿವೆ. ಸುಂದರ ಉದ್ಯಾನ ವನಗಳೂ, ಕೆರೆ ತಟಾಕಗಳೂ, ದೇವಾಲಯಗಳೂ ,ಅಲ್ಲಲ್ಲೆ ನಗರದ ಹೊರಗೂ ಒಳಗೂ ಇವೆ. ಕೋಟೆಯು ಬೆಟ್ಟದ ಮೇಲಿದೆ. ಅದರಲ್ಲಿ ಸುಂದರವಾದ ರಾಜನ ಅರಮನೆಯೂ ಗಣಪತಿ ಮತ್ತು ಶಿವಾಲಯಗಳೂ ಇರುವುವು. ಬೆಟ್ಟದ ತಪ್ಪಲಲ್ಲಿ ಮತ್ತೊಂದು ಅರಮನೆ. ಅದರ ಹಿಂದೆ ನಾಟಕಶಾಲೆಯೂ ಇರುವುದು.

ಮನೂ—ನಾಟಕಶಾಲೆ! ಅಲ್ಲೇನು ವಿಶೇಷ ನಡೆಯುತ್ತದೆ?

ತಾತ್ಯಾ—ಅಲ್ಲಿ ಒಳ್ಳೆಯ ನಾಟಕಗಳನ್ನು ಅಭಿನಯಿಸುತ್ತಾರೆ. ಮನೋಹರ ವಾದ ಗಾಯನವಾದನಗಳೂ ನಡೆಯುವುದುಂಟು.

ಮನೂ—ನಾನು ಅವೆಲ್ಲವನ್ನೂ ನೋಡುತ್ತೇನೆ.

ತಾತ್ಯಾ—ಶ್ರೀಮಂತ ಗಂಗಾಧರರಾಯನು ನಿತ್ಯವೂ ನಾಟಕಶಾಲೆಗೆ ಹೋಗು ತ್ತಾನೆ. ನನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದನು.

ಮನೂ—ಅಲ್ಲಿ ಆನೆಗಳೆಷ್ಟಿವೆ?

ತಾತ್ಯಾ—ಹತ್ತು ಹನ್ನೆರಡಿರಬಹುದು. ಅಥವಾ ಇನ್ನೂ ಹೆಚ್ಚಾಗಿವೆಯೋ ಏನೋ.

ಮನೂ—ಕುದುರೆಗಳು?

ತಾತ್ಯಾ—ಮಹಾರಾಜನಿಗೆ ಕುದುರೆ ಸವಾರಿಯು ಅಷ್ಟು ಇಷ್ಟವಿಲ್ಲ. ಸಾಧಾರಣ ವಾಗಿ ಪಾಲಕಿಯಲ್ಲಿ ಕುಳಿತು ಹೋಗುತ್ತಾನೆ.

ನಾನಾ—ಸೇನೆಗಳೆಷ್ಟಿವೆ?

ತಾತ್ಯಾ—ಎಷ್ಟೋ ಸಾವಿರಗಳಿವೆ.

ಮನೂ—ಸರಿಯಾಗಿ ಎಣಿಸಲಿಲ್ಲವೆ?

ತಾತ್ಯಾ—ಸರಿಯಾಗಿ ಎಣಿಸಲಿಲ್ಲ. ಆದರೆ ಎಂಟು ಹತ್ತು ಸಾವಿರಗಳಿಗೆ ಕಡಿಮೆಯಿಲ್ಲ.

ಮನೂ—ಅಲ್ಲಿಯ ಜನರು ಹೇಗೆ?

ತಾತ್ಯಾ—ಜನರು ದೃಢಕಾಯರಾಗಿದ್ದಾರೆ. ಧನಧಾನ್ಯಸುಖಸಂಪತ್ತಿಯು ವಿಪುಲವಾಗಿದೆ. ಬಡಬಗ್ಗರು ಬಹಳ ಕಡಿಮೆ. ವ್ಯಾಪಾರಸಾಪಾರಗಳು ಚೆನ್ನಾಗಿವೆ. ಪೇಟೆಯಲ್ಲಿ ಜನಸಂದಣಿ ಇರುತ್ತದೆ. ಸಂಧ್ಯಾಕಾಲದಲ್ಲಿ ಪುರುಷರು ಪುಷ್ಪಮಾಲಿಕೆ ಯನ್ನು ಧರಿಸಿ ಉದ್ಯಾನವನಗಳಲ್ಲಿ ವಿಹಾರಾರ್ಥಿಗಳಾಗಿ ಸಂಚರಿಸುತ್ತಾರೆ. ಸ್ತ್ರೀಯರು ಹೊಳೆಯುವ ತಟ್ಟೆಗಳಲ್ಲಿ ಪೂಜಾಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಮಹಾ ಲಕ್ಷ್ಮಿಯ ಮಂದಿರಕ್ಕೆ ಪೂಜೆಗಾಗಿ ಹೋಗುತ್ತಾರೆ. ಸ್ತ್ರೀಪುರುಷರು ಸುಖಿಗಳಾ

ಗಿದ್ದಾರೆ.

ರಾವ್—ಮಲ್ಲಕಂಭ ಮತ್ತು ಕುಸ್ತಿಗಳ ಅಖಾಡಗಳಿವೆಯೆ?

ಮನೂ—ನಾನು ಅದನ್ನೇ ಕೇಳಬೇಕೆಂದಿದ್ದೆ.

ತಾತ್ಯಾ—ಅಖಾಡಗಳೇನೋ ಇವೆ. ಆದರೆ ಜನರು ಇದಕ್ಕಿಂತ ಸಂಗೀತ ಕಲೋಪಾಸಕರಾಗಿದ್ದಾರೆ.

ರಾವ್—ಎಂದರೆ ಜನರು ರಸ್ತೆಗಳಲ್ಲಿ ಸಂಗೀತ ಹಾಡುತ್ತಾ ಹೋಗುತ್ತಾರೆಯೆ ?

ತಾತ್ಯಾ—ಇಲ್ಲ.

ಮನೂ—ಮತ್ತೇನು ? ಗಾಯನವಾದನಗಳೆಲ್ಲವೂ ನಾಟಕ ಶಾಲೆಯಲ್ಲಿಯೊ ?

ತಾತ್ಯಾ—ಇಲ್ಲ. ಮನೆಗಳಲ್ಲಿ, ಸಮಾಜಗಳಲ್ಲಿ, ಉತ್ಸವಗಳಲ್ಲಿ ಹಾಡುತ್ತಾರೆ. ಹಾಡುವುದಕ್ಕೆ ಏನಾದರೊಂದು ನೆಪ ಹುಡುಕುತ್ತಿರುವಂತೆ ಭಾಸವಾಗುತ್ತದೆ. ಅದರಲ್ಲೂ ಸ್ತ್ರೀಯರಂತೂ ಹಾಡಲು ಯಾವುದಾದರೊಂದು ಅವಕಾಶ ಕಲ್ಪಿಸಿ ಕೊಳ್ಳುತ್ತಲೇ ಇರುತ್ತಾರೆ. ಧಾನ್ಯವನ್ನು ಬೀಸುವಾಗಲೂ, ಕುಟ್ಟುವಾಗಲೂ ಹಾಡುವುದು ಸಾಮಾನ್ಯ. ಆದರೆ ಝಾನ್ಸಿಯಲ್ಲಿ ನೀರು ತರುವುದಕ್ಕೆ ಹೋಗುವಾಗಲೂ, ನೀರು ತುಂಬುತ್ತಿರುವಾಗಲೂ ಹಾಡುತ್ತಾರೆ. ಕಡೆಗೆ ಸಾಯುವಾಗಲೂ ಹಾಡುತ್ತಾರೋ ಏನೊ ?

ಮನೂ—ಝಾನ್ಸಿಯಲ್ಲಿ ತೋಪುಗಳೆಷ್ಟಿವೆ ?

ತಾತ್ಯಾ—ದೊಡ್ಡ ತೋಪುಗಳು ನಾಲ್ಕು ಇವೆ. ಅವು ಬಹುದೊಡ್ಡವು. ಚಿಕ್ಕವು ಅನೇಕವಿವೆ.

ಮನೂ—ದುರ್ಗದಲ್ಲಿ ಕೆರೆ ಕೊಳಗಳುಂಟೆ ?

ತಾತ್ಯಾ—ಕೆರೆಯಿಲ್ಲ, ಕೊಳವೊಂದುಂಟು. ಒಂದು ದೊಡ್ಡ ಭಾವಿಯೂ ಇದೆ. ಅದರಲ್ಲಿ ನೀರು ಯಾವಾಗಲೂ ಇರುತ್ತದೆ. ಯಾರು ಆ ಭಾವಿಯನ್ನು ತೋಡಿಸಿದರೋ ನಾನರಿಯೆ.

ನಾನಾ—ಯಾರೋ ಮನುಷ್ಯರೇ ತೋಡಿಸಿರುವರು. ದೇವದಾನವರೇನು ಭಾವಿ ತೋಡಲು ಬರುವುದಿಲ್ಲವಲ್ಲ.

ಅಷ್ಟರಲ್ಲಿಯೇ ಬಾಜೀರಾಯನು ತಾತ್ಯಾಟೋಪೆಯನ್ನು ಕರೆಸಿ " ತಾತ್ಯಾ, ಆ ಹುಡುಗರೊಂದಿಗೆ ಏನು ಮಾತನಾಡುತ್ತಿದ್ದೆ ? " ಎಂದು ಕೇಳಿದನು.

ತಾತ್ಯಾ " ಝಾನ್ಸಿಯ ವಿಷಯವಾಗಿ ಕೇಳುತ್ತಿದ್ದರು, ನಾನು ಉತ್ತರ ಕೊಡುತ್ತಿದ್ದೆ" ಎಂದನು.

ಬಾಜೀ—ನಾರಾಯಣ ಶಾಸ್ತ್ರಿಯ ವಿಷಯವನ್ನು ಅವರಿಗೆ ಹೇಳಲಿಲ್ಲವಷ್ಟೆ ?

ತಾತ್ಯಾ—ಇಲ್ಲ, ಸರ್ಕಾರ್. ಅಲ್ಲದೆ ನಾಟಕಶಾಲೆ ನರ್ತನ ಗಾಯನವರ್ಗ ದವರ ವಿಷಯವನ್ನೂ ಹೇಳಲಿಲ್ಲ.

ಬಾಜೀ—ನೀನು ಮೋರೋಪಂತನ ಜೊತೆಯಲ್ಲಿ ಕೆಲವು ದಿನಗಳಮಟ್ಟಿಗೆ ಝಾನ್ಸಿಗೆ ಹೋಗಿ ಬರುವೆಯಲ್ಲವೆ ?

ತಾತ್ಯಾ—ಹೌದು ಪ್ರಭು.

ಬಾಜೀ—ಮುಹೂರ್ತವು ಸಮೀಪಿಸುತ್ತಲಿದೆ. ಶೀಘ್ರದಲ್ಲಿಯೇ ಹೊರಡ ಬೇಕಾಗುವುದು.

## ೧೪

ಸಕಾಲಕ್ಕೆ ಮೋರೋಪಂತನು ಮನೂಬಾಯಿಯೊಡನೆ ಝಾನ್ಸಿಯನ್ನು ಸೇರಿ ದನು. ತಾತ್ಯಾಟೋಪೆಯು ಅವರನ್ನು ಹಿಂಬಾಲಿಸಿದನು. ಮುಹೂರ್ತವು ನಿಶ್ಚ ಯಿಸಲ್ಪಟ್ಟಿದ್ದಿತು. ಅತಿ ಸಂಭ್ರಮದಿಂದ ಮದುವೆಯ ಏರ್ಪಾಡು ಜರುಗುತ್ತಿದ್ದಿತು.

ವರಪೂಜೆ ಮುಂತಾದ ವಿವಾಹಪೂರ್ವವಿಧಿಗಳು ಗಣಪತಿದೇವಾಲಯದಲ್ಲಿ ನೆರವೇರಿದವು. ಗಂಗಾಧರರಾಯನು ಅಶ್ವಾರೂಢನಾಗಿ ಗಣಪತಿ ಮಂದಿರಕ್ಕೆ ಬಿಜಯ ಮಾಡಿದನು. ಮನೂಬಾಯಿಯು ಆಗ ಆತನನ್ನು ಮೊದಲ ಬಾರಿಗೆ ನೋಡಿದಳು. ಆತನ ಮುಖ ಸೌಂದರ್ಯವು ಯೌವನದಲ್ಲಿದ್ದಂತೆಯೇ ಇದ್ದಿತು. ಕಣ್ಣುಗಳು ರಕ್ತ ವರ್ಣೀಯವಾಗಿದ್ದುದರಿಂದ ಹೆಚ್ಚು ಆಕರ್ಷಣೀಯವಾಗಿರದೆ ಭಯಾನಕವಾಗಿದ್ದವು. ಉದರವು ಸ್ವಲ್ಪ ಮುಂದೆ ಬಂದಿದ್ದರೂ ಬೊಜ್ಜು ಕಾಣಿಸುತ್ತಿರಲಿಲ್ಲ. ಶ್ಯಾಮಲವರ್ಣ. ಒಟ್ಟಿನಲ್ಲಿ ದೃಢಕಾಯನೂ ಬಲಿಷ್ಠನೂ ಆಗಿದ್ದನು.

ಮನೂಬಾಯಿಯ ದೃಷ್ಟಿಯು ಒಂದುಕ್ಷಣ ಆವನ ದೇಹಸೌಷ್ಠವವನ್ನು ಅವ ಲೋಕಿಸಿ ನಂತರ ಮೆರವಣಿಗೆಯತ್ತ ತಿರುಗಿತು. ಅವಳು ಮಂದಹಾಸವನ್ನು ಬೀರಿ ತನ್ನ ಒಪ್ಪಿಗೆಯನ್ನು ಸೂಚಿಸಲು ಅಕ್ಕಪಕ್ಕದಲ್ಲಿದ್ದ ಬಾಲಕಿಯರಲ್ಲಿ ಯೋಗ್ಯಳಾದವ ಳೊಬ್ಬಳನ್ನು ಮನಸ್ಸಿನಲ್ಲಿಯೇ ಆರಿಸತೊಡಗಿದಳು. 'ಈ ವೇಳೆಯಲ್ಲಿ ನಾನಾವೂ ರಾವ್‌ಸಾಹೇಬನೂ ಇದ್ದಿದ್ದರೆ ಅವರೊಂದಿಗೆ ಮನಬಿಚ್ಚಿ ಮಾತನಾಡಬಹುದಾಗಿ ತ್ತಲ್ಲಾ' ಎಂದು ಯೋಚಿಸಿದಳು.

ರಾಜಾ ಗಂಗಾಧರರಾಯನು ನಿಧಾನವಾಗಿ ಅಲ್ಲಲ್ಲೇ ನಿಂತು ಪ್ರಜೆಗಳ ವಂದನೆ ಗಳನ್ನು ಸ್ವೀಕರಿಸುತ್ತಾ, ಅವರಿಗೆ ಮರುವಂದನೆಗಳನ್ನು ಅರ್ಪಿಸುತ್ತಾ, ಮಂದಹಾಸ ಯುಕ್ತನಾಗಿ, ಗಣಪತಿ ಮಂದಿರದೆಡೆಗೆ ತೆರಳುತ್ತಿದ್ದನು.

ಇದ್ದಕ್ಕಿದ್ದಂತೆ ಮನುವಿನ ಮುಂದೆ ಸುಮಾರು ಹದಿನೈದು ವರ್ಷ ಪ್ರಾಯದ

ಮರಾಠಿ ಬಾಲಕಿಯೊಬ್ಬಳು ಬಂದು ವಂದಿಸಿದಳು. ಬಾಲಕಿಯು ಶ್ಯಾಮಲವರ್ಣೆ ಅಗಲವಾದ ಕಣ್ಣುಗಳು, ನೀಳವಾದ ನಾಸಿಕ, ಪ್ರಶಸ್ತವೂ ಉಜ್ವಲವೂ ಆದ ಹಣೆ, ಎತ್ತರವಾದ ನಿಲವನ್ನು ಹೊಂದಿದ್ದ ಮುಗ್ಧೆ, ಮನುವಿಗೆ ಇವಳನ್ನು ಎಲ್ಲೊ ನೋಡಿದ್ದಂತೆ ಭಾಸವಾಗಿ ಅವಳೊಡನೆ ಮಾತನಾಡಲು ಕಾತರಳಾದಳು.

ಮನುವು " ನೀನು ಯಾರು ? " ಎಂದು ಕೇಳಿದಳು.

ಆಕೆಯು " ನನ್ನ ಹೆಸರು ಸುಂದರಿ ; ನಿಮ್ಮ ಚರಣದಾಸಿ " ಎಂದಳು.

ಮನೂ—' ನನ್ನ ಚರಣದಾಸಿ ! ಹೇಗೆ ? '

ಸುಂದರಿ—'ತಾವು ನಮ್ಮ ಮಹಾರಾಣಿ. ನಾನು ತಮ್ಮ ದಾಸಿಯಾಗಿ ತಮ್ಮ ಸೇವೆಮಾಡಿ ನನ್ನ ಭಾಗ್ಯೋದಯ ಮಾಡಿ ಕೊಳ್ಳುತ್ತೇನೆ'.

ಮನೂ—'ಯಾರೂ ನನ್ನ ದಾಸಿಯಾಗಿರುವುದು ಬೇಡ. ನೀನು ನನ್ನ ಒಡನಾಡಿ ಯಾಗಿರು' ಎಂದು ಹೇಳಿ ಅವಳ ಕೈಹಿಡಿದು ತನ್ನ ಬಳಿಗೆ ಸೆಳೆದುಕೊಂಡಳು. ಅವಳು ಲಜ್ಜೆಯಿಂದ ಕೊಸರಿಕೊಂಡಳು. ಮನುವು ಅವಳನ್ನು ಬಿಟ್ಟು ' ಏನು, ನೀನು ನಿಜವಾಗಿಯೂ ಇರುವೆಯಾ ? ' ಎಂದು ಕೇಳಿದಳು.

ಸುಂದರಿಯು " ನಿರಂತರವೂ, ಸರ್ಕಾರ್, ನಾವು ಹದಿನಾರು ಮಂದಿ ದಾಸಿಯರು ತಮ್ಮ ಸೇವೆಯಲ್ಲಿಯೇ ಇರುತ್ತೇವೆ " ಎಂದಳು.

ಮನುವಿಗೆ ನಗುಬಂದಿತು. ಆದರೆ ಅದನ್ನು ಅಡಗಿಸಿಕೊಂಡಳು. ಗಂಗಾಧರರಾಯನ ಸವಾರಿಯು ಎದುರಿಗೇ ಇದ್ದಿತು. ಮನುವು ಮೆಲ್ಲನೆ ಸುಂದರಿಯನ್ನು ಕೇಳಿದಳು " ನೀನು ಕುದುರೆ ಸವಾರಿಯನ್ನು ಮಾಡಬಲ್ಲೆಯಾ ? "

ಸುಂದರಿಯು " ಅಲ್ಪ ಸ್ವಲ್ಪ ಗೊತ್ತಿದೆ. ಚೆನ್ನಾಗಿ ಓಡಬಲ್ಲೆನು, ಎರಡು ಮೈಲಿ ಬೇಕಾದರೂ ಆಯಾಸ ವಿಲ್ಲದೆ ಓಡಬಲ್ಲೆನು. " ಎಂದಳು.

ಮನುವು ಗಂಗಾಧರರಾಯನ ಕಡೆಗೆ ಸಂಕೇತಮಾಡಿ ತೋರಿಸಿ " ನಿಧಾನವಾಗಿ ನಡೆಯುತ್ತಿರುವ ಕುದುರೆಯನ್ನೂ ಲಗಾಮಿನಿಂದ ಬಲವಾಗಿ ಹಿಡಿದು ಎಳೆಯುತ್ತಿರುವರು " ಎಂದು ಹೇಳಿದಳು.

ಸುಂದರಿಯು ಚಕಿತಳಾಗಿ "ನಿಮಗೆ ಹೇಗೆ ತಿಳಿಯಿತು ಸರ್ಕಾರ್" ಎಂದಳು.

ಮನುವು ನಕ್ಕಳು. ಕಪೋಲಗಳು ಕೆಂಪೇರಿದವು. "ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಲು ಕಲಿತಿರುವೆಯಾ, ಸುಂದರಿ ? " ಎಂದು ಕೇಳಿದಳು.

ಸುಂದರಿಯು " ಕಲಿತಿಲ್ಲ, ಸರ್ಕಾರ್ " ಎಂದು ಉತ್ತರವಿತ್ತಳು.

ಇಷ್ಟರಲ್ಲಿ ಗಂಗಾಧರರಾಯನ ಸವಾರಿಯು ಮುಂದೆ ಸಾಗಿದ್ದಿತು. ಆ ವೇಳೆಗೆ ಮತ್ತಿಬ್ಬರು ಬಾಲಕಿಯರು ಮನುವಿನ ಬಳಿಗೆ ಬಂದರು. ಒಬ್ಬಳು ಸುಂದರಿಯ ವಯಸ್ಸಿನವಳು, ಮತ್ತೊಬ್ಬಳು ಹದಿನಾಲ್ಕು ವರ್ಷದವಳಿರಬಹುದು. ಅವರೂ ತಲೆ

ಬಾಗಿ ಮನೂಬಾಯಿಗೆ ವಂದಿಸಿದರು.

ಸುಂದರಿಯು ಅವರಿಬ್ಬರ ಪರಿಚಯಮಾಡಿಕೊಟ್ಟಳು. "ಇವಳ ಹೆಸರು ಮುಂದರಿ, ಅವಳು ಕಾಶಿ. ಇವರೂ ನನ್ನಂತೆಯೆ ನಿಮ್ಮ ದಾಸಿಯರಾಗಿರುವರು."

ಮನುವು ಯಾವ ಆಡಂಬರವೂ ಇಲ್ಲದೆ ಅವರನ್ನು "ನನ್ನ ಸ್ನೇಹಿತೆಯರಾಗಿರುವಿರಾ? ಯಾರೂ ನನ್ನ ದಾಸಿಯರಾಗಿರುವುದು ಅವಶ್ಯವಿಲ್ಲ" ಎಂದು ಹೇಳಿದಳು.

ಅವರಿಬ್ಬರೂ ಸಂತೋಷದಿಂದ ಉಬ್ಬಿಹೋದರು. ಕಾಶಿಯು ಸ್ವಲ್ಪ ಕುಳ್ಳಾದರೂ ದೃಢಕಾಯಳು, ಮುಂದರಿಯು ತೆಳುವಾಗಿ ಎತ್ತರವಾಗಿದ್ದಳು. ಇಬ್ಬರೂ ಗೌರಾಂಗಿಗಳು. ಮುಂದರಿಯ ಮುಖವು ಗುಂಡಾಗಿದ್ದು ಕಣ್ಣು ಸ್ವಲ್ಪ ಚಿಕ್ಕವಾಗಿದ್ದರೂ, ಚಂಚಲ ಮತ್ತು ತೇಜಸ್ಸಿನಿಂದ ಕೂಡಿದ್ದವು. ಕಾಶಿಯ ಚಕ್ಷುಗಳು ದೊಡ್ಡವಾಗಿದ್ದು ಸ್ಥಿರವಾಗಿದ್ದವು.

ಮನುವು ಅವರು ಮೂವರನ್ನೂ ಬೇರೆ ಬೇರೆಯಾಗಿ ಪ್ರಶ್ನಿಸಿದಳು.

'ನೀವುಗಳು ಯಾರು?'

ಮೂವರೂ 'ದಾಸಿಯರು' ಎಂದು ಉತ್ತರವಿತ್ತರು.

'ಝಾನ್ಸಿಗೆ ಯಾವಾಗ ಬಂದಿರಿ?'

'ನಮ್ಮ ಪೂರ್ವಿಕರೇ ಇಲ್ಲಿ ಬಂದು ನೆಲಸಿದ್ದರು.'

'ಝಾನ್ಸಿಯ ಸುತ್ತುಮುತ್ತಲಿನ ಪ್ರದೇಶಗಳನ್ನು ನೋಡಿರುವಿರಾ?'

'ಅಲ್ಪಸ್ವಲ್ಪ'.

'ಕುದುರೆ ಸವಾರಿ ಮಾಡಬಲ್ಲಿರಾ?'

'ಸ್ವಲ್ಪ. ಸ್ವಲ್ಪ'

'ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಬಲ್ಲಿರಾ?'

ಸುಂದರಿಯು ಇದಕ್ಕೆ ಮೊದಲೇ ಉತ್ತರವಿತ್ತಿದ್ದಳು. ಮುಂದರಿಯು ಕತ್ತಿವರಸೆಯನ್ನು ಕಲಿತಿದ್ದಳು. ಮತ್ತು ಕಾಶಿಯು ತುಪಾಕಿಯನ್ನು ಹಾರಿಸಲು ಅರಿತಿದ್ದಳು. ಈ ವಿಚಾರಗಳನ್ನು ಕೇಳಿ ಮನುವು ಬಹಳ ಸಂತೋಷಪಟ್ಟಳು.

ಮನುವು "ನಾನು ನಿಮಗೆ ಕುದುರೆ ಸವಾರಿ ಮತ್ತು ಶಸ್ತ್ರಾಸ್ತ್ರಗಳ ಪ್ರಯೋಗವನ್ನು ಕಲಿಸುತ್ತೇನೆ. ನಿಮಗೆ ಮಲ್ಲಕಂಭಸಾಧನೆಯು ಬರುವುದೆ?" ಎಂದು ಕೇಳಿದಳು.

ಅವರು ಮೂವರೂ ತಲೆ ಬಾಗಿಸಿ ಮುಗುಳ್ನಗೆಯಿಂದ ಇಲ್ಲವೆಂದರು.

ಮನುವು "ಸಂಗೀತವನ್ನು ಕಲಿತಿರುವಿರಾ?" ಎಂದು ಸೂಕ್ಷ್ಮವನ್ನು ಗ್ರಹಿಸಿ ಪ್ರಶ್ನಿಸಿದಳು.

ಸುಂದರಿಯು "ಅದನ್ನು ನಾವು ಮೂವರೂ ಕಲಿತಿದ್ದೇವೆ. ತಾವು ಯಾವಾಗ

ಕೇಳಬೇಕೆಂದು ಆಶಿಸುತ್ತೀರೋ ಆಗ ಹಾಡುತ್ತೇನೆ" ಎಂದಳು.

ಮನುವು "ಯಾವಾಗ ಇಚ್ಛೆಯಾಗುತ್ತದೋ ಆಗ ಕೇಳುತ್ತೇನೆ. ಆದರೆ ನನಗೆ ಅದರಲ್ಲಿ ಅಷ್ಟು ಆಸಕ್ತಿಯಿಲ್ಲ. ಕುದುರೆ ಸವಾರಿ, ಕುಸ್ತಿ, ಮಲ್ಲಕಂಭ, ಕತ್ತಿ ವರಸೆ, ಪುರಾಣ ಗ್ರಂಥಶ್ರವಣ ಇವುಗಳಲ್ಲಿ ಹೆಚ್ಚು ಅಭಿಲಾಷೆ" ಎಂದಳು.

"ಕುಸ್ತೀ!" ಸುಂದರಿಯು ತನ್ನ ದೊಡ್ಡ ಕಣ್ಣುಗಳನ್ನು ಹೊರಳಿಸುತ್ತಾ ಆಶ್ಚರ್ಯವನ್ನು ಪ್ರಕಟಿಸಿದಳು.

ಮನುವು ತುಟಿಯ ಮೇಲೆ ಬಂದ ಮುಗುಳ್ನಗೆಯನ್ನು ಅಡಗಿಸಿ ಕೊಂಡು "ಹೂಂ ಕುಸ್ತಿಯು, ಅದು ಬಹಳ ಅವಶ್ಯಕ. ಈಗ ಹೊತ್ತಿಲ್ಲ, ಮತ್ತಾವಾಗಲಾದರೂ ಅದರ ವಿಚಾರ ಹೇಳುತ್ತೇನೆ" ಎಂದಳು.

ಇಷ್ಟರಲ್ಲೇ ಮತ್ತೆ ಕೆಲವು ಸ್ತ್ರೀಯರು ಅವಳ ಬಳಿ ಬರಲಾರಂಭಿಸಿದರು. ಆದರೆ ಸ್ವಲ್ಪ ದೂರದಲ್ಲಿಯೇ ನಿಂತರು. ಮನುವು ಅವಳನ್ನು ಆಗ ಹತ್ತಿರ ಕರೆಯುವುದು ಉಚಿತವಲ್ಲವೆಂದು ಕೊಂಡಳು.

ಮನುವು ಮುಂದುವರಿಸುತ್ತಾ "ಪುರುಷರಿಗೆ ಪೌರುಷವನ್ನು ಕಲಿಸುವುದಕ್ಕಾಗಿ ಸ್ತ್ರೀಯರು ಕುಸ್ತಿ, ಮಲ್ಲಕಂಭ ಇವುಗಳನ್ನು ಕಲಿಯಬೇಕಾದುದು ಅವಶ್ಯಕ. ಜೋರಾಗಿ ಓಡುವುದನ್ನೂ ಕಲಿಯಬೇಕು. ಹಾಡುವುದು, ನರ್ತಿಸುವುದರಿಂದಲೂ ಸ್ತ್ರೀಯರ ಸ್ವಂತ ಸುಧಾರಣೆಯಾಗುತ್ತದೆ. ಆದರೆ ಮೋಹ ಪ್ರಚೋದನೆಯೊಂದು ಅವರ ಕರ್ತವ್ಯವಲ್ಲ" ಎಂದು ಹೇಳಿದಳು.

ಹದಿನಾಲ್ಕು ವರ್ಷದ ಮನುವು ತನಗಿಂತ ಹಿರಿಯರಾದ ಬಾಲಕಿಯರಲ್ಲಿ ಹೇಳಿದ ಮಾತನ್ನು ಹತ್ತಿರ ನಿಂತಿದ್ದ ಸ್ತ್ರೀಯರೂ ಕೇಳಿದರು.

ಸುಂದರಿ, ಮುಂದರಿ ಮತ್ತು ಕಾಶಿ ಇವರುಗಳು ಈ ಮಾತುಗಳನ್ನು ಕೇಳಿ ಸ್ವಲ್ಪ ಲಜ್ಜಿತರಾದರು. ಅವರ ಹುಸಿನಗೆಯು ಮಾಯವಾಯಿತು. ಆದರೆ ಮನುವು ಮಾತ್ರ ಇನ್ನೂ ಮಂದಹಾಸ ಬೀರುತ್ತಲೇ ಇದ್ದಳು. ಆ ಮಂದಹಾಸವು ಆ ಸ್ತ್ರೀಯರಿಗೂ, ಬಾಲಕಿಯರಿಗೂ ಜೀವಧಾರೆಯನ್ನು ಕೊಡುವಂತಿದ್ದಿತು. ಆ ಬಾಲಕಿಯರು ಕಚ್ಚಿದ್ದ ನಾಲಗೆಯು ಪುನಃ ಚಲಿಸಲಾರಂಭಿಸಿತು. ಮನುವು ಇತರ ಬಾಲಕಿಯರನ್ನೂ ಮತ್ತು ಸ್ತ್ರೀಯರನ್ನೂ ತನ್ನ ಬಳಿಗೆ ಕರೆದಳು. ಈ ಸ್ತ್ರೀಯರು ಆ ಮೂವರು ಬಾಲಕಿಯರಿಗಿಂತ ಹೆಚ್ಚು ಅಪ್ರತಿಭರಾಗಿದ್ದರು.

ಮನುವು ಅವರುಗಳನ್ನೂ ತಮ್ಮ ಮನಬಿಚ್ಚಿ ಮಾತನಾಡುವಂತೆ ಉತ್ತೇಜಿಸಿದಳು. ಸ್ತ್ರೀಯರು ತಮ್ಮ ಗಾಯನವಾದನಗಳನ್ನು ಕುರಿತು ಪ್ರಸ್ತಾಪ ಮಾಡಿ ತಮ್ಮ ಹರ್ಷವನ್ನು ಪ್ರದರ್ಶಿಸಿದರು. ಇವುಗಳನ್ನು ಮನುವು ಯಾವ ರೀತಿಯ ವಿಶೇಷ ಆಕರ್ಷಣೆಯೂ ಇಲ್ಲದೆ ಕೇಳಿಧಳು.

ಆ ಸ್ತ್ರೀಯರ ಜೊತೆಗಿದ್ದ ಇತರ ಬಾಲಿಕೆಯರ ವಿಚಾರವಾಗಿ ಮನುವು ಪ್ರಶ್ನಿಸಿದಳು. ಅವರೆಲ್ಲರೂ ಮನುವಿನ ಬಳಿ ದಾಸಿಯರಂತೆ ಇರಲು ನಿಯೋಗಿಸಲ್ಪಟ್ಟಿದ್ದರು. ವಿವಾಹ ಮುಹೂರ್ತವು ಸಮೀಪಿಸುತ್ತಿದ್ದಿತು. ಅದರ ನಂತರ ಅವರುಗಳು ಮನುವಿನ ಬಳಿಯೇ ಇರಬೇಕಾಗಿದ್ದಿತು.

ಇವರುಗಳು ಬ್ರಾಹ್ಮಣೇತರ ಜಾತಿಗಳಿಂದ ರೂಪ ರಸ ಲಾವಣ್ಯ ಇವುಗಳನ್ನು ಚೆನ್ನಾಗಿ ವೀಕ್ಷಿಸಿ ಆರಿಸಲ್ಪಟ್ಟು ಆಜನ್ಮ ತಮ್ಮ ರಾಣಿಯಬಳಿ ಕುಮಾರಿಯರಾಗಿರಬೇಕಾಗಿದ್ದಿತು. ಈರೀತಿ, ದಾಸದಾಸಿಯರನ್ನು ವಿವಾಹದ ಬಳುವಳಿಯಲ್ಲಿ ಕೊಡುವುದು ಮಹಾರಾಷ್ಟ್ರದ ಪದ್ಧತಿಯಾಗಿರಲಿಲ್ಲ. ಆದರೆ ಬಹುಶಃ ರಾಜಪುತಾನದ ರಾಜವಂಶದವರಿಂದ ಅನುಕರಿಸಲ್ಪಟ್ಟಿದ್ದಿರಬಹುದು. ಪ್ರಾಯಶಃ ಇದು ಭಿಕ್ಷುಣಿ ಮತ್ತು ದೇವದಾಸಿ ಪದ್ಧತಿಯಿಂದ ಪ್ರಾರಂಭಿಸಿರಬಹುದು. ಈ ದಾಸಿಯರ ಜೀವನವು ಎಷ್ಟು ಹರ್ಷಕುತೂಹಲಗಳಿಂದ ತುಂಬಿರಬಹುದೋ ಅಥವಾ ಅದೆಷ್ಟು ದುಃಖಾಕ್ರಾಂತವಾಗಿರಬಹುದೋ ಅದು ಅವರವರ ಕಲ್ಪನೆಗೇ ಸೇರಿದುದು. ಇವರ ಜನ್ಮದಾತರೂ ಕೂಡ ಪ್ರಾಯಶಃ ಹಣದಾಸೆಗಾಗಿ ಅವರನ್ನು ಅರಮನೆಯ ಕೆಲಸಕ್ಕೆ ಒಪ್ಪಿಸುತ್ತಿದ್ದರು. ಅಥವಾ ಜೀವನದ ಸ್ವಾಭಾವಿಕ ಮಾರ್ಗವಾದ ವಿವಾಹವನ್ನು ಅನುಸರಿಸಿ ಅರಮನೆಯನ್ನು ತ್ಯಜಿಸುತ್ತಿದ್ದರು.

ಮನುವು ದಾಸಿಯರ ಈ ಚಿತ್ರವನ್ನು ಮನಸ್ಸಿನಲ್ಲಿಯೇ ಕಲ್ಪಿಸಿಕೊಂಡಳು. ಅವಳು ತನಗೆ ಶೋಭೆಯನ್ನೀಯುತ್ತಿದ್ದ ಆ ಮುಗುಳ್ನಗೆಯನ್ನು ನಕ್ಕು "ನಾನು ನಿಮ್ಮನ್ನು ದಾಸಿಯರನ್ನಾಗಿಟ್ಟು ಕೊಳ್ಳುವುದಿಲ್ಲ. ನೀವುಗಳೆಲ್ಲರೂ ನನ್ನ ಸಖಿಯರಾಗಿರಿ. ಆದರೆ ಅದಕ್ಕೆ ಒಂದೇ ಒಂದು ಶರತ್ತಿದೆ." ಎಂದು ಹೇಳಿ ತನ್ನ ವಿಶಾಲ ನೇತ್ರಗಳಿಂದ ಅವರ ಮೇಲೆ ದೃಷ್ಟಿ ಬೀರಿ "ಅದೇನೆಂದು ನಿಮಗೆ ಗೊತ್ತೆ?" ಎಂದು ಕೇಳಿದಳು.

ಅವರೆಲ್ಲರೂ ಗೊತ್ತಿಲ್ಲವೆಂದು ತಲೆಯಾಡಿಸಿದರು.

ಮನುವು ಹೇಳಿದಳು "ನನ್ನ ಜೊತೆಯಲ್ಲಿರಲು ಆಶಿಸುವವರು ಚೆನ್ನಾಗಿ ಕುದುರೆ ಸವಾರಿ, ಕತ್ತಿ, ಭರ್ಜಿ, ಚೂರಿ ಇತ್ಯಾದಿಗಳನ್ನು ಉತ್ತಮ ರೀತಿಯಲ್ಲಿ ಉಪಯೋಗಿಸುವುದು ಇವುಗಳನ್ನು ಕಲಿಯ ಬೇಕಾಗುವುದು. ಎರಡು ಕೈಗಳಿಂದಲೂ ಶಸ್ತ್ರಾಸ್ತ್ರಗಳನ್ನು ಒಂದೇ ಸಮನೆ ಪ್ರಯೋಗಿಸುವುದನ್ನು ಕಲಿತರೆ ಇನ್ನೂ ಮೇಲು."

ಪುರುಷರಂತೆ ಕೆಲಸ ಕಲಿಯುವ ಮಾತನ್ನು ಕೇಳುತ್ತಲೇ ಲಜ್ಜೆಯಿಂದ ಅವರ ಕಪೋಲಗಳು ಕೆಂಪೇರಿದವು. ಆದರೆ ಮನಸ್ಸಿನ ಆಶೆ ಉತ್ಸಾಹಗಳು ಲಜ್ಜೆಯನ್ನು ಹಿಂದೂಡಿದವು.

ಕಾಶಿಯು ಸ್ಥಿರ ದೃಷ್ಟಿ ಮತ್ತು ಗಂಭೀರ ಸ್ವರಗಳಿಂದ. "ನಮ್ಮಗಳಿಗೆ ಏನೇನು

ಕಲಿಸಲ್ಪಟ್ಟಿದೆಯೋ ಅದನ್ನು ಮಾತ್ರ ಕಲಿತಿದ್ದೇವೆ. ತಾವು ಹೇಳಿ ಕೊಡುವುದನ್ನು ಮನಸಾರ ಕಲಿಯುತ್ತೇವೆ. ಆದರೆ ಮಲ್ಲಕಂಭವನ್ನು ಯಾರು ಕಲಿಸುತ್ತಾರೆ" ಎಂದಳು.

"ನನಗೆ ತಿಳಿದಷ್ಟು ನಾನು ಕಲಿಸುತ್ತೇನೆ. ಬಾಕಿ ಏನಿದ್ದರೂ ಬಿಟ್ಟೂರಿನ ಪ್ರಸಿದ್ಧ ಆಚಾರ್ಯ ಬಾಲಗುರುವು ಕಲಿಸುತ್ತಾರೆ. ಅವರನ್ನು ಇಲ್ಲಿಗೆ ಬರಮಾಡು ವೆನು." ಎಂದು ಮನುವು ಕೂಡಲೆ ಪ್ರತ್ಯುತ್ತರವನ್ನು ಇತ್ತಳು.

ಬಾಲಗುರುವಿನ ಹೆಸರನ್ನು ಕೇಳುತ್ತಲೇ ಬಾಲಕಿಯರು ನಾಚಿದರು. ಮತ್ತು ಸ್ತ್ರೀಯರು ನಗಲಾರಂಭಿಸಿದರು. ಆ ನಗುವನ್ನು ಕಂಡು ಮನುವಿಗೆ ಕ್ಷೋಭೆಯುಂಟಾ ಯಿತು. ಆದರೆ ಅದನ್ನು ಒಡನೆಯೇ ದಮನ ಮಾಡಿದಳು.

ಪುನಃ ನಸುನಕ್ಕು "ಬಾಲಗುರು ದೇವರಂತಹ ಮನುಷ್ಯರು. ಹಾಗಲ್ಲದಿದ್ದರೂ ನಿಮಗೇಕೆ ಹೆದರಿಕೆ? ಸ್ತ್ರೀಯು ದೃಢಮನಸ್ಸಿನವಳಾದರೆ ಪ್ರಪಂಚದಲ್ಲಿ ಅವಳ ಮಾನ ಭಂಗ ಮಾಡುವಂತಹ ಪುರುಷನೇ ಇರಲಾರನು. ಬಾಲಗುರುವಿನೊಡನೆ ಕುಸ್ತಿ ಮಾಡುವ ಪ್ರಸಂಗವು ಬರುವುದಿಲ್ಲ. ಅವರು ಮುಖೇನ ವಿಶದ ಪಡಿಸುವರು. ಮತ್ತು ನಾನು ಮಟ್ಟಿಯಲ್ಲಿಳಿದು ನಿಮಗೆ ಕಲಿಸಿಕೊಡುವೆನು" ಎಂದಳು.

ಗಣಪತಿಯ ಮಂದಿರವು ಹತ್ತಿರದಲ್ಲೇ ಇದ್ದಿತು. ಮಂಗಳವಾದ್ಯಗಳು ಮೊಳಗುತ್ತಿದ್ದುವು. ಆಗಾಗ ಅದರ ಮಧುರ ಸ್ವರಗಳು ಕೇಳಿಬರುತ್ತಿದ್ದುವು. ಸ್ತ್ರೀಯರು ತಮ್ಮ ಸ್ವಭಾವ ಸಿದ್ಧವಾದ ಆದರದಿಂದ ಮನುವಿನೊಡನೆ ಶೃಂಗಾರ ರಸದ ಮಾತುಗಳನ್ನಾಡಲು ಬಂದಿದ್ದರು. ಮನುವಿನ ಮನಸ್ಸಿನ ಧಾರೆಯು ಗಂಗಾಧರ ರಾಯನ ಸವಾರಿ, ವಾದ್ಯಗಳ ನಿನಾದ ಮತ್ತು ಝಾನ್ಸಿಯ ನಿವಾಸಿಗಳ ಹರ್ಷೋನ್ಮಾದ ಗಳೊಂದಿಗೆ ಸಂಘರ್ಷಿಸಿ ಬೇರೆಲ್ಲಿಗೋ ಚಲಿಸಿದ್ದಿತು.

ಉತ್ಸವಕ್ಕೆ ಬಂದಿದ್ದ ಎಲ್ಲಾ ಸ್ತ್ರೀಯರೂ, ಬಾಲಕಿಯರೂ ತಮ್ಮ ತಮ್ಮ ಅತ್ಯುತ್ತಮ ವಸ್ತ್ರಾಭರಣಗಳನ್ನು ಧರಿಸಿದ್ದರು. ಎಲ್ಲರೂ ತಲೆ ಬಾಚಿಕೊಂಡು ಸುಗಂಧಿತ ಪುಷ್ಪಗಳನ್ನು ಕೇಶಧಾಮಗಳಲ್ಲಿ ಮುಡಿದಿದ್ದರು. ಮನುವಿನ ತುರುಬಿ ನಲ್ಲಿಯೂ ಪುಷ್ಪಗುಚ್ಛಗಳಿದ್ದವು. ಇದನ್ನು ನೋಡಿ ಮನುವು ನಗುತ್ತಾ "ನೀವು ಗಳು ಕುಸ್ತಿ ಕಲಿಯಲು ಹೀಗೆಯೇ ಆಖಾಡಕ್ಕೆ ಈಗಲೆ ಇಳಿದರೆ ಏನಾಗುತ್ತದೆ?" ಎಂದು ಕೇಳಿದಳು.

ಸುಂದರಿಯು ನಗುತ್ತಾ "ಈ ಪುಷ್ಪಗಳಿಂದ ಅಖಾಡವೆಲ್ಲವೂ ತುಂಬಿಹೋಗು ತ್ತದೆ" ಎಂದಳು.

ಮನುವು ಹಾಸ್ಯವನ್ನು ಮುಂಬರಿಸುತ್ತಾ "ಮತ್ತು ನಿಮ್ಮ ಕೂದಲಿನಲ್ಲಿ ಅಖಾಡದ ಮಣ್ಣು ತುಂಭಿರುತ್ತದೆ" ಎಂದಳು.

ಎಲ್ಲರೂ ಗಹಗಹಿಸಿ ನಕ್ಕರು.

ಮನುವು ಮುಂದುವರಿಸುತ್ತಾ "ಆದರೆ ಅಮಣ್ಣು ನಿಮ್ಮ ಕೇಶಧಾಮದಲ್ಲಿ ಈ ಪುಷ್ಪಗಳಿಗಿಂತ ಹೆಚ್ಚು ಮನೋಹರವಾಗಿ ಕಾಣುವುದು" ಎಂದಳು

ಸುಂದರಿಯು "ಸರ್ಕಾರ್, ಕೇಶದ ಶೋಭೆಯು ಮಣ್ಣಿನಿಂದಲೆ!" ಎಂದು ಕೇಳಿದಳು.

ಮನುವು ಸುಂದರಿಯ ಭುಜವನ್ನು ಅಳ್ಳಾಡಿಸುತಾ "ಪುಷ್ಪವು ಎಲ್ಲಿಂದ ಬಂದಿತು? ಎಲ್ಲಿಗೆ ಹೋಗುತ್ತದೆ? ಇದೇನು ಮಣ್ಣಿಗಿಂತ ಹೆಚ್ಚೆ?"

ಮನುವಿನ ಮಾತಿನಲ್ಲಿ ಅಡಕವಾಗಿದ್ದ ಸಂಸಾರದ ಅಸ್ಥಿರತ್ವದ ಮಾತನ್ನು ಕೇಳಿ ಎಲ್ಲರೂ ಚಕಿತರಾದರು.

ಮನುವಿಗೆ ಒಡನೆಯೇ ಅರ್ಥವಾಯಿತು: "ಇಲ್ಲ ಹೂವ್ವಿನಿಂದ ಅವಶ್ಯಕವಾಗಿ ಅಲಂಕಾರಮಾಡಿಕೊಳ್ಳಿ, ಆದರೆ ಅದು ಮಣ್ಣಿಗೆ ಸೇರಿದುದೆಂಬುದನ್ನು ಮಾತ್ರ ಮರೆಯ ಬೇಡಿ" ಎಂದಳು.

ಈ ವೈರಾಗ್ಯದ ಮಾತು ಸ್ತ್ರೀಯರೆಲ್ಲರನ್ನೂ ಅಪ್ರತಿಭರನ್ನಾಗಿ ಮಾಡಿತು. ಅವರೆಲ್ಲರೂ "ಹೂ, ಹೂಂ" ಎಂದು ಗಟ್ಟಿಯಾಗಿ ಸಮ್ಮತಿ ಸೂಚಿಸಿದರು. ಅವರ ಮುಖ ಚಹರೆಯಿಂದ ಅವರ ಆನಂದವೆಲ್ಲವೂ ಮಾಯವಾಗಿದ್ದಂತೆ ತೋರಿತು. ಮನುವು ತಮ್ಮ ಪುಷ್ಪಗಳನ್ನು ಧರಿಸುವ ವಿಚಾರವನ್ನು ಈರೀತಿ ಭರ್ತ್ಸನೆಮಾಡಿ ತಮ್ಮ ಆದರ್ಶಕ್ಕೆ ಅಪಮಾನ ಮಾಡಿದಂತೆ ಭಾವಿಸಿದರು.

ಆ ಸ್ತ್ರೀಯರನ್ನು ಕುರಿತು ಮನುವು "ನೀವು ಗಣಪತಿ ಮಂದಿರದಲ್ಲಿ ಏನು ನೆರವೇರುತ್ತಿದೆಯೋ ಅದನ್ನು ಹೋಗಿ ನೋಡಿ. ನಾನು ಅದುವರೆಗೆ ಈ ಮೂವರು ಬಾಲಕಿಯರೊಂದಿಗೆ ಮಾತನಾಡುತ್ತಿರುತ್ತೇನೆ. ಆದರೆ ಈ ನಿಮ್ಮ ಹೂವ್ವುಗಳನ್ನು ಮಾತ್ರ ತೆಗೆಯಬೇಡಿ. ಅವು ನಿಮ್ಮ ಕೇಶಗಳಲ್ಲಿ ಬಹು ಚೆನ್ನಾಗಿ ಕಾಣಿಸುತ್ತವೆ." ಎಂದಳು.

ಈ ಮಾತುಗಳನ್ನು ಕೇಳಿ, ಅವರು ಪ್ರಸನ್ನರಾಗಿ ಹೊರಟುಹೋದರು. ಸುಂದರಿ, ಮುಂದರಿ ಮತ್ತು ಕಾಶಿ ಮಾತ್ರ ಅವಳೊಂದಿಗೆ ನಿಂತರು.

ಮನುವು "ನಾನು ಝೂನ್ಸಿಯವರು ಪುಷ್ಪಗಳನ್ನು ಬಹಳವಾಗಿ ಪ್ರೀತಿಸುತ್ತಾರೆಂದು ಕೇಳಿದ್ದೇನೆ, ನನಗೂ ಅವು ಚೆನ್ನಾಗಿ ಕಾಣುತ್ತವೆ. ಆದರೆ ಬಹಳ ತೆಳ್ಳಗೆ ಬಲಹೀನವಾಗಿರುವ ಕುದುರೆಗೆ ಚಿನ್ನ ಬೆಳ್ಳಿಯ ಕಡಿವಾಣ ಜೀನುಗಳನ್ನು ಹಾಕಿದರೆ ಚೆನ್ನಾಗಿ ಒಪ್ಪುತ್ತದೆಯೊ?" ಎಂದಳು.

ಸುಂದರಿಯು ಉತ್ಸಾಹದಿಂದ "ಪ್ರಭು, ಈಗ ನನಗೆ ನಿಮ್ಮ ಮಾತಿನ ಅರ್ಥವಾಯಿತು" ಎಂದಳು.

## ೧೫

ವಿವಾಹದ ಪೂರ್ವವಿಧಿಗಳಾದ ವರಪೂಜೆ ಮುಂತಾದವುಗಳೆಲ್ಲ ನೆರವೇರಿದ ಮೇಲೆ ಗಣೇಶನ ಮಂದಿರದಲ್ಲಿ ಗಾಯನ, ನರ್ತನ ಮುಂತಾದವು ನಡೆದವು. ವಿವಾಹ ಮುಹೂರ್ತವೂ ಬಂದಿತು.

ವಿವಾಹದ ಸಂಭ್ರಮದಲ್ಲಿ ಭಾಗವಹಿಸಲು ಅಕ್ಕ ಪಕ್ಕ ದೇಶಗಳ ರಾಜಮಹಾರಾಜರುಗಳು ಬಂದು ಸೇರುತ್ತಿದ್ದರು. ಅವರುಗಳಲ್ಲಿ ದತಿಯಾವಿನ ರಾಜವಿಜಯ ಬಹದ್ದೂರ್ ಸಿಂಹನು ಬಹಳ ಉತ್ಸಾಹದಲ್ಲಿದ್ದನು. ಬಿಡದಿಯ ಮನೆಯಲ್ಲಿ ಬೀಗರು ತಂಗಲು ಏರ್ಪಾಡುಗಳಾಗಿದ್ದವು. ಅಲ್ಲಿ ಸಂಗೀತ ನಾಟ್ಯಗಳು ನಡೆಯುತ್ತಿದ್ದವು. ಮುಂದಿನ ಕೋಣೆಯಲ್ಲಿ ಮೋತೀಬಾಯಿ, ಜ್ಯೂಹಿಬಾಯಿ ಮುಂತಾದ ಅಭಿನೇತ್ರಿಗಳು ವಸ್ತ್ರಾಲಂಕಾರ ಭೂಷಿತರಾಗಿ, ಪುಷ್ಪಗಳನ್ನು ಧರಿಸಿ ತೆರೆಯಹಿಂದೆ ಕುಳಿತಿದ್ದರು. ಹೊರಗಡೆ ದುರ್ಗಾಬಾಯಿಯ ನೃತ್ಯವು, ಆ ಕಾಲದ ಪ್ರಸಿದ್ಧ ಗಾಯಕ ಧ್ರುವಪದದ ಮೃಗಲಖಾನನ ಗಾಯನ ದೊಂದಿಗೆ ನಡೆಯುತ್ತಿದ್ದಿತು. ಜನರು ಮೃಗಲಖಾನನ ಧ್ರುವಪದ ಮತ್ತು ಆಲಾಪಗಳಿಗೆ ಆಗಿಂದಾಗ್ಯೆ ತಲೆದೂಗಿ "ಭೇಷ್, ಭೇಷ್" ಎಂದು ಮೆಚ್ಚುಗೆಯನ್ನು ಸೂಚಿಸುತ್ತಲೂ, ಆದರೆ ಅದಕ್ಕಿಂತ ದುರ್ಗಾಬಾಯಿಯ ನೃತ್ಯವನ್ನು ನೋಡಲು ಅತ್ಯಂತ ಉತ್ಸುಕತೆಯನ್ನು ತೋರ್ಪಡಿಸುತ್ತಲೂ ಇದ್ದರು. ಆದುದರಿಂದ ಮೃಗಲಖಾನನು ತನ್ನ ತಂಬೂರಿಯನ್ನು ಕೆಳಗಿಟ್ಟು ದುರ್ಗಾಬಾಯಿಯನ್ನು ನಿಲ್ಲುವಂತೆ ಸಂಕೇತ ಮಾಡಿದನು. ಸನ್ನಿಧಿನಲ್ಲಿ ವಿಜಯ ಬಹದ್ದೂರ್ ಮಹೀಪಾಲನು ಮಂಡಿಸಿದ್ದನು. ಆತನು ಉತ್ತಮ ದರ್ಜೆಯ ನೃತ್ಯಗಾಯನಗಳ ರಸಿಕ ಶಿರೋಮಣಿ. ಆ ವೇಳೆಗೆ ಸರದಾರನೊಬ್ಬನು ಬೆಳ್ಳಿಯ ತಟ್ಟೆಯಲ್ಲಿ ಸುಗಂಧ ಪೂರಿತ ಸುತ್ತು ವೀಳ್ಯವನ್ನು ತಂದು ಒಪ್ಪಿಸಿ ಲಗ್ನ ಸಮಾರಂಭಗಳು ಪ್ರಾರಂಭಿಸಲಿವೆ ಎಂದು ಅರಿಕೆ ಮಾಡಿದನು. ಅದೇ ಸಮಯದಲ್ಲಿ ಒಳಗಡೆಯೊಂದು ಘಟನೆಯು ಏರ್ಪಟ್ಟಿತು.

ಪುರೋಹಿತನು ವರನ ಅಂಗ ವಸ್ತ್ರವನ್ನೂ ವಧುವಿನ ಸೀರೆಯ ಸೆರಗಿನ ಕೊನೆಯನ್ನೂ ಗಂಟು ಹಾಕುವುದಕ್ಕಾಗಿ ಕೈಯ್ಯಲ್ಲಿ ಹಿಡಿದು ಕೊಂಡನು. ಆತನು ವಯೋವೃದ್ಧನಾದುದರಿಂದ ಆತನ ಕೈ ನಡುಗುತ್ತಿದ್ದಿತು. ಗಂಟುಹಾಕಲು ಕಾಲ ವಿಳಂಬವಾಯಿತು ಮತ್ತು ಗಂಟೂ ಸರಿಯಾಗಿ ಬೀಳುತ್ತಿರಲಿಲ್ಲ. ಕೈ ಅಡಿಗಡಿಗೂ ನಡುಗುತ್ತಿದ್ದಿತು.

ಮನುವು "ನಾನೇ ಏತಕ್ಕೆ ಈ ಗಂಟನ್ನು ಹಾಕಬಾರದು" ಎಂದು ಯೋಚಿಸಿದಳು.

ಆದರೆ ಅವಳು ಆ ಯೋಚನೆಯನ್ನು ತಹಬಂದಿಗೆ ತೆಗೆದುಕೊಂಡಳು. ಗಂಟೆ

ನ್ನೇನೋ ಪುರೋಹಿತನು ಕಟ್ಟಿದನು, ಆದರೆ ಅವನ ಕಂಪಿಸುವ ಕೈಗಳು ಅದನ್ನು ಬಿಗಿದು ಕಟ್ಟುವುದರಲ್ಲಿ ಕಾಲವಿಳಂಬವೇನೋ ಆಯಿತು. ಮನುವಿಗೆ ಇನ್ನು ತಡೆಯಲಾಗಲಿಲ್ಲ. ಅವಳು ದೃಢಸ್ವರದಿಂದ ಸ್ವಲ್ಪವೂ ನಗದೆ "ಎಂದಿಗೂ ಬಿಚ್ಚಿಹೋಗದಂತೆ ಕಟ್ಟಿ" ಎಂದಳು.

ಗಂಗಾಧರರಾಯನಿಗೆ ಸ್ವಲ್ಪ ಸಿಟ್ಟು ಬಂದಿತು. ಮೋರೋಪಂತನು ಮನಸ್ಸಿನಲ್ಲಿಯೇ ಕ್ಷುಬ್ಧನಾಗಿ ತುಟಿಯನ್ನು ಕಚ್ಚಿದನು. ಆದರೆ ಪುರೋಹಿತನು ಕಿಲಕಿಲನೆ ನಗಲಾರಂಭಿಸಿದನು. ಅವರ ಬಳಿಯಲ್ಲಿದ್ದ ಸ್ತ್ರೀಪುರುಷರೆಲ್ಲರೂ ನಕ್ಕರು. ಮನುವು ಪುಳಕಿತಳಾಗಿ ತಲೆ ತಗ್ಗಿಸಿ ಹುಸಿನಗು ನಕ್ಕಳು. ಈ ಹರ್ಷೋದ್ಗಾರವು ಹೊರಗಿದ್ದವರಿಗೂ ಕೇಳಿಸಿ ಅಲ್ಲಿಯೂ ನಗುವಿನ ಲಹರಿಯು ಹರಿಯಿತು. ಮತ್ತು ಮನುವಿನ ಬಾಯಿಯಿಂದ ಹೊರಟ ಮಾತುಗಳ ಮೇಲೆ ಟೀಕೆಯೂ ಪ್ರಾರಂಭವಾಯಿತು.

ಮುಂದಿನ ಕೋಣೆಗೂ ಈ ವಿಚಾರವು ಮುಟ್ಟಿತು. ಆಗತಾನೆ ಯೌವನದಲ್ಲಿ ಕಾಲಿಡುತ್ತಿದ್ದ ಜ್ಯೂಹಿಯು "ಇಲ್ಲಿ ಕುಳಿತು ಕುಳಿತು ಬೇಸರ ಬಂದಿತು. ನೃತ್ಯ ಮಾಡಲು ಮನಸ್ಸು ತವಕಿಸುತ್ತಿದೆ. ಇಂತಹ ಸಂತೋಷ ಸಮಯದಲ್ಲಿ ನರ್ತಿಸದೆ ಮತ್ತಾವಾಗ ನರ್ತಿಸಲಿ ?" ಎಂದಳು.

ಮೋತೀಬಾಯಿಯು ಬಹಿರಂಗದಲ್ಲಿ ಗಂಭೀರದಿಂದಿದ್ದರೂ ಅವಳ ಮನಸ್ಸು ಆಹ್ಲಾದದಿಂದ ಪುಳಕಿತವಾಗುತ್ತಿದ್ದಿತು. "ನರ್ತಿಸು, ಅದಕ್ಕೇನೂ ಅಡ್ಡಿಯಿಲ್ಲ. ನನಗೂ ನರ್ತಿಸಬೇಕೆಂದು ಆಸೆಯಾಗುತ್ತಿದೆ. ಆದರೆ ಗೆಜ್ಜೆ ಕಟ್ಟಿಕೊಳ್ಳುವುದು ಬೇಡ. ಹೊರಗೆ ದೊಡ್ಡ ದೊಡ್ಡ ರಾಜಮಹಾರಾಜರು ಕುಳಿತಿದ್ದಾರೆ. ಗಲಾಟೆಗೊಂದಲವಾದರೆ ಅವರೇನೆಂದುಕೊಳ್ಳುತ್ತಾರೆ ?" ಎಂದಳು.

ಜ್ಯೂಹಿಯು "ತಬಲ ಗೆಜ್ಜೆ ಇವೊಂದೂ ನಮಗೆ ಬೇಡ. ಸದ್ದುಗದ್ದಲಗಳೇನೂ ಆಗುವುದಿಲ್ಲ. ಇಷ್ಟರಮೇಲೆಯೂ ಮಹಾರಾಜರು ಏನಾದರೂ ಹೇಳಿದರೆ ನಾನು ಅನುಭವಿಸಿಕೊಳ್ಳುತ್ತೇನೆ. ಕಡೆಯಲ್ಲಿ ನಾಟಕವು ನಡವೇ ನಡೆಯುವುದು. ನಾವುಗಳು ಅಲ್ಲಿ ನರ್ತಿಸಿ ಗಾಯನ ಮಾಡಿಯೇ ತೀರಬೇಕು. ರಾಜಮಹಾರಾಜರು ನಾಟಕಶಾಲೆಯಲ್ಲಿ ರಂಗಮಂಟಪದ ಬಳಿಯೆ ಕುಳಿತು ನೋಡುವರು. ನಾನು ಈ ಮಾತನ್ನು ಒಪ್ಪುವುದಿಲ್ಲ" ಎಂದಳು.

ಅವರಿಬ್ಬರೂ ಮನಸ್ವೀ ನರ್ತಿಸಿದರು ಮತ್ತು ಇತರ ನರ್ತಕಿಯರು ಮೃದುವಾಗಿ ತಮ್ಮ ಕೈಗಳಿಂದ ತಾಳಹಾಕಿದರು.

ಹೊರಗೆ ಮೃಗಲಖಾನನು ನಿಂತುಕೊಂಡು "ನಮ್ಮ ರಾಜ್ಯಕ್ಕೆ ತಕ್ಕಂತಹ ಮಹಾರಾಣಿಯು ನಮಗೆ ದೊರಕಿರುವಳು. ಮನವು ನರ್ತಿಸಲೆಳಸುತ್ತಿದೆ. ಆದರೆ ನರ್ತನವನ್ನು ಕಲಿಯಲೇ ಇಲ್ಲ. ಅದರಿಂದ ಅಸಹಾಯಕನಾಗಿದ್ದೇನೆ" ಎಂದು ಹೇಳಿ

ಕಂಬನಿ ತುಂಬಿ ಕುಳಿತುಬಿಟ್ಟನು.

ದುರ್ಗಾಬಾಯಿಯು ಎದ್ದು ನಿಂತು "ವಿದ್ವಾಂಸರೇ, ಈ ಕರ್ತವ್ಯವು ನನ್ನದು. ನಾನು ನನ್ನ ಮನಸ್ಸು ಮತ್ತು ವಾದಗಳಿಂದ ನರ್ತಿಸಿ ಪೂರೈಸುತ್ತೇನೆ. ನೀವು ನಿಮ್ಮ ಮನಸ್ಸನ್ನು ನರ್ತಿಸಲು ಬಿಡಿ" ಎಂದು ಹೇಳಿ ನತಮಸ್ತಕಳಾದಳು.

ವಿಜಯ ಬಹದ್ದೂರನು ಪ್ರಸನ್ನನಾದನು. ಸ್ವಭಾವತಃ ಆತನು ಕಲಾ ಪಕ್ಷಪಾತಿ. ಈ ದಿನ ಆತನು ಮತ್ತೂ ಉತ್ಸಾಹದಿಂದ ಕೂಡಿ "ದುರ್ಗಾ ಇನ್ನೂ ಚೆನ್ನಾಗಿ ನರ್ತಿಸು, ನಿನಗೆ ಬಹುಮಾನವು ದೊರಕುವುದು" ಎಂದನು.

"ಅಪ್ಪಣೆ, ಸರ್ಕಾರ್" ಎಂದು ಹೇಳಿ ಅತ್ಯಂತ ಉತ್ಸಾಹದಿಂದ ಹುರಿದುಂಬಿ ಹಾಡುತ್ತಾ ನರ್ತಿಸಲಾರಂಭಿಸಿದಳು. ಮೃಗಲಖಾನನಿಗೆ ಅವಳ ಗಾನವು ರುಚಿಸಲಿಲ್ಲ. ಆದರೆ ಅವಳ ಅದ್ಭುತ ನರ್ತನವು ಆ ಕುಂದನ್ನು ಮುಚ್ಚಿ ಬಿಟ್ಟಿತು.

ಸ್ವಲ್ಪ ಕಾಲಾನಂತರ ಲಗ್ನ ಕಾರ್ಯಗಳು ಸಮಾಪ್ತವಾದವು. ಇತರ ವಿವಾಹ ಕಾರ್ಯಕಲಾಪಗಳು ಮುಗಿದನಂತರ ಗಂಗಾಧರರಾಯನು ವರನ ಪೋಷಾಕಿನಲ್ಲಿ, ತಲೆಯ ಮೇಲೆ ಹೂವೂ ಅಕ್ಷತೆ ಇವುಗಳ ವೃಷ್ಟಿ ಕರೆಯುತ್ತಿರಲು ಹೊರಗೆ ಬಂದನು. ಎಲ್ಲರೂ ನಜರನ್ನೊಪ್ಪಿಸಿದರು. ಗಾಯನವಾದನಗಳನ್ನು ಸ್ವಲ್ಪ ಹೊತ್ತಿನವರೆಗೆ ನಿಲ್ಲಿಸಲಾಯಿತು. ಗಂಗಾಧರರಾಯನು ಉಚ್ಚಸ್ಥಾನವೊಂದರಲ್ಲಿ ಕುಳಿತು ಮನೂಬಾಯಿಯು ಹೇಳಿದ ಆ ಮಾತು ಇಲ್ಲಿ ಯಾವ ರೀತಿ ಪರಿಣಾಮಕಾರಿಯಾಗಿದೆ ಎಂದು ಇಲ್ಲಿ ಅಲ್ಲಿ ಸೂಕ್ಷ್ಮವಾಗಿ ನೋಡಲಾರಂಭಿಸಿದನು. ಅವನ ಕಣ್ಣುಗಳು ಈಗ ಸಂಕೋಚಪೂರಿತವಾಗಿದ್ದುವು.

ಅಲ್ಲಿ ನೆರೆದಿದ್ದ ಜನರ ಬಾಯಿಯಲ್ಲಿಯೂ ಅದೇ ವಾಕ್ಯವು, ಪುನಃ ಪುನಃ ಜೋರಾಗಿ ಮೊಳಗುತ್ತಿದ್ದಿತು. ಎಲ್ಲರ ಕಣ್ಣುಗಳೂ ಗಂಗಾಧರರಾಯನ ಉಡುಗೆ ತೊಡುಗೆಗಳನ್ನು ನೋಡುತಿದ್ದವು. ಮನಸ್ಸು ಬೇಡವೆಂದರೂ ಕೂಡ ಅದೇ ವಾಕ್ಯಗಳು ಕಿವಿಗಳಲ್ಲಿ ಮೊಳಗುತ್ತಿದ್ದವು.

ಆ ಕೋಣೆಯ ಪರದೆಯ ಹಿಂದಿನ ನೃತ್ಯವು ನಿಂತು ಹೋಗಿದ್ದಿತು. ಆ ಅಭಿನೇತ್ರಿಗಳ ಮುಂದೆಯೂ ಅದೇ ವಾಕ್ಯಗಳು ಸುಳಿದಾಡುತ್ತಿದ್ದುವು.

ಜ್ಯೂಹಿಯು ಮೋತೀಬಾಯಿಯನ್ನು ಕುರಿತು "ಅಕ್ಕಾ, ಝಾಂಸಿಯ ರಾಜ್ಯಕ್ಕೆ ಈಗಲೀಗ ರಾಜನು ದೊರಕಿದ್ದಾನೆ." ಎಂದು ಮೆಲ್ಲನೆ ಉಸುರಿದಳು. ಮೋತೀಬಾಯಿಯು ಜ್ಯೂಹಿಯ ಕೈಯನ್ನು ಮೆಲ್ಲನೆ ಅದುಮಿ "ಹುಷಾರಾಗಿರು, ರಾಜನಕಿವಿಗೇನಾದರೂ ಈ ಮಾತು ಬಿದ್ದರೆ ನಿನ್ನ ಪರಿಣಾಮವು ನೆಟ್ಟಗಾಗುವುದಿಲ್ಲ" ಎಂದಳು.

ಜ್ಯೂಹಿಯು "ನಾನು ಇದನ್ನು ನಿನ್ನಲ್ಲಿ ಹೇಳಿಕೊಂಡೆ, ಇದನ್ನಾರಿಗೂ ದಯವಿಟ್ಟು ತಿಳಿಸಬೇಡ, ಕೈ ಮುಗಿಯುತ್ತೇನೆ" ಎಂದಳು.

ನಂತರ ಎಲ್ಲರೂ ಅಲ್ಲಿ ನಡೆಯುತ್ತಿದ್ದ ಸೋಟಗಳನ್ನು ನೋಡಲಾರಂಭಿಸಿದರು.

ಗಂಗಾಧರರಾಯನು ವಿಜಯಬಹದ್ದೂರನನ್ನು ಕುರಿತು "ನೀವು ಮೃಗಲ ಖಾನನ ಧ್ರುವಪದವನ್ನು ಕೇಳಿದ್ದೀರಾ? ಎಂದು ಪ್ರಶ್ನಿಸಿದನು.

ವಿಜಯಬಹದ್ದೂರನು "ಮೊದಲೂ ಕೇಳಿದ್ದೇನೆ. ಈಗಲೂ ಕೇಳಿದ್ದೇನೆ. ಆದರೆ ದುರ್ಗಾಬಾಯಿಯ ನೃತ್ಯವು ಅದ್ಭುತವಾಗಿದ್ದಿತು" ಎಂದನು.

ಮೃಗಲಖಾನನ ಕಣ್ಣುಗಳು ತೇಜೋಹೀನವಾದವು, ತಲೆಯನ್ನು ತಗ್ಗಿಸಿದನು. ಗಂಗಾಧರರಾಯನು "ಮೃಗಲಖಾನನನ್ನು ಸ್ವಲ್ಪ ಕೆಣಕಿದರೆ ಬಹಳ ಚೆನ್ನಾಗಿ ಹಾಡು ವನು. ಈಗ ಕೇಳುವಿರಂತೆ. ಇವನ ಧ್ರುವಪದಕ್ಕೆ ಸರಿಸಾಟಿ ಮತ್ತಾವುದೂ ಇಲ್ಲ, ನೃತ್ಯವೂ ತನ್ನ ಸ್ಥಳದಲ್ಲಿ ಚೆನ್ನಾಗಿ ಶೋಭಿಸುವುದು. ಆದರೆ ಮೃಗಲಖಾನನ ಧ್ರುವ ಪದವು ರಾಜ, ದುರ್ಗಿಯ ನೃತ್ಯವು ಆದರ ಭೃತ್ಯ" ಎಂದನು.

ಮೃಗಲಖಾನನು ಈ ಮಾತುಗಳನ್ನು ಕೇಳಿ ಹರ್ಷದಿಂದ ಉಬ್ಬಿಹೋದನು. ಕಣ್ಣುಗಳಲ್ಲಿ ಆನಂದಾಶ್ರುವು ಕೂಡಿ ರಾಜನ ಮುಂದೆ ಬಂದು ಕೈ ಜೋಡಿಸಿ "ಶ್ರೀ ಮಂತರ ಅಪ್ಪಣೆಯಾದರೆ ಲಕ್ನೋವಿನಲ್ಲಿ ನಡೆದ ಸಂಗತಿಯನ್ನು ಅರಿಕೆ ಮಾಡಿ ಕೊಳ್ಳು ತ್ತೇನೆ" ಎಂದನು.

ಮನುವಿನ ಆ ವಾಕ್ಯದಿಂದಾಗಿ ಗಂಗಾಧರರಾಯನಿಗೆ ಮನಃ ಶಾಂತಿಯು ದೊರ ಕಿರಲಿಲ್ಲ. ಅಲ್ಲಿ ನೆರೆದಿದ್ದವರೂ ಕೂಡ ತನ್ನಂತೆಯೇ ಆ ವಾಕ್ಯವನ್ನು ಮನಸ್ಸಿನಲ್ಲಿಯೇ ಮಥಿಸುತ್ತಿರುವರೆಂದು ನಂಬಿದನು. ಆಗ ಸಂಗೀತ ಪ್ರೇಮಿಯೊಬ್ಬನು ಉತ್ಸಾಹ ಭರಿತನಾಗಿ ಮೃಗಲಖಾನನನ್ನು ಕುರಿತು "ಮಹಾ ಪ್ರಭುಗಳಲ್ಲಿ ಅವಶ್ಯವಾಗಿ ಅರಿಕೆ ಮಾಡಿ, ನಂತರ ಗಾಯನ ಮಾಡು" ಎಂದನು.

ಮೃಗಲಖಾನನ ವಿಚಾರವನ್ನು ಕೇಳಲು ಅಲ್ಲಿ ನಿಸ್ತಬ್ಧತೆಯೇರ್ಪಟ್ಟಿತು. ಮೃಗಲಖಾನನು "ಸರ್ಕಾರ್, ನಾನು ಸಂಗೀತ ಹಾಡುವುದಕ್ಕೆ ಲಕ್ನೋವಿಗೆ ಹೋಗಿದ್ದೆ. ಅಲ್ಲಿಯ ವಿದ್ವಾಂಸರುಗಳು ನಾನು ನವಾಬರ ಸಮಕ್ಷಕ್ಕೆ ಹೋಗುವುದು ದುರ್ಲಭವೆಂದು ಹೇಳಿದರು. ಆದುದರಿಂದ ಅವರುಗಳು 'ನಮ್ಮ ಮುಂದೆ ಮೊದಲು ಹಾಡು. ವಿದ್ವಾಂಸನೆಂದು ಮನಗಂಡರೆ ನಂತರ ನಿನ್ನನ್ನು ನವಾಬರ ಮುಂದೆ ಹಾಡಲು ಶಿಫಾರಸ್ಸು ಮಾಡುತ್ತೇವೆ. ಇಲ್ಲದಿದ್ದರೆ ಬುಂದೇಲು ಖಂಡಕ್ಕೆ ಹಿಂದಿರುಗಬೇಕಾದೀತು' ಎಂದರು. ನಾನು ನಮ್ಮ ದೇಶದ ವಾಡಿಕೆಯಂತೆ ಉಡಿಗೆತೊಡಿಗೆಗಳನ್ನು ಧರಿಸಿದ್ದೆನು. ಅವುಗಳನ್ನು ಅವರು ಬಹುವಾಗಿ ಪರಿಹಾಸ್ಯ ಮಾಡಿದರು. 'ಏನು ಬುಂದೇಲುಖಂಡದವನೇ! ಏನು ವಿಚಿತ್ರ ವೇಷ ಭೂಷಣ! ಆಹಾ! ನಿನ್ನ ಜೋಡುಗಳೋ ದೃಷ್ಟಿಯಾಗದಿರಲಿ. ಗಡ್ಡವೊ ಬುಂದೇಲುಖಂಡದ ಕರಡಿ ಯಂತಿದೆಯಯ್ಯಾ. ಮೂರ್ಖನಂತೆ ತಲೆಸಾಗನ್ನು ಸುತ್ತಿರುವನು. ಮಾತುಕತೆಯೋ

ಕಾಡುಮನುಷ್ಯನಿಗಿಂತ ಕೇಡು. ಕುರಿಯಂತೆ ವರ್ತಿಸುತ್ತಾನೆ' ಇತ್ಯಾದಿಯಾಗಿ ನನ್ನನ್ನು ವರ್ಣಿಸಿದರು. ಇದನ್ನೆಲ್ಲಾ ಕೇಳುತ್ತಾ, ಕೇಳುತ್ತಾ ನನಗೂ ಪಿತ್ಥವು ನೆತ್ತಿಗೇರಿತು. ನಂತರ ನಾನು ಹಾಡಲುಪಕ್ರಮಿಸಿದೆ. ನಾನು ಗಾನಮಾಡಿದನಂತರ ಆದ ಪರಿಣಾಮವನ್ನು ವರ್ಣಿಸಲಾರೆ" ಎಂದನು.

ಗಂಗಾಧರರಾಯನು ಉತ್ಸಾಹದಿಂದ "ಮುಂದಿನದನ್ನು ನಾನು ವಿವರಿಸುತ್ತೇನೆ. ಮಹಾರಾಜ, ಯಾವಾಗ ಉಸ್ತಾದನು ಅಷ್ಟಾಂಗಗಳೊಂದಿಗೆ ಧ್ರುವಪದವನ್ನು ಹಾಡಿದನೋ ಆಗ ಮಧುರಸ್ವರಗಳ ವೃಷ್ಟಿಯೇ ಏರ್ಪಟ್ಟಿತು. ಯಾರು ಯಾರು ನಿಂದೆ ಮಾಡುತ್ತಿದ್ದರೋ ಅವರು ಆ ಸಂಗೀತ ಸುಧೆಯಲ್ಲಿ ಮುಳುಗಿಹೋದರು. ಅವರೆಲ್ಲರೂ ಉಸ್ತಾದನಿಗೆ ಪ್ರಣಾಮಮಾಡಿ ನವಾಬನ ಸಮ್ಮುಖದಲ್ಲಿ ಸಂಗೀತವೇರ್ಪಡಿಸಿದ್ಧರು. ನವಾಬನು ಸ್ವತಃ ಸಂಗೀತದಲ್ಲಿ ಪರಿಶ್ರಮ ಹೊಂದಿರುವನು. ಆತನು ಸಂಗೀತವನ್ನು ಕೇಳಿ, ರಮಿಸಿ, ವಿದ್ವಾಂಸನಿಗೆ ಹೇರಳವಾದ ಬಹುಮಾನವನ್ನು ದಯಪಾಲಿಸಿ ಬುಂದೇಲುಖಂಡವನ್ನು ಮುಕ್ತಕಂಠನಾಗಿ ಪ್ರಶಂಸಿಸಿದನು" ಎಂದು ತಿಳಿಸಿದನು.

ಮೃಗಲಖಾನನು ತಲ್ಲೀನನಾಗಿ ಹಾಡಿದನು. ಅಲ್ಲಿದ್ದವರೆಲ್ಲರೂ ಮಗ್ನರಾಗಿ ಕೇಳಿದರು. ಮಹಾರಾಜ ವಿಜಯಬಹದ್ದೂರನು ಈ ವಿವಾಹದ ಅವಕಾಶದಲ್ಲಿ ಬಹುಮಾನಗಳನ್ನು ಕೊಡಲು ತನ್ನ ಜೊತೆಯಲ್ಲಿ ಹೇರಳವಾದ ಸಂಪತ್ತನ್ನು ತಂದಿದ್ದನು. ಅವನು ತನ್ನ ಕೋಶಾಧ್ಯಕ್ಷನನ್ನು ಕರೆದು "ಈ ಸಂಗೀತ ವಿದ್ವಾಂಸನ ಶಿರಸ್ತ್ರಾಣದಲ್ಲಿ ಎಷ್ಟು ಹಣ ಹಿಡಿಸುವುದೋ ಅಷ್ಟನ್ನು ತುಂಬಿಕೊಡು. ತಬಲ ಬಾರಿಸುವವನಿಗೆ ತಬಲೆಯ ತುಂಬ, ಸಾರಂಗಿಯವನಿಗೆ ಸಾರಂಗಿಯ ತುಂಬ, ದುರ್ಗಾಬಾಯಿಗಾದರೋ ಅವಳು ಎಷ್ಟು ಹೊರಬಲ್ಲಳೋ ಅಷ್ಟನ್ನು ಕೊಡು" ಎಂದು ಆಜ್ಞಾಪಿಸಿದನು.

ಈ ಆಜ್ಞೆಯನ್ನು ಕೇಳುತ್ತಲೇ ವಾದ್ಯಗಾರರೆಲ್ಲರೂ ಎದ್ದುನಿಂತರು. ಇವರಲ್ಲಿದ್ದ ಶಹನಾಯಿ ಎಂಬ ಚಿಕ್ಕ ಓಲಗವನ್ನು ನುಡಿಸುವವನ ವಾದ್ಯದಲ್ಲಿ ಬಹಳ ಕಡಿಮೆ ದ್ರವ್ಯ ಹಿಡಿಸುತ್ತಿದ್ದಿತು. ಆತನು ಕೋಪಾಕ್ರಾಂತನಾಗಿ ತನ್ನ ವಾದ್ಯವನ್ನು ಮುರಿದು "ಸರ್ಕಾರ್, ನಾಲ್ಕು ಕಾಸನ್ನೂ ಹಿಡಿಯದ ಈ ವಾದ್ಯದಿಂದ ಏನು ಪ್ರಯೋಜನ?" ಎಂದು ಪ್ರಲಪಿಸಿದನು.

ರಾಜಾವಿಜಯಬಹದ್ದೂರನು ಅವನ ವಾದ್ಯವನ್ನು ಚಿನ್ನದಿಂದ ತುಂಬಿಸಿ ಕೃಪೆಗೈದನು.

ಆ ಕಾಲದ ಪದ್ಧತಿಯ ಪ್ರಕಾರ ಎಲ್ಲರಿಗೂ ಅಲ್ಪ ಸ್ವಲ್ಪ ಬಹುಮಾನಗಳು ಕೊಡಲ್ಪಟ್ಟವು. ರಾತ್ರಿ ಸೊಗಸಾದ ನಾಟಕವೇರ್ಪಟ್ಟದ್ದಿತು. ವಿಜಯಬಹದ್ದೂರನು ನಾಟಕಶಾಲೆಗೆ ಸಂಬಂಧಿಸಿದ್ದ ಎಲ್ಲರಿಗೂ ವಿಪುಳ ಬಹುಮಾನಗಳನ್ನಿತ್ತನು.

ವಿವಾಹದ ಶುಭ ಸಮಾಪ್ತಿಯ ಪ್ರಯುಕ್ತ ಒಂದು ರಾಜ ಸಭೆಯು ನಡೆಯಿತು.

ನಜರುಮುಜರೆಗಳಾದವು. ದೊಡ್ಡ ದೊಡ್ಡ ಸರದಾರರ ನಜರೊಪ್ಪಿಗೆಯಾದ ಮೇಲೆ ಚಿಕ್ಕಪುಟ್ಟ ಜಹಗೀರುದಾರರು ಬಂದರು. ಇವರುಗಳಲ್ಲಿ ಮುಹುವಿನ ಆನಂದ ರಾಯನೆಂಬ ಜಹಗೀರುದಾರನು ಮುಂದೆ ಬಂದನು. ರಾಜನು ಬಹಳವಾಗಿ ಆಯಾಸ ಗೊಂಡಿದ್ದ ಕಾರಣ ಉದ್ರೇಕಿತನಾಗಿದ್ದನು. ಆನಂದರಾಯನು ತಾನೂ ಮತ್ತು ತನ್ನ ಕುಟುಂಬದವರು ಮಾಡಿದ ರಾಜಸೇವೆಯ ವಿಚಾರವನ್ನು ಕುರಿತು ಹೇಳುವಾಗ ರಾಮ ಚಂದ್ರರಾಯನಿಗೆ ಸಂಬಂಧಿಸಿದ ಘಟನೆಯನ್ನು ಪ್ರಸ್ತಾಪಿಸಿದನು.

ರಾಜನು ವ್ಯಗ್ರನಾಗಿ "ನಾನು ನೆನಪಿನಲ್ಲಿಟ್ಟಿದ್ದೇನೆ. ಇಲ್ಲಿ ಯಾರೂ ನಿನ್ನ ಸೇವಾ ಪ್ರಶಂಸೆಯನ್ನು ಕಾವ್ಯ ಅಥವಾ ಪ್ರಬಂಧ ರೂಪದಲ್ಲಿ ಬರೆದಿಡುವವರಿಲ್ಲ. ನಜ ರೊಪ್ಪಿಸಿದನಂತರ ನಿನ್ನ ಸ್ಥಳದಲ್ಲಿ ಹೋಗಿ ಕುಳಿತುಕೊ. ನಿನಗೆ ಸಲ್ಲಬೇಕಾದ ಪುರಸ್ಕಾ ರವು ಸಲ್ಲುವುದು" ಎಂದನು.

ಆನಂದರಾಯನು ನಜರುಮುಜರೆ ಮಾಡಿ ಒಂದು ಮೂಲೆಯಲ್ಲಿ ಹೋಗಿ ಕುಳಿತನು. ಯೌವ್ವನವು ಕಳೆದಿದ್ದಿತು, ಆದರೆ ಶರೀರವು ಈಗಲೂ ಬಲಷ್ಠವಾಗಿದ್ದಿತು. ತನಗೆ ಅಪಮಾನವಾದುದನ್ನು ನೆನೆದು ಬಾರಿ ಬಾರಿಗೂ ನಿಟ್ಟುಸಿರು ಬಿಡುತ್ತಿದ್ದನು. ಎದೆಯು ಬಿರಿಯುತ್ತಿದ್ದಿತು. ಕಡೆಗೆ ಅವನೊಂದು ನಿರ್ಧಾರಕ್ಕೆ ಬಂದನು. ರಾಜನ ಮುಂದೆ ಗುಂಪು ಕೂಡಿದ ಸಮಯವನ್ನು ನೋಡಿ ಅಲ್ಲಿಂದ ಹೊರಬಿದ್ದನು.

ರಾಜನ ಕರಣಿಕರು ನಜರೊಪ್ಪಿಸಿದವರ ಹೆಸರು ವಿಲಾಸಗಳನ್ನು ಬರೆದು ಕೊಳ್ಳು ತ್ತಿದ್ದರು. ಲೆಕ್ಕಾಚಾರವನ್ನಿಟ್ಟು ಕೊಳ್ಳುವುದಕ್ಕೂ, ಆಮಂತ್ರಿತರಿಗೆ ತಕ್ಕ ಪುರಸ್ಕಾರ ವನ್ನು ಮಾಡುವುದಕ್ಕೂ ಈ ಪಟ್ಟಿಯು ತಯಾರಾಗುತ್ತಿದ್ದಿತು. ಪುರಸ್ಕಾರಗಳನ್ನು ಹಂಚುತ್ತಿರುವಾಗ ಆನಂದರಾಯನ ಸರದಿಯು ಬರಲು ಅವನು ಅಲ್ಲಿರಲಿಲ್ಲ. ರಾಜ ಸಭೆಗೆ ಹತ್ತಿರದಲ್ಲಿಯೇ ರಾಣಿವಾಸದವರಿಗೆ ಪರದೆಯ ಹಿಂದೆ ಸ್ಥಾನಗಳು ಏರ್ಪಟ್ಟಿದ್ದವು. ರಾಣಿಯು ಅಲ್ಲಿಯೇ ಕುಳಿತಿದ್ದಳು.

ರಾಜನು "ಆನಂದರಾಯನು ಎಲ್ಲಿ ಹೋದನು?" ಎಂದು ಕೇಳಿದನು.

ಸ್ವಲ್ಪ ಹುಡುಕಿದನಂತರವೂ ಆತನು ಕಂಡು ಬರಲಿಲ್ಲ. ನಂತರ ಮುಂದಿನವರ ಹೆಸರನ್ನು ಹೇಳಿ ಉಡುಗರೆಗಳನ್ನು ಹಂಚುವುದು ಮುಂದುವರೆಯಿತು.

ಈ ಸಮಾರಂಭದ ಅಂತ್ಯದಲ್ಲಿ ಎಲ್ಲರೂ ಜಯ ಜಯಕಾರ ಮಾಡಿದರು.

"ಮಹಾರಾಜ ಗಂಗಾಧರರಾಯನಿಗೆ ಜಯವಾಗಲಿ. ಮಹಾರಾಣಿ ಲಕ್ಷ್ಮೀ ಬಾಯಿಗೆ ಜಯವಾಗಲಿ"

ವಿವಾಹವಾದನಂತರ ಅತ್ತೆಯಮನೆಗೆ ಬಂದನಂತರ ಮಹಾರಾಷ್ಟ್ರ ಮತ್ತು ಬುಂದೇಲು ಖಂಡದ ಪದ್ಧತಿಯ ಪ್ರಕಾರ ಆ ದಿನದಿಂದಲೇ ಮನುವನ್ನು ಲಕ್ಷ್ಮೀಬಾಯಿ ಯೆಂದು ಕರೆಯಲಾಯಿತು.

ರಾಜನಸಭೆಯು ಸಮಾಪ್ತಿಯಾದನಂತರ ಲಕ್ಷ್ಮೀಬಾಯಿಯು ಕೋಟೆಯ ಅರಮನೆಯಲ್ಲಿ ಸುಂದರಿ, ಮುಂದರಿ ಮತ್ತು ಕಾಶಿ ಇವರೊಡನೆ ವಾಸಿಸಲಾರಂಭಿಸಿದಳು. ಅವಳಿಗೆ ತನ್ನ ಇತರ ಸಹಚಾರಿಗಳಿಗಿಂತಲೂ ಈ ಮೂವರಲ್ಲಿ ಹೆಚ್ಚು ಪ್ರೀತಿ ಉತ್ಪನ್ನವಾಗಿದ್ದಿತು.

ರಾಣಿಯು "ಈದಿನ ಒಂದು ಅಸಂತುಷ್ಟ ಕಾರ್ಯವಾಯಿತು. ಆನಂದರಾಯನೆಂಬ ಜಹಗೀರುದಾರನ ಅವಹೇಳನವಾಯಿತು." ಎಂದಳು.

ಮುಂದರಿಯು "ಮಹಾರಾಣಿಯವರಿಗೆ ಆ ಹೆಸರು ಹೇಗೆ ನೆನಪಿನಲ್ಲಿ ಉಳಿಯಿತು. ಅದರಲ್ಲೂ ಆ ದಂದಳೆ ಗಲಾಟೆಗಳಲ್ಲಿ ಈ ಘಟನೆಯು ಹೇಗೆ ಸ್ಮರಣೆಯಲ್ಲಿ ನಿಂತಿತು?" ಎಂದಳು.

ರಾಣಿಯು ಹೇಳಿದಳು. "ಬುಂದೇಲು ಖಂಡವು ಬಹಳ ಮರ್ಯಾದಸ್ತರ ರಾಜ್ಯವೆಂಬುದನ್ನು ಕಂಡಿದ್ದೇನೆ. ಈ ಮರ್ಯಾದೆಯನ್ನು ಕಾಪಾಡುವುದು ನಮಗೆ ಅತ್ಯಾವಶ್ಯಕ. ಆದರೆ ಇಂದು ಆ ವ್ಯಕ್ತಿಯ ಮರ್ಯಾದೆಯು ಕಳೆದು ಹೋಯಿತು—ಇದು ಬಹಳ ಅನ್ಯಾಯ."

ಕಾಶಿಯು "ಈ ಚಿಕ್ಕ ಪುಟ್ಟ ಮನುಷ್ಯರನ್ನು ಮಹಾರಾಜರು ಎಲ್ಲಿಯವರೆಗೆ ಗಮನಿಸಲಾದೀತು? ಇಂದು ಬಹಳ ದಣಿವಿದ್ದಾರೆ. ನಾಟಕ ಶಾಲೆಗೂ ಹೋಗುವುದಿಲ್ಲವೆಂದು ಕೇಳಿದೆ" ಎಂದಳು.

ರಾಣಿಯು "ನೀನು ಯಾರನ್ನು ಚಿಕ್ಕಪುಟ್ಟ ಮನುಷ್ಯರೆಂದು ಹೇಳುತ್ತಿರುವೆಯೋ ಅವರೇ ನಮ್ಮ ಆಧಾರ" ಎಂದಳು.

## ೧೬

ಮದುವೆಯಾಗುವ ಮುನ್ನ ಗಂಗಾಧರರಾಯನಿಗೆ ಶಾಸನಾಧಿಕಾರವು ಇರಲಿಲ್ಲ. ಆ ಕಾಲದಲ್ಲಿ ಅಂಗ್ಲೇಯರ ಪೊಲಿಟಿಕಲ್ ಏಜೆಂಟ್ ಡನ್‌ಲಪ್ ಎಂಬುವನು ಝಾನ್ಸಿಯ ರಾಜ್ಯಾಡಳಿತದಲ್ಲಿ ಸಹಾಯಕನಾಗಿದ್ದನು. ಆತನು ರಾಜನಲ್ಲಿಗೆ ಆಗಾಗ್ಗೆ ಬಂದು ಹೋಗುತ್ತಿದ್ದನು. ಆದುದರಿಂದ ಜನರು ಇವರಿಬ್ಬರನ್ನೂ ಮಿತ್ರರೆಂದು ಆಡಿಕೊಳ್ಳುತ್ತಿದ್ದರು.

ಗಂಗಾಧರರಾಯನು ಈ ಅಧಿಕಾರವನ್ನು ಹೊಂದಲು ಮೊದಲಿನಿಂದಲೂ ಪ್ರಯತ್ನಿಸುತ್ತಿದ್ದನು. ಅದು ಈಗ ವಿವಾಹದನಂತರ ದೊರಕಿತು. ಆದರೆ ಈ ಅಧಿಕಾರ ದೊರೆಯುವ ಮುನ್ನ ಕಂಪೆನಿ ಸರ್ಕಾರದೊಂದಿಗೆ ಪುನಃ ಒಂದು ಕರಾರು ಪತ್ರವನ್ನು ರಚಿಸಲಾಯಿತು. ಹಿಂದಿನ ಶರತ್ತುಗಳನ್ನೇ ಇದರಲ್ಲಿಯೂ ಸಮರ್ಥಿ

ಸಿದ್ದರು.

ಕೇವಲ ಒಂದು ವಿಷಯ ಮಾತ್ರ ಗಂಗಾಧರರಾಯನ ಇಚ್ಛೆಯಂತಾಗಲಿಲ್ಲ. ಆಂಗ್ಲೇಯರ ಒಂದು ಪಡೆಯು ಅವರ ವಶದಲ್ಲೇ ಇದ್ದು ಝಾನ್ಸಿಯಲ್ಲಿ ಸ್ಥಾಪಿತವಾಗ ಬೇಕೆಂದೂ, ಮತ್ತು ಅದರ ಖರ್ಚುವೆಚ್ಚಗಳೆಲ್ಲವನ್ನೂ ಝಾನ್ಸೀ ರಾಜ್ಯವು ವಹಿಸ ಬೇಕೆಂದೂ, ಒಂದು ಶರತ್ತಿದ್ದಿತು. ಗಂಗಾಧರರಾಯನು ಇದಕ್ಕೆ ಒಪ್ಪಬೇಕಾ ಯಿತು. ಇದು ಅವನಿಗೆ ಸಮ್ಮತವಿರಲಿಲ್ಲ. ನಗದು ಖರ್ಚನ್ನು ಲೆಕ್ಕಿಸದೆ ಕಂಪೆನೀ ಸರ್ಕಾರದವರ ಬಲಾತ್ಕಾರಕ್ಕಾಗಿ ಝಾನ್ಸಿ ರಾಜ್ಯದಿಂದ ೨ ಲಕ್ಷ ೨೭ ಸಾವಿರದ ೪೫೮ ರೂಪಾಯಿಗಳ (೨೨೭೪೫೮) ವಾರ್ಷಿಕ ವರಮಾನವಿದ್ದ ಒಂದು ಇಲಾಖೆಯನ್ನು ಈ ರಾಜ್ಯಲೋಲುಪರಿಗೆ ಕೊಟ್ಟುಬಿಟ್ಟರು. ಇವೆಲ್ಲವೂ ಆದನಂತರ ಆತನಿಗೆ ಶಾಸನಾಧಿ ಕಾರವು ದೊರಕಿತು. ತರುವಾಯ ರಾಜಸಭೆಯು ಏರ್ಪಟ್ಟು ಎಲ್ಲರೂ ಸಂತೋಷಿಸಿ ದರು. ಆಟಪಾಟ ನಾಟಕಗಳು ಅನೇಕವಾಗಿ ನಡೆದವು. ಆದರೆ ಬಹುಮಂದಿ ಝಾನ್ಸಿ ನಿವಾಸಿಗಳಿಗೆ ತಮಗಾದ ನಷ್ಟವೇ ಎಲ್ಲೆಲ್ಲಿಯೂ ಕಾಣಿಸುತ್ತಿದ್ದಿತು. ತಮ್ಮ ದೇಶವನ್ನು ಹರಿದು ಹಂಚುವುದು ಅವರ ಹೃದಯವನ್ನು ಹಿಂಡಿತು.

ಸ್ವಯಂ ರಾಜನಿಗೂ ಕೂಡ ನಾಟಕಶಾಲೆಯಲ್ಲಿ ಯಥೇಷ್ಟವಾದ ಮನರಂಜ ನೆಯು ದೊರಕಲಿಲ್ಲ. ಅವನು ಅಲ್ಲಿಂದ ಜಾಗ್ರತೆಯಾಗಿ ಹಿಂದಿರುಗಿ ರಂಗಮಹಲಿನಲ್ಲಿ ರಾಣಿಯ ಬಳಿಗೆ ಬಂದನು.

ರಾಣಿಯು ಸಾಧಾರಣವಾಗಿ ಕೋಟೆಯ ಅರಮನೆಯಲ್ಲಿಯೇ ಇರುತ್ತಿದ್ದಳು. ಹೊರಗೆ ಹೆಚ್ಚು ಸಂಚರಿಸುತ್ತಿರಲಿಲ್ಲ. ಹೊರಗೆ ಬಂದಾಗ ಪರದೆಯನ್ನನುಸರಿಸುತ್ತಿ ದ್ದಳು. ಆದುದರಿಂದ ಕುದುರೆ ಸವಾರಿ, ವ್ಯಾಯಾಮ ಮುಂತಾದುವನ್ನು ಕೋಟೆ ಯೊಳಗಿನ ಮುಚ್ಚುಮರೆಗಳಿದ್ದ ಏರುತಗ್ಗು ಪ್ರದೇಶಗಳಲ್ಲಿ ಅಭ್ಯಸಿಸುತ್ತಿದ್ದಳು. ಅವಳು ಹೆಚ್ಚು ಸಮಯವನ್ನು ಈ ವ್ಯಾಯಾಮಗಳನ್ನು ಅಭ್ಯಾಸ ಮಾಡುವುದರಲ್ಲಿ ಮತ್ತು ಕೋಟೆಯೊಳಗಿನ ಅರಮನೆಯಲ್ಲಿ ವಾಸಿಸುತ್ತಿದ್ದ ಸ್ತ್ರೀಯರಿಗೆ ಕುದುರೆ ಸವಾರಿ ಶಸ್ತ್ರ ಪ್ರಯೋಗ, ಕುಸ್ತಿ, ಮಲ್ಲಕಂಭ ಇವುಗಳನ್ನು ಕಲಿಸುವುದರಲ್ಲಿ ಕಳೆಯುತ್ತಿದ್ದಳು. ಉಳಿದು ಸಮಯದಲ್ಲಿ ನಿಯಮ ಪೂರ್ವಕವಾಗಿ ಧಾರ್ಮಿಕ ಗ್ರಂಥಗಳನ್ನು ಅಧ್ಯಯನ ಮಾಡ ತಿದ್ದಳು. ಭಗವದ್ಗೀತೆಯಲ್ಲಿ ಅವಳಿಗೆ ಅಪಾರ ಶ್ರದ್ಧೆ. ಬಾಲ್ಯಾವಸ್ಥೆಯನ್ನು ಕಳೆದು ಯೌವ್ವನದಲ್ಲಿ ಕಾಲಿಡುತ್ತಿದ್ದರೂ ಬೆಲೆ ಬಾಳುವ ವಸ್ತ್ರ ಭೂಷಣಗಳಲ್ಲಿ ಹೆಚ್ಚು ಆಸೆ ಪಡದೆ ಮನಸ್ಸನ್ನು ದೈವಭಕ್ತಿಯಲ್ಲಿ ಲೀನವಾಗಿಸುತ್ತಿದ್ದಳು.

ಝಾನ್ಸಿಗೆ ಬಂದನಂತರ ಚಪಲೆಯಾಗಿದ್ದ ಮನುವಿನಲ್ಲಿ ನಿಧಾನವಾಗಿ ಒಂದು ಪರಿವರ್ತನೆಯುಂಟಾಗುತ್ತಾ ಬಂದಿತು. ಅವಳು ಮೊದಲಿನಷ್ಟು ಹೆಚ್ಚು ಮಾತನಾಡು ತ್ತಿರಲಿಲ್ಲ. ರಾಣಿ ಲಕ್ಷ್ಮೀಬಾಯಿಯು ಗಂಭೀರೆಯಾಗುತ್ತಿದ್ದಳು. ಮತ್ತು ಕೋಪವು

ಎಲ್ಲಿಯೋ ಮಾಯವಾಗಿದ್ದಿತು. ಹಾಸ್ಯ ಪ್ರಕೃತಿಯು ಮುಂಚಿನಂತೆಯೇ ಇದ್ದಿತು. ಆದರೆ ಆ ಸರಳ, ಸಹಜ, ಭವ್ಯವಾದ ಮುಗುಳ್ನಗೆಯು ಯಾವಾಗಲೂ ಅವಳ ಮುಖದ ಮೇಲೆ ತಾಂಡವವಾಡುತ್ತಿದ್ದಿತು. ಮನೋದಾರ್ಢ್ಯವಾದರೋ ಪೂರ್ವಜನ್ಮ ಸಂಸ್ಕಾರ ದಿಂದಾಗಿ ಬ್ರಹ್ಮನು ಹುಟ್ಟಿದಾರಭ್ಯ ಅವಳಿಗೆ ತುಂಬಿಕೊಟ್ಟಂತೆ ಭಾಸವಾಗುತ್ತಿದ್ದಿತು.

ರಂಗ ಮಹಲಿನಲ್ಲಿ ಗಂಗಾಧರರಾಯನು ಪ್ರವೇಶಿಸಿದ ಕೂಡಲೇ ಲಕ್ಷ್ಮೀಬಾಯಿಯು ಅವನ ಸತ್ಕಾರವನ್ನು ಹಿಂದೂ ಸ್ತ್ರೀಯರು ಅದರಲ್ಲೂ ರಾಣಿಯು ಹೇಗೆ ಮಾಡ ಬಹುದೋ ಹಾಗೆ ಮಾಡಿದಳು.

ಗಂಗಾಧರರಾಯನಿಗೆ ತನ್ನ ಭಾವೋದ್ರೇಕವನ್ನು ಗೋಪ್ಯಪಡಿಸಲಾಗಲಿಲ್ಲ. ಆತ ನಿಗೆ ಈ ರೀತಿಯಾಗಿ ಸತ್ಕರಿಸಲ್ಪಡುವುದು ಅಭ್ಯಾಸವಿರಲಿಲ್ಲ. ಅವನ ಮುಖದಲ್ಲಿ ಕಠೋರತೆಯೂ ಕಣ್ಣಿನಲ್ಲಿ ಉದಾಸೀನವೂ ತೋರುತ್ತಿದ್ದವು.

ರಾಣಿಯು "ಇಂದು ನಾಟಕಶಾಲೆಯಿಂದ ಬಹಳ ಶೀಘ್ರವಾಗಿ ಹಿಂದಿರುಗಿರು ವಿರಿ ಏಕೆ? ನಾಟಕವು ಮನಸ್ಸಿಗೆ ಒಪ್ಪಲಿಲ್ಲವೆ?" ಎಂದು ಕೇಳಿದಳು.

ರಾಜನು "ನಾಟಕವು ಯಾವಾಗಲೂ ಚೆನ್ನಾಗಿಯೇ ಇರುತ್ತದೆ. ಆದರೆ ಇಂದು ಮನಸ್ಸಿಗೇಕೋ ಬೇಕಾಗಲಿಲ್ಲ. ಒಂದು ಹೊಸ ನಾಟಕವನ್ನು ತಯಾರಿಸಲು ಹೇಳಿ ಬಂದಿದ್ದೇನೆ" ಎಂದನು.

ರಾಣಿ—ಅದಾವುದು?

ರಾಜ—ಮೃಚ್ಛಕಟಿಕ

ರಾಣಿ—ಅದೇನು?

ರಾಜ—ಶೂದ್ರಕನೆಂಬ ಕವಿಯು ಸಂಸ್ಕೃತ ಭಾಷೆಯಲ್ಲಿ ಈ ನಾಟಕವನ್ನು ಬರೆ ದಿದ್ದಾನೆ. ನಾನು ಅದನ್ನು ಹಿಂದೀ ಭಾಷೆಗೆ ಭಾಷಾಂತರ ಮಾಡಿಸಿದ್ದೇನೆ. ಚಾರು ದತ್ತನೆಂಬ ಬ್ರಾಹ್ಮಣ ಮತ್ತು ವಸಂತಸೇನೆಯೆಂಬ ವೇಶ್ಯೆಯ ಪ್ರೇಮದ ಅದ್ಭುತ ಕಥೆ. ನೀನೂ ನೋಡಲು ಬರುತ್ತೀಯಾ?

ರಾಣಿ—ಇಲ್ಲ.

ರಾಜ—ಕುದುರೆ ಸವಾರಿ, ಕುಸ್ತಿ, ಮಲ್ಲಕಂಭ ಇವುಗಳನ್ನು ಬಿಟ್ಟು ಮತ್ತಾವು ದರಲ್ಲಾದರೂ ನಿನಗೆ ಅಭಿಲಾಷೆ ಇರುವುದೋ ಇಲ್ಲವೊ?

ರಾಣಿ—ಅಗತ್ಯವಾಗಿದೆ. ಸ್ನೇಹಿತರನ್ನು ನನ್ನಂತೆಯೇ ತಯಾರುಮಾಡುವುದು, ಅವಶ್ಯಬಿದ್ದರೆ ಪುರುಷರಿಗೆ ಹಿಂದೆಗೆಯದೆ ಸಹಾಯಮಾಡವುದನ್ನು ಕಲಿಸಿಕೊಡು ವುದೂ, ಮನೆಯನ್ನು ಶುಭ್ರವಾಗಿಡುವುದೂ ಇವೇ ಮುಂತಾದ ಕೆಲಸಗಳಲ್ಲಿ ಅಭಿಲಾಷೆ ಯಿದೆ.

ರಾಜ—ಈ ಸ್ತ್ರೀಯರೆಲ್ಲರನ್ನೂ ದೃಢಕಾಯರನ್ನಾಗಿ ಮಾಡಿ ನೀನೇನು

ಮಾಡುವೆ?

ರಾಣಿ—ಈಗ ಅದು ನನಗೂ ತಿಳಿಯದು, ಆದರೆ ತನುಮನಗಳನ್ನು ಬಲಪಡಿಸಿ ಸ್ವಾಧೀನದಲ್ಲಿಟ್ಟುಕೊಳ್ಳುವುದು ಏನು ಬಹಳ ಸುಲಭವಾದ ಕೆಲಸವೆ?

ರಾಜ—ವ್ಯರ್ಥ, ಸಂಸಾರದಲ್ಲಿ ನಡೆಸಬೇಕಾದ ಕರ್ತವ್ಯಗಳು ಸ್ತ್ರೀಯರಿಗೆ ಬೇಕಾದಷ್ಟಿದೆ. ಅಂತಹದರಲ್ಲಿ ಅವರನ್ನು ಕುದುರೆ ಸವಾರಿ ಮುಂತಾದುವುಗಳಿಗೆ ಎಳೆದುಕೊಂಡು ಹೋಗುವುದು ಶುದ್ಧ ಮೂಢತನ.

ರಾಣಿ—ಹಾಂ! ಸ್ವರಾಜ್ಯಸ್ಥಾಪನೆಯಾಗಿರುವುದಲ್ಲವೆ, ಈಗ ಸ್ತ್ರೀಪುರುಷರಿಗೆ ಆನಂದಿಸುವುದರ ವಿನಹ ಮತ್ತೇನು ಕೆಲಸ ಉಳಿದಿವೆ. ನೋಡಿದಿರಾ ಝಾನ್ಸಿಯ ರಾಜ್ಯದಿಂದ ಪಂಚಮಾಂಶವನ್ನು ಎಷ್ಟು ಸುಲಭವಾಗಿ ಆಂಗ್ಲೇಯರ ವಶಪಡಿಸಿದ್ದಾಯಿತು. ನಿಮ್ಮ ಆ ಮಿತ್ರ ಗಾರ್ಡನ್ ಸಾಹೇಬನೂ ಕೂಡ ನಾಟಕಶಾಲೆಗೆ ಬಂದು ಹೋಗುತ್ತಿರಬಹುದಲ್ಲವೆ?

ರಾಜ—ಆಂಗ್ಲೇಯರು ಚೆನ್ನಾಗಿ ಆಟಪಾಟ ನೃತ್ಯಗೀತಗಳಲ್ಲಿ ಆನಂದಿಸುತ್ತಾರೆ.

ರಾಣಿ—ಅವರು ನರ್ತಿಸುತ್ತ ಹಾಡುತ್ತಲೇ ನಮ್ಮ ಪೂರಾ ಹಿಂದೂಸ್ಥಾನವನ್ನೇ ಕಬಳಿಸುತ್ತಿರುವರು. ಇದು ಒಳ್ಳೆಯ ಆಟವೇ ಸರಿ.

ರಾಜ—ನಮ್ಮಲ್ಲಿ ಐಕಮತ್ಯವಿಲ್ಲ. ಹಳ್ಳಿ ಹಳ್ಳಿಗಳಲ್ಲಿಯೂ ಢಕಾಯಿತರೂ ದಂಗೆಕೋರರೂ ತುಂಬಿರುವರು. ಆಂಗ್ಲೇಯರ ಬಳಿ ಒಳ್ಳೆಯ ಶಸ್ತ್ರಾಸ್ತ್ರಗಳಿವೆ. ಆದುದರಿಂದ ಅವರು ರಾಜ್ಯಸ್ಥಾಪನೆಮಾಡಿದರು.

ರಾಣಿ—ನಾಟಕಶಾಲೆಯಲ್ಲಿ ತಯಾರಾಗುತ್ತಿರುವ ಶಸ್ತ್ರಾಸ್ತ್ರಗಳಿಂದ ಆಂಗ್ಲೇಯರನ್ನು ಸೋಲಿಸಲಾಗುವುದಿಲ್ಲವೆ?

ರಾಜನಿಗೆ ತಕ್ಷಣವೇ ಈ ವ್ಯಂಗ್ಯವು ಮನಸ್ಸನ್ನು ಚುಚ್ಚಿತು. ಆದರೆ ಆ ಮಾತಿನೊಂದಿಗಿದ್ದ ಮಂದಹಾಸವು ಆಕರ್ಷಣೀಯವಾಗಿದ್ದಿತು. ಆದರೆ ಒಡನೆಯೇ ಮೋತೀಬಾಯಿ, ಜ್ಯೂಹಿ ಮುಂತಾದ ಅಭಿನೇತ್ರಿಗಳ ಚಹರೆಯು ಮನಶ್ಚಕ್ಷುವಿನಲ್ಲಿ ಮಿಂಚಿನ ವೇಗದಲ್ಲಿ ಮೂಡಿ ಮುಂದೆ ನಡೆಯಲಿರುವ ಮೃಚ್ಛಕಟಿಕ ನಾಟಕದ ಅಭಿನಯವೇ ಒಂದು ಸಮಸ್ಯೆಯಾಗಿ ತೋರಿತು. ಅದೇ ಕ್ಷಣದಲ್ಲಿ ರಾಣಿಯ ಮುಗುಳ್ನಗೆ ಬೀರಿದ್ದ ಆಕರ್ಷಣೆಯು ಮಾಯವಾಗಿ ಅದರ ಸ್ಥಳದಲ್ಲಿ ಕೋಪೋದ್ರೇಕವಾಯಿತು. "ನೀನು ಕೆಲವು ವೇಳೆ ನಿನ್ನ ಮಾತಿನಿಂದ ನನ್ನ ಮನನೋಯಿಸುವೆ" ಎಂದನು.

ರಾಣಿಯು ದರ್ಪದಿಂದ "ಇಲ್ಲಿ ನಿಮ್ಮ ವಂಧಿಮಾಗಧರು ಕೇವಲ ನಿಮ್ಮ ಪ್ರಶಂಸೆ ಮತ್ತು ಯಶೋಗಾನವನ್ನೇ ಮಾಡುತ್ತಿರುತ್ತಾರೋ ಇಲ್ಲ ಆಗಾಗ್ಗೆ ವೀರರಿಗೆ ಹುರಿದುಂಬಿಸುವ ಹಾಡನ್ನೂ ಹೇಳುತ್ತಾರೋ ?" ಎಂದು ಕೇಳಿದಳು.

ರಾಜನಿಗೆ ಕೋಪವು ಇಮ್ಮಡಿಸಿತು. ಆದರೆ ಅವನು ಅದನ್ನು ದಮನಮಾಡಿ ಕೊಂಡು ಬದಲಾಯಿಸುತ್ತಾ "ನಮ್ಮಲ್ಲಿ ಕವಿಗಳೂ, ಚಿತ್ರಕಾರರೂ ಮುಂತಾದ ಅನೇಕ ಕಲಾವಿದರಿದ್ದಾರೆ" ಎಂದನು.

ರಾಣಿಯೂ ಆ ಮಾತನ್ನು ಹೆಚ್ಚು ಬೆಳೆಸಲು ಇಷ್ಟಪಡದೆ "ಕವಿಗಳು ಯಾರು, ಅವರೇನು ಮಾಡುತ್ತಾರೆ ?" ಎಂದು ಕೇಳಿದಳು.

ರಾಜನು "ಹೃದಯೇಶನೆಂದು ಒಬ್ಬ ಉತ್ತಮ ಕವಿ ಇದ್ದಾನೆ. ಪಜನೇಶನೆಂಬ ಶೃಂಗಾರ ಶಾಸ್ತ್ರಜ್ಞನಿದ್ದಾನೆ. ಒಳ್ಳೆಯ ಶಾಸ್ತ್ರೀಯವಾದ ಕವನಗಳನ್ನೇ ಮಾಡು ತ್ತಾನೆ" ಎಂದನು.

"ಇವರುಗಳು ಏನು ಬರೆಯುತ್ತಾರೆ ?"

"ರಾಧಾಕೃಷ್ಣ ಪ್ರೇಮದ ವರ್ಣನೆ, ನಖಶಿಖನಾಯಿಕಾಭೇದನೆ ಇವುಗಳನ್ನು ರಚಿಸುತ್ತಾರೆ."

"ನಖಶಿಖನಾಯಿಕಾ ಭೇದವೆಂದರೇನು ?"

"ರಾಧಾ ಅಥವಾ ಗೋಪಿಯರ ಉಚ್ಚಿಯಿಂದ ಉಂಗುಷ್ಟದವರೆಗಿನ ಕೋಮಲ ತೆಯ ವರ್ಣನೆ ಎಂಬುದು ನಖಶಿಖ; ನಾನಾಪ್ರಕಾರದ ಸುಂದರ ಸ್ತ್ರೀಯರ ವಿವಿಧ ವೃತ್ತಿಗಳ ವರ್ಣನೆ, ಇದು ನಾಯಿಕಾ ಭೇದ."

"ಎಂದರೆ ಅರ್ಥಾತ್ ಸ್ತ್ರೀಯರ ಅಂಗಸೌಷ್ಠವದ ಸೂಕ್ಷ್ಮಪರಿಚಯದ ವರ್ಣನೆ. ಇದಕ್ಕಾಗಿ ಇವರಿಗೆ ಹೇರಳ ಪುರಸ್ಕಾರವೂ ದೊರೆಯುತ್ತಿರಬಹುದಲ್ಲವೆ ?"

ರಾಜನು ಸ್ವಲ್ಪ ಲಜ್ಜಿತನಾದನು. ಆದರೆ ಅಂಜಲಿಲ್ಲ. "ಈ ರೀತಿಯಾದ ಕಾವ್ಯರಚನೆಗೆ ಬಹಳ ವಿದ್ವತ್ತು ಮತ್ತು ಪರಿಶ್ರಮಗಳು ಬೇಕಾಗುವುವು. ಆದುದ ರಿಂದಲೇ ಅವರಿಗೆ ತಕ್ಕ ಪುರಸ್ಕಾರ ಕೊಡಬೇಕಾಗುತ್ತದೆ. ಅವರು ರಾಜಾಸ್ಥಾನದಲ್ಲಿ ಭೂಷಣಪ್ರಾಯರು" ಎಂದನು.

ರಾಣಿಯು ಹುಸಿನಗೆ ನಗುತ್ತಾ "ಛತ್ರಪತಿ ಶಿವಾಜಿಯೂ ಈ ವಿಧವಾದ ಕವಿತೆ ಗಳಿಗೆ ಭೂಷಣವೆಂದು ಬಹುಮಾನ ಕೊಡುತ್ತಿದ್ದನೆ ? ಈ ಭೂಷಣಗಳಿಂದ ರಾಜನ ದರ್ಬಾರಿಗೆ ಶೋಭೆಯೇನೂ ಕಾಣಿಸಲಿಲ್ಲನಲ್ಲ" ಎಂದಳು.

ಈ ಪರಿಹಾಸ್ಯದಿಂದ ರಾಜನ ಕ್ರೋಧವು ಮಿತಿಮೀರಿತು. ಅವನಿಂದ ಅದನ್ನು ಅಡಗಿಸಿ ಕೊಳ್ಳಲಾಗಲಿಲ್ಲ. "ನೀನು ಅಹೋರಾತ್ರಿ ಛತ್ರಪತಿ ಶಿವಾಜಿ, ಪಂಥ ಪ್ರಧಾನ ಬಾಜೀರಾಯ ಇನ್ನೂ ಯಾರಾರೋ ಶೂರವೀರರ ಹೆಸರನ್ನು ಪಠಿಸುತ್ತಿರುತ್ತಿ. ನಾನೆಷ್ಟುಬಾರಿ ನಿನಗೆ ಇಂತಹ ಮಾತುಗಳಲ್ಲಿ ಯಾವ ಸತ್ವವೂ ಇಲ್ಲವೆಂದು ಹೇಳಿ ದ್ದೇನೆ" ಎಂದನು.

ರಾಣಿಯು "ಯಾವ ಮಾತಿನಲ್ಲಿ ಸತ್ವವಿದೆಯೋ ಅದನ್ನು ನನಗೆ ತಿಳಿಸಿ ಎಂದು

ವಿನಯ ಪೂರ್ವಕವಾಗಿ ಕೇಳಿಕೊಳ್ಳುತ್ತೇನೆ” ಎಂದಳು.

ರಾಜ—ಮೊದಲು ರಾಜ್ಯಾಡಳಿತವನ್ನು ಕಲಿತುಕೊ. ನಾನು ಇದರಲ್ಲಿ ಸಹಾಯಕನಾಗಿ ನಿಲ್ಲುವೆನು. ಸರಿಯಾದ ವ್ಯವಸ್ಥೆಯಿಂದ ರಾಜ್ಯವಾಳಿದರೆ ರಾಜ್ಯವು ನಮ್ಮದಾಗಿ ನಿಲ್ಲುವುದು. ಇಲ್ಲದಿದ್ದರೆ ಆಂಗ್ಲೇಯರು ಪುನಃ ತಮ್ಮ ಮೇಲ್ವಿಚಾರಣೆಗೆ ವಶ ಮಾಡಿ ಕೊಳ್ಳುವರು.

ರಾಣಿ—ಆ ಸಮಯದಲ್ಲಿ ನಾಟಕಶಾಲೆಯವರು ಯಾವ ಉಪಯೋಗಕ್ಕೂ ಬರಲಾರರಲ್ಲವೆ?

ರಾಜನಿಗೆ ಹೃದಯದಲ್ಲಿ ಈ ಮಾತುಗಳು ಸಿಡಿಲಿನಂತೆರಗಿದವು. ಏನೋ ಹೇಳಬೇಕೆಂದಿದ್ದನು; ಕಡೆಗೆ “ನಿನ್ನ ಮನಸ್ಸಿನಲ್ಲಿರುವ ಹಟವೇನೆಂದರೆ ಕುದುರೆಯ ಮೇಲೆ ಕುಳಿತು ಸಂಗಡಿಗರೊಂದಿಗೆ ಕೋಟೆಯ ಆಚೆ ಕಾಡು ಮೇಡು, ಬೆಟ್ಟ ಗುಡ್ಡಗಳಲ್ಲಿ ಸುತ್ತಬೇಕೆಂದಿದೆ. ಇದಕ್ಕಿಂತ ಹೆಚ್ಚಾಗಿ ರಾಜ್ಯದಲ್ಲಾಗಲೀ, ರಾಜ್ಯದ ಪ್ರಬಂಧನೆಯಲ್ಲಾಗಲೀ ಅಥವಾ ಆ ಬಡ ನಾಟಕ ಶಾಲೆಯಲ್ಲಾಗಲೀ ಯಾವ ವಿಧವಾದ ಆಸಕ್ತಿಯೂ ಇಲ್ಲ. ಇದು ಸರಿಯಲ್ಲವೆ” ಎಂದು ಕೇಳಿದನು.

ಅವನ ಕೋಪವು ರಾಣಿಯ ಮೇಲೆ ಯಾವ ಪರಿಣಾಮವನ್ನೂ ಉಂಟು ಮಾಡಲಿಲ್ಲ. “ನಿಮಗೆ ನನಗೆ ಇಬ್ಬರಿಗೂ ಈ ದೊಡ್ಡ ಅರಮನೆಯು ಸಾಲದೆ? ಎಂದಳು.

ಈ ವ್ಯಂಗ್ಯದಿಂದ ರಾಜನಿಗೆ ಘಾಸಿಯಾಯಿತು. ಆದರೆ ಅವನು ಅದನ್ನು ನುಂಗಿಕೊಂಡು ಕ್ಷಣಕಾಲ ಯೋಚಿಸಿ ಕೇಳಿದನು “ಏನು, ನಿನಗೆ ಖಂಡಿತವಾಗಿಯೂ ನಾನು ನಾಟಕ ಶಾಲೆಯಲ್ಲಿ ಮನೋರಂಜನೆ ಮಾಡಿ ಕೊಳ್ಳುವುದು ಇಷ್ಟವಿಲ್ಲವೆ?”

ರಾಣಿಯು ಕೂಡಲೆ “ಈ ಕಾಲದಲ್ಲಿ ಇನ್ನು ಇದಕ್ಕಿಂತ ಹೆಚ್ಚೇನು ನಡೆಯಬಲ್ಲದು? ರಾಜ್ಯದ ಕಾರ್ಯಕ್ರಮಗಳನ್ನು ನಡೆಸಲು ದಿವಾನನಿದ್ದಾನೆ. ಥಕಾಯಿತರು ದಂಗೆಕೋರರನ್ನು ಅಡಗಿಸಿ ಪ್ರಜೆಗಳನ್ನು ಸನ್ಮಾರ್ಗಪ್ರವರ್ತಕರನ್ನಾಗಿ ಮಾಡಲು ಆಂಗ್ಲೇಯರ ಸೇನೆ ಇವೆ. ಇದರಲ್ಲೂ ಏನಾದರೂ ತಪ್ಪಾದರೆ ಕಂಪೆನಿಯ ಏಜಂಟನನ್ನು ಸಂತೃಪ್ತಿಗೊಳಿಸಿದರಾಯಿತು. ಎಲ್ಲವೂ ನೀವು ಯೋಚಿಸಿದಂತೆಯೇ ನಡೆಯುತ್ತಿದೆ” ಎಂದು ಹೇಳಿದಳು.

ರಾಣಿಗೆ ನಗು ಬಂದಿತು. ಮುಗುಳ್ನಗೆ ನಕ್ಕಳು.

ಅವಳ ಈ ವಿಲಕ್ಷಣ ವರ್ತನೆಯನ್ನು ನೋಡಿ ರಾಜನು ಸ್ವಲ್ಪ ವಿಸ್ಮಿತನಾದನು. ಆತನ ತುಟಿಗಳಲ್ಲಿ ಮೆಲುನಗೆಯೊಂದು ಸುಳಿದಾಡಿತು.

## ೧೭

ರಾಜಾ ಗಂಗಾಧರರಾಯನೂ ಮತ್ತು ರಾಣೀ ಲಕ್ಷ್ಮೀಬಾಯಿಯೂ ಇದೇ ರೀತಿಯಾಗಿ ಕಾಲವನ್ನು ತಳ್ಳುತ್ತಿದ್ದರು. ಸ್ಟ ೧೮೫೦ (ಮಾಘ ಶುದ್ಧ ಪೌರ್ಣಿಮಿ ಸ್ಟ ೧೯೦೭) ರಲ್ಲಿ ಕಂಪನಿ ಸರ್ಕಾರದ ಅಪ್ಪಣೆಯನ್ನು ಹೊಂದಿ ಅವರು ಪರಿವಾರ ಸಮೇತರಾಗಿ ಪ್ರಯಾಗ, ಕಾಶಿ, ಗಯಾ ಮುಂತಾದ ಪುಣ್ಯಕ್ಷೇತ್ರಗಳಿಗೆ ಯಾತ್ರೆ ಹೊರಟರು. ಲಕ್ಷ್ಮೀಬಾಯಿಯು ಝಾನ್ಸಿಯಲ್ಲಿ ಯಾವಾಗಲೂ ಕೋಟೆಯೊಳಗೇ ಅಡಗಿರಬೇಕಾಗಿದ್ದಿತು. ಈ ಯಾತ್ರೆಯಲ್ಲಿಯೂ ಕೂಡ ತೆರೆಗಳಿಂದ ಮರೆಮಾಡಿದ ಮೇನೆಯಲ್ಲಿ ಕುಳಿತು ಸಂಚರಿಸಬೇಕಾಗಿದ್ದಿತು. ಆದರೆ ಹೊಸ ಹೊಸ ಪ್ರದೇಶಗಳನ್ನು ನೋಡುವ ಅವಕಾಶ ದೊರೆಯಿತು. ಆದುದರಿಂದ ಬಂಧನದ ಕ್ಲೇಶವು ಅಷ್ಟಾಗಿ ಕಾಣಿಸಲಿಲ್ಲ. ಕಾಶೀಯಾತ್ರೆಯಲ್ಲಿ ದೇವದರ್ಶನವೂ ಮತ್ತು ಜನ್ಮಗೃಹದರ್ಶನವೂ ಪ್ರಾಪ್ತವಾದವು.

ಗಂಗಾಧರರಾಯನ ಕೋಪಕ್ಕೆ ಸಮಯಾಸಮಯಗಳ ಪರಿಜ್ಞಾನವಿರಲಿಲ್ಲ. ಒಂದು ದಿನ ಕಾಶಿಯಲ್ಲಿ ತಿರುಗಾಡಲು ಹೊರಟಾಗ ದಾರಿಯಲ್ಲಿ ರಾಜೇಂದ್ರಬಾಬು ಎಂಬ ವ್ಯಕ್ತಿಯು ಇವನೆದುರು ಬಂದನು. ಆತನು ಪ್ರಣಾಮವನ್ನೇನೋ ಮಾಡಿದನು. ಆದರೆ ನಿಂತು ಸನ್ಮಾನ ಪ್ರದರ್ಶನ ಮಾಡಲಿಲ್ಲ. ಇದರಿಂದ ಗಂಗಾಧರರಾಯನಿಗೆ ಕೋಪ ಬಂದು ಅವನನ್ನು ಮನಸ್ವೀ ಥಳಿಸಿದನು. ರಾಜೇಂದ್ರಬಾಬುವು ಕಂಪೆನಿ ಸರ್ಕಾರಕ್ಕೆ ಈ ವಿಷಯವಾಗಿ ಅರಿಕೆಮಾಡಿಕೊಂಡನು. "ಗಂಗಾಧರರಾಯನು ದೊಡ್ಡ ಮಹಾರಾಜನು. ನಿನಗೆ ಆ ಮಹಾರಾಜನಿಗೆ ಮುಜರೆ ಮಾಡಿ ಸನ್ಮಾನ ಪ್ರದರ್ಶಿಸಲು ಇಷ್ಟವಿಲ್ಲದಿದ್ದ ಪಕ್ಷದಲ್ಲಿ ಮನೆಯಲ್ಲಿಯೇ ಕುಳಿತಿರಬೇಕಾಗಿದ್ದಿತು" ಎಂದು ಕಂಪೆನಿ ಸರ್ಕಾರದಿಂದ ಉತ್ತರ ಬಂದಿತು.

ರಾಣಿಗೆ ಇವೆಲ್ಲವನ್ನರಿತು ಮನಸ್ಸಿಗೆ ಬಹಳ ವ್ಯಸನವಾಯಿತು. ತೀರ್ಥಯಾತ್ರೆಗೆಂದು ಝಾನ್ಸಿಯನ್ನು ಬಿಡುವ ಮೊದಲು ಶಾಸನಾಧಿಕಾರವನ್ನು ಗಂಗಾಧರರಾಯನಿಗೆ ಕಂಪೆನಿ ಸರ್ಕಾರವು ಹಿಂದಿರುಗಿ ಕೊಟ್ಟಾಗ ಮೊದಲಿನಿಂದಲೂ ಕೂಡಿಡಲ್ಪಟ್ಟಿದ್ದ ಮೂವತ್ತು ಲಕ್ಷ ರೂಪಾಯಿಗಳನ್ನು ಅವನಿಗೆ ವಾಪಸ್ಸು ಮಾಡಲಾಯಿತು. ಅವನು ಅದನ್ನು ದುಂದುವೆಚ್ಚ ಮಾಡಿದನು. ಅವನಿಗೆ ತನ್ನ ಅನೇಕ ಆನೆಗಳಲ್ಲಿ "ಸಿದ್ಧಬಕ್ಷ" ಎಂಬ ಹೆಸರಿನ ಆನೆಯು ಅತ್ಯಂತ ಪ್ರಿಯವಾಗಿದ್ದಿತು. ಆ ಆನೆಯ ಎಲ್ಲಾ ಅಲಂಕಾರ ವಸ್ತುಗಳನ್ನೂ ಚಿನ್ನದಿಂದ ಮಾಡಿಸಿದನು. ಮತ್ತು ಇನ್ನೂ ಅನೇಕ ಆನೆ ಕುದುರೆಗಳ ಅಲಂಕಾರ ಸಾಮಗ್ರಿಗಳನ್ನೂ, ಅಂಬಾರಿ, ಹೌದ, ಲಗಾಮು ಮುಂತಾದವುಗಳನ್ನು ಬೆಳ್ಳಿ ಭಂಗಾರದಿಂದ ತಯಾರಿಸಿದನು. ಕಾಶಿಯಿಂದ ಬಹು ಬೆಲೆಯುಳ್ಳ ನಕಾಸು ಕೆಲಸ ಮಾಡಿದ ಮೇನೆಯೊಂದನ್ನು ತರಿಸಿದನು. ಇನ್ನೂ

ಅನೇಕ ಕೆಲಸಕ್ಕೆಬಾರದ ಖರ್ಚುಗಳನ್ನು ಮಾಡಿದನು. ರಾಜನು ಆಡಂಬರ ಪ್ರಿಯ; ರಾಣಿಗೆ ಪ್ರದರ್ಶನಗಳೊಂದೂ ಬೇಕಿರಲಿಲ್ಲ. ಆದರೆ ಅವಳಿಗೆ ರಾಜನು ಮಾಡಿದ ಒಂದು ಏರ್ಪಾಡು ಸೂಕ್ತವೆಂದು ತೋರಿತು. ಅದೇನೆಂದರೆ—ಸುಮಾರು ೫೦೦೦ ಸೇನೆ ೨೦೦೦ ಶಸ್ತ್ರ ಸಜ್ಜಿತ ಪೋಲೀಸು, ೫೦೦ ಕುದುರೆ ಸವಾರರು, ೧೦೦ ಅಂಗ ರಕ್ಷಕ ಸೇನೆ ಮತ್ತು ೪ ತೋಪುಗಳು.

ಝಾನ್ಸಿ ಮತ್ತು ಬುಂದೇಲು ಖಂಡಗಳಲ್ಲಿ ಸಾಧಾರಣ ಎಲ್ಲಾ ಪ್ರದೇಶಗಳಲ್ಲಿಯೂ ದರೋಡೆ ಕಾರರ ಮತ್ತು ದಂಗೆಕೋರರ ಉಪದ್ರವಿದ್ದಿತು. ಗಂಗಾಧರ ರಾಯನು ತನ್ನ ಕಠೋರ ಶಾಸನಗಳಿಂದ ಇವುಗಳನ್ನು ಅಡಗಿಸಿದ್ದನು. ಈ ಕಾರ್ಯದಲ್ಲಿ ಆತನ ಪ್ರಧಾನ ಮಂತ್ರಿ ರಾಘವ ರಾಮಚಂದ್ರಪಂತ್ ನ್ಯಾಯಾಧೀಶ ವೃದ್ಧ ಬೋಪಟ್‌ಕರ್ ಮತ್ತು ದರ್ಬಾರಿನ ವಕೀಲ ನರಸಿಂಹರಾವ್ ಇವರುಗಳು ಬಹಳ ಸಹಾಯ ವೆಸಗಿದರು. ರಾಜನ ಶಾಸನಗಳಿಂದ ಆಂಗ್ಲೇಯರು ಸಂತುಷ್ಟರಾಗಿದ್ದರು. ಏತಕ್ಕೆಂದರೆ ದಂಗೆಕೋರರನ್ನು ಅಡಗಿಸುವುದು ರಾಜನ ಮುಖ್ಯ ಕರ್ತವ್ಯವಾಗಿದ್ದಿತು.

ಗಂಗಾಧರರಾಯನು ಆಂಗ್ಲೇಯರಿಗೆ ಅನೇಕ ಸಮಯಗಳಲ್ಲಿ ಸಹಾಯ ಮಾಡಿದ್ದನು. ಒಂದು ಬಾರಿ ತನ್ನ ಪ್ರಿಯ ಸ್ನೇಹಿತನೂ ಮತ್ತು ಸೇನೆಯಲ್ಲಿ ಅಧಿಕಾರಸ್ಥನೂ ಆದ ದಿವಾನ್ ರಘುನಾಥ ಸಿಂಹನನ್ನು ಕೆಲವು ಸಿಪಾಯಿಗಳೊಂದಿಗೆ ಮಾಹಿವ್ಕಾನ ಮೇಲೆ ದಂಡೆತ್ತಿ ಕಳುಹಿಸಿದ್ದನು. ದಿವಾನ್ ರಘುನಾಥಸಿಂಹನು ಆಜ್ಞೆಯನ್ನು ಶಿರಸಾವಹಿಸಿದ ಯೋಧನಾಗಿದ್ದನು. ಶೌರ್ಯವನ್ನು ಪ್ರದರ್ಶಿಸಿ ತನ್ನ ಕರ್ತವ್ಯವನ್ನು ಪರಿಪಾಲನೆ ಮಾಡಿದನು. ಗಂಗಾಧರರಾಯನಿಗೆ ಆಂಗ್ಲೇಯರ ಸ್ನೇಹ ಮತ್ತಷ್ಟು ಹೆಚ್ಚಾಯಿತು. ದಿವಾನ್ ರಘುನಾಥಸಿಂಹನಿಗೆ ಇಂಗ್ಲೆಂಡ್ ಮತ್ತು ಕಂಪೆನಿ ಸರ್ಕಾರದ ರಾಣಿ ವಿಕ್ಟೋರಿಯರವರಿಂದ ಒಂದು ಪ್ರಶಂಸನಾ ಪತ್ರ ಮತ್ತು ಒಂದು ಖಡ್ಗ ಇವು ದೊರೆತವು.

ಆದರೆ ರಾಣೀ ಲಕ್ಷ್ಮೀಬಾಯಿಗೆ ತನ್ನ ಪತಿಗೆ ದೊರೆತ ಈ ಯಶಸ್ಸು ಸಂತೋಷವನ್ನುಂಟು ಮಾಡಲಿಲ್ಲ. ಅವಳಿಗೆ ಆಗ ಸುಮಾರು ಹದಿನೈದು ವರ್ಷಗಳಿರಬಹುದು. ಆದರೆ ಆಕೆಯ ಆಚಾರ ವಿಚಾರಗಳು ಆಶ್ಚರ್ಯವನ್ನುಂಟು ಮಾಡುವ ಪರಿಪಕ್ವತೆಯನ್ನು ಹೊಂದಿದ್ದವು. ಯಾವ ವಯಸ್ಸಿನಲ್ಲಿ ಆ ಕಾಲದ ಬಾಲಕಿಯರು ಉಟ್ಟು ತೊಟ್ಟು ನಲಿದಾಡುವುದನ್ನು ಅಪೇಕ್ಷಿಸುತ್ತಿದ್ದರೋ ಆ ವಯಸ್ಸಿನಲ್ಲಿ ಲಕ್ಷ್ಮೀಬಾಯಿಯು ಅತ್ಯಂತ ಗಂಭೀರ ಸ್ವಭಾವವನ್ನು ತಾಳಿದ್ದಳು. ಚಿಕ್ಕ ವಯಸ್ಸಿನ ಸುಂದರಿ ಮನೂ ಲಕ್ಷ್ಮೀಬಾಯಿಯ ವಿಶಾಲ ಆದರ್ಶದಲ್ಲಿ ವಿಲೀನಳಾಗಿ ಹೋದಳು.

# ೧೮

ರಾಜಾ ಗಂಗಾಧರರಾಯನು ಪೂರ್ವ ಸಂಪ್ರದಾಯದವನಾಗಿದ್ದನು. ಮಹಾರಾಷ್ಟ್ರ ಸ್ತ್ರೀಯರಿಗೆ ವಾಡಿಕೆಯಾಗಿರತಕ್ಕಂಥ ಸ್ತ್ರೀಸ್ವಾತಂತ್ರ್ಯಕ್ಕೆ ಆತನ ಒಪ್ಪಿಗೆಯಿರಲಿಲ್ಲ. ಅವನು ದಿಲ್ಲಿ, ಲಕ್ನೋ ಮುಂತಾದ ಉತ್ತರ ದೇಶಗಳಲ್ಲಿ ಅನುಸರಿಸಲ್ಪಡುತ್ತಿದ್ದ ಘೋಷಾ ಪದ್ಧತಿಯನ್ನು ತನ್ನ ರಾಣೀವಾಸದಲ್ಲಿ ಜಾರಿಗೆ ತರಲಾಗುತ್ತಿರಲಿಲ್ಲ. ಇದು ಅವನಿಗೆ ತಿಳಿದಿದ್ದಿತು. ತನ್ನ ರಾಜ್ಯದ ಸ್ತ್ರೀಯರು ಅವಕುಂಠನವತಿಯರಾಗಿ ಅಥವಾ ಅವಕುಂಠನವಿಲ್ಲದೇ ತಿರುಗಿದರೂ ಅವನಿಗೆ ಯಾವುದರಲ್ಲಿಯೂ ಆಸಕ್ತಿಯಿರಲಿಲ್ಲ. ಆದರೆ ತನ್ನ ಅಂತಃಪುರದ ಸ್ತ್ರೀಯರು ಘೋಷಾ ಪದ್ಧತಿಯನ್ನು ಅನುಸರಿಸಬೇಕೆಂಬುದು ಅವನ ಮತವಾಗಿದ್ದಿತು.

ಇದರಿಂದಾಗಿ ಲಕ್ಷ್ಮೀಬಾಯಿಯು ಕೋಟೆಯ ಆಚೆ ಕುದುರೆ ಸವಾರಿ ಮಾಡಲು ಸಾಧ್ಯವಾಗುತ್ತಿರಲಿಲ್ಲ; ಮತ್ತು ಕೋಟೆಯೊಳಗಡೆಯೂ ಅವಳ ಸ್ವಾತಂತ್ರ್ಯದ ಮೇಲೂ ಅನೇಕ ನಿರ್ಬಂಧಗಳು ಏರ್ಪಟ್ಟವು. ತೀರ್ಥಯಾತ್ರೆಯಿಂದ ಹಿಂದಿರುಗಿದ ಮೇಲೆ ಕೋಟೆಯಲ್ಲಿದ್ದ ಅರಮನೆಯ ಮೈದಾನದ ನಾಲ್ಕು ಕಡೆಯೂ ಪರದೆಯನ್ನು ಹಾಕಲಾಯಿತು. ಇದರಿಂದ ಆಕೆಯ ಕುದುರೆ ಸವಾರಿ ಮುಂತಾದ ವ್ಯಾಯಾಮಗಳಿಗೆ ಮತ್ತಷ್ಟು ಅಡಚಣೆಯಾಯಿತು. ಮಲ್ಲಕಂಭ, ಕುಸ್ತಿಗಳನ್ನೂ ತನ್ನ ಅರಮನೆಯ ಆವರಣದಲ್ಲೇ ದಪ್ಪಗೆ ಮೃದುವಾದ ರತ್ನಗಂಬಳಿಗಳ ಮೇಲೆ, ಪರದೆಯ ಹಿಂದೆಯೇ ಮಾಡಬೇಕಾಯಿತು. ಆದರೆ ಅವಳು ಅಭ್ಯಾಸವನ್ನು ಮಾತ್ರ ಬಿಡಲಿಲ್ಲ. ಗಂಗಾಧರ ರಾಯನು ಅವಳ ಸಖಿಯರನ್ನು ಈ ವ್ಯಾಯಾಮಗಳನ್ನು ಕಲಿಯುವುದರಿಂದ ನಿರುತ್ಸಾಹಪಡಿಸಬೇಕೆಂದು ಪ್ರಯತ್ನಿಸಿದನು. ಆದರೆ ಸುಂದರಿ, ಮುಂದರಿ ಮತ್ತು ಕಾಶಿಬಾಯಿಯರನ್ನು ಅವಳಿಂದ ಬೇರ್ಪಡಿಸಲಾಗಲಿಲ್ಲ.

ಈ ವೈಮನಸ್ಯಗಳ ಕಾರಣವಾಗಿ ಗಂಗಾಧರರಾಯನ ಕ್ರೋಧವು ದಿನೇ ದಿನೇ ವರ್ಧಿಸುತ್ತಿದ್ದಿತು. ಮತ್ತು ಅವನು ಅಪರಾಧಿಯರನ್ನು ದಂಡಿಸುವುದಕ್ಕಾಗಿ ಹೊಸ ಹೊಸ ಸಾಧನಗಳನ್ನು ಜಾರಿಗೆ ತರಲಾರಂಭಿಸಿದನು.

ಮೃಚ್ಛಕಟಿಕ ನಾಟಕವನ್ನು ಅಭಿನಯಿಸುವ ದಿನವು ಬಂದಿತು. ಮೋತೀಬಾಯಿಯು ವಸಂತಸೇನೆ ಮತ್ತು ಜ್ಯೂಹಿಯು ಅವಳ ಸಖಿಯ ಭೂಮಿಕೆಯಲ್ಲಿದ್ದರು. ಆ ದಿನ ರಾಜನು ನಾಟಕಶಾಲೆಯನ್ನು ಅತ್ಯಂತ ಚೆನ್ನಾಗಿ ಅಲಂಕಾರ ಮಾಡಿಸಿದ್ದನು. ಗಾರ್ಡನ್ ಸಾಹೇಬನಿಗೂ ಆಮಂತ್ರಣವಿದ್ದಿತು. ನಾಟಕವು ಚೆನ್ನಾಗಿ ನಡೆಯಿತು. ಕ್ಯಾಪ್ಟನ್ ಗಾರ್ಡನ್ ಸಾಹೇಬನು ನೃತ್ಯಗಾಯನಗಳೆಲ್ಲವನ್ನೂ ಪ್ರಶಂಸಿಸಿದನು. ನಾಟಕದ ಅಂತ್ಯದಲ್ಲಿ ಗಾರ್ಡನ್ನನು ರಾಜನನ್ನು ಕುರಿತು "ಮಹಾರಾಜ, ನನಗೊಂದು

ವಿಚಾರವು ವಿಶದವಾಗಲಿಲ್ಲ. ನಿಮ್ಮ ಸಂಸ್ಕೃತಿಯಲ್ಲಿ ವೇಶ್ಯೆಯರಿಗೆ ಏತಕ್ಕೆ ಇಷ್ಟು ಉನ್ನತಸ್ಥಾನ ಕೊಡಲಾಗಿದೆ ?" ಎಂದು ಕೇಳಿದನು.

ರಾಜನು ನಗುತ್ತಾ "ನಮ್ಮ ಪೂರ್ವಿಕರು ಬಹಳ ತಿಳಿದಂಥವರಾಗಿದ್ದರು" ಎಂದು ಹೇಳಿದನು.

ಗಾರ್ಡನ್ ಸಾಹೇಬನಿಗೆ ತನ್ನ ದೇಶದ ಕ್ರಾಮವೆಲ್ ಕಾಲದ (ತೀವ್ರಮತಾವಲಂಬಿ! Puritanism) ಮತ್ತು ಅವನ ನಂತರವೇ ಬಂದ ಎರಡನೆ ಛಾರಲ್ಸ್ ಕಾಲದ ಸ್ವೇಚ್ಛಾಚರಣೆಯು ನೆನಪಿಗೆ ಬಂದು "ಹಾಗಲ್ಲ ಮಹಾರಾಜ, ಅದು ಅಷ್ಟೇ ಅಲ್ಲ, ಮುಖ್ಯವಾಗಿ ಹಿಂದೂಸ್ಥಾನವು ಎಷ್ಟೋ ವಿಚಾರದಲ್ಲಿ ಹಿಂದುಳಿದಿದೆ" ಎಂದನು.

ಗಂಗಾಧರರಾಯನು "ಈವಿಚಾರವಾಗಿ ಮತ್ತಾವಾಗಲಾದರೂ ಚರ್ಚಿಸೋಣ" ಎಂದನು.

ಗಾರ್ಡನ್ ಸಾಹೇಬನು ಅಲ್ಲಿಂದ ಹೊರ ಬೀಳಲು ಉದ್ಯುಕ್ತನಾದಾಗ ರಾಜನು ಒಂದು ಮೂಲೆಯಲ್ಲಿ ಖುದಾಬಕ್ಷನು ನಿಂತಿರುವುದನ್ನು ನೋಡಿದನು. ಆದರೆ ತನ್ನ ಅಂಗರಕ್ಷಕನೊಡನೆ ಇವನಾರೆಂದು ಕೇಳಿದನು. ಅಂಗರಕ್ಷಕನು ಖುದಾಬಕ್ಷನೆಂದು ಉತ್ತರವಿತ್ತನು.

ರಾಜನು "ಇಲ್ಲಿಗೆ ಹೇಗೆ ಬಂದ ?" ಎಂದು ಕೇಳಿದನು.

ಅಂಗರಕ್ಷಕನು ಉತ್ತರಿಸಲಾಗಲಿಲ್ಲ. ಖುದಾಬಕ್ಷನು ಇದನ್ನರಿತು ಒಡನೆಯೇ ಗುಂಪಿನಲ್ಲಿ ಸೇರಿ ಪಾರಾಗಿ ಹೋದನು.

ಗಾರ್ಡನ್ನನು "ಏನು ವಿಷಯ ಮಹಾರಾಜಸಾಹೇಬ್ ?" ಎಂದು ಕೇಳಿದನು. ರಾಜನು "ಏನೂ ಇಲ್ಲ. ಅವೇ ಒಬ್ಬ ಮನುಷ್ಯನನ್ನು ಬಹುದಿನಗಳನಂತರ ನಾಟಕ ಶಾಲೆಯಲ್ಲಿ ನೋಡಿದೆನು" ಎಂದನು.

ಗಾರ್ಡನ್‌ಸಾಹೇಬನು ಹೊರಟುಹೋದನು. ರಾಜನು ನಾಟಕ ಶಾಲೆಯ ಪ್ರಹರಿಯನ್ನು ಬಂಧಿಸಿ, ಬೆಳಿಗ್ಗೆ ತನ್ನ ಸಮ್ಮುಖದಲ್ಲಿ ಕರೆತರುವಂತೆ ಆಜ್ಞೆಯಿತ್ತನು.

ಖುದಾಬಕ್ಷನನ್ನು ಬಹಳವಾಗಿ ಹುಡುಕಿಸಿದನು, ಆದರೆ ಆತನು ಪತ್ತೆಯಾಗಲಿಲ್ಲ.

ಮರುದಿನ ಮೋತೀಬಾಯಿಯು ನಾಟಕ ಶಾಲೆಯಿಂದ ಹೊರದೂಡಲ್ಪಟ್ಟಳು. ನಾಟಕಶಾಲೆಯ ನಟನಟಿಯರಿಗೆ ಇದಕ್ಕೆ ಯಾವ ಕಾರಣವೂ ಕಂಡು ಬರಲಿಲ್ಲ. ಅವರುಗಳು ಇಂತಹ ಉತ್ತಮ ಅಭಿನಯ ಮುಂತಾದವುಗಳನ್ನು ಮಾಡಿದುದಕ್ಕಾಗಿ ಒಳ್ಳೆಯ ಸನ್ನದು, ಪುರಸ್ಕಾರಗಳು ದೊರೆಯುವುವೆಂದು ಆಶಿಸುತ್ತಿದ್ದರು. ಆದರೆ ಅದಕ್ಕೆ ತೀರ ವ್ಯತಿರಿಕ್ತವೇ ನಡೆಯಿತು. ಅವರಲ್ಲೆಲ್ಲ ಉತ್ತಮ ಅಭಿನೇತ್ರಿ ಹೊರ ದೂಡಲ್ಪಟ್ಟಳು. ಝೂನ್ಸಿಯಲ್ಲಿ ಅವಳ ನೃತ್ಯವನ್ನು ನೋಡಿದ್ದವರೂ ಮತ್ತು ಗಾನವನ್ನು ಕೇಳಿದ್ದವರೂ ಬಹಳ ಕ್ಷುಬ್ಧಗೊಂಡರು.

ಮರುದಿನ ಬೆಳಿಗ್ಗೆ ನಾಟಕಶಾಲೆಯ ಪ್ರಹರಿಯ ವಿಚಾರಣೆ ನಡೆಯಿತು. ರಾಜನೇ ಸ್ವತಃ ವರದಿಯನ್ನು ಕೇಳಿದನು.

ರಾಜನು ದಿಟ್ಟತನದಿಂದ "ಎಲಾ ಕೃತಘ್ನ, ಖುದಾಬಕ್ಷನು ನಾಟಕಶಾಲೆಗೆ ಹೇಗೆ ಪ್ರವೇಶಿಸಿದನು ?" ಎಂದು ಕೇಳಿದನು.

ಆತನು ಹೆದರುತ್ತಾ "ಸರ್ಕಾರ್, ನನಗೆ ಮರೆತುಹೋಯಿತು. ಜ್ಞಾಪಕವಿರಲಿಲ್ಲ" ಎಂದು ಹೇಳಿದನು.

ರಾಜನು "ನಾನು ಅವನನ್ನು ದೇಶಭ್ರಷ್ಟನನ್ನಾಗಿ ಮಾಡಿದುದು ಮರೆತು ಹೋಯಿತೆ ?" ಎಂದು ಕೇಳಿದನು.

ಪ್ರಹರಿಯು ನಮ್ರತೆಯಿಂದ "ಪ್ರಭು, ಆ ಪ್ರಕರಣ ನಡೆದು ಬಹಳ ದಿನಗಳಾಗಿ ಹೋದವು. ಆದುದರಿಂದ ಜ್ಞಾಪಕವಿರಲಿಲ್ಲ. ಅಲ್ಲದೆ ತಾವು ತೀರ್ಥಯಾತ್ರೆಯಿಂದ ಹಿಂದಿರುಗಿದ ದಿನ ಸಂತೋಷಸಮಾರಂಭದಲ್ಲಿ ಅನೇಕರಿಗೆ ಕ್ಷಮಾಭಿಕ್ಷೆಯನ್ನು ನೀಡಿದ್ದಿರಿ. ಆಗ ಈತನಿಗೂ ಕ್ಷಮೆಯು ದೊರಕಿರಬಹುದು ಎಂದು ಭಾವಿಸಿದೆನು" ಎಂದನು.

ರಾಜನಿಗೆ ಈ ಪ್ರತ್ಯುತ್ತರದಿಂದ ಕೋಪವಿಳಿಯಲಿಲ್ಲ. ರೋದಿಸುತ್ತಿದ್ದ ಪ್ರಹರಿಗೆ ಚೇಳುಗಳಿಂದ ಕುಟುಕಿಸಬೇಕೆಂದು ದಂಡನೆಯನ್ನಿತ್ತನು.

ಗಂಗಾಧರರಾಯನು ಒಂದು ವಿಶೇಷವರ್ಗದ ಅಪರಾಧಿಗಳಿಗೆ ಚೇಳಿನಿಂದ ಕುಟುಕಿಸುವ ದಂಡನೆಯನ್ನೇರ್ಪಡಿಸಿದ್ದನು. ಕಾಲುಗಳನ್ನು ಮರದ ತುಂಡುಗಳ ಮಧ್ಯದಲ್ಲಿರಿಸಿ ಅವುಗಳನ್ನು ತಿರುಪು ಮೊಳೆಗಳಿಂದ ಬಂಧಿಸಿ ಯಾತನೆಯನ್ನುಂಟು ಮಾಡುವಂತೆ ಬಿಗಿಯುತ್ತಿದ್ದುದು ಸರ್ವೇ ಸಾಧಾರಣವಾದ ದಂಡನೆಯಾಗಿದ್ದಿತು. ಮಹಾಪರಾಧಿಗಳಿಗೆ ಕೈಕಾಲುಗಳನ್ನು ತುಂಡರಿಸುವುದಕ್ಕೆ ಜನಾಭಿಪ್ರಾಯವನ್ನು ಪಡೆಯುವುದು ಜಾರಿಯಲ್ಲಿದ್ದಿತು. ಬರುಬರುತ್ತಾ ಇದು ಸ್ವಲ್ಪ ಸ್ವಲ್ಪವಾಗಿ ಕಡಿಮೆಯಾಗಿದ್ದಿತು. ಢಕಾಯಿತರ ಅಂಗಾಂಗಗಳ ಸುಡಿಸುವಿಕೆಯೂ ಈ ಶಿಕ್ಷೆಯಲ್ಲಿ ಸೇರಿದ್ದಿತು. ಆದರೆ ಚೇಳುಗಳಿಂದ ಕುಟುಕಿಸುವುದು ಜನರಿಗೆ ಸಹನಾತೀತವಾಗಿದ್ದಿತು.

ಚೇಳುಗಳಿಂದ ಅನೇಕ ಸಲ ಕುಟುಕಿಸಿದುದರ ಪರಿಣಾಮವಾಗಿ ಪ್ರಹರಿಯು ಜ್ಞಾನ ತಪ್ಪಿದನು. ಆತನು ಸತ್ತನೆಂದು ಭಾವಿಸಿ ರಾಜನ ಕೋಪವು ಶಮನವಾಯಿತು. ಪ್ರಹರಿಯನ್ನು ಅಲ್ಲಿಂದ ಎತ್ತಿಕೊಂಡು ಹೋದರು.

## ೧೯

ಕ್ಯಾಪ್ಟನ್ ಗಾರ್ಡನ್ ಸಾಹೇಬನು ಝಾನ್ಸಿಯಲ್ಲಿ ನೆಲೆಸಿದ್ದ ಆಂಗ್ಲೇಯರ ಪಡೆಯ ಅಧಿಕಾರಿಯಾಗಿದ್ದನು. ಆತನು ಹಿಂದೀ ಭಾಷೆಯನ್ನು ಚೆನ್ನಾಗಿ ಅರಿತಿ

ದ್ದನು. ರಾಜ ಗಂಗಾಧರರಾಯನಲ್ಲಿಗೆ ಆಗಾಗ್ಗೆ ಹೋಗಿ ಬರುತ್ತಿದ್ದನು. ಗಂಗಾಧರ ರಾಯನು ಆತನನ್ನು ತನ್ನ ಸ್ನೇಹಿತನೆಂದು ಭಾವಿಸಿದ್ದನು. ಆತನು ಸರ್ವವಿಧದಲ್ಲೂ ಆಂಗ್ಲೇಯನಾಗಿದ್ದನು. ಉತ್ತಮ ಸಾಹಿತಿ, ವ್ಯಾಪಾರ ಕುಶಲಿ, ಮತ್ತು ಸ್ವದೇಶ ಪ್ರೇಮಿ. ಭಾರತ ವರ್ಷವನ್ನು ತಿರಸ್ಕಾರ ಮತ್ತು ಅವಹೇಳನದಿಂದ ಕಾಣುತ್ತಿದ್ದನು. ಆದರೆ ಭಾರತದ ರಾಜಮಹಾರಾಜರುಗಳನ್ನು ಪುಸಲಾಯಿಸಿ ಸ್ನೇಹ ಬೆಳಸಿ ತನ್ನ ಕಾರ್ಯಸಾಧನೆ ಮಾಡಿಕೊಳ್ಳುವುದರಲ್ಲಿ ನಿಪುಣ.

ರಾಜನನ್ನು ಭೇಟಿ ಮಾಡಲು ಗಾರ್ಡನ್ ಸಾಹೇಬನು ಕೆಲವು ವೇಳೆ ಅಶ್ವಾರೂಢನಾಗಿಯೂ, ಮತ್ತು ಕೆಲವು ವೇಳೆ ಮೇನೆಯಲ್ಲಿಯೂ ಕುಳಿತು ಬರುತ್ತಿದ್ದನು. ನವಾಬರ ಮೇಲೆ ದಬ್ಬಾಳಿಕೆ ನಡೆಸಿ ನಡೆಸಿ, ಆಂಗ್ಲೇಯರಿಗೆ ಅವರ ರೀತಿ ನೀತಿಗಳು ಹಲವು ಬಂದಿದ್ದವು—ಹುಕ್ಕಾ, ಸುರಾಪಾನ, ವೇಶ್ಯೆಯರ ನರ್ತನ. ಹೋಲಿ, ದಸರಾ, ದಿವಾಳಿ, ಈದ್ ಮುಂತಾದ ಸಮಾರಂಭಗಳನ್ನು ನವಾಬರೂ, ಮಹಾರಾಜರೂ ಮತ್ತು ಪ್ರಜೆಗಳೂ ಅನುಸರಿಸುತ್ತಿದ್ದುದರಿಂದ ಜನತೆಯಲ್ಲಿ ಹೆಚ್ಚು ಹೆಚ್ಚಾಗಿ ಮೇಳೈಸುವುದಕ್ಕಾಗಿ ಆಂಗ್ಲೇಯರೂ ಆಚರಿಸುತ್ತಿದ್ದರು. ಆದರೆ ಅವರೆಂದಿಗೂ ಇವುಗಳಲ್ಲಿ ಹಾಸುಹೊಕ್ಕಾಗಿ ಬೆರೆಯಲಿಲ್ಲ. ಅವರ ಗಮನವೆಲ್ಲವೂ ಯಾವಾಗಲೂ ಇಂಗ್ಲೆಂಡ್ ದೇಶದ ಮೇಲೆಯೇ ಇರುತ್ತಿದ್ದಿತು.

ರಾಜನು ಯಾವ ಹೊಸ ಮನೋರಂಜನೆಯನ್ನೂ ಕಾಣದೆ ಒಂದು ದಿನ ಗಾರ್ಡನ್‌ಸಾಹೇಬನನ್ನು ಬರಮಾಡಿಕೊಂಡನು. ಆತನು ಪಲ್ಲಕ್ಕಿಯಲ್ಲಿ ಕುಳಿತು ನಗರದಲ್ಲಿದ್ದ ಅರಮನೆಗೆ ಬಂದನು. ಅಲ್ಲಿಂದ ರಾಜನು ಅವನನ್ನು ಕೋಟೆಯ ಅರಮನೆಗೆ ಕರೆದು ಕೊಂಡು ಹೊರಟನು. ರಾಜನು ತನ್ನ ಮೇನೆಯಲ್ಲಿ ಕುಳಿತು ಉತ್ತರದ ಬಾಗಿಲಿನಿಂದ ಕೋಟೆಗೆ ಹೋಗಬೇಕೆಂದಿದ್ದನು. ಮಾರ್ಗವು ದೊಡ್ಡ ಗಜಶಾಲೆಯಬಳಿ ಹಾದು ಹೋಗುತ್ತಿದ್ದಿತು.* ಆಗ ಒಂದು ಆನೆಯು ಮದವೇರಿ ಈ ಪಲ್ಲಕ್ಕಿಗಳೆಡೆಗೆ ಧಾವಿಸಿಬಂದಿತು. ಬೋಯಿಗಳು ತಕ್ಷಣವೇ ಪಲ್ಲಕ್ಕಿಗಳನ್ನು ಕೆಳಗಿಳಿಸಿದರು. ಆದರೆ ಓಡಿಹೋಗದೆ ತಮ್ಮ ಸೊಂಟಗಳಲ್ಲಿದ್ದ ಕತ್ತಿಗಳನ್ನು ಒರೆಗಳಿಂದ ಎಳೆದರು. ಗಾರ್ಡನ್ನನ ಬಳಿ ಯಾವ ಆಯುಧವೂ ಇರಲಿಲ್ಲ, ಗಾಬರಿಯಿಂದ ಕಕ್ಕಾಬಿಕ್ಕಿಯಾಗಿ ಇವರ ಬಳಿಗೆ ಓಡಿಬಂದನು. ರಾಜನ ಹತ್ತಿರ ಖಡ್ಗವಿದ್ದಿತು. ಆತನು ಪಲ್ಲಕ್ಕಿಯಿಂದ ಹೊರಗೆ ಬಂದು ಮದವೇರಿ ಓಡುತ್ತಾ ತಮ್ಮ ಕಡೆಗೆ ಬರುತ್ತಿರುವ ಆನೆಯನ್ನು ನೋಡುತ್ತಾ ನಿಂತನು.

ಗಾರ್ಡನ್ನನೂ ಬೋಯಿಗಳೂ ಮತ್ತು ರಾಜ ಎಲ್ಲರೂ "ವಾರಾಗಿರಿ ವಾರಾಗಿರಿ"

---

* ಈ ಗಜಶಾಲೆಯಿದ್ದ ಸ್ಥಳದಲ್ಲಿ ಈಗ ಸಿವಿಲ್ ಆಸ್ಪತ್ರೆಯಿದೆ.

ಎಂದು ಕೂಗಿ ಕೊಂಡರು. ಅವರ ಹತ್ತಿರವಿದ್ದ ಆಯುಧಗಳು ಆ ಮದಿಸಿದ ಆನೆಯನ್ನು ಏನೂ ಮಾಡಲಾಗುತ್ತಿರಲಿಲ್ಲ.

ಇಷ್ಟರಲ್ಲಿ ಸಿಪಾಯಿಯೊಬ್ಬನು ಭರ್ಜಿಯನ್ನು ತೆಗೆದುಕೊಂಡು ಓಡಿ ಬಂದು, ಆನೆಯನ್ನು ಹೆದರಿಸಿ ಅದರ ಗತಿಯನ್ನು ಬೇರೆ ಕಡೆಗೆ ತಿರುಗಿಸಿದನು. ನಂತರ ಬಂದು ರಾಜನಿಗೆ ಪ್ರಣಾಮಮಾಡಿದನು.

ರಾಜನು ಆತನ ಹೆಸರೇನೆಂದು ವಿಚಾರಿಸಿದನು.

ಆತನು "ಇಮಾಮ್‌ಆಲೀ, ಸರ್ಕಾರ್. ನ್ಯಾಯಾಸ್ಥಾನದಲ್ಲಿ ಕಾಜಿಯಾಗಿದ್ದೇನೆ. ಜೊತೆಗೆ ಆನೆಗಳನ್ನೂ ಪಳಗಿಸುತ್ತೇನೆ" ಎಂದನು.

ರಾಜನು "ಶಹಭಾಸ್, ಕಾಜಿ, ನಿನಗೆ ತಕ್ಕ ಬಹುಮಾನವು ದೊರಕುವುದು" ಎಂದನು.

ಇಮಾಮಾಲಿಯು "ನಿಮ್ಮ ಸೇವೆಯಲ್ಲಿ ನನ್ನ ಮತ್ತು ಸಂಸಾರದ ಪೋಷಣೆ ಸರಿಯಾಗಿ ನಡೆಯುತ್ತಿದ್ದರೆ ಅದೇ ಬಡವನಿಗೆ ದೊಡ್ಡ ಪುರಸ್ಕಾರ, ಮಹಾಪ್ರಭು" ಎಂದು ಉತ್ತರವಿತ್ತನು.

ರಾಜನು ಅವನಿಗೆ ಬಳುವಳಿಯಾಗಿ ಹಲವು ಎಕರೆ ಭೂಮಿಯನ್ನು ಕೊಡಬೇಕೆಂದು ಘೋಷಿಸಿ ಅರಮನೆಯನ್ನು ಗಾರ್ಡನ್‌ಸಾಹೇಬನೊಂದಿಗೆ ಸೇರಿದನು.

ಯಾವಾಗ ದಿವಾನ್‌ಖಾನೆಯಲ್ಲಿ ಇಬ್ಬರೂ ಮಂಡಿಸಿದರೋ ಆಗಲೀಗ ಗಾರ್ಡನ್ ಸಾಹೇಬನಿಗೆ ಆನೆಯಿಂದಾದ ಘಟನೆಯು ಮನಸ್ಸಿನಿಂದ ದೂರವಾಗಲಾರಂಭಿಸಿತು.

ಆತನು "ಸರ್ಕಾರ್, ನೀವು ಬಹುಮಾನವನ್ನು ದ್ರವ್ಯರೂಪವಾಗಿ ದಯಪಾಲಿಸಬೇಕೆ ಹೊರತು ಈ ವಿಧವಾಗಿ ಭೂಮಿಯನ್ನು ಪುರಸ್ಕಾರರೂಪವಾಗಿ ಕೊಡುತ್ತಾ ಹೋದರೆ ಕಡೆಗೆ ನಿಮಗೆ ಕಿಂಚಿತ್ ಭೂಮಿಯೂ ಉಳಿಯುವುದಿಲ್ಲ." ಎಂದನು.

ರಾಜನು "ಆಗ ಝಾನ್ಸಿಯಲ್ಲಿ ಎಲ್ಲೆಲ್ಲಿಯೂ ಜಮೀನುದಾರರೇ ಕಂಗೊಳಿಸುತ್ತಾರೆ" ಎಂದನು.

ಗಾರ್ಡನ್ನನಿಗೆ ಈ ಅಸಮಂಜಸವಾದ ಉತ್ತರದಿಂದ ಸಂತುಷ್ಟಿಯಾಗಲಿಲ್ಲ. "ಈಗ ದೇಶದಲ್ಲಿ ನಡೆಯುವ ಎಲ್ಲಾ ವ್ಯಾಪಾರವೂ ಅತಿರೇಕವಾಗಿದೆ. ಅಲ್ಪಭಾಗ ಧನವಂತರೂ, ಬಹು ಸಂಖ್ಯಾಕ ನಿರ್ಗತಿಕರೂ, ಅಲ್ಪಸ್ವಲ್ಪಮಂದಿ ಧರ್ಮಿಷ್ಠರೂ ಮತ್ತು ಅನೇಕಮಂದಿ ಹುಳುಹುಪ್ಪಟೆಗಿಂತ ಕಡೆಯಾಗಿ ಬಾಳನ್ನು ಸಾಗಿಸುವವರೂ ಇದ್ದಾರೆ. ಕೆಲವರಿಗೆ ಅಲ್ಪಸ್ವಲ್ಪಸೇವೆಗಳಿಗಾಗಿ ಜಮೀನು ಜಹಗೀರುಗಳ ಬಳುವಳಿ ಮತ್ತೆ ಕೆಲವರಿಗೆ ಸಾಧಾರಣ ಅಪರಾಧಗಳಿಗಾಗಿ ಜೇಲುಗಳಿಂದ ಕುಟುಕಿಸುವ ಕ್ರೂರ ದಂಡನೆ" ಎಂದು ರಾಜನನ್ನು ಕುರಿತು ಹೇಳಿದನು.

ಅದನ್ನು ಕೇಳಿ ರಾಜನ ಮುಖವು ವಿವರ್ಣವಾಯಿತು. ಆದರೆ ಸಮಾಧಾ

ವನ್ನು ತಂದುಕೊಂಡು " ಯಾವಾಗ ಅಂತಹ ಅಪರಾಧ ಮತ್ತು ಅಪರಾಧಿಗಳು ಕಂಡು ಬರುತ್ತಾರೋ ಆಗ ತಕ್ಕಂತಹ ಶಿಕ್ಷೆಯನ್ನು ವಿಧಿಸಲೇಬೇಕು." ಎಂದು ರಾಜನು ಮರುಮಾತಾಡಿದನು.

ಗಾರ್ಡನ್ನನು ರಾಜನಿಗೆ ಕೋಪೋದ್ರೇಕವಾಗಿದೆಯೆಂದೂ, ಆದರೆ ಆತನು ಅದನ್ನು ಒಳಗೆಯೇ ಅಡಗಿಸಿದ್ದಾನೆಂದೂ ತಿಳಿದುಕೊಂಡು " ಇಲ್ಲ, ನಮ್ಮ ಒಬ್ಬ ಘನ ವಿದ್ವಾಂಸನು ಅಖಂಡ ಹಿಂದೂಸ್ಥಾನಕ್ಕೆಲ್ಲಾ ಒಂದು ಶಿಕ್ಷೆಯ ವಿಧಾನವನ್ನು * ರಚಿಸಿದ್ದಾನೆ. ಅದು ಬಹು ವಿಶದವಾಗಿಯೂ, ನ್ಯಾಯಪೂರ್ಣವಾಗಿಯೂ ಇದೆ. ಪ್ರಾಯಶಃ ಮಹಾರಾಜರಿಗೂ ತಿಳಿದಿರಬಹುದು. ಅದರಲ್ಲಿ ವಿಧಿಸಿರುವ ಯಾವದಂಡನೆಯೂ ಅಮಾನುಷವಲ್ಲ " ಎಂದನು.

" ಏನು, ರಿಯಾಸತ್ತುಗಳಲ್ಲಿಯೂ ಈ ವಿಧಾನವನ್ನು ಜಾರಿಗೆ ತರಲಾಗುವುದೆ ?" ಎಂದು ರಾಜನು ಕೇಳಿದನು.

ಗಾರ್ಡನ್ನನು ತಾತ್ಕಾಲಿಕವಾಗಿ "ಇಲ್ಲ ಸರ್ಕಾರ್, ರಿಯಾಸತ್ತುಗಳಿಗೆ ತಮ್ಮ ತಮ್ಮ ವ್ಯವಸ್ಥೆಗಳಿಗೆ ಅನುಸಾರವಾಗಿ ನ್ಯಾಯದೊರಕಿಸಲು ಅಧಿಕಾರವಿದೆ " ಎಂದು ಉತ್ತರವಿತ್ತನು.

ರಾಜನು ಸ್ವಲ್ಪ ಯೋಚಿಸಿ " ನಮ್ಮ ಸಂಧಿಯಲ್ಲಿ ಈ ಅಧಿಕಾರವು ಸುರಕ್ಷಿತವಾಗಿದೆ" ಎಂದನು.

ಸಂಧಿಯ ಮಾತನ್ನು ಕೇಳಿ ಗಾರ್ಡನ್ನನ ಮನಸ್ಸಿನಲ್ಲಿ ತಳಮಳವೇರ್ಪಟ್ಟಿತು. ಆದರೆ ಲಘುಹಾಸ್ಯದ ರೀತಿಯೇ ಉತ್ತಮವೆಂದು ಭಾವಿಸಿ " ಆದರೆ, ಮಹಾರಾಜ್, ನಮ್ಮ ಚಕ್ರವರ್ತಿನಿಯವರಿಗೂ, ಭಾರತದ ಗೌರ್ನರ್‌ಜನರಲ್ ಸಾಹೇಬರಿಗೂ, ಭಾರತದ ಎಲ್ಲಾ ಪ್ರಾಂತಗಳಿಗೂ ಒಂದೇ ವಿಧವಾದ ಕಾನೂನು, ಒಂದೇ ವಿಧವಾದ ನ್ಯಾಯಾಡಳಿತ ಎಂದು ಜಾರಿಗೆ ಬರುವುದೋ ಅದೇ ಸುದಿನವಾಗಿರುವುದು. ಇದರಿಂದ ಯಾವ ತೊಂದರೆಯೂ ಇಲ್ಲ. ರಾಜಮಹಾರಾಜರ ರಾಜ್ಯಾಡಳಿತ ಭಾರವೂ ಕಡಿಮೆಯಾಗುವುದು, ಜನರಿಗೂ ಸಂತೋಷವಾಗುವುದು " ಎಂದನು.

ರಾಜನು " ನಿಮ್ಮ ರಾಜಾಧಿರಾಜರಿಗೆ ಆಗ ಬಹಳ ಅಧಿಕಾರ ದೊರಕುವುದಲ್ಲವೆ? ಎಂದು ಕೇಳಿದನು.

ಗಾರ್ಡನ್ನನು ಆಗ ತೊಡಕಿನಲ್ಲಿ ಬಿದ್ದನು. ಸಮಸ್ಯೆಯಿಂದ ನುಣಿಚಿಕೊಳ್ಳಲು "ನಮ್ಮ ರಾಜಾಧಿರಾಜರು ಅದರ ಅಧಿಕಾರವನ್ನು ಪಂಚಾಯಿತಿಗೆ ಒಪ್ಪಿಸಿದ್ದಾರೆ. ಪಂಚಾಯಿತಿಯು ಕಾನೂನು ಮತ್ತು ಶಾಸನಗಳನ್ನು ನಿರ್ಮಿಸುವುದು." ಎಂದು

---

* ಲಾರ್ಡ್ ಮೆಕಾಲೆಯ ಇಂಡಿಯನ್ ಪೀನಲ್ ಕೋಡ್.

ನುಡಿದನು.

ರಾಜನು ಪಂಚಾಯಿತಿಯು ನಮ್ಮ ಗ್ರಾಮ ಗ್ರಾಮದಲ್ಲಿಯೂ ಇದ್ದೇ ಇದೆ: ಆ ಪಂಚಾಯಿತಿಗಳನ್ನು ರದ್ದುಮಾಡಲು ಯಾವ ರಾಜನೂ ಒಪ್ಪುವುದಿಲ್ಲ. ಅವುಗಳು ಅವರವರ ಗ್ರಾಮಗಳ ಸಮಸ್ತ ಸಮಸ್ಯೆಗಳನ್ನೂ ಪರಿಹರಿಸುವುವು. ನಮ್ಮ ಕರ್ಮಚಾರಿಗಳಾದ ಅವುಗಳಿಗೆ ಸಹಾಯವನ್ನೀಯುವುದಿಲ್ಲ. ಕೇವಲ ದೊಡ್ಡ ದೊಡ್ಡ ಮಾಮಲೆಗಳು ಮಾತ್ರ ವಿಚಾರಣೆ ತೀರ್ಪುಗಳಿಗೆ ನಮ್ಮ ಮುಂದೆ ಬರುವುವು. ನಾನು ನಾನಾ ಬೋಪಟ್‌ಕರ್‌ಶಾಸ್ತ್ರಿಯ ಸಲಹೆಯ ಮೇರೆ ತೀರ್ಮಾನಿಸುತ್ತೇನೆ." ಎಂದನು.

ಗಾರ್ಡನ್—ಅವು ಎಷ್ಟೇ ಪರಿಪೂರ್ಣವಾದುವಾದರೂ ಕೂಡ ಅವುಗಳಲ್ಲಿ ದಂಡ ವಿಧಿಸುವ ಕಾಯಿದೆ ಕಾನೂನುಗಳ ರೀತಿ, ಸಮರ್ಥನೆ ಮಾಡಲು ತಕ್ಕ ಬಲವಿಲ್ಲದೆ ಹೆಚ್ಚಾಗಿ ಅನ್ಯಾಯವೇ ಲಭಿಸುವ ಅವಕಾಶವಿದೆ.

ರಾಜ—ಹಾಗಾದರೆ ನಿಮ್ಮ ದೇಶಗಳಲ್ಲಿ ಪಂಚಾಯಿತಿಗಳಿಲ್ಲವೆ?

ಗಾರ್ಡನ್—ಪಂಚಾಯಿತಿಗಳಿದ್ದ ಯುಗವು ಕಳೆದುಹೋಯಿತು. ಈಗ ಅದರ ರೂಪವೇ ಬದಲಾಯಿಸಿದೆ. ನ್ಯಾಯಾಧೀಶನಿಗೆ ಸಮ್ಮತಿಯನ್ನು ಕೊಡಲು ಮತ್ತು ಮಾಮಲೆಯ ನ್ಯಾಯ ನಿರ್ಧರಿಸುವುದಕ್ಕೂ ಪಂಚಾಯಿತಿಯು ಸಹಾಯ ನೀಡುತ್ತದೆ. ಈ ಸಹಾಯವಿಲ್ಲದೆ ಯಾವ ಮೊಕದ್ದಮೆಯೂ ತೀರ್ಮಾನವಾಗುವುದಿಲ್ಲ.

ರಾಜ—ಇದಕ್ಕಿಂತಲೂ ನಮ್ಮ ಪಂಚಾಯಿತಿಯೇ ಹೆಚ್ಚು ಸಾಮರ್ಥ್ಯವುಳ್ಳದ್ದು. ರಾಜ್ಯವು ನಾಶವಾದರೂ ಆಗಬಹುದು. ಆದರೆ ಪಂಚಾಯಿತಿಯು ಮಾತ್ರ ಶಾಶ್ವತವಾಗಿರುವುದು.

ಗಾರ್ಡನ್ನನು ಹಿಂದೂದೇಶದಲ್ಲಿದ್ದ ಪಂಚಾಯಿತಿಯ ಈ ವರ್ಣನೆಯನ್ನು ಕೇಳಿ ಚಿಂತೆಗೊಳಗಾದನು. ಉತ್ಪನ್ನವಾದ ಕೋಪವನ್ನು ಅಲ್ಪ ಸ್ವಲ್ಪ ಅಡಗಿಸಿಕೊಂಡು "ಮಡ್ಡಿಮುಟ್ಠಾಳರ ಪಂಚಾಯಿತಿಯಲ್ಲಿ ಕುಚೋದ್ಯ ಕಲ್ಮಷಗಳುಂಟಾಗಬಹುದು. ಕೋರ್ಟುಕಛೇರಿಗಳಿಗೆ ಈ ಪಂಚಾಯಿತಿಗಳು ಹೇಗೆ ಸರಿಗಟ್ಟಬಲ್ಲವು?" ಎಂದು ಕೇಳಿದನು.

"ಬಂಗಾಳ ಮತ್ತು ಮದರಾಸುಗಳಲ್ಲಿ ನಿಮ್ಮ ನ್ಯಾಯಾಸ್ಥಾನಗಳು ನ್ಯಾಯ ತೀರ್ಮಾನವನ್ನು ಪಂಚಾಯಿತಿಯ ಸಹಾಯದಿಂದ ನಡೆಸುತ್ತಿದ್ದಾರೋ ಅಥವಾ ಇಲ್ಲವೋ?" ಎಂದು ರಾಜನು ಪ್ರಶ್ನಿಸಿದನು.

ಗಾರ್ಡನ್ ಸಾಹೇಬನ ಮನವು ತಳಮಳಗೊಂಡಿತು. ಆದರೂ ಅದನ್ನು ತೋರಗೊಡದೆ "ಪಂಚಾಯಿತಿಯ ಸಹಾಯವನ್ನು ಪಡೆಯುವುದಿಲ್ಲ. ಆದರೆ ಹಿಂದೂ ಮುಸಲ್ಮಾನರ ದೊಡ್ಡ ದೊಡ್ಡ ಮೊಕದ್ದಮೆಗಳನ್ನು ಸೌಲಭ್ಯದಿಂದ ಪರಿಹರಿಸಲು ಪಂಡಿತರ ಮತ್ತು ಮೌಲ್ವಿಗಳ ಸಲಹೆಯನ್ನು ಪಡೆಯಲಾಗುವುದು. ಅಪರಾಧದ

ಮಾಮಲೆಯನ್ನು ನ್ಯಾಯಾಧೀಶನು ಸ್ವತಃ ನಿರ್ಧಾರಮಾಡುತ್ತಾನೆ” ಎಂದನು.

ರಾಜನು ಆಶ್ಚರ್ಯದಿಂದ “ಸ್ವತಃ ! ಸ್ವತಃ! ಅದು ಹೇಗೆ?” ಎಂದು ಕೇಳಿದನು.

ಗಾರ್ಡನ್ನನು “ವಕೀಲರ ಮತ್ತು ಸಾಕ್ಷಿಗಳ ಸಹಾಯದಿಂದ” ಎಂದು ಪ್ರತ್ಯುತ್ತರವಿತ್ತನು.

ರಾಜನು “ ಹಾಗಾದರೆ ಪ್ರತಿಯೊಂದು ನ್ಯಾಯಾಸ್ಥಾನದಲ್ಲೂ ಒಬ್ಬೊಬ್ಬ ವಕೀಲನು ಇದ್ದೇ ಇರುತ್ತಾನಲ್ಲವೆ ?” ಎಂದು ಕೇಳಿದನು.

ರಾಜನ ಈ ಅಜ್ಞಾನದ ಮಾತನ್ನು ಕೇಳಿ ಗಾರ್ಡನ್ನನಿಗೆ ನಗುಬಂದಿತು. ಉತ್ತರವೀಯುತ್ತಾ “ಇಲ್ಲ ಮಹಾರಾಜ, ವಾದಿಪ್ರತಿವಾದಿಗಳು ತಮ್ಮ ತಮ್ಮ ಸಾಕ್ಷಿ ಮತ್ತು ವಕೀಲರ ಮೂಲಕ ತಮ್ಮ ಮಸೂದೆಯನ್ನು ಸಮರ್ಥಿಸುವರು. ವಕೀಲರು ಕಾನೂನಿನ ಪ್ರಕಾರ ವಾದವಿವಾದಗಳನ್ನು ನಡೆಸುತ್ತಾರೆ. ಇವುಗಳ ಸಹಾಯದಿಂದ ನ್ಯಾಯಾಸ್ಥಾನಕ್ಕೆ ಸರಿಯಾದ ತೀರ್ಪನ್ನು ಕೊಡಲು ಅನುಕೂಲವಾಗುವುದು. ಇದು ನಮ್ಮ ದೇಶದ ಪದ್ಧತಿ” ಎಂದು ನುಡಿದನು.

ರಾಜನಿಗೆ ಈ ಮಾತನ್ನು ಕೇಳಿ ತುಟಿಮೀರುವಷ್ಟು ನಗುಬಂದಿತು. ಆದರೆ ಅದನ್ನು ಪ್ರಕಟಿಸದೆ “ ವಕೀಲರು ಸಾಕ್ಷಿಗಳನ್ನು ನ್ಯಾಯಾಧೀಶನ ಮುಂದೆ ತಂದು ಪ್ರಶ್ನೋತ್ತರಗಳನ್ನು ನಡೆಸುವ ಕೆಲಸವನ್ನು ಪ್ರತಿಫಲಾಪೇಕ್ಷೆಯಿಲ್ಲದೇ ನಡೆಸುತ್ತಾರೆಯೆ ?” ಎಂದು ಕೇಳಿದನು.

“ನಮ್ಮ ದೇಶದಲ್ಲಿ ಮೊದಲು ಈ ಕಾರ್ಯವು ಶುಲ್ಕವಿಲ್ಲದೇ ನಡೆಯುತ್ತಿತ್ತು. ಆದರೆ ಈಗ ಪಾರಿಶ್ರಮದವೇತನವನ್ನು ತೆಗೆದುಕೊಳ್ಳಲು ಆರಂಭಿಸಿದ್ದಾರೆ. ಈ ದೇಶದಲ್ಲಾದರೋ ಅವರು ಬಹಳ ಹೆಚ್ಚು ಶುಲ್ಕತೆಗೆದು ಕೊಳ್ಳುತ್ತಾರೆ.” ಎಂದು ಅಭಿಮಾನದೊಂದಿಗೆ ಗಾರ್ಡನ್ ಸಾಹೇಬನು ಹೇಳಿದನು.

“ಹಾಗಿದ್ದ ಪಕ್ಷದಲ್ಲಿ ಜನರಿಗೆ ನ್ಯಾಯ ದೊರೆಯುವ ಆಶೆಯಿರುವುದು. ಈ ರೀತಿಯ ಹಣಸುಲಿಯುವವರ ಹೊಟ್ಟೆತುಂಬಿಸುವ ಈ ಸಂಸ್ಥೆಯನ್ನು ಯಾವ ಪ್ರಯೋಜನಕ್ಕೋಸ್ಕರ ನಮ್ಮ ದೇಶದಲ್ಲಿ ಜಾರಿಗೆ ತಂದಿರಿ?” ಎಂದು ರಾಜನು ಗಟ್ಟಿಯಾಗಿ ನಗುತ್ತಾ ಕೇಳಿದನು.

ಗಾರ್ಡನ್‌ಸಾಹೇಬನ ಮನದಲ್ಲಿ ಅಡಗಿದ್ದ ಹಿಂದೂಸ್ಥಾನದಮೇಲಿನ ಕೋಪವು ಹೊರಗೆ ಉಮ್ಮಳಿಸಿ “ ನಿಮ್ಮ ದೇಶದ ಕಲ್ಮಷಪೂರಿತನ್ಯಾಯ ವಿಮರ್ಶೆಯನ್ನು ನಾನು ಚೆನ್ನಾಗಿ ಬಲ್ಲೆ. ಒಂದೇವಿಧವಾದ ಅಪರಾಧಕ್ಕೆ ಬ್ರಾಹ್ಮಣರಿಗೆ ಒಂದು ರೂಪಾಯಿ, ಠಾಕೂರರಿಗೆ ಐದುರೂಪಾಯಿ, ವಣಿಕರಿಗೆ ಐನೂರು ರೂಪಾಯಿ, ಶೂದ್ರರಿಗೆ ಕೈಕಾಲುಗಳ ಛೇದನ ದಂಡನೆ. ಶ್ರೀಮಂತ ಸರ್ಕಾರ್ ಕಾಯಿದೆಯು ಎಲ್ಲರಿಗೂ ಒಂದೇ ವಿಧವಾಗಿರಬೇಕಲ್ಲವೇ?” ಎಂದನು. ರಾಜನಿಗೆ ಈ ತರ್ಕದಿಂದ ಮನನೊಂದಿತು. ಆದರೆ

ಅವನಲ್ಲಿ ಒಂದು ವ್ಯಂಗ್ಯವು ತಲೆದೋರಿ "ಈ ಕಾನೂನಿನ ಮೂಲಕ ನಿಮ್ಮ ಇಲಾಖೆಯಲ್ಲಿ ಜನರಿಗೆ ನ್ಯಾಯವು ಎಷ್ಟುಜಾಗ್ರತೆಯಾಗಿ ದೊರಕುವುದು?" ಎಂದು ಕೇಳಿದನು.

ಗಾರ್ಡನ್ನನು ತ್ವರೆಯಿಂದ "ಸಾಧಾರಣವಾದ ಅಪರಾಧದ ಮೊಕದ್ದಮೆಗಳಲ್ಲಿ ಒಂದೆರಡು ತಿಂಗಳಲ್ಲಿಯೂ, ಆಸ್ತಿಪಾಸ್ತಿಗಳ ವಿಚಾರಣೆಯಾದರೆ ಒಂದು ಒಂದೂವರೆ ವರ್ಷಗಳಲ್ಲಿಯೂ ನ್ಯಾಯ ಅಥವಾ ತೀರ್ಪು ದೊರಕುವುದು" ಎಂದ ಹೇಳಿದನು.

ರಾಜನು ಪುನಃ ನಕ್ಕು "ಇಲ್ಲಿಯಾದರೋ ತಕ್ಷಣವೇ ನ್ಯಾಯವುದೊರಕುವುದು. ಬಹಳ ಹೆಚ್ಚೆಂದರೆ ಒಂದೆರಡು ದಿನಗಳಿಗೆ ಹೆಚ್ಚಿಗೆ ಕಾಲವಿಳಂಬವಾಗುವುದಿಲ್ಲ. ಆಸ್ತಿಪಾಸ್ತಿಗಳ ಮತ್ತು ಅಪರಾಧ ಮೊಕದ್ದಮೆಗಳಿಗೆ ಯಾವ ವ್ಯತ್ಯಾಸವೂ ಇರುವುದಿಲ್ಲ. ಪಂಚಾಯಿತಿಯ ನಿರ್ಣಯವನ್ನೇ ಯಾವಾಗಲೂ ಸರಿಯೆಂದು ಅನುಮೋದಿಸುತ್ತೇನೆ. ನಿಮ್ಮ ಇಲಾಖೆಯಲ್ಲಿ ಪೋಲೀಸರ ಬೇಹುಷಾರಿಯಿಂದ ಕಳ್ಳತನ ಮುಂತಾದ ಅಚಾತುರ್ಯಗಳು ನಡೆದರೆ ನೀವು ಪೋಲೀಸರಿಗೆ ದಂಡವಿಧಿಸುತ್ತೀರಾ?" ಎಂದು ಕೇಳಿದನು.

ಗಾರ್ಡನ್ನನು "ಹೌದು, ಸರ್ಕಾರ್, ತಪ್ಪಿತಸ್ಥನನ್ನು ಕೆಲಸದಿಂದ ವಜಾಮಾಡಿ ಅವನ ಅವನತಿಯನ್ನುಂಟುಮಾಡುವೆವು" ಎಂದು ಉತ್ತರವಿತ್ತನು.

ರಾಜನು ಉತ್ತೇಜಿತನಾಗಿ "ಇದರಿಂದ ಜನರಿಗೆ ಬರುವ ಲಾಭವೇನು? ನಾನಾದರೋ ಬೇಹುಷಾರಿ ಪೋಲೀಸರಿಂದ ಉಂಟಾದ ಕಳ್ಳತನದ ನಷ್ಟವನ್ನು ನಷ್ಟ ಹೊಂದಿದವರಿಗೆ ತಪ್ಪಿತಸ್ಥರಿಂದ ವಸೂಲುಮಾಡಿ ಕೊಡುತ್ತೇನೆ" ಎಂದು ನುಡಿದನು.

ಗಾರ್ಡನ್ನನು "ಆಗ ಪೋಲೀಸರಿಗೆ ಜನರ ಮೇಲೆ ಯಾವ ಹಿಡಿತವೂ ಇರುವುದಿಲ್ಲ. ಜನರು ಪೋಲೀಸರನ್ನು ಲೆಕ್ಕಿಸವೇ ಹೋಗುವರು. ಇಂತಹ ಶಾಸನವು ಬಹಳ ದಿನ ನಡೆಯುವುದಿಲ್ಲ ಸರ್ಕಾರ್" ಎಂದನು.

ರಾಜನು ಮತ್ತಷ್ಟು ಉತ್ತೇಜಿತನಾಗಿ "ಜನರು ನನ್ನ ಅಧೀನದಲ್ಲಿ ಇರಬೇಕೆ ವಿನಹ ನನ್ನ ಕೈಕೆಳಗಿನ ಅಧಿಕಾರಿಗಳ ಅಧೀನದಲ್ಲಲ್ಲ. ಪೋಲೀಸರ ಮತ್ತು ಇತರ ಅಧಿಕಾರಿಗಳ ಭಯದಿಂದ ಮತ್ತು ಆಶ್ರಯದಿಂದ ನಡೆಯುವ ರಾಜ್ಯವು ಬಹಳ ದಿನ ಸ್ಥಾಯಿಯಾಗಿರಲಾರದು. ನಾನು ನನ್ನ ಅಪರಾಧವೆಸಗಿದ ಕರ್ಮಚಾರಿಗಳಿಗೆ ಲೋಹದ ಪಟ್ಟಿಗಳಿಂದ ಹೊಡೆಸುತ್ತೇನೆ" ಎಂದನು.

ಗಾರ್ಡನ್ನನು ಚಕಿತನಾಗಿ ಹೇಳಿದನು. "ತಡೆಯಿಲ್ಲದ ಅಧಿಕಾರ ಚಲಾವಣೆಯು ಅತಿ ಕೆಟ್ಟದ್ದು. ಈ ಮತವನ್ನು ಅನುಮೋದಿಸುವವರು ಏನೇ ಆಗಲಿ ತಮ್ಮ ಇಚ್ಛಾನುಸಾರ ವರ್ತಿಸುವರು. ತಾವು ಕಾಶಿಯಲ್ಲಿ ರಾಜೇಂದ್ರಬಾಬುವನ್ನು ಅನ್ಯಾಯವಾಗಿ ಹೊಡೆಸಿದಿರಿ. ಅವನ ಅರ್ಜಿಗೆ ಉತ್ತರ ಕೊಡಲು ನಮ್ಮ ರಾಜಕೀಯ ವಿಭಾಗಕ್ಕೆ

ಬಹಳ ಕಷ್ಟವಾಯಿತು."

ರಾಜನಿಗೆ ಈ ಘಟನೆಯ ಸ್ಮೃತಿಯ ಜೊತೆಯಲ್ಲೇ ತಾನು ಇದೇ ರಾಜಕೀಯ ವಿಭಾಗದಿಂದ ಅಪ್ಪಣೆ ದೊರಕಿದ ಮೇಲೆಯೇ ಝಾನ್ಸೀ ರಾಜ್ಯದಿಂದ ಹೊರಗೆ ಕಾಲಿಡ ಬಹುದಾಯಿತು. ಎಂಬ ವಿಚಾರವು ನೆನಪಿಗೆ ಬಂದಿತು.

ಅವನು " ಅಶಿಷ್ಟತೆಯನ್ನು ದಂಡಿಸಲು ನಾನು ನನ್ನ ರಾಜ್ಯದಲ್ಲೇ ಇರಲಿ ಅಥವಾ ರಾಜ್ಯದ ಹೊರಗೇ ಇರಲಿ, ಯಾವಾಗಲೂ ಹಿಂಜರಿಯುವುದಿಲ್ಲ" ಎಂದನು. ಅದೇ ಸಮಯದಲ್ಲಿ ಅವನಿಗೆ ಖುದಾಬಕ್ಷ ಮತ್ತು ಅವನಿಗೆ ಸಂಬಂಧಿಸಿದ ಪ್ರಸಂಗದ ನೆನಪಾಯಿತು.

ಗಾರ್ಡನ್ನನಿಗೂ ಅದೇ ಪ್ರಸಂಗದ ನೆನಪಾಗಿ "ಯಾರೇ ರಾಜ ಅಥವಾ ನವಾಬ ನಾದರೂ ಇದು ಸಾಧ್ಯವಿಲ್ಲ. ಗೌರ್ನರ್ ಜನರಲ್ ಸಾಹೇಬರು ಈ ತರಹದ ಉದ್ದಂಡತನವನ್ನು ನಡೆಸಲು ಯಾರಿಗೂ ಅವಕಾಶವೀಯುವುದಿಲ್ಲ. ನಿಮ್ಮ ಗೌರವ ವನ್ನು ಕಾಪಾಡುವುದಕ್ಕಾಗಿಯೇ ಕಾಶಿಯ ಆ ಪಂಡಿತನಿಗೆ ಆ ವಿಧವಾದ ಉತ್ತರ ಕೊಡಲಾಯಿತು. ಆದರೆ ಮುಂದೆ ಹಾಗೆ ನಡೆಸಲು ಸಾಧ್ಯವಿಲ್ಲ" ಎಂದನು.

ಗಂಗಾಧರನ ಹೃದಯದಲ್ಲಿ ಶಿವರಾವ್‌ಭಾವುವಿನ ರಕ್ತವು ಕುದಿಯಲಾರಂಭಿ ಸಿತು. ಮಿಂಚಿನಂತೆ ಒಂದೆರಡು ಉತ್ತರಗಳು ಮನಸ್ಸಿಗೆ ತೋರಿದರೂ ಕೋಪದ ಭರ ದಿಂದ ಅದನ್ನು ವ್ಯಕ್ತಪಡಿಸಲಿಲ್ಲ.

ಕಡೆಯಲ್ಲಿ ಕೇವಲ ಈ ಉತ್ತರವಿತ್ತನು "ಸಾಹೇಬ್, ನಾನೇನೋ ಒಂದು ಸಣ್ಣ ಸಂಸ್ಥಾನಾಧಿಪತಿ. ಆದರೂ ಮನಸ್ಸು ಮಾಡಿದರೆ ಬೇಕಾದ್ದು ಮಾಡಬಲ್ಲೆ. ಎಲ್ಲಾ ರಾಜರೂ ಬಳೆತೊಟ್ಟು ಕುಳಿತಿದ್ದಾರೆ. ನಮ್ಮ ದೇಶದಲ್ಲೇ ನಾವೆಲ್ಲರೂ ಕೈದಿಗಳಾಗಿರುವುದು ಆಶ್ಚರ್ಯವಲ್ಲವೆ? ಈ ನೂರಿಪ್ಪತ್ತೈದು ವರ್ಷಗಳ ಹಿಂದಿನ ಮಾತನ್ನು ಜ್ಞಾಪಿಸಿಕೊಳ್ಳಿ. ಆಗ ನಿಮ್ಮ ವೈಭವಗಳೇನಿದ್ದಿತು? ನೀವುಗಳು ಡಿಲ್ಲಿಯ ಬಾದಶಹ ಮತ್ತು ಪುಣೆಯ ಪಂತಪ್ರಧಾನರ ದರ್ಬಾರಿನಲ್ಲಿ ಸಾಷ್ಟಾಂಗ ಪ್ರಣಾಮ ಗಳನ್ನು ಮಾಡಿ ಅರ್ಜಿಗಳನ್ನು ಸಲ್ಲಿಸುತ್ತಿದ್ದಿರಿ."

ರಾಜನು ಆಕ್ರೋಶದಿಂದ ಕಂಪಿಸುತ್ತಿದ್ದನು. ಗಾರ್ಡನ್ನನ ವ್ಯಾಪಾರ ಕುಶಲ ತೆಯು ಜಾಗ್ರತೆಯಾಯಿತು. ಆತನು ವಿನಂತಿಮಾಡುತ್ತಾ "ಸರ್ಕಾರ್, ಅಸಮಾಧಾನ ಹೊಂದಬೇಡಿ. ನಾನಾಗಿಯೇ ಏನನ್ನೂ ಹೇಳಲಿಲ್ಲ. ನಾನು ಬಿನ್ನಹಮಾಡಿಕೊಂಡು ದೆಲ್ಲಾ ಗೌರ್ನರ್ ಜನರಲ್ ಸಾಹೇಬರ ಮತ್ತು ಕಂಪೆನಿ ಸರ್ಕಾರದ ನೀತಿಯ ಧೋರಣೆ ಯನ್ನು ವಿಶದಪಡಿಸಿದೆ. ಈಗ ಪಂಚಾಯಿತಿದಾರರ ನೇಮಕದ ವಿಷಯವನ್ನು ತೆಗೆದುಕೊಳ್ಳಿ. ಅನೇಕ ಆಂಗ್ಲೇಯ ಹುದ್ದೇದಾರರು ಅವುಗಳನ್ನು ಸುರಕ್ಷಿತವಾಗಿಡಲು ಆಶಿಸುತ್ತಾರೆ. ಆದರೆ ಹೆಚ್ಚು ಮಂದಿ ಕಾನೂನು ಮತ್ತು ನಿಯಮಗಳನ್ನು ಜಾರಿಗೆ

ತರುವುದರ ಮೂಲಕ ಹಿಂದೂಸ್ಥಾನದಲ್ಲಿ ಎಲ್ಲೆಲ್ಲಿಯೂ ಅಕ್ರಮಸಂಸ್ಥೆಗಳನ್ನು ಸರಿಪಡಿಸಿ ಸಮರಸತೆಯನ್ನು ಉಂಟುಮಾಡಬೇಕೆಂಬ ಅಭಿಪ್ರಾಯವುಳ್ಳವರಾಗಿದ್ದಾರೆ. ನನ್ನ ಮೇಲೆ ಎಂದಿನಂತೆಯೇ ನಿಮ್ಮ ಕೃಪೆಯಿರಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು.

ಗಾರ್ಡನ್ನನಿಗೆ ರಾಜನು ಈ ವಿವಾದವನ್ನು ಸ್ವಲ್ಪ ಬಣ್ಣ ಹಚ್ಚಿ ಗೌರ್ನರ್ ಜನರಲ್ ಸಾಹೇಬನ ಬಳಿಗೆ ಅದರ ಸೂಚನೆಯನ್ನೇನಾದರೂ ಕಳುಹಿಸಿ ಕೊಟ್ಟರೆ ತನಗೆ ಖಂಡಿತವಾಗಿ ತಕ್ಕ ಶಾಸ್ತಿಯಾಗುತ್ತದೆಂದು ತಿಳಿದಿದ್ದಿತು.

ನಂತರ ರಾಜನ ಕೋಪವು ಸ್ವಲ್ಪ ಶಾಂತವಾಯಿತು. ಗಾರ್ಡನ್ನನ ಮೇನೆಯಿಂದ ಆತನ ಹುಕ್ಕೆಯನ್ನು ತರಿಸಿಕೊಟ್ಟನು. ಆತನು ಹುಕ್ಕೆಯನ್ನು ಸೇವಿಸಿದ ನಂತರ ರಾಜನು ಆತನಿಗೆ ತಾಂಬೂಲವನ್ನು ಕೊಟ್ಟನು. ಆತನು ಅದನ್ನು ತಿಂದು ಬೀಳ್ಕೊಂಡು ಹೊರಟುಹೋದನು.

ರಾಣಿಗೆ ಈ ಸಂಭಾಷಣೆಯ ಸಾರಾಂಶವು ತಿಳಿದು ಬಂದಿತು. ಆಕೆಯು ಸಂತುಷ್ಟಳಾಗಿ ತನ್ನ ಸಖಿಯರೊಂದಿಗೆ "ನಾನು ಇಂದಿನಷ್ಟು ಸುಖಿಯಾಗಿ ಎಂದೂ ಇರಲಿಲ್ಲ. ಶಿವರಾವ್‌ಭಾವುವಿನ ಸೊಸೆಯಾದುದು ಸಾರ್ಥಕವಾಯಿತು. ನನಗೆ ನಮ್ಮ ರಾಜನ ಮೇಲೆ ಮತ್ತು ಝಾನ್ಸೀ ರಾಜ್ಯದ ಮೇಲೆ ಅಭಿಮಾನವಿದೆ. ಆದರೆ ಒಂದೇ ಒಂದು ಕೊರತೆಯಿದೆ—ಈ ವಿವಾದವೇನಾದರೂ ನನಗೂ ಗಾರ್ಡನ್ ಸಾಹೇಬನಿಗೂ ಬೆಳೆದಿದ್ದರೆ ಆಗ ಅವನಿಗೆ ಅವನ ತಾತಮುತ್ತಾತಂದಿರು ನೆನಪಿಗೆ ಬರುವಂತೆ ಸರಿಯಾಗಿ ಕಟುವಾಗಿ ಉತ್ತರ ಕೊಡುತ್ತಿದ್ದೆ. ನಮ್ಮ ತಾತ ಪೇಶ್ವೆಯವರು ನೂರು ನೂರಿಪ್ಪತ್ತೈದು ವರ್ಷಗಳ ಹಿಂದೆ ಈ ಆಂಗ್ಲೇಯರು ನಮ್ಮ ದೇಶದಲ್ಲಿ ಏನೇನುಪಾಯಗಳಿಂದ ಯಾವ ಯಾವ ಕಾರ್ಯಗಳನ್ನು ಸಾಧಿಸಿರುವರೆಂಬುದನ್ನು ತಿಳಿಸಿರುವರು. ನನ್ನ ಸಾಮರ್ಥ್ಯವೇನಾದರೂ ನಡೆಯುವುದಾದರೇ"—ಎಂದು ಹಲ್ಲು ಮಸೆದು, ವಿಶಾಲ ನೇತ್ರಗಳನ್ನು ಅರಳಿಸಿದಳು.

ಕಾಶಿಯು ನಿಧಾನವಾಗಿ "ಪ್ರಭು, ತಾವು ಬಿಟ್ಟೂರಿನಿಂದ ಬಾಲಗುರುವನ್ನು ಕುಸ್ತಿ ಕಲಿಸುವುದಕ್ಕಾಗಿ ಕರೆಸುವೆನೆಂದು ಹೇಳಿದಿರಿ." ಎಂದಳು.

ರಾಣಿಯು ತಕ್ಷಣವೇ ಮಂದಹಾಸವನ್ನು ಬೀರಿ " ಹಾಂ; ಅವರನ್ನು ಶೀಘ್ರವಾಗಿಯೇ ಕರೆಸುತ್ತೇನೆ" ಎಂದಳು.

## ೨೦

ವಸಂತ ಋತುವು ಬಂದಿತು. ಪ್ರಕೃತಿಯು ಪುಷ್ಪವಸನವನ್ನು ಧರಿಸಿತು. ಜನರು ಪರಿಮಳ ಪೂರಿತ ಮಾರುತವನ್ನು ಆಘ್ರಾಣಿಸಿ ಸಂತೋಷ ಭರಿತರಾಗುತ್ತಿದ್ದರು.

ಕಿಲ್ಲೆಯ ಮಹಲ್ಲಿನಲ್ಲಿ ರಾಣಿಯು ಚೈತ್ರ ನವರಾತ್ರಿಯ ಅಂಗವಾಗಿ ಗೌರೀದೇವಿಯ ಪ್ರತಿಮೆಯನ್ನು ಸ್ಥಾಪಿಸಿದಳು. ಗೌರಿಯ ಪ್ರತಿಮೆಯು ಪುಷ್ಪಾಭರಣಗಳಿಂದ ಅಲಂಕೃತ ವಾಗಿದ್ದಿತು. ಪೂಜೆಯೂ ಪ್ರಾರಂಭವಾಗಲಿದ್ದಿತು. ಧೂಪ ದೀಪ ನೈವೇದ್ಯಗಳು ವಿಜೃಂಭಣೆಯಿಂದ ನಡೆಯುತ್ತಿದ್ದವು. ನಗರದ ನಾರಿಯರೆಲ್ಲರೂ, ಹರಿದ್ರಾಕುಂಕು ಮೋತ್ಸವದಲ್ಲಿ ತನ್ಮಯರಾಗಿದ್ದರು.

ಆದರೆ ಅವರಲ್ಲಿ ಬಹಳ ಅಲ್ಪಸಂಖ್ಯಾತರು ಪುಷ್ಪಗಳಿಂದ ಅಲಂಕೃತರಾಗಿದ್ದರು. ಅವರಲ್ಲಿ ಹೃದಯೇಶನ ಕವಿತೆ ಮತ್ತು ಅದರ ಫಲವು ಬೇರೇ ವಿಧವಾದ ಪರಿಣಾಮ ವನ್ನುಂಟು ಮಾಡಿದ್ದಿತು. ಅವರಿಗೆ ತಾವು ಪುಷ್ಪಗಳನ್ನು ಧರಿಸುವುದು ರಾಜರಾಣಿ ಯರಿಗೆ ಇಷ್ಟವಲ್ಲವೆಂಬ ಭ್ರಮೆಯುಂಟಾಗಿದ್ದಿತು. ಆದುದರಿಂದ ಪೂಜೆಗಾಗಿ ರಾಣೀ ವಾಸಕ್ಕೆ ಬಂದ ಸ್ತ್ರೀಯರಲ್ಲಿ ಎಲ್ಲರೂ ಪೂಜೆಗೆ ಹೂವನ್ನೂ ತಂದಿದ್ದರೂ ಒಬ್ಬರ ಹೊರತಾಗಿ ಯಾರೂ ಹೂವನ್ನು ಮುಡಿದಿರಲಿಲ್ಲ.

ಕಿಲ್ಲೆಯನ್ನು ಪ್ರವೇಶಿಸಲು ಎಲ್ಲಾ ಜಾತಿಯವರಿಗೂ ಅನುಮತಿಯಿದ್ದಿತು. ಮಹದೇವ ಮತ್ತು ಗಣೇಶನ ಮಂದಿರಗಳಿದ್ದು ಶಂಕರ ಕಿಲ್ಲೆಯೆಂದು ಕರೆಯಲ್ಪಡು ತ್ತಿದ್ದ ಭಾಗಕ್ಕೆ ಯಾರಿಗೆ ಬೇಕಾದರೂ ಪ್ರವೇಶವಿದ್ದಿತು. ಹೊಲೆಯರು ಮಾದಿಗರಾದಿ ಯಾಗಿ ಎಲ್ಲರೂ ಹೋಗಿ ಬರುತ್ತಿದ್ದರು. ರಾಣಿಯು ಗೌರಿಯನ್ನು ಪ್ರತಿಷ್ಠೆಮಾಡಿದ್ದ ಸ್ಥಳಕ್ಕೆ ಈ ಜಾತಿಯವರಿಗೆ ಹೋಗಲು ಅಪ್ಪಣೆಯಿರಲಿಲ್ಲ. ಕುಂಬಾರ ಮತ್ತು ನೆಯ್ಗೆ ಜಾತಿಯ ಸ್ತ್ರೀಯರು ಹೋಗಬಹುದಾಗಿದ್ದಿತು. ಅವರನ್ನು ಯಾವಾಗಲೂ ಅಸ್ಪೃಶ್ಯರ ನ್ನಾಗಿ ಗಣಿಸಿರಲಿಲ್ಲ.

ವಸ್ತ್ರಾಭರಣಗಳಿಂದ ಅಲಂಕೃತರಾಗಿ ಬಂದಿದ್ದ ಲಲನೆಯರನ್ನು ಕಂಡು ರಾಣಿಗೆ ಬಹಳ ಸಂತೋಷವಾಯಿತು. ಆದರೆ ಅವರಲ್ಲಿ ಬಹುಮಂದಿ ಪುಷ್ಪವಿಹೀನರಾಗಿದ್ದು ದನ್ನು ಕಂಡು ಅವಳಿಗೆ ಖೇದವಾಯಿತು. ಅವಳು ಸ್ತ್ರೀಯರನ್ನು ಕುರಿತು "ನೀವು ಪುಷ್ಪವನ್ನೇಕೆ ಧರಿಸಿಲ್ಲ? ಗೌರೀಮಾತೆಯನ್ನು ಅಸಂಪೂರ್ಣ ಅಲಂಕಾರದಿಂದ ಸಂತುಷ್ಟಿಪಡಿಸಬೇಕೆಂದಿರುವಿರಾ ?" ಎಂದು ಕೇಳಿದಳು.

ಸ್ತ್ರೀಯರ ಮನಸ್ಸಿನಲ್ಲಿ ಒಂದು ಗೊಂದಲವೇರ್ಪಟ್ಟಿತು.

ಲಾಲಾಭಾವು ಬಕ್ಷಿಯ ಧರ್ಮಪತ್ನಿಯು ಆ ಸ್ತ್ರೀಯರ ಮುಖಂಡಳಾಗಿ ಮಾತ ನಾಡಲು ಮುಂದೆಬಂದಳು. ಅವಳು ಯೌವ್ವನವನ್ನು ದಾಟಿದ್ದಳು. ಆದರೆ ಮುಖ ಮಂಡಲದಲ್ಲಿ ಪೂರ್ವದ ಸೌಂದರ್ಯವು ಇನ್ನೂ ತೋರಿಬರುತ್ತಿದ್ದಿತು. ಎಲ್ಲರೂ ಆಕೆಯನ್ನು 'ಬಕ್ಷಿಣಜೂ' ಎಂದು ಕರೆಯುತ್ತಿದ್ದರು. ಆಕೆಯು ಕೈ ಜೋಡಿಸಿ ರಾಣಿ ಯನ್ನು ಕುರಿತು, "ತಾವು ಪುಷ್ಪಾಲಂಕಾರ ರಹಿತರಾಗಿರಲು ನಾವು ಹೇಗೆ ಅಲಂಕರಿಸಿ ಕೊಳ್ಳಲಾದೀತು." ಎಂದಳು.

ರಾಣಿಗೆ ಇದರ ನಿಜಕಾರಣವು ತಿಳಿದಿದ್ದಿತು. ಆದುದರಿಂದ ಬಕ್ಷಿಣಜೂವಿನ ಮಾತು ಕೇಳಿ ನಗುಬಂದಿತು. ಅವಳ ಹತ್ತಿರ ಬಂದು ಭುಜದಮೇಲೆ ಕೈಯಿರಿಸಿ ಎಲ್ಲರಿಗೂ ಕೇಳಿಸುವಂತೆ ಹೇಳಿದಳು. "ಹೊರಗಡೆ ಹೂವಾಡಿಗರು ಹೂವ್ವನ್ನು ಮಾರುತ್ತಿರುವರು. ನನಗೂ ಒಂದು ಕುಚ್ಚು ಹೂವ್ವನ್ನು ತನ್ನಿ. ನಾನು ಮುಡಿದುಕೊಳ್ಳುವೆನು. ನೀವೆಲ್ಲರೂ ಪುಷ್ಪಧಾರಣೆಮಾಡಿ ಸಂತೋಷವಾಗಿ ಗಾನಮಾಡುತ್ತಾ ಗೌರೀಮಾತೆಯನ್ನು ಪ್ರಸನ್ನಗೊಳಿಸಿ. ಯಾರು ನರ್ತಿಸಲಿಚ್ಛಿಸುವಿರೋ ಅವರು ನರ್ತನಮಾಡಿ. ತರುವಾಯ ಬೇರೇ ವಿಧವಾದ ಕಾರ್ಯಕ್ರಮವಿದೆ."

ಸ್ತ್ರೀಯರೆಲ್ಲರೂ ಹೂವ್ವಾಡಿಗನ ಬಳಿಗೆ ಓಡಿದರು. ಆದರೆ ಮುಂದರಿಯು ಎಲ್ಲರಿಗಿಂತ ಮೊದಲು ಪುಷ್ಪವನ್ನು ತಂದಳು. ಬಕ್ಷಿಣಿಯು ಸ್ವಲ್ಪಹಿಂದೆ ಬಂದಳು. ಮುಂದರಿಯು ಹೂವ್ವನ್ನು ರಾಣಿಗೆ ಮುಡಿಸಹೋದಳು. ರಾಣಿಯು ನಗುತ್ತಾ ಆಕೆಯನ್ನು ತಡೆದು "ಮುಂದರಿ, ನೀನಿನ್ನೂ ಅವಿವಾಹಿತೆ, ನಿತ್ಯವೂ ನಿನ್ನ ಕೈಯ್ಯಿಂದ ಹೂವನ್ನು ಸ್ವೀಕರಿಸುತ್ತೇವೆ. ಆದರೆ ಈ ದಿನ ಬಕ್ಷಿಣಜೂವಿನ ಕೈಯಿಂದ ಹೂವ್ವನ್ನು ಪಡೆದು ಆಶೀರ್ವಾದ ಹೊಂದಲು ಆಶಿಸುತ್ತೇನೆ" ಎಂದಳು.

ಬಕ್ಷಿಣಿಯು ಹರ್ಷೋತ್ಫುಲ್ಲಳಾದಳು. ಮುಂದರಿಗೆ ತನ್ನ ದಾಸಿವರ್ಗದ ಕಟ್ಟಳೆಯ ಸ್ಮರಣೆಯುಂಟಾಯಿತು. ವಿವಾಹವಾಗುತ್ತಲೇ ಕಿಲ್ಲೆ ಮತ್ತು ಅರಮನೆಯನ್ನು ತ್ಯಜಿಸಬೇಕಾಗುವುದು. ಅವಳ ಮನಸ್ಸು ಉದಾಸೀನವಾಯಿತು. ರಾಣಿಯು ಇದನ್ನರಿತಳು. ಬಕ್ಷಿಣಿಯು ಅವಳಿಗೆ ಹೂವ್ವನ್ನು ಮುಡಿಸಿ ಕಾಲುಮುಟ್ಟಿ ನಮಸ್ಕಾರ ಮಾಡಿದಳು. ರಾಣಿಯು ಅವಳನ್ನೆತ್ತಿ ತಬ್ಬಿಕೊಂಡಳು. ಮತ್ತು ಮುಂದರಿಯ ಶಿರವನ್ನು ತನ್ನ ಭುಜದ ಮೇಲೆ ವಾಲಿಸಿಕೊಂಡು ಬರಸೆಳೆದು ಅವಳ ಕಿವಿಯಲ್ಲಿ "ಹುಚ್ಚಿ, ಮನಸ್ಸೇಕೆ ಇಳಿಯಬಿಟ್ಟಿ? ನೀನು ನನ್ನನ್ನೆಂದಿಗೂ ಅಗಲಿರುವುದಿಲ್ಲ" ಎಂದಳು.

ಮುಂದರಿಯು ಕೈಮುಗಿದು ಮೃದುಕಂಠದಿಂದ "ಮಹಾರಾಣಿ, ನಾನು ಯಾವಾಗಲೂ ಈ ರೀತಿಯೇ ಇದ್ದು ನಿಮ್ಮ ಚರಣಸೇವೆಯನ್ನು ಸಲ್ಲಿಸಿ ಇದೇ ದೆಸೆಯಲ್ಲಿ ನನ್ನ ದೇಹತ್ಯಾಗ ಮಾಡುವೆನು" ಎಂದು ಹೇಳಿದಳು.

ಬಾಕಿ ಇತರ ಸ್ತ್ರೀಯರೂ ಒಬ್ಬೊಬ್ಬರಾಗಿ ರಾಣಿಯನ್ನು ಪುಷ್ಪಗಳಿಂದ ಅಲಂಕರಿಸತೊಡಗಿದರು. ಅವಳು ಪುಷ್ಪಭಾರದಿಂದ ಬಳಲಿ ಅಲಂಕರಿಸಿದ್ದ ಹೂವುಗಳನ್ನು ತೆಗೆದಿಡುತ್ತಿದ್ದಂತೆಯೇ ಅವರು ಪುನಃ ಪುನಃ ಹೊಸ ಪುಷ್ಪಗಳನ್ನು ಮುಡಿಸುತ್ತಿದ್ದರು.

ಕಡೆಯಲ್ಲಿ ದೂರದಲ್ಲಿ ನಿಂತಿದ್ದ ನವವಧುವೊಬ್ಬಳು ಪುಷ್ಪ ಮಾಲಿಕೆಯನ್ನು ಕೈಯಲ್ಲಿ ಹಿಡಿದು ಮುಂದುವರಿದಳು. ಅವಳ ಉಡುಪು ಬಣ್ಣವಾಗಿದ್ದುವು. ಬೆಳ್ಳಿಯ

ಒಡವೆಗಳನ್ನೂ ಧರಿಸಿದ್ದಳು. ಚಿನ್ನದ ಒಡವೆಗಳೂ ಒಂದೆರಡಿದ್ದವು. ಹದಿನಾರಾಣೆ ಬುಂದೇಲು ಖಂಡದವಳು. ಕಾಲಿನ ಗಿರಿಗೆಜ್ಜೆಗಳಿಂದ ಹಿಡಿದು ತಲೆಯ ಮೇಲೆ ಹೊದೆದಿದ್ದ ಧಾವಳಿಯವರೆಗೆ ಎಲ್ಲವೂಸ್ಥಳೀಯ ಉಡುಗೆಯೇ ಆಗಿದ್ದಿತು. ಬಣ್ಣ ಸ್ವಲ್ಪ ಶ್ಯಾಮಲ. ಬಾಕಿ ಎಲ್ಲಾ ಆಕೃತಿಯು ರಾಣಿಯಂತೆಯೇ. ಕಣ್ಣು, ಮೂಗು, ಎಲ್ಲಾ ಒಂದೇ ರೀತಿ ಸರಿಹೋಲುತ್ತಿದ್ದವು. ರಾಣಿಗೆ ಆಶ್ಚರ್ಯವಾಯಿತು. ಇತರ ಸ್ತ್ರೀಯರಿಗೂ ಕುತೂಹಲವೇರ್ಪಟ್ಟಿತು. ಅವಳು ಹೆದರುತ್ತಾ, ಹೆದರುತ್ತಾ ರಾಣಿಯ ಬಳಿಗೆ ಬಂದಳು.

ರಾಣಿಯು ನಸುನಗುತ್ತಾ, ನೀನಾರೆಂದು ಕೇಳಿದಳು.

" ಸರ್ಕಾರ್, ನೆಯ್ಗೆಯವಳು " ಎಂದು ಉತ್ತರ ದೊರಕಿತು.

" ಹೆಸರು ?"

"ಸರ್ಕಾರ್, ಝಲಕಾರಿ ದುಲೈಯ."

" ನಿಸ್ಸಂದೇಹವಾಗಿ ಹೆಸರಿಗೆ ತಕ್ಕಂತಹ ಲಕ್ಷಣವಂತೆ. ನಿನ್ನ ಹೂವ್ವನ್ನು ಮುಡಿಸು.".

"ಝಲಕಾರಿಯು ಹೂವನ್ನು ಮುಡಿಸಿ ರಾಣಿಯಪಾದವನ್ನು ಹಿಡಿದಳು. ರಾಣಿಯು ನಿಷೇಧಿಸಿದನಂತರ ಕಾಲುಗಳನ್ನು ಬಿಟ್ಟಳು. ರಾಣಿಯು ಅವಳನ್ನು "ಏನು ಸಮಾಚಾರ, ಝಲಕಾರಿ ? ಏನಾದರೂ ಹೇಳಬೇಕೆಂದಿರುವೆಯಾ ?" ಎಂದು ಕೇಳಿದಳು.

ಝಲಕಾರಿಯು ನತಮಸ್ತಕಳಾಗಿ ಹೇಳಿದಳು. "ನಾನೊಂದು ವಿನಂತಿಯನ್ನು ಮಾಡಬೇಕೆಂದಿರುವೆನು. ಕ್ಷಮೆಯು ದೊರಕುವುದಾದರೆ ಹೇಳುತ್ತೇನೆ". ರಾಣಿಯು ಮುಗುಳ್ನಗೆ ನಕ್ಕು ಅಭಯ ಪ್ರದಾನ ಮಾಡಿದಳು.

ಝಲಕಾರಿಯು ನಮ್ಮ ಮನೆಯಲ್ಲಿ ರೊಟ್ಟಿಸುಡುವುದೂ, ಬಟ್ಟೆನೇಯುವುದೂ ಇವೆ ಮುಂತಾದ ಕೆಲಸಗಳಿವೆ. ಈಗ ಈ ಕೆಲಸವನ್ನೂ ಕಡಿಮೆಮಾಡಿದ್ದೇನೆ. ಮತ್ತು ಮಲ್ಲಕಂಭ, ಕುಸ್ತಿ ಇನ್ನೂ ಏನೇನೋ ಮಾಡಲಾರಂಭಿಸಿದ್ದೇನೆ. ಈಗ ಮನೆ ಕೆಲಸ ಹೇಗೆ ತಾನೆ ನಡೆದೀತು, ಸರ್ಕಾರ್ ?" ಎಂದಳು.

ರಾಣಿಯು "ನಿಮ್ಮ ಕೋಮಿನಲ್ಲಿ ಮತ್ತಿನ್ನೆಷ್ಟು ಜನ ಕುಸ್ತಿ, ಮಲ್ಲಕಂಭ ಮುಂತಾದುವನ್ನು ಅಭ್ಯಾಸಿಸುತ್ತಿದ್ದಾರೆ ?" ಎಂದು ಕೇಳಿದಳು.

ಝಲಕಾರಿಯು ತನ್ನ ದೊಡ್ಡ ದೊಡ್ಡ ಕಣ್ಣುಗಳನ್ನು ಹೊರಳಿಸುತ್ತಾ " ನಾನೆಲ್ಲಿ ಮನೆಮನೆಗೂ ಹೋಗಿ ನೋಡುತ್ತೇನೆ ?" ಎಂದು ಉತ್ತರವಿತ್ತಳು.

ರಾಣಿಯು ನಗುತ್ತಾ "ನೀನು ಹೇಳುವುದು ಯುಕ್ತವೇ ಸರಿ. ನೀನು ಮಲ್ಲ ಕಂಭ, ಕುಸ್ತಿ ಇವುಗಳನ್ನೂ ಕಲಿ ; ಇನಾಮು ದೊರಕುವುದು. ಕುದುರೆ ಸವಾರಿಯನ್ನು ಕಲಿ

ತುಕೊ" ಎಂದಳು.

ಝಲಕಾರಿಯು ತಲೆತಗ್ಗಿಸಿ ಮುಖಾವಕುಂಠನವನ್ನು ಎಳೆದುಕೊಂಡು ನಕ್ಕಳು. ರಾಣಿಯೂ, ಇತರ ಸ್ತ್ರೀಯರೂ ನಗೆಗಡಲನ್ನು ಹರಿಸಿದರು.

"ನಮಗೂ ಮಲ್ಲ ಕಂಭ ಕುಸ್ತಿಗಳನ್ನು ಕಲಿಯಬೇಕೆಂಬ ಒತ್ತಾಯವು ಬರಬಹುದು. ಒಳ್ಳೆ ಕಷ್ಟ ಬಂದಿತಲ್ಲಾ" ಎಂದು ಅಲ್ಲಿ ಕುಳಿತಿದ್ದ ಸ್ತ್ರೀಯರು ಚಿಂತಾಕ್ರಾಂತರಾಗಿ ಯೋಚಿಸತೊಡಗಿದರು.

ನಂತರ ಅವರು ತಮ್ಮ ಪುಷ್ಪ ಮತ್ತು ಆಭರಣಗಳನ್ನು ನೋಡಿಕೊಂಡರು. ತಾವು ಈ ಅಖಾಡಕ್ಕೆ ಇಳಿಯಬೇಕೆಂಬ ಭಾವವು ತೋಚಿದೊಡನೆಯೆ ಪರಂಪರಾನುಗತವಾಗಿ ಬಂದಿದ್ದ ಸಂಕೋಚ ಲಜ್ಜೆಗಳಿಂದ ಸ್ವಲ್ಪ ನಡುಗಿದರು. ಅವರ ನಗುವು ಬಂಧಿಸಿದಂತೆ ನಿಂತುಹೋಯಿತು.

ಝಲಕಾರಿಯು " ಮಹಾರಾಣಿ, ನಾನು ಹಿಟ್ಟು ಬೀಸುತ್ತೇನೆ. ಎರಡು ಮೂರು ಗಡಿಗೆಗಳಲ್ಲಿ ನೀರು ತುಂಬಿಕೊಂಡು ಬರುತ್ತೇನೆ. ರಾಟೆಯಿಂದ * ನೂಲು ತೆಗೆಯುತ್ತೇನೆ." ಎಂದಳು.

ರಾಣಿಯು ನಿನ್ನ ಗಂಡನ ಹೆಸರೇನೆಂದು ಕೇಳಿದಳು.

ಝಲಕಾರಿಯು ನಾಚಿಕೆಯಿಂದ ತಲೆತಗ್ಗಿಸಿದಳು. ಬಕ್ಷಿಣಿಯು ತಟ್ಟನೆ "ಇಂದು ನಾವೆಲ್ಲರೂ ಅರಸಿನ ಕುಂಕುಮ ಕೊಡುವಾಗ ಅವರವರ ಪತಿಯ ಹೆಸರನ್ನು ಕೇಳೋಣ. ಆಗ ಝಲಕಾರಿಯೂ ಹೇಳಬೇಕಾಗುವುದು. ಆದರೆ........" ಎಂದು ಹೇಳಿ ಸಂಕೋಚದಿಂದ ಇತರ ಸ್ತ್ರೀಯರನ್ನು ನೋಡಲಾರಂಭಿಸಿದಳು.

"ಆದರೆ ಏನು? ಬಕ್ಷಿಣಜೂ" ಎಂದು ರಾಣಿಯು ಕೇಳಿದಳು.

ಬಕ್ಷಿಣಿಯು "ಮಹಾರಾಣಿ, ದೊಡ್ಡ ಕೆಲಸವು ಯಾವಾಗಲೂ ರಾಜನಿಂದ ಪ್ರಾರಂಭಿಸಲ್ಪಡುವುದು. ಇಂದಿನ ಉತ್ಸವದಲ್ಲಿ ಪದ್ಧತಿಯ ಪ್ರಕಾರ ಎಲ್ಲರೂ ಅವರವರ ಪತಿಗಳ ಹೆಸರನ್ನು ಹೇಳಬೇಕಾಗುವುದು. ಆದರೆ ಇದರ ಆರಂಭವನ್ನು ಯಾರು ಮಾಡಬೇಕು? ಅದನ್ನು ನಾವೇ ತಿಳಿಸಿಕೊಡಬೇಕೆ?" ಎಂದು ತಿಳಿಸಿದಳು.

ಸ್ತ್ರೀಯರಲ್ಲಿ ಕೆಲವರು ನಗಲಾರಂಭಿಸಿದರು. ಇನ್ನೂ ಕೆಲವರು ಚಪ್ಪಾಳೆಯನ್ನು ಹೊಡೆದರು. ರಾಣಿಯ ಸಖಿಯರು ಮುಗುಳ್ನಗೆಯಿಂದ ಅವಳ ಮುಖವನ್ನು ನೋಡಲಾರಂಭಿಸಿದರು. ರಾಣಿಯ ಸುಂದರ ವದನದಲ್ಲಿ ಉಷಃಕಿರಣವೊಂದು ಮಿಂಚಿತು. ಕ್ಷಣಮಾತ್ರ ಬೆಳದಿಂಗಳೊಂದು ಮಿನುಗಿದಂತೆ ಅವಳು ಮುಗುಳ್ನಗೆಯನ್ನು ಹೊರ

---

* ಚರಕ: ಚರಕದಲ್ಲಿ ದಾರವನ್ನು ತೆಗೆಯುವ ಪದ್ಧತಿ ಬುಂದೇಲು ಖಂಡದಲ್ಲಿ ಐಶ್ವರ್ಯವಂತರ ಮನೆಗಳಿಂದ ಹಿಡಿದು ಎಲ್ಲರ ಮನೆಗಳಲ್ಲಿಯೂ ಇದ್ದಿತು.

ಸೂಸಿದಳು. ಪುಷ್ಪದಿಂದ ಭರಿತವಾದ ಬಳ್ಳಿಯೊಂದು ಮಂದಮಾರುತದಿಂದ ಚಲಿಸಿದಂತೆ ಅವಳು ತಲೆಯನ್ನಾಡಿಸಿದಳು. ನಂತರ ಬಕ್ಷಿಣಿಯನ್ನು ಕುರಿತು "ನೀವು ನನಗಿಂತ ಹಿರಿಯರು. ಆದುದರಿಂದ ನೀವೇ ಪ್ರಾರಂಭಿಸಬೇಕಾಗುವುದು" ಎಂದಳು.

ಬಕ್ಷಿಣಿಯು ಬಾಯನ್ನು ಸೆರಗಿನಿಂದ ಮುಚ್ಚಿಕೊಂಡು "ಸರ್ಕಾರ್, ನೀವು ನಮ್ಮ ಮಹಾರಾಣಿ. ಆದುದರಿಂದ ತಾವು ಮೊದಲು ಹೇಳಬೇಕು. ನಂತರ ನಾವೆಲ್ಲರೂ ಆಜ್ಞೆಯನ್ನು ಶಿರಸಾವಹಿಸಲು ಸಿದ್ಧರಿದ್ದೇವೆ" ಎಂದಳು.

ಈ ಅರಿಸಿನ ಕುಂಕುಮದ ಉತ್ಸವದಲ್ಲಿ ಮುತ್ತೈದೆಯರೆಲ್ಲರೂ ಒಬ್ಬರಿಗೊಬ್ಬರು ಹಣೆಗೆ ಕುಂಕುಮವನ್ನಿಡುತ್ತಿದ್ದರು. ಆ ಸಮಯದಲ್ಲಿ ಯಾವುದಾದರೊಂದು ಕಾರಣದಿಂದ ಅವರವರ ಪತಿಗಳ ಹೆಸರನ್ನು ಹೇಳಿಸುತ್ತಿದ್ದರು. ಇದು ಆ ಕಾಲದ ಪದ್ಧತಿ.

ರಾಣಿಯು "ಬಕ್ಷಿಣಜೂ, ನಿಮ್ಮ ಮಾತಿನಲ್ಲಿ ದೃಢ ವಿಶ್ವಾಸವಿರಲಿ. ಆಜ್ಞೆ ಪಾಲಿಸುವುದರಲ್ಲಿ ಹಿಂದುಮುಂದು ನೋಡಬಾರದು" ಎಂದಳು.

" ಆದರೆ ಧರ್ಮದ ಆಜ್ಞೆಯನ್ನು ಎಲ್ಲರೂ ಪಾಲಿಸಬೇಕು, ಪ್ರಭು" ಬಕ್ಷಿಣಿಯು ಹಠದಿಂದ ಹೇಳಿದಳು.

ರಾಣಿಯ ಮುಖಮಂಡಲವು ಕೆಂಪೇರಿತು. " ಬಕ್ಷಿಣಜೂ, ನೆನಪಿರಲಿ. ನಾನು ಮುಯ್ಯಿ ತೀರಿಸಿಕೊಳ್ಳುತ್ತೇನೆ. ನನ್ನ ಸರದಿಯು ಬರಲಿ ನೋಡಿಕೊಳ್ಳುತ್ತೇನೆ " ಎಂದಳು.

ಬಕ್ಷಿಣಿಯು " ಈಗ ನನ್ನ ಸರದಿ ಮಹಾರಾಣಿ. ಮಹದೇವನಿಗೆ ಎಷ್ಟು ಹೆಸರುಗಳಿವೆಯೊ ಅವುಗಳನ್ನು ಅಪ್ಪಣೆಕೊಡಿಸಿ " ಎಂದಳು.

ರಾಣಿಯು ತನ್ನ ವಿಶಾಲನೇತ್ರಗಳನ್ನು ಸ್ವಲ್ಪ ಸಂಕುಚಿತಗೊಳಿಸಿ ಗಂಟಲನ್ನು ಸರಿಮಾಡಿಕೊಂಡು ಹೇಳಲಾರಂಭಿಸಿದಳು. " ಶಿವ, ಶಂಕರ, ಬೋಲನಾಥ, ಗಿರಿಜಾಪತಿ............"

"ಮಹಾರಾಣಿಯವರಿಗೆ ಪೂರಾ ಶಬ್ದಕೋಶವೇ ನೆನಪಿನಲ್ಲಿದೆ ; ಹೋಗಲಿ, ಈಗ ಈಶ್ವರನ ಜಟಾಜೂಟದಿಂದ ಏನು ಹೊರಡುತ್ತದೆ ಹೇಳಿ."

" ಸರ್ಪ, ರುದ್ರಾಕ್ಷಿ ".

"ಅದಲ್ಲ ಪ್ರಭು. ಯಾವನ ತಪಸ್ಸಿನ ಪರಿಣಾಮವಾಗಿ ಯಾರನ್ನು ತನ್ನ ಜಟಿಯಲ್ಲಿ ಬಂಧಿಸಿದ್ದನ್ನು ನಿಧಾನವಾಗಿ ಬಿಟ್ಟನೋ ಮತ್ತು ಯಾರು ಅಲ್ಲಿಂದ ಹೊರಟು, ಹಿಮಾಚಲದಿಂದ ಹರಿದು ಈ ದೇಶವನ್ನು ಪವಿತ್ರಗೊಳಿಸಲು ಬಂದಳೋ, ಮತ್ತು ಬ್ರಹ್ಮಾವರ್ತವನ್ನು ಮನೋರಂಜಿತ ಪ್ರದೇಶವನ್ನಾಗಿ ಮಾಡಿದಳೋ, ಅವಳ ಹೆಸರೇನು ಹೇಳಿ ?"

ತಕ್ಷಣವೇ ಲಕ್ಷ್ಮೀಬಾಯಿಯು " ಗಂಗಾ " ಎಂದಳು.

ಅಲ್ಲಿ ಕುಳಿತಿದ್ದ ಸ್ತ್ರೀಯರೆಲ್ಲರೂ ಉನ್ಮತ್ತರಾಗಿ ಎದ್ದು ನಿಂತರು. ಹಲವರು ನರ್ತಿಸಲೂ, ಗಾನಮಾಡಲೂ ಆರಂಭಿಸಿದರು. ಝಲಕಾರಿಯಾದರೋ ತನ್ನ ಬಂದೇಲುಖಂಡದ ನರ್ತನದಲ್ಲಿ ಮೈಮರೆತಳು.

ರಾಣಿಯು ಆ ಆಮೋದ ಪ್ರಮೋದಗಳ ಮಧ್ಯದಲ್ಲಿ ಕೃತಜ್ಞತಾಭಾವದಿಂದ ಗೌರಿಯ ಪ್ರತಿಮೆಯ ಕಡೆಗೆ ನೋಡಿದಳು. ಆ ಸಂತೋಷದ ವಾತಾವರಣವು ಸ್ವಲ್ಪ ಸ್ತಿಮಿತಕ್ಕೆ ಬರಲು ರಾಣಿಯು ಆನಂದ ಭರಿತಳಾಗಿ ಬಕ್ಷಿಣಿಯ ಕೈಹಿಡಿದಳು. “ಬಕ್ಷಿಣಿಜೂ, ಈಗ ಸಾವಧಾನದಿಂದ ಲಾಲಿಸಿ. ಈಗ ನನ್ನ ಸರದಿ ” ಎಂದಳು.

ಬಕ್ಷಿಣಿಯ ಮುಖವು ಕೆಂಪೇರಿ ನತಮಸ್ತಕಳಾಗಿ “ಸರ್ಕ್ಕಾರ್, ಈಗ ಇಲ್ಲಿ ದೊಡ್ಡ ಮಂತ್ರಿಯರ ಪತ್ನಿಯರೂ ಮತ್ತು ಸೊಸೆಯರೂ ಇದ್ದಾರೆ. ನಾವಾದರೋ ತಮ್ಮ ಸೇನೆಯ ಕೇವಲ ಒಬ್ಬ ಬಕ್ಷಿಯ ಹೆಂಡತಿ ” ಎಂದು ಹೇಳಿದಳು.

ರಾಣಿಯು ನಸುನಗುತ್ತಾ, ಕಣ್ಣುಗಳಲ್ಲಿ ಆನಂದ ಬಾಷ್ಪ ಪೂರಿತಳಾಗಿ—

“ಬಕ್ಷಿಯು ಸೇನೆಗಳ ಆಧಾರ ಮತ್ತು ತೋಪುಗಳ ಮಾಲೀಕ. ಪ್ರಧಾನ ಸೇನಾ ಪತಿಯ ಹೊರತಾಗಿ ಮತ್ತಾರಿಗೂ ಕಡಿಮೆಯಲ್ಲ; ರಾಜನ ಬಲಗೈಯಿನ ತೋರಬೆರಳು. ಅಲ್ಲದೆ ನೀವು ಇಲ್ಲಿ ನೆರೆದಿರುವ ಎಲ್ಲಾ ಸ್ತ್ರೀಯರಿಗಿಂತಲೂ ಹೆಚ್ಚು ಹಠವಾದಿಗಳು. ಈಗ ನನ್ನ ಪ್ರಶ್ನೆಗೆ ಉತ್ತರವೀಯಿರಿ.” ಎಂದು ನುಡಿದಳು.

ಬಕ್ಷಿಣಿಯು ತನ್ನ ಮುಖದ ಮೇಲೆ ಗಂಭೀರತೆ, ಕ್ಷೋಭ ಮತ್ತು ಉದಾಸೀನತೆಯನ್ನು ತೋರ್ಪಡಿಸಬೇಕೆಂದು ಆಶಿಸಿದಳು. ಆದರೆ ಲಜ್ಜೆಯಿಂದಾಗಿ ಮುಖವು ಅರಳಿ ಕೆಂಪೇರಿ ನಗು ಉಕ್ಕಿಬರುತ್ತಿದ್ದಿತು.

ಬಕ್ಷಿಣಿಯು “ರಾಣೀ, ತಮ್ಮ ಹಿಡಿತವು ನನ್ನಕೈಮುರಿಯುವಷ್ಟು ಪ್ರಬಲವಾಗಿದೆ” ಎಂದಳು.

ರಾಣಿಯು “ನಿಮ್ಮ ಹಿಡಿತವೂ ಇಷ್ಟೇ ಬಲವಾಗುವಂತೆ ಮಾಡುತ್ತೇನೆ ಸ್ವಲ್ಪ ತಡೆಯಿರಿ. ಮೊದಲು ನನ್ನ ಪ್ರಶ್ನೆಗೆ ಉತ್ತರ ಕೊಡಿ. ಹೇಳಿ, ನಿಮಗೆ ನನ್ನ ಪೂರ್ವಿಕರ ಹೆಸರು ನೆನಪಿದೆಯೆ?” ಎಂದು ಪ್ರಶ್ನಿಸಿದಳು.

ಬಕ್ಷಿಣಿಯು ಸಂಬಾಳಿಸಿಕೊಂಡು, ಇನ್ನೂ ಗುರಿಯಿಟ್ಟ ಪ್ರಶ್ನೆಯು ದೂರವಿದೆ ಎಂದು ಕೊಂಡು “ಹೌದು ಇದೆ, ಪ್ರಭು; ಯಾರ ಸೇವೆಯಲ್ಲಿ ಆಯುಷ್ಯವು ಕಳೆದಿರುವುದೋ ಅವರನ್ನು ಹೇಗೆ ಮರೆಯಲಾದೀತು?” ಎಂದು ಉತ್ತರವಿತ್ತಳು.

ರಾಣಿಯು ನಸುನಗುತ್ತಾ “ ಹಾಗಿದ್ದರೆ ನನ್ನ ಮಾವಂದಿರ ಹೆಸರೇನು ಹೇಳಿ? ” ಎಂದು ಪ್ರಶ್ನಿಸಿದಳು.

ಚತುರೆಯಾದ ಬಕ್ಷಿಣಿಯು ತಬ್ಬಿಬ್ಬಾದಳು. ಅವಳ ಬಾಯಿಯಿಂದ “ಭಾವು

ಸಾಹೇಬ್ "* ಎಂಬ ಮಾತು ಮೆಲ್ಲನೆ ಹೊರಟಿತು.

ಬಕ್ಷಿಣಿಯ ಪತಿಯ ಹೆಸರು "ಲಾಲಾಭಾವು" ಎಂದು.

ರಾಣಿಯು ನಗುತ್ತಾ ಬಕ್ಷಿಣಿಯ ಕೈ ಬಿಟ್ಟಳು.

ಕುಳಿತಿದ್ದ ಹೆಂಗಸರೆಲ್ಲರೂ ಕಿಲಕಿಲನೆ ನಗಲಾರಂಭಿಸಿದರು. ಬಕ್ಷಿಣಿಗೇನೋ ತನ್ನ ಪತಿಯ ಹೆಸರನ್ನು ಹೇಳಲೇಬೇಕಾಗಿದ್ದಿತು. ಆದರೆ ಅವಳು ರಾಣಿಯನ್ನು ಸ್ವಲ್ಪ ಕಿರುಕುಳ ಪಡಿಸಿ ಹೇಳಬೇಕೆಂದು ಆಶಿಸಿದ್ದಳು. ರಾಣಿಯು ಅವಳನ್ನು ಅನಾಯಾಸವಾಗಿ ಪರಾಭವಗೊಳಿಸಿದಳು.

ಇದಾದನಂತರ ರಾಣಿಯು ಝುಲಕಾರಿಯನ್ನು ಕರೆದಳು. ಝುಲಕಾರಿಯ ಗಂಡನ ಹೆಸರು ಅಲ್ಲಿ ಯಾರಿಗೂ ತಿಳಿದಿರಲಿಲ್ಲ. ಆದುದರಿಂದ ಅಕ್ಕಪಕ್ಕದವರ ಗೊಂದಲ ಏನಿರಲಿಲ್ಲ. ರಾಣಿಯು ನೇರವಾಗಿ ಅವಳನ್ನು ಪ್ರಶ್ನಿಸಿದಳು "ನಿನ್ನ ಗಂಡನ ಹೆಸರೇನು ?"

ಝುಲಕಾರಿಯ ಪತಿಯ ಹೆಸರು "ಪೂರಣ್". ಗಂಡನ ಹೆಸರನ್ನು ಹೇಳುವುದಕ್ಕೆ ಅವಳಿಗೆ ಇಷ್ಟವಿರಲಿಲ್ಲ. ಆದರೆ ಉತ್ಸವದ ಮೋಜನ್ನು ಹೆಚ್ಚಿಸುವುದಕ್ಕೆ ಅವಳು ಸ್ವಲ್ಪ ಯೋಚಿಸಿ ಒಂದು ಯುಕ್ತಿಯನ್ನು ಹೂಡಿ ಹೇಳಿದಳು. "ಪೂರ್ಣಿಮೆಯ ಮೊದಲರ್ಧವಲ್ಲವೆ ?"

ರಾಣಿಯು ನಗುತ್ತಾ "ಏಹೋ! ನೀನು ಮೊದಲಮಾತಿನಲ್ಲೇ ಸಿಕ್ಕಿಬಿದ್ದೆ. ನಿನ್ನ ಗಂಡನ ಹೆಸರು ಪೂರಣನೆಂದಲ್ಲವೆ ?" ಕೇಳಿದಳು.

ಝುಲಕಾರಿಯು ಅಚ್ಚರಿಗೊಂಡಳು. "ಯುಕ್ತಿಯು ವಿಫಲವಾಯಿತು" ಎಂದು ನಗಲಾರಂಭಿಸಿದಳು.

ಇದೇ ರೀತಿ ನಕ್ಕು, ನಗೆ ಕೋಲಾಹಲ ನೃತ್ಯಗೀತೆಗಳಲ್ಲಿ ಆ ಉತ್ಸವವು ಸಕಾಲದಲ್ಲಿ ಕೊನೆಗೊಂಡಿತು.

ಅಂತ್ಯದಲ್ಲಿ ರಾಣಿಯು ಅಲ್ಲಿ ನೆರೆದಿದ್ದ ಸ್ತ್ರೀಯರಲ್ಲಿ ಒಂದು ಪ್ರಾರ್ಥನೆ ಮಾಡಿದಳು. "ನಿಮ್ಮಲ್ಲಿ ಕೆಲವರು ನನ್ನ ಸಹೋದರಿಯರಂತೆ, ಕೆಲವರು ಚಿಕ್ಕಮ್ಮ ದೊಡ್ಡಮ್ಮರಂತೆ, ಕೆಲವರು ತಾಯಿಯಂತೆ, ಕೆಲವರು ಅತ್ತೆಯಂತಿರುವಿರಿ. ಪುಷ್ಪವು ಯಾವಾಗಲೂ ವಿಕಸಿತವಾಗಿರುವುದಿಲ್ಲ. ಆದರೆ ಆ ಸವಿನೆನಪು ಮಾತ್ರ ಮನಸ್ಸಿನಲ್ಲಿ ಸದಾ ಸ್ಥಾಪಿತವಾಗಿರುವುದು. ನೃತ್ಯಗಾಯನಗಳ ಸ್ಮರಣೆಯೂ ಕೂಡ ಸುಖದಾಯಕವಾಗಿರುತ್ತದೆ. ಆದರೆ ಈ ಎಲ್ಲ ಸ್ಮೃತಿಗಳ ಪೋಷಣೆಯನ್ನು ಶರೀರವೂ ಮತ್ತು ಅದರೊಳಗಿನ ಆತ್ಮವೂ ಮಾಡುತ್ತವೆ. ಅವುಗಳನ್ನು ಪುಷ್ಟೀಕರಿಸಿ, ಪ್ರಬಲಗೊಳಿಸಿ. ಈ

---

* ಶಿವರಾವ್ ಭಾವು ಗಂಗಾಧರರಾಯನ ಪಿತನಾಗಿದ್ದನು.

ರೀತಿ ಮಾಡುವಿರೆಂದು ನನಗೆ ವಚನವೀಯುವಿರಾ ?"

ಆ ಸ್ತ್ರೀಯರು ಈ ಮಾತನ್ನು ಅರ್ಥಮಾಡಿಕೊಂಡರೋ ಇಲ್ಲವೋ ಅಂತೂ ಎಲ್ಲರೂ ಸಮ್ಮತಿಯನ್ನು ಸೂಚಿಸಿದರು. ತಕ್ಷಣವೇ ಆ ಸ್ಥಳದಲ್ಲೇ ಎಲ್ಲಿ ಕುಸ್ತಿ ಮಲ್ಲಕಂಭಗಳನ್ನು ಆರಂಭಿಸಬೇಕೋ ಎಂಬ ಹೆದರಿಕೆಯಾಯಿತು. ತಾಂಬೂಲ ವನ್ನು ಸ್ವೀಕರಿಸಿ ಅವರೆಲ್ಲರೂ ಬೀಳ್ಕೊಂಡರು.

ಆದರೆ ಅವರಲ್ಲಿ ಯಾವುದೋ ಅವರ್ಣನೀಯ ತೇಜಸ್ಸೊಂದು ಅಡಕವಾಗಿದ್ದಿ ತೆಂಬುದು ಸ್ಪಷ್ಟವಾಯಿತು.

ಇದಾದ ನಂತರ ಪುನಃ ಝಾನ್ಸಿಯ ಸ್ತ್ರೀಯರು ಸಂಧ್ಯಾಕಾಲದಲ್ಲಿ ತಟ್ಟೆಗಳಲ್ಲಿ ದೀಪಾರತಿಗಳನ್ನು ಸಿದ್ಧಪಡಿಸಿಕೊಂಡು, ಮಾಲತಿ, ಮಲ್ಲಿಗೆ, ಜಾಜಿ ಮುಂತಾದ ಪುಷ್ಪ ಗಳಿಂದ ಅಲಂಕೃತರಾಗಿ ದೇವಾಲಯಕ್ಕೆ ಹೋಗಲಾರಂಭಿಸಿದರು. ಸ್ತ್ರೀಯರಿಗೆ ಸದಾ ಕಾಲದಲ್ಲಿಯೂ, ಯಾರೋ ಅವರನ್ನು ಸಂರಕ್ಷಿಸುತ್ತಿರುವಂತೆಯೂ, ಜೊತೆಯಲ್ಲಿಯೆ ಯಾರೋ ಸಂರಕ್ಷಕರು ಇರುವಂತೆಯೂ, ತಮ್ಮ ರಕ್ತದಲ್ಲಿಯೇ ಯಾವ ಅತ್ಯಾಚಾರ ವನ್ನೂ ಎದುರಿಸುವ ಶಕ್ತಿಯು ಸಂಚರಿಸುತ್ತಿರುವಂತೆಯೂ ಅವರಿಗೆ ಭಾಸವಾಗ ಲಾರಂಭಿಸಿತು.

## ೨೧

ಗಂಗಾಧರರಾಯನಿಗೆ ನಾಟಕಶಾಲೆಯಲ್ಲಿ ಬರಬರುತ್ತಾ ಆಸಕ್ತಿಯೂ ಕಡಿಮೆ ಯಾಯಿತು. ಅವನು ಹೆಚ್ಚಾಗಿ ಅರಮನೆಯಲ್ಲಿ ಕಾಲಕಳೆಯಲಾರಂಭಿಸಿದನು. ಆದರೆ ಕಛೇರಿ ದರ್ಬಾರುಗಳನ್ನು ನಿಲ್ಲಿಸಲಿಲ್ಲ. ತಪ್ಪೋ ಸರಿಯೋ ಮನಸ್ಸಿಗೆ ಬಂದಂತೆ ನ್ಯಾಯ ವಿಮರ್ಶೆಮಾಡಿ ಇಷ್ಟಬಂದಂತೆ ಕಠೋರದಂಡನೆಗಳನ್ನು ವಿಧಿಸುತ್ತಿದ್ದನು. ಆದರೆ ಸ್ತ್ರೀಯರನ್ನು ಎಂದಿಗೂ ತೊಂದರೆ ಪಡಿಸುತ್ತಿರಲಿಲ್ಲ. ಮತ್ತು ಯಾರ ಆಸ್ತಿಪಾಸ್ತಿ ಗಳನ್ನೂ ಲೂಟಿಮಾಡುತ್ತಿರಲಿಲ್ಲ.

ಝಾನ್ಸಿಯ ಜನತೆಯು ರಾಜನಿಂದ ಭಯಭೀತರಾಗಿದ್ದಿತು. ಆದರೆ ರಾಣಿ ಯನ್ನು ಬಹುವಾಗಿ ಪ್ರೀತಿಸುತ್ತಿದ್ದರು. ರಾಣಿಯು ರಾಜಶಾಸನದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸದಿದ್ದರೂ, ರಾಜನ ಕಠೋರ ಶಾಸನಗಳಲ್ಲಿ ಎಲ್ಲಿಯಾದರೂ ಸ್ವಲ್ಪ ದಯೆ ತೋರಿಬಂದರೆ ಅದು ರಾಣಿಯ ಕೈವಾಡವೆಂದು ಜನರು ಊಹಿಸಿಕೊಳ್ಳುತ್ತಿದ್ದರು.

ಝಾನ್ಸಿಯಲ್ಲಿದ್ದ ಕಂಪೆನಿಯ ಅಸಿಸ್ಟೆಂಟ್ ಪೊಲಿಟಿಕಲ್ ಏಜಂಟನು ರಾಜನ ಕಠೋರಶಾಸನ, ಅತ್ಯಾಚಾರ ಇವೇ ಮುಂತಾದ ವಿಷಯಗಳನ್ನು ಗೌರ್ನರ್ ಜನರಲ್ ಸಾಹೇಬನ ಬಳಿಗೆ ತಪ್ಪದೆ ಮುಟ್ಟಿಸುತ್ತಿದ್ದನು. ಅವನ ಯಾವ ಸತ್ಕಾರ್ಯ ಸಮಾ

ವೇಶವನ್ನೂ ಆ ಸಮಾಚಾರದೊಂದಿಗೆ ತಿಳಿಯ ಪಡಿಸುತ್ತಿರಲಿಲ್ಲ. ಕಲ್ಕತ್ತೆಯಲ್ಲಿ ಬಾಕಿ ರಾಜ್ಯಗಳೊಂದಿಗೆ ಝಾನ್ಸಿಯ ರಾಜ್ಯದ ವಿಚಾರಣೆಯ ಕಾಗದಪತ್ರಗಳು ತಯಾರಾಗುತ್ತಿದ್ದುವು.

ಆಂಗ್ಲೇಯರ ಹಿತೈಷಿಗಳು ತಮ್ಮ ಚಳವಳಿಯನ್ನು ಉಗ್ರರೂಪವಾಗಿ ಹೆಚ್ಚಿಸುತ್ತಿದ್ದರು. ಆಂಗ್ಲೇಯರಿಗೆ ಸಂಪೂರ್ಣ ಹಿಂದೂಸ್ಥಾನವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಳ್ಳಬೇಕೆಂಬ ಆಕಾಂಕ್ಷೆಯಿದ್ದಿತು. ಒಂದೇ ಕಾಯಿದೆ, ಒಂದೇ ಕಾನೂನು, ಒಬ್ಬಮಾಲೀಕ, ಒಂದೇ ದೃಷ್ಟಿ, ಇದರಲ್ಲಿ ಒಂದು ಎಳ್ಳಷ್ಟೂ ಮತ್ತೊಬ್ಬರಿಗೆ ಬಿಟ್ಟು ಕೊಡುವ ವಾದವೇ ಇರಲಿಲ್ಲ. ಅಲ್ಪಸ್ವಲ್ಪ ಅವಕಾಶ ದೊರಕಿದರೂ ಸಾಕು, ಚಿಕ್ಕ ಪುಟ್ಟ ಸಂಸ್ಥಾನಗಳನ್ನು ಕಬಳಿಸುತ್ತಿದ್ದರು. ಎಲವೂ ಭಾರತೀಯರ ಏಳಿಗೆಗಾಗಿ !!!

ಭಾರತೀಯರು ಉನ್ನತಸ್ಥಿತಿಗೆ ಬರುವುದು ಸಾಧ್ಯವೇ ಇರಲ್ಲಿಲ್ಲ. ಭಾರತೀಯರ ಸಂಸ್ಕೃತಿಯು ಹೇಯ ಮತ್ತು ತುಚ್ಛವಾದದ್ದು. ಆದುದರಿಂದ ಅದು ಅಭಿವೃದ್ಧಿಗೆ ಬರುವುದಿಲ್ಲ. ಭಾರತದಲ್ಲಿ ವಿಪುಳ ಸಂಪತ್ತಿದೆ. ಆದುದರಿಂದ ತಮ್ಮ ಅಂಗಡಿಗಳ ಬಂಡವಾಳವು ಹೆಚ್ಚುತ್ತಲೇ ಹೋಗುವುದು. ಜನತೆಯು ಸ್ವಾಧೀನತೆಯ ಮಾತನ್ನೆತ್ತಿದರೆ ದೊಡ್ಡ ಸಂಸ್ಥಾನಾಧೀಶ್ವರರಿಗೆ ಸಂಕೇತಮಾಡಿ ಅದರ ಬಾಯಿ ಮುಚ್ಚಿಸುವುದು. ಆ ದೊಡ್ಡ ಸಂಸ್ಥಾನಾಧೀಶ್ವರರು ಸ್ವಲ್ಪ ತಲೆಯೆತ್ತಿದರೆ ಯಾವುದಾದರೊಂದು ನೆಪದಿಂದ ಚಿಕ್ಕರಿಯಾಸತಿಗಳನ್ನು ಎತ್ತಿಗಟ್ಟಿ ದೊಡ್ಡ ಸಂಸ್ಥಾನಾಧೀಶರನ್ನು ಸುಮ್ಮನಿರುವಂತೆ ಪಾಠಕಲಿಸುವುದು. ಇದೇ ಆಂಗ್ಲೇಯರ ಮತವಾಗಿದ್ದಿತು.

ಭಾರತಜನತೆಗೆ ಆಂಗ್ಲೇಯರು ಮಾಡಿದ ಮಹಪಕಾರವೇನೆಂದರೆ ಪಂಚಾಯಿತಿಗಳ ಸರ್ವನಾಶ. ಇದನ್ನು ಕಾರ್ಯಗತಮಾಡಲು ಆಂಗ್ಲೇಯರು ಸ್ವಲ್ಪವೂ ಕಾಲವಿಳಂಬಮಾಡಲಿಲ್ಲ. ಏತಕ್ಕೆಂದರೆ ಇಲ್ಲಿನ ಪಂಚಾಯಿತಿಗಳು ಅವರ ನ್ಯಾಯಸ್ಥಾನಗಳಲ್ಲಿ ವಿಲೀನವಾದರೇನೆ, ಹಿಂದೂಸ್ಥಾನವು ಶಿರಬಾಗಿಸುವುದು ಮತ್ತು ಹಿಂದೂಸ್ಥಾನೀಯರು ಅರ್ಜಿಗಳನ್ನು ಹಿಡಿದು ಕೋರ್ಟುಕಛೇರಿಗಳ ಮುಂದೆ ನಾಯಿಗಳಂತೆ ತಿರುಗಾಡಲಾರಂಭಿಸುವರು.

ಇವೆಲ್ಲವೂ ಹತ್ತೊಂಭತ್ತನೇ ಶತಮಾನದ ಅಂತ್ಯದಲ್ಲಿ ವೈಜ್ಞಾನಿಕ ರೀತಿಯಲ್ಲೇ ನಡೆಯಿತು. ಯಾವ ಅತ್ಯಂತ ಕಠೋರ ಪರಿಸ್ಥಿತಿಯನ್ನು ಪಠಾಣ ಅಥವಾ ಮೊಗಲ್ ಬಾದಶಹರು ತಮ್ಮ ಬಹಿರಂಗ ಅತ್ಯಾಚಾರದಿಂದ ಉಂಟುಮಾಡಲಾಗಲಿಲ್ಲವೋ ಅದನ್ನು ಆಂಗ್ಲೇಯರು ತಮ್ಮ ವೈಜ್ಞಾನಿಕ ಚಾಕಚಕ್ಯತೆಯಿಂದ ಉತ್ಪನ್ನ ಮಾಡಿದರು. ದೊಡ್ಡ ರಾಜಮಹಾರಾಜರುಗಳೂ ಮತ್ತು ನವಾಬರೂ ತಮ್ಮ ಪ್ರಜೆಗಳ ಹಿತವನ್ನು ನಿರ್ಲಕ್ಷಿಸಿ ಆಂಗ್ಲೇಯರ ಪಕ್ಷವನ್ನು ಆಶಿಸಲಾರಂಭಿಸಿದರು. ಅವರಿಗೆ ಶೌರ್ಯ ಪರಾಕ್ರಮಗಳ ಅವಶ್ಯಕತೆಯೇ ಇರಲಿಲ್ಲ. ಆದುದರಿಂದ ಸಂಪೂರ್ಣವಾಗಿ ವಿಷಯ ಲೋಲು

ಪಕೆಯಲ್ಲಿ ಮುಳುಗಿದ್ದರು. ಆಂಗ್ಲೇಯರ ಶಸ್ತ್ರಾಸ್ತ್ರಗಳೂ ಮತ್ತು ಸ್ನೇಹವೂ ಅವರ ಬೆಂಬಲವಾಗಿದ್ದಿತು. ಬಡ ಜನತೆಯು ಏನು ಮಾಡಬಲ್ಲದು?

ಆಂಗ್ಲೇಯರಿಗೆ ಕೇವಲ ಒಂದೇ ಒಂದು ತೊಡರಿದ್ದಿತು—ಅವರ ಇಲಾಖೆಯ ಹಿಂದೂ ಮುಸಲ್ಮಾನರು ಧರ್ಮದ ವಿಷಯದಲ್ಲಿ ಇಷ್ಟು ಬೂಟಾಟಿಕೆ ಆಡಂಬರಗಳನ್ನು ಏಕೆ ಆಚರಿಸುತ್ತಾರೆ? ಎಂದಾದರೂ ಈ ಡಂಭಾಚಾರವನ್ನೇ ನೆಪವಾಗಿ ಮಾಡಿಕೊಂಡು ನಾವೇಕೆ ನಷ್ಟವನ್ನು ಹೊಂದಬಾರದು? ಈ ಧರ್ಮಗಳಿಂದ ಬಂಧಿತವಾದ ಆತ್ಮದ ಉದ್ಧಾರವು ಹೇಗೆ ಆಗುವುದು? ಇವರ ಶ್ರದ್ಧೆಯನ್ನು ನಮ್ಮ ಧರ್ಮದಕಡೆಗೆ ಒಲಿದಿದ್ದೇ ಆದರೆ ಈ ಭಾರತದಲ್ಲಿ ನಮ್ಮ ರಾಜ್ಯವು ಅನಂತವೂ ಅಮರವೂ ಆಗುವುದರಲ್ಲಿ ಸಂದೇಹವಿಲ್ಲ.

ಅದೇ ಕಾರಣದಿಂದ ಸರ್ಕಾರಿ ಪಾಠಶಾಲೆಗಳಲ್ಲಿ ಕ್ರೈಸ್ತಮತ ಗ್ರಂಥ ಪಠನೆಯು ಅನಿವಾರ್ಯವಾಯಿತು. ಅಮೆರಿಕಾದೇಶವು ಕೈಬಿಟ್ಟುಹೋದರೆ ಆದ ನಷ್ಟವೇನು? ಭಂಗಾರದ ಮೊಟ್ಟೆಯನ್ನಿಡುವ ಸ್ವರ್ಣಪಕ್ಷಿ—ಭಾರತ ಭೂಮಿಯು–ಕೈವಶವಾಯಿತು. ಇದನ್ನು ಏನೇ ಆಗಲಿ ಕೈಯ್ಯಿಂದ ಬಿಡುವುದಿಲ್ಲ. ದೇವಸ್ಥಾನದಲ್ಲಿರುವ ಮೂರ್ತಿಗಳನ್ನು ಭಿನ್ನಮಾಡಬೇಡಿ, ಮಸೀದಿಗಳನ್ನು ಅಪವಿತ್ರ ಮಾಡಬೇಡಿ—ಆದರೆ ಆ ಧರ್ಮಗಳ ಮೇಲಿರುವ ಶ್ರದ್ಧೆಯನ್ನು ಸ್ವಲ್ಪ ಸ್ವಲ್ಪವಾಗಿ ನಿಗ್ರಹಿಸಿ. ಇದರ ಫಲವು ಇನ್ನೂ ಮಹತ್ತರವಾದದ್ದು. ನಾವು ಧರ್ಮದವಿಚಾರಗಳಲ್ಲಿ ತಟಸ್ಥರೆಂಬುದನ್ನು ಮೂಲೆ ಮೂಲೆಗೂ ಸಾರಿ. ನಮ್ಮ ಏಕೋದ್ದೇಶವೇನೆಂದರೆ ಹಿಂದೂಸ್ಥಾನದಲ್ಲಿರುವ ದರೋಡೆ ದಂಗೆಕಾರರನ್ನು ಅಡಗಿಸಿ ಶಾಂತಿಯನ್ನು ಸ್ಥಾಪಿಸುವುದು ಮತ್ತು ಇದರಿಂದ ಭೂಮಿ ಕಾಣಿಗಳ ಸಾಗುವಳಿ, ವ್ಯಾಪಾರಸಾಪಾರ ಇವುಗಳನ್ನು ನಿರ್ವಿಘ್ನವಾಗಿ ಅಭಿವೃದ್ಧಿ ಪಡಿಸುವುದು. ಯಾರ ವ್ಯಾಪಾರ? ಯಾರಿಗಾಗಿ ಭೂಮಿಕಾಣಿಗಳು? ಯಾರ ಅಭಿವೃದ್ಧಿ? ಅವೇ ಆಂಗ್ಲೇಯ ವ್ಯಾಪಾರಸ್ಥರಿಗೆ.

ಗಂಗಾಧರರಾಯನು ಈ ವಿಶೇಷ ತರ್ಕವನ್ನು ಸರಿಯಾಗಿ ತಿಳಿದುಕೊಂಡಿರಲಿಲ್ಲ. ಆದರೆ ಅವನಿಗೆ ಮೊದಲು ಪುಣೆಯಲ್ಲಿ ಒಬ್ಬ ಕೃಶಾಂಗ ವ್ಯಕ್ತಿ ನಾನಾಫಡ್ನವೀಸನೆಂಬುವನು ಇವೆಲ್ಲವನ್ನೂ ಚೆನ್ನಾಗಿ ಮನನಮಾಡಿಕೊಂಡಿದ್ದನು. ಆ ಕಾಲದ ಜನತೆಗೆ ಇದರ ವಿಚಾರವಾಗಿ ಉಪದೇಶಮಾಡಿ ಬಹಳ ಪ್ರಯಾಸಗೊಂಡಿದ್ದನು. ಆದರೆ ಆ ಮೂರ್ಖರು ಏನನ್ನೂ ಅರ್ಥಮಾಡಿಕೊಳ್ಳಲಿಲ್ಲ. ತಮ್ಮ ಸ್ವಂತ ಮಹತ್ವಾಕಾಂಕ್ಷೆಯ ಪ್ರೇರಣೆಯಿಂದಾಗಿ ಒಬ್ಬರಿಗೊಬ್ಬರು ಹೊಡೆದಾಡಿ ಮಡಿದರು.

ಆಂಗ್ಲೇಯರು ಪಂಜಾಬನ್ನು ಸೋಲಿಸಿ ಕೈವಶಮಾಡಿಕೊಂಡಿದ್ದರು. ಬಿಹಾರ ಮತ್ತು ಬಂಗಾಳಗಳಲ್ಲಿ ರಾಜ್ಯಸ್ಥಾಪನೆಯಾಗಿತ್ತು. ಮಧ್ಯದೇಶದಲ್ಲಿ ರಾಜ್ಯಗಳು ವಂಶಪಾರಂಪರ್ಯಾನುಗತವಾಗಿ ಕೈಯಿಂದ ಕೈಗೆ ಬದಲಿಸುತ್ತಿದ್ದವು. ಇವುಗಳ

ಮಧ್ಯೆ ಎರಡು ದೊಡ್ಡ ಮನೆತನಗಳಿದ್ದುವು. ಒಂದು ಔಂಧಿನ ಮುಸಲ್ಮಾನಿ ನವಾಬಗಿರಿ ಮತ್ತು ಇನ್ನೊಂದು ಝಾನ್ಸಿಯ ದೊಡ್ಡ ಹಿಂದೂ ಸಂಸ್ಥಾನ. ಇವೆರಡೂ ಹೇಗಾದರೂ ಮುಕ್ತಾಯವಾದರೆ ಆಂಗ್ಲೇಯರ ಮಿತ್ರವೃಂದದ ಸಂಚುಗಳಿಗೆ ಜಯ.

ಗಂಗಾಧರರಾಯನ ಬಳಿಗೆ ಗಾರ್ಡನ್ ಸಾಹೇಬನಲ್ಲದೆ ಇನ್ನೂ ಕೆಲವು ಆಂಗ್ಲೇಯರು ಆಗಾಗ್ಯೆ ಬಂದು ಹೋಗುತ್ತಿದ್ದರು. ಆದರೆ ಅವರು ಕೇವಲ ಸ್ನೇಹಭಾವವನ್ನು ಪುಷ್ಟೀಕರಿಸಲು ಬರುತ್ತಿರಲಿಲ್ಲ. ರಾಜ್ಯದೊಳಗಿನ ಮಾತುಕಥೆಗಳನ್ನು ತಿಳಿದುಕೊಂಡು ಗವರ್ನರ್ ಜನರಲ್ ಸಾಹೇಬನ ಬಳಿಗೆ ಸುದ್ದಿಯನ್ನು ತಲಪಿಸುವುದು ಅವರ ಪ್ರಧಾನ ಕರ್ತವ್ಯವಾಗಿದ್ದಿತು.

ಅವರೆಗೂ ಗಂಗಾಧರರಾಯನಿಗೆ ಸಂತಾನಪ್ರಾಪ್ತಿಯಾಗಿರಲಿಲ್ಲ ಮತ್ತು ಈ ಎರಡನೆಯ ವಿವಾಹವನ್ನು ಸಂತಾನಾಕಾಂಕ್ಷೆಯಾಗಿ ಮಾಡಿಕೊಂಡಿದ್ದನು. ರಾಣಿಯು ಗರ್ಭವತಿಯೇನೋ ಆಗಿದ್ದಳು. ಆದರೆ ಸಂತಾನವು ಗಂಡು ಶಿಶುವೇ ಆಗುವುದೆಂದು ಭರವಸೆ ಇರಲಿಲ್ಲ. ಒಂದುವೇಳೆ ಅವನೇನಾದರೂ ನಿಸ್ಸಂತಾನನಾಗಿ ಕಾಲಗತಿಯನ್ನೈದಿದರೆ ಝಾನ್ಸಿ ರಾಜ್ಯವು ಒಡನೆಯೇ ಆಂಗ್ಲೇಯರ ರಾಜ್ಯದಲ್ಲಿ ಸೇರಿಕೊಳ್ಳುವುದು ಖಂಡಿತವಾಗಿದ್ದಿತು. ಇದು ಆಂಗ್ಲೇಯರ ಮನೋಪೇಕ್ಷೆಯಾಗಿದ್ದಿತು. ಆದುದರಿಂದ ಗಾರ್ಡನ್‌ಸಾಹೇಬ ಮುಂತಾದವರು ಗಂಗಾಧರರಾಯನ ಗುಣದೋಷಗಳನ್ನು ಎದುರೆದುರೆಯೇ ಹೇಳುತ್ತಿದ್ದರು. ಝಾನ್ಸಿಯ ನಿವಾಸಿಗಳು ತಮ್ಮ ಗುಣದೋಷಗಳನ್ನೂ ಚಕ್ರಬಡ್ಡಿಯೊಂದಿಗೆ ತಮಗೆ ಹೇಳಬಹುದು ಎಂಬ ಭೀತಿಯೂ ಮನಸ್ಸಿನಲ್ಲಿಯೇ ಅಂಕುರಿಸಿತ್ತು.

ಛಳಿಗಾಲವು ಆರಂಭವಾಗಿದ್ದಿತು. ನಕ್ಷತ್ರಗಳು ಮಿರುಗುತ್ತಾ ಹಾಲಿನಂತಿದ್ದ ಬೆಳದಿಂಗಳ ಸೊಬಗನ್ನು ಹೆಚ್ಚಿಸುತ್ತಿದ್ದವು. ಗಾರ್ಡನ್ ಮತ್ತು ಗಂಗಾಧರರಾಯರಿಬ್ಬರೂ ದಿವಾನಖಾನೆಯಲ್ಲಿ ಕುಳಿತು ಮಾತನಾಡುತ್ತಿದ್ದರು.

ಗಂಗಾಧರರಾಯ—ಪಂತ ಪ್ರಧಾನ ಬಾಜೀರಾಯನು ದೇಹಾಂತವಾದ ಸಮಾಚಾರವು ನನಗೆ ತಿಳಿದಿದ್ದಿತು. ಆದರೆ ಆತನ ವಾರ್ಷಿಕವೇತನಕ್ಕೆ ಮುಟ್ಟುಗೋಲು ಹಾಕಲ್ಪಟ್ಟಿದೆಯೆಂಬುದು ಈಗ ತಿಳಿಯಿತು. ಇದು ಸರಿಯಲ್ಲ.

ಗಾರ್ಡನ್—ಯೋಚಿಸಿ ನೋಡಿ, ಸರ್ಕಾರ್. ಎಂಟುಲಕ್ಷ ರೂಪಾಯಿಯೆಂದರೆ ಎಷ್ಟಾಯಿತು ? ಅದರ ಸಮೇತ ಬಿಟ್ಟೂರಿನ ಇನಾಮತಿ. ಜಹಗೀರು. ಅದರ ಮೇಲೆ ಖರ್ಚು ಲೇಶವೂ ಇಲ್ಲ.

ಗಂಗಾಧರರಾಯ—ಪಂತ ಪ್ರಧಾನರೊಡನೆ ಕಂಪೆನಿ ಸರ್ಕಾರವು ೧೮೦೨ ನೇ ಇಸವಿಯಲ್ಲಿ ನಡೆಸಿದ ಸಂಧಿಯಲ್ಲಿ ಗೌರ್ನರ್ ಜನರಲ್ ಸಾಹೇಬನು ತನ್ನ ಸ್ವಹಸ್ತದಿಂದ ಈ ವೇತನವು ಆಚಂದ್ರಾರ್ಕವಾಗಿ ನಡೆಯುವುದಾಗಿ ಬರೆದಿದ್ದಾರೆಂದು ನನ್ನ

ಆಪ್ತೇಷ್ಟರಿಂದ ತಿಳಿದು ಬಂದಿತು. ಸೂರ್ಯ ಚಂದ್ರರೇನೋ ಅವರವರ ಸ್ಥಳಗಳಲ್ಲಿಯೇ ಇರುವರು. ಆದರೆ ಸಂಧಿ ಪತ್ರಕ್ಕೆ ಸಹಿಬಿದ್ದು ಕೇವಲ ೫೦ ವರ್ಷಗಳೂ ಕೂಡ ಆಗಿಲ್ಲ. ಅಷ್ಟರಲ್ಲಿ ಎಲ್ಲವೂ ನಿರ್ನಾಮವಾಗಿ ಹೋಯಿತು.

ಗಾರ್ಡನ್—ಸರ್ಕಾರ್, ಸಂಧಿ ಪತ್ರವೇನೋ ನನ್ನ ವಶದಲ್ಲಿಲ್ಲ. ಆದುದರಿಂದ ಅದರಲ್ಲಿ ಏನೇನು ಉಕ್ತವಾಗಿದೆಯೆಂದು ಸರಿಯಾಗಿ ಹೇಳಲಾರೆ. ಆದರೆ ಹದಿನೈದು ಅಥವಾ ಹದಿನಾರು ವರ್ಷಗಳ ಹಿಂದೆ ಆತನಿಗೆ ವಾರ್ಷಿಕ ವೇತನವನ್ನು ಕೊಟ್ಟಾಗ ಈ ವೇತನವು ಆತನೂ ಮತ್ತು ಆತನ ಕುಟುಂಬ ಮಾತ್ರ ಅನುಭವಿಸಬಹುದಾಗಿ ಬರದಿದೆಯೆಂದು ಕೇಳಿದ್ದೇನೆ.

ಗಂಗಾ—ಈಗ ಯುವಕನಾಗಿರುವ ನಾನಾ ಧೋಂಡೋಪಂತನು ಪಂತ ಪ್ರಧಾನರ ದತ್ತು ಪುತ್ರನು. ಆತನು ಅವರ ಕುಟುಂಬವೆಂದು ಗಣಿಸಲ್ಪಡುವುದಿಲ್ಲವೆ ?

ಗಾರ್ಡನ್—ನಮ್ಮ ದೇಶದ ಕಟ್ಟಳೆಯ ಪ್ರಕಾರ ದತ್ತುಸ್ವೀಕಾರವನ್ನು ಗಣನೆಗೆ ತರುವುದಿಲ್ಲ.

ಗಂಗಾ—ಆದರೆ ಹಿಂದೂಸ್ಥಾನವು ನಿಮ್ಮ ದೇಶವಲ್ಲವಲ್ಲ ?

ಗಾರ್ಡನ್—ಈ ರಾಜ್ಯವೇನೋ ಆಂಗ್ಲೇಯರ ಕಂಪೆನಿಗೆ ಸೇರಿದುದು. ರಾಜನು ತನ್ನ ಕಾನೂನಿನಂತೆ ವರ್ತಿಸುತ್ತಾನೆಯೋ ಇಲ್ಲ ಪ್ರಜೆಗಳದಂತೆಯೊ? ಸರ್ಕಾರ್, ತಮ್ಮ ರಾಜ್ಯದಲ್ಲಿ ಎಲ್ಲರೂ ತಮ್ಮ ಕಾನೂನಿನಂತೆ ವರ್ತಿಸುತ್ತಾರಲ್ಲವೆ?

ಗಂಗಾ—ನನ್ನ ಮತ್ತು ನನ್ನ ಪ್ರಜೆಗಳ ಕಾನೂನು ಒಂದೇ ಆಗಿವೆ.

ಗಾರ್ಡನ್—ಇದೇನೋ ಸರಿಯೇ, ಸರ್ಕಾರ್. ದಿವಾನಿ ಮಾಮಲೆಗಳಲ್ಲಿ ನಮ್ಮ ಇಲಾಖೆಗಳಲ್ಲಿಯೂ ಪ್ರಜೆಗಳ ಕಾನೂನೇ ಚಲಾಯಿಸಲಾಗುವುದು. ಆದರೆ ರಿಯಾಸತಿಯ ಸಂಬಂಧದಲ್ಲಿ ವಿಚಾರವನ್ನು ಅಷ್ಟು ಹಗುರವಾಗಿ ನೋಡಲಾಗುವುದಿಲ್ಲ.

ಗಂಗಾ—ಸಂಸ್ಥಾನಗಳೂ ಮತ್ತು ಸಂಸ್ಥಾನಿಕರು ಸಾಧಾರಣ ಪ್ರಜೆಗಳಿಗಿಂತ ಕಡಿಮೆಯೆ ?

ಗಾರ್ಡನ್—ಸರ್ಕಾರ್, ನನಗೆ ಅದು ತಿಳಿಯದು. ಇಂಗ್ಲೆಂಡಿನಲ್ಲಿ ಕಂಪೆನಿಯ ಸರ್ಕಾರದವರು ಈ ಕಾನೂನುಗಳನ್ನು ರಚಿಸುತ್ತಾರೆ. ಕೆಲವು ಕಾನೂನುಗಳನ್ನು ಗೌರ್ನರ್ ಜನರಲ್ ಸಾಹೇಬರೂ ರಚಿಸುತ್ತಾರೆ. ನಾವು ಅವುಗಳನ್ನು ಅನುಸರಿಸಿ ನಡೆಯಬೇಕಾಗುವುದು.

ಗಂಗಾ—ನಮ್ಮ ಧರ್ಮದ ಪ್ರಕಾರ ಪಿಂಡಪ್ರದಾನಮಾಡಲು ಔರಸಪುತ್ರನಿಲ್ಲದಿದ್ದರೆ ದತ್ತುಸ್ವೀಕಾರಮಾಡಿ ಅವನಿಂದ ಆ ಕಾರ್ಯವನ್ನು ಮಾಡಿಸಬಹುದು. ನೀವುಗಳೇನು ರಾಜರುಗಳನ್ನು ಈ ಹಕ್ಕಿನಿಂದ ವಂಚಿಸಬೇಕೆಂದು ಅಪೇಕ್ಷಿಸುತ್ತೀರಾ?

ಗಾರ್ಡನ್—ಇಲ್ಲ, 'ಮಹಾರಾಜ್, ದೊಡ್ಡ ಸಂಸ್ಥಾನಗಳಿಗೆ ಈ ಅಧಿಕಾರವನ್ನು

ಕೊಡಲಾಗಿದೆ. ಆದರೆ ಕಂಪೆನಿ ಸರ್ಕಾರದ ಆಶ್ರಿತ ಸಂಸ್ಥಾನಗಳಲ್ಲಿ ಗೌರ್ನರ್ ಸಾಹೇಬನ ಅನುಮತಿ ಇಲ್ಲದೆ ದತ್ತು ಸ್ವೀಕಾರ ಮಾಡಲಾಗುವುದಿಲ್ಲ. ಒಂದು ವೇಳೆ ಹಾಗೆ ಸ್ವೀಕರಿಸಿದ್ದರೆ ಪುತ್ರನನ್ನು ರಾಜ್ಯದ ಉತ್ತರಾಧಿಕಾರಿ ಎಂದು ಅಂಗೀಕರಿಸಲಾಗುವುದಿಲ್ಲ. ಅವನು ರಾಜನ ಖಾಸಾ ಸಂಪತ್ತಿಯನ್ನು ಅಗತ್ಯವಾಗಿ ಅನುಭವಿಸಬಹುದು ಮತ್ತು ಪಿಂಡಪ್ರದಾನವನ್ನೂ ಮಾಡಬಹುದು. ಸರ್ಕಾರ್, ತಾವು ನಮ್ಮ ಧರ್ಮಗ್ರಂಥಗಳನ್ನು ಓದುವಿರಾ? ಅವನ್ನು ಹಿಂದೀಭಾಷೆಗೆ ಅನುವಾದಿಸಿ ಛಾಪಿಸಿಯೂ ಆಗಿದೆ.

ಗಂಗಾಧರರಾಯ—ಛಾಪಿಸಿದೆ ಎಂದರೆ?

ಗಾರ್ಡನ್—ಮುದ್ರಣಾಲಯದಲ್ಲಿ ಮುದ್ರಿಸುತ್ತಾರೆ. ಅದಕ್ಕೆ ಪ್ರತ್ಯೇಕಯಂತ್ರಗಳಿವೆ. ವರ್ಣಮಾಲೆಯ ಅಕ್ಷರಗಳನ್ನು ಜೋಡಿಸಲಾಗುವುದು. ನಂತರ ಅವಕ್ಕೆ ಶಾಯಿಯನ್ನು ಬಳಿದು ಕಾಗದದಲ್ಲಿ ಒತ್ತುವುದು. ಈ ರೀತಿ ಸಾವಿರ ಗಟ್ಟಲೆ ಪುಸ್ತಕಗಳು ತಯಾರಾಗುತ್ತವೆ.

ಗಂಗಾ—ಇದು ವಿಲಕ್ಷಣವಾದ ಯಂತ್ರವೇ ಸರಿ. ನಾನಾದರೋ ಪುಸ್ತಕಗಳ ನಕಲನ್ನು ಬರೆಸಿ ಬರೆಸಿ ಎಷ್ಟು ಹಣ ವ್ಯಯ ಮಾಡಿದ್ದೇನೋ ಅರಿಯೆ. ಇಂತಹ ಯಂತ್ರವನ್ನು ನನಗೂ ಒಂದು ಬರಮಾಡಿಕೊಡಿ.

ಗಾರ್ಡನ್ ಸಾಹೇಬನಿಗೆ ದಿಗಿಲಾಯಿತು. ಇಂತಹ ಅಪಾಯಕರ ವಸ್ತುವನ್ನು ಝಾನ್ಸಿಯಲ್ಲಿ ತಂದಿಡುವುದೆ? ಪುಸ್ತಕಗಳು ಮುದ್ರಿತವಾಗುವುವು. ವೃತ್ತಾಂತ ಪತ್ರಿಕೆಗಳನ್ನು ಹೊರಡಿಸಲಾಗುವುದು. ಜನತೆಯು ಎಚ್ಚರಗೊಳ್ಳುವುದು. ಆಂಗ್ಲೇಯರ ಗೌರವವು ಮಣ್ಣಿನ ಪಾಲಾಗುವುದು. ಯಾವ ಭರವಸೆಯ ಮೇಲೆ ಕಂಪೆನಿಯ ಸರ್ಕಾರವು ರಾಜ್ಯವನ್ನು ನಡೆಸುತ್ತಿದ್ದಿತೋ ಅದು ಗಾಳಿಯಲ್ಲಿ ತೂರಿಹೋಗುವುದು. ಗಾರ್ಡನ್ನನು ಹೇಗಾದರೂ ಮಾಡಿ ರಾಜನ ಮನಸ್ಸನ್ನು ಈ ಅಹಿತ ಪ್ರಸಂಗದಿಂದ ಯಾವುದಾದರೂ ಮನೋರಂಜಕ ಪ್ರಸಂಗವೆಡೆಗೆ ಬದಲಿಸಬೇಕೆಂದು ಯೋಚಿಸಿದನು. ಆದರೆ ಅದು ಇನ್ನೂ ಅತ್ಯಂತ ಕಠೋರವಾಯಿತು. ಆದರೂ ಗಾರ್ಡನ್ನನು ಜಾಣ್ಮೆಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದನು, "ಸರ್ಕಾರ್ ಗೌರ್ನರ್ ಜನರಲ್ ಸಾಹೇಬರ ಅಪ್ಪಣೆಯಿಲ್ಲದೆ ಆ ಯಂತ್ರವನ್ನು ಇಟ್ಟುಕೊಳ್ಳಲಾಗದು" ಎಂದು ಹೇಳಿದನು.

ಗಂಗಾಧರರಾಯನಿಗೆ ರೋಷವೂ, ಆಶ್ಚರ್ಯವೂ, ಏಕಕಾಲದಲ್ಲಿ ಉತ್ಪನ್ನವಾಗಿ "ಇದರಲ್ಲಿಯೂ ಗೌರ್ನರ್ ಜನರಲ್ ಸಾಹೇಬನ ಅಪ್ಪಣೆಯೆ? ಬಹುಶಃ ಇನ್ನು ಕೆಲವು ದಿನಗಳಲ್ಲಿ ನೀವು ನಿಮ್ಮ ಆಜ್ಞೆಯಿಲ್ಲವೆ ನೀರನ್ನೂ ಕುಡಿಯಬಾರದೆಂದು ಹೇಳುವಿರೋ ಏನೋ?"

ಗಾರ್ಡನ್ ಸಾಹೇಬನು ನಗಲಾರಂಭಿಸಿದನು. ರಾಜನೂ ನಕ್ಕನು.

ಮಾತನ್ನು ಬದಲಿಸುವ ನೆಪದಿಂದ ಗಾರ್ಡನ್ನನು "ಸರ್ಕಾರ್, ಬಹಳ ಹೊತ್ತಿನಿಂದ ಧೂಮಪಾನವು ದೊರಕಲಿಲ್ಲ. ಏನು ಇಂದು ತಾಂಬೂಲವೂ ದೊರಕುವುದಿಲ್ಲವೆ?" ಎಂದು ಕೇಳಿದನು.

ರಾಜನು ತನ್ನ ಹುಕ್ಕೆಯನ್ನು ಮುಂದಿಟ್ಟನು.

ಆ ಸಮಯದಲ್ಲಿ ಒಬ್ಬ ಪ್ರಹರಿಯು ಒಳಗೆ ಬಂದು ಬಹುಸಂತೋಷದಿಂದ "ಮಹಾರಾಜರಿಗೆ ಜಯವಾಗಲಿ! ಝಾನ್ಸಿ ರಾಜ್ಯಕ್ಕೆ ಜಯವಾಗಲಿ. ಮಹಾರಾಜರಿಗೆ ಮಹಾರಾಣಿಯವರು ಪ್ರಸವ ಗೃಹದಲ್ಲಿರುವುದು ತಿಳಿದಿರಬಹುದು" ಎಂದನು.

ಜಯಘೋಷವನ್ನು ಕೇಳುತ್ತಲೇ ಅರ್ಥಮಾಡಿಕೊಂಡ ರಾಜನು ಮನಸ್ಸಿನ ಸಂತೋಷವನ್ನು ಮನಸ್ಸಿನಲ್ಲಿಯೇ ಅದುಮಿ ಗಂಭೀರತೆಯಿಂದ ಏನು ಸಮಾಚಾರವೆಂದು ಕೇಳಿದನು. ಪ್ರಹರಿಯು ಸಂತೋಷದಿಂದ ಮೆರೆಯುತ್ತಿದ್ದನು. ಅವನು ಹರ್ಷೋನ್ಮತ್ತನಾಗಿ "ಶ್ರೀಮಂತ ಸರ್ಕಾರ್, ಝಾನ್ಸಿಯ ರಾಜ್ಯಕ್ಕೆ ರಾಜಕುಮಾರನು ದೊರಕಿದನು" ಎಂದು ಉತ್ತರವಿತ್ತನು. ಮತ್ತು ನತಮಸ್ತಕನಾಗಿ ತನ್ನ ಉಂಗುಷ್ಟದಿಂದ ನೆಲದ ಮೇಲೆ ವೃತ್ತಾಕಾರವಾಗಿ ಗೆರೆಯನ್ನು ಎಳೆಯಲಾರಂಭಿಸಿದನು.

ರಾಜನು ನಗುತ್ತಾ "ಚಿನ್ನದ ಕಡಗವೂ ಮತ್ತು ಸರಿಗೆಯ ಶಿರಸ್ತ್ರಾಣವೂ ದೊರಕುವುವು. ಹೋಗು, ತೋಪನ್ನು ಹೊಡೆಸಿ ಜಯಘೋಷವನ್ನು ಮಾಡು. ಆದರೆ ದೊಡ್ಡ ತೋಪುಗಳನ್ನು ಹಾರಿಸಬೇಡ. ಅವು ಬಹಳ ಶಬ್ದಮಾಡುವುವು. ಅಲ್ಲದೆ ರಾಜ್ಯದ ಎಲ್ಲಾ ಕಡೆಗೂ ಸುದ್ದಿಯನ್ನು ತಿಳಿಸಲು ಬೇಹುಗಾರರನ್ನು ಕಳುಹಿಸು" ಎಂದನು.

ಗಾರ್ಡನ್ನನು ಅಲ್ಲಿಂದ ಅಪ್ಪಣೆ ಪಡೆದು ಮನೆಗೆ ಹಿಂದಿರುಗಿದನು. ಗೌರ್ನರ್ ಜನರಲ್ ಸಾಹೇಬನಿಗೂ ಈ ವರ್ತಮಾನವು ತಿಳಿಯಿತು. ಆಂಗ್ಲೇಯ ರಾಜ್ಯದಲ್ಲಿ ಝಾನ್ಸಿಯನ್ನು ಸೇರಿಸಿಕೊಳ್ಳುವ ಗಡಿಯು ಮುಂದೆ ಸಾಗಿತು.

## ೨೨

ಗಂಗಾಧರರಾಯನಿಗೆ ಸ್ರ ೧೯೦೮ (1851) ಮಾರ್ಗಶಿರ ಶುದ್ಧ ಏಕಾದಶಿ ದಿನ ಪುತ್ರೋತ್ಸವವಾಯಿತು. ಪ್ರತಿ ಏಕಾದಶಿ ದಿವಸವೂ ಮಂದಿರದಲ್ಲಿ ವಿಶೇಷ ಪೂಜೆ ನಡೆಯುತ್ತಿದ್ದಿತು. ಆದರೆ ಇಂದು ಆಮೋದಪ್ರಮೋದಗಳು ಉನ್ಮತ್ತಸ್ಥಿತಿಯನ್ನೈದಿದ್ದಿತು. ತಮ್ಮ ರಾಣಿಯು ಪುತ್ರನನ್ನು ಪಡೆದಳೆಂಬ ಶುಭ ಸಮಾಚಾರವನ್ನು ಕೇಳಿದ ಝಾನ್ಸಿಯ ನಗರವು ಇಂದ್ರನ ಅಮರಲೋಕವನ್ನು ಹೋಲುತ್ತಿದ್ದಿತು.

ರಾಜನು ವಿಪುಲವಾಗಿ ದ್ರವ್ಯವನ್ನು ವೆಚ್ಚಮಾಡಿ ಖಜಾನೆಯು ಬರಿದಾಗುವ

ಸ್ಥಿತಿಗೆ ತಂದಿಟ್ಟನು. ಬಡವರಿಗೆ ಅಂದಿನ ದಿನ ದೊರೆತ ಪುರಸ್ಕಾರಗಳು ಹಿಂದೆಂದೂ ದೊರೆತಿರಲಿಲ್ಲ.

ದರ್ಬಾರು ಏರ್ಪಾಡಾಯಿತು. ಅನೇಕ ಸಂಗೀತಗಾರರು ಕರೆಸಲ್ಪಟ್ಟಿದ್ದರು. ಎಲ್ಲದಕ್ಕೂ ಮೊದಲು ಮೃಗಲಖಾನನ ಧ್ರುವಪದವು ನಡೆಯಿತು. ಆತನಿಗೆ ಆನೆಯನ್ನು ಬಹುಮಾನವಾಗಿ ಕೊಡಲಾಯಿತು.

ನರ್ತಕಿಯರಲ್ಲಿ ದುರ್ಗಾಬಾಯಿಗೆ ತಕ್ಕ ಪುರಸ್ಕಾರವು ದೊರಕಿತು. ನಾಟಕ ಪ್ರದರ್ಶನವೂ ಆಯಿತು. ಆದರೆ ಅದರಲ್ಲಿ ಮೋತಿಬಾಯಿ ಪಾತ್ರವಹಿಸಿರಲಿಲ್ಲ. ರಾಜನ ಮನಸ್ಸಿಗೆ ಪುನಃ ಅವಳನ್ನು ರಂಗಮಂಟಪದ ಮೇಲೆ ಕರೆಸೋಣವೇ ಎಂಬ ಭಾವವು ತಲೆದೋರಿತು. ಯಾರೂ ಆಕೆಯನ್ನು ಕರೆಸುವ ವಿಚಾರದಲ್ಲಿ ಶಿಪಾರಸ್ಸು ಮಾಡಲೂ ಇಲ್ಲ ಮತ್ತು ರಾಜನು ತನ್ನ ಹಟವನ್ನು ಬಿಟ್ಟುಕೊಡಲು ಸಿದ್ಧನೂ ಇರಲಿಲ್ಲ.

ದರ್ಬಾರಿನಲ್ಲಿ ನೆರೆದಿದ್ದ ಜಹಗೀರುದಾರರಿಗೆಲ್ಲರಿಗೂ ಪುರಸ್ಕಾರಗಳು ದೊರೆತವು. ಅವರಲ್ಲಿ ಕೇವಲ ಒಬ್ಬನ ಇಚ್ಛೆಯನ್ನು ಪೂರ್ತಿಗೊಳಿಸಲಿಲ್ಲ. ಅವನು ರಾಜ ರಘುನಾಥ ರಾಯನ ಪುತ್ರ—ನವಾಬ್ ಅಲೀಬಹದ್ದೂರ್. ಯಾವಾಗ ಆಂಗ್ಲೇಯರು ರಘುನಾಥ ರಾಯನ ನಿರಂಕುಶಪ್ರಭುತ್ವದಕಾಲದಲ್ಲಿ ಝಾನ್ಸಿಯ ಮೇಲ್ವಿಚಾರಣೆಯನ್ನು ತಮ್ಮ ಹತೋಟಿಗೆ ತೆಗೆದುಕೊಂಡರೋ ಆಗ ಆತನ ಜಹಗೀರನ್ನೂ ಮುಟ್ಟುಗೋಲು ಹಾಕಿ ಕೊಂಡರು. ಅಲ್ಲದೆ ಅವನಿಗೆ ೫೦೦ ರೂಪಾಯಿಗಳ ಮಾಸಿಕ ವೇತನವನ್ನು ಕೊಡ ಲಾರಂಭಿಸಿದರು. ಗಂಗಾಧರರಾಯನಿಗೆ ರಾಜ್ಯಾಧಿಕಾರ ದೊರೆತಮೇಲೆ ಈ ವೇತನ ವನ್ನು ಆತನೂ ಮುಂದುವರಿಸಿದನು. ಅಲಿ ಬಹದ್ದೂರನು ಈ ಸಂದರ್ಭದಲ್ಲಿ ಪುನಃ ತನ್ನ ಜಹಗೀರಿಯು ಲಭಿಸಬಹುದೆಂದು ಆಶಿಸುತ್ತಿದ್ದನು. ಒಂದುವೇಳೆ ಜಹಗೀರು ಸಿಗದಿದ್ದರೂ ಕೂಡ ವೇತನವನ್ನಾದರೂ ಹೆಚ್ಚಿಸಬಹುದೆಂದು ಭಾವಿಸಿದ್ದನು. ಜಹ ಗೀರಿಯು ದೊರಕದಿದ್ದುದನ್ನು ಕಂಡು ಅಲಿಬಹದ್ದೂರನು ವೇತನವನ್ನಾದರೂ ಹೆಚ್ಚಿಸ ಬೇಕೆಂದು ಪ್ರಾರ್ಥಿಸಿಕೊಂಡನು. ರಾಜನು ಪೊಲಿಟಿಕಲ್ ಏಜೆಂಟನ ಸಲಹೆ ಪಡೆ ಯುವ ನೆಪ ಹೇಳಿ ಅವನನ್ನು ಸಮಾಧಾನಪಡಿಸಿದನು. ನವಾಬನ ಮನನೊಂದಿತು. ಆದರೆ ಅವನು ಆ ಆಶೆಯನ್ನು ತೊರೆಯಲಿಲ್ಲ. ಅವನಿಗೆ ಅನೇಕ ಆಂಗ್ಲೇಯ ಅಧಿಕಾರಿ ಗಳೊಡನೆ ಪರಿಚಯವಿದ್ದಿತು. ಅವರವರಲ್ಲಿ ಬಂದು ಹೋಗುವ ವಾಡಿಕೆಯೂ ಇದ್ದಿತು. ಆದುದರಿಂದ ಆ ಆಶೆಯನ್ನು ಕೈಬಿಡುವುದಿಲ್ಲವೆಂದು ದೃಢಸಂಕಲ್ಪಮಾಡಿ ಕೊಂಡನು.

ದರ್ಬಾರಿನಲ್ಲಿ ರಾಜನಿಗೆ ತಲೆಪಾಗನ್ನು ಕಟ್ಟುವುದು ಬಹುದಿನಗಳಿಂದ ವಾಡಿಕೆ ಯಲ್ಲಿದ್ದಿತು. ಶ್ಯಾಮುಚೌಧುರಿ ಎಂಬ ವಣಿಕನ ಮನೆತನದವರು ಈ ಸಂದರ್ಭಗಳಲ್ಲಿ

ರುಮಾಲನ್ನು ಕಟ್ಟುತ್ತಿದ್ದರು. ಶ್ಯಾಮಚೌಧುರಿಯು ಒಬ್ಬ ಲಕ್ಷಾಧಿಪತಿ. ಆ ಸಮಯ ದಲ್ಲಿ ೫೨ ಲಕ್ಷಾಧಿಪತಿಗಳಿದ್ದರೆಂದು ಹೇಳುತ್ತಿದ್ದರು. ಈ ೫೨ ಮನೆತನದವರನು "ಭಾವನ್‌ಬಸ್ತಿ" ಗಳೆಂದು ಕರೆಯುತ್ತಿದ್ದರು. ಆ ಶ್ಯಾಮಚೌಧುರಿ ಆ ಪಾಗನು ಕಟ್ಟುವ ತನಗೆ ದೊರಕಬೇಕಾದ ಬಳುವಳಿಗಾಗಿ ಬಹಳ ಆಗ್ರಹಪಡಿಸಿದನು. ಯಾವಾಗ ರಾಜನು ಮುತ್ತಿನ ಹಾರವನ್ನೂ, ಚಿನ್ನದ ಕಡಗವನ್ನೂ ಬಳುವಳಿಯಾಗಿ ಕೊಡುವೆನೆಂದು ವಚನವಿತ್ತನೋ ಆಗ ಅವನಿಗೆ ತಲೆಪಾಗನ್ನು ಕಟ್ಟಿದನು. ಇದ ರಿಂದಾಗಿ ಆಲಿಬಹದ್ದೂರನಿಗೆ ಮತ್ತಷ್ಟು ಹೊಟ್ಟೆಯುರಿಯುವಂತಾಯಿತು.

ಆಲೀಬಹದ್ದೂರನಿಗೆ ಈ ಅಪಮಾನವನ್ನು ತಡೆಯಲಾಗಲಿಲ್ಲ: "ನಾನು ರಾಜ ಕುಮಾರನು; ಝಾನ್ಸಿಯ ರಾಜ್ಯಕ್ಕೆ ರಾಜನಾಗಬೇಕಾಗಿದ್ದವನು. ಹೀಗಿರುವಾಗ ನನ್ನ ಬಳಿ ಒಂದು ಜಹಗೀರಿಯೂ ಇಲ್ಲ. ಚಿಕ್ಕ ಚಿಕ್ಕವರಿಗೆಲ್ಲಾ ಇಷ್ಟು ಆದರದ ಸತ್ಕಾರಗಳು ಆದರೆ ನನ್ನ ವೇತನವನ್ನು ಹೆಚ್ಚಿಸುವುದಕ್ಕೆ ಕೂಡ ಪೊಲಿಟಿಕಲ್ ಏಜೆಂಟನ ಸಲಹೆಯು ಅವಶ್ಯಕವಂತೆ ಆಹಾ!" ಎಂದು ಕರುಬಿದನು.

ನವಾಬನು ಬಹಿರಂಗದಲ್ಲಿ ಪ್ರಸನ್ನತೆಯನ್ನು ತೋರುತ್ತಾ ಅಂತರಂಗದಲ್ಲಿ ಮತ್ಸ ರದಿಂದ ತುಂಬಿ ಮನೆಗೆ ಹಿಂದಿರುಗಿದನು. ಅವನು ರಘುನಾಥರಾಯನ, ಹೊಸ ಬಡಾ ವಣೆಯಲ್ಲಿದ್ದ, ಮಹಲಿನಲ್ಲಿ ವಾಸಿಸುತ್ತಿದ್ದನು. ಮಹಲ್ಲಿನಲ್ಲಿ ಮೂರು ಅಂಕಣಗಳಿದ್ದುವು. ಒಂದು ರಂಗ ಮಹಲ್ಲು, ಇನ್ನೊಂದು ಸೈನಿಕರ ಮತ್ತು ಆನೆಗಳ ನಿವಾಸಸ್ಥಾನ, ಕಡೆ ಯದು ಅಶ್ವ ಮತ್ತು ಗೋವುಗಳಿಗೆ ಮೀಸಲು. ಈ ಮಹಲ್ಲಿನ ಸದರಿನ * ಕಡೆಯ ಬಾಗಿ ಲನ್ನು "ಚಾಂದ್‌ದರವಾಜ" (ಚಂದ್ರನ ಬಾಗಿಲು) ಎಂದು ಕರೆಯಲಾಗುತ್ತಿತ್ತು. ಈ ಬಾಗಿಲಿನ ಮೇಲೆ ನವಾಬನೂ ಮತ್ತು ಆತನ ಮುಸಲ್ಮಾನ ಅಧಿಕಾರಿಗಳೂ ಹತ್ತಿ "ಈದ್ ಚಂದ್ರನನ್ನು" ನೋಡುತ್ತಿದ್ದರು. ಆದುದರಿಂದ ಅದಕ್ಕೆ ಈ ಹೆಸರಿದ್ದಿತು. ಮೊದಲ ನೆಯ ಅಂಗಣದ ಮುಂದೆ ಮತ್ತೊಂದು ವಿಶಾಲವಾದ ಅಂಗಣವಿದ್ದಿತು. ಇದರ ಒಂದು ಪಾರ್ಶ್ವದಲ್ಲಿ ನವಾಬನ ಪ್ರಿಯ ಆನೆ "ಮೋತಿಯನ್ನು" ಕಟ್ಟುತ್ತಿದ್ದರು. ಮತ್ತು ಇನ್ನೊಂದು ಭಾಗದಲ್ಲಿ, ರಾಜಾ ರಘುನಾಥರಾಯನು ಜೀವಿತನಾಗಿದ್ದಾಗ, ಈತನ ತಾಯಿ ಲಚ್ಚೋಬಾಯಿ ವಾಸಿಸಲು ವಾಸಗೃಹವಿದ್ದಿತು. ಈ ಸಮಯದಲ್ಲಿ ನವಾಬ್ ಅಲಿಬಹದ್ದೂರನ ಅಧಿಕಾರದಲ್ಲಿ ಎಲ್ಲವೂ ಮಹಲ್ಲಿಗೆ ಸೇರಿಸಲ್ಪಟ್ಟಿದ್ದಿತು.

ಹೊರಗಣ ವಸತಿ ಗೃಹದಲ್ಲಿ ಆತನ ಅತಿಥಿಗಳು ಅಥವಾ ಆಶ್ರಿತರು ಬಂದು ಇಳಿ ಯುತ್ತಿದ್ದರು. ಆಲಿಬಹದ್ದೂರನು ಈ ಹೆಬ್ಬಾಗಿಲಿನ ಮೂಲಕ ಮಹಲನ್ನು ಪ್ರವೇಶಿಸಿ ಈ ವಸತಿಗೃಹಗಳೆಡೆಗೆ ಹೋದನು. ಮನೆಯು ದೊಡ್ಡದಾಗಿದ್ದಿತು. ಅದರಲ್ಲಿ ಅನೇಕ

* 'ಸದರ್' ಎಂಬುದು ಕಂಟೋನ್ಮೆಂಟಿನ ಅಥವಾ ಛಾವಣಿಯ ಅಂಗಡಿ ಬೀದಿ.

ಕೊಠಡಿಗಳಿದ್ದವು. ಆದರೆ ಕೇವಲ ಎರಡು ಕೊಠಡಿಗಳಲ್ಲಿ ಮಾತ್ರ ದೀಪವು ಉರಿಯುತ್ತಿದ್ದಿತು. ಬಾಕಿ ಕೋಣೆಗಳು ಜನಶೂನ್ಯವಾಗಿ ಕತ್ತಲೆಯಾಗಿದ್ದವು. ಹೊರಗಡೆ ಪ್ರಹರಿಯು ಕಾವಲಿದ್ದನು.

ದೀಪಗಳು ಮಂದವಾಗಿ ಪ್ರಕಾಶಿಸುತ್ತಿದ್ದವು. ಮತ್ತು ಈ ಕೊಠಡಿಗಳು ಒಂದಕ್ಕೊಂದು ದೂರವಾಗಿದ್ದವು.

ಆಲಿಬಹದ್ದೂರನು ಮೊದಲು ಪ್ರವೇಶಿಸಿದ ಕೊಠಡಿಯಲ್ಲಿ ಖುದಾಬಕ್ಷನ ಹೊರತಾಗಿ ಮತ್ತಾರೂ ಇರಲಿಲ್ಲ. ಪರಸ್ಪರ ಅಭಿನಂದನೆಗಳ ನಂತರ ಅವರಲ್ಲಿ ಮಾತುಕಥೆಗಳಿಗಾರಂಭವಾದವು.

ಖುದಾಬಕ್ಷನು ಆಶಾಕಾಂಕ್ಷಿಯಾಗಿ "ಹುಜೂರ್, ನನ್ನ ಅರ್ಜಿಯನ್ನು ಸಲ್ಲಿಸಲಾಯಿತೆ" ಎಂದು ಕೇಳಿದನು.

ಆಲಿಬಹದ್ದೂರನು ಉತ್ತರಕೊಡುತ್ತಾ "ಇಲ್ಲವಪ್ಪಾ, ಸಮಯವಿನ್ನೂ ದೊರಕಲಿಲ್ಲ. ಮಹಾರಾಜನು ಅಬಲ ದರ್ಜೆಗಳಿಗೆ (ಬಲಹೀನಪಕ್ಷಗಳಿಗೆ) ವ್ಯತಿರಿಕ್ತನಾಗಿರುವನು ಎಂಬುದು ಗೊತ್ತೆ ? ಒಂದೆರಡು ದಿನ ಕಳೆದು ಸಂದರ್ಭ ಒದಗಲಿ ಆಗ ಹೇಳುತ್ತೇನೆ" ಎಂದು ಹೇಳಿದನು.

ಖುದಾಬಕ್ಷ—ಆ ಕೋಣೆಯಲ್ಲಿ ಬಡಪಾಯಿ ಮೋತೀಬಾಯಿಯು ಕಾತರಳಾಗಿ ಕುಳಿತಿದ್ದಾಳೆ. ಅವಳ ತಪ್ಪು ಯಾವುದೂ ಇಲ್ಲ. ಅವಳ ಪರವಾಗಿ ಏನಾದರೂ ಹೇಳಬಲ್ಲಿರಾ ?

ಆಲೀಬಹದ್ದೂರ್—ಏನು ಹೇಳುವುದು ? ಅಲ್ಲಿಯಾಧರೋ. ವಣಿಕರೂ ಮತ್ತು ಸಣ್ಣ ಪುಟ್ಟಜನರೂ ತಲೆಯೆತ್ತಿಕೊಂಡಿದ್ದಾರೆ. ನನ್ನ ಕಾರ್ಯವು ಸಫಲವಾಗಲಿಲ್ಲ.

ಖುದಾಬಕ್ಷ—ಆಹಾ !

ಆಲೀ—ಹೌದು, ಜಹಗೀರು ಕೈಬಿಟ್ಟಿತು. ವೇತನವನ್ನು ಹೆಚ್ಚಿಸುವುದಕೂ. ಕೂಡ ಆಂಗ್ಲೇಯ ಏಜೆಂಟಿನ ಸಲಹೆಪಡೆದು ತಿಳಿಸುತ್ತೇನೆ ಎಂದು ಹೇಳಿದರು ನಾವೇ ಏತಕ್ಕೆ ಆಂಗ್ಲೇಯರೊಡನೆ ಈ ವಿಚಾರವಾಗಿ ಮಾತು ಕಥೆ ನಡೆಸಬಾರದು ಎಂದು ಯೋಚಿಸುತ್ತಿದ್ದೇನೆ. ನಿಮ್ಮಮೇಲೆಯೂ ಬಹಳ ಜುಲುಂ ನಡೆದಿದೆ, ನೀವೂ ಬಹಳ ದಿನಗಳಿಂದ ತಲೆಮರೆಸಿಕೊಂಡು ತಿರುಗುತ್ತಿದ್ದೀರಿ. ಯಾವ ಮೋತೀಬಾಯಿಗಾಗಿ ರಾಜನು ನಡೆಮುಡಿಯನ್ನು ಹಾಸುತ್ತಿದ್ದನೋ ಅವಳು ಪಾಪ, ಬೀದಿ ಬೀದಿ ಅಲೆಯುತ್ತಿದ್ದಾಳೆ. ಎಂದಾದರೂ ಒಂದು ದಿನ ನಾನು ಇದನ್ನೂ ಮತ್ತು ರಾಜನ ಇತರ ಅತ್ಯಾಚಾರಗಳನ್ನೂ ಆಂಗ್ಲೇಯರಿಗೆ ಅರಿಕೆಮಾಡಿಕೊಳ್ಳಬೇಕೆಂದಿದ್ದೇನೆ. ನೀವೂ ಆಗ ನನ್ನೊಡನೆ ಬರಬೇಕು.

ಖುದಾ—ನಾನು ಇದುವರೆಗೂ ಯಾವ ಆಂಗ್ಲೇಯನನ್ನೂ ಮಾತನಾಡಿಸಿಲ್ಲ.

ತಮಗೆ ಅವರ ಸ್ನೇಹವಿರುವುದು. ಆದುದರಿಂದ ಹೇಗೆ ಸೂಕ್ತವೆಂದು ತೋರುತ್ತದೋ ಹಾಗೆ ಮಾಡಿ.

ಆಲೀ—ಮೋತೀಬಾಯಿಯಿಂದ ಅರ್ಜಿಹಾಕಿಸುವುದಕ್ಕಾಗುವುದಿಲ್ಲವೆ? ನಿಮ್ಮೊಂದಿಗೆ ಏನಾದರೂ ಹೇಳಿದಳೆ?

ಖುದಾ—ಏನು ಹೇಳಲಿ, ಅವಳು ನನ್ನ ಮುಂದೆ ಅವಕುಂಠನದಿಂದಿರುತ್ತಾಳೆ. ನೀವೇ ಹೇಳಿ ನೋಡಿ.

ಆಲೀ—ನಾಟಕ ಶಾಲೆಯ ನಟಿಯೂ ಘೋಷಾಪದ್ಧತಿಯನ್ನನುಸರಿಸುವಳೆ? ರಂಗಮಂಟಪದಲ್ಲೇನೋ ಅವಕುಂಠನದ ಮಾತೇ ಇಲ್ಲ. ಆದರೆ ಅದರ ಬದಲು ವ್ಯತಿರಿಕ್ತವಾದ ವ್ಯವಹಾರವೇ ಕಾಣಬರುತ್ತದೆ.

ಆಲೀಬಹದ್ದೂರನಿಗೆ ೪೨–೪೩ ವರ್ಷ ವಯಸ್ಸಿದ್ದಿರಬಹುದು. ಆರೋಗ್ಯವಂತನೂ, ಸುಂದರನೂ ಆಗಿದ್ದನು. ಆತನು ಮಾತನ್ನು ಮುಂದುವರೆಸುತ್ತಾ "ರಂಗಮಂಟಪದ ಮೇಲೆ ಆಕೆಯ ನೃತ್ಯ ಗೀತ ಹಾವ ಭಾವಗಳೆಲ್ಲವನ್ನೂ ಅವಕುಂಠನವಿಲ್ಲದೇ ನೋಡಿದ್ದೇನೆ. ಇಲ್ಲೇಕೆ ಪರದೆ? ಅವಳು ಪೀರ್‌ಅಲ್ಲಿಯ ಮುಂದೇನೋ ಪರದೆಯಿಲ್ಲದೆ ಬರುತ್ತಾಳೆ" ಎಂದನು.

ಪೀರಲ್ಲಿಯು ಆಲೀಬಹದ್ದೂರನ ಖಾಸಾನೌಕರ ಮತ್ತು ಸಿಪಾಯಿ. ಏಕಾಂತದಲ್ಲಿ ಮಿತ್ರನಂತೆ ವರ್ತಿಸುತ್ತಿದ್ದನು. ಪೀರ್ ಅಲಿಯನ್ನು ಕರೆಸಲಾಯಿತು. ಆತನ ಮೂಲಕ ಮೋತೀಬಾಯಿಯೊಡನೆ ಸಂಭಾಷಣೆ ಪ್ರಾರಂಭವಾಯಿತು.

ಆಂಗ್ಲೇಯರಿಗೆ ಅರ್ಜಿ ಸಲ್ಲಿಸುವ ವಿಚಾರದಲ್ಲಿ ಮೋತೀಬಾಯಿಯು "ಅರ್ಜಿಯನ್ನು ಕೊಡಲು ನಾನು ಇಷ್ಟಪಡುವುದಿಲ್ಲ. ಯಾವ ಆಂಗ್ಲೇಯನ ಮುಂದೆಯೂ ನಾನು ಬರುವುದಿಲ್ಲ. ನೀವು ದೊಡ್ಡವರು; ನೀವುಗಳಿರುವಾಗ ಯಾವ ಆಂಗ್ಲೇಯನ ಮನೆಗೂ ಕಾಲಿಡಲು ಇಷ್ಟಪಡುವುದಿಲ್ಲ" ಎಂದು ಹೇಳಿ ಕಳುಹಿಸಿದಳು.

ಆಲೀಬಹದ್ದೂರನು "ನಿಮಗೆ ಎಲ್ಲಿಗೂ ಹೋಗಿಬರುವ ಅವಶ್ಯಕತೆಯಿಲ್ಲ. ನಿಮ್ಮ ಅರ್ಜಿಯನ್ನು ನಾನು ಸಲ್ಲಿಸಿ ಬರುತ್ತೇನೆ" ಎಂದು ಉತ್ತರವಿತ್ತನು.

ಮೋತೀಬಾಯಿಯು ಪ್ರತ್ಯುತ್ತರ ಕಳುಹಿಸುತ್ತಾ "ಏನಿದ್ದರೂ ಆಂಗ್ಲೇಯರಲ್ಲಿ ಮೊಖ್ತಾ ಹೇಳಿಬಿಡಿ ಬರೆದ ಅರ್ಜಿಯನ್ನು ಸಲ್ಲಿಸುವುದಿಲ್ಲ" ಎಂದು ತಿಳಿಸಿದಳು.

ಖುದಾಬಕ್ಷನು ಈ ಮಾತನ್ನು ಸಮರ್ಥಿಸುತ್ತಾ "ಬರವಣಿಗೆಯಲ್ಲಿ ಏನನ್ನೂ ಕೊಡಬಾರದು. ಒಂದುವೇಳೆ ಏನಾದರೂ ಅರ್ಜಿಯನ್ನು ಒಳಗೆ ತೀರ್ಮಾನಕ್ಕಾಗಿ ಕಳುಹಿಸಿದರೆ ಆಗ ನಾವೆಲ್ಲರೂ ವಿಪತ್ತಿಗೆ ಒಳಗಾಗುವೆವು" ಎಂದು ಹೇಳಿದನು.

ಆಲೀಬಹದ್ದೂರನು ಮತ್ತೊಬ್ಬರ ಮೂಲಕ ಕಿಚ್ಚನ್ನು ಹತ್ತಿಸಲು ಸಂಕಲ್ಪಿಸಿದ್ದನು. ಆದುದರಿಂದ ಅವನು ಖುದಾಬಕ್ಷನಿಗೆ ವಿವರಿಸುತ್ತಾ "ನಿಮಗೆ ಈಗ ಆಗಿರು

ವುದಕ್ಕಿಂತ ಹೆಚ್ಚಿನ ನಷ್ಟವು ಆಗಲಾರದು. ಯಾವ ಅಪರಾಧವೂ ಇಲ್ಲದೇ ದೇಶಭ್ರಷ್ಟರಾಗಿ ಮಾಡಲ್ಪಟ್ಟಿರಿ. ಮನೆಯು ದೂರವಾಯಿತು. ಜಹಗೀರಿಯು ಕೈತಪ್ಪಿತು. ಪರದೇಶದಲ್ಲಿ ತಿರಿದು ಉಣ್ಣುತ್ತಿದ್ದೀರಿ. ನನ್ನ ಅಭಿಪ್ರಾಯದಲ್ಲಿ ನೀವು ಲಿಖಿತ ಅರ್ಜಿಯನ್ನು ಕೊಡುವುದು ಅವಶ್ಯಕ. ನಾನು ಆಂಗ್ಲೇಯ ಏಜೆಂಟ್ ಸಾಹೇಬರಿಗೆ ಶಿಫಾರಸ್ಸು ಮಾಡುತ್ತೇನೆ. ಅವರು ರಾಜನ ಬಳಿಗೆ ಅರ್ಜಿಯನ್ನು ಕಳುಹಿಸದೇ ನೇರವಾಗಿ ಗೌರ್ನರ್ ಜನರಲ್ ಸಾಹೇಬರಿಗೆ ಅದನ್ನು ಕಳುಹಿಸುವರು. ಕಂಪೆನಿ ಸರ್ಕಾರದವರು ಸಂಸ್ಥಾನಾಧೀಶ್ವರರ ಹುಳುಕುಗಳನ್ನೇ ಕಂಡುಹಿಡಿಯುವುದರಲ್ಲಿ ಹಗಲಿರುಳೂ ತಲ್ಲೀನರಾಗಿರುತ್ತಾರೆ" ಎಂದು ಹೇಳಿದನು.

ಖುದಾಬಕ್ಷನು ಯೋಚಿಸಿ "ಮತ್ತೆ ಯಾವಾಗಲಾದರೂ ಅರ್ಜಿಯನ್ನು ದಾಖಲ್ಮಾಡುವ. ನೀವು ನನ್ನ ಹಿತಚಿಂತಕರಾಗಿದ್ದೀರಿ. ನೀವೊಬ್ಬರೇ ನನ್ನ ಆಧಾರ. ತಮಗೆ ಅತ್ಯಂತ ಕೃತಜ್ಞನಾಗಿರುತ್ತೇನೆ" ಎಂದು ಹೇಳಿದನು.

ಆಲಿಬಹದ್ದೂರನು ಅವಸರಿಸಬಾರದೆಂದು ಯೋಚಿಸಿದನು. ಪೀರಾಲಿಯು ಸಂಕೇತ ಪೂರ್ವಕವಾಗಿ ಸಮ್ಮತಿ ಸೂಚಿಸಿದನು. ಖುದಾಬಕ್ಷನ ಊಟವಸತಿಗಳ ವ್ಯವಸ್ಥೆ ಮಾಡಿ ಆಲಿಬಹದ್ದೂರನು ಹೊರಟುಹೋದನು.

ಮೋತೀಬಾಯಿಯು ಅವಳ ಮನೆಗೆ ಹೊರಟುಹೋದಳು. ಹೊರಡುವ ಮುನ್ನ ಆಕೆಯು ಖುದಾಬಕ್ಷನ ಮುಖವನ್ನು ನೋಡಿದಳು. ಖುದಾಬಕ್ಷನಿಗೆ ಬಿಸುನಿಯು ನಕ್ಕಂತೆ ಮನನವಾಯಿತು.

## ೨೩

ರಾಣಿ ಲಕ್ಷ್ಮೀಬಾಯಿಯ ಮಗುವಿಗೆ ಸುಮಾರು ಎರಡು ತಿಂಗಳುಗಳಾದವು. ಆದರೆ ಅವಳು ಕಿಲ್ಲೆಯ ಉದ್ಯಾನವನದಲ್ಲಿ ಸಂಚರಿಸುವುದರ ಹೊರತಾಗಿ ಮತ್ತಾವ ವ್ಯಾಯಾಮಗಳನ್ನು ಮಾಡುವುದಕ್ಕೂ ಶಕ್ತಳಿರಲಿಲ್ಲ. ಇನ್ನೂ ಪೂರ್ಣಾರೋಗ್ಯವನ್ನು ಹೊಂದಿರಲಿಲ್ಲ. ಅವಳ ಮನಸ್ಸು ಸುಖಪೂರಿತವಾಗಿದ್ದಿತು. ಮುಕ್ಕಾಲು ವೇಳೆಯನ್ನೆಲ್ಲಾ ಮಗುವಿನೊಂದಿಗೆ ಕಳೆಯುತ್ತಿದ್ದಳು. ರಾಜನೂ ಕೂಡ ಹೆಚ್ಚುಕಾಲ ಆ ಶಿಶುವಿನ ಬಳಿಯೇ ಪ್ರೇಮ ಪ್ರದರ್ಶನ ಮಾಡುತ್ತಾ ಕಳೆಯುತ್ತಿದ್ದನು. ರಾಜನ ಪ್ರಕೃತಿಯಲ್ಲಿ ಅದ್ಭುತ ಬದಲಾವಣೆಯಾಗಿದ್ದಿತು. ದಂಡನೆಗಳ ಕಠೋರತೆಯನ್ನು ಸ್ವಲ್ಪ ಕಡಿಮೆ ಮಾಡಿದ್ದನು. ಜನರು ಅವನನ್ನು ಪ್ರಜಾವತ್ಸಲನೆಂದು ಕರೆಯಲಾರಂಭಿಸಿದರು.

ಅದೇ ಕಾಲದಲ್ಲಿ ತಾತ್ಯಾಟೋಪಿಯು ಝಾನ್ಸಿಗೆ ಬಂದನು. ರಾಜನ ಒಬ್ಬ ಸೈನ್ಯಾಧಿಕಾರಿ ಕರ್ನಲ್ ಜಮಾಖಾನನೆಂಬುವನ ಮನೆಯಲ್ಲಿಳಿದುಕೊಂಡನು. ಆ

ಮನೆಯ ಹತ್ತಿರವೇ ಜ್ಯೂಹಿಯು ವಾಸಿಸುತ್ತಿದ್ದಳು.

ತಾತ್ಯಾಟೋಪಿಗೆ ರಾಣಿಯೊಂದಿಗೆ ಏಕಾಂತದಲ್ಲಿ ಸಂಭಾಷಿಸುವ ಅವಕಾಶವು ದೊರಕಿತು. ಆತನು ರಾಣಿಯನ್ನು ಕುರಿತು "ನಮ್ಮ ತಾತಂದಿರು ಕಾಲಗತಿಯನ್ನೈದಿದ ವರ್ತಮಾನವೇನೋ ತಿಳಿದಿದ್ದಿತು. ಆದರೆ ಅವರ ವಾರ್ಷಿಕವೇತನಕ್ಕೆ ಮುಟ್ಟುಗೋಲು ಹಾಕಿದ ಸುದ್ದಿಯನ್ನು ಯಾರೂ ತಿಳಿಸಲೆ ಇಲ್ಲ. ಆಶ್ಚರ್ಯವೇ ಸರಿ!" ಎಂದನು.

ರಾಣಿ ಲಕ್ಷ್ಮೀಬಾಯಿಯು ದುಃಖದಿಂದ "ನಾನು ಅಸ್ವಸ್ಥಳಾಗಿದ್ದೆ. ಆದುದರಿಂದ ಈ ಸಮಾಚಾರವು ನನ್ನವರೆಗೂ ತಲಪಲು ಬಿಡಲಿಲ್ಲ. ಆಂಗ್ಲೇಯರು ಬಹಳ ವಂಚನೆಮಾಡಿದರು" ಎಂದು ಹೇಳಿದಳು.

ತಾತ್ಯಾ—ಇದೇನು ಅವರ ಮೊದಲನೆ ಮೋಸವಲ್ಲ ಮತ್ತು ಕಡೆಯದೂ ಅಲ್ಲ. ಅವರ ನೀತಿಯು ದೇಶವನ್ನೇ ಕಬಳಿಸುತ್ತಿದೆ. ಗಾಯಕವಾಡ್, ಹೋಲ್ಕರ್, ಸಿಂಧ್ಯ ಮತ್ತು ಔಧಿನ ನವಾಬರೂ ಅಫೀಮು ತಿಂದು ಕುಳಿತಿದ್ದಾರೆ.

ರಾಣಿ—ವೇತನದ ಮುಟ್ಟುಗೋಲು ಹಾಕದಂತೆ ಏನಾದರೂ ಉಪಾಯ ಮಾಡಿದಿರಾ ?

ತಾತ್ಯಾ—ಅರ್ಜಿಯನ್ನು ಸಲ್ಲಿಸಲಾಯಿತು. ಮುಖಂಡರು ಅದಕ್ಕೆ ಗಮನ ಕೊಡಲಿಲ್ಲ. ವಿಲಾಯಿತಿಗೂ ಒಬ್ಬ ಓದುಬರೆಹ ಬಲ್ಲ ಬುದ್ಧಿವಂತನಾದ ಮನುಷ್ಯನನ್ನು ಕಳುಹಿಸಿದೆವು. ಆದರೆ ಯಾರೂ ಕಿವಿಗೊಡಲಿಲ್ಲ.

ರಾಣಿ—ಮತ್ತೇನು ಯೋಚಿಸಿದ್ದೀರಿ ?

ತಾತ್ಯಾ—ಮತ್ತೇನೂ ಇಲ್ಲ. ನಾನಾ ಸಾಹೇಬ್ ಮತ್ತು ರಾವ್‌ಸಾಹೇಬರು ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದ್ದಾರೆ. ಅವರಿಗೆ ನಿಮ್ಮ ವಿವೇಕ ದಕ್ಷತೆಗಳಲ್ಲಿ ಭರವಸೆಯಿದೆ.

ರಾಣಿ—ಲಕ್ನೋವಿನ ನವಾಬರ ಬಳಿಗೆ ಹೋಗಿದ್ದಿರಾ ?

ತಾತ್ಯಾ—ಹೋಗಿದ್ದೆ. ಆದರೆ ನವಾಬರ ಸುತ್ತಲೂ ಗಾಯಕರ, ನರ್ತಕಿಯರ ಮತ್ತು ವಿದೂಷಕರ ಪಹರೆ ಯಾವಾಗಲೂ ಇರುತ್ತದೆ. ಅವರು ಮುಂದಿನ ವರ್ಷ ನನಗೆ ಭೇಟಿಯಾಗುವುಕ್ಕೆ ಅವಕಾಶ ಸಿಗುತ್ತದೆಯೆಂದು ಹೇಳಿಕಳುಹಿಸಿದರು.

ರಾಣಿಯು ಅದನ್ನು ಕೇಳಿ ನಗಲಾರಂಭಿಸಿದಳು. ಅವಳ ನಗುವು ಸಂಧ್ಯಾಕಾಲದ ರಕ್ತವರ್ಣದ ಮೋಡದಲ್ಲಿ ಮಿಂಚು ಮಿನುಗಿದಂತೆ ಇದ್ದಿತು. ರಾಣಿಯು ಇನ್ನೂ ತನ್ನ ಸ್ವಾಭಾವಿಕವಾದ ಅರುಣತೆಯನ್ನು ಹೊಂದಿರಲಿಲ್ಲ.

ತಾತ್ಯಾನು ಹೇಳಿದನು. "ನಾನು ನವಾಬರ ಪ್ರಧಾನ ಮಂತ್ರಿಯನ್ನು ಭೇಟಿ ಮಾಡಿದ್ದೆ. ಆತನು ಹಿಂದೂ. ಆದರೆ ಪಾಪ ಅವನೇನು ಮಾಡಲಾದೀತು? ತನ್ನ

ಅಸಮರ್ಥತೆಯನ್ನು ವ್ಯಕ್ತಪಡಿಸಿದನು. ನಂತರ ಅನೇಕ ದೊಡ್ಡ ದೊಡ್ಡ ಜಮೀನುದಾರರನ್ನು ಕಂಡೆ. ಅವರುಗಳು "ಏನಾದರೂ ಪುರುಷಾರ್ಥವನ್ನು ಸಾಧಿಸು ನಾವು ನಿನಗೆ ಸಹಾಯಮಾಡುತ್ತೇವೆ" ಎಂದರು.

ರಾಣಿಯು ಯೋಚನಾಮಗ್ನಳಾದಳು.

ತಾತ್ಯಾನು ಪುನಃ "ನೀವು ಬಿಟ್ಟೂರಿನಲ್ಲಿದ್ದಾಗ ಛತ್ರಪತಿ ಶಿವಾಜಿ ಮತ್ತು ಬಾಜೀರಾವ್ ಮತ್ತು ಛತ್ರಸಾಲ್ ಎಂದು ಇನ್ನೂ ಯಾರ ಯಾರ ಹೆಸರನ್ನು ಹೇಳುತ್ತಿದ್ದಿರಿ."

ರಾಣಿಯು "ಈ ಹೆಸರುಗಳನ್ನು ನಾನು ಯಾವಾಗಲೂ ಮರೆಯುವುದಿಲ್ಲ. ಛತ್ರಸಾಲರ ಹೆಸರು ಇಲ್ಲಿನ ಜನಗಳಲ್ಲಿ ಇಂದಿಗೂ ಮಂತ್ರದಂತೆ ಕೆಲಸಮಾಡುವುದು."

ತಾತಾ—ಈ ಮಂತ್ರಗಳೆಲ್ಲಾ ಯಾವಾಗ ಕೆಲಸಕ್ಕೆ ಬರುವುವು?

ರಾಣಿಯು ನಸುನಕ್ಕಳು. ತಾತ್ಯಾಟೋಪೆಗೆ ಆ ಮುಗುಳ್ನಗೆಯು ಚಿರಪರಿಚಿತವಾಗಿದ್ದಿತು. ಆತನ ಮನಸ್ಸಿನಲ್ಲಿ ಚಿಕ್ಕವಯಸ್ಸಿನ ಮನುವಿನ ಪುಟ್ಟ ಪುಟ್ಟ ನಿರ್ಣಯಗಳು ದೃಢವಾಗಿ ಅಚ್ಚೊತ್ತಿದಂತಿದ್ದವು. ತಾತ್ಯಾನು ಕಿವಿಗೊಟ್ಟು ಕೇಳಲಾರಂಭಿಸಿದನು.

ರಾಣಿಯು "ಟೋಪೆ, ಇನ್ನೂ ಸಮಯವು ಬಂದಿಲ್ಲ. ಕೊಡವು ಇನ್ನೂ ಪೂರ್ತಿಯಾಗಿ ತುಂಬಿಲ್ಲ. ನಮ್ಮ ನಮ್ಮಲ್ಲಿಯ ಮನಸ್ತಾಪಗಳು ಜನರನ್ನು ತಟಸ್ಥರನ್ನಾಗಿ ಮಾಡಿವೆ. ಅವರಿಗೆ ಸ್ವಲ್ಪ ಉಸಿರಾಡಿ ತಲೆಯೆತ್ತುವ ಯೋಗ್ಯತೆ ಬರಲಿ. ಸಮರ್ಥರಾಮದಾಸರು ಕೊಟ್ಟಿರುವ ಸ್ವರಾಜ್ಯ ಸಂದೇಶ ಮತ್ತು ಅದನ್ನು ಪಾಲಿಸಿಕೊಂಡು ಬಂದಿರುವ ಶಿವಾಜಿಯ ಆದರ್ಶವೂ, ಛತ್ರಸಾಲನ ಆದರ ಸ್ಮರಣೆಯೂ, ಅಮರವೂ, ಅಕ್ಷಯವೂ ಆಗಿದೆ" ಎಂದಳು.

ತಾತ್ಯಾನು ಅಧೀರತೆಯಿಂದ "ಮಹಾರಾಣಿ, ಈ ಮಾತುಗಳು ಹೃದಯಕ್ಕೂ ಕಿವಿಗೂ ಆಪ್ಯಾಯಮಾನವಾಗಿವೆ. ಆದರೆ ಹಿಂದೂ ಮುಸಲ್ಮಾನರು ಚೈತನ್ಯ ಹೀನರಂತೆ ತೋರುತ್ತಿದ್ದಾರೆ." ಎಂದನು.

ರಾಣಿಯು ಎತ್ತಿದ ದೃಢಸ್ವರದಿಂದ ಹೇಳಿದಳು. "ತಾತ್ಯಾಭಾಯಿ, ಜನತೆಯು ಎಂದಿಗೂ ಅಚೇತನವಾಗುವುದಿಲ್ಲ. ಆದರೆ ನಾಯಕನು ಚೈತನ್ಯ ಹೀನನಾಗಿ ಭ್ರಮೆಯಿಂದ ಕೂಡಿರುತ್ತಾನೆ."

ತಾತ್ಯಾ—ಹಾಗಾದರೆ ನಾನಾಸಾಹೇಬರಿಗೆ ಏನೆಂದು ವಿಜ್ಞಾಪಿಸಿ ಕೊಳ್ಳಲಿ?

ರಾಣಿ—ಇಲ್ಲಿನ ವಿಚಾರಗಳಿಗೆ ಕಿವಿಕಣ್ಣುಗಳನ್ನು ತೆರೆದು ಸಮಯ ಪ್ರತೀಕ್ಷೆ ಮಾಡಿ. ನನಗೆ ಪೂರ್ಣಾರೋಗ್ಯವು ದೊರಕಿದನಂತರವೇ ಸಮಯ ಸಿಗುವುದು. ಆರೋಗ್ಯವಂತಳಾಗುತ್ತಲೇ ನನ್ನ ಆದರ್ಶ ಪಾಲನೆಯಲ್ಲಿ ತಲ್ಲೀನಳಾಗುವೆನು. ನಮ್ಮ ಆದರ್ಶವನ್ನೆಂದಿಗೂ ಮರೆಯಬಾರದು. ಇದು ಪ್ರಯತ್ನದ ಮೊದಲ ಅಸ್ತಿಭಾರದ

ಕಲ್ಲು." ತಾತ್ಯಾನು ಹೊರಡಲನುವಾದನು.

ರಾಣಿಯು ಡಿಲ್ಲಿಯ ಸಮಾಚಾರವೇನೆಂದು ಕೇಳಿದಳು.

ತಾತ್ಯಾನು "ಬಾದಷಹನದೇ? ಆ ನತದೃಷ್ಟನಿಗೆ ವರ್ಷಕ್ಕೆ ತೊಂಭತ್ತು ಸಾವಿರ ರೂಪಾಯಿಗಳ ವರ್ಷಾಶನವು ದೊರಕುತ್ತಿದೆ. ಕವಿತೆಗಳನ್ನು ರಚಿಸಿ, ಕವಿಸಮ್ಮೇಳನಗಳನ್ನು ಏರ್ಪಡಿಸುವುದರಲ್ಲಿ ನಿರತನಾಗಿರುತ್ತಾನೆ. ಕಂಪೆನಿ ಸರ್ಕಾರವು ಅವನು ನಜರು ಸ್ವೀಕಾರಮಾಡುವುದನ್ನು ನಿಲ್ಲಿಸಿದ್ದಾರೆ ಮತ್ತು ಬಾದಷಹನೆಂಬ ಬಿರುದನ್ನು ತೊರೆಯದಿದ್ದರೆ ವೇತನವನ್ನು ನಿಲ್ಲಿಸಲಾಗುವುದೆಂದು ಕಂಪೆನಿಯ ಸರ್ಕಾರವು ಎಚ್ಚರಿಕೆ ಕೊಟ್ಟಿದೆ" ಎಂದನು.

ರಾಣಿಯು "ಈ ಮುಸಲ್ಮಾನ ನವಾಬ ಮತ್ತು ಪ್ರಜೆಗಳು ಈ ಗೊಡ್ಡು ಬೆದರಿಕೆಗೆ ಮಾರುಹೋಗುತ್ತಾರೆಯೆ ?" ಎಂದು ಕೇಳಿದಳು.

ತಾತ್ಯಾನು "ಹೇಳಲಾಗುವುದಿಲ್ಲ" ಎಂದನು. ಸ್ವಲ್ಪ ಕಾಲಾನಂತರ ಆತನು ಅಲ್ಲಿಂದ ಹೊರಟುಹೋದನು.

ತಾತ್ಯಾನು ಝಾನ್ಸಿಯಲ್ಲಿ ಇನ್ನೂ ಕೆಲವು ಕಾಲವಿರಬೇಕೆಂದು ಆಶಿಸಿದ್ದನು. ಆದರೆ ಜಾಗ್ರತೆಯಾಗಿ ಬಿಟ್ಟೂರಿಗೆ ಹೋಗಬೇಕಾಗಿದ್ದಿತು. ಅಲ್ಲದೇ ಗಂಗಾಧರರಾಯನ ನಾಟಕಶಾಲೆಯು ಮುಚ್ಚಿದ್ದಿತು. ಆದರೆ ನಟನಟಿಯರ ವೇತನವೇನೋ ಸಂದಾಯವಾಗುತ್ತಿತ್ತು.

## ೨೪

ಗಂಗಾಧರರಾಯನ ಶಿಶುವು ಮೂರು ತಿಂಗಳನಂತರ ಮರಣ ಹೊಂದಿತು. ಇದರಿಂದ ಎಲ್ಲರಿಗೂ ದುಃಖವಾಯಿತು. ಈ ದುರ್ಘಟನೆಯ ಪರಿಣಾಮವಾಗಿ ರಾಜನ ತನುಮನಗಳಲ್ಲಿ ಘೋರವಾದ ವ್ಯತ್ಯಾಸವುಂಟಾಯಿತು. ಆತನು ಸಾಧಾರಣವಾಗಿ ಅಸ್ವಸ್ಥನಾಗಿಯೇ ಇರುತ್ತಿದ್ದನು.

ಸುಮಾರು ಎರಡು ವರ್ಷಗಳಕಾಲ ರಾಜನೂ ಮತ್ತು ರಾಣಿಯೂ ಅತ್ಯಂತ ಕಷ್ಟದಲ್ಲಿ ತೊಳಲಿದರು.

ರಾಜನ ಸಿಟ್ಟು ಮತ್ತಷ್ಟು ಹೆಚ್ಚಿತು. ಅವನು ಸಂಕೇತದಿಂದಲೇ ಎಲ್ಲಾ ಕೆಲಸಗಳನ್ನೂ ಮಾಡಲುಪಕ್ರಮಿಸಿದನು.

ಒಂದು ದಿನ ಅವನಿಗೆ ಖುದಾಬಕ್ಷನು ಆಡಿಗಡಿಗೆ ನವಾಬ್ ಆಲಿಬಹದ್ದೂರನ ಬಳಿಗೆ ಬರುತ್ತಾನೆಂದು ಸಮಾಚಾರವು ತಿಳಿಯಿತು. ಈ ಸಣ್ಣ ಅಪರಾಧಕ್ಕಾಗಿ ನವಾಬನ ಮನೆಯನ್ನು ವಶಪಡಿಸಿಕೊಂಡನು. ಹೊರಗಡೆಯ ವಸತಿಗೃಹಗಳನ್ನು ಮಾತ್ರ

ಅವನ ವಾಸಕ್ಕೆ ಬಿಟ್ಟು ಕೊಟ್ಟನು.

ಸರ್ ೧೮೫೭ ನೇ ಶರನ್ನವರಾತ್ರಿಯ ಮಹೋತ್ಸವವು ನಡೆಯಿತು. ಅಂದು ರಾಜನು ಬಹುಮಟ್ಟಿಗೆ ಆರೋಗ್ಯದಿಂದಿರುವಂತೆ ಕಾಣಿಸುತ್ತಿದ್ದನು. ಆದರೆ ಸ್ವಲ್ಪ ನಿಶ್ಶಕ್ತಿ ಇದ್ದಿತು. ರಾಜವೈದ್ಯ ಪ್ರತಾಪಶಹಮಿಶ್ರನು ಉಪಚರಿಸುತ್ತಿದ್ದನು. ರಾಜನಿಗೆ ಆವನ ಮೇಲೆ ವಿಶ್ವಾಸವಿದ್ದಿತು. ವೈದ್ಯನು ಉದ್ಧಟ ಪ್ರಕೃತಿಯವನಾಗಿದ್ದನು. ಆದರೆ ರಾಜನು ಅದನ್ನು ಸಹಿಸಿಕೊಳ್ಳುತ್ತಿದ್ದನು.

ನವರಾತ್ರಿಯ ಕಿಕ್ಕಿರಿದ ದರ್ಬಾರಿನಲ್ಲಿ ವೈದ್ಯನು ತನ್ನ ನೆರೆಯವನ ಮೇಲೆ ದೂರು ಹೇಳಿಕೊಂಡನು. "ಸರ್ಕಾರ್, ನಾನು ಒಂದು ಮಹಲ್ಲನ್ನು ಕಟ್ಟಲು ಅಪೇಕ್ಷಿಸಿದ್ದೇನೆ. ನನ್ನ ಮನೆಯಲ್ಲಿ ಸ್ಥಳ ಸಂಕೋಚದಿಂದ ನೆರೆಮನೆಯವನಿಗೆ ದುಬಾರಿಯಾದ ಬೆಲೆಕೊಡಲು ಸಿದ್ಧನಿದ್ದೇನೆ. ಆದರೆ ಆ ನೀಚನು ಒಡಂಬಡಿಕೆಗೂ ಬರಲೊಲ್ಲ. ಮನೆಯನ್ನು ಬಿಟ್ಟುಕೊಡುತ್ತಿಲ್ಲ. ನನ್ನ ಮನೆಯನ್ನು ಪೂರ್ತಿ ಮಾಡಲು ಅಡ್ಡಿಯಾಗುತ್ತಿದೆ. ಆತನ ಮನೆಯನ್ನು ಹೇಗಾದರೂ ಮಾಡಿ ನನಗೆ ಕೊಡಿಸಬೇಕು" ಎಂದು ಪ್ರಾರ್ಥಿಸಿದನು.

ರಾಜನು ಈ ಪ್ರಾರ್ಥನೆಯನ್ನು ನಿರಾಕರಿಸಿದನು.

ವೈದ್ಯನು ಹಠದಿಂದ "ಹಾಗಿದ್ದ ಪಕ್ಷದಲ್ಲಿ ಕೋಟೆಯಾಚೆ ಮತ್ತೊಂದು ಚಿಕ್ಕ ಝೂನ್ಸಿಯನ್ನು ರಚಿಸುತ್ತೇನೆ. ಇದಕ್ಕೆ ಮಹಾರಾಜರ ಅನುಮತಿ ಮಾತ್ರಬೇಕು; ಇಲ್ಲ, ನಗರದಲ್ಲಿ ಮಹಲ್ಲನ್ನು ಕಟ್ಟಿ ಅದರಲ್ಲಿ ವಾಸಿಸುವೆನು. ಇಲ್ಲದಿದ್ದರೆ ಕೋಟೆಯಾಚೆ ಒಂದು ವಸತಿಯನ್ನೇರ್ಪಡಿಸಿಕೊಳ್ಳುವೆನು. ಮತ್ತು ಅದರ ಸುತ್ತಲೂ ಬಲವಾದ ಕೋಟೆಯ ಗೋಡೆಯನ್ನೆಬ್ಬಿಸುವೆನು" ಎಂದನು.

ಮೂರು ವರ್ಷಗಳ ಹಿಂದಿನ ಗಂಗಾಧರರಾಯನಾಗಿದ್ದರೆ ವೈದ್ಯನ ಈ ಅಧಿಕ ಪ್ರಸಂಗಕ್ಕಾಗಿ ಅವನ ಚರ್ಮವನ್ನು ಸುಲಿಸುತ್ತಿದ್ದನು. ಆದರೆ ರಾಜನ ಪ್ರವೃತ್ತಿಯು ಬದಲಾವಣೆ ಹೊಂದಿ ಅವನ ಕೋಪವು ಬಹಳ ಮಟ್ಟಿಗೆ ಇಳಿದುಹೋಗಿದ್ದಿತು.

ರಾಜನು ವೈದ್ಯನಿಗೆ ಅನುಮತಿಯನ್ನು ಕೊಟ್ಟುಬಿಟ್ಟನು. ವೈದ್ಯನು ರಾಜನ ಉಪಚಾರವನ್ನು ತ್ಯಜಿಸಿ ಹೊಸ ನಗರ ನಿರ್ಮಾಣದಲ್ಲಿಯೂ ಮತ್ತು ಅದಕ್ಕೆ ಕೋಟೆ ಕಟ್ಟಿಸುವ ಮೂರ್ಖತನದಲ್ಲಿಯೂ ಸ್ಥಿರವಾಗಿ ಮನಸ್ಸಿಟ್ಟನು. ಹೊಸ ನಗರವನ್ನು ವೈದ್ಯನು ನಿರ್ಮಿಸಲಾಗಲಿಲ್ಲ. ಆದರೆ ಆತನು ಕೋಟೆಯನ್ನು ಮಾತ್ರ ನಿರ್ಮಿಸಿದನು. ಈಗಲೂ ಅದು ಪ್ರತಾಪಶಹ ಮಿಶ್ರನ ಹಠದ ಸ್ಮಾರಕವಾಗಿ ಬೃಹದಾಕಾರವಾಗಿ "ಬಡೆಗಾಂವ್" ದ್ವಾರದ ಹೊರಗಡೆ ನಿಂತಿದೆ.

ವಿಜಯ ದಶಮಿಯಾದನಂತರ ಗಂಗಾಧರರಾಯನಿಗೆ ಸಂಗ್ರಹಣೀ ರೋಗವು ಪ್ರಾಪ್ತವಾಯಿತು. ಅನೇಕ ವೈದ್ಯೋಪಚಾರಗಳು ನಡೆದು ಏನೂ ಪ್ರಯೋಜನವಾಗ

ಲಿಲ್ಲ. ರೋಗವು ಉಲ್ಬಣಿಸುತ್ತಲೇ ಹೋಯಿತು.

ಆ ಸಮಯದಲ್ಲಿ ಅಸಿಸ್ಟೆಂಟ್ ಪೊಲಿಟಿಕಲ್ ಏಜೆಂಟನಾಗಿ ಮೇಜರ್ ಮಾಲ್ಕಮ್ ಎಂಬುವನಿದ್ದನು. ಆತನಿಗೆ ರಾಜನ ಅಸ್ವಸ್ಥತೆಯ ಸಮಾಚಾರವು ತಿಳಿಯಿತು. ಆತನು ಆಂಗ್ಲೇಯ ವೈದ್ಯಕೀಯ ಉಪಚಾರವನ್ನು ಸಲಹೆ ಮಾಡಿದನು. ಆದರೆ ವೈದ್ಯರೂ, ಹಕೀಮರೂ ತಮ್ಮ ಪ್ರಯತ್ನಗಳು ಆಶಾರಹಿತವಲ್ಲವೆಂದು ಭಾವಿಸಿದರು. ಆದುದರಿಂದ ಈ ಸಲಹೆಗೆ ಗಮನ ಕೊಡುವ ಅವಕಾಶವೇ ಬರಲಿಲ್ಲ.

ಲಕ್ಷ್ಮೀದ್ವಾರದಾಚೆ ಇರುವ ಮಹಾಲಕ್ಷ್ಮಿ ಮಂದಿರದಲ್ಲಿ ವಿಶೇಷ ಪೂಜೆ ಪುರಸ್ಕಾರ ಗಳು ಏರ್ಪಟ್ಟವು. ನಗರದ ಎಲ್ಲಾ ದೇವಸ್ಥಾನಗಳಲ್ಲಿಯೂ ರಾಜನ ರೋಗ ನಿವಾ ರಣಾರ್ಥವಾಗಿ ಪೂಜೆ ಮತ್ತು ಅರ್ಚನೆಗಳು ನಡೆದವು. ಮನೆ ಮನೆಯಲ್ಲಿಯೂ ಜನ ಗಳು ಆತನ ಆರೋಗ್ಯಕ್ಕಾಗಿ ಪ್ರಾರ್ಥಿಸಿದರು.

ನವಂಬರ್ ತಿಂಗಳ ಮೂರನೆಯವಾರದ ವೇಳೆಗೆ ರಾಜನ ಪರಿಸ್ಥಿತಿಯು ಮತ್ತೂ ಕೆಟ್ಟಿತು. ಪ್ರತಾಪಶಹ ಮಿತ್ರನು ಬಹಳ ದರ್ಪದಿಂದ "ಪ್ರತಾಪಲಂಕೇಶ್ವರರಸ" ವೆಂಬ ಕಷಾಯವನ್ನು ಮಾಡಿ ಕುಡಿಸಿದನು. ಆದರೆ ಯಾವ ರಸದಿಂದಲೂ ಪ್ರಯೋಜ ನವಾಗಲಿಲ್ಲ.

ರಾಜನು ಕ್ಷೀಣಸ್ವರದಲ್ಲಿಯೇ ಪರಿಹಾಸ್ಯಮಾಡಿ ನಗುತ್ತಾ "ಕೋಟೆಯನ್ನು ನಿರ್ಮಿಸುತ್ತಿರುವಾಗ ನಿನಗೆ ಈ ಕಷಾಯವನ್ನು ತಯಾರಿಸಲು ವಿರಾಮವೆಲ್ಲಿ ದೊರ ಕಿತು?" ಎಂದು ವೈದ್ಯನನ್ನು ಕೇಳಿದನು.

ತದನಂತರ ಇದ್ದಕ್ಕಿದ್ದಂತೆಯೇ ಮೂರ್ಛೆಗೊಂಡನು. ರಾಣಿಯ ತಂದೆ ಮೋರೋಪಂತ್ ಮತ್ತು ದಿವಾನ್ ನರಸಿಂಹರಾವ್ ಗಾಬರಿಗೊಂಡು ಬಂದರು. ರಾಜನಿಗೆ ಮತ್ತೆ ಪ್ರಜ್ಞೆಯು ಬಂದಿತು.

ನರಸಿಂಹರಾಯನು "ಸರ್ಕಾರ್, ಭಯಪಡಬೇಡಿ. ಎಲ್ಲವೂ ಸರಿ ಹೋಗು ವುದು. ಚಿಂತಿಸಬೇಕಾದ ವಿಷಯವೇನಿಲ್ಲ. ಏನಿದ್ದರೂ ನಮಗೆ ಅಪ್ಪಣೆ ಮಾಡಿ" ಎಂದು ಹೇಳಿದನು.

ರಾಜನು ಅರ್ಥಮಾಡಿಕೊಂಡು ಅವನ ಮನಸ್ಸಿನಲ್ಲಿದ್ದುದನ್ನು ತಿಳಿಸಿದನು. "ನಾನು ಇನ್ನೂ ಜೀವಿಸಿರುತ್ತೇನೆ. ಪ್ರತಾಪಮಿಶ್ರನ ನಗರವನ್ನು ನೋಡಲು ಹೋಗು ತ್ತೇನೆ. ಆದರೆ ದತ್ತುಸ್ವೀಕಾರಮಾಡುವುದನ್ನು ಮಾತ್ರ ನಿಶ್ಚಯಿಸಿದ್ದೇನೆ."

ಮೋರೋಪಂತ್ ಮತ್ತು ನರಸಿಂಹರಾಯರಿಬ್ಬರೂ ರಾಜನ ಮುಖವನ್ನೇ ನೋಡಲಾರಂಭಿಸಿದರು. ರಾಜನು ಮುಂದುವರಿಸುತ್ತಾ "ನಮ್ಮ ಕುಟುಂಬಕ್ಕೆ ಸೇರಿದ ವಾಸುದೇವರಾವ್ ನೇವಾಳ್ಕರನಿಗೆ ಒಬ್ಬ ಆನಂದರಾಯನೆಂಬ ಐದು ವರ್ಷ ಗಳ ಪುತ್ರನಿದ್ದಾನೆ. ಸುಂದರನೂ ಕಳೆಯಿಂದ ಕೂಡಿದವನೂ ಆಗಿದ್ದಾನೆ. ಆ ಮಗು

ವನ್ನು ದತ್ತುಸ್ವೀಕಾರಮಾಡಬೇಕೆಂದು ಆಶಿಸುತ್ತೇನೆ. ರಾಣಿಯು ಈ ಮಾತಿಗೆ ಸಮ್ಮತಿಸಿದರೆ ಇಂದೇ ಶಾಸ್ತ್ರಪೂರ್ವಕವಾಗಿ ದತ್ತುಸ್ವೀಕಾರ ಮಾಡುವೆನು.

ಮೋರೋಪಂತನು ರಾಣಿಯನ್ನು ಕೇಳಿದನು. ಅವಳು ಅದಕ್ಕೆ ಒಡಂಬಟ್ಟಳು. ಒಡನೆಯೇ ದತ್ತು ಸ್ವೀಕಾರದ ಏರ್ಪಾಡಾಯಿತು. ಪ್ರಜೆಗಳಲ್ಲಿ ಮುಖ್ಯರಾದವರನ್ನು ಆಹ್ವಾನಿಸಲಾಯಿತು. ಆಗ ಮೇಜರ್ ಮಾಲ್ಕಮ್ಮನ ಬದಲಾಗಿ ಮೇಜರ್ ಎಲಿಸ್ಸ್ ಎಂಬುವನು ಅಸಿಸ್ಟೆಂಟ್ ಪೊಲಿಟಿಕಲ್ ಏಜೆಂಟನಾಗಿ ಬಂದಿದ್ದನು. ಮಾಲ್ಕಮ್ಮನು ಪೊಲಿಟಿಕಲ್ ಏಜೆಂಟನಾಗಿ ಹೊರಟು ಹೋಗಿದ್ದನು. ಎಲಿಸ್ಸನನ್ನೂ ಮತ್ತು ಆಂಗ್ಲೇಯ ಸೇನೆಯ ಅಧಿಕಾರಿ ಕ್ಯಾಪ್ಟನ್ ಮಾರ್ಟಿನ್ ಎಂಬವನನ್ನೂ ಆಹ್ವಾನಿಸಲಾಗಿದ್ದಿತು. ಇವರೆಲ್ಲರ ಸಮ್ಮುಖದಲ್ಲಿ ಗಂಗಾಧರರಾಯನು ಆನಂದರಾಯನನ್ನು ದತ್ತು ಸ್ವೀಕಾರ ಮಾಡಿದನು.

ಆನಂದರಾಯನ ಹೆಸರನ್ನು ಮಾರ್ಪಡಿಸಿ ದಾಮೋದರರಾಯನೆಂಬ ಹೆಸರನ್ನು ನಾಮಕರಣ ಮಾಡಲಾಯಿತು.

## ೨೫

ಈ ಮಹೋತ್ಸವಕ್ಕೆ ಆಹ್ವಾನಿಸಿದ್ದ ಸರದಾರರೂ, ಸಾಹುಕಾರರೂ, ವರ್ತಕರೂ ಹುದ್ದೇದಾರರೂ ಇವರೆಲ್ಲರಿಗೂ ಸನ್ಮಾನ ವೀಳ್ಯೆಗಳು ದೊರೆತಮೇಲೆ ತಮ್ಮ ತಮ್ಮ ವಾಸಸ್ಥಾನಗಳಿಗೆ ತೆರಳಿದರು. ಕೇವಲ ಮೇಜರ್ ಎಲಿಸ್ಸ್, ಕ್ಯಾಪ್ಟನ್ ಮಾರ್ಟಿನ್, ಮೋರೋಪಂತ್, ಮತ್ತು ಪ್ರಧಾನ ಮಂತ್ರಿ ನರಸಿಂಹರಾವ್ ಮಾತ್ರ ರಾಜನ ಬಳಿ ಉಳಿದಿದ್ದರು. ಪರದೆಯಹಿಂದೆ ರಾಣೀ ಲಕ್ಷ್ಮೀಬಾಯಿಯು ಕುಳಿತಿದ್ದಳು. ರಾಜನು ಕಂಪೆನಿ ಸರ್ಕಾರಕ್ಕೆ ಓಲೆಯೊಂದನ್ನು ಬರೆಯಿಸಿದನು. ಅದರ ಸಾರಾಂಶ ಈರೀತಿಯಾ ಗಿದ್ದಿತು.

"ಕಂಪೆನಿ ಸರ್ಕಾರವು ಸ್ಥಾಪಿತವಾಗುವುದಕ್ಕೆ ಬಹಳ ಮುಂಚಿನಿಂದಲೂ ಬುಂದೇಲು ಖಂಡಕ್ಕೆ, ನಮ್ಮ ಪೂರ್ವಜರು, ಎಲ್ಲಾ ವಿಧವಾದ ಸಹಾಯವನ್ನೂ ಮಾಡುತ್ತಿದ್ದರು. ನಾನೂ ನನ್ನ ಜೀವನಾದ್ಯಂತವೂ ಸಹಾಯವನ್ನು ನೀಡಿದ್ದೇನೆ. ನಮ್ಮ ಮನೆತನದೊಡನೆ ಕಂಪೆನಿ ಸರ್ಕಾರವು ಆಗಿಂದಾಗ್ಗೆ ಕೆಲವು ಒಪ್ಪಂದಗಳನ್ನು ಮಾಡಿಕೊಂಡಿದೆ. ಅದರ ನೆರವಿನಿಂದ ನಮ್ಮ ಹಕ್ಕುಬಾಧ್ಯತೆಗಳು ಪುಷ್ಟೀಕೃತವಾಗಿ ಬೆಳೆದು ಬಂದಿವೆ. ನಾನು ಈಗ ರೋಗಗ್ರಸ್ತನಾಗಿದ್ದೇನೆ. ನನಗೆ ಶೀಘ್ರದಲ್ಲಿಯೇ ಗುಣವಾಗಿ ಸಂತಾನಪ್ರಾಪ್ತಿಯಾಗುವುದೆಂಬ ಭರವಸೆಯಿದೆ. ಆದರೆ ಅಕಸ್ಮಾತ್ತಾಗಿ ನಾನು ದೈವಾಧೀನನಾದರೆ ಉತ್ತರಾಧಿಕಾರಿಯಿಲ್ಲದೆ ಝಾನ್ಸಿರಾಜ್ಯವು ನಶಿಸಿ ಹೋಗು

ವುದಲ್ಲಾ ಎಂಬ ಯೋಚನೆಯಿಂದ ಒಬ್ಬ ಆನಂದರಾಯನೆಂಬ ಐದು ವರ್ಷದ ಬಾಲಕ ನನ್ನು ಹಿಂದೂ ಧರ್ಮಕ್ಕೆ ಅನುಸಾರವಾಗಿ ದತ್ತುಪುತ್ರನನ್ನಾಗಿ ಸ್ವೀಕರಿಸಿದ್ದೇನೆ. ಅವನು ನನಗೆ ಸಂಬಂಧದ ಪ್ರಕಾರ ಪೌತ್ರನಾಗಬೇಕು. ನನಗೆ ರೋಗವು ಗುಣವಾಗದೆ ನಾನು ಕಾಲಾಧೀನನಾದರೆ, ದತ್ತು ಸ್ವೀಕಾರದನಂತರ ದಾಮೋದರರಾಯನೆಂದು ಕರೆಯಲಾಗುವ ಈ ಬಾಲಕನೇ ಝಾನ್ಸಿರಾಜ್ಯಕ್ಕೆ ಉತ್ತರಾಧಿಕಾರಿಯಾಗುವನು. ನನ್ನ ಪತ್ನಿ ರಾಣಿಯು, ಅವಳು ಬದುಕಿರುವವರೆಗೂ ಈ ರಾಜ್ಯದ ಸ್ವಾಮಿನಿಯೂ, ಆ ಶಿಶುವಿನ ಮಾತೆಯೂ ಆಗಿ ರಾಜ್ಯದ ವ್ಯವಸ್ಥೆಯನ್ನು ನಡೆಸುವಳು. ಅವಳಿಗೆ ಯಾವ ವಿಧವಾದ ಆತಂಕವೂ ಅಡ್ಡಿಯೂ ಒದಗಬಾರದೆಂದು ನನ್ನ ಆಶೆ."

ರಾಜನು ಈ ಓಲೆಯನ್ನು ಕ್ಯಾಪ್ಟನ್ ಎಲಿಸ್ಸನ ವಶಕ್ಕೆ ಒಪ್ಪಿಸಿದನು.

ರಾಜನು ರುದ್ಧಕಂಠಿತನಾದನು. ಅವನ ಕಣ್ಣುಗಳಲ್ಲಿ ಅಶ್ರುಗಳು ಮೂಡಿದವು. ಪರದೆಯ ಹಿಂದಿದ್ದ ರಾಣಿಯು ಬಿಕ್ಕಿ ರೋದಿಸಿದ ಶಬ್ದವು ಕೇಳಿಸಿತು. ಆ ಬಿಕ್ಕಳಿಕೆಯು ಆ ಪತ್ರಕ್ಕೆ ಮುದ್ರೆಯನ್ನು ಒತ್ತಿರಬಹುದು. ರಾಜನು ಸ್ವಲ್ಪ ಸಂಬಾಳಿಸಿಕೊಂಡು, ಗಂಟಲನ್ನು ಸರಿಪಡಿಸಿಕೊಂಡು, ಎಲಿಸ್ಸನನ್ನು ಕುರಿತು ಹೇಳತೊಡಗಿದನು. ಆತನೂ ಗಮನದಿಂದ ಕೇಳಿದನು. "ತಮ್ಮನ್ನು ನಾನು ಮಿತ್ರನಂತೆ ಕಾಣುತ್ತೇನೆ. ಮಾಲ್ಕಮ್ ಸಾಹೇಬರೂ ನನ್ನ ಮಿತ್ರರೇ. ಗಾರ್ಡನ್ ಸಾಹೇಬರು ನನ್ನ ತಮ್ಮನಂತೆ........"

ರಾಜನ ಹೃದಯದಲ್ಲಿ ವೇದನೆಯುಂಟಾಗಿ ಮಾತನ್ನು ನಿಲ್ಲಿಸಿದನು. ಪುನಃ ಚೇತರಿಸಿಕೊಂಡು "ಈ ಸಮಯದಲ್ಲಿ ಗಾರ್ಡನ್ ಸಾಹೇಬರು ಇದ್ದಿದ್ದರೇ ನನಗೆ ಬಹಳ ಸಂತೋಷವಾಗುತ್ತಿದ್ದಿತು" ಎಂದು ಹೇಳಿ ಮಂದಹಾಸವನ್ನು ಬೀರಿದನು.

ಆ ಮುಗುಳ್ನಗೆಯು ಬಾಧೆಯಿಂದ ನಡುಗುತ್ತಿದ್ದ ತುಟಿಯ ಮೇಲೆ ಮೂಡಿ ಅಸಹನೀಯವಾದ ಆ ಕಷ್ಟವನ್ನು ಬಲಾತ್ಕಾರವಾಗಿ ದಮನಮಾಡಿತು.

"ಗಾರ್ಡನ್ ಸಾಹೇಬನ ಹುಕ್ಕೆಯು ದಿವಾನ್‌ಖಾನೆಯಲ್ಲಿದೆ. ತಾವು ಸೇವಿಸುವುದಾದರೆ ತರಿಸಲೇ ?"

"ಇಲ್ಲ ಸರ್ಕಾರ್."

"ನೋಡಿ ಮೇಜರ್ ಸಾಹೇಬರೇ, ದಾಮೋದರರಾಯನು ಎಷ್ಟು ಸುಂದರ ಬಾಲಕನು, ಬಹಳ ಅದೃಷ್ಟಶಾಲಿ. ನನ್ನ ರಾಣಿಯನ್ನೂ ಮಾತೆಯನ್ನಾಗಿ ಹೊಂದಿ ಝಾನ್ಸಿಯನ್ನು ಬೆಳಗಿಸುತ್ತಾನೆ. ಇವರಿಬ್ಬರೂ ಸೇರಿ ನನ್ನ ಝಾನ್ಸಿಗೆ ಕೀರ್ತಿತರುವರು."

ಪರದೆಯ ಹಿಂದೆ ಮತ್ತೆ ಬಿಕ್ಕಳಿಸುವ ಶಬ್ದ ಕೇಳಿಸಿತು. ಎಲಿಸ್ಸನು ಆ ಕಡೆಗೆ ಕೊನೆಗಣ್ಣಿನಿಂದ ನೋಡಿ ಮುಖತಿರುಗಿಸಿದನು.

ರಾಜನು ಪರದೆಯ ಕಡೆಗೆ ನೋಡಿ ಗದ್ಗದ ಕಂಠಿತನಾಗಿ ಕಷ್ಟದಿಂದ ನುಡಿದನು.

"ಇದೇನಿದು ಅಳುತ್ತಿರುವೆಯಾ? ನಾನು ಉತ್ತಮ ಗೊಳ್ಳುತ್ತಿರುವೆನು. ನನಗೆ ನನ್ನ ಮನಸ್ಸಿನಲ್ಲಿರುವುದನ್ನು ಹೇಳಲು ಅವಕಾಶ ಕೊಡು."

ರಾಣಿಯು ನಿಧಾನವಾಗಿ ಕೆಮ್ಮಿ ತನ್ನ ಕಂಠವನ್ನು ಸರಿಪಡಿಸಿಕೊಂಡಳು.

ರಾಜನು ಸ್ಥಿರಗೊಂಡು ಹೇಳಿದನು "ನನ್ನ ರಾಣಿಯು ಸ್ತ್ರೀಯೇನೋ ಅಹುದು. ಆದರೆ ಇವಳಲ್ಲಿರುವ ಉತ್ತಮ ಗುಣಗಳಿಗಾಗಿ ಪ್ರಪಂಚದಲ್ಲಿರುವ ಮಹನೀಯರು ಇವಳ ಪಾದಧೂಳಿಯನ್ನು ಶಿರೋಧಾರಣೆ ಮಾಡುವರು."

ಎಷ್ಟು ಪ್ರಯತ್ನಿಸಿದರೂ ರಾಜನಿಗೆ ತನ್ನ ಕಣ್ಣೀರನ್ನು ತಡೆಗಟ್ಟಲಾಗಲಿಲ್ಲ. ಎಲಿಸ್ಸನು "ಮಹಾರಾಜ, ಹೆಚ್ಚಾಗಿ ಆಯಾಸ ಗೊಳ್ಳಬೇಡಿ. ಇದರಿಂದ ಗುಣ ಹೊಂದುವುದು ತಡವಾಗುವುದು" ಎಂದನು.

ರಾಣಿಯು ಸ್ವಲ್ಪ ಜೋರಿನಿಂದ ಕೆಮ್ಮಿದಳು. ಆಕೆಯು ರಾಜನನ್ನು ಹೆಚ್ಚು ಆಯಾಸ ಮಾಡಿಕೊಳ್ಳಬಾರದೆಂದು ಪ್ರಾರ್ಥಿಸುವಂತಿತ್ತು.

ರಾಜನು ತನ್ನ ಬಲಹೀನವಾದ ಕೈಗಳಿಂದ ಕಣ್ಣೀರನ್ನು ಒರೆಸಿಕೊಂಡು ಗಂಟಲನ್ನು ಸರಿಪಡಿಸಿಕೊಂಡು "ರಾಣಿಯು ಎಲ್ಲಾ ವಿಚಾರಗಳಲ್ಲೂ ದಕ್ಷತೆಯಿಂದ ತಕ್ಕ ವ್ಯವಸ್ಥೆಮಾಡುತ್ತಾಳೆ. ನೀವುಗಳು ದಾಮೋದರರಾಯನು ಪ್ರಾಪ್ತವಯಸ್ಕನಲ್ಲವೆಂಬ ಕಾರಣದಿಂದ ಯಾವತೊಂದರೆಯನ್ನೂ ತೆಗೆದುಕೊಳ್ಳಬೇಡಿ" ಎಂದು ಹೇಳಿದನು.

ರಾಜನ ಹೃದಯದಲ್ಲಿ ವೇದನೆಯು ಅಧಿಕವಾಯಿತು.

ಅದನ್ನು ಕಷ್ಟಪಟ್ಟು ತಹಬಂದಿಗೆ ತಂದುಕೊಂಡು "ನನಗೆ ಝಾನ್ಸಿಯ ಜನರು ಅತ್ಯಂತ ಪ್ರೀತಿಪಾತ್ರರು. ನನ್ನ ಪ್ರಜೆಗಳು ಸುಖದಿಂದಿರಲೆಂದು ಆಶಿಸುತ್ತೇನೆ. ನಾನು ಯಾರ್ಯಾರಿಗೆ ಏನೇನು ಕೊಟ್ಟಿರುವೆನೋ ಅವು ಅವರವರಲ್ಲಿಯೇ ಇರಲಿ. ಮೃಗಲಖಾನನು ಬಹು ದೊಡ್ಡ ಸಂಗೀತ ವಿದ್ವಾಂಸನು, ಮೇಜರ್ ಸಾಹೇಬರೆ."

ಎಲಿಸ್ಸನು ಗಂಗಾಧರರಾಯನ ಬುದ್ಧಿಯು ಹತೋಟಿತಪ್ಪುತ್ತದೆ ಎಂದು ಬಗೆದು ಚಿಂತಾಕ್ರಾಂತನಾದನು.

ರಾಜನು "ನಾನು ಅವನಿಗೆ ಆನೆಯನ್ನು ಬಹುಮಾನವಾಗಿ ಕೊಟ್ಟಿದ್ದೇನೆ. ಅದು ಅವನ ಬಳಿಯೇ ಇರಲಿ ಮತ್ತು ಆನೆಯ ಪಾಲನೆ ಪೋಷಣೆಗಳಿಗಾಗಿ ನಾನಿತ್ತಿರುವುದೆಲ್ಲವೂ ಅವನಲ್ಲಿಯೇ ಇರಲಿ" ಎಂದು ಮುಂದುವರಿಸಿದನು.

ಇದಾದನಂತರ ರಾಜನಿಗೆ ಕೆಮ್ಮುಕ್ಕಿಬಂದಿತು. ಅದರೊಡನೆಯೇ ನೆತ್ತರವೂ ಬಂದಿತು. ವೈದ್ಯ ಪ್ರತಾಪಶಹನು ಕರೆದೊಡನೆಯೇ ಬಂದು ಚಿಕಿತ್ಸೆಮಾಡಿದನು. ಅದರಿಂದ ರಾಜನಿಗೆ ಸ್ವಲ್ಪ ಉತ್ತಮವಾಯಿತು. ಆದರೆ ಅದು ತಾತ್ಕಾಲಿಕ ನಿವಾರಣೆಯೆಂದು ರಾಜನು ಅರಿತಿದ್ದನು.

ರಾಜನು "ಎಲಿಸ್ಸ್ ಸಾಹೇಬರೇ, ಈ ನನ್ನ ವೈದ್ಯನು ಬಹಳ ಹಠವಾದಿ, ತನ್ನದೇ

ಆದ ಒಂದು ಪ್ರತ್ಯೇಕ ನಗರವನ್ನು ನಿರ್ಮಿಸುತ್ತಿರುವನು. ನಾನು ಇದಕ್ಕೆ ಅನುಮತಿಯನ್ನು ಕೊಟ್ಟಿದ್ದೇನೆ. ಇವನ ಹಠವನ್ನು ಯಾರೂ ಮುರಿಯಬೇಡಿ." ಎಂದನು.

ಇದನ್ನು ಕೇಳಿ ವೈದ್ಯನ ಕಣ್ಣಿನಲ್ಲಿಯೂ ಕಂಬನಿ ಮೂಡಿತು. ಅದನ್ನು ಒಡನೆಯೇ ತಡೆದು ಕೊಂಡು ಹೊರಗೆ ಹೊರಟು ಹೋದನು.

ರಾಜನ ತುಟಿಗಳಲ್ಲಿ ಕ್ಷೀಣವಾದ ಒಂದು ಮಂದಹಾಸವು ಮೂಡಿತು. "ನನ್ನ ನಾಟಕಶಾಲೆಯಲ್ಲಿ ನಾಟಕಗಳು ಅಭಿನಯಿಸಲ್ಪಡಲೀ ಅಥವಾ ಬಿಡಲಿ, ಆದರೆ ಪಾತ್ರಧಾರರಿಗೆ ಖಜಾನೆಯಿಂದ ಯಾವ ವೇತನಗಳು ಕೊಡಲಾಗುತ್ತಿವೆಯೋ ಅದು ಅವರಿಗೆ ಮುಂದೆಯೂ ಲಭಿಸಬೇಕೆಂದು ಆಶಿಸುತ್ತೇನೆ."

ರಾಜನು ಪುನಃ ಕೆಮ್ಮಿದನು. ನೆತ್ತರು ಈ ಬಾರಿ ಇನ್ನೂ ಹೆಚ್ಚಾಗಿ ಉಕ್ಕಿತು. ವೈದ್ಯನು ಪುನಃ ಒಳಗೆ ಬಂದು ರಾಜನಿಗೆ ಆಜ್ಞೆಮಾಡುವ ಸ್ವರದಿಂದ ಪ್ರತಿಭಟನೆ ಮಾಡಿ "ಮಹಾರಾಜ, ಈಗ ನೀವು ಖಂಡಿತವಾಗಿಯೂ ಮಾತನಾಡಬಾರದು......" ಎಂದು ನಿಷೇಧಿಸಿದನು.

ರಾಜನು ಆರ್ತನಾದ ಮಾಡಿದನು. ಆತನ ಕಣ್ಣುಗಳು ಗಿರ್ರನೆ ತಿರುಗಲಾರಂಭಿಸಿದವು.

ಕ್ಯಾಪ್ಟನ್ ಮಾರ್ಟಿನ್ನನು ಒಂದು ಮೂಲೆಯಲ್ಲಿ ಮೂಕನಂತೆ ಕುಳಿತಿದ್ದನು. ಅವನು ಎಲಿಸ್ಸನಿಗೆ ಹೊರಡೋಣವೆಂದು ಸಂಜ್ಞೆ ಮಾಡಿದನು. ಎಲಿಸ್ಸನು ಏಳಬೇಕೆಂದಿದ್ದನು. ಅಷ್ಟರಲ್ಲಿ ರಾಜನು "ಚಿತ್ರಕಾರ ಸುಖಲಾಲ್, ಹೃದಯೇಶ ಕವಿ ..." ಎಂದನು.

ಎಲಿಸ್ಸನು ಎದ್ದು ನಿಂತು ವಂದಿಸಿ ರಾಜನೊಡನೆ "ಮಹಾರಾಜ್, ಇನ್ನು ನಾವು ಹೊರಡುತ್ತೇವೆ. ತಾವು ಹೇಳಿಕಳುಹಿಸಿದೊಡನೆಯೇ ಬಂದು ನೋಡುತ್ತೇನೆ" ಎಂದನು.

ರಾಜನು ಕಣ್ಣುಗಳನ್ನು ಸ್ಥಿರನೋಟದಲ್ಲಿ ನಿಲ್ಲಿಸಿದನು.

"ಮೇಜರ್ ಸಾಹೇಬರೇ ಮರೆಯಬೇಡಿ. ನಮಗೆ ನಿಮ್ಮಲ್ಲಿ ಭರವಸೆಯಿದೆ. ನಮ್ಮ ಪ್ರಾರ್ಥನೆಯನ್ನು ನೆನಪಿನಲ್ಲಿಡಬೇಕು. ಗೌರ್ನರ್ ಸಾಹೇಬರಲ್ಲಿ ನನ್ನ ವಿನಂತಿ........"

ಇದರ ನಂತರ ಅವನಿಂದ ಮಾತನಾಡಲಾಗಲಿಲ್ಲ. ತಕ್ಷಣವೇ ಪ್ರಜ್ಞಾ ಶೂನ್ಯನಾದನು. ಎಲಿಸ್ಸ್ ಮತ್ತು ಮಾರ್ಟಿನ್ನರು ಹೊರಟುಹೋದರು.

ಲಕ್ಷ್ಮೀಬಾಯಿಯು ಪರದೆಯ ಹಿಂದಿನಿಂದ ಹೊರಕ್ಕೆ ಬಂದಳು. ತನ್ನ ಪತಿಯ ಸ್ಥಿತಿಯನ್ನು ನೋಡಿ ಚೀತ್ಕಾರಮಾಡಿದಳು. ಮೋರೋಪಂತನು ದಾಮೋದರರಾಯನನ್ನು ಕರೆಸಿದನು. ನಾನಾಭೋಪಟ್ಕರನು ಅವನನ್ನು ಕರೆತಂದನು.

ರಾಣಿಗೆ ನಂತರ ಸ್ವಲ್ಪ ಸಮಾಧಾನವಾಯಿತು.

## ೨೬

ಈಗ ಡಿಸ್ಟ್ರಿಕ್ಟ್ ಬೋರ್ಡ್ ಕಛೇರಿಯಿರುವ ಕಟ್ಟಡವು ಆಗ ಪ್ರವಾಸಿ ಮಂದಿರವಾಗಿ ಉಪಯೋಗಿಸಲ್ಪಡುತ್ತಿತ್ತು. ಹತ್ತಿರದಲ್ಲೇ ಝಾನ್ಸಿಗೆ ಪ್ರವಾಸಿಗಳಾಗಿ ಬರುತ್ತಿದ್ದ ಆಂಗ್ಲೇಯರ ಕ್ಲಬ್ ಇದ್ದಿತು. ಎಲಿಸ್ಸ್ ಮತ್ತು ಮಾರ್ಟಿನ್ ಇಬ್ಬರೂ ರಾಜನ ಬಳಿಯಿಂದ ಹೊರಟು ಕ್ಲಬ್ಬನ್ನು ಹೊಕ್ಕರು. ಅಲ್ಲಿ ಅನೇಕ ಜನ ಆಮೋದ ಪ್ರಮೋದಗಳಲ್ಲಿ ತೊಡಗಿದ್ದರು. ಅಲ್ಲಿ ಅವರು ನಾಲಿಗೆ ಸಡಿಲಬಿಟ್ಟು ಮಾತುಕಥೆಗೆ ಪ್ರಾರಂಭಿಸಿದರು.

ಅಲ್ಲಿನ ಆಂಗ್ಲೇಯರೆಲ್ಲರೂ ಅರಮನೆಯ ಸುದ್ದಿಯನ್ನು ಕೇಳಿದರು.

"ರಾಜನು ರುಗ್ಣಶಯ್ಯೆಯಲ್ಲಿದ್ದಾನೆ. ಉಳಿಯಲಾರನು."

"ಅದೇ ಹಳೇಕಾಲದ ವೈದ್ಯವೇ ನಡೆಯುತ್ತಿದೆಯೋ ?"

"ಒಬ್ಬ ಮೂರ್ಖ ವೈದ್ಯನು ಏನನ್ನೋ ಅರೆದು ಜೇನುತುಪ್ಪದಲ್ಲಿ ಬೆರಸಿ ತಿನ್ನಿಸುತ್ತಿದ್ದಾನೆ."

"ಕ್ಯಾಪ್ಟನ್ ಎಲಿಸ್ಸಿನಿಂದ ವೈದ್ಯಮಾಡಿಸಿ"

"ಸಂತೋಷದಿಂದ ಮಾಡಿಸಬಹುದು. ಆದರೆ ಈ ಜನರ ಧರ್ಮವು ಎಷ್ಟು ಕಠಿಣವೆಂದರೆ ಬಹುಶಃ ರಾಜನು ಎಲಿಸ್ಸನ ಕೈಯ್ಯಿಂದ ಮುಟ್ಟಿದ ಔಷಧಿಯನ್ನು ಕುಡಿಯುವುದಿಲ್ಲ."

"ಒಂದು ವೇಳೆ ಗುಣವಾಗಬಹುದು ; ಆಗದಿದ್ದರೆ ಏನಾಗಬಹುದು ?"

"ರಾಜನು ಒಂದು ಮಗುವನ್ನು ದತ್ತುಸ್ವೀಕಾರಮಾಡಿರುವನು."

"ಯಾವಾಗ ?"

"ಇಂದು ನಮ್ಮಗಳ ಸಮ್ಮುಖದಲ್ಲಿ".

"ದತ್ತುಸ್ವೀಕಾರ? ಹಾಗಾದರೆ ಝಾನ್ಸಿಯಲ್ಲಿ ಅದೇ ಸ್ವೇಚ್ಛೆ ಮತ್ತು ಕಾನೂನುಗಳಿಲ್ಲದ ಅವ್ಯವಸ್ಥೆಯೇ ಜಾರಿಯಲ್ಲಿರುವಂತೆ ಬಿಟ್ಟುಕೊಡುತ್ತೀರಾ ?"

ಎಲಿಸ್ಸನು ಈ ಪ್ರಸಂಗವನ್ನು ಮುಂದುವರೆಯಲು ಬಿಡಲಿಲ್ಲ. ಆಗ ಸಂಭಾಷಣೆಯು ಬೇರೆಯ ಕಡೆ ತಿರುಗಿತು. ಮತ್ತೆ ಎಲ್ಲರೂ ಮಾತುಕಥೆಗಳಲ್ಲಿ ತಲ್ಲೀನರಾದರು.

"ರಾಣಿಯು ಬಹಳ ಸುಂದರಳೆಂದು ಕೇಳಿದ್ದೇನೆ. ಒಳ್ಳೆಯ ಸವಾರಳೂ ಅಹುದಂತೆ. ಒಂದು ವೇಳೆ ನರ್ತಿಸುವುದನ್ನೂ ಕಲಿತರೆ ಅವಳ ನರ್ತನವೂ ವಿಚಿತ್ರವಾಗಿರಬಹುದು" ಎಂದು ಒಬ್ಬ ಆಂಗ್ಲೇಯನು ಹೇಳಿದನು.

"ಬಾಯಿ ಮುಚ್ಚು, ಮೂರ್ಖ, ಈಗ ಆಕೆಯ ರಾಜ್ಯದಲ್ಲಿಯೇ ನೀನು ಕುಳಿತಿರುವೆ. ಹಿಂದೂಸ್ಥಾನದ ಜನರು ತಮ್ಮ ರಾಜರಾಣಿಯರ ವಿಚಾರದಲ್ಲಿ ಇಂತಹ ಮಾತುಗಳನ್ನು ಕೇಳಲು ಸ್ವಲ್ಪವೂ ಇಷ್ಟಪಡುವುದಿಲ್ಲ." ಎಂದು ಎಲಿಸ್ಸನು ಹೇಳಿದನು.

"ಇಷ್! (Dammit). ಅವರೋ ಕತ್ತೆಗಳ ಹಿಂಡು. ಆದರೂ ನಿನ್ನ ಮಾತು ಕೇಳುತ್ತೇನೆ. ರಾಣಿ ಗೀಣಿಯರಿಗೆ ನಾನು ಹೆದರುವುದಿಲ್ಲ. ಆದರೆ ಮದ್ಯದ ಪಾತ್ರವನ್ನು ಮುಂದಿಟ್ಟುಕೊಂಡು ಸವಿಯಾದ ಮಾತನಾಡುವುದು ಲೇಸು, ಇಲ್ಲದಿದ್ದರೆ ವಾಗ್ವಾದ ಆಂದೋಳನವೇರ್ಪಡುವುದು. ಮೇಜರ್‌ಸಾಹೇಬ್ ಈ ವಿಚಾರದಲ್ಲಿ ನನ್ನ ಮಾಸಿಕವೇತನವನ್ನು ಪಣವಾಗಿಡುವೆನು.—ರಾಜನು ಬಹು ಚೆನ್ನಾಗಿ ನರ್ತಿಸುತ್ತಿದ್ದನೆಂದು ಕೇಳಿದ್ದೇನೆ. ಒಂದುಕಾಲದಲ್ಲಿ ಅವನ ನಾಟಕ ಶಾಲೆಯಲ್ಲಿ ಅನೇಕ ಸುಂದರಿಯರಿದ್ದರು. ಮತ್ತು ಉತ್ತಮವಾದ ನರ್ತನಗಳು ನಡೆಯುತ್ತಿದ್ದವು."

"ನಮಗೆಲ್ಲವೂ ಗೊತ್ತು. ಆದರೆ ಕಣ್ಣಾರ ನೋಡಿಲ್ಲ. ಹಿಂದೂಸ್ಥಾನದ ಬೇರೆ ಬೇರೆ ನರ್ತಕಿಯರ ನೃತ್ಯಗಳನ್ನು ನೋಡಿದ್ದೇನೆ. ಅವುಗಳಲ್ಲಿ ಅಷ್ಟೇನೂ ಸುಖವಿಲ್ಲ. ಈ ದೇಶದ ನೃತ್ಯಗಳಲ್ಲಿ ರೀತಿ ನೀತಿ ಮೋಹಕತೆಗಳೇಸಿಲ್ಲ."

"ನೃತ್ಯಗೀತೆಗಳು ಚೆನ್ನಾಗಿಲ್ಲದಿರಬಹುದು. ಆದರೆ ನರ್ತಕಿಯರು ಬಹು ಸೌಂದರ್ಯವತಿಯರು. ಈ ವಿಚಾರದಲ್ಲಿ ನಾನು ಪಣತೊಡಲು ಸಿದ್ಧನಾಗಿದ್ದೇನೆ."

"ಇವರುಗಳು ನಮ್ಮ ನೃತ್ಯಗೀತೆಗಳನ್ನು ಅಸಹ್ಯವೆಂದು ಭಾವಿಸಿದ್ದಾರೆ. ನಾನು ನಮ್ಮ ನೃತ್ಯಗೃಹಗಳಿಗೆ ಹಿಂದೂಸ್ಥಾನೀಯರು ಬರಕೂಡದೆಂದು ಕಟ್ಟಪ್ಪಣೆ ಮಾಡಿದ್ದೇನೆ. ಕೇವಲ ಅಲಿಬಹದ್ದೂರನು ಮಾತ್ರ ಬರುತ್ತಾನೆ. ಆತನು ತಿಳಿವಳಿಕೆಯುಳ್ಳವನು."

"ತಲೆಯನ್ನೇನೋ ಬಹುವಾಗಿ ಅಲ್ಲಾಡಿಸುತ್ತಾನೆ."

"ಅವನು ಬಹಳ ಕಾರ್ಯಕ್ಕೆ ಒದಗುವ ಮನುಷ್ಯನು. ಅದು ನಿನಗೆ ಗೊತ್ತೆ?"

"ಅವನು ತನ್ನ ಒಬ್ಬಿಬ್ಬ ಮಿತ್ರರನ್ನು ಕರೆತರಲು ಇಚ್ಛಿಸುತ್ತಾನೆ."

"ದಂಡ, ನನಗದಿಷ್ಟವಿಲ್ಲ."

"ಇಲ್ಲಿಂದೇನುತಾನೆ ತೆಗೆದುಕೊಂಡು ಹೋಗಬಲ್ಲ?"

"ನಮ್ಮ ಸ್ತ್ರೀಯರ ವಿಚಾರದಲ್ಲಿ ದುರಭಿಪ್ರಾಯವನ್ನು ಹಬ್ಬಿಸುತ್ತಾನೆ."

"ಏನೂ ಪರವಾಗಿಲ್ಲ. ದುರಭಿಪ್ರಾಯವು ಸೇನೆಯಲ್ಲಿಯೂ ಮತ್ತು ಪೋಲೀಸ್ ಪಡೆಯಲ್ಲಿಯೂ ಹರಡಬಾರದು ಅಷ್ಟೆ."

"ಒಬ್ಬರಿಗಿಂತ ಒಬ್ಬರು ಮೂಢರು. ಅವರು ತೋಟಿಗಳನ್ನು ಬಾಯಿಯಿಂದ

ಕಚ್ಚಿ ತೆಗೆಯುವುದಕ್ಕೆ ಅಸಮ್ಮತಿಸಿದರು. ಆದರೆ ನಾವು ಅವರನ್ನು ಚೆನ್ನಾಗಿ ತದುಕಿದ ನಂತರ ಸುಮ್ಮನಾದರು. ನಾವು ಅವರಿಗೆ ಕೊಡುವ ವೇತನವು ಈ ಭೂಮಂಡಲದಲ್ಲೇ ದೊರಕುವುದಿಲ್ಲ."

"ನಿನ್ನ ರಿಸಾಲೆಯಲ್ಲಿರುವ ಕೆಲವು ಬ್ರಾಹ್ಮಣರು ಹಣೆಗೆ ಬಣ್ಣಗಳನ್ನು ಬಳಿದುಕೊಂಡು ಕವಾತಿಗೆ ಬರುತ್ತಿದ್ದರಲ್ಲಾ ಅವರಿಗೆ ಅನುಶಾಸನವನ್ನು ಜಾರಿಗೆ ತಂದೆಯಾ?"

"ಓಹೋ! ಮೊದಲು ಅವರುಗಳು ಅದು ತಮ್ಮ ಮತಚಿಹ್ನೆಯೆಂದು ಹೇಳಿದರು. ಎಲ್ಲಾ ಪೊಳ್ಳುಬೆದರಿಕೆ. ಮತ್ತೆ ನಾನು ಎಲ್ಲವನ್ನೂ ವಿಚಾರಿಸಿದೆ. Damn it all. ಅಬ್ಬಾ! ಎಷ್ಟು ಅಜ್ಞಾನ ಪೂರಿತವಾದ ಪ್ರಪಂಚವಿದು?"

"ಕವಾತಾದನಂತರ ಹಣೆಯೊಂದರ ಮೇಲೆ ಮಾತ್ರವಲ್ಲದೆ ಅಡಿಯಿಂದ ಮುಡಿಯವರೆಗೆ ಬೇಕಾದರೂ ಈ ಬಣ್ಣದ ಚಿಹ್ನೆಗಳನ್ನು ಲೇಪಿಸಿಕೊಳ್ಳಲಿ ನಮಗೇನಾಗಬೇಕಿದೆ. ಇವರ ಧರ್ಮದಿಂದ ನಮಗೆ ಪರಮ ಕಷ್ಟವಾಗುತ್ತಿದೆ."

"ಈಗ ಈ ಕೋಮಿನವರು ಶುದ್ಧ ಮೂರ್ಖರೂ ತಿಳಿವಳಿಕೆಯಿಲ್ಲದವರೂ ಆಗಿದ್ದಾರೆ. ಆಂಗ್ಲೇಯ ಭಾಷೆಯನ್ನು ಕಲಿತರೆ ಸ್ವಲ್ಪ ಸುಧಾರಣೆಯಾಗ ಬಹುದು. ಮದರಾಸಿನಲ್ಲಿ ನಮ್ಮ ಮತಗ್ರಂಥ ಪಠನೆಯನ್ನು ಈ ಕಾರಣಕ್ಕಾಗಿಯೇ ಅನಿವಾರ್ಯ ಮಾಡಿರುವುದು. ಯಾವಾಗ ಆಂಗ್ಲಭಾಷಾಪ್ರಚಾರವಾಗುವುದೋ ಆಗ ನಮ್ಮ ಮತಗ್ರಂಥದ ಸಂಸ್ಕೃತಿಯು ಇವರ ರಕ್ತಗತವಾಗಿ ಆಗ ಈ ಪ್ರಪಂಚದ ಉದ್ಧಾರವಾಗ ಬಹುದು.

"ಹಾ! ಆಗಲೀಗ ಈ ಜನರು ನಮ್ಮ ಷೇಕ್ಸ್‌ಪಿಯರ್, ವಾಲ್ಟರ್‌ಸ್ಕಾಟ್, ಬೈರನ್ ಮುಂತಾದವರ ಪೂಜೆಮಾಡಲಾರಂಭಿಸುವರು. ಇಲ್ಲಿಯವರು ಬಹು ಬೇಗ ಪೂಜೆ, ನಮಾಜುಗಳಲ್ಲಿ ಆಸಕ್ತರಾಗುವರು."

"ಗಂಗಾಧರರಾಯನ ನಾಟಕಶಾಲೆಯಲ್ಲಿ ಅಭಿನಯಿಸುತ್ತಿದ್ದರಲ್ಲಾ ಅದು ಯಾವ ನಾಟಕ?"

"ಇವರ ನಾಟಕಗಳು ಅಂತಹ ನಿಜವಾದುವುಗಳೇನಲ್ಲ. ಮೋನಿಯರ್ ವಿಲಿಯಂಸಿನ 'ಶಾಕುಂತಲಾ' ನಾಟಕದ ಅನುವಾದವನ್ನು ನಾನು ಓದಿದ್ದೇನೆ. ಬಹಳ ರಮ್ಯವಾದ ನಾಟಕ. ಆದರೂ 'ಟೆಂಪೆಸ್ಟ್' ನಾಟಕದ ಮಿರಾಂಡಾವಿಗೆ ಶಕುಂತಲೆಯು ಸರಿದೂಗುವುದಿಲ್ಲ. ಆದರೂ ಪರವಾಗಿಲ್ಲ."

"ಈ ತರಹೆಯ ಪುಸ್ತಕಗಳು ಹಿಂದೂ ಮುಸಲ್ಮಾನರಲ್ಲಿ ಎಷ್ಟಿರಬಹುದು?"

"ಹಿಂದೂಗಳಲ್ಲಿ ಶಾಕುಂತಲಾ, ಹಲ ಕೆಲವು ವೇದಗಳೂ ಮತ್ತು ಸಾಹಿತ್ಯಗಳಿರುವುವು. ಮುಸಲ್ಮಾನರಲ್ಲಿ ಖೊರಾ್, ಗುಲಿಸ್ಥಾನ್, ಬೋಸ್ಥಾನ್ ಮತ್ತು

ಉಮರ್‌ಖಯಾಮನ ರುಬಿಯಾತ್ ಅಷ್ಟೇ ಇವೆ. ಮಿಕ್ಕದೆಲ್ಲಾ ಕೆಲಸಕ್ಕೆ ಬಾರದವು."

"ನೀನಾದರೋ ಲಾರ್ಡ್ ಮೆಕಾಲೆಯಂತೆ ಮಾತನಾಡುತ್ತಿರುವೆ ಪೆದ್ದ."

"ಲಾರ್ಡ್ ಮೆಕಾಲೆಯು ತಪ್ಪೇನಾದರೂ ಹೇಳಿದನೆ? ಅವನಾದರೋ ಹಿಂದೂ ಮುಸಲ್ಮಾನರಿಗೆ ಒಂದು ದೊಡ್ಡ ಗೌರವವನ್ನೇ ಕೊಟ್ಟಿರುವನು. ಅವನು ಹೇಳಿರುವುದೇನೆಂದರೆ ಇವರ ಎಲ್ಲಾ ಒಳ್ಳೆಯ ಗ್ರಂಥಗಳನ್ನು ಒಂದು ಚಿಕ್ಕ ಸಂದೂಕದಲ್ಲಿ ಸೇರಿಸಬಹುದು ಎಂದು."

"ಮೆಕಾಲೆಯು ಚಿಕ್ಕ ಸಂದೂಕವೆಂದು ಹೇಳಲಿಲ್ಲ. ಆದರೆ ನನ್ನ ಅಭಿಪ್ರಾಯದಲ್ಲಿ ಇವರ ಉತ್ತಮ ಪುಸ್ತಕಗಳನ್ನೆಲ್ಲಾ ಒಂದು ಸಂದೂಕದ ಮೂಲೆಯಲ್ಲಿ ಅಡಗಿಸಬಹುದು."

"ಹೋಗಲಿ ಬಿಡು. ಇವರ ನರ್ತಕಿಯರು ಅಪ್ಸರೆಯರಂತೆ ಕಾಣುತ್ತಾರೆ."

"ಯಾವಾಗ ಅವರು ಒಂದು ಬಂಡಿ ಒಡವೆಗಳನ್ನು ಹೇರಿ ಕೊಂಡು ಮುಂದೆ ಬರುತ್ತಾರೋ ಆಗ ಪುಷ್ಪಕ್ಕೆ ಮಿಣುಕು ಹುಳುಗಳು ಮುತ್ತಿರುವಂತೆ ಕಾಣುತ್ತಾರೆ."

"ಆಗಾಗ್ಗೆ ನೃತ್ಯದಲ್ಲಿನ ಪದವಿನ್ಯಾಸಗಳು ಚೆನ್ನಾಗಿರುತ್ತವೆ."

"ಆದರೆ ಅವರ ಸಂಗೀತವು ಶುದ್ಧ ಕೂಗಾಟ. ಹಾಂ, ಸಾರಂಗಿಯನ್ನು ನುಡಿಸಿದರೆ ಕೇಳುವುದಕ್ಕೆ ಇಂಪಾಗಿಯೇ ಇರುತ್ತದೆ. ಆದರೆ ತಬಲೆಯನ್ನು ಮಂದಗತಿಯಲ್ಲಿ ನುಡಿಸಿದರೆ ಎದ್ದು ಕುಣಿಯೋಣವೆಂದು ಮನಸ್ಸು ಹಾತೊರೆಯುತ್ತದೆ."

"ಹಿಂದೂಸ್ಥಾನದ ಪ್ರಕೃತಿ, ಹವಾಗುಣ, ನೀರು, ಹಣ್ಣು, ಹಂಪಲು, ಹಾಲು ಮೊಸರು ಇತ್ಯಾದಿ ಎಲ್ಲವೂ ಚೆನ್ನಾಗಿದೆ. ಆದರೆ ದೇಶವು ಕುಸಂಸಾರದಿಂದ ತುಂಬಿದೆ. ರೈತರು ಹೆಚ್ಚು ಶ್ರಮ ವಹಿಸುವುದಿಲ್ಲ."

"ಮತ್ತು ಚೋರರೂ, ಢಕಾಯಿತರುಗಳಿಂದಾಗಿ ಮನಃ ಶ್ಯಾಂತಿಯಿಲ್ಲ."

"ನಾವು ಅವರನ್ನು ನಾಶಮಾಡುವುದಕ್ಕಾಗಿಯೇ ಹಿಂದೂಸ್ಥಾನದಲ್ಲಿದ್ದೇವೆ."

"ರಿಯಾಸತಿಗಳಲ್ಲಿ ಬಹಳ ಅನ್ಯಾಯ ಅತ್ಯಾಚಾರಗಳು ನಡೆಯುತ್ತಿವೆ."

"ನಾನು ಕೇಳಿರುವ ವಿಚಾರವೊಂದನ್ನು ಹೇಳುತ್ತೇನೆ ಕೇಳು. ಒಂದು ಸಂಸ್ಥಾನದಲ್ಲಿ ಒಬ್ಬ ಅತ್ತರ್ ವ್ಯಾಪಾರಿಯಿಂದ ಸರದಾರನೊಬ್ಬನು ೩೬೦೦೦ ರೂಪಾಯಿಗಳಿಗೆ ಅತ್ತರನ್ನು ಕೊಂಡನು. ಕೊಂಡ ಬಳಿಕ ಆ ವ್ಯಾಪಾರಿಯು ತನ್ನ ಬಳಿ ಇನ್ನೂ ಅತ್ಯುತ್ತಮ ಸುಗಂಧ ದ್ರವ್ಯಗಳಿವೆಯೆಂದು ಹೇಳಿದಾಗ ಆ ಸರದಾರನು ಕೋಪಿಸಿಕೊಂಡು ತನ್ನ ಕುದುರೆಯ ಲಾಯದಲ್ಲಿದ್ದ ಕುದುರೆಯ ಬಾಲಗಳಿಗೆಲ್ಲಾ ಆ ಅತ್ತರನ್ನೆಲ್ಲಾ ತಿಕ್ಕಿಸಿ, ಇದರಿಂದ ಬಾಲಗಳ ದುರ್ಗಂಧವು ಕಡಿಮೆಯಾಗುವುದು. ಇನ್ನೂ ಇದಕ್ಕಿಂತ ಉತ್ತಮವಾದ ಅತ್ತರಿದ್ದರೆ ಅದನ್ನೂ ತೆಗೆದುಕೊಂಡು ಬಾ, ಕತ್ತೆಗಳ ಬಾಲಗಳಿಗೆ ಉಜ್ಜಿಸುವೆನು ಎಂದನಂತೆ. ಈ ಮಾತನ್ನು ಕೇಳಿ ರಾಜಸಿಗೆ ಬಹು ಸಂತೋಷವಾಗಿ

೩೬೦೦೦ ರೂಪಾಯಿಗಳ ಎರಡರಷ್ಟು ಹಣವನ್ನು ತನ್ನ ಸರದಾರನಿಗೆ ಕಳುಹಿಸಿದನು."

"ಇದು ಝಾನ್ಸಿಯ ರಾಜನ ಕಥೆಯೇ ಇರಬೇಕು."

"ನಾನು ಇದು ಡಿಲ್ಲಿಯ ಬಾದಷಹ ಬಹದ್ದೂರ್‌ಷಹನದೆಂದು ಕೇಳಿದ್ದೇನೆ."

"ಅವನು ಕವಿತೆಗಳನ್ನು ರಚಿಸುವುದರಲ್ಲಿ ಮಗ್ನನಾಗಿರುತ್ತಾನೆ."

"ಅವನನ್ನು ಬಾದಷಹನೆಂದು ಯಾರು ಕರೆಯುತ್ತಾರೆ ?"

"ಶಿಷ್ಟಾಚಾರ, ಕೇವಲ ಶಿಷ್ಟಾಚಾರ."

"ಅದೆಂತಹ. ಶಿಷ್ಟಾಚಾರ, ಚಕ್ರವರ್ತಿಯು ಒಬ್ಬನೇ ಇರಬೇಕಲ್ಲವೆ? ಒಬ್ಬನಲ್ಲದೆ ಮತ್ತೊಬ್ಬನು ಯಾವ ಪ್ರಕಾರದಿಂದಲೂ ಆಗಲಾರನು. ಆತನು ನಮ್ಮ ಇಂಗ್ಲೆಂಡ್ ದೇಶದ ಚಕ್ರವರ್ತಿ. Three Cheers Hurray !"

"ಹುರೆ! ಈ ಸೂತ್ರದ ಬೊಂಬೆಗಳನ್ನೆಲ್ಲಾ ಮೂಲೆಗೊತ್ತರಿಸು."

"ಎಲ್ಲಿನ ರಾಜ ಎಲ್ಲಿನ ಚಕ್ರವರ್ತಿ! ಕಂಪಿಸುತ್ತಾ ಕೋಟೆಗಳಲ್ಲೂ ಅರಮನೆಗಳಲ್ಲೂ ಕುಳಿತು ಕುಳಿತೇ ಭೋಗವಿಲಾಸಗಳಲ್ಲಿ ಕಾಲಕಳೆಯುತ್ತಾರೆ. ಬಡವರ ಹೆಂಗಸರನ್ನು ಸತಾಯಿಸಿ, ಪೀಡಿಸುತ್ತಾರೆ. ಕೊಳ್ಳೆಹೊಡೆಯುತ್ತಾರೆ."

"ಹುಷ್, ಸ್ವಲ್ಪ ಸುಮ್ಮನಿರು, ಈಗಲೆ ಅಲ್ಲ. ಎಲ್ಲವೂ ಸ್ವಲ್ಪ ನಿಧಾನಿಸಿ ಆಗುವುದು. ಈ ಕಿರೀಟ ಪತಾಕೆಗಳೆಲ್ಲಾ ನಮ್ಮ ಪಾದಗಳ ಮೇಲೆ ಬಂದು ಬೀಳುವುವು. ಆದರೆ ಎಲ್ಲವೂ ನಿಧಾನವಾಗಿ ನಡೆಯುವುದು. ಕೆಲವು ದಿನಗಳನಂತರ ಅಖಂಡ ಹಿಂದೂಸ್ಥಾನವೇ ಕ್ರೈಸ್ತಮತವನ್ನವಲಂಬಿಸಿ ಆಂಗ್ಲೇಯ ರಾಜ್ಯವು ಅಮರವಾಗುವುದು."

"ನಿಧಾನವೆಂದು ಹೇಳುವೆಯಾ? ಬೆಪ್ಪತಕ್ಕಡಿ. ಈಗಲೇ ಸಮಯ. ಈ ವೇಳೆ ನಾಲ್ಕಾರು ದರೋಡೆಕಾರರನ್ನು ದಂಡಿಸಿ, ಕೊಬ್ಬನ್ನಿಳಿಸಿ, ವ್ಯಾಪಾರವನ್ನು ಹೆಚ್ಚಿಸಿ, ಸಾಗುವಳಿಯನ್ನು ಅಭಿವೃದ್ಧಿಪಡಿಸಬೇಕು. ಇದನ್ನು ಜನತೆಯು ಶ್ರದ್ಧೆಯಿಂದ ಗಣನೆಗೆ ತರುವುದು. ಯಾರು ಹಿಂದುಸ್ಥಾನೀಯರಲ್ಲಿ, ಆಂಗ್ಲೇಯ ಭಾಷೆಯನ್ನು ಓದಿ ಬರೆಯಲು ಕಲಿಯುವರೋ ಅವರಿಗೆ ಚಿಕ್ಕಪುಟ್ಟ ನೌಕರಿಗಳನ್ನು ಕೊಟ್ಟು ಆಂಗ್ಲೇಯ ಧರ್ಮವನ್ನು ಗೌರವಿಸುವಂತೆ ಮಾಡಬೇಕು. ಅವರು ಆ ಧರ್ಮವನ್ನು ಜನಸಮುದಾಯದಲ್ಲಿ ಹರಡುವರು. ಜನತೆಯು ಯಾವಾಗಲೂ ಕೈಮುಗಿದು ನಡೆಯುವುದು. ನಮ್ಮ ಪೀಳಿಗೆಯು ನಮ್ಮ ಪ್ರತಾಪವನ್ನು ಸಾರುವುದು. ಆಗ ನಮಗೆ ಸರ್ವಸ್ವವೂ ಆಗಿರುತ್ತದೆ."

"Ho! Dear me! ನೀನೊಬ್ಬ ಅರಿಸ್ಟಾಟಲ್ ಮತ್ತು ಸಾಕ್ರಟೀಸನೇ ಆಗಿಬಿಟ್ಟೆ."

"ಇಷ್! ನನ್ನ ಮನಸ್ಸಿಗೆ ಒಂದೇ ಒಂದು ವಿಷಯ ವ್ಯಾಕುಲವನ್ನುಂಟುಮಾಡು

ತ್ತಿದೆ—ಈ ರಾಜ ಮತ್ತು ನವಾಬ."

"ಮತ್ತೆ ಅದೇ ಮೂರ್ಖತನ. ಈಗ ತಾನೇ ಹೇಳಿದೆ ಸ್ವಲ್ಪನಿಧಾನಿಸು ಎಂದು. ಇಂಗ್ಲೆಂಡಿನ ರಾಜನೀತಿಜ್ಞರು ಬಹಳ ಕುಶಲರು. ಮತ್ತು ಹುಷಾರಿಗಳು. ಈಗ ಹಿಂದೂಸ್ಥಾನದಲ್ಲಿ ಗೌರ್ನರ್ ಜನರಲ್ಲಿಗೆ ತನ್ನ ಕೌನ್ಸಿಲ್ಲಿನ ಸಮ್ಮತಿಯನ್ನು ಪೂರಾ ರದ್ದುಗೊಳಿಸುವ ಅಧಿಕಾರ ದೊರಕಿದೆ. ಇಲ್ಲಿನ ಜನರನ್ನು ಹತೋಟಿಯಲ್ಲಿಡಲು ಕೆಲವು ರಾಜನವಾಬರುಗಳು ಇರುವುದು ಅತ್ಯವಶ್ಯಕ. ಅಲ್ಲದೆ ಈ ದೊಡ್ಡ ದೊಡ್ಡ ಸಂಸ್ಥಾನಗಳಲ್ಲಿ ಅತ್ಯಾಚಾರಗಳು ನಡೆಯುತ್ತಿದ್ದು, ಆ ಪ್ರಜೆಗಳು ನಮ್ಮ ಆಂಗ್ಲೇಯ ಇಲಾಖೆಯಲ್ಲಿ ಏಳಿಗೆಯಲ್ಲಿರುವ ಪ್ರಜೆಗಳೊಡನೆ ಸಂಪರ್ಕಹೊಂದಿ ತಮ್ಮ ಈ ಎರಡು ಬಾಳ್ವೆಗಳನ್ನೂ ಹೋಲಿಸಿ ತೂಗಿ ನೋಡಿ ತಮ್ಮ ಹೀನಸ್ಥಿತಿಯನ್ನು ಅರಿಯಬೇಕು. ಮತ್ತು ನಾವು ಹಿಂದೂ ರಾಜ್ಯಗಳ ಆಡಳಿತವು ಬಹಳ ಉತ್ತಮವೆಂದು ಮೂಲೆ ಮೂಲೆಯಲ್ಲೂ ಸಾರುತ್ತಿರಲೂ ಬೇಕು. ತಿಳಿಯಿತೆ?"

"ಜನತೆಯಲ್ಲಿ ಉಚ್ಚನೀಚ ಶ್ರೇಣಿಗಳನ್ನು ಕಾಪಾಡಿಕೊಂಡು ಬರುವುದು ಅತ್ಯಾವಶ್ಯಕವೆಂದು ನಾನು ಬಲ್ಲೆನು."

"ನಿನ್ನ ತಲೆ. ಅವರಲ್ಲಿ ಉಚ್ಚನೀಚತರಗತಿಗಳು ಅನಾದಿಕಾಲದಿಂದಲೂ ಇವೆ. ಮುಖ್ಯವಾಗಿ ಜಮೀನ್ದಾರ್ ಮತ್ತು ತಾಲ್ಲೂಕುದಾರರನ್ನು ಪ್ರಬಲಗೊಳಿಸಿಟ್ಟು ಕೊಳ್ಳುವುದೊಂದು ಬಾಕಿಯಿದೆ. ಬಂಗಾಳದಲ್ಲಿ ಈ ಕಾರ್ಯವನ್ನು ಪೂರ್ತಿಮಾಡಿದ್ದಾಗಿದೆ. ಇತರ ಸ್ಥಳಗಳಲ್ಲಿ ಇದನ್ನು ಇನ್ನೂ ಮಾಡಬೇಕು. ಜನತೆಯಲ್ಲಿ ಯಾರಾದರೂ ತಲೆ ಎತ್ತುವ ಸಂಭವವಿದ್ದರೆ ಈ ಜಮೀನುದಾರರು ಅವರನ್ನು ಹತೋಟಿಗೆ ತರುವರು. ಇದರಿಂದಾಗಿ ನಮ್ಮ ಕೈವಾಡವನ್ನು ತೋರಿಸುವ ಆವಶ್ಯಕತೆಯೇ ಬರುವುದಿಲ್ಲ. ಬಂದೋಬಸ್ತುಗಳೆಲ್ಲವೂ ಲೀಲಾಜಾಲವಾಗಿ ನಡೆದುಕೊಂಡು ಹೋಗುವುವು."

"'ಬಂದೋಬಸ್ತ್' ಈ ಪದವು ನನಗೆ ಅತ್ಯಂತ ಪ್ರಿಯ. ಮೂಲೆಮೂಲೆಯಲ್ಲಿಯೂ ಬಂದೋಬಸ್ತು ಏರ್ಪಾಡಾಗಬೇಕು."

"ಈಗಲೀಗ ನಿನ್ನ ತಲೆಯೆಂದೆಯಲ್ಲ, ಆ ಮಾತನ್ನು ಹಿಂದಕ್ಕೆ ತೆಗೆದುಕೊ. ಹಿಂದೂಗಳ ಜಾತಿಮತಗಳು ಮುಸಲ್ಮಾನರ ಉಚ್ಚನೀಚ ತರಗತಿಗಳು ನಮಗೆ ಸಹಾಯಕವಲ್ಲವೆಂದು ನನ್ನೊಡನೆ ಪಣತೊಡಬಲ್ಲೆಯಾ?"

"ಭೇಷಾಗಿ ಪಣತೊಡಬಲ್ಲೆ. ಇವೆಲ್ಲ ಇದ್ದುದರಿಂದಲೆ ರಾಜರೂ ಬಾದಷಹರೂ ಹುಟ್ಟಿಕೊಂಡರು. ಮುಂದೆಯೂ ಉದ್ಭವಿಸುವರು. ಆದುದರಿಂದಲೇ ಈ ಹಿಂದೂಸ್ಥಾನವನ್ನು ಅನಂತಕಾಲದವರೆಗೆ ನಮ್ಮ ಹತೋಟಿಯಲ್ಲಿಯೇ ಇಟ್ಟುಕೊಳ್ಳುವುದಾಗಿಯೂ, ಹಿಂದೂಸ್ಥಾನಿಯರ ಲಾಭಕ್ಕೂ ಮತ್ತು ನಮ್ಮ ವ್ಯಾಪಾರದ ಉದ್ದೇಶ ಸಫಲವಾಗುವುದಕ್ಕೂ ನಾನು ಹೇಳಿದ್ದ ಮಾರ್ಗವೇ ಸರಿ. ನಮ್ಮಿಬ್ಬರಿಗಿಂತ ಚತುರರಾದ

ರಾಜನೀತಿಜ್ಞರು ಈ ಸಮಸ್ಯೆಯನ್ನು ಆದ್ಯಂತವಾಗಿ ಪರಿಶೀಲಿಸಿಲ್ಲವೆ ?"

ಮದ್ಯಪಾನದ ನಡುವೆ ಅಖಂಡಸಾಮ್ರಾಜ್ಯಸೃಷ್ಟಿಯ ವಿಷಯವು ಅನೇಕಬಾರಿ ಸುಳಿದುಹೋಗುತ್ತಿದ್ದಿತು. ಇಷ್ಟರಲ್ಲಿ ಕ್ಲಬ್ಬಿನ ಹೊರಗಡೆ ಕುದುರೆಯ ಖುರಪುಟ ಧ್ವನಿಯು ಕೇಳಿಸಿತು.

ಪ್ರಹರಿಯು ಪ್ರವೇಶಿಸಿ ಸಲಾಮುಮಾಡಿ "ಹುಜೂರ್, ರಾಜನು ಮೂರ್ಛೆ ಗೊಂಡಿರುವನೆಂದು ರಾಜಗೃಹದಿಂದ ವರ್ತಮಾನವು ಬಂದಿದೆ" ಎಂದನು.

ಎಲ್ಲರೂ ಅವರವರ ಪಾನಪಾತ್ರೆಗಳನ್ನು ಕೆಳಗಿಟ್ಟು ನಿಶ್ಶಬ್ದವಾಗಿ ಒಬ್ಬರ ಮುಖವನ್ನು ಒಬ್ಬರು ನೋಡಲಾರಂಭಿಸಿದರು.

ಎಲಿಸ್ಸನು "ನಾನು ಸ್ವಲ್ಪ ಹೊತ್ತಿನೊಳಗಾಗಿ ಬರುವೆನೆಂದು ತಿಳಿಸು" ಎಂದು ಪ್ರಹರಿಯನ್ನು ಕುರಿತು ಹೇಳಿದನು.

ಪ್ರಹರಿಯು ಸಲಾಮುಮಾಡಿ ಹೊರಟುಹೋದನು.

ಮಾರ್ಟಿನ್ನನು ಎಲಿಸ್ಸನನ್ನು ಉದ್ದೇಶಿಸಿ "ಬಹುಶಃ ರಾಜನು ಮರಣೋನ್ಮುಖ ನಾಗಿರುವನು. ಅಥವಾ ಮರಣವನ್ನೇ ಹೊಂದಿರಬಹುದು. ಭಾರತೀಯರಿಗೆ ಸತ್ಯಾಂಶವನ್ನು ಬಹಳ ಹೊತ್ತಿನವರೆಗೆ ಗುಪ್ತವಾಗಿಡುವ ಅಭ್ಯಾಸವಿದೆ. ಒಂದು ವೇಳೆ ರಾಜನು ಮೃತನಾಗಿದ್ದರೆ ಆ ದತ್ತುಸ್ವೀಕಾರವು ಗಣನೆಗೆ ತರಲಾಗುವುದೆ? ಲಾರ್ಡ್ ಡಾಲ್‌ಹೌಸಿಯು ಝಾನ್ಸಿಯನ್ನು ಆಂಗ್ಲೇಯರ ಇಲಾಖೆಯಲ್ಲಿ ಸೇರಿಸಿ ಕೊಳ್ಳುವನೆಂದು ನಾನು ಅಭಿಪ್ರಾಯಪಡುತ್ತೇನೆ" ಎಂದು ಹೇಳಿದನು.

"ಹುಷ್ !" ಎಂದು ತೋರ್ಬೆರಳನ್ನು ತೋರುತ್ತಾ ಎಲಿಸ್ಸನು "ಮದ್ಯಪಾನ ಸ್ವಲ್ಪ ಹೆಚ್ಚಾದಂತೆ ತೋರುತ್ತದೆ" ಎಂದನು.

ಅದೇಕ್ಷಣದಲ್ಲಿ ಮತ್ತೊಬ್ಬ ಸವಾರನು ಕುದುರೆಯನ್ನು ದವುಡಾಯಿಸುತ್ತಾ ಬಂದನು. ಪ್ರಹರಿಯು ಪ್ರವೇಶಿಸಿ "ಹುಜೂರ್ ಅರಮನೆಯಿಂದ ಇಷ್ಟೊಂದು ಸಮಾ ಚಾರ ಬಂದಿದೆ. ಮಹಾರಾಜರು ಉತ್ತಮಗೊಂಡಿದ್ದಾರೆ ಮತ್ತು ತಮ್ಮನ್ನು ಒಡ ನೆಯೇ ದಯಮಾಡ ಹೇಳಿದ್ದಾರೆ" ಎಂದು ಹೇಳಿದನು.

"Damn it" ಎಂದು ಮೆಲ್ಲನೆ ಎಲಿಸ್ಸನ ಮುಖದಿಂದ ಸ್ವರವು ಹೊರಟಿತು. ಅದನ್ನು ಪ್ರಹರಿಯು ಕೇಳಿದನು. ಅವನ ಪಿತ್ಥವು ಪ್ರಕೋಪಿತವಾಗಿ ತಲೆಯನ್ನೂ ತಗ್ಗಿಸಿ ಹೊರಟು ಹೋದನು.

ಎಲಿಸ್ಸನು ಕಣ್ಣು ಸಂಜ್ಞೆಮಾಡಿದನು. ಮಾರ್ಟಿನ್ನನು ಕೈಬೆರಳಿನಿಂದ ಸರಿಯೆಂದು ಸಂಜ್ಞೆಮಾಡಿ "ಈ ನೌಕರನು ನಮ್ಮವನು, ರಾಜನ ಕಡೆಯವನಲ್ಲ" ಎಂದು ಹೇಳಿದನು.

ಗಂಗಾಧರರಾಯನನ್ನು ಅರಮನೆಯ ಅಂತಃಪುರಕ್ಕೆ ಕರೆದುಕೊಂಡು ಹೋಗಿ

ದ್ದರು. ಎಲಿಸ್ ಮತ್ತು ಡಾಕ್ಟರ್ ಎಲನ್ ಅಲ್ಲಿಗೆ ಹೋದಾಗ ರಾಜನಿಗೆ ಪ್ರಜ್ಞೆ ಇದ್ದಿತು. ಎಲಿಸ್ಸನನ್ನು ನೋಡಿ ರಾಜನಿಗೆ ಪರಮಸಂತೋಷವಾಯಿತು. ಮಾತ ನಾಡ ಬಯಸಿ ಅಸ್ಪಷ್ಟವಾಗಿ ಕೆಲವು ಮಾತುಗಳನ್ನಾಡಿದನು.

ರಾಜನು ಎಲಿಸ್ಸನ ಕೈಯಲ್ಲಿ ಪತ್ರವನ್ನು ಕೊಟ್ಟ ದಿನವನ್ನು ನೆನಪಿಗೆ ತಂದು ಕೊಟ್ಟು ಪೊಲಿಟಿಕಲ್ ಏಜೆಂಟ್ ಮಾಲ್ಕಮ್ಮನಿಗೂ ಒಂದು ಪತ್ರವನ್ನು ಕಳುಹಿಸಿರು ವುದಾಗಿ ಹೇಳಿದನು. ಆ ಪತ್ರದಲ್ಲಿ ಕೇವಲ ಒಂದು ವಿಶೇಷ ಸಮಾಚಾರವನ್ನು ಬರೆಯಲಾಗಿದ್ದಿತು.

—ಸ೯ ೧೮೧೭ ರಲ್ಲಿ ರಾಮಚಂದ್ರರಾಯನಿಗೂ ಕಂಪೆನಿ ಸರ್ಕಾರಕ್ಕೂ ನಡೆದ ಸಂಧಿಯಲ್ಲಿ ರಾಜ್ಯವು ನಿರಂತರವೂ, ಶಿವರಾವ್‌ಭಾವುವಿನ ವಂಶಜರ ಅಧಿಕಾರದಲ್ಲಿಯೇ ಇರಬೇಕೆಂದು ಲಿಖಿತವಾಗಿದ್ದಿತು. ಆ ವಚನವನ್ನು ಪಾಲಿಸಿಕೊಂಡು ಬರಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ.

ಎಲಿಸ್ಸನು ರಾಜನ ದುಃಸ್ಥಿತಿಯನ್ನು ನೋಡಿ ಮಾತನಾಡುವುದನ್ನು ಕಡಿಮೆ ಮಾಡಲು ಪ್ರಯತ್ನಿಸುತ್ತಿದ್ದನು. ರಾಜನು ಮಾತನಾಡಲು ಪ್ರಯತ್ನಪಡುತ್ತಾ ಅಚೇತನನಾಗಿ ನಡುನಡುವೆ ಪ್ರಜ್ಞೆ ತಪ್ಪುತ್ತಿದ್ದನು.

ಎಲಿಸ್ಸನು ಡಾಕ್ಟರ್ ಎಲನ್ನನ ಔಷಧಿಯನ್ನು ಸೇವಿಸುವಂತೆ ರಾಜನನ್ನು ಒತ್ತಾಯಪಡಿಸಿದನು. ಎಲನ್ನನು ಗಂಗಾಧರರಾಯನ ಬಳಿಗೆ ಹೋದಾಗ ಕ್ಲಬ್ಬಿನಲ್ಲಿ ಮದ್ಯಪಾನ ಮಾಡಿದ್ದುದರ ಪ್ರಯುಕ್ತ ದುರ್ಗಂಧವು ಹೊರಬೀಳುತ್ತಿದ್ದಿತು. ಇದ ರಿಂದ ರಾಜನಿಗೆ ಬಹಳ ಅಸಹ್ಯವಾಯಿತು.

ಆತನು ಹಿಂದುವಲ್ಲದವನ ಕೈಸೋಕಿದ ಔಷಧಿಯನ್ನು ರಾಜನು ಸೇವಿಸುವುದಿಲ್ಲ ವೆಂದು ತಿಳಿದು "ಸರ್ಕಾರ್, ಗಂಗಾಜಲವನ್ನು ಔಷಧಕ್ಕೆ ಸೇರಿಸುತ್ತೇನೆ. ಆಗ ಅದು ಪವಿತ್ರವಾಗುವುದು. ತಾವು ದಯವಿಟ್ಟು ಅದನ್ನು ಸೇವಿಸಿ ಉತ್ತಮಗೊಳ್ಳಿರಿ" ಎಂದನು.

ರಾಜನ ಮುಖಚರ್ಯೆಯಿಂದ ಆತನು ಅದಕ್ಕೆ ಸಮ್ಮತಿಸಿದಂತೆ ಅರಿವಾಗುತ್ತಿ ದ್ದಿತು. ಅವನಿಗೆ ಮದ್ಯದ ದುರ್ಗಂಧವು ದೂರವಾದರೆ ಸಾಕೆಂದು ತೋರುತ್ತಿದ್ದಿತು. ಎಂತಹ ಅಸಂಸ್ಕೃತನಾದ ಹಿಂದುವಾದರೂ ಮರಣಶಯ್ಯೆಯಲ್ಲಿರುವಾಗ ಎಂತಹ ಸುಸಂಸ್ಕೃತ ಹಿಂದುವೇ ಆಗಲಿ, ಇತರರೇ ಆಗಲೀ, ಮದ್ಯಪಾನದಿಂದ ದುರ್ಗಂಧ ಪೂರಿತನಾಗಿ ತನ್ನನ್ನು ಸಮೀಪಿಸುವುದನ್ನು ಎಂದಿಗೂ ಇಚ್ಛಿಸುವುದಿಲ್ಲ.

ತಕ್ಷಣವೇ ಎಲಿಸ್ಸನು ಒಬ್ಬ ಬ್ರಾಹ್ಮಣನ ಕೈಯಲ್ಲಿ ಔಷಧಿಯನ್ನು ಕೊಟ್ಟು ಕಳುಹಿಸಿದನು. ರಾಜನು ಅದನ್ನು ಮುಟ್ಟುವುದಕ್ಕೂ ಒಪ್ಪಲಿಲ್ಲ. ಇನ್ನೂ ಒಂದು ದಿವಸ ವ್ಯಾಧಿಯನ್ನು ಅನುಭವಿಸುವುದಿದ್ದಿತು. ಆ ದಿನ "ನವೆಂಬರು ತಿಂಗಳು ೩ಂನೇ

ತಾರೀಖು" ಮಧ್ಯಾಹ್ನ ಸ್ವಲ್ಪ ನಿದ್ರೆ ಬಂದಿತು. ನಾಲ್ಕು ಘಂಟೆಯ ಸಮಯಕ್ಕೆ ರಾಜನು ಎಚ್ಚರಗೊಂಡನು. ಅರಮನೆಯ ಹೊರಗಡೆ ಝಾನ್ಸಿಯ ಜನರು ರಾಜನ ಕ್ಷೇಮಸಮಾಚಾರವನ್ನರಿಯಲು ಕಾತರರಾಗಿ ನೆರೆದಿದ್ದರು.

ರಾಜಾ ಗಂಗಾಧರರಾಯನಿಗೆ ಅಡಿಗಡಿಗೆ ಜ್ಞಾನ ತಪ್ಪುತ್ತಿದ್ದಿತು. ಹಾಗೂ ಹೀಗೂ ಬಹು ಕಷ್ಟದಿಂದ ಆದಿನ ಕಳೆಯಿತು. ಮರುದಿನ ಆತನ ಸ್ಥಿತಿಯು ಉಲ್ಬಣವಾಯಿತು. ಕಡೆಯಲ್ಲಿ ಕೇವಲ "ಗಂಗಾಜಲ" ಎಂಬ ಮಾತು ಹೊರಬಿದ್ದಿತು.

ಒಡನೆಯೇ ಗಂಗಾಜಲವನ್ನು ಕುಡಿಸಲಾಯಿತು.

ಒಂದು ಕ್ಷಣ ಅವನಿಗೆ ತನ್ನ ರೋಗವೆಲ್ಲವೂ ನಿರ್ಮೂಲವಾದಂತೆ ಭಾಸವಾಯಿತು. ಒಡನೆಯೇ ಚೇತನಯುಕ್ತನಾಗಿ ಹೇಳಿದನು. "ನಾನು ಮಹಾಪರಾಧಿ.... ಅನೇಕರಿಗೆ ತೊಂದರೆ ಕೊಟ್ಟೆ....ಎಲ್ಲರೂ ಮನ್ನಿಸಿರಿ.... ಓಂ ಹರಿ...."

ಕೆಲವು ಕ್ಷಣಗಳಲ್ಲಿ ರಾಜನ ಪ್ರಾಣ ಪಕ್ಷಿಯು ಹಾರಿಹೋಯಿತು. ಅರಮನೆಯಲ್ಲಿ ಹಾಹಾಕಾರವೆದ್ದಿತು. ಎಂದೂ ರಾಣಿಯು ವಿಹ್ವಲಳಾಗಿರುವುದನ್ನು ಕಾಣದ ಜನರು ಕರುಣಾಸಾಗರದ ಕಟ್ಟೆಯನ್ನೊಡೆದು ಧಾರಾಕಾರವಾಗಿ ಸಂತಾಪವನ್ನು ಸೂಚಿಸಿದರು. ಮೋರೋಪಂತನೂ ಮತ್ತು ನಾನಾ ಬೋಪಟ್‌ಕರನೂ ಆಕ್ರಂದನ ಮಾಡುತ್ತಲೇ ದಾಮೋದರರಾಯನನ್ನು ರಾಣಿಯ ಮಡಿಲಲ್ಲಿಟ್ಟರು.

ಲಕ್ಷ್ಮೀದ್ವಾರದಾಚೆ, ಲಕ್ಷ್ಮೀತಟಾಕದ ತಡಿಯಲ್ಲಿ ಗಂಗಾಧರರಾಯನ ಶವಸಂಸ್ಕಾರವು ಅಮೋಘವಾಗಿ ನೆರವೇರಿತು. ರುದ್ರಭೂಮಿಯಲ್ಲಿ ಎಲಿಸ್ಸ್ ಮತ್ತು ಮಾರ್ಟಿನ್ನರೂ ಮತ್ತು ಸ್ವಲ್ಪದೂರದಲ್ಲಿ ಕುದುರೆ ಸವಾರರ ದಳವೂ ಹಾಜರಿದ್ದರು. ಎಲ್ಲರೂ ಕಪ್ಪುವರ್ಣದ ಶೋಕಸೂಚಕ ಚಿಹ್ನೆಗಳನ್ನು ಧರಿಸಿದ್ದರು. ಎಲಿಸ್ಸ್ ಮತ್ತು ಮಾರ್ಟಿನ್ನರು ಕುತೂಹಲತೆಯಿಂದ ಅಂತ್ಯಕ್ರಿಯೆಗಳನ್ನು ಈಕ್ಷಿಸುತ್ತಿದ್ದರು. ಹಿಂದೂಸ್ಥಾನಿ ಸಿಪಾಯಿಗಳು ರೋದಿಸುತ್ತಿರುವ ಝಾನ್ಸಿಯ ಪ್ರಜೆಗಳೊಂದಿಗೆ ರುದ್ಧಕಂಠಿತರಾಗಿದ್ದರು.

ಎಲಿಸ್ಸನು ಸರ್ ೧೮೫೩ ನೇ ನವಂಬರ್ ೨೦ ನೇ ತಾರೀಖಿನಲ್ಲಿ ರಾಜಾ ಗಂಗಾಧರರಾಯನಿಂದ ಒಂದು ದಿವಸವೊದಲು ಕೊಡಲಾದ ಪತ್ರವನ್ನು ಕೈಥಾವಿನ * ಪೊಲಿಟಿಕಲ್ ಏಜೆಂಟನ ಬಳಿಗೆ ಕಳುಹಿಸಿದನು. ರಾಜಾ ಗಂಗಾಧರರಾಯನು ಕಾಲಗತಿಯನ್ನೈದಿದನು. ಈ ಸುದ್ದಿಯನ್ನೂ ಆತನು ಕಾಲವಿಳಂಬವಿಲ್ಲದೆ ಅವನಿಗೆ ತಿಳಿಸಿದನು.

---

* ಆ ಕಾಲದಲ್ಲಿ ಬುಂದೇಲು ಖಂಡ ಮತ್ತು ರೀವಾಸಂಸ್ಥಾನದ ಪೊಲಿಟಿಕಲ್ ಏಜೆಂಟನು ಕೈಥಾ ಜಿಲ್ಲೆಯ ಹಮೀರ್ ಪುರದಲ್ಲಿರುತ್ತಿದ್ದನು.

## ೨೭

ಎಲಿಸ್ಸನು ಕಳುಹಿಸಿದ ಗಂಗಾಧರರಾಯನ ಪತ್ರ ಮತ್ತು ಅವನ ಮರಣ ವಾರ್ತೆಯು ಮಾಲ್ಕಮ್ಮನಿಗೆ ತಲಪುತ್ತಲೇ ಆತನು ಒಡನೆಯೇ ಅದನ್ನು ಗೌರ್ನರ್ ಜನರಲ್ ಸಾಹೇಬನಿಗೆ ಕಳುಹಿಸಿದನು. ಇದರೊಂದಿಗೆ ಗಂಗಾಧರರಾಯನು ಮಾಲ್ಕಮ್ಮನಿಗೆ ನೇರವಾಗಿ ಬರೆದ ಕಾಗದವನ್ನೂ ಮತ್ತು ತಾನೂ ಬರೆದ ಒಂದು ಪತ್ರವನ್ನೂ ಕಳುಹಿಸಿದನು. ಮಾಲ್ಕಮ್ಮನ ಪತ್ರದ ಒಕ್ಕಣೆಯು ಈರೀತಿ ಇದ್ದಿತು—

ಝಾನ್ಸಿ ರಾಜನಿಗೆ ಕಂಪೆನಿ ಸರ್ಕಾರದ ಅನುಮತಿಯಿಲ್ಲದೇ ದತ್ತುಸ್ವೀಕಾರ ಮಾಡುವ ಅಧಿಕಾರವಿಲ್ಲ. ರಾಣಿಯು ಯೋಗ್ಯಳೂ ಮತ್ತು ಲೋಕಪ್ರಿಯಳೂ ಆಗಿರುತ್ತಾಳೆ. ಆದರೆ ಕಂಪೆನಿಯ ಶಾಸನಾಧಿಕಾರವು ಜನರ ಹಿತದ ದೃಷ್ಟಿಯಲ್ಲಿ ಉತ್ತಮವಾಗಿ ಕಾಣುತ್ತದೆ. ಇಂತಹ ಪರಿಸ್ಥಿತಿಯಲ್ಲಿ ರಾಣಿಗೆ ಐದು ಸಹಸ್ರ ರೂಪಾಯಿಗಳ ಮಾನಸಿಕ ವೃತ್ತಿ, ಅವಳ ಸ್ವಂತ ಆಸ್ತಿ ಮತ್ತು ನಗರದಲ್ಲಿನ ಅರಮನೆ ಇವುಗಳನ್ನು ಕೊಡಬಹುದು."

ಈ ರೀತಿಯಾದ ಪತ್ರವನ್ನು ಬರೆದನಂತರ ಮಾಲ್ಕಮ್ಮನು ಝಾನ್ಸಿ ರಾಜ್ಯಾಡಳಿತವನ್ನು ಭದ್ರಪಡಿಸುವ ವ್ಯವಸ್ಥೆಗಳನ್ನು ಕೈಗೊಂಡನು ಮತ್ತು ಝಾನ್ಸಿಯಲ್ಲಿ ಆಂಗ್ಲೇಯ ಸೇನೆಯನ್ನು ಹೆಚ್ಚಿಸಿದನು.

ಝಾನ್ಸಿಯ ಪ್ರಜಾಮುಖಂಡರು ರಾಜ್ಯವು ದತ್ತುಪುತ್ರನ ಹೆಸರಿನಲ್ಲಿಯೇ ನಡೆಯುವುದೆಂಬ ಭರವಸೆಗೊಂಡು ದಾಮೋದರರಾಯನ ಹೆಸರಿನಲ್ಲಿ ಶಾಸನಗಳನ್ನು ಹೊರಡಿಸಲಾರಂಭಿಸಿದರು.

ಯಾವಾಗ ೧೯ ನೇ ಶತಮಾನದ ಪ್ರಾರಂಭದಲ್ಲಿ ಕಂಪೆನಿಯ ರಾಜ್ಯವು ಬಹು ವೇಗವಾಗಿ ವಿಸ್ತಾರವಾಗುತ್ತಿತ್ತೋ ಆಗ ಅವರು ತಮ್ಮ ನೀತಿ ಮತ್ತು ಶಸ್ತ್ರಾಸ್ತ್ರಗಳ ವಿಜಯದ ಅಮಲಿನಲ್ಲಿ ತೇಲುತ್ತಿದ್ದರು. ಮತ್ತು ಆಗಾಗ್ಗೆ ಕಂಪೆನಿಯ ಮುಖಂಡರು ವಿಜಯವನ್ನು ಗಳಿಸುವುದೂ ಮತ್ತು ತಮ್ಮ ರಾಜ್ಯವನ್ನು ಹೆಚ್ಚಿಸುವುದೂ ಹೇಯವಾದ ಯೋಜನೆಗಳೆಂದು ಪ್ರಕಟಿಸುತ್ತಿದ್ದರು. ಅಲ್ಲದೆ ಬ್ರಿಟಿಷರ ಇಚ್ಛೆ, ನೀತಿ ಮತ್ತು ಪ್ರತಿಷ್ಠೆಗಳಿಗೆ ಪ್ರತಿಕೂಲವೆಂದು ಸಾರುತ್ತಿದ್ದರು. ಆದರೆ ಸಿಜಾಂಶವು ಇಷ್ಟು ಸುಲಭವಾಗಿ ದೊರಕಿದ ರಾಜ್ಯವು ಯಾವುದಾದರೂ ದುರದೃಷ್ಟದಿಂದ ಎಲ್ಲಿ ಕೈಬಿಡುವುದೋ ಎಂಬುದಾಗಿದ್ದಿತು.

ಈ ಯೋಜನೆಗಳಿಗೆ ಲಾರ್ಡ್ ಡಲ್‌ಹೌಸಿಯ ಸಹಿ ಇದ್ದಿತು. ಅವನ ನೀತಿಯಲ್ಲಿ ಮುಚ್ಚುಮರೆ ಇರಲಿಲ್ಲ. ಅವನ ರಾಜನೀತಿಯು ಸ್ಪಷ್ಟವಾಗಿದ್ದಿತು.

"ನಾವು ಯಾವ ಅವಕಾಶವನ್ನೂ ಕಳೆದುಕೊಳ್ಳಬಾರದು. ನಮ್ಮ ಇಲಾಖೆಯ

ನಡುನಡುವೆ ಇರುವ ಚಿಕ್ಕಪುಟ್ಟ ಸಂಸ್ಥಾನಗಳು ಅನೇಕ ತೊಂದರೆಗಳಿಗೆ ಕಾರಣ. ಇವುಗಳನ್ನು ನಮ್ಮ ಹತೋಟಿಗೆ ತೆಗೆದುಕೊಂಡರೆ ನಮ್ಮ ಖಜಾನೆಯು ತುಂಬುವುದಲ್ಲದೆ ನಮ್ಮ ಶಾಸನಾಧಿಕಾರದಿಂದ ಈ ರಾಜವಾಡೆಯ ಜನರಿಗೆ ಅತ್ಯಂತ ಲಾಭವುಂಟಾಗುವುದು.”

ಯಾವಾಗ ಪತ್ರಗಳೂ ಮತ್ತು ಮಾಲ್ಕಮ್ಮನ ಕಾಗದವೂ ಕಲ್ಕತ್ತೆಯನ್ನು ತಲಪಿದವೋ ಆಗ ಡಲ್‌ಹೌಸಿಯು ಔಧಿನಕಡೆ ಕಾರ್ಯಾಂತರವಾಗಿ ಹೋಗಿದ್ದನು. ಆದುದರಿಂದ ನಾಲ್ಕಾರು ತಿಂಗಳಾದರೂ ಉತ್ತರವು ದೊರಕಲಿಲ್ಲ.

## ೨೮

ಗಂಗಾಧರರಾಯನು ಕಾಲಗತಿಯನ್ನೈದಿದಾಗ ರಾಣಿ ಲಕ್ಷ್ಮೀಬಾಯಿಗೆ ೧೮ ವರ್ಷ ವಯಸ್ಸಾಗಿದ್ದಿತು. ಈ ದುರ್ಘಟನೆಯಿಂದ ಆಕೆಯ ತನುಮನಗಳೆರಡೂ ಹಿಮದಿಂದ ಬಾಡಿದ ಕಮಲದಂತೆ ಬತ್ತಿಹೋಗಿದ್ದವು. ಆದರೆ ರಾಣಿಯ ಮನದಲ್ಲಿ ಒಂದು ಭಾವನೆ, ಒಂದು ದೃಢತೆ ಉತ್ಪನ್ನವಾಗಿ ಆಕೆಯ ಬಾಳ್ವೆಯನ್ನು ಸಾಗಗೊಳಿಸುತ್ತಿತ್ತು. ಇದು ಆಗಾಗ್ಗೆ ಆಕೆಯ ಬಾಲ್ಯಾವಸ್ಥೆಯಲ್ಲಿ ಆಟಪಾಠಗಳಲ್ಲಿ ಪ್ರಕಟವಾಗುತ್ತಿತ್ತು. ಅದು ಈಗ ಅವಳ ಹೃದಯದ ಮೂಲೆಯೊಂದರಲ್ಲಿ ಅಡಕವಾಗಿರುವುದು ಅನೇಕರಿಗೆ ಅರಿವಿರಲಿಲ್ಲ. ಆ ವಿಷಯವನ್ನು ತಿಳಿದಿದ್ದವರಲ್ಲಿ ಒಬ್ಬ ತಾತ್ಯಾಟೋಪೆ ಮತ್ತೊಬ್ಬ ನಾನಾಫೋಡೋಪಂತ್.

ಗಂಗಾಧರರಾಯನ ಅಂತ್ಯ ಕ್ರಿಯೆಗಳಿಗೆ ಬಿಟ್ಟೂರಿನಿಂದ ನಾನಾಫೋಡೋಪಂತ್ ಅವನ ಇಬ್ಬರು ಸಹೋದರರೊಂದಿಗೆ ಬಂದಿದ್ದನು. ಅಂತೆಯೆ ತಾತ್ಯಾನೂ ಬಂದಿಳಿದಿದ್ದನು. ಅವರೆಲ್ಲರೂ ಆ ವೇಳೆಗೆ ಯೌವ್ವನಾವಸ್ಥೆಯಲ್ಲಿದ್ದರು. ವಾರ್ಷಿಕ ವೇತನವನ್ನು ಮುಟ್ಟುಗೋಲು ಹಾಕಿಕೊಂಡುದರ ಫಲವಾಗಿ ಅವರೆಲ್ಲರೂ ಸಂತಪ್ತರೂ ರೋಷಭರಿತರೂ ಆಗಿದ್ದರು. ಅವರುಗಳಿಗೆ ಗಂಗಾಧರರಾಯನ ಮರಣದಿಂದ ದೊಡ್ಡ ಘಾಸಿಯಾದಂತಾಯಿತು. ಜಲೌನ ರಾಜ್ಯವು ಕೊನೆಗೊಂಡು ಝಾನ್ಸಿಯಲ್ಲಿ ಮಹಾರಾಷ್ಟ್ರದ ಗಾದಿಯೊಂದುಮಾತ್ರ ಉಳಿದಿದ್ದಿತು. ಇದೂ ಎಲ್ಲಿ ವಿಲೀನವಾಗಿ ಹೋಗುವುದೋ ಎಂಬ ಭಯವಿದ್ದಿತು. ಬಾಜೀರಾಯನು ಬಿಟ್ಟೂರಿನಲ್ಲೇ ಕುಳಿತು ಕೊಂಡು ಯಾವ ಸ್ವರಾಜ್ಯ ಸ್ವಪ್ನವನ್ನು ಕಾಣುತ್ತಿದ್ದನೋ ಮತ್ತು ಅವನಂತೆಯೆ ಬಾಲ್ಯದಿಂದಲೂ ಯಾವ ಕನಸನ್ನು ಪಾಲಿಸುತ್ತಾ ಬಂದಿದ್ದಳೊ ಅದು ಈಗ ದುಃಸ್ವಪ್ನದಂತೆ ಇಳಿಮುಖವಾಗುತ್ತಾ ಬಂದಿತು.

ರಾಣಿಯು ಕೋಟೆಯ ಮಹಲ್ಲಿನಲ್ಲಿಯೇ ತನ್ನ ಸಖಿಯರು, ಸಿಪಾಯಿಗಳು

ಮತ್ತು ಪೇದೆಗಳೊಂದಿಗೆ ವಾಸಿಸುತ್ತಿದ್ದಳು. ಕೆಳಗಿನ ಮಹಲ್ಲಿನಲ್ಲಿ ಗಜಶಾಲೆ, ಅಶ್ವಾಲಯ, ಸೇನೆ, ಶಸ್ತ್ರಾಸ್ತ್ರಗಳೂ ಎಲ್ಲವೂ ಅಡಕವಾಗಿ ಅವಳ ಅಧೀನದಲ್ಲಿಯೇ ಇದ್ದಿತು.

ನಗರದ ಶಾಸನ ಸೂತ್ರಗಳು ಅವಳ ಅಧಿಕಾರದಲ್ಲಿದ್ದವು. ರಾಜ್ಯದ ಸಂಪತ್ತು ಅಧಿಕಾರ ಇವೇ ಮುಂತಾದವು ಅವಳ ಮಂತ್ರಿಗಳ ಮೇಲ್ವಿಚಾರಣೆಯಲ್ಲಿದ್ದವು. ಆದರೆ ಕಂಪೆನಿ ಸರ್ಕಾರವು ಛಾವಣಿಯಲ್ಲಿ ತಮ್ಮ ಸೇನೆ, ಮದ್ದು ಗುಂಡು ಇವುಗಳನ್ನು ವೃದ್ಧಿಪಡಿಸುವುದರಲ್ಲಿ ನಿರತವಾಗಿದ್ದಿತು. ಇದರಿಂದ ಮನಃಕ್ಲೇಶ ಉತ್ಪನ್ನವಾಗಿದ್ದಿತು.

ಸೂತಕವು ಕಳೆದಮೇಲೆ ನಾನಾಸಾಹೇಬನ ಸಹೋದರರು ಬಿಟ್ಠೂರಿಗೆ ಹೊರಟುಹೋದರು. ನಾನಾ ಮತ್ತು ತಾತ್ಯಾ ಹಿಂದುಳಿದರು. ಛಳಿ ವಿಪರೀತ ವಾಗಿದ್ದಿತು. ಬಡಬಗ್ಗರೆಲ್ಲರಿಗೂ ಛಳಿಯಿಂದ ಹಲ್ಲು ಕಟಕಟನೆ ಅದುರುತ್ತಿದ್ದವು. ಅದರಮೇಲೆ ಸಾಯಂಕಾಲದಿಂದಲೂ ಮೋಡವು ಆಕಾಶದಲ್ಲಿ ಗುಂಪುಗೂಡುತ್ತಿದ್ದವು. ನಂತರ ಬಿರುಗಾಳಿಯೆದ್ದು ಮಳೆಯು ಬರಲಾರಂಭಿಸಿತು. ನಾನಾ ಮತ್ತು ತಾತ್ಯಾ ರಾಣಿಯೊಡನೆ ಮಾತನಾಡಲು ಕಿಲ್ಲೆಯ ಮಹಲ್ಲಿಗೆ ಸಾಯಂಕಾಲಕ್ಕೆ ಮೊದಲೇ ತಲಪಿದರು. ಭೋಜನಾನಂತರ ಮಾತುಕಥೆಗಳಾಗಿ ನಂತರ ವಾಸಸ್ಥಳಕ್ಕೆ ಹಿಂದಿರುಗ ಬೇಕಾಗಿದ್ದಿತು. ಆದರೆ ಪ್ರಕೃತಿಯ ಕ್ರೋಧದಿಂದಾಗಿ ಅವರುಗಳು ಅಲ್ಲಿಯೇ ತಂಗಲು ಏರ್ಪಾಡಾಯಿತು.

ದಿವಾನಖಾನೆಯಲ್ಲಿ ಮಾತುಕಥೆಗಳು ನಡೆದವು. ಸುಂದರಿ, ಮುಂದರಿ, ಕಾಶಿ ಇವರುಗಳು ರಾಣಿಯೊಂದಿಗೆ ಹಾಜರಿದ್ದರು. ರಾಣಿಯು ಬಹಳವಾಗಿ ಇಳಿದು ಹೋಗಿದ್ದುದರಿಂದ ಮುಖವು ಜೋಲುಬಿದ್ದಿದ್ದಿತು. ಆದರೂ ತೇಜಃಪುಂಜವಾದ ಆ ಸೌಂದರ್ಯದಲ್ಲಿ ಆದರ್ಶಣೀಯವಾದ ಪ್ರಕಾಶವಿದ್ದಿತು. ಅವಳ ವಿಶಾಲ ನೇತ್ರಗಳ ಹೊಳಪು ಇನ್ನೂ ವೃದ್ಧಿಯಾದಂತೆ ತೋರುತ್ತಿದ್ದಿತು. ರಾಣಿಯು ಯಾವ ಭೂಷಣ ಗಳನ್ನೂ ಧರಿಸಿರಲಿಲ್ಲ—ಕಂಠದಲ್ಲಿ ಒಂದು ಮುಕ್ತಾವಳಿ ಮತ್ತು ಕೈಯಲ್ಲಿ ಒಂದು ವಜ್ರದುಂಗುರ ಮಾತ್ರವಿದ್ದಿತು. ಬಿಳಿಯ ಸೀರೆಯನ್ನುಟ್ಟು ಬಿಳಿಯ ದುಕೂಲವನ್ನು ಹೊದ್ದುಕೊಂಡಿದ್ದಳು. ಸಖಿಯರೂ ಒಡವೆಗಳನ್ನು ತ್ಯಾಗಮಾಡಲು ಸಿದ್ಧರಿದ್ದರು. ಆದರೆ ರಾಣಿಯ ಒತ್ತಾಯದಿಂದ ಹಾಗೆ ಮಾಡಲಾಗಲಿಲ್ಲ.

ರಾಣಿ—ಬುಂದೇಲುಖಂಡದ ಮನೆತನವು ಆರಿಹೋದ ದೀಪವಾಗಿದೆ! ಅದರಲ್ಲಿ ತೈಲವಿದೆ, ಆದರೆ ಬತ್ತಿಯಿಲ್ಲ.

ನಾನಾ—ಅದರಲ್ಲಿ ಜ್ವಾಲೆಯನ್ನು ಉತ್ಪಾದಿಸಲಾಗುವುದಿಲ್ಲವೆ?

ರಾಣಿ—ಹೇಳಲಾಗುವುದಿಲ್ಲ. ನೀನು ಪ್ರಯತ್ನಮಾಡಿದೆಯಾ? ನನಗಾದರೋ ಈಗ ಹೊರಗೆ ಹೋಗಿ ಬರಲು ಸಾಧ್ಯವಿಲ್ಲ.

ತಾತ್ಯಾ—ನಾನು ಇಲ್ಲಿಯೇ ಸುತ್ತಿನೋಡಿದ್ದೇನೆ. ಸಾಮಾನ್ಯವಾಗಿ ಇಲ್ಲಿನ ಯಾವ ರಾಜರಲ್ಲಿಯೂ ಪ್ರಸಂಗವೇರ್ಪಡಲಿಲ್ಲ. ವಾತಾವರಣವೂ ಸಹಕಾರಿಯಾಗಿಲ್ಲ. ರಾಜರುಗಳಾದರೋ ತಮ್ಮ ಸರದಾರರಿಂದಲೂ ಮತ್ತು ಪ್ರಜೆಗಳಿಂದಲೂ ವಂದನೆ ಮಾಡಿಸಿಕೊಳ್ಳುವುದರಲ್ಲೇ ತೃಪ್ತರಾಗಿದ್ದಾರೆ. ಹಾಸ್ಯವಿಲಾಸ ಸುರಾಪಾನಗಳಲ್ಲಿ ಮಗ್ನರಾಗಿದ್ದಾರೆ.

ರಾಣಿ—ವೀರಸಿಂಹದೇವ, ಛತ್ರಸಾಲ ಮತ್ತು ದಳಪತಿಗೆ ಬುಂದೇಲುಖಂಡದ ಭವಿಷ್ಯವು ಬೇರೆ ರೀತಿಯಾಗಿರಬೇಕೆಂಬ ಅಪೇಕ್ಷೆ ಇತ್ತು.

ನಾನಾ—ದಿಲ್ಲಿ ಮತ್ತು ಲಕ್ನೋವಿನ ಪರಿಸ್ಥಿತಿಯು ಸ್ವಲ್ಪ ಉತ್ತಮವಾಗಿದೆ.

ತಾತ್ಯಾ—ರಾಣಿಗೆ ಲಕ್ನೋ ಮತ್ತು ದಿಲ್ಲಿಯ ಸಮಾಚಾರಗಳು ತಿಳಿದು ಬಹಳ ದಿನಗಳಾಗಿವೆ.

ರಾಣಿ—ನೀವು ನನ್ನನ್ನು ರಾಣಿಯೆಂದು ಸಂಬೋಧಿಸಬೇಡಿ. ಅದು ಚೆನ್ನಾಗಿರುವುದಿಲ್ಲ.

ತಾತ್ಯಾ—"ಬಾಯಿಸಾಹೇಬ್" ಎಂದು ಕರೆಯುವೆನು.

ನಾನಾ—ಡಿಲ್ಲಿಯ ಸಮಾಚಾರವನ್ನು ನಾನು ಹೇಳುತ್ತೇನೆ. ಬಾದಷಹನು ವೃದ್ಧನು. ತನ್ನ ಪರಿಸ್ಥಿತಿಯನ್ನು ನೋಡಿ ಪರಿತಾಪ ಪಡುತ್ತಾನೆ. ಮನಸ್ಸಿನ ದುಗುಡವನ್ನು ಕವಿತೆಗಳನ್ನು ರಚಿಸುವುದರ ಮೂಲಕ ಸಹಿಸಿಕೊಳ್ಳುತ್ತಿರುವನು. ಅವನ ಮಕ್ಕಳು ಮುಂದೆ ಏಳಿಗೆಗೆ ಬರುವ ಸೂಚನೆಕೊಡುತ್ತಾರೆ. ಆದರೆ ಯಾವಾಗಲೂ ದಿಲ್ಲಿಯ ರಾಜಕುಮಾರರಿಗೆ ಕುಟ್ಟಿಹುಳದ ರೋಗವು ಹಿಡಿಯುವುದು ಸರ್ವೇಸಾಧಾರಣ. ಅದು ಇವರಿಗೆ ಯಾವಾಗ ಹಿಡಿಯುವುದೋ ದೇವರೆ ಬಲ್ಲ.

ರಾಣಿ—ಗವಾಲಿಯರ್ ?

ನಾನಾ—ರಾಜನು ಇನ್ನೂ ಬಾಲಕ. ಆಂಗ್ಲೇಯರು ರಾಜ್ಯಾಡಳಿತವನ್ನು ನಡೆಸುತ್ತಿರುವರು.

ರಾಣಿ—ಇಂದೋರ್ ?

ತಾತ್ಯಾ—ಇಂದೋರಿಗೆ ಹೋಗಿದ್ದೆ. ಅಲ್ಲಿ ಎಲ್ಲವೂ ನುಚ್ಚುನೂರಾಗಿರುವುದು.

ರಾಣಿ—ಹೈದರಾಬಾದು ?

ತಾತ್ಯಾ—ಅಲ್ಲಿಗೆ ಹೋಗಲಿಲ್ಲ. ಆದರೆ ಇಷ್ಟು ಮಾತ್ರ ಹೇಳಬಲ್ಲೆ. ನಿಜಾಮನು ಆಂಗ್ಲೇಯರ ಪರಮಭಕ್ತನಾಗಿ ನಿಂತಿದ್ದಾನೆ. ಆದರೆ ಪ್ರಜೆಗಳು ಮಾತ್ರ ನಮ್ಮ ಕಡೆಗಿದ್ದಾರೆ.

ರಾಣಿ—ಪಂಜಾಬಿನ ಸಿಖ್ಖ ಸಂಸ್ಥಾನಗಳು ?

ನಾನಾ—ನಾನು ಅಲ್ಲಿ ಕೆಲವು ಪ್ರದೇಶಗಳನ್ನು ನೋಡಿ ಬಂದಿದ್ದೇನೆ. ಸಿಖ್ಖರಲ್ಲಿ

ಆಂಗ್ಲೇಯರನ್ನು ನಾಶಪಡಿಸುವ ಶಕ್ತಿ ಇದ್ದಾಗ್ಯೂ ಅವರ ಸೈನ್ಯರಚನೆಯು ಸಮರ್ಪಕವಾಗಿಲ್ಲದೆ ರಾಜನೂ ಸ್ವಾರ್ಥಪರನಾದುದರಿಂದ ಆಂಗ್ಲೇಯರಿಗೆ ಆ ಪಕ್ಷದಿಂದ ಯಾವ ವಿಧವಾದ ಚಿಂತೆಯೂ ಇಲ್ಲ.

ರಾಣಿ—ಝಾನ್ಸಿಯಲ್ಲಂತೂ ಈಗ ಏನೇನೂ ಇಲ್ಲ. ಅಲ್ಪಸ್ವಲ್ಪವೇನಿದ್ದರೂ ಅದೂ ಕೈಬಿಟ್ಟುಹೋಗುವಂತಿದೆ.

ನಾನಾ—ನಮಗಾದರೋ ಎಲ್ಲವೂ ಝಾನ್ಸಿಯಲ್ಲಿಯೇ ಇದೆ.

ಮನೂ—ಬಾಯಿಸಾಹೇಬ್, ನಮ್ಮೆಲ್ಲರಿಗೂ ಝಾನ್ಸಿಯು ಆಶಾದಾಯಕವಾಗಿದೆ.

ರಾಣಿಯ ಮುಖದಲ್ಲಿ ಮಂದಹಾಸವು ಕ್ಷಣಮಾತ್ರ ತೋರಿಬಂದು "ಏನು ನಿಮ್ಮ ಆಶೆ?"

ತಾತ್ಯಾನು "ದಾಮೋದರರಾಯನ ದತ್ತುಸ್ವೀಕಾರವು ಸ್ಥಿರವಾಗುವುದೆಂಬ ಆಶೆಯಿದೆ. ಎಲಿಸ್ಸನು ಇದಕ್ಕೆ ವಿರುದ್ಧವಾಗಿಯೇ ಪತ್ರ ಬರೆದಿದ್ದಾನೆ. ಆದರೆ ಕಲ್ಕತ್ತೆಯಲ್ಲಿ ನಮ್ಮ ಮಿತ್ರರು ಹಲವರಿದ್ದಾರೆ. ಅವರು ನಮಗೆ ಖಂಡಿತವಾಗಿಯೂ ಸಹಾಯವನ್ನೆಸಗುವರು" ಎಂದನು.

ರಾಣಿಯು "ಎಲಿಸ್ಸ್, ಮಾಲ್ಕಮ್ ಇವರೆಲ್ಲರೂ ಒಂದೇ ಗುಂಪಿಗೆ ಸೇರಿದವರು. ಇವರೆಲ್ಲರೂ ತಮ್ಮ ಗೌರ್ನರ್ ಸಾಹೇಬನ ಕಣ್ಣುಸನ್ನೆಯ ಮೇರೆ ನಡೆಯುವರು. ನಾನೂ ಇಲ್ಲಿಂದ ಪೂರ್ಣಚಂದ್ರನೆಂಬ ಒಬ್ಬ ಬಂಗಾಲಿ ಬಾಬುವನ್ನು ಕಲ್ಕತ್ತೆಗೆ ಕಳುಹಿಸಿರುವೆನು. ಆತನು ಆಂಗ್ಲೇಯ ಭಾಷೆಯನ್ನು ಚೆನ್ನಾಗಿ ಬಲ್ಲನು. ಅವನು ಗೌರ್ನರ್ ಜನರಲ್ ಸಾಹೇಬರೊಂದಿಗೆ ಮೊಕ್ತಾ ಮಾತನಾಡಿ ನಮ್ಮ ಅರಿಕೆಯನ್ನು ವಿಶದಪಡಿಸುವನು. ಏನು, ಕಂಪೆನಿ ಸರ್ಕಾರದ ಗೌರ್ನರ್ ಜನರಲ್ ಸಾಹೇಬನು ನಮ್ಮ ಅಷ್ಟು ದೊಡ್ಡ ಸಂಧಿ ಪತ್ರವನ್ನು ನಿರ್ಮೂಲಮಾಡಿಬಿಡುವನೆ?"

ತಾತ್ಯಾನು ರಾಣಿಯ ಸಖಿಯರ ಕಡೆಗೆ ನೋಡಿದನು. ರಾಣಿಯು ಅರ್ಥವನ್ನು ಗ್ರಹಿಸಿ "ಈ ಮೂವ್ವರೂ ನನ್ನ ಅತ್ಯಂತ ವಿಶ್ವಾಸಪಾತ್ರರು. ಯಾವ ಸಂಶಯವೂ ಇಲ್ಲದೆ ಮಾತನಾಡು" ಎಂದು ಹೇಳಿದಳು.

ನಾನಾ "ಅದು ನನಗೆ ಗೊತ್ತು. ಇವರು ಮರಾಠರು" ಎಂದನು.

ರಾಣಿಯು "ಹೆಚ್ಚುಕಡಿಮೆ ಝಾನ್ಸಿಯ ಎಲ್ಲಾ ಸ್ತ್ರೀಯರಲ್ಲಿಯೂ ನಂಬಿಕೆಯನ್ನಿಡಬಹುದು. ಅದರಲ್ಲೂ ಈ ಮೂವರು ಸ್ತ್ರೀ ರತ್ನಗಳು" ಎಂದಳು.

ನಾನಾ ಹೇಳಿದನು "ಬಾಯಿಸಾಹೇಬ್, ಈಗ ಗೌರ್ನರ್ ಜನರಲ್ ಮತ್ತು ಆತನ ಸಹಚರರು ಆಚಂದ್ರಾರ್ಕವಾಗಿ ಇರಬೇಕಾದ ಸಂಧಿಯನ್ನು ಸಂಪೂರ್ಣವಾಗಿ ಮೂಳೆಗೊತ್ತುತ್ತಿರುವರು. ಇವರು ಯಾವುದನ್ನೂ ಪವಿತ್ರವಾಗಿ ಗಣಿಸುವುದಿಲ್ಲ.

ಇವರ ಬರವಣಿಗೆಯಲ್ಲಾಗಲೀ, ಇವರ ಮಾತಿನಲ್ಲಾಗಲಿ, ಯಾವ ಭರವಸೆಯೂ ಇಲ್ಲ. ನಮ್ಮ ವಾರ್ಷಿಕವೇತನ ನಿಷ್ಕರ್ಷೆಯಾಗುವ ಸಮಯದಲ್ಲಿ ವರ್ಷಕ್ಕೆ ೮ ಲಕ್ಷ ರೂಪಾಯಿಗಳ ಮೇರೆ ೩೦–೩೫ ವರ್ಷಗಳಲ್ಲಿ ೩ ಕೋಟಿ ರೂಪಾಯಿಗಳಾಗುವುದೆಂದು ಹೇಳಿದರಲ್ಲಾ ಅದನ್ನು ಎಲ್ಲಿಟ್ಟಿರುವರು? ಇವರನ್ನು ಎಂದಿಗೂ ನಂಬಬಾರದು."

ರಾಣಿಯು ಹುಸಿನಗೆ ನಗುತ್ತಾ "ಇವರೇನು ಗುಣಿಸಿ ಲೆಖ್ಖಾಚಾರ ಮಾಡುವುದರಲ್ಲಿ ಗಣಿತವನ್ನೇ ತಲೆಕೆಳಗುಮಾಡುವಂತಿದೆಯಲ್ಲಾ" ಎಂದಳು.

ನಾನಾ ಸ್ವಲ್ಪ ನಕ್ಕನು.

ತಾತ್ಯಾನು ಉತ್ತರವಿತ್ತನು. "ಬಾಯಿಸಾಹೇಬ್, ಇವರು ತಮ್ಮ ಸ್ವಾರ್ಥಪರತೆಯಲ್ಲಿ ನಿಷ್ಣಾತರಾಗಿದ್ದಾರೆ. ಎಲ್ಲಿಯವರೆಗೆ ಈ ಸ್ವಾರ್ಥಕ್ಕೆ ಧಕ್ಕೆಬರುವುದಿಲ್ಲವೋ ಅಲ್ಲಿಯವರೆಗೆ ಹರಿಶ್ಚಂದ್ರ ಮತ್ತು ಯುಧಿಷ್ಠಿರರಂತೆ ನ್ಯಾಯವರ್ತಿಗಳಾಗಿರುತ್ತಾರೆ. ಆದರೆ ಯಾವಾಗ ಸ್ವಾರ್ಥಕ್ಕೆ ಚ್ಯುತಿಯುಂಟಾಗುವುದೆಂದು ತೋರುವುದೋ ಆಗ ಒಡನೆಯೆ ಅವರು ತಮ್ಮ ಮತವನ್ನು ಬದಲಿಸುವರು. ಇವರೆಂತಹ ಠಕ್ಕರೆಂದರೆ ನ್ಯಾಯದೊರಕುವ ಅಥವಾ ದೊರೆಕಿಸುವ ಸೋಗುಹಾಕಿ ಅದೇ ಸೋಗಿನಲ್ಲಿ ಸ್ವಾರ್ಥಸಾಧನೆ ಮಾಡಿಕೊಳ್ಳುವರು. ನೋಡಿದಿರಾ! ಹೇಗೆ ಹೇಸ್ಟಿಂಗ್ಸನು ಔಧಿನ ಬೇಗಮ್ಮರವರನ್ನು ಲೂಟಿಮಾಡಿದನು? ಕೆಲವು ಆಂಗ್ಲೇಯರು ಅದರ ಮೇಲೆ ಮೊಕದ್ದಮೆಯನ್ನು ಹೂಡಿದರು. ಮತ್ತೆ ಕೆಲವರು ಅವನನ್ನು ಸನ್ಮಾನಿಸಿದರು" ಎಂದನು.

ರಾಣಿಯು "ಲಕ್ನೋವಿನ ಸಮಾಚಾರವೇನು?" ಎಂದು ಕೇಳಿದಳು. "ಮುಂಚಿನ ವಿಷಯವನ್ನು ತಾತ್ಯಾ ಮೊದಲೇ ಹೇಳಿದನಲ್ಲಾ. ಈಗ ಅಲ್ಲಿ ಎಲ್ಲವೂ ಶೂನ್ಯವಾಗಿದೆ. ಪ್ರಜೆಗಳು ನಿಸ್ಸಾರ ಜೀವಿಗಳಾಗಿದ್ದಾರೆ." ಎಂದು ನಾನಾ ಉತ್ತರವಿತ್ತನು.

ರಾಣಿಯು ಸ್ವಲ್ಪಯೋಚಿಸಿ "ನಾನು ಈ ಎಲ್ಲಾ ವಿಚಾರಗಳನ್ನು ಕೇಳಿ ಒಂದು ನಿರ್ಧಾರಕ್ಕೆ ಬಂದಿರುವೆನು—ಪ್ರಜೆಗಳ ಮನಸ್ಸನ್ನು ಇನ್ನೂ ಸಂಪೂರ್ಣವಾಗಿ ಅರಿಯಲಾಗಿಲ್ಲ. ಜನತೆಯೇ ಎಲ್ಲಕ್ಕಿಂತ ಮಿಗಿಲಾದ ಶಕ್ತಿ. ಅದು ಅಕ್ಷಯವೆಂದು ನನ್ನ ನಂಬಿಕೆ. ಛತ್ರಪತಿ ಶಿವಾಜಿಯು ಈ ಜನತೆಯ ಭರವಸೆಯ ಮೇಲೆಯೇ ಡಿಲ್ಲಿ ಸರ್ಕಾರವನ್ನು ಅಲ್ಲಾಡಿಸಿದನು. ರಾಜರ ಬೆಂಬಲದಿಂದ ಈ ಕಾರ್ಯವನ್ನು ಸಾಧಿಸಲಿಲ್ಲ. ಪ್ರಜೆಗಳು ಸಾಮಾನ್ಯ ರೈತರಾಗಿದ್ದರು. ಈಗಲೂ ಹಾಗೆಯೇ ಇದ್ದಾರೆ. ಅವರ ನೇಗಿಲಮೂಕಿಯಲ್ಲಿ ಸ್ವರಾಜ್ಯ ಮತ್ತು ಸ್ವತಂತ್ರತೆಯ ಅಪೇಕ್ಷೆಯು ಅಡಕವಾಗಿದೆ. ನಮ್ಮ ಪ್ರಜೆಗಳೂ ಕೂಡ ಇದೇ ರೀತಿಯಿರುವರೆಂದು ನಂಬಿದ್ದೇನೆ. ಅವರಿಗೆ ಛತ್ರಪತಿಯು ಮುಂದಾಳಾದನು. ನೀವು ಇಲ್ಲಿಯ ಜನರಿಗೆ ಮುಂದಾಳಾಗಿರಿ" ಎಂದು ನುಡಿದಳು.

ಅವರಿಬ್ಬರೂ ತಲೆತಗ್ಗಿಸಿ ಯೋಚನಾಪರರಾದರು.

ರಾಣಿಯು ತನ್ನ ಸಖಿಯರನ್ನು ಕುರಿತು "ನೀವೇನು ಹೇಳುತ್ತೀರಿ?" ಎಂದು ಕೇಳಿದಳು.

ಸುಂದರಿಯು ಒಡನೆಯೇ "ಸರ್ಕಾರ್, ನಾನಾದರೋ ಸಿದ್ಧಳಾಗಿದ್ದೇನೆ. ತಮ್ಮ ಆಜ್ಞೆಯನ್ನು ಪಾಲಿಸುತ್ತಾ ಹಿಂದುಮುಂದು ನೋಡದೆ ಸಾಯಲು ಸಿದ್ಧಳಿದ್ದೇನೆ" ಎಂದು ಉತ್ತರವಿತ್ತಳು.

ನಾನಾವು "ಬಾಯಿಸಾಹೇಬ್, ನೀನು ಸರಿಯಾಗಿ ಮಾತನಾಡಿದೆ. ಇದು ವರೆಗೂ ನಾವು ಪ್ರಜೆಗಳ ಬಳಿ ಸುಳಿದಿಲ್ಲ. ಜನತೆಯು ಶೀಘ್ರವಾಗಿ ಜಾಗ್ರತೆಗೊಳ್ಳುವು ದೆಂಬ ಭರವಸೆಯಿದೆ. ಆದರೆ ಅವರು ನಾಯಕರಿಲ್ಲದೇ ಏನೂ ಮಾಡಲಾಗುವುದಿಲ್ಲ" ಎಂದನು.

ರಾಣಿಯು "ಸ್ವಯಂ ನಾಯಕನಾದವನು ಮತ್ತೊಬ್ಬ ನಾಯಕನನ್ನು ಹುಡುಕುವ ಅವಶ್ಯಕತೆಯಿಲ್ಲ. ಸಮರ್ಥ ರಾಮದಾಸರ ಆಶೀರ್ವಾದವು ನಾಯಕನನ್ನು ವಿಳಂಬ ಮಾಡದೆ ಉತ್ಪನ್ನಮಾಡಿಕೊಡುವುದು" ಎಂದಳು.

ನಾನಾ—ಅರ್ಥವಾಯಿತು, ನಿರಾಶೆಪಡಲು ಕಾರಣವಿಲ್ಲ.

ರಾಣಿ—ಅಹುದು. ಯಾವ ಸಾಧನವು ಎಲ್ಲಿ ದೊರಕುವುದೋ ಅದನ್ನು ಉಪಯೋಗಿಸಬೇಕು. ಜನತೆಯು ಎಲ್ಲಕ್ಕಿಂತಲೂ ಮುಖ್ಯವಾದ ಸಾಧನ. ರಾಜಮನೆ ತನಗಳು ಒಂದೆರಡು ತಲೆಮೊರ ಮಾತ್ರ ಯೋಗ್ಯವಾದವು. ಆದರೆ ಜನತೆಯ ಪೀಳಿ ಗೆಯ ಯೋಗ್ಯತೆಯು ಕುಂದುವುದೇ ಇಲ್ಲ.

ನಾನಾ—ಈಗ ಮತ್ತೊಂದು ಪ್ರಶ್ನೆಯಿದೆ. ಒಂದು ವೇಳೆ ನೀನು ಅಧಿಕಾರ ವಹಿಸುವುದನ್ನು ಗೌರ್ನರ್ ಜನರಲ್ ಸಾಹೇಬನು ಒಪ್ಪಿದರೆ ಆಗ ನಮ್ಮ ಸ್ವರಾಜ್ಯ ಪ್ರಾಪ್ತಿಯ ಉಪಾಯವನ್ನು ಕಾರ್ಯಗತಮಾಡಲು ಅನುಕೂಲವಿರುತ್ತದೆ. ಆದರ ಆತನು ನಾನು ಅನುಮಾನಿಸಿರುವಂತೆ ಸಮ್ಮತಿಸದೇ ಹೋದರೆ ಆಗ ಯಾವ ರೀತಿ ಯಾಗಿ ಕಾರ್ಯವನ್ನು ಸಾಧಿಸುವುದು?

ರಾಣಿ—ಗೌರ್ನರ್ ಜನರಲ್ ಸಾಹೇಬನು ಒಪ್ಪುವುದಿಲ್ಲವೆಂದು ನಾನು ಒಂದು ಕ್ಷಣವೂ ಅನುಮಾನಿಸುವುದಿಲ್ಲ. ಅವನು ಸಮ್ಮತಿಸದಿದ್ದರ ಬಲಾತ್ಕಾರದಿಂದ ಒಪ್ಪಿ ಸಲು ಯತ್ನಿಸುವೆನು. ಝಾನ್ಸಿಯ ಪ್ರಜೆಗಳೆಲ್ಲರೂ ನನ್ನ ಪರವಾಗಿರುವರು. ಅವರ ಸಂಖ್ಯೆಯು ಮಹಾರಾಷ್ಟ್ರದ ಮಾವಳೇಯರಿಗಿಂತ ಹೆಚ್ಚಾಗಿಯೇ ಇದೆ. ಬುಂದೇಲು ಖಂಡದಲ್ಲಿ ಬ್ರಾಹ್ಮಣರಿಂದ ಹಿಡಿದು ಭಂಗಿಯವರೆಗೂ ಎಲ್ಲರೂ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಬಲ್ಲರು. ಅಲ್ಲದೆ ಅವುಗಳನ್ನು ಉಪಯೋಗಿಸಲು ಹಾತೊರೆಯುತ್ತಿರುವರು.

ರಾಣಿಯು ಈ ಮಾತುಗಳನ್ನಾಡಿದಾಗ ಅವಳ ಮುಖವು ತೇಜಃಪೂರಿತವಾಗಿ ಆ ಇಬ್ಬರು ಪುರುಷರ ಮನಸ್ಸಿನಲ್ಲಿಯೂ ಸಂತೋಷ ಲಹರಿಯು ಹರಿದೋಡಿತು.

ತಾತ್ಯಾ—ಆಂಗ್ಲೇಯರ ಸೇನೆಯಲ್ಲಿ ನೌಕರಿಯಲ್ಲಿರುವ ಹಿಂದೂ ಮುಸಲ್ಮಾನರೆಲ್ಲರನ್ನೂ ಪರೀಕ್ಷಿಸಿ ನೋಡುತ್ತೇನೆ.

ರಾಣಿ—ಈಗಲೇ ಬೇಡ. ಮೊದಲು ಅವರು ಜನ್ಮ ತಾಳಿದ, ಬಾಲ್ಯವನ್ನು ಕಳೆದ, ಗೃಹಗಳಲ್ಲಿ ಈ ವಿಚಾರವನ್ನು ಸೂಕ್ಷ್ಮವಾಗಿ ಪ್ರಸ್ತಾಪಿಸಿ ಪರಿಶೀಲಿಸು.

ನಾನಾ—ಗೌರ್ನರ್ ಜನರಲ್ ಸಾಹೇಬನಿಂದ ಬರುವ ಉತ್ತರವು ನಿನಗೆ ಪ್ರತಿಕೂಲವಾದರೆ ಒಡನೆಯೇ ಯುದ್ಧವನ್ನು ಆರಂಭಿಸುವೆಯಾ ?

ರಾಣಿ—ಬಿಟ್ಟೂರಿನಿಂದ ಝಾನ್ಸಿಗೆ ಬಂದನಂತರ ಅನೇಕ ವಿಚಾರಗಳನ್ನು ಅರಿತಿರುವೆನು. ಸಮಯವು ಒದಗಿದಾಗ ಉತ್ತರ ಕೊಡುವೆನು.

ರಾಣಿಯು ತನ್ನ ಮುಂದಿನ ಕಾರ್ಯಕ್ರಮವನ್ನು ಸ್ಥಿರಪಡಿಸಿಕೊಂಡು ಉಚಿತ ಸಮಯಕ್ಕಾಗಿ ಕಾಯುತ್ತಿರುವಳೆಂದು ಅವರಿಬ್ಬರಿಗೂ ಮನದಟ್ಟಾಯಿತು.

## ೨೯

ಮುಂಜಾನೆ ನಡುಗುತ್ತಿರುವ ಛಳಿಯಲ್ಲಿ ಸೂರ್ಯನು ಮೋಡಗಳ ಹಿಂದೆ ಅವಿತಿದ್ದಾಗ ನವಾಬ್ ಆಲಿಬಹದ್ದೂರನು ತನ್ನ ಸೇವಕ ಪೀರ್‌ಆಲಿಯನ್ನು ಜೊತೆಯಲ್ಲಿ ಕರೆದುಕೊಂಡು ಆನೆಯಮೇಲೆ ಕುಳಿತು ಎಲಿಸ್ಸನ ಮನೆಯನ್ನು ತಲಪಿದನು. ಆತನ ನಿವಾಸಸ್ಥಾನ ಈಗ ಡಿಸ್ಟ್ರಿಕ್ಟ್ ಜಡ್ಜರ ಕಛೇರಿಯಾಗಿದೆ.

ಎಲಿಸ್ಸನು ಆಲಿಬಹದ್ದೂರನ ಮನೆಗೆ ಆಗಾಗ್ಗೆ ಹೋಗಿಬರುತ್ತಿದ್ದನು. ಆಲಿಬಹದ್ದೂರನು ಎಲಿಸ್ಸನನ್ನು ತನ್ನ ಮಿತ್ರನೆಂದು ಭಾವಿಸಿದ್ದರೂ ಖುಷಾಮತಿ ಮಾಡುವುದರಲ್ಲಿ ಹಿಂದೆಗೆಯುತ್ತಿರಲಿಲ್ಲ.

ಅವರುಗಳು ಆನೆಯಿಂದ ಇಳಿಯುತ್ತಲೇ ಎಲಿಸ್ಸನ ನೌಕರನು ಹತ್ತಿರಕ್ಕೆ ಓಡಿಬಂದನು. ೧೯ ನೇ ಶತಮಾನದ ಅಂತ್ಯದವೇಳೆಗೆ ಆಂಗ್ಲೇಯ ಸಾಹೇಬರ ನೌಕರರ ಮತ್ತು ಪರಿಚಾರಕರ ಯಾವ ಪದಗೌರವವು ಅತ್ಯುನ್ನತ ಪರಿಮಿತಿಯನ್ನು ಮುಟ್ಟಿದ್ದಿತೋ ಅದು ಆಗತಾನೆ ಪ್ರಾರಂಭವಾಗುತ್ತಿದ್ದಿತು.

ನೌಕರನು ಬಾಗಿ ಸಲಾಮು ಮಾಡಿದನು. ಆಲೀಬಹದ್ದೂರನು ಮಂದಹಾಸದಿಂದ "ಸಾಹೇಬರು ಏನು ಮಾಡುತ್ತಿದ್ದಾರೆ? ಹೆಚ್ಚು ಕೆಲಸವಿಲ್ಲದಿದ್ದರೆ ಅವರನ್ನು ಭೇಟಿಮಾಡಲು ಅಪೇಕ್ಷಿಸುತ್ತೇನೆ" ಎಂದು ಹೇಳಿದನು.

ನೌಕರನು ಉತ್ತರಕೊಡುತ್ತಾ "ಏನೂ ಇಲ್ಲ ಹುಜೂರ್, ಈಗ ತಾನೆ ಆಫೀಸಿನಲ್ಲಿ ಬಂದು ಕುಳಿತಿದ್ದಾರೆ. ಹುಕ್ಕಾ ಸೇವಿಸುತ್ತಿದ್ದಾರೆ. ಒಡನೆಯೇ ತಿಳಿಸುತ್ತೇನೆ." ಎಂದು ಹೇಳಿ ಒಳಗೆ ಹೋದನು.

ಕೆಲವು ಹೊತ್ತಿನನಂತರ ಆಲೀಬಹದ್ದೂರ್‌ನನ್ನು ಎಲಿಸ್ಸನು ಕೊಠಡಿಗೆ ಕರೆದೊಯ್ದನು. ಅಭಿವಾದನ ಕುಶಲ ಪ್ರಶ್ನೆಗಳಾದನಂತರ ಅವರಿಬ್ಬರಲ್ಲಿ ಮಾತು ಕಥೆಗಳಿಗೆ ಆರಂಭವಾಯಿತು.

ಆಲೀಬಹದ್ದೂರನು "ರಾಣಿಯ ಅರ್ಜಿಗೆ ಯಾವ ಪ್ರತ್ಯುತ್ತರವೂ ಬರಲಿಲ್ಲ. ಬಹುಶಃ ಅದು ನಿರಾಕರಿಸಲ್ಪಟ್ಟಿರಬಹುದು" ಎಂದು ಹೇಳಿದನು.

ಎಲಿಸ್ಸನು "ಹೇಳಲಾಗುವುದಿಲ್ಲ. ನೀವೇಕೆ ಆ ರೀತಿ ಭಾವಿಸುತ್ತೀರಿ?" ಎಂದು ಕೇಳಿದನು.

ಆಲಿಬಹದ್ದೂರನು "ಸಂಸ್ಥಾನದ ಅವ್ಯವಸ್ಥೆಗಳನ್ನು ನೋಡಿ ಜನತೆಯ ಏಳಿಗೆಯ ದೃಷ್ಟಿಯಿಂದ ಸರ್ಕಾರವು ಅನೇಕ ರಾಜವಾಡೆಗಳಲ್ಲಿ ತನ್ನ ಅಧಿಕಾರ ವ್ಯವಹಾರಗಳನ್ನು ಜಾರಿಗೆ ತಂದಿದೆ. ಆದುದರಿಂದ ಒಂದು ವೇಳೆ ಝೂನ್ಸಿಯಲ್ಲಿಯೂ ಅದೇ ರೀತಿ ಬಂದೋಬಸ್ತು ಏರ್ಪಡಬಹುದು ಎಂದು ಭಾವಿಸಿದೆ" ಎಂದನು.

ಸಭ್ಯತೆಯಿಂದ ಎಲಿಸ್ಸನು ಉತ್ತರವಿತ್ತನು "ನನಗೆ ತಿಳಿಯದು ನವಾಬ್ ಸಾಹೇಬ್. ಒಂದು ವೇಳೆ ಹಾಗಾದರೆ ಇಲ್ಲಿನ ಪ್ರಜೆಗಳು ಸರ್ಕಾರಿ ಆಜ್ಞೆ ಮತ್ತು ಕಾನೂನುಗಳನ್ನು ಇಷ್ಟಪಡುವರೆ?"

ಆಲಿಬಹದ್ದೂರನು ಮಧುರ ಸ್ವರದಿಂದ "ಎರಡು ಕೈಗಳಿಂದಲೂ ಸ್ವೀಕರಿಸುವರು. ಸ್ವರ್ಗಸ್ಥನಾದ ರಾಜನ ಕಾಲದಲ್ಲಿ ನಡೆದ ಅತ್ಯಾಚಾರಗಳನ್ನು ಅವರು ಸುಲಭದಲ್ಲಿ ಮರೆಯಲಾರರು." ಎಂದನು.

ಎಲಿಸ್ಸನು ಮಹಾಸತ್ಯವಂತನಂತೆ "ನಾನೂ ಕೇಳಿದ್ದೇನೆ, ಸಾಧಾರಣ ಅಪರಾಧಿಗಳಿಗೆ ಚೇಳುಗಳಿಂದ ಕುಟುಕಿಸುತ್ತಿದ್ದನಂತೆ. ಆದರೆ ಆತನು ಸಾಯುವವರೆಗೂ ಆ ವಿಚಾರವಾಗಿ ಯಾವ ದೂರೂ ನನ್ನ ಕಿವಿಗೆ ಮುಟ್ಟಲಿಲ್ಲ" ಎಂದು ಹೇಳಿದನು.

ಎಲಿಸ್ಸನಿಗೆ ನವಾಬ್‌ಸಾಹೇಬರಂತಹ ಹಿಂದೂಸ್ಥಾನಿಯರ ಮನಸ್ಸಿನಲ್ಲಿರುವುದನ್ನು ಹೊರಗೆಳೆಯುವ ಚಾತುರ್ಯವಿದ್ದಿತು. ಆತನು ಆಲಿಬಹದ್ದೂರನೆಡೆಗೆ ನೋಡಲಾರಂಭಿಸಿದನು.

ನವಾಬನು "ಚಿಕ್ಕ ಪುಟ್ಟ ಫಿರ್ಯಾದುಗಳನ್ನೆಲ್ಲಾ ನಿಮ್ಮ ಸಮ್ಮುಖಕ್ಕೆ ತರುವುದಾದರೆ ನಿಮ್ಮ ಮರ್ಯಾದೆಗೆ ಕುಂದುಂಟಾಗುವುದು. ಹಿಂದೆ ಮಾಡಿದ ಅತ್ಯಾಚಾರಗಳು ಎಷ್ಟು ಘೋರವಾಗಿವೆಯೆಂದರೆ, ಹಿಂಸೆಗೊಳಗಾದ ಜನರು ಇನ್ನೂ ಚೇತರಿಸಿಕೊಳ್ಳುತ್ತಿದ್ದಾರೆ" ಎಂದನು.

ಎಲಿಸ್ಸನು ಉತ್ಸುಕತೆಯನ್ನು ಪ್ರಕಟಿಸದೆ "ನವಾಬ್, ನನಗೆ ಹಿಂಸೆಗೊಳಗಾದ ಜನರ ಪರಿಚಯವಿಲ್ಲ" ಎಂದನು.

ಆಲಿಬಹದ್ದೂರನು "ಕಡೆಪಕ್ಷ ಒಬ್ಬನಿಗಾದರೂ ಆದ ಅನ್ಯಾಯವನ್ನು ಕೇಳಿ.

ಆತನ ಹೆಸರು ಖುದಾಬಕ್ಷನೆಂದು. ಮೊಟ್ಟಮೊದಲು ಆತನು ರಾಜನ ಆಪ್ತನಾಗಿದ್ದನು. ನಾಟಕಶಾಲೆಯಲ್ಲಿ ರಾಜನು ಆತನನ್ನು ತನ್ನ ಪಕ್ಕದಲ್ಲಿಯೇ ಕುಳ್ಳಿರಿಸಿ ಕೊಳ್ಳುತ್ತಿದ್ದನು. ಆತನಿಗೆ ಚಿಕ್ಕ ಒಂದು ಜಹಗೀರಿಯನ್ನು ಕೊಟ್ಟಿದ್ದನು. ಒಂದು ದಿನ ಅವನ ಖಯಾಲಿ ಅದಲು ಬದಲಾಗಿ ಅವನನ್ನು ದೇಶಭ್ರಷ್ಟನನ್ನಾಗಿ ಮಾಡಿ ಅವನ ಜಹಗೀರಿಯನ್ನೂ ವಶಪಡಿಸಿಕೊಂಡನು. ಆತನು ಅರ್ಜಿಯನ್ನು ಗುಜರಾಯಿಸುವುದಕ್ಕೆ ಪ್ರಯತ್ನಿಸಿದನು. ಆದರೆ ಅವನಿಗೆ ಅವಕಾಶವೇ ಕೊಡಲಾಗಲಿಲ್ಲ" ಎಂದನು.

"ಆತನು ಕಂಪೆನಿ ಸರ್ಕಾರಕ್ಕೆ ಅರ್ಜಿಯನ್ನೇನಾದರೂ ಕಳುಹಿಸಿರುವನೆ?" ಎಂದು ಎಲಿಸ್ಸನು ಪ್ರಶ್ನಿಸಿದನು.

ಅಲಿಬಹದ್ದೂರನು ಸ್ವಲ್ಪಚಿಂತಿಸಿ "ಜ್ಞಾಪಕವಿಲ್ಲ. ಬಹುಶಃ ಕೊಟ್ಟಿರಲಾರ" ಎಂದು ಉತ್ತರವಿತ್ತನು.

ಆಂಗ್ಲೇಯರಿಗೆ ಇಂತಹ ಸಮಯಗಳಲ್ಲಿ ತಮ್ಮ ಹೆಮ್ಮೆಯನ್ನು ಕೊಚ್ಚಿಕೊಳ್ಳುವುದು ವಾಡಿಕೆಯಾಗಿದ್ದಿತು. ಎಲಿಸ್ಸನು "ಖುದಾಬಕ್ಷನು ಅರ್ಜಿಯನ್ನು ಸಲಿಸಿದ್ದರೆ ಏಜೆಂಟ್ ಸಾಹೇಬರು ಒಂದು ವಿಚಾರಣೆಯನ್ನು ಏರ್ಪಡಿಸುತ್ತಿದ್ದರು." ಎಂದನು.

ಸ್ವಾರ್ಥಪರರಾದ ಹಿಂದೂಸ್ಥಾನೀಯರು ಇಂತಹ ಅವಕಾಶ ದೊರೆತಾಗ ತಮ್ಮ ಸ್ವಾರ್ಥಸಾಧನೆಗೆ ಪ್ರಯತ್ನಿಸುತ್ತಿದ್ದರು.

ನವಾಬನು "ಜನಾಬರ ಸಮ್ಮುಖದಲ್ಲಿ ಖುದಾಬಕ್ಷನು ಅರ್ಜಿಯನ್ನು ಗುಜರಾಯಿಸಬೇ?" ಎಂದು ಕೇಳಿದನು.

ಎಲಿಸ್ಸನು ಸ್ವಲ್ಪ ತೊಡಕಿಗೆ ಸಿಕ್ಕಿಬಿದ್ದನು. ಆದರೆ ಆತನ ವ್ಯಾಪಾರ ಕುಶಲ ಬುದ್ಧಿಯು ಆತನಿಗೆ ಸಹಾಯವೆಸಗಿತು. "ಅರ್ಜಿಯನ್ನು ಖಂಡಿತವಾಗಿ ಕೊಡಿಸು. ಆದರೆ ಅದನ್ನು ಕೈಥಾವಿನಲ್ಲಿರುವ ಮೇಲಧಿಕಾರಿಗಳಿಗೆ ಕಳುಹಿಸಿ ಅದು ಮತ್ತೆ ನನ್ನ ಬಳಿಗೆ ಬಂದನಂತರ ನಾನು ಖಚಿತವಾದ ಏರ್ಪಾಡುಮಾಡುವೆನು" ಎಂದು ಹೇಳಿದನು.

ಇಷ್ಟಕ್ಕೆ ನವಾಬನ ಮನವು ಸಂತುಷ್ಟಿಗೊಂಡಿತು. ಅವನು ಇದನ್ನು ತನ್ನ ಮುಖದಲ್ಲಿಯೇ ಪ್ರಕಟಿಸಿದನು. ಮುಗುಳ್ನಗೆ ನಗುತ್ತಾ ಬಹಳ ಮೃದುಸ್ವರದಿಂದ "ನನ್ನ ಜಾತಿಗೆ ಸಂಬಂಧಪಟ್ಟ ಒಂದು ವಿನಂತಿಯಿದೆ" ಎಂದನು.

ಎಲಿಸ್ಸನು ಪ್ರಸನ್ನ ಮುಖ ಮುದ್ರೆಯಿಂದ "ಖಂಡಿತವಾಗಿ ತಿಳಿಸಿ, ನವಾಬರೇ" ಎಂದನು.

ಆಲೀಬಹದ್ದೂರನು ಮುಖ್ಯವಾಗಿ ಯಾವಕಾರಣದಿಂದ ಬಂದಿದ್ದನೋ ಅದನ್ನು ಪ್ರಕಟಿಸಿದನು "ತಾವು ಹಳೆಯ ಕಡತಗಳನ್ನು ಪರಿಶೀಲಿಸಿರಬಹುದು. ನನ್ನ

ಸ್ವರ್ಗೀಯ ಪಿತನಾದ ರಾಜರಘುನಾಥ ಸಾಹೇಬರು ನನಗೆ ೬೫ ಹಳ್ಳಿಗಳನ್ನು ಜಹಗೀರಾಗಿ ಕೊಟ್ಟಿದ್ದರು. ಕಂಪೆನಿ ಸರ್ಕಾರದ ಮೇಲ್ವಿಚಾರಣೆಯು ಪ್ರಾರಂಭವಾದ ಮೇಲೆ ಆ ಜಹಗೀರನ್ನು ನನ್ನಿಂದ ತೆಗೆದುಕೊಂಡು ತಿಂಗಳಿಗೆ ೫೦೦ ರೂಪಾಯಿ ವೇತನವನ್ನು ಮಂಜೂರು ಮಾಡಲಾಯಿತು. ನನಗೆ ದೊಡ್ಡ ಸಂಸಾರವಿದೆ. ನನ್ನ ಮರ್ಯಾದೆಗೆ ತಕ್ಕಂತೆ ಜೀವಿಸುವುದು ಈ ಅಲ್ಪವೇತನದಲ್ಲಿ ಕಷ್ಟವಾಗಿದೆ. ರಾಜಾ ಗಂಗಾಧರರಾಯ ನನ್ನೂ ಪ್ರಾರ್ಥಿಸಿಕೊಂಡಿದ್ದೆ. ಆತನು ಏಜೆಂಟ್ ಸಾಹೇಬರ ಸಲಹೆ ಪಡೆದು ಉತ್ತರ ಕೊಡುವೆನೆಂದು ಹೇಳಿದ್ದನು. ನಂತರ ಅವನ ಪುತ್ರನು ಕಾಲಗತಿಯ್ನನ್ನೈದಿ ಅವನೂ ರೋಗಗ್ರಸ್ತನಾದನು. ಆ ಮಾತು ಅಲ್ಲಿಗೆ ನಿಂತು ಹೋಯಿತು. ಈಗ ಶಾಸನವು ಬದಲಿಸಿದೆ. ಬಹುಶಃ ಆಂಗ್ಲೇಯ ಸರ್ಕಾರವೇ ಕೈವಶ ಮಾಡಿಕೊಳ್ಳಬಹುದು. ಆದುದರಿಂದ ನನ್ನ ಈ ಅರಿಕೆಯನ್ನು ನೆನಪಿನಲ್ಲಿಡಬೇಕು." ಎಲಿಸ್ಸನು ಯೋಚಿಸಲಾರಂಭಿಸಿದನು.

ನವಾಬನು ತಾನು ಬಂದ ಕೆಲಸವು ಸಫಲವಾಗುವುದೆಂದು ಮನಸ್ಸಿನಲ್ಲೇ ಯೋಚಿಸಿದನು. ಈತನು ಖುದಾಬಕ್ಷನ ಪರವಾಗಿ ಮಾತನಾಡುತ್ತಿರುವುದು ಕೇವಲ ನೆಪಮಾತ್ರಕ್ಕಾಗಿ. ಅದನ್ನು ಮುಂದಿಟ್ಟುಕೊಂಡು ತನ್ನ ಸ್ವಂತ ವಿನಂತಿಗಳನ್ನು ಬಿನ್ನವಿಸಿಕೊಳ್ಳಲು ಬಂದನೆಂದು ಎಲಿಸ್ಸನು ಮನಗಂಡನು. ಆದರೆ ಆತನು ಅದರಿಂದ ವ್ಯಗ್ರನಾಗಲಿಲ್ಲ. ತಮ್ಮ ಕೆಲಸವನ್ನು ಸಾಗಿಸಿಕೊಳ್ಳಲು ಒಂದು ಪ್ರಕರಣವೂ ಅವಕಾಶವೂ ಮತ್ತು ಸಾಧನೆಯೂ ಆತನಿಗೆ ದೊರಕಿತು.

ಎಲಿಸ್ಸನು "ನವಾಬ್‌ಸಾಹೇಬರೇ, ನೀವು ನಮಗೆ ಮಿತ್ರರು. ನನ್ನಿಂದ ಕಿಂಚಿತ್ ಸಹಾಯ ಬೇಕಿದ್ದರೂ ಮಾಡಲು ಸಿದ್ಧನಿದ್ದೇನೆ. ತಾವು ಎಲ್ಲಾ ವಿಷಯಗಳನ್ನೂ ವಿಶದಿಸಿ ಅರ್ಜಿಯನ್ನು ಸಲ್ಲಿಸಿ. ಅವಶ್ಯಬಿದ್ದರೆ ಅದನ್ನು ತಾವು ಏಜೆಂಟ್ ಸಾಹೇಬರಿಗೆ ನೇರವಾಗಿಯೇ ಕಳುಹಿಸಿ ಅಥವಾ ನನ್ನ ಮೂಲಕವೆ ಕಳುಹಿಸಿ" ಎಂದನು.

ಈ ವೇಳೆಯಲ್ಲಿ ಆಲಿಬಹದ್ದೂರನಿಗೆ ಖುದಾಬಕ್ಷನ ಯಾವ ಚಿಂತೆಯೂ ಬರಲಿಲ್ಲ. ಸಂತೋಷದಿಂದ ಆತನು ಹೇಳತೊಡಗಿದನು: "ನಾನು ನಿಮಗೆ ಅನಂತ ವಂದನೆಗಳನ್ನರ್ಪಿಸುತ್ತೇನೆ. ದೇವರು ನಿಮಗೆ ಗೌರ್ನರ್ ಜನರಲ್ ಪದವಿಯನ್ನು ಕೊಡಲಿ. ಹುಜೂರಿಗೆ ತಿಳಿದಿರಬಹುದು. ಮಹಾರಾಜ ರಘುನಾಥರಾಯನ ಮಹಲ್ಲು ನನ್ನ ಪಾಲಿಗೆ ಸೇರಿದುದು. ಅದನ್ನು ನನಗೆ ಮಹಾರಾಜರು ದಯಪಾಲಿಸಿದ್ದರು. ಗಂಗಾಧರರಾಯರು ಅದನ್ನು ವಶಪಡಿಸಿಕೊಂಡರು. ಈಗ ಅದು ಯಾವ ಕೆಲಸಕ್ಕೂ ಬಾರದೆ ಬೀಗಮುದ್ರಿತವಾಗಿದೆ."

ಎಲಿಸ್ಸನು "ಆ ವಿಷಯವು ನನಗೆ ತಿಳಿದಿರುವುದು. ಅದು ನಿಮ್ಮ ಸ್ವತ್ತು; ನಿಮಗೇ ದೊರಕುವುದು. ಸ್ವಲ್ಪಕಾಲ ನಿರೀಕ್ಷಿಸಬೇಕು." ಎಂದನು.

ನವಾಬನು ಸಲಾಂ ಮಾಡಿ ಧನ್ಯವಾದಗಳನ್ನರ್ಪಿಸಿ ಹೊರಡುವುದಕ್ಕೆ ಅಪ್ಪಣೆಯನ್ನು ಬೇಡಿದನು.

ಎಲಿಸ್ಸನು ನಗುತ್ತಾ "ಸ್ವಲ್ಪ ಕುಳಿತು ಕೊಳ್ಳಿ ನವಾಬರೇ" ಎಂದನು.

ನವಾಬನಿಗೆ ಮನೆಯಲ್ಲಿತಾನೆ ಏನು ಕೆಲಸವಿದ್ದಿತು?. ಅಂತೆಯೆ ಕುಳಿತು ಕೊಂಡನು.

ಎಲಿಸ್ಸನು ಪುಸಲಾಯಿಸುವ ರೀತಿಯಲ್ಲಿ ಕೇಳಿದನು "ನಿಮ್ಮ ಬಳಿಗೆ ಅನೇಕ ಪುರಜನರು ಬಂದು ಹೋಗುತ್ತಾರೆ. ಸಮಾಚಾರವೇನು?"

"ಅಂತಹ ಒಳ್ಳೆಯ ಸುದ್ದಿಯೇನಿಲ್ಲ. ಜನರು ಬೇಸರಗೊಂಡಿದ್ದಾರೆ. ನಿಜ ಹೇಳುವುದಾದರೆ ಅವರು ಕಂಪೆನಿ ಸರ್ಕಾರದ ಅಧಿಕಾರವನ್ನು ಅಪೇಕ್ಷಿಸುತ್ತಾರೆ."

"ನೀವು ಇನ್ನೂ ಸ್ವಲ್ಪ ಹೆಚ್ಚಾಗಿ ಜನರೊಂದಿಗೆ ಕಲೆತು ಅವರ ಸುಖದುಃಖಗಳ ಪರಿಸ್ಥಿತಿಯನ್ನು ನಮಗೆ ಆಗಿಂದಾಗ್ಗೆ ತಿಳಿಸುತ್ತಿರಿ."

"ಹಾಗೆಯೇ ಮಾಡುವೆನು. ಸುಮಾರು ಎರಡು ಮೂರುದಿನಗಳಿಗೊಮ್ಮೆ ಬಂದು ತಿಳಿಸುವೆನು."

"ರಾಣಿಸಾಹೇಬರ ಸುದ್ದಿಯೇನು? ಆಕೆಯ ಪ್ರಭಾವವೆಂತಹದು ?

"ರಾಣಿಯು ಮುಂಚಿನಂತೆಯೇ ಸಂತೋಷದಿಂದಿರುವಳು. ಕುದುರೆ ಸವಾರಿ, ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುವುದು ಓದುಬರಹದಲ್ಲಿ ಯೋಗ್ಯ...."

"ಅವೆಲ್ಲಾ ನನಗೆ ಗೊತ್ತು. ಆ ವಿಷಯದಲ್ಲಿ ನನಗೆ ಬಹಳ ಮೆಚ್ಚಿಗೆಯುಂಟು. ಆದರೆ ನಾನು ಕೇಳುವುದು ಆಕೆಯ ಬಳಿಗೆ ಯಾರಾದರೂ ವಿದ್ರೋಹಿ ಜನರು ಬಂದು ಹೋಗುತ್ತಿದ್ದಾರೆಯೇ ಎಂದು."

"ಈಗ ಅವಳ ಬಂಧು ವರ್ಗದವರು ಬಂದು ಹೋಗುತ್ತಿದ್ದಾರೆ. ಬಿಟ್ಠೂರಿನಿಂದ ಕೆಲವು ಜನರು ಬಂದಿದ್ದರು ಮತ್ತು ಹೊರಟುಹೋದರು."

"ಈ ಬಂದು ಹೋಗುವವರ ಸುದ್ದಿಯನ್ನು ತಿಳಿಸಿದರೆ ಬಹಳ ಉಪಕಾರವಾಗುವುದು".

"ಹಾಗೆಯೇ ಆಗಲಿ, ಜನಾಬ್. ನನ್ನ ಸೇವಕ ಪೀರ್ ಅಲಿಯು ಬಹಳ ನಂಬಿಕಸ್ತ ಅವನನ್ನು ಈ ಕೆಲಸಕ್ಕೆ ನೇಮಿಸುವೆನು. ನನ್ನ ಜೊತೆಯಲ್ಲಿಯೇ ಆನೆಯ ಮೇಲೆ ಬಂದಿರುತ್ತಾನೆ. ನೀವು ಒಪ್ಪಿದರೆ ಆತನನ್ನು ನಿಮಗೆ ಮೊಖಾಬಿಲೆ ಮಾಡಿಸುತ್ತೇನೆ."

"ಏನೂ ಅವಶ್ಯವಿಲ್ಲ ನವಾಬರೇ. ನಿಮಗೆ ಭರವಸೆಯಿದ್ದನಂತರ ನನಗೂ ಇದೆ".

ಇದರ ನಂತರ ಆಲಿಬಹದ್ದೂರನು ಹೊರಟು ಹೋದನು. ಮನೆಗೆ ಹೋಗುವಾಗ ರಸ್ತೆಯಲ್ಲಿ ಪೀರ್ ಆಲಿಗೆ ಅವನ ಹೊಸ ಕರ್ತವ್ಯವನ್ನು ಹೇಳಿದನು.

ಖುದಾಬಕ್ಷನು ಆಲಿಬಹದ್ದೂರನನ್ನು ಮಹಲ್ಲಿನಲ್ಲಿ ಸಂದರ್ಶಿಸಿದನು. ಅರ್ಜಿ

ಯನ್ನು ಸಲ್ಲಿಸುವಂತೆ ನವಾಬನು ಅವನಿಗೆ ಉಪದೇಶಮಾಡಿದನು. "ಎಲಿಸ್ಸ್ ಸಾಹೇಬನನ್ನು ಬಹಳ ಕಷ್ಟದಿಂದ ಒಪ್ಪಿಸಿದ್ದೇನೆ. ನಿನ್ನ ಅರ್ಜಿಯನ್ನು ಪರಿಶೀಲಿಸಲು ಆತನು ಒಪ್ಪಿದ್ದಾನೆ" ಎಂದು ಹೇಳಿದನು.

ಖುದಾಬಕ್ಷನು "ನಾನು ರಾಣಿಸಾಹೇಬರಲ್ಲಿ ಅರ್ಜಿ ಸಲ್ಲಿಸಿದೆನು. ಅವರು ಝಾನ್ಸಿಯಲ್ಲಿರುವುದಕ್ಕೆ ಅಪ್ಪಣೆಯಿತ್ತಿದ್ದಾರೆ. ಗೌರ್ನರ್ ಜನರಲ್‌ರವರಿಂದ ಅಧಿಕಾರ ಪ್ರಾಪ್ತಿಯಾದ ಒಡನೆಯೇ ನನ್ನ ಜಹಗೀರಿಯನ್ನು ಹಿಂದಿರುಗಿಕೊಡಲು ಒಪ್ಪಿದ್ದಾರೆ. ಆದುದರಿಂದ ಮತ್ತಾರಿಗೂ ಅರ್ಜಿ ಸಲ್ಲಿಸಬಾರದೆಂದು ಯೋಚಿಸಿದ್ದೇನೆ" ಎಂದನು.

ಆಲಿಬಹದ್ದೂರನು "ಒಳ್ಳೆಯ ಕೆಲಸವಾಯಿತು" ಎಂದು ಹೇಳಿ ಮನಸ್ಸಿನಲ್ಲಿ ಅಸಮಾಧಾನಪಟ್ಟುಕೊಂಡನು. ಕ್ಷಣನಂತರ "ಯಾರ ಮೂಲಕ ಅರ್ಜಿಯನ್ನು ಸಲ್ಲಿಸಿದೆ?" ಎಂದು ಕೇಳಿದನು.

ಮೋತೀಬಾಯಿಯು ಅವಳ ವೇತನದ ಬಗ್ಗೆ ಪಿರ್ಯಾದುಮಾಡಲು ರಾಣಿಯ ಬಳಿಗೆ ಹೋಗಿದ್ದಳು. ತನ್ನ ಮಾತಿನ ಜೊತೆಗೆ ನನ್ನ ವಿನಂತಿಯನ್ನೂ ಸಲ್ಲಿಸಿದಳು."

"ಯಾವಾಗ?"

"ನಿನ್ನೆ. ಇಂದು ಪ್ರಾತಃಕಾಲ ರಾಣಿಯವರ ಪ್ರತ್ಯುತ್ತರ ದೊರಕಿತು. ಬಹಳ ಚುರುಕು."

"ಮೋತೀಬಾಯಿಯು ಬಂದಿರುವಳೆ?"

"ಇಲ್ಲ. ಆದರೆ ಸಮಾಚಾರವನ್ನು ಕಳುಹಿಸಿದಳು."

"ನನಗೆ ಸಂತೋಷವಾಯಿತು. ನನ್ನ ಕೈಲಾದ ಸಹಾಯವನ್ನು ಮಾಡುವೆನು."

"ತಮ್ಮ ಕೃಪೆ".

ಆಲಿಬಹದ್ದೂರನು ಈ ವಿಷಯವನ್ನು ಎಲಿಸ್ಸನಿಗೆ ತಿಳಿಸುವುದು ಅನಾವಶ್ಯಕವೆಂದು ಯೋಚಿಸಿದನು.

ಖುದಾಬಕ್ಷನು ಝಾನ್ಸಿ ನಗರದಲ್ಲಿ ಪುನಃ ವಾಸಿಸಲಾರಂಭಿಸಿದನು.

## ೨೦

ಅಂದು ಸಂತೆಯ ದಿನ. ಝಾನ್ಸಿಯ ಸುತ್ತ ಮುತ್ತಲಿನ ಹಳ್ಳಿಗಳಿಂದ ಅನೇಕ ಜನ ಸೇರಿದ್ದರು. ಝಾನ್ಸಿಯ ಭವಿಷ್ಯದ ವಿಚಾರ ಏನೇನು ಚರ್ಚೆಗಳಾಗುತ್ತಿವೆ ಎಂದು ಅರಿಯಲು ಅವರು ಉತ್ಸುಕರಾಗಿದ್ದರು. 'ಹಲ್ವಾಯಿಪುರ' ಎಂಬುದು

ಝಾನ್ಸಿಯ ದೊಡ್ಡ ವ್ಯಾಪಾರಸ್ಥಳವಾಗಿದ್ದಿತು. ಹಳ್ಳಿಗಳು ಇದನ್ನು 'ಮಿಠಿಯಾಯಿ' ಎಂದು ಕರೆಯುತ್ತಿದ್ದರು. ಮಿಠಾಯಿಅಂಗಡಿಗಳು ಒಂದು ಕೊನೆಯಲ್ಲಿದ್ದವು. ಮತ್ತೊಂದು ಕೊನೆಯಲ್ಲಿ ಒಂದು ಮೂಲೆಗೆ ಮುರಳಿಮನೋಹರನ ದೇವಾಲಯ. ಅದರೆದುರೆ ದೇವಸ್ಥಾನದ ನಾಗರಿನೌಪತ್ತುಗಳ ಕೊಠಡಿ ಇದ್ದುವು. ಮಂದಿರದಲ್ಲಿ ರಾಧಕೃಷ್ಣನ ಭವ್ಯಮೂರ್ತಿ ಪ್ರತಿಷ್ಠಿತವಾಗಿದ್ದಿತು. ಈ ಮಂದಿರವನ್ನು ಲಕ್ಷ್ಮೀಬಾಯಿಯು ಕಟ್ಟಿಸಿದ್ದೆಂದು ಈಗಲೂ ವದಂತಿಯಿದೆ. ದೇವರ ದರ್ಶನಮಾಡಲು ರಾಣಿ ಲಕ್ಷ್ಮೀಬಾಯಿಯು ನಿಯಮದಿಂದ ಹೋಗಿ ಬರುತ್ತಿದ್ದಳು.

ಮಿಠಾಯಿ ಅಂಗಡಿಗಳಿಗೂ ಮತ್ತು ಮುರಳಿಮನೋಹರನ ದೇವಾಲಯಕ್ಕೂ ನಡುವೆ ಬೇರೆ ಬೇರೆ ಸರಕುಗಳ ಅಂಗಡಿಗಳಿದ್ದವು. ರಸ್ತೆಯು ಮಧ್ಯದಲ್ಲಿ ವಿಶಾಲವಾಗಿದ್ದಿತು. ಪಶ್ಚಿಮಕ್ಕೆ ರಸ್ತೆಯು ಕವಲೊಡೆದು ಒಂದು ಮಹಲ್ಲು ಕೋಟೆಯ ಕಡೆಗೂ ಮತ್ತೊಂದು ದತಿಯಾ ದ್ವಾರದೆಡೆಗೂ ಹೋಗುತ್ತವೆ. ಸಂತೆಯ ದಿನ ಈ ಎಲ್ಲಾ ರಸ್ತೆಗಳಲ್ಲಿಯೂ ಬಹಳ ಜನಸಂದಣಿ ಇರುತ್ತಿದ್ದಿತು. ಸ್ತ್ರೀ ಪುರಷರು ಸ್ವೇಚ್ಛೆಯಾಗಿ ತಮಗೆ ಬೇಕಾದ ಸರಕುಗಳನ್ನು ಕೊಳ್ಳುತ್ತಲೂ ಮಾತು ಕಥೆಗಳನ್ನಾಡುತ್ತಲೂ ಇದ್ದರು. ಖುದಾಬಕ್ಷನು ಮತ್ತು ಪೀರಾಲಿಯು ಪೇಟೆಯಲ್ಲಿ ಒಟ್ಟಿಗೆ ಸಂಚರಿಸುತ್ತಿದ್ದರು.

ಬಟ್ಟೆಯಂಗಡಿಯಲ್ಲಿ ಬಟ್ಟೆಯನ್ನು ಕೊಂಡು ಕೊಂಡು ಒಬ್ಬ ಹಳ್ಳಿಗನು ಅಂಗಡಿಯವನನ್ನು ಕುರಿತು "ಏನಪ್ಪಾ, ಝಾನ್ಸಿಯಲ್ಲಿ ಏನಾಗುತ್ತಿದೆ?" ಎಂದು ಕೇಳಿದನು.

"ಏನೇನು ಆಗ ಬೇಕೋ ಆಗುತ್ತಿದೆ" ಎಂದು ಉತ್ತರ ದೊರಕಿತು.

"ನಾವು ಹಳ್ಳಿಗರು ನಮಗೆ ಅಷ್ಟೆಲ್ಲಾ ಗೊತ್ತಾಗುತ್ತಿದ್ದರೆ ಏನು ಕಮ್ಮಿ? ಸ್ವಲ್ಪ ಬಿಡಿಸಿ ಹೇಳಿ" ಎಂದು ಹಳ್ಳಿಗನು ಕೇಳಿದನು.

ಇನ್ನೂ ಮೂರು ನಾಲ್ಕು ಜನ ಹಳ್ಳಿಗರು ಅಲ್ಲಿಗೆ ಬಂದರು. ವ್ಯಾಪಾರವಾಗುವ ಆಸೆಯಿಂದ ವರ್ತಕನ ಮುಖವು ಅರಳಿತು. ಮಾತುಕಥೆಗಳು ಬಿರುಸಿನಿಂದ ಮುಂದುವರೆದವು.

"ಮಹಾರಾಜರು ಸ್ವರ್ಗವಾಸಿಯಾಗುವ ಮೊದಲೇ ದತ್ತು ಸ್ವೀಕಾರಮಾಡಿ ಆ ದತ್ತು ಪುತ್ರನನ್ನು ಉತ್ತರಾಧಿಕಾರಿಯಾಗಿ ಗಣಿಸಬೇಕೆಂದು ಗೌರ್ನರ್ ಜನರಲ್ ಸಾಹೇಬರಿಗೆ ಪತ್ರ ಬರೆದಿರುವುದು ಈ ಪ್ರಪಂಚಕ್ಕೇ ಗೊತ್ತು. ಇನ್ನೂ ಉತ್ತರ ಬಂದಿಲ್ಲ."

'ದತ್ತು ಸ್ವೀಕಾರಮಾಡುವುದಕ್ಕೆ ಅರ್ಜಿಯೆ? ಇದೆಂತಹ ಹುಚ್ಚು ವ್ಯಾಪಾರ! ನಮ್ಮ ಹಳ್ಳಿಗಳಲ್ಲಿ ನಾವು ನಿತ್ಯವೂ ದತ್ತು ತೆಗೆದುಕೊಳ್ಳುವುದೂ ಉಂಟು ಕೊಡುವುದೂ ಉಂಟು. ಅರ್ಜಿಗಿರ್ಜೀ ಯಾರಿಗೂ ಸಲ್ಲಿಸುವುದಿಲ್ಲವಲ್ಲ.'

'ಆಂಗ್ಲೇಯರು ಹೊಸ ಕಾನೂನುಗಳನ್ನು ಜಾರಿಗೆ ತರುತ್ತಿದ್ದಾರೆ.'

'ಹಾಗಾದರೆ ಇಂತಹ ಕಾನೂನನ್ನೂ ಹೊರಡಿಸಿದ್ದಾರೆಯೇ ?'

'ಅವರೋ ಮಾತುಮಾತಿಗೂ ಒಂದೊಂದು ಕಾನೂನು ಹೊರಡಿಸುತ್ತಲೇ ಇರುತ್ತಾರೆ. ಅರ್ಜಿಕೊಡು, ಸ್ಟಾಂಪು ಹಚ್ಚು, ಪಂಚಾಯತಿಗಳನ್ನೆಲ್ಲಾ ಒಲೆಗೆ ತುರುಕು, ತಮ್ಮ ಬಂಗಲೆಗಳಿಗೆ ನಿಮಿಷನಿಮಿಷಕ್ಕೂ ಎಡೆತಾಕುತ್ತಿರು, ಹಾಜರಿ ಕೊಡುತ್ತಿರು....'

'ಇಷ್ಟೇ ಉಣ್ಣು ಇಷ್ಟೇ ಮಲಗು ಎಂದು ನೂರೆಂಟು ಕಾನೂನು ಮಾಡಿದ್ದಾರೆ.'

'ಅವರಿಗೆ ಪಿತ್ಥವು ನೆತ್ತಿಗೇರಿದೆ. ಅವರು ಯಾವುದಕ್ಕೂ ಹಿಂದುಮುಂದು ನೋಡುವುದಿಲ್ಲ.'

'ಅವರಿಗೆ ಏನು, ಧರ್ಮಕರ್ಮಗಳು ಕಾಣದಂತೆ ಕಣ್ಣು ಇಂಗಿಹೋಗಿದೆಯೇನು?'

'ಅವರೆಲ್ಲಿ ಧರ್ಮಕರ್ಮದ ಚಿಂತೆಮಾಡುತ್ತಾರೆ? ಅದೆಲ್ಲ ಹಿಂದೂ ಮುಸಲ್ಮಾನರಿಗೆ ಮಾತ್ರ.'

ಈ ಆತ್ಮಶ್ಲಾಘನೆಯಾದನಂತರ ಅಂಗಡಿಯ ಮಾಲೀಕನು ಕೊಳ್ಳಲು ಬಂದಿದ್ದವರಿಗೆ ಸಾಮಾನು ಕೊಟ್ಟು ಕಳುಹಿಸಿದನು. ಗುಂಪು ಗುಂಪಾಗಿ ಜನರು ಬರುತ್ತಿದ್ದರು. ಒಳ್ಳೆಯ ವ್ಯಾಪಾರವೂ ಆಗುತ್ತಿದ್ದಿತು. ಅಂಗಡಿಯವನಿಗೆ ಮಾತನಾಡಲು ಆಸೆ, ಹಳ್ಳಿಯವರಿಗೆ ಕೇಳಲು ಚಪಲ. ಎರಡೂ ಸೇರಿದ್ದಿತು.

'ಓಹೋ ! ಏನು, ಅಂಗ್ಲೇಯರ ದರ್ಬಾರೇ ನಡೆಯಬೇಕೆ ? ನಾವು ನೀವೂ ಮನುಷ್ಯರಲ್ಲವೇ ?'

'ಆಂಗ್ಲೇಯರು ಅವರ ಛಾವಣಿಯಲ್ಲಿ ಗೋವಧೆಮಾಡುತ್ತಿದ್ದಾರೆ. ಕಾನೂನುಗಳನ್ನು ಮಾತ್ರ ಬಹಳ ಬಿರುಸಾಗಿ ಉಸಿರಾಡುವುದಕ್ಕೂ ಆತಂಕವಾಗುವಂತೆ ಜಾರಿಗೆ ತರುತ್ತಿದ್ದಾರೆ.'

'ಎಲ್ಲಿಗೆ ಜಾರಿಗೆ ತರುತ್ತಿದ್ದಾರೆ ?'

'ಎಲ್ಲಾ ಕಡೆಯಲ್ಲಿಯೂ. ಗವಾಲಿಯರ್ ಸಂಸ್ಥಾನದಲ್ಲಿದೆ. ಅಬ್ಬ ! ಅಲ್ಲಂತೂ ಅವರ ದಬ್ಬಾಳಿಕೆಯೇ ದಬ್ಬಾಳಿಕೆ. ಅಲ್ಲಿನ ಅವರ ದೊಡ್ಡ ಸಾಹೇಬರು ಅಂಗಡಿ ಬೀದಿಯಲ್ಲಿ ಹೊರಟರೆ ಎಲ್ಲಾ ಅಂಗಡಿಯವರೂ ಎದ್ದು ಬಗ್ಗಿಬಗ್ಗಿ ಸಲಾಮು ಮಾಡಬೇಕು.'

"ಆ 'ದೊಡ್ಡ ಸಾಹೇಬ' ಎನ್ನುವರು ಯಾರು ? ಇಂತಹ ಸಲಾಮನ್ನು ಮಾಡುವುದು ರಾಜರಿಗೆ ಮಾತ್ರ."

"ದೊಡ್ಡ ಸಾಹೇಬನು ಗೌರ್ನರ್ ಜನರಲ್ ಸಾಹೇಬನ ಕೈಕೆಳಗೆ ಕೆಲಸಮಾಡುವ ಅಧಿಕಾರಿ."

"ಗೌರ್ನರ್ ಜನರಲ್ ಸಾಹೇಬನಿಗೆ ಈ ರೀತಿ ಎಷ್ಟು ನೌಕರರಿರುವರು ? ಅವನೇನು ರಾಜನೇನು ?"

'ರಾಜನಲ್ಲಯ್ಯಾ, ವಿಲಾಯತಿ ರಾಜನ ನೌಕರ.'

"ಅಯ್ಯೊ! ನೌಕರನ ನೌಕರನಿಗೆ ಬಗ್ಗಿ ಬಗ್ಗಿ ಸಲಾಮು!! ಈ ದೇಶಕ್ಕೆ ಎಂತಹ ಕಾಲ ಬಂದಿತು!!! ಒಂದು ವೇಳೆ ಸಲಾಮು ಮಾಡುವುದಿಲ್ಲ ಎಂದರೆ?"

"ಅವನನ್ನು ತಮ್ಮ ಬಂಗಲೆಗೆ ಕರೆತರಿಸಿ ಅಲ್ಲಿ ಕಷ್ಟ ಪಡಿಸುತ್ತಾರೆ."

ಹಳ್ಳಿಗರು ಹಲ್ಲು ಮಸೆದರು.

ಒಬ್ಬ ಹಳ್ಳಿಯವನು ಹೇಳಿದನು. "ನಾನೇನೂ ಆಂಗ್ಲೇಯರಿಗೆ ಸಲಾಮು ಮಾಡುವುದಿಲ್ಲ. ಅವರು ಹಿಂದೂಗಳೂ ಅಲ್ಲ ಮುಸಲ್ಮಾನರೂ ಅಲ್ಲ. ಅವರೇನಾದರೂ ಹಿಡಿಸಿ ಕರೆತರಿಸಿದರೆ ಒರೆಯಿಂದ ಕತ್ತಿಯನ್ನು ಸೆಳೆಯುತ್ತೇನೆ".

ಇಷ್ಟರಲ್ಲೇ ಸ್ವಲ್ಪ ದೂರದಲ್ಲಿ 'ದಾರಿ, ಸರಿಯಿರಿ, ಹಿಂದೆಹೋಗಿ' ಎಂಬ ಕೂಗು ಕೇಳಿ ಬಂದಿತು.

ಎಲಿಸ್ಸನು ಪೇಟೆಯಲ್ಲಿ ತಿರುಗಾಡಲು ಕುದುರೆಯ ಮೇಲೆ ಬಂದಿದ್ದನು. ಅವನ ಜೊತೆಯಲ್ಲಿದ್ದ ಮತ್ತೊಬ್ಬ ಸವಾರನು ಈ ಕೂಗನ್ನೆಬ್ಬಿಸುತ್ತಿದ್ದನು.

ಎಲ್ಲೋ ಹಲ ಕೆಲ ವರ್ತಕರು ಪ್ರಣಾಮಮಾಡಲು ಎದ್ದರು. ಉಳಿದವರು ತಮ್ಮ ಕೆಲಸದಲ್ಲಿ ಮಗ್ನರಾಗಿದ್ದರು.

ಹಳ್ಳಿಗರಾರೂ ಸಲಾಮು ಮಾಡಲಿಲ್ಲ. ಆ ಬಟ್ಟೆ ಅಂಗಡಿಯ ವರ್ತಕನು ಪ್ರಣಾಮ ಮಾಡಲೆಳಸಿದಾಗ ಸುತ್ತಲಿದ್ದ ಹಳ್ಳಿಯವರು ಅವನನ್ನು ತಡೆದು ಬಿಟ್ಟರು. ಒಬ್ಬನು "ಸುಮ್ಮನೆ ಕುಳಿತು ಕೊಳ್ಳಯ್ಯಾ ಇಲ್ಲಿ ಯಾರೂ ಬತ್ತಾಸು ಹಂಚಲು ಬಂದಿಲ್ಲ" ಎಂದನು.

ವರ್ತಕನು ಕುಳಿತಿದ್ದಲ್ಲಿಯೇ ಪ್ರಣಾಮಮಾಡಿದನು. ಹಳ್ಳಿಗರು ಎಲಿಸ್ಸನ ವೇಷ ಭೂಷಣಗಳನ್ನು ಕುತೂಹಲದಿಂದ ನೋಡುತ್ತಲೇ ಇದ್ದರು. ಅವನು ಮುಂದೆ ಹೊರಟು ಹೋದನು. ಮಾರ್ಗದಲ್ಲಿ ಬೆಳ್ಳಿಯ ಒಡವೆಗಳನ್ನು ಧರಿಸಿ ಕೊಂಡು, ಹಣೆಯಲ್ಲಿ ಕುಂಕುಮವಿಟ್ಟು ಸ್ವಲ್ಪ ಎತ್ತರವಾದ ಚಹರೆಯುಳ್ಳ ಸುಂದರ ಸ್ತ್ರೀಯೊಬ್ಬಳು ಅವನನ್ನು ನೋಡಿದಳು. ಆತನೂ ಅವಳನ್ನು ಕುತೂಹಲದಿಂದ ದೃಷ್ಟಿಸಿ ನೋಡಿದನು. ಆಕೆಯು ಸ್ವಲ್ಪವೂ ಹಿಂಜರಿಯದೆ ಅವನ ದೃಷ್ಟಿಯನ್ನು ಎದುರಿಸಿದಳು.

ಆ ಸ್ತ್ರೀಯ ಜೊತೆಯಲ್ಲಿ ಮತ್ತೊಬ್ಬ ಸ್ತ್ರೀಯು ಇದ್ದಳು. ಆ ಸುಂದರಿಯು ಒಡನೆಯೆ ತನ್ನ ಸ್ನೇಹಿತಳೊಂದಿಗೆ, "ಅವನು ಹೇಗೆ ದುರುಗಟ್ಟಿ ನೋಡಿದ, ನೋಡು. ಯಾರಾದರೂ ನನ್ನನ್ನು ಹಾಗೆ ನೋಡಿದ್ರೆ ಆದರೆ ಅವರ ಕಣ್ಣು ಕಿತ್ತು ಹಾಕಿ ಬಿಡುತ್ತೇನೆ."

"ಝುಲಕಾರಿ, ಆ ಆಂಗ್ಲೇಯರ ಚಲನವಲನಗಳು ವಿಚಿತ್ರವೆಂದು ಕೇಳಿದ್ದೇನೆ."

"ಬೆಂಕಿ ಹಾಕತು. ಈ ನೀರಿನ ಕೊಡವನ್ನು ಕೆಳಗಿಳಿಸಿ ಆ ಮೀಸೆ ಇರೋ ಗಂಡಸಿಗೆ ಚೆನ್ನಾಗಿ ಎರಡು ಬಾರಿಸಲಾ, ಅನ್ನಿಸುತ್ತೆ".

"ಅಯ್ಯೋ; ಹುಚ್ಚಿ. ನಿನ್ನದೇನು ಹೊತ್ತುಕೊಂಡು ಹೋದ ಅವನು ?"

"ಏನಾದರೂ ಹೊತ್ತು ಕೊಂಡು ಹೋಗುವುದಕ್ಕೆ ಬರಲಿ ಮೂಳೆಮುರಿದು ಕಳಿಸಿಬಿಡುತ್ತೀನಿ, ನಿನಗಿನ್ನೂ ಇವರ ವಿಚಾರ ಗೊತ್ತಿಲ್ಲವಾ? ಅವರು ಝೂನ್ಸಿನೇ ತೆಗೆದುಕೊಳ್ಳೋದಕ್ಕೆ ಬಂದಿದ್ದಾರೆ."

"ನಮ್ಮ ರಾಣಿ ಸಾಕ್ಷಾತ್ ದುರ್ಗಾದೇವಿ. ಮಮತೆಯ ಮೂರ್ತಿ. ಆ ದಿನ ನಾನೂ ಅರಸಿನ ಕುಂಕುಮಕ್ಕೆ ಅರಮನೆಗೆ ಹೋಗಿದ್ದೆ. ಆ ದೇವಿಗೋಸ್ಕರ ನಾನು ಪ್ರಾಣ ಬಿಡೋದಕ್ಕೂ ಸಿದ್ಧನಾಗಿದ್ದೇನೆ."

"ಝಲಕಾರಿ, ನಿನ್ನ ಗಂಡ ಏನು ಮಾಡುತ್ತಿದ್ದಾನೆ ?"

"ಏನೇ? ಪರಿಹಾಸಮಾಡಲುಪಕ್ರಮಿಸಿದೆಯಾ? ನಾನು ಒಂದು ಕೊಟ್ಟೆ ಎಂದರೆ ಇದೆಲ್ಲವನ್ನೂ ಮರೆತು ಬಿಡುತ್ತೀಯಾ? ರಾಣಿಗೇನಾದರೂ ಆಪತ್ತು ಸಂಭವಿಸಿದರೆ ರಾಜ್ಯದ ಹೆಣ್ಣು ಗಂಡು ಮಕ್ಕಳಾದಿಯಾಗಿ ಎಲ್ಲರೂ ಬಲಿಯಾಗಿ ನಿಲ್ಲಲು ಸಿದ್ಧರಿದ್ದಾರೆ."

ಪೀರ್ ಅಲಿ ಮತ್ತು ಖುದಾಬಕ್ಷರು ಎಲೆ ಅಡಿಕೆ ಅಂಗಡಿಯಲ್ಲಿ ಈ ಸಂಭಾಷಣೆಯನ್ನು ಕೇಳಿದರು.

"ಈ ಚಿಕ್ಕ ಸಾಹೇಬನು ಎಷ್ಟು ದರ್ಪದಿಂದ ಪೇಟೆಯಲ್ಲಿ ಹೋಗುತ್ತಿದ್ದಾನೆ ?"

"ಈಗ ಇವರ ತಾರೆಯು ಬೆಳಗುತ್ತಿದೆ. ಅದೂ ಎಂದಾದರೊಂದು ದಿವಸ ಮುಳುಗಿ ಹೋಗುತ್ತದೆ."

"ಇವರ ಅದೃಷ್ಟನೋಡು. ಯಾರು ಮೊದಲು ಬಂದರೋ ಅವರು ಎಲ್ಲವನ್ನೂ ಲಪಟಾಯಿಸಿದರು. ಆದರೆ ಒಳ್ಳೆ ಸಾಹಸಿಗಳು."

"ಹಾಂ! ಪರಮೇಶ್ವರನು ಸಾಹಸವನ್ನು ಇವರ ಹಣೆಯಮೇಲೆಯೇ ಕೆತ್ತಿದ್ದಾನೆ. ನಮ್ಮ ಸೈನ್ಯವೂ ನಮ್ಮನ್ನೇ ನುಂಗಿಬಿಟ್ಟಿತು. ಇಲ್ಲದಿದ್ದರೆ ಮೊಗಲರೂ, ರಾಜಪುತ್ರರೂ, ಮರಾಠರೂ ಮುಂತಾದವರು ಇದ್ದಿದ್ದರೆ ಇವರೇನು ಒಂದು ಕ್ಷಣ ಹಿಂದೂಸ್ಥಾನದಲ್ಲಿ ನಿಲ್ಲಲು ಆಗುತ್ತಿದ್ದಿತೆ ?"

"ವಣಿಕರಾಗಿ ಬಂದು ಅರಸರಾಗಿ ಕುಳಿತಿದ್ದಾರೆ. ಈ ರಾಜನವಾಬರುಗಳು ಎಲ್ಲವನ್ನೂ ಹಾಳು ಮಾಡಿಕೊಂಡರು."

"ಪ್ರಜೆಗಳಿಗೆ ಕಷ್ಟಕೊಟ್ಟರು, ಸಿಪಾಯಿಗಳು ಸೋತುಹೋದರು, ರಾಜ್ಯವು ಕೈಬಿಟ್ಟಿತು."

"ಈಗ ಎಲ್ಲರಿಗೂ ತಿಳಿವಳಿಕೆ ಬರುತ್ತಿದೆ."

"ನಮ್ಮ ರಾಜನನ್ನು ನೋಡಬೇಡ, ನಾಟಕ, ಸಂಗೀತ, ನೃತ್ಯ ಇವುಗಳಲ್ಲೇ ಎಲ್ಲವನ್ನೂ ಮುಗಿಸಿ ಬಿಟ್ಟ."

ಖುದಾಬಕ್ಷನ ಕಿವಿ ನಿಮಿರಿ ನಿಂತಿತು. ಕೋಪೋದ್ರೇಕವಾಗಿ ಆ ಮನುಷ್ಯನನ್ನು ಕುರಿತು ಕೇಳಿದನು. " ನಮ್ಮ ರಾಜನು ರೈತರಿಗೇನೂ ಯಾವ ಕಷ್ಟವನ್ನೂ ಕೊಡಲಿಲ್ಲ ವಲ್ಲ ? "

" ದುಃಖವನ್ನು ಕೊಡದೆ ಇರುವುದು ಒಂದು ವಿಚಾರ, ಸುಖವನ್ನು ಕೊಡುವುದು ಮತ್ತೊಂದು ವಿಚಾರ."

" ಆಂಗ್ಲೇಯರ ರಾಜ್ಯವಾದ ಮೇಲೆ ಗೊತ್ತಾಗುವುದು."

" ಆಂಗ್ಲೇಯರನ್ನು ಹಾಗೆ ಕಬಳಿಸಲು ಬಿಟ್ಟು ಬಿಡುತ್ತಾರೆಯೆ ? "

" ಜನಾಬ್, ಅವರು ಕಬಳಿಸದೆಯೆ ಜೀರ್ಣಿಸಿಕೊಳ್ಳುವ ಇಸಮುಗಳು."

" ಹಾಗೆಂದಿಗೂ ಆಗದು. ಈ ರಾಜ್ಯವು ಎಂದಿಗೂ ಆಂಗ್ಲೇಯರ ಕೈವಶವಾಗುವುದಿಲ್ಲ."

"ಏನೂ ಹೇಳಲಾಗುವುದಿಲ್ಲ. ಒಂದು ವೇಳೆ ಅವರ ಕೈಸೇರಿದರೆ ?"

ಅಂಗಡಿಯವನು ಬೀಡಾ ಕಟ್ಟುತ್ತಾ ಹೇಳಿದನು "ಅದೆಲ್ಲಾ ಸೋಜಿಗದ ಮಾತು. ರಾಣಿಯು ನಮ್ಮವಳು. ಅವಳಿಗಾಗಿ ನಾವು ತಲೆಕತ್ತರಿಸಿಕೊಡಲೂ ಸಿದ್ಧರಿದ್ದೇವೆ."

ಪೀರ್ಆಲಿಯು ನಗುತ್ತಾ "ನೀನು ಎಲೆ ಅಡಿಕೆ ಕತ್ತರಿಸುತ್ತಾ ಬೀಡಾಕಟ್ಟುತ್ತಿರಣ್ಣಾ. ತಲೆ ಕಡಿಯುವುದು, ಕಡಿಸಿಕೊಳ್ಳುವುದು, ನಾವು ಸಿಪಾಯಿಗಳು ಮಾಡುವ ಕೆಲಸ" ಎಂದನು.

ಅಂಗಡಿಯವನು ಧ್ಯಾನ ಪೂರ್ವಕವಾಗಿ ಪೀರ್ಆಲಿಯನ್ನು ನೋಡಿದನು. ನಂತರ "ನೀವು ಝಾನ್ಸಿಯ ನಿವಾಸಿಗಳಂತೆ ತೋರುವುದಿಲ್ಲವಲ್ಲ? ಪರದೇಶದವರೆ?" ಎಂದನು.

"ಯಾಕೆ, ಅದರಲ್ಲೇನು ವ್ಯತ್ಯಾಸ?"

"ಭೂವ್ಯಾಕಾಶಗಳಿಗಿರುವಷ್ಟು ಅಂತರ."

"ಹೇಗೆ ?"

"ಈಗ ಏನೂ ಹೇಳಲಾಗುವುದಿಲ್ಲ. ಸಮಯ ಬಂದಾಗ ನೋಡೋಣ."

"ಸಮಯ ಬಂದಾಗ ಎಣ್ಣೆಯವನೂ ಬೆಣ್ಣೆಯವನೂ ಎಲ್ಲರೂ ಕತ್ತಿ, ಬಂದೂಕ ಪ್ರಯೋಗಿಸುವರು. ಇದನ್ನು ನೋಡುವುದೊಂದು ಬಾಕಿ ಉಳಿದಿದೆ."

"ಈಗಲೇ ನೋಡು. ನೀನು ನಿನ್ನ ಕತ್ತಿಗುರಾಣಿ ತೆಗೆದುಕೊಂಡು ಬಾ, ನಾನು ನನ್ನದನ್ನು ತೆಗೆದುಕೊಂಡು ಬರುತ್ತೇನೆ. ಆಗ ನೋಡು ಝಾನ್ಸಿಯವನ ಕೈವಾಡ."

ಪೀರ್ ಆಲಿಯು ನಕ್ಕನು. ಖುದಾಬಕ್ಷನು ಅವನನ್ನು ಅಲ್ಲಿಂದ ಕರೆದು ಕೊಂಡು ಹೊರಟು ಹೋದನು.

ಅಂಗಡಿಯ ಬಳಿಯಲ್ಲೇ ಝುಮ್ಮಿಸಿಂಹ ಮತ್ತು ಭಗ್ಗಿದಾವುಜು ಎಂಬ ಅಕ್ಕಸಾಲೆಗಳು ನಿಂತಿದ್ದರು. ಝುಮ್ಮಿಸಿಂಹನು "ಸರಿಯಾಗಿ ಹೇಳಿದಿರಿ, ಸ್ವಾಮಿ, ಶಹಭಾಷ್. ಅವರೇನು ಆಂಗ್ಲೇಯರ ಗೂಢಚಾರರಿರಬಹುದೆ?" ಎಂದನು.

ಅಂಗಡಿಯವನು "ಇದ್ದರೂ ಇರಬಹುದು. ಏನು ಮಾಡುವುದು, ಕಕ್ಕಾ?" ಎಂದನು.

ಭಗ್ಗಿದಾವುಜನು ಹೇಳಿದನು "ಝಾನ್ಸಿಯ ಮೇಲೆ ದುರಭಿಪ್ರಾಯದಿಂದ ಕಣ್ಣು ಹಾಯಿಸಿದರೆ ಅವರನ್ನು ಕಾಳೀದೇವಿಯು ಅನಾಮತ್ತಾಗಿ ನುಂಗಿ ಬಿಡುವಳು."

ಅಂಗಡಿಯವನು "ವಾರೆವ್ವಾ ದಾವು, ಕವಿಯಾಗಿ ಬಿಟ್ಟೆಯಲ್ಲಾ?"

ಝಾನ್ಸಿಯಲ್ಲಿ ಆ ಕಾಲದಲ್ಲಿ ಅನೇಕ ಲಾವಣಿಯವರಿದ್ದರು. ಅವರು ಕವಿತೆಗಳನ್ನು ಒಂದು ವಿಧವಾದ ಗತಿಯೊಂದಿಗೆ ಹಾಡುತ್ತಿದ್ದರು. ಅವು ಬಹು ಲೋಕಪ್ರಿಯವಾಗಿದ್ದುವು. ಅವರಲ್ಲಿ ಭಗ್ಗಿದಾವೂಜುನೂ ಒಬ್ಬನು.

ಪೀರ್ ಆಲಿಯು ಪೇಟೆಯ ಎಲ್ಲಾ ಸಮಾಚಾರವನ್ನೂ ಆಲೀಬಹದ್ದೂರನಿಗೆ ತಿಳಿಸಿದನು. ಮಾರನೆಯದಿನ ಅದು ಆಲೀಬಹದ್ದೂರನಿಂದ ಎಲಿಸ್ಸನಿಗೆ ಮುಟ್ಟಿತು. ಆತನು ನವಾಬನಿಗೆ ಧನ್ಯವಾದಗಳನ್ನು ಅರ್ಪಿಸಿ ಮನಸ್ಸಿನಲ್ಲಿಯೆ "All Bazar Gossip" ಎಂದು ಕೊಂಡನು.

## ೩೧

ಒಂದು ತಿಂಗಳಾದರೂ ಕಲ್ಕತ್ತೆಯಿಂದ ಪ್ರತ್ಯುತ್ತರವು ಬರದಿರಲು ಎಲಿಸ್ ಮತ್ತು ಮಾಲ್ಕಮ್ಮರಿಗೆ ಯೋಚನೆಯೇರ್ಪಟ್ಟಿತು. ಒಂದು ವೇಳೆ ಗೌರ್ನರ್ ಜನರಲ್ಲನು ರಾಣಿಯ ಪಕ್ಷಕ್ಕೆ ತೀರ್ಪುಕೊಟ್ಟು ಝಾನ್ಸಿಯು ಸರ್ಕಾರಿ ಆಡಳಿತಕ್ಕೆ ಬರದಿರಬಹುದು ಎಂದು ಎಣಿಸಿದರು.

ಸದಾಶಿವ ನೇನಾಲ್ಕರನೆಂಬ ಒಬ್ಬ ವ್ಯಕ್ತಿಯು ಎಲಿಸ್ಸಿನ ಮುಂದೆ ರಾಜ್ಯಕ್ಕಾಗಿ ದಾವೆ ಹೂಡಲು ಬಂದನು. ಇದು ಅನುಕೂಲವೇ ಆಯಿತು—ವಜ್ರದಿಂದಲೆ ವಜ್ರವನ್ನು ಕತ್ತರಿಸ ಬೇಕು. ಎಲಿಸ್ಸನು ಸದಾಶಿವರಾಯನಿಗೆ ಉತ್ತೇಜನ ಕೊಟ್ಟನು. ಸದಾಶಿವರಾಯನು ಒಂದ ವಿಶದವಾದ ಅರ್ಜಿಯನ್ನು ಗಂಗಾಧರರಾಯನ ವಂಶದ ಐದನೆಯ ತಲೆ ಮೊರೆಯ ಹೆಸರಿನಲ್ಲಿ ಸಲ್ಲಿಸಿದನು. ರಾಣಿಯ ಹೆಸರು ಯಾವ ತಲೆ ಮೊರೆಯಲ್ಲಿಯೂ ಇರಲಿಲ್ಲ. ದಿವಂಗತರಾಜನ ಧರ್ಮಪತ್ನಿಯಾದರೇನಾಯಿತು? ಆಕೆಯು ಕೇವಲ ಸ್ತ್ರೀ. ಸ್ತ್ರೀಯು ರಾಜ್ಯವಾಳಲು ಅರ್ಹಳೆ? ಇಂಗ್ಲೆಂಡು ದೇಶದ ವಿಕ್ಟೋರಿಯಾ ರಾಣಿಯು ಸ್ತ್ರೀಯಲ್ಲವೆ? ಹಿಂದೂಸ್ಥಾನವು ಇಂಗ್ಲೆಂಡ್ ದೇಶ

ವಲ್ಲವಲ್ಲ !

ಸದಾಶಿವರಾಯನ ಅರ್ಜಿಯು ರಾಣಿಯ ಅರ್ಜಿಗೆ ಪ್ರತಿಸ್ಪರ್ಧಿಯಾಯಿತು. ರಾಣಿಗಾಗಲೀ ಅಥವಾ ಈ ಮೂರ್ಖನಿಗಾಗಲೀ ಲಾರ್ಡ್ ಡಾಲ್‌ಹೌಸಿಯು ಏನು ಸಹಾಯತಾನೆ ಮಾಡುತ್ತಿದ್ದ.

ಮಾಲ್ಕಮ್ಮನು ಸ್‌ ೧೮೫೩ ಡಿಸೆಂಬರ್ ೨೧ ನೇ ತಾರೀಖು ಸದಾಶಿವರಾಯನ ರಾಜ್ಯದ ಹಕ್ಕುದಾರಿಕೆಯನ್ನು ಶಿಫಾರಸ್ಸು ಮಾಡುತ್ತಾ "ಒಂದು ವೇಳೆ ಗತಿಸಿದ ರಾಜನ ಅನುವಂಶೀಕರಲ್ಲಿ ಯಾರನ್ನಾದರೂ ರಾಜ್ಯಕ್ಕೆ ಹಕ್ಕುದಾರರನ್ನಾಗಿ ಸ್ವೀಕರಿಸ ಬೇಕಾದರೆ ವಾಸ್ತವ್ಯದಲ್ಲಿ ಈ ವ್ಯಕ್ತಿಯು ಗಾದಿಗೆ ಎಲ್ಲರಿಗಿಂತಲೂ ನಿಕಲವಾದ ಹಕ್ಕು ದಾರನಾಗಿದ್ದಾನೆ" ಎಂದು ಬರೆದನು.

ರಾಜ್ಯ ದೊರಕುವುದರಲ್ಲಿ ಇನ್ನೂ ಎಷ್ಟೋ ತೊಡಕುಗಳಿದ್ದರೂ ಸದಾಶಿವ ರಾಯನಿಗೆ ಅಕಸ್ಮಾತ್ ಸ್ವಲ್ಪ ದ್ರವ್ಯ ಲಭಿಸಿ ಆತನು ರಾಜ ಕೀವಿಯಲ್ಲಿ ವಾಸಿಸಲಾರಂ ಭಿಸಿದನು. ರಾಜಕೀಯ ಅಧಿಕಾರಿ (ಪ್ರೊಲಿಟಿಕಲ್ ಏಜೆಂಟನು) ಶಿಫಾರಸ್ಸೇನೋ ಮಾಡಿದ್ದನು—ಬಾವುಟವೇನೋ ದೊರಕಿದ್ದಿತು. ಆದರೆ ಜೀನು, ಕಡಿವಾಣ ಮತ್ತು ಕುದುರೆ ಮಾತ್ರ ದೊರಕಬೇಕಾಗಿದ್ದಿತು.

ರಾಣಿಯು ಈ ಎಲ್ಲ ಪರಿಸ್ಥಿತಿಗಳನ್ನೂ ಸಾವಧಾನದಿಂದ ಪರಿಶೀಲಿಸುತ್ತಿದ್ದಳು. ಅವಳಾದರೋ ಝಾನ್ಸಿ ರಾಜ್ಯವನ್ನು ತನ್ನ ಧ್ಯೇಯ ಸಾಧನೆಯ ಸಾಧಕವಾಗಿ ಪರಿಗಣಿ ಸುತ್ತಿದ್ದಳು. ಅವಳು ಅದನ್ನು ತನಗಾಗಿ ನಿರ್ಮಿಸಿದ ಅಮರಾವತಿಯನ್ನಾಗಿ ಭಾವಿಸ ಲಿಲ್ಲ. ಆದರೆ ಅವಳು ಯಾವ ಅಮರಾವತಿಯನ್ನು ನಿರ್ಮಿಸಬೇಕೆಂದು ಉದ್ದಿಶ್ಯ ಗೊಂಡಿದ್ದಳೋ ಅದಕ್ಕೆ ಝಾನ್ಸಿ ರಾಜ್ಯವು ಕೇವಲ ಒಂದು ಹಂತವಾಗಿದ್ದಿತು.

ರಾಜನ ದೇಹಾಂತವಾದನಂತರ ಆಕೆಯ ದಿನಚರಿಯು ಈರೀತಿಯಾಗಿದ್ದಿತು. ಪ್ರತಿನಿತ್ಯವೂ ಪ್ರಾತಃಕಾಲ ನಾಲ್ಕು ಘಂಟೆಗೆ ಎದ್ದು ಸ್ನಾನಮಾಡಿ, ಮಹದೇವನ ಪೂಜೆಯನ್ನು ಎಂಟು ಘಂಟೆಯವರೆಗೆ ಆಚರಿಸುತ್ತಿದ್ದಳು. ಆ ಸಮಯದಲ್ಲಿ ವಿದ್ವಾಂಸರು ಭಜನೆ ಮಾಡುತ್ತಿದ್ದರು. ನಂತರ ಹನ್ನೊಂದು ಘಂಟೆಯವರೆಗೆ ಅರಮನೆಯ ಬಳಿಯಿದ್ದ ಅಂಗಳದಲ್ಲಿ ಕುದುರೆ ಸವಾರಿ, ಬಾಣವಿದ್ಯೆ, ಭರ್ಜಿ ಪ್ರಯೋಗ, ಓಡುತ್ತಿರುವ ಕುದುರೆಯ ಮೇಲೆ ನಿಂತು ಸವಾರಿ ಮಾಡುವುದು, ಹಲ್ಲಿ ನಿಂದ ಲಗಾಮನ್ನು ಕಚ್ಚಿಕೊಂಡು ಎರಡು ಕೈಗಳಿಂದ ಕತ್ತಿವರಸೆ ಮಾಡುವುದೂ, ಬಂದೂಕಿನಿಂದ ಗುರಿಯಿಟ್ಟು ಹೊಡೆಯುವುದು, ಮಲ್ಲಕಂಭ, ಕುಸ್ತಿ ಇವೇ ಮೊದ ಲಾದುವನ್ನು ಅಭ್ಯಾಸ ಮಾಡುವುದು ಮತ್ತು ತನ್ನ ಸಖಿಯರಿಗೆ, ಅಲ್ಲದೆ ನಗರದಿಂದ ಬರುತ್ತಿದ್ದ ಇತರ ಸ್ತ್ರೀಯರಿಗೂ ಈ ಎಲ್ಲ ವಿದ್ಯೆಗಳನ್ನು ಹೇಳಿಕೊಡುವುದು ಮುಂತಾದ ಕಾರ್ಯಗಳಲ್ಲಿ ನಿರತಳಾಗುತ್ತಿದ್ದಳು. ಈ ವ್ಯಾಯಾಮಗಳಲ್ಲಿ ಬಕ್ಷಿಪಂಗಡದವರೂ

ಮತ್ತು ಝುಲಕಾರಿಯ ಕೋಮಿನವರೂ ಹೆಚ್ಚಾಗಿ ಬಂದು ಪ್ರಾಮುಖ್ಯತೆ ಗಳಿಸು ತ್ತಿದ್ದರು.

ಹನ್ನೊಂದು ಘಂಟೆಯ ನಂತರ ಮತ್ತೆ ಸ್ನಾನಮಾಡಿ ಹಸಿದವರಿಗೆ ಅಶನವಿಟ್ಟು ಹಾಗೆಯೆ ದಾನಧರ್ಮಗಳನ್ನು ಮಾಡಿ ನಂತರ ಭೋಜನಮಾಡುತ್ತಿದ್ದಳು. ಸ್ವಲ್ಪ ವಿಶ್ರಾಂತಿಯನ್ನು ಹೊಂದಿ ಮತ್ತೆ ಮೂರು ಘಂಟೆಯವರೆಗೆ ಸಾವಿರದ ನೂರು ರಾಮ ನಾಮಗಳನ್ನು ಬರೆದು ಗೋಧಿಹಿಟ್ಟಿನ ಗೋಲಿಮಾಡಿ ಮೀನುಗಳಿಗೆ ತಿನ್ನಿಸುತ್ತಿದ್ದಳು. ಆ ಸಮಯದಲ್ಲಿ ಅವಳು ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ಅಲ್ಲದೆ ಯಾರೂ ಅವಳನ್ನು ಸಮೀಪಿಸುತ್ತಿರಲಿಲ್ಲ. ಅವಳು ಯಾವುದೋ ಗೂಢ ಚಿಂತೆ ಮತ್ತು ವಿಚಾರಗಳಲ್ಲಿ ಮಗ್ನಳಾಗಿರುತ್ತಿದ್ದಳು.

ಮೂರುಘಂಟೆಯಾದ ಮೇಲೆ ಸಂಜೆಯವರೆಗೆ ಮತ್ತೆ ಅದೇ ವ್ಯಾಯಾಮ ಕಸ ರತ್ತು. ಶರೀರವನ್ನು ಗಟ್ಟಿಮುಟ್ಟಿಯಾಗಿಡುವ ಕ್ರಿಯೆಗಳು.

ಸಂಜೆಯನಂತರ ಎಂಟು ಘಂಟೆಯವರೆಗೆ ಕಥಾಶ್ರವಣ, ಪುರಾಣಗಳನ್ನೂ ಗೀತೆಯ ಹದಿನೆಂಟು ಅಧ್ಯಾಯಗಳನ್ನೂ ಮತ್ತು ಭಜನೆಗಳನ್ನೂ ಕೇಳುತ್ತಿದ್ದಳು. ಇದಾದನಂತರ ಆಗಂತುಕರಿಗೆ ಭೇಟಿಕೊಡುತ್ತಿದ್ದಳು. ಮೂರನೆಯ ಬಾರಿ ಮತ್ತೆ ಸ್ನಾನ ಮಾಡಿ ಇಷ್ಟದೇವತೆಯ ಏಕಾಂತಧ್ಯಾನದಲ್ಲಿ ತಲ್ಲೀನಳಾಗುತ್ತಿದ್ದಳು. ನಂತರ ಅಲ್ಪಾ ಹಾರ ಸ್ವೀಕರಿಸಿ ಸಖಿಯರೊಡನೆ ಮಾತು ಕಥೆಗಳನ್ನಾಡಿ ಹತ್ತು ಘಂಟೆಗೆ ನಿದ್ರಿಸುತ್ತಿ ದ್ದಳು. ಅವಳು ಸಮಯ ನಿಷ್ಠೆಯನ್ನು ಅರಿತಿದ್ದಳು. ಯಾವಾಗಲೂ ಸಮಯ ವನ್ನು ಪೋಲು ಮಾಡುತ್ತಿರಲಿಲ್ಲ.

ರಾಣಿಯು ರಾಜ್ಯವು ಕೈದೊರಕುವುದೋ ಇಲ್ಲವೋ ಎಂಬ ವ್ಯವಧಾನಗಳಲ್ಲಿಯೇ ಎಷ್ಟೋ ತಿಂಗಳುಗಳನ್ನು ಕಳೆದಳು. ಮೋರೋಪಂತ್‌ತಾಂಬೆ ಮತ್ತು ಇತರ ಕರ್ಮ ಚಾರಿಗಳು ಯಥಾಶಕ್ತಿ ಕಾರ್ಯವನ್ನು ಮಾಡುತ್ತಿದ್ದರು. ಎಲಿಸ್ ಮತ್ತು ಅವನ ಪಂಗಡದವರು ತಮ್ಮ ಅಡಿಪಾಯವನ್ನು ಭದ್ರಪಡಿಸಿಕೊಳ್ಳಲು ಮಾಡಬೇಕಾದ ತಯಾರಿ ಗಳನ್ನು ಬಹಳ ಸಾವಧಾನದಿಂದ ನಡೆಸುತ್ತಿದ್ದರು.

ಯಾವಾಗ ಅನೇಕ ತಿಂಗಳುಗಳು ಕಳೆದರೂ ಡಲ್‌ಹೌಸಿಯಿಂದ ಉತ್ತರವು ಬರಲಿಲ್ಲವೊ ಆಗ ಮೋರೋಪಂತನು ನಾನಾ ಭೋಪಟ್‌ಕರ್ ಮುಂತಾದವರ ಸಮ್ಮತಿ ಪಡೆದು ಎಲಿಸ್ಸ್ ಮತ್ತು ಮಾಲ್ಕಮ್ಮನ ಮೂಲಕ ಮತ್ತೊಂದು ಪತ್ರವನ್ನು ಕಳುಹಿಸಿ ದನು. ಅದರಲ್ಲಿ ಹಿಂದೆ ನಡೆದ ಕರಾರನ್ನು ಪ್ರಸ್ತಾಪಿಸಿ ಯಾರ ಯಾರ ಸಮ್ಮುಖದಲ್ಲಿ ದತ್ತು ಸ್ವೀಕಾರವಾಗಿದ್ದಿತೋ ಅವರ ಹೆಸರುಗಳನ್ನು ಪ್ರಕಟಪಡಿಸಿದ್ದನು.

ಎಲಿಸ್ಸನು ಈ ಕಾಗದಕ್ಕೆ ಬೆಂಬಲಕೊಡುತ್ತಾ "ಓರ್ಚಾರಾಜ್ಯಕ್ಕೆ ದತ್ತುಸ್ವೀಕಾರ ಮಾಡಲು ಅನುಮತಿ ಕೊಡಲಾಗಿದೆ. ಓರ್ಚಾರಾಜ್ಯವೆಂತೋ ಝಾನ್ಸಿಯ ರಾಜ್ಯವೂ

ಅಂತೆಯೆ, ಒಂದಕ್ಕೆ ಅನುಮತಿ ಕೊಟ್ಟು ಮತ್ತೊಂದಕ್ಕೆ ಕೊಡದಿರುವುದು ಉಚಿತವಲ್ಲವೆಂದು ತೋರುತ್ತದೆ" ಎಂದು ಬರೆದನು.

ರಾಣಿಯ ಅರ್ಜಿಯು ಸ್ವೀಕೃತವಾಗಬೇಕೆಂಬ ಆಕಾಂಕ್ಷೆಯೇನೂ ಆತನಿಗೆ ಇರಲಿಲ್ಲ. ಓರ್ಛಾರಾಜ್ಯದ ದತ್ತು ಸ್ವೀಕಾರವು ಅಂಗೀಕೃತವಾದನಂತರ ಅವನು ಸ್ವಲ್ಪ ವ್ಯಗ್ರನಾಗಿದ್ದನು—ಕಂಪೆನಿ ಸರ್ಕಾರಕ್ಕೆ ಲಭಿಸಬೇಕಾಗಿದ್ದ ಮೃಷ್ಟಾನ್ನವು ಕೈತಪ್ಪಿದ್ದಿತು.

ಕೆಲವು ತಿಂಗಳನಂತರ ಔಧ್ ಸಂಸ್ಥಾನದ ಪರ್ಯಟನವನ್ನು ಮುಗಿಸಿಕೊಂಡು ಡಲ್‌ಹೌಸಿಯು ಕಲ್ಕತ್ತೆಗೆ ಹಿಂದಿರುಗಿದನು ಝಾನ್ಸಿಯ ವ್ಯವಹಾರವನ್ನು ಚರ್ಚಿಸಲಾಯಿತು. ಅಲ್ಲಲ್ಲೇ ಅತ್ಯಂತ ತಿರಸ್ಕಾರವನ್ನುಂಟು ಮಾಡುವ ಆಕ್ರಂದನಗಳು ಉದ್ಭವಿಸಿದವು.

ಬುಂದೇಲು ಖಂಡದಲ್ಲಿ ಕಂಪೆನೀ ಸರ್ಕಾರದ ರಾಜ್ಯಸ್ಥಾಪನೆಯು ನಮ್ಮ ಪೂರ್ವೀಕರ ಸಹಾಯದಿಂದಲೇ ಏರ್ಪಟ್ಟಿದೆ. ನಮ್ಮ ರಾಜಭಕ್ತಿಯ ಆದರ್ಶವನ್ನು ನೀವು ತಿಳಿಯಲೇ ಬೇಕು. ಯಾವ ಪುರುಷಾರ್ಥಕ್ಕೋಸ್ಕರ ನಿಮ್ಮ ರಾಜ್ಯಭಕ್ತಿಯನ್ನು ಗೋಪ್ಯ ಮಾಡಿದ್ದೀರಿ? ಕರಾರು ಪವಿತ್ರವೇ ಸರಿ. ನೀವು ಪೇಶ್ವೆಯ ಅಡಿಯಾಳಾಗಿದ್ದಿರಿ. ಪೇಶ್ವೆಯನ್ನು ನಾವು ಸೋಲಿಸಿದೆವು. ಅವನು ತನ್ನ ಸ್ವಾಮಿತ್ವವನ್ನು ನಮಗರ್ಪಿಸಿಬಿಟ್ಟನು. ಈಗ ನೀವು ನಮ್ಮ ಅಡಿಯಾಳಾದಿರಿ. ನಮ್ಮ ಇಚ್ಛೆ, ಇಷ್ಟವಿದ್ದರೆ ನಿಮ್ಮ ದತ್ತುಸ್ವೀಕಾರವನ್ನು ಒಪ್ಪಿಕೊಳ್ಳುತ್ತೇವೆ ಇಲ್ಲವಾದರೆ ಇಲ್ಲ.

ಡಲ್‌ಹೌಸಿಯು ಪರ್ಯಾಲೋಚಿಸಿ ಯಾವ ನಿಷ್ಕರ್ಷೆಗೆ ಬಂದನೋ ಅದನ್ನು ಅವನ ಮಂತ್ರಿಮಂಡಲವು ಅನುಮೋದಿಸಿತು.

ನಂತರ ಡಲ್‌ಹೌಸಿಯು ಝಾನ್ಸಿಯ ವ್ಯವಹಾರದ ವಿಷಯದಲ್ಲಿ ಸರ್ ೧೮೫೪ ಫೆಬ್ರವರಿ ೨೭ ನೇ ತಾರೀಖು ಒಂದು ಆಜ್ಞೆಯನ್ನು ಹೊರಡಿಸಿದನು.

"ಝಾನ್ಸಿಯು ಪೇಶ್ವೆಯ ಆಶ್ರಿತರಾಜ್ಯವಾಗಿದ್ದಿತು. ಸರ್ ೧೮೦೪ ರ ಸಂಧಿಯಲ್ಲಿ ಶಿವರಾವ್‌ಭಾವುವು ಈ ವಿಚಾರವನ್ನು ಒಪ್ಪಿಕೊಂಡಿದ್ದನು. ಇಂತಹ ರಾಜ್ಯದಲ್ಲಿ ದತ್ತುಸ್ವೀಕಾರವನ್ನು ಅನುಮೋದಿಸುವ ಅಥವಾ ನಿರಾಕರಿಸುವ ಹಕ್ಕು ನಮ್ಮದು. ಸರ್ ೧೮೩೫ ರಲ್ಲಿ ಝಾನ್ಸಿಯ ಗಾದಿಯನ್ನು ರಾಮಚಂದ್ರರಾಯನಿಗೆ ನಾವು ಕೊಟ್ಟೆವು. ಆತನು ಸರ್ ೧೮೩೫ ರಲ್ಲಿ ಮರಣ ಹೊಂದುವ ಮುನ್ನ ದತ್ತುಸ್ವೀಕಾರಮಾಡಿದನು. ಆ ದತ್ತುಸ್ವೀಕಾರವನ್ನು ಬ್ರಿಟಿಷ್ ಸರ್ಕಾರವು ಪರಿಗಣಿಸಲಿಲ್ಲ. ನಾವು ದಾಮೋದರ ರಾಯನ ದತ್ತುಸ್ವೀಕಾರವನ್ನು ಅನುಮೋದಿಸಲು ಬದ್ಧರಲ್ಲ. ಆದುದರಿಂದ ಝಾನ್ಸಿ ರಾಜ್ಯವನ್ನು ಮುಕ್ತಾಯಗೊಳಿಸಿ ಆಂಗ್ಲೇಯ ರಾಜ್ಯದಲ್ಲಿ ಸೇರಿಸಿಕೊಳ್ಳಲಾಗುವುದು. ನಮ್ಮ ಪೊಲಿಟಿಕಲ್ ಏಜೆಂಟನ ಸಲಹೆಯಂತೆ ರಾಣಿಗೆ ಮಾಸಿಕವೃತ್ತಿಯನ್ನು ಕೊಡ

ಲಾಗುವುದು."

ಈ ಅಜ್ಞೆಯನ್ನು ಕಾನೂನು ಮಾಡಿ ಸ್ ೧೮೫೪ ನ ಮಾರ್ಚಿ ೭ ನೇ ತಾರೀಖು ಕಾನೂನುಗಳ ಪಟ್ಟಿಗೆ ಸೇರಿಸಲಾಯಿತು.

ಡಲ್‌ಹೌಸಿಯ ಈ ಅಜ್ಞೆಯು ಪೊಲಿಟಿಕಲ್ ಏಜೆಂಟ್ ಮಾಲ್ಕಮ್ಮನ ಬಳಿಸೇರಿ ಆತನು ವಿಳಂಬಮಾಡದೆ ಈ ಕೆಳಗೆಕಂಡ ಸೂಚನೆಯನ್ನು ಎಲಿಸ್ಸನಿಗೆ ಕಳುಹಿಸಿದನು—

"ಗೌರ್ನರ್ ಜನರಲ್ ಸಾಹೇಬರು ದತ್ತು ಸ್ವೀಕಾರವನ್ನು ಒಪ್ಪಲಿಲ್ಲ. ಆದುದರಿಂದ ಸ್ ೧೮೫೪ ನೇ ಮಾರ್ಚಿ ೭ ನೇ ತಾರೀಖಿನ ಸರ್ಕಾರದ ಅಜ್ಞೆಯಂತೆ ಝಾನ್ಸಿ ರಾಜ್ಯವು ಬ್ರಿಟಿಷ್ ಇಲಾಖೆಯಲ್ಲಿ ಸೇರಿಹೋಗುವುದು. ಈ ಜಾಹಿರಾತಿನ ಮೂಲಕ ಸರ್ವರಿಗೂ ತಿಳಿಸುವುದೇನೆಂದರೆ, ಝಾನ್ಸಿಪ್ರದೇಶದ ಶಾಸನಾಧಿಕಾರವೆಲ್ಲವೂ ಮೇಜರ್ ಎಲಿಸ್ಸನ ವಶವಾಗುವುದು. ಈ ಪ್ರದೇಶದಲ್ಲಿರುವ ಪ್ರಜೆಗಳೆಲ್ಲರೂ ತಾವು ಬ್ರಿಟಿಷ್ ಸರ್ಕಾರದ ಅಧೀನರೆಂದು ತಿಳಿದು ಮೇಜರ್ ಎಲಿಸ್ಸನಿಗೆ ಸಹಾಯವಿತ್ತು ಸುಖಸಂತೋಷಗಳಿಂದ ಜೀವನ ನಿರ್ವಹಣಮಾಡಬೇಕೆಂದು ತಿಳಿಯಪಡಿಸಿದೆ.

(ಸಹಿ) ಮಾಲ್ಕಮ್.

೧೩—೩—೧೮೫೪

ಪ್ರಜೆಗಳ ಸುಖಸಂತೋಷ! ಅವರ ಕಲ್ಯಾಣ!! ರಾಜಕೀಯ ಕೊಲೆಪಾತಕರಿಗೆಂತಹ ವಿಜಯ ದೊರಕಿತು!!!

## ೩೨

ಮಾಲ್ಕಮ್ಮನು ಈ ಜಾಹಿರಾತನ್ನು ಅತಿಗುಪ್ತವಾಗಿ ಎಲಿಸ್ಸನ ಬಳಿ ರವಾನಿಸಿದನು. ಅಲ್ಲದೆ ರಾಣಿಯು ಜನಪ್ರಿಯಳಾದುದರಿಂದ ಕೆಲಸವನ್ನು ಬಹು ಸಾವಧಾನದಿಂದ ಪ್ರಾರಂಭಿಸಬೇಕೆಂದೂ, ಇಲ್ಲದಿದ್ದರೆ ಝಾನ್ಸಿಯ ಜನರು ದಂಗೆ ಏಳಬಹುದೆಂದೂ ಎಚ್ಚರಿಸಿದನು. ಆದುದರಿಂದ ಎಲಿಸ್ಸನು ಸೇನೆಯ ಮೂಲಕ ಝಾನ್ಸಿಯ ಬಂದೋಬಸ್ತನ್ನು ಮಾಡಿದನು.

ಎಲಿಸ್ಸನು ಆ ಜಾಹಿರಾತನ್ನು ಒಂದು ಕಿಸೆಯಲ್ಲಿ ಭದ್ರಪಡಿಸಿ ಮತ್ತೊಂದು ಕಿಸೆಯಲ್ಲಿ ಪಿಸ್ತೂಲನ್ನು ಇಟ್ಟುಕೊಂಡನು. ನಂತರ ಸಶಸ್ತ್ರಅಂಗರಕ್ಷಕರೊಡನೆ ರಾಣಿಯನ್ನು ಕಾಣಲು ಕೋಟೆಯ ಅರಮನೆಯ ದ್ವಾರವನ್ನು ಸೇರಿದನು. ರಾಣಿಗೆ ಎಲಿಸ್ಸನ ಬಳಿಗೆ ಗೌರ್ನರ್ ಜನರಲ್ ಸಾಹೇಬನ ಅಜ್ಞಾಪತ್ರವು ಬಂದಿರುವುದೆಂದೂ, ಅದನ್ನು ತಿಳಿಸಲು ಎಲಿಸ್ಸನು ಬರುವನೆಂದೂ ಸೂಚನೆ ಕೊಡಲಾಗಿದ್ದಿತು. ಮೋರೋ

ಪಂತ್ ಇತ್ಯಾದಿಗಳು ಬಹುದಿನಗಳಿಂದಲೂ ಆಶಾಭರಿತರಾಗಿ ಕಾದು ಕುಳಿತಿದ್ದರು. ಎಲ್ಲರೂ ನಿಯುಕ್ತ ಸಮಯಕ್ಕೆ ದಿವಾನಖಾನೆಯಲ್ಲಿ ಬಂದು ಸೇರಿದರು. ರಾಣಿಯು ಪರದೆಯ ಹಿಂದೆ ಕುಳಿತಿದ್ದಳು. ದಾಮೋದರರಾಯನೂ ಒಂದು ಉನ್ನತ ಪೀಠದಲ್ಲಿ ಕುಳಿತಿದ್ದನು.

ಎಲಿಸ್ಸನು ಸ್ಥಿರವಾದ ಹೆಜ್ಜೆಗಳನ್ನಿಡುತ್ತಾ ಕಂಪಿಸುವ ಹೃದಯವನ್ನು ಹೊತ್ತು ದಿವಾನಖಾನೆಯನ್ನು ಪ್ರವೇಶಿಸಿದನು. ಮೋರೋಪಂತ್ ಮೊದಲಾದವರು ಬಹು ವಿನೀತಭಾವದಿಂದ ಅಭಿವಾದನ ಮಾಡಿದರು. ಅಲ್ಲೇ ಸುತ್ತು ವೀಳ್ಯವು ಸಿದ್ಧಪಡಿಸಿದ್ದಿತು. ಕೋಟೆಯ ಬುರುಜಿನ ಮೇಲೆ ಸಂತೋಷಸೂಚಕಾರ್ಥವಾಗಿ ತೋಪು ಹಾರಿಸಲು ಎಲ್ಲವೂ ಸಿದ್ಧವಾಗಿದ್ದಿತು. ಎಲಿಸ್ಸನು ಯಾವ ಮಾತನ್ನೂ ಆಡದೆ ಅಭಿನಂದನೆಗೆ ಪ್ರತ್ಯುತ್ತರವಾಗಿ ತಲೆಬಾಗಿಸಿ ಪೀಠವನ್ನಲಂಕರಿಸಿದನು.

ಮೋರೋಪಂತನು ಅತಿವಿನಯದಿಂದ "ಸಾಹೇಬರೆ, ನೀವು ಇಷ್ಟು ದೂರ ದಯಮಾಡಿಸಲು ಬಹಳ ತೊಂದರೆ ತೆಗೆದುಕೊಂಡಿರಿ" ಎಂದು ಹೇಳಿದನು.

ಎಲಿಸ್ಸನು ಪ್ರಯಾಸದಿಂದ "ಅದು ನನ್ನ ಕರ್ತವ್ಯ, ಆದರೆ ದುಃಖದಾಯಕವಾದ ಕರ್ತವ್ಯವಾಗಿದೆ" ಎಂದನು.

ಎಲ್ಲರೂ ನಿಸ್ತಬ್ಧರಾದರು.

ಎಲಿಸ್ಸನು "ಮಹಾರಾಣಿಯವರು ಬಂದಿದ್ದಾರೆಯೆ ?" ಎಂದನು.

ದಿವಾನನು "ಹೌದು ಸಾಹೇಬ್, ಪರದೆಯ ಹಿಂದೆ ವಿರಾಜಿಸುತ್ತಿದ್ದಾರೆ" ಎಂದನು.

ಎಲಿಸ್ಸನು ಮಾಲ್ಕಮ್ಮನ ಪ್ರಕಟಣೆಯನ್ನು ಜೇಬಿನಿಂದ ತೆಗೆದನು. ಅಲ್ಲಿ ನೆರೆದಿದ್ದವರ ಹೃದಯವು ಡವಡವನೆ ಹೊಡೆದುಕೊಳ್ಳಲಾರಂಭಿಸಿತು. ಸಾವಧಾನದಿಂದ ಎಲ್ಲರೂ ಘೋಷಣೆಯನ್ನು ಕೇಳಿದರು.

ಗುಲಾಮ್ ಗೌಸ್ ಖಾನನೆಂಬ ತೋಪಚಿಯು ಸಂತೋಷ ಸಮಾಚಾರವು ಹೊರಬೀಳುವುದೆಂಬ ಆಸೆಯಿಂದ ದಿವಾಣಖಾನೆಯ ಬಾಗಿಲಿನ ಹಿಂದೆ ಕಿವಿಗೊಟ್ಟು ಕೇಳುತ್ತಿದ್ದನು. ಪ್ರತಿಕೂಲವಾದ ಘೋಷಣೆಯನ್ನು ಕೇಳಿ ತಲೆ ತಗ್ಗಿಸಿಕೊಂಡು ಹೊರಟುಹೋದನು.

ಘೋಷಣೆಯನ್ನು ಕೇಳಿದನಂತರ ಮೋರೋಪಂತನ ಮುಖದಿಂದ 'ಓಹೊ!' ಎಂಬ ಶಬ್ದವು ಹೊರಬಿದ್ದಿತು. ದಿವಾನನು "ಹಾಯ್!" ಎಂದನು. ಅಲ್ಲಿ ನೆರೆದಿದ್ದವರೆಲ್ಲರೂ ಸಂತಾಪ ಸೂಚಿಸಿದರು. ದಾಮೋದರರಾಯನು ಏನಾಯಿತೆಂದು ತಿಳಿಯಲು ಯತ್ನಿಸುತ್ತಿದ್ದನು. ಅವನಿಗೆ ಏನೋ ಹಾನಿಯು ನಡೆದಿದೆಯೆಂದು ಮಾತ್ರ ವ್ಯಕ್ತವಾಯಿತು. ಇದ್ದಕಿದ್ದಂತೆಯೇ ರಾಣಿಯು ಪರದೆಯ ಹಿಂದಿನಿಂದ ಮಧುರವಾದ

ಉಚ್ಚಸ್ವರದಲ್ಲಿ "ನಾನು ಝಾನ್ಸಿಯನ್ನು ಮಾತ್ರ ಬಿಟ್ಟು ಕೊಡುವುದಿಲ್ಲ" ಎಂದಳು *

ದಿವಾನಖಾನೆಯಲ್ಲಿ ಈ ಶಬ್ದವು ಪ್ರತಿಧ್ವನಿಸಿ ವಾಯುಮಂಡಲದಲ್ಲಿ ಸಮ್ಮಿಶ್ರಿತವಾಯಿತು. ಆ ಶಬ್ದವು ಭಾರತದ ಇತಿಹಾಸದಲ್ಲಿ ಹೆಣೆದು ಹೋಗಿವೆ ; ಝಾನ್ಸಿಯ ಮಕುಟದಲ್ಲಿ ಮಾಣಿಕ್ಯವಾಗಿ ನಿಂತಿದೆ.

ಎಲಿಸ್ಸನ ಕಂಪಿಸುತ್ತಿದ್ದ ಹೃದಯವು ಸ್ತಿಮಿತಕ್ಕೆ ಬಂದಿತು. ಆತನು "ನನಗೆ ಮಾಲ್ಕಮ್ಮರ ಮೂಲಕ ಬಂದ ಗೌರ್ನರ್ ಜನರಲ್ ಸಾಹೇಬರ ಆಜ್ಞೆಯನ್ನು ನಿಮ್ಮ ಮುಂದಿರಿಸಿದ್ದೇನೆ. ನನ್ನ ಕೈಯಲ್ಲಾದುದನ್ನು ನಾನು ಮಾಡಿದ್ದೇನೆ. ನಾವೆಲ್ಲರೂ ಗೌರ್ನರ್ ಜನರಲ್ ಸಾಹೇಬರ ಆಜ್ಞಾನುವರ್ತಿಗಳು. ಆದುದರಿಂದ ಅಸಂತೋಷಕ್ಕೆ ಯಾವ ಕಾರಣವೂ ಇಲ್ಲವೆಂದು ಭಾವಿಸುತ್ತೇನೆ.

ಐದು ಸಹಸ್ರ ರೂಪಾಯಿಯ ಮಾಸಿಕ ವೇತನವು ಮಹಾರಾಣಿ ಸಾಹೇಬರಿಗೂ ಅವರ ಕುಟುಂಬಕ್ಕೂ ಹೇರಳವಾಗುವುದು. ಗೌರ್ನರ್ ಜನರಲ್ ಸಾಹೇಬರು ಬಹಳ ಉದಾರತೆಯನ್ನು ಪ್ರದರ್ಶಿಸಿರುವರೆಂದು ಒಪ್ಪಿಕೊಳ್ಳಲೇ ಬೇಕು." ಎಂದು ಹೇಳಿದನು.

ಎಲಿಸ್ಸನ ಮಾತು ಮುಕ್ತಾಯವಾಗುವುದರೊಳಗಾಗಿ ರಾಣಿಯು ಪುನಃ ತನ್ನ ಸ್ವಭಾವಸಿದ್ಧವಾದ ಮಧುರ ಮತ್ತು ಸ್ಥಿರವಾದ ಸ್ವರದಿಂದ ಹೇಳಿದಳು. "ನನಗೆ ಈ ವೇತನವು ಬೇಕಾಗಿಲ್ಲ. ನಾನು ಅದನ್ನು ಸ್ವೀಕರಿಸುವುದಿಲ್ಲ."

ಎಲಿಸ್ಸನು ಇನ್ನು ಹೆಚ್ಚು ಹೊತ್ತು ಅಲ್ಲಿ ನಿಲ್ಲುವುದು ಸೂಕ್ತವಲ್ಲವೆಂದು ಭಾವಿಸಿ ದಿವಾನನೊಂದಿಗೆ "ತಾವು ಶೀಘ್ರವಾಗಿ ಬಂದು ನನ್ನನ್ನು ಭೇಟಿಮಾಡಿ" ಎಂದು ಹೇಳುತ್ತಾ ಹೊರಟುಹೋದನು.

ದಿವಾನನು ವೀಳ್ಯವನ್ನು ಸ್ವೀಕರಿಸುವಂತೆ ಒತ್ತಾಯಮಾಡಿದನು. ಆತನು ಅದನ್ನು ಸ್ವೀಕರಿಸಿ ಹೊರಟುಹೋದನು.

ಮುಂದರಿಯು ರಾಣಿಯ ಬಳಿ ಪರದೆಯ ಹಿಂದೆ ಕುಳಿತಿದ್ದಳು. ಅವಳು ಘೋಷಣೆಯನ್ನು ಕೇಳಿದೊಡನೆ ಮೂರ್ಛಿತಳಾದಳು. ಎಲಿಸ್ಸನು ಹೊರಟುಹೋದ ನಂತರ ಪ್ರಜ್ಞೆ ತಿಳಿದಳು.

ರಾಣಿಯು "ಮೂರ್ಛೆ ಹೋಗುವುದನ್ನು ಯಾರಿಂದ ಕಲಿತೆ? ಏನು ಇಷ್ಟು ಸಣ್ಣ ರಾಜ್ಯಕ್ಕೋಸ್ಕರವೇ ನಾವು ಬದುಕಿರುವುದು ?" ಎಂದು ಕೇಳಿದಳು.

ಮುಂದರಿಯು ರೋದನಮಾಡಲು ಆರಂಭಿಸಿದಳು. ರಾಣಿಯು ಅವಳನ್ನು ಸಂತೈಸಿದಳು. ಮೋರೋಪಂತ್ ಮುಂತಾದವರು ಅವಳಿಗೆ ಬುದ್ಧಿವಾದ ಹೇಳಿದರು.

ದಿವಾನನು "ನಾನು ಎಲಿಸ್ಸನ ಬಳಿಗೆ ಹೋಗಲೆ ? ಆತನು ನನ್ನನ್ನು ಕರೆದಿರು

---

* ಪರಿಶಿಷ್ಟವನ್ನು ನೋಡಿ.

ವನು.” ಎಂದು ರಾಣಿಯನ್ನು ಕೇಳಿದನು.

ರಾಣಿ ಅನುಮತಿಯಿತ್ತು ರಾಣಿವಾಸಕ್ಕೆ ಹೊರಟು ಹೋದಳು. ಕೆಲವುಕ್ಷಣಗಳಲ್ಲಿ ಈ ಸಮಾಚಾರವು ನಗರದಲ್ಲೆಲ್ಲಾ ಹರಡಿತು. ಆ ಸಮಯದಲ್ಲಿ ಝಾನ್ಸಿಯ ಪ್ರಜೆಗಳ ಕ್ಷೋಭೆಗೆ ಪರಿಮಿತಿ ಇರಲಿಲ್ಲ.

ರಾಣಿಯ ಸೈನ್ಯವು ಒಡನೆಯೇ ಯುದ್ಧ ಮಾಡಲು ಕಾತರವಾಗಿದ್ದಿತು. ಆದರೆ ರಾಣಿಯು ಅದನ್ನು ನಿವಾರಣೆ ಮಾಡಿ ಇನ್ನೂ ಸಮಯ ಬಂದಿಲ್ಲವೆಂದು ಹೇಳಿಕಳುಹಿಸಿದಳು. ಝಲಕಾರಿಯು ಈ ಸುದ್ದಿಯನ್ನು ಕೇಳಿ ಅವಳ ಪತಿ ಪೂರಣನೊಂದಿಗೆ “ಈ ಆಂಗ್ಲೇಯರು ನಾಶವಾಗಲೀ ಝಾನ್ಸಿಯನ್ನು ಕಿತ್ತುಕೊಂಡಿದ್ದಾರೆ” ಎಂದಳು.

## ೩೩

ಎಲಿಸ್ಸನು ಆಂಗ್ಲೇಯ ಅಧಿಕಾರವನ್ನು ಝಾನ್ಸಿಯಲ್ಲಿ ಚಲಾಯಿಸಲು ಎಲ್ಲಾ ಏರ್ಪಾಡುಗಳನ್ನೂ ಮಾಡಿದನು.

ದಿವಾನನಿಂದ ಎಲ್ಲಾ ಕಛೇರಿಗಳ ಬೀಗದ ಕೈಗಳನ್ನೂ ವಶಪಡಿಸಿಕೊಂಡನು. ಪೋಲಿಸು ಠಾಣೆಗಳಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಮತ್ತು ನಗರದಲ್ಲಿ ಆಂಗ್ಲೇಯರು ಝಾನ್ಸಿಯನ್ನು ವಶಪಡಿಸಿಕೊಂಡರೆಂದೂ, ತಾನು ಅವರ ಅಧಿಕಾರಿಯೆಂದೂ ಡಂಗುರವನ್ನು ಹಾಕಿಸಿದನು. ತಹಸೀಲುಗಳಿಗೆಲ್ಲಾ ಈ ಸಮಾಚಾರವನ್ನು ತಿಳಿಯಪಡಿಸಿ ಆಂಗ್ಲೇಯ ಸರ್ಕಾರವನ್ನು ಸ್ಥಾಪಿಸಿದನು.

ದಿವಾನನು ಈ ಎಲ್ಲ ವಿಚಾರಗಳನ್ನು ರಾಣಿಗೆ ಆಮೂಲಾಗ್ರವಾಗಿ ವಿವರಿಸಿ ವಿರಕ್ತ ಭಾವದಿಂದ ತನ್ನ ಮನೆಗೆ ಹಿಂದುರಿಗಿದನು. ರಾಣಿಯ ದಿನಚರಿಯಲ್ಲಿ ಯಾವ ಮಾರ್ಪಾಡೂ ಉಂಟಾಗಲಿಲ್ಲ. ತನ್ನ ಕಾರ್ಯಕ್ರಮದ ಪ್ರಕಾರ ಅವಳು ವಿಶ್ರಾಂತಿ ಹೊಂದುತ್ತಿದ್ದಾಗ ಅವಳ ಸಖಿಯರಾದ ಸುಂದರಿ, ಮುಂದರಿ ಮತ್ತು ಕಾಶಿಯವರುಗಳು ಆಭರಣರಹಿತರಾಗಿ ಅವಳ ಬಳಿಗೆ ಬಂದರು.

ರಾಣಿಯು ಚಕಿತಳಾಗಿ “ಇದೇನಿದು! ಆ ಭೂಷಣಗಳನ್ನು ತ್ಯಜಿಸಿ ಬಂದಿರುವಿರಿ, ಏನು ಈಗಲೇ ರಣಭೂಮಿಗೆ ಇಳಿಯಬೇಕೆ ?” ಎಂದು ಕೇಳಿದಳು.

ಮುಂದರಿಯು ನಸುನಕ್ಕಳು; ಸುಂದರಿ ಮತ್ತು ಕಾಶಿಯರ ನೇತ್ರಗಳು ಚಂಚಲವಾದವು.

ರಾಣಿಯು ಪುನಃ ಹೇಳಿದಳು “ಈ ಚಿಹ್ನೆಯಾದರೋ ಅಸಮರ್ಥತೆ ಮತ್ತು ಅಶಕ್ತತೆಯನ್ನು ತೋರುತ್ತನೆ. ನೀವು ಆ ಭೂಷಣಗಳನ್ನುಧರಿಸಿ ಏನೂ ಅತಿಶಯವು ನಡೆಯಲೇ ಇಲ್ಲವೆಂಬ ರೀತಿಯಲ್ಲಿರಿ.”

ಮುಂದರಿಯು ರಾಣಿಯ ಚರಣಗಳನ್ನು ಹಿಡಿದುಕೊಂಡಳು. ಅವಳ ಬಿಕ್ಕಳಿಕೆಯು ಅಡಗಲೇ ಇಲ್ಲ.

ರಾಣಿಯ ಕಂಠವು ರುದ್ಧವಾಯಿತು. ಹುಬ್ಬು ಗಂಟಿಕ್ಕಿ ಬೇರೊಂದು ಕಡೆಗೆ ನೋಡಲಾರಂಭಿಸಿದಳು.

ಕಾಶಿಯು ಅಳುತ್ತಾ "ಬಾಯಿಸಾಹೇಬ್, ಬಾಯಿಸಾಹೇಬ್" ಎಂದು ಅಳಲಿದಳು.

ಸುಂದರಿಯು ಕರುಣಾಪೂರಿತ ಸ್ವರದಿಂದ "ಸರ್ಕಾರ್, ಈಗ ಏನಾಗಬಹುದು ?" ಎಂದಳು.

ರಾಣಿಯು ತನ್ನ ಸ್ವಭಾವಸಿದ್ಧವಾದ ರೀತಿಯಲ್ಲಿ ಸಮಾಧಾನ ತಂದುಕೊಂಡು ಮುಂದರಿಯ ತಲೆಯನ್ನು ನೇವರಿಸಿದಳು. ಅವಳ ನೇತ್ರಗಳು ಅಶ್ರುಪೂರಿತವಾಗಿದ್ದವು. ಸಖಿಯರು ಕಂಬನಿಗೂಡಿದ ಕಣ್ಣುಗಳಿಂದ ರಾಣಿಯ ತೇಜಃಪುಂಜವಾದ ಮುಖಮಂಡಲವನ್ನು ನೋಡಿದರು. ಅವರಿಗೆ ಅನೇಕ ಲಕ್ಷ್ಮೀಬಾಯಿಯರೂ, ಅನೇಕ ತೇಜಸ್ಸುಳ್ಳ ಕಣ್ಣುಗಳೂ ಕಂಡುಬಂದವು. ನಂತರ ಎಲ್ಲರೂ ಕಂಬನಿಗಳನ್ನು ತೊಡೆದುಕೊಂಡರು.

ರಾಣಿಯು "ಈ ಕಣ್ಣೀರು ನಮ್ಮ ಬಲವನ್ನು ಕುಗ್ಗಿಸುವುದು. ಇನ್ನೂ ನಮ್ಮ ಕಾರ್ಯವು ಪ್ರಾರಂಭಿಸಿಯೇ ಇಲ್ಲ. ಯೋಚಿಸಿ ನೋಡಿ. ಛತ್ರಪತಿ ಶಿವಾಜಿಯ ನಂತರ, ಸಾಂಬಾಜಿಯು ಮಡಿದು, ಸಾಹುವು ಸಮಾಪ್ತಿಯಾಗಿ, ರಾಜಾರಾಮನು ಗತಿಸಿದನಂತರ, ತಾರಾಬಾಯಿಗೆ ಇದ್ದ ಬೆಂಬಲವೇನು? ಅಷ್ಟು ದೊಡ್ಡ ಮೊಗಲ್ ಸಾಮ್ರಾಟನನ್ನು ಆಕೆಯು ಹೇಗೆ ಸೋಲಿಸಿದಳು? ಅವಳು ಸ್ವರಾಜ್ಯಸೂತ್ರವನ್ನು ಹೇಗೆ ಹಿಡಿದಳು? ಅಳುತ್ತ ಳುತ್ತಲೆ? ವಸ್ತ್ರಾಭರಣಗಳನ್ನು ಬಿಸುಟಿ? ಹಸಿವಿನಿಂದ ಬಳಲುತ್ತಲೆ? ಪುನಃ ನೋಡಿ, ಜೀಜಾಬಾಯಿಗೆ ಪತಿಸುಖವಿರಲಿಲ್ಲ. ಅವಳು ಛತ್ರಪತಿಯನ್ನು ಸಾಕಿ ಸಲಹಿದಳು, ಏತಕ್ಕಾಗಿ? ಅವಳೇನು ಇಷ್ಟು ತ್ಯಾಗ, ತಪಸ್ಸುಗಳನ್ನು ಮಾಡಿ ತನ್ನ ಪುತ್ರನನ್ನು ಕೇವಲ ಒಂದು ಆನೆಯ ಅಂಬಾರಿಯಲ್ಲಿ ಮೆರವಣಿಗೆ ಮಾಡಿಸಿ, ಮೃದುವಾದ ಗದ್ದಿಗೆಯ ಮೇಲೆ ಕುಳ್ಳಿರಿಸಿ ವಿರಾಜಿಸಬೇಕೆಂದು ಪ್ರಯತ್ನಿಸಿದಳೆ ?" ಎಂದು ಕೇಳಿದಳು.

ಸಖಿಯರು ಚಕಿತರಾದರು.

ರಾಣಿಯು ಮುಂದುವರಿಸುತ್ತಾ "ನಾವೇನು ಮಾಡಬೇಕೆಂಬುದು ನಿರ್ಧರವಾಗಿದೆ. ಮಾರ್ಗದಲ್ಲಿ ಅನೇಕ ತೊಡಕುಗಳು ಬಂದೇ ಬರುತ್ತವೆ. ಅರ್ಜಿಯನ್ನು ಸ್ವೀಕಾರ ಮಾಡದಿದ್ದುದು ಅವುಗಳಲ್ಲಿ ಕೇವಲ ಒಂದು ತೊಡಕು. ಒಂದು ವೇಳೆ ಅದೇನಾದರೂ ಸ್ವೀಕೃತವಾಗಿದ್ದರೆ ನಾವು ಕೇವಲ ವಿರಾಮದಿಂದಲೇ ಈ ಜೀವನವನ್ನು

ಕಳೆದು ಬಿಡುತ್ತಿದ್ದುವೆ? ಶ್ರೀ ಕೃಷ್ಣ ಪರಮಾತ್ಮನ ವಿಧಿಯಂತೆ ನಮಗೆ ಕೇವಲ ಕರ್ಮ ಮಾಡುವ ಅಧಿಕಾರವುಂಟೆಂದು ನೆನಪಿನಲ್ಲಿಡಿ. ಅದರ ಫಲಾಪೇಕ್ಷೆಯು ಕೂಡದು. ನೋಡಿ, ಛತ್ರಪತಿಯ ನಂತರ ಯಾರು ಯಾರು ಸ್ವರಾಜ್ಯಾಭಿಮಾನದಿಂದ ಮುಂದೆ ಬಂದು ತಮ್ಮ ಪಕ್ಷವನ್ನು ಪ್ರಬಲಗೊಳಿಸಿದರೋ, ಅವರು ತೊಡಕುಗಳನ್ನು ತಳ್ಳಿ ಪ್ರತಿಭಟಿಸುತ್ತಲೇ ಇದ್ದರು. ಯಾರ ಲಾಲನೆಯು ಸ್ವಾರ್ಥದ ಕಡೆಗೆ ತಿರುಗಿತೋ ಅವರು ಕೆಳಗೆ ಬಿದ್ದರು. ಸ್ವರಾಜ್ಯಧಾರೆಯು ಬತ್ತಿ ಹೋಯಿತು. ಆದರೆ ಅವರೆಂದಿಗೂ ಸುಖಿಗಳಾಗಲಿಲ್ಲ. ನಮ್ಮ ತಾತಾ ಬಾಜೀರಾವ್ ಪೇಶ್ವೆಯವರು ಪ್ರತಿಭೆಯಡಗಿ ಬಿಟ್ಠೂರನ್ನು ಸೇರಿದರಾದರೂ ನಮಗೆ ಸ್ವರಾಜ್ಯದ ಬೋಧನೆ ಮಾಡುವುದನ್ನು ಮಾತ್ರ ಯಾವಾಗಲೂ ನಿಲ್ಲಿಸಲಿಲ್ಲ. ಭಾರತದಲ್ಲಿ ಯಾರು ಆ ಪವಿತ್ರ ಕಾರ್ಯವನ್ನು ಕೈಗೊಳ್ಳದಿದ್ದರೂ ನಾನು ನನ್ನ ಕೃಷ್ಣ ಪರಮಾತ್ಮನ ಮುಂದೆ ನನ್ನ ಆತ್ಮದಲ್ಲಿ ಆ ಕಾರ್ಯ ಸಾಧನೆ ಮಾಡುವೆನೆಂದು ಪ್ರತಿಜ್ಞೆ ಮಾಡಿರುವೆನು. ಮಾಡಿಯೇ ಮಾಡುವೆನು. ನನ್ನ ವಶದಲ್ಲಿ ನಿಲ್ಲುವುದಕ್ಕೆ ಅಂಗೈಯಷ್ಟು ಭೂಮಿಯಿಲ್ಲದಿದ್ದರೂ ನಾನು ಪ್ರಯತ್ನ ಮಾಡುವೆನು. ಒಂದು ವೇಳೆ ನಾನು ಸಫಲಗೊಳ್ಳದಿದ್ದರೂ ಯಾವ ಸ್ವರಾಜ್ಯಧಾರೆಯನ್ನು ನಾನು ಮುಂದುವರಿಸುವೆನೋ ಅದು ಅಕ್ಷಯವಾಗಿ ನಿಲ್ಲುವುದು. "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ" ಎಂಬ ಗೀತೆಯ ವಾಕ್ಯವನ್ನು ಮಾತ್ರ ಮರೆಯಬೇಡಿ. ಒಂದು ಸಂತೋಷದ ವಿಷಯವೇನೆಂದರೆ ಪ್ರಜೆಗಳು ನನ್ನವರಾಗಿದ್ದಾರೆ. ಪ್ರಜೆಗಳೇ ನಮ್ಮ ಸರ್ವಸ್ವ, ಪ್ರಜೆಗಳು ಅಮರರು, ಅವರನ್ನು ಸ್ವರಾಜ್ಯ ಸೂತ್ರದಲ್ಲಿ ಕಟ್ಟಬೇಕು. ಆಂಗ್ಲೇಯರು ರಾಜರುಗಳನ್ನು ವಶಪಡಿಸಿಕೊಳ್ಳಬಹುದು. ಆದರೆ ಜನತೆಯನ್ನು ವಶಮಾಡಿಕೊಳ್ಳಲಾಗುವುದಿಲ್ಲ. ಇದೇ ಜನತೆಯ ಮುಂದೆ ಸ್ವರಾಜ್ಯ ಪತಾಕೆಯನ್ನು ಹಾರಿಸುವ ಸುದಿನವು ಬರುವುದು."

ಸಖಿಯರ ನೇತ್ರಗಳಲ್ಲಿ ಆಶ್ಚರ್ಯವು ಉಕ್ಕಿ ಹರಿಯಿತು.

ರಾಣಿಯು "ಈ ದಿನ ನಾನೊಂದು ತಪ್ಪು ಕೆಲಸ ಮಾಡಿದೆ. ಎಲಿಸ್ಸನ ಮುಂದೆ ಏನನ್ನೂ ಹೇಳಬಾರದಾಗಿದ್ದಿತು. ಇದರಿಂದ ಅವನು ತನ್ನ ಸಂಗಡದೊಂದಿಗೆ ಎಚ್ಚರಗೊಳ್ಳಬಹುದು. ನನ್ನ ವೇತನವನ್ನು ನಿರಾಕರಿಸಬಾರದಾಗಿದ್ದಿತು" ಎಂದಳು.

ಕಾಶಿಯು ದೃಢತೆಯಿಂದ "ಈಗ ಏನುಮಾಡಬೇಕು?" ಎಂದಳು.

ರಾಣಿಯು "ಆಂಗ್ಲೇಯರು ಬಹಳ ಧೂರ್ತರು. ಅವರಲ್ಲಿ ಚಾಣಕ್ಯನ ರೀತಿಯೇ ಫಲಕಾರಿಯಾಗುವುದು. ನಾನು ವೇತನವನ್ನು ಸ್ವೀಕಾರಮಾಡಿ ಸಾವಧಾನದಿಂದ ಮುಂದಿನ ಕೆಲಸ ಮಾಡುವೆನು. ದಾಮೋದರರಾಯನ ಪರವಾಗಿ ಪ್ರಾರ್ಥನೆಗಳ ಅರ್ಜಿಗಳನ್ನು ಬರೆಸಿ ಅವರ ಸಂಪರ್ಕವನ್ನಿಟ್ಟುಕೊಳ್ಳುವೆನು. ವಿಲಾಯಿತಿಗೆ ಅರ್ಜಿಯನ್ನು ಕಳುಹಿಸುವೆನು. ಇದರಿಂದ ಎಲಿಸ್ಸ್ ಮುಂತಾದವರು ನಾನು ಝಾನ್ಸಿ

ಯನ್ನು ಬಿಟ್ಟುಕೊಡುವುದಿಲ್ಲವೆಂದು ಹೇಳಿದ ವಾಕ್ಯದ ಯಥಾರ್ಥವನ್ನು ಮರೆತು ಬಿಡುವರು. ಅಲ್ಲದೆ ಜನತೆಯು ನಾನೂ ಮತ್ತು ಝಾನ್ಸಿಯೂ ಬೇರ್ಪಟ್ಟಿಲ್ಲವೆಂಬ ಅಂಶವನ್ನು ಮನಗಾಣುವರು."

ಇಷ್ಟರಲ್ಲಿ ಅಲ್ಲಿಗೆ ದಾಮೋದರರಾಯನು ಬಂದನು. ರಾಣಿಯು ಅವನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡಳು. ದಾಮೋದರರಾಯನು "ಅಮ್ಮಾ, ಈ ರಾಜ್ಯವು ಕೈಬಿಟ್ಟುಹೋಗುವುದೇ ?" ಎಂದು ಕೇಳಿದನು.

ರಾಣಿ— ಈ ರಾಜ್ಯವು ಹೋದರೆ ಹೋಗಲಿಬಿಡು. ಸ್ವರಾಜ್ಯವು ಬರುವುದು.

ದಾಮೋದರರಾಯ—ಸ್ವರಾಜ್ಯವೆಂದರೇನು?

ರಾಣಿಯು ನಸುನಗುತ್ತಾ "ಈಗ ಊಟಮಾಡಲು ಹೋಗು. ನಂತರ ಯಾವಾಗ ಲಾದರೂ ತಿಳಿಸುವೆನು" ಎಂದಳು.

ರಾಣಿಯು ವೇತನವನ್ನು ಸ್ವೀಕರಿಸುವುದಾಗಿ ಪತ್ರ ಬರೆದು ಕಳುಹಿಸಿದಳು.

## ೩೪

ಝಾನ್ಸಿಯ ಜನತೆಯು ಸಿಟ್ಟುಗೊಂಡಿರುವ ವಿಚಾರವು ಎಲಿಸ್ಸನನ್ನು ಮುಟ್ಟಿತು. ಆತನು ತನ್ನ ಮನದಲ್ಲಿಯೇ ಒಂದು ನಿರ್ಧಾರಕ್ಕೆ ಬಂದು ಅದಕ್ಕೆ ಅನುಸಾರವಾಗಿ ಮಾಲ್ಕಮ್ಮನಿಗೆ ಒಂದು ಪತ್ರವನ್ನು ಕಳುಹಿಸಿದನು. ಮಾಲ್ಕಮ್ಮನು ಅದರಂತೆ ಗೌರ್ನರ್ ಜನರಲ್ ಸಾಹೇಬನಿಗೆ ಆರಿಕೆಮಾಡಿ ಈ ರೀತಿಯಾಗಿ ಪತ್ರ ಬರೆದನು—

"ರಾಣಿಲಕ್ಷ್ಮೀಬಾಯಿಗೆ ಐದು ಸಹಸ್ರರೂಪಾಯಿ ಆಜೀವ ಮಾಸಿಕವೇತನ ಕೊಡತಕ್ಕದ್ದು. ಅಲ್ಲದೇ ನಗರದಲ್ಲಿರುವ ಅರಮನೆಯು ಅವಳ ಸಂಪತ್ತಿಯಾಗಿ ಅವಳಿಗೆ ಸಲ್ಲತಕ್ಕದ್ದು. ರಾಣಿಯು ಅವಳ ನೌಕರರಿಗೆ ನ್ಯಾಯಶಾಸನಗಳನ್ನು ಅವಳೇ ಮಾಡತಕ್ಕದ್ದು. ರಾಜ್ಯಕ್ಕೆ ಸಲ್ಲಬೇಕಾದ ಮತ್ತು ರಾಜ್ಯದಿಂದ ಕೊಡಬೇಕಾದ ಸಂಪತ್ತನ್ನುಲೆಖ್ಖಾಚಾರ ಮಾಡಿ ಬಾಕಿ ಉಳಿದ ಹಣವನ್ನೂ ರಾಜನ ಸ್ವಂತನಿಧಿ ಮತ್ತು ಸಂಸ್ಥಾನದ ಜವಾಹಿರಿಗಳನ್ನು ಅವಳ ವಶಮಾಡತಕ್ಕದ್ದು. ರಾಜ ಮತ್ತು ರಾಣಿಯ ಬಂಧು ಬಳಗದವರ ಪಟ್ಟಿಯನ್ನು ತಯಾರಿಸಿ ಅವರಿಗೆ ತಕ್ಕ ವ್ಯವಸ್ಥೆಯನ್ನು ಮಾಡ ತಕ್ಕದ್ದು."

ಡಲ್‌ಹೌಸಿಯು ಈ ಶಿಫಾರಸ್ಸನ್ನು ಸ್ವೀಕಾರಮಾಡಿದನು. ಕೇವಲ ರಾಜನ ಖಾಸಾ ಸಂಪತ್ತು ಮತ್ತು ಸಂಸ್ಥಾನದ ಜವಾಹಿರಿಯು ರಾಣಿಗೆ ಸಲ್ಲಬೇಕಾದುದೆಂಬ ಒಂದು ಶರತ್ತನ್ನು ಮಾತ್ರ ಒಪ್ಪಲಿಲ್ಲ. ಆತನು ದಾಮೋದರರಾಯನು ರಾಜ್ಯಾಧಿ ಕಾರಿಯಲ್ಲದಿದ್ದರೂ ಹಿಂದೂ ಧರ್ಮದಂತೆ ಗಂಗಾಧರರಾಯನ ಖಾಸಾ ಆಸ್ತಿಗೆ

ಆತನೇ ಹಕ್ಕುದಾರನು. ಆದುದರಿಂದ ಇವುಗಳು ದಾಮೋದರರಾಯನಿಗೆ ಸಲ್ಲಬೇಕೆಂದು ತೀರ್ಮಾನಿಸಿದನು.

ಡಲ್‌ಹೌಸಿಯು ಈ ಆಜ್ಞೆಯನ್ನು ಸನ್ ೧೮೫೪ರ ಮಾರ್ಚಿ ೭ನೇ ತಾರೀಖಿನ ದಿನ ಪ್ರಚುರಪಡಿಸಿದನು. ಅದರಂತೆಯೇ ಪೊಲಿಟಿಕಲ್ ಏಜೆಂಟನು ಝಾನ್ಸಿಯ ಖಜಾನೆಯಿಂದ ೬ ಲಕ್ಷ ರೂಪಾಯಿಗಳನ್ನು ತೆಗೆದು ದಾಮೋದರರಾಯನ ಹೆಸರಿನಲ್ಲಿ ಆಂಗ್ಲೇಯ ಖಜಾನೆಯಲ್ಲಿ ಭದ್ರಪಡಿಸಿಗನು. ಮತ್ತು ದಾಮೋದರರಾಯನು ಪ್ರಾಪ್ತವಯಸ್ಕನಾದನಂತರ ಬಡ್ಡಿಯ ಸಮೇತ ಹಿಂದಿರುಗಿಸಲಾಗುವುದು ಎಂದು ನಿಷ್ಕರ್ಷೆಮಾಡಿದನು. ಸಂಸ್ಥಾನದ ಎಲ್ಲಾ ಒಡವೆ ವಸ್ತು ನಗನಾಣ್ಯಗಳನ್ನು ದಾಮೋದರರಾಯನ ಮಾತೆ ರಾಣಿಯ ಅಧೀನ ಮಾಡಿದನು.

ನಂಬಿಕೆ ಮತ್ತು ರಾಜನೀತಿಗಳೆರಡೂ ಕಾರ್ಯಗತವಾದವು.

ಆಂಗ್ಲೇಯರ ಅಧಿಕಾರವು ತಡೆಯಿಲ್ಲದೆ ಒಂದೇ ರೀತಿಯಾಗಿ ಮುಂದುವರೆಯಿತು. ಮೊಟ್ಟ ಮೊದಲು ರಾಣಿಯು ಕೋಟೆಯ ಮಹಲ್ಲನ್ನು ಬಿಟ್ಟು ಕೊಡಬೇಕಾಯಿತು. ಕೋಟೆಯಿಂದ ಒಂದು ಸುರಂಗವು ಆನೆ ಕರೋಡಿಗೂ ಅಲ್ಲಿಂದ ನಗರದ ಅರಮನೆಗೂ ಹೋಗುತ್ತಿದ್ದಿತು. ರಾಣಿಯು ಈ ಸುರಂಗ ಮಾರ್ಗವನ್ನು ಮುಚ್ಚಿಸಿ ನಗರದ ಅರಮನೆಗೆ ಸಖಿಯರೊಡನೆ ಬಂದು ಸೇರಿದಳು.

ಆಂಗ್ಲೇಯರ ಸೇನೆಯು ಕಿಲ್ಲೆಯನ್ನು ವಶಪಡಿಸಿಕೊಂಡಿತು. ಅಂದು ರಾತ್ರಿ ಆಂಗ್ಲೇಯ ಅಧಿಕಾರಿಗಳು ವಿಜಯೋತ್ಸವವನ್ನು ನೆರವೇರಿಸಿದರು. ಆ ಸೇನೆಯಲ್ಲಿದ್ದ ಅನೇಕ ಭಾರತೀಯ ಸಿಪಾಯಿಗಳು ಕಂಬನಿಗರೆದು ಮಲಗಿದರು.

ಮಾರನೆಯ ದಿನ ಸಂಸ್ಥಾನದ ಖಾಸಾ ಸಿಪಾಯಿಗಳು ಅಲ್ಲಿದ್ದ ಸಾಮಾನು ಸರಂಜಾಮುಗಳನ್ನು ವಿನಾಶಮಾಡಿ ಕೋಟೆಯ ಮೇಲಿದ್ದ ದೊಡ್ಡದೊಡ್ಡ ತೋಪುಗಳನ್ನು ನಿರುಪಯೋಗಿಗಳನ್ನಾಗಿಮಾಡಿದರು. ಆಂಗ್ಲೇಯರು ಝಾನ್ಸಿ ರಾಜ್ಯದ ಸೇನೆಯೆಲ್ಲವನ್ನೂ ಒಂದೇಬಾರಿಗೆ ಖುಲಾಸೆಮಾಡಿ ಉದಾರ ಭಾವದಿಂದ ಅವರಿಗೆ ಆರು ತಿಂಗಳವೇತನವನ್ನು ಕೊಟ್ಟರು. ಸಿಪಾಯಿಗಳು ಸಂಬಳವನ್ನು ಪಡೆದು ಅರಮನೆಯ ಮುಂದಿನಿಂದ ಹೊರಟರು. ಅವರು ರಾಣಿಯ ಒಂದು ಅಂತಿಮ ದರ್ಶನವನ್ನು ಪಡೆಯುವುದಕ್ಕಾಗಿ ಕಾತರರಾಗಿದ್ದರು. ರಾಣಿಯು ಕಿಟಕಿಯ ಪರದೆ ಹಿಂದೆ ಬಂದು ನಿಂತಳು. ಸಿಪಾಯಿಗಳು ಕಂಬನಿಗೂಡಿ "ರಾಣೀಮಾತಾ! ರಾಣೀ ಮಾತಾ!" ಎಂದು ಕೈಮುಗಿಯುತ್ತಾ ಹೊರಟು ಹೋಗುತ್ತಿದ್ದರು. ರಾಣಿಯು ಪರದೆಯಹಿಂದೆ ಜೋಡಿಸಿದ ಕೈಗಳಿಂದ ಪ್ರತಿನಮಸ್ಕಾರಮಾಡುತ್ತಿದ್ದಳು. ಆಕೆಯು ಸೈನಿಕರ ಕಣ್ಣೀರನ್ನು ಕಂಡು ತನ್ನ ಕಂಬನಿಯನ್ನು ಯಾವುದೋ ಅಪೂರ್ವ ಶಕ್ತಿಯಿಂದ ಅಡಗಿಸಿಟ್ಟಿದ್ದಳು. ಆರು ತಿಂಗಳವೇತನದ ಉದಾರತೆಯು ಕೇವಲಸಿಪಾಯಿ

ಗಳಿಗೆ ಮಾತ್ರ ಅನ್ವಯಿಸಿತು. ಬಾಕಿಹುದ್ದೇದಾರರೂ ಅಧಿಕಾರಿಗಳೂ ಬರಿ ಕೈಯಿಂದ ಮನೆಗೆ ಹಿಂದಿರುಗಿದರು. ಶಾನುಭೋಗಿಕೆ ಮುಂತಾದವುಗಳಿಂದ ಹೊಟ್ಟೆ ಹೊರೆದು ಕೊಳ್ಳುತ್ತಿದ್ದವರ ಅರ್ಜಿಗಳನ್ನು ಜಾಗ್ರತೆಯಾಗಿ ಮಂಜೂರು ಮಾಡಲಾಯಿತು.

ನಗರದ ಎಲ್ಲಾ ಹೆಬ್ಬಾಗಿಲುಗಳ ಮುಖ್ಯಸ್ಥನಾಗಿದ್ದು, ಸಂಸ್ಥಾನದಲ್ಲಿ ಒಂದು ಉನ್ನತ ಹುದ್ದೆಯಲ್ಲಿದ್ದ ಬಕ್ಷೀಷ್ ಆಲೀ ಎಂಬುವನನ್ನೂ ಬಂದೀಖಾನೆಯ (ಜೈಲ್) ದರೋಗನನ್ನಾಗಿ ನೇಮಿಸಲಾಯಿತು.

ಹೆಚ್ಚು ಕಡಿಮೆ ಎಲ್ಲಾ ಜಮೀನ್ದಾರಿಗಳನ್ನೂ ಸಮಾಪ್ತಿಗೊಳಿಸಿದರು. ಕೇವಲ ಗುರಸರಾಯ್, ಕಟೇರಾ, ಮತ್ತು ಗುಸಾಯಿಯ ಜಹಗೀರುಗಳು ಉಳಿದು ಕೊಂಡವು- ರಸ್ತೆಯನ್ನು ಸರಿಪಡಿಸುವ ಉರುಳುಗಲ್ಲಿನ ಕೆಳಗೆ ಒಂದೆರಡು ನೊರಜುಗಲ್ಲುಗಳು ಪುಡಿ ಯಾಗದೇ ಉಳಿಯುವುದು ಸಹಜವಲ್ಲವೆ! ಚಿಕ್ಕಪುಟ್ಟ ಜಹಗೀರುದಾರರಲ್ಲಿ ಆನಂದ ರಾಯನೂ ಒಬ್ಬನಾಗಿದ್ದನು. ಅವನಿಗೆ ಜಹಗೀರನ್ನು ಕೊಟ್ಟಿರುವುದಾಗಿ ಲಿಖಿತವಾ ಗಿದ್ದ ಒಂದು ತಾಮ್ರಪತ್ರವಿದ್ದಿತು. ಅದನ್ನೂ ವಶಪಡಿಸಿಕೊಂಡು ಅದರ ನಕಲನ್ನು ಕಾಗದದ ಪ್ರತದ ಮೇಲೆ ಬರೆದು ಕೊಟ್ಟರು.

ಎಲ್ಲರನ್ನೂ ಕೇಳುವಂತೆ ಆನಂದರಾಯನನ್ನೂ "ಕೆಲಸ ಮಾಡಲು ಒಪ್ಪು ವೆಯಾ?" ಎಂದು ಕೇಳಿದರು.

"ಯಾವ ಕೆಲಸ?"

"ಶಾನುಭೋಗಿಕೆ."

"ಸಾಧ್ಯವಿಲ್ಲ. ಭೂಮಿಯನ್ನುತ್ತು ಹೊಟ್ಟೆಹೊರೆದು ಕೊಳ್ಳುವೆನು."

"ಸಹಾಯಕ ಠಾಣೇದಾರನಾಗಿರುವೆಯಾ?"

"ಆಗಲಿ."

ಆ ಸಂಸ್ಥಾನದಲ್ಲಿ ಸಹಸ್ರಾರು ಮಂದಿ, ಸ್ವಲ್ಪ ಓದುಬರಹ ತಿಳಿದವರು. ಅಲ್ಪ ವೇತನವನ್ನು ಪಡೆದರೂ ಸುಖಸಂತೋಷದಲ್ಲಿ ತಮ್ಮ ಜೀವನ ನಿರ್ವಹಣೆಮಾಡುತ್ತಿ ದ್ದರು. ಅಂತಹ ಸಂಸ್ಥಾನದಲ್ಲಿ ಈಗ ಕೇವಲ ಕೆಲವು ಉನ್ನತಾಧಿಕಾರಿಗಳೂ ಚಿಕ್ಕ ಚಿಕ್ಕ ಜಹಗೀರುದಾರರುಗಳೂ ಆಂಗ್ಲೇಯರ ಕೈಕೆಳಗೆ ಚಿಕ್ಕ ಪುಟ್ಟ ಪದವಿಗಳನ್ನು ಸ್ವಲ್ಪ ಅಧಿಕವೇತನದ ಮೇಲೆ ಒಪ್ಪಿಕೊಂಡು ಕೆಲಸಮಾಡಲು ಆರಂಭಿಸಿದರು. ಹೆಚ್ಚು ಸಂಬಳ ಗಳಿಸುವ ಅತ್ಯುನ್ನತ ಪದವಿಗಳಿಗೆ ಆಂಗ್ಲೇಯ ಅಧಿಕಾರಿಗಳು ನೇಮಿತ ರಾದರು—ರಾಜನ ಸ್ಥಾನದಲ್ಲಿ ಒಬ್ಬ ಆಂಗ್ಲೇಯ ಕಮಿಷನರ್, ಹನ್ನೆರಡು ಮಂತ್ರಿ ವರ್ಯರ ಸ್ಥಾನದಲ್ಲಿ ಒಬ್ಬ ಡೆಪ್ಯುಟಿ ಕಮಿಷನರ್ ಮತ್ತು ಒಂದೆರಡು ಪರಗಣ ಹಾಕಿಮ್ (Sub-Divisional Officer), ಸಹಸ್ರಾರು ಸಿಪಾಯಿಗಳ ಬದಲು ೨೦೦–೩೦೦ ಪರಂಗಿ ಸೈನಿಕರು ನಿಯುಕ್ತರಾದರು. ದರ್ಬಾರುಗಳು ಮುಕ್ತಾಯ

ಗೊಂಡವು—ಕವಿ, ಚಿತ್ರಕಾರ, ಧ್ರುವಪದ ಹಾಡುವವರು, ಸಿತಾರು ನುಡಿಸುವವರು ಎಲ್ಲರನ್ನೂ ಬೀಳ್ಕೊಡಲಾಯಿತು.

ಇವೆಲ್ಲವುಗಳ ಬದಲು ಕ್ಲಬ್, ಪ್ರವಾಸಿಮಂದಿರ, ಹಿರಿಯ ಕಿರಿಯ, ಉತ್ತಮ, ನೀಚ ಎಲ್ಲಾ ವರ್ಗದ ಹಿಂದೂಸ್ಥಾನೀಯರೂ ಹಣೆ ಮುಟ್ಟಿ ಸಲಾಮು ಮಾಡುವುದು, ಇವುಗಳು ಹುಟ್ಟಿಕೊಂಡವು. ಬಾಗಿಲಿನಲ್ಲಿ ನಿಂತಿರುವ ನೌಕರನ ಕೈಗೆ ಲಂಚವಿತ್ತು, ಕಾಲಿನ ಜೋಡನ್ನು ಕಳಚಿಟ್ಟು, ವಿಲಾಯತಿಯ ಸಾಹೇಬನ ಸಮ್ಮುಖದಲ್ಲಿ ನತಮಸ್ತಕನಾಗಿ ಹೋದರೆ ಆಗ ಆತನ ಅದೃಷ್ಟವು ಕುಲಾಯಿಸುತ್ತಿದ್ದಿತು. ನೆಯ್ಗೆಯವರೂ ಕೈಮಗ್ಗ, ಕೈಮಗ್ಗದ ಬಟ್ಟೆ, ಎಲ್ಲವೂ ಮಾಯವಾದವು. ನಡೆದ ಒಂದು ಮಹತ್ಪೂರ್ಣವಾದ ಕಾರ್ಯವೇನೆಂದರೆ—ಗಂಗಾಮಾತೆಯ ಮಡಿಲಲ್ಲಿದ್ದ ಚಿನ್ನ ಬೆಳ್ಳಿ ನಗನಾಣ್ಯಗಳೆಲ್ಲವೂ ಥೇಮ್ಸ್ ಮಾತೆಯ ಮಡಿಲನ್ನು ಸೇರಿದವು. ಭಾರತದ ಸಂಪತ್ತನ್ನು ವಿಲಾಯತಿಯಲ್ಲಿ ಭದ್ರಪಡಿಸಲಾರಂಭವಾಯಿತು.

ಹಿಂದೂಸ್ಥಾನದ ಆಧುನಿಕ ಹೇಳಿಕೆಯಂತೆ.

" ಮಹಫಿಲ್ ಉನ್ಕಿ ಸಾಕಿ ಉನ್ಕ

ಆಂಖೆ ಅಪನಿ ಬಾಕಿ ಉನ್ಕ" (ಅಕ್ಬರ್ ಇಲಹಾಬಾದಿ) (ರಂಗಶಾಲೆಯು ಅವರದೆ; ಮದ್ಯ ಕುಡಿಸುವರ ಪ್ರೇಮಿಯೂ ಅವರದೇ. ರಾಜ್ಯಭಾರವು ಆಂಗ್ಲೇಯರ ಕೈಸೇರಿ ಹಿಂದೂಸ್ಥಾನೀಯರಿಗೆ ನೋಟನೋಡುವ ಭಾಗ್ಯ ಒಂದು ಮಾತ್ರ ಉಳಿಯಿತು.

ಝಾನ್ಸಿಯ ಪ್ರಜೆಗಳು ಅನೇಕರು ಪ್ರಣಾಮಮಾಡಲು ರಾಣಿಯ ಬಳಿಗೆ ಹೋಗುತ್ತಿದ್ದರು. "ಸರ್ಕಾರ್, ತಾವು ಅಪ್ಪಣೆ ಕೊಡುವುದಾದರೆ ಆಂಗ್ಲೇಯರ ನೌಕರಿ ಮಾಡಲೆ?" ಎಂದು ಕೇಳುತ್ತಿದ್ದರು. ರಾಣಿಯು "ಅಗತ್ಯವಾಗಿ ಮಾಡಿ. ಆದರೆ ನಿಮಗೂ ಝಾನ್ಸಿಯ ರಾಜ್ಯದಲ್ಲಿ ಒಂದು ಸ್ಥಾನವಿದ್ದಿತೆಂದು ಮಾತ್ರ ಮರೆಯಬೇಡಿ." ಎಂದು ಉತ್ತರ ದಯಪಾಲಿಸುತ್ತಿದ್ದಳು. ಸೇಟ್ ಸಾಹುಕಾರರು ಬಡಬಡಿಸುತ್ತಿದ್ದುದನ್ನು ಕೇಳಿ ರಾಣಿಯು ಆಶ್ಚರ್ಯಭರಿತಳಾಗುತ್ತಿದ್ದಳು.

ಒಬ್ಬೊಬ್ಬರು ಒಂದೊಂದು ವಿಧವಾಗಿ ಆಕ್ಷೇಪಿಸುತ್ತಿದ್ದರು.

" ನೀವು ಏನಾದರೊಂದು ಉಪಾಯ ಮಾಡುವುದಿಲ್ಲವೇಕೆ ? "

"ವಿಲಾಯತಿಗೆ ಪತ್ರಬರೆದು ಕಳುಹಿಸಿ. ಏನಾದರೂ ಆಗಲಿ ಝಾನ್ಸಿಯನ್ನು ಆಂಗ್ಲೇಯರ ಕೈವಶವಾಗುವುದಕ್ಕೆ ಬಿಡಬಾರದು."

"ನಮ್ಮಿಂದ ಎಷ್ಟು ಧನಸಹಾಯ ಬೇಕಾದರೂ ತೆಗೆದು ಕೊಂಡು ಮೊಕದ್ದಮೆಯನ್ನು ಹೂಡಿ."

"ನಾವು ಆಂಗ್ಲೇಯರ ಬಂಗಲೆಗಳಿಗೆ ಹೋಗಿ ಸಲಾಮು ಹೊಡೆಯಲು ಸಿದ್ಧರಿಲ್ಲ. ಆದುದರಿಂದ ಕಡೆಯಪಕ್ಷ ಪೇಟೆಯನ್ನಾದರೂ ನಿಮ್ಮ ಅಧಿಕಾರಕ್ಕೆ ತೆಗೆದುಕೊಳ್ಳಿ."

"ನಮ್ಮ ವ್ಯಾಪಾರಗಳೆಲ್ಲಾ ನಿಂತು ಹೋಗಿವೆ. ರಾಜ ದರ್ಬಾರೂ, ಸರದಾರರೂ ಯಾರೂ ಇಲ್ಲ. ನಮ್ಮನ್ನು ಕೇಳುವವರೇ ಇಲ್ಲದಂತಾಗಿದೆ."

ರಿಯಾಸತ್ತುಗಳಲ್ಲಿ ಮಾಮೂಲಾಗಿ ರೈತರಿಗೆ ವಿಧಿಸಲಾಗಿದ್ದ ಕಂದಾಯವು ಯಾವಾಗಲೂ ಸಂಪೂರ್ಣವಾಗಿ ವಸೂಲಾಗುತ್ತಿರಲಿಲ್ಲ. ಕೆಲವು ಸಮಯ ಅರ್ಧ ಭಾಗ, ಕೆಲವುಸಮಯ ಕಾಲುಭಾಗ ಅದೂ ಕೂಡ ಪ್ರಾಯಶಃ ಧಾನ್ಯರೂಪದಲ್ಲಿ ವಸೂಲಾಗುತ್ತಿದ್ದಿತು. ಈಗ ಕಾಗದದ ಮೇಲೆ ಬಾಕಿಸಂದಾಯವಾಗ ಬೇಕಾದುದನ್ನು ಬರೆಯುವುದು ಕಡಿಮೆಯಾಯಿತು. ಅದರ ಬದಲು ಎಷ್ಟು ಬರೆದಿದ್ದಿತೋ ಅದರಲ್ಲಿ ರವೆಯಷ್ಟೂ ಬಿಡದೆ ವಸೂಲುಮಾಡುತ್ತಿದ್ದರು, ಅದೂ ನಾಣ್ಯ ರೂಪದಲ್ಲಿ. ಪುಸ್ತಕ ರೀತಿಯಾಗಿ ರಾಜನು ಭೂಮಿಗೆ ಒಡೆಯನಾಗಿದ್ದನು. ಆದರೆ ನಿತ್ಯ ಜೀವನದಲ್ಲಿ ರೈತನು ಒಡೆಯನಾಗಿ ಅದನ್ನು ಮತ್ತಾರಿಗೂ ಕೊಡಲು ಅಧಿಕಾರ ಹೊಂದಿರಲಿಲ್ಲ. ಆಂಗ್ಲೇಯರ ಆಡಳಿತದಲ್ಲಿ ಈ ಕಂದಾಯವನ್ನು ವಸೂಲಿ ಮಾಡಲು ಪ್ರತಿಯೊಂದು ಗ್ರಾಮದಲ್ಲಿಯೂ ಟೇಕೇದಾರನೊಬ್ಬನನ್ನು ನೇಮಿಸಿದ್ದರು. ನಂತರ ಇವರುಗಳಿಗೆ ಜಮೀನುದಾರಿಯನ್ನು ಪ್ರಧಾನಮಾಡಲಾಯಿತು. ಈ ದರ್ಜೆಯವರನ್ನು ಮೇಲೆತ್ತಿದಂತೆಲ್ಲಾ ರೈತನು ಕೆಳಕ್ಕೆ ತುಳಿಯಲ್ಪಟ್ಟನು. ಭೂಮಿಯ ಮೇಲೆ ಅವರಿಗಿದ್ದ ಅಲ್ಪಸ್ವಲ್ಪ ಸ್ವಾಮಿತ್ವವೂ ಜಮೀನ್ದಾರರ ಕೈಸೇರಿತು. ಈ ಎರಡು ಶ್ರೇಣಿಗಳಲ್ಲಿ ಸೌಹಾರ್ದತೆ, ಸಮರಸತೆಗಳನ್ನುಂಟು ಮಾಡುವುದಕ್ಕೂ—ಅಥವಾ ಈ ಎರಡು ಶ್ರೇಣಿಗಳ ಘರ್ಷಣೆಯಲ್ಲಿ ರೈತನನ್ನು ತಲೆ ಎತ್ತದಂತೆ ತುಳಿದಿಡುವುದಕ್ಕಾಗಿಯೂ—ಸಾಹೇಬ, ಅವನ ಕಛೇರಿ, ಅವನ ಬಂಗಲೆ ಇವುಗಳು ಉದ್ಭವಿಸಿದವು.

ಅಳಿದುಳಿದ ಗ್ರಾಮ ಪಂಚಾಯ್ತಿಗಳಿಗೆ ಜಾತಿಮತಗಳ ಜಗಳ ತೀರ್ಮಾನ ಮಾಡುವ ಅಧಿಕಾರ ಮಾತ್ರ ಉಳಿಯಿತು. ಬಾಕಿ ಎಲ್ಲಾ ಹಕ್ಕು ಬಾಧ್ಯತೆಗಳೂ ಆಂಗ್ಲೇಯ ದೌಲತ್ತಿನ ನ್ಯಾಯಾಸ್ಥಾನಗಳಿಗೆ ಸೇರಿಹೋಯಿತು. ಇದನ್ನು ಇಂಗ್ಲೆಂಡಿನಲ್ಲಿ ಕೆಲವು ಆತ್ಮನಿಷ್ಠೆಯುಳ್ಳ ಮಹನೀಯರು ಪ್ರತಿಭಟಿಸಿದರು. ಆದರೆ ಇದರಿಂದೇನೂ ಪ್ರಯೋಜನವಾಗಲಿಲ್ಲ.

ಇಂಗ್ಲೆಂಡು ದೇಶವು ಸಾಮಂತರ ದಬ್ಬಾಳಿಕೆಯನ್ನು ತೊರೆದು ಮಧ್ಯಮ ವರ್ಗದವರ ಆಳ್ವಿಕೆಗೆ ಬಂದಿತು. ಫ್ರಾನ್ಸಿನ ಕ್ರಾಂತಿಯನ್ನು ತಿರಸ್ಕರಿಸುತ್ತಿದ್ದರೂ ಕೂಡ ಅದರ ಸಂಬಂಧದಲ್ಲಿ ಉತ್ಪನ್ನವಾದ "ನ್ಯಾಯ, ಸಮತೆ ಮತ್ತು ಭ್ರಾತೃದೃಷ್ಟಿ" ಎಂಬ ಮೂರು ಶಬ್ದಗಳನ್ನೂ ತಮ್ಮ ಸಾಹಿತ್ಯದ ಶಬ್ದ ಕೋಶದಲ್ಲಿ ಸೇರಿಸಿಕೊಂಡರು. ಇಂಗ್ಲೆಂಡಿನ ಆಗಿನ ರಾಜನೀತಿಯೂ ಪ್ರಭಾವ ಪೂರಿತವಾಗಿದ್ದಿತು. ಮಧ್ಯಮ ವರ್ಗದ ಎಡ್ಮಂಡ್ ಬರ್ಕ್, ಷೆರಿಡನ್ ಮುಂತಾದವರು ಸಿಂಹನಾದ ಮಾಡಿದರು.

ರಾಜನೀತಿಯ ಅಮರ ಸಿದ್ಧಾಂತವು ಪ್ರಚುರವಾಯಿತು. ಮಧ್ಯಮ ವರ್ಗವು ಸ್ಥಿರವಾಗಿ ಪ್ರಗತಿಹೊಂದಿ ಇಂಗ್ಲೆಂಡಿನ ಅಧಿಕಾರವು ಕೈಸೇರುತ್ತಲೇ ಉದಾರತೆಯನ್ನು ಹೊಣೆಗಾರಿಕೆಯು ಮೆಟ್ಟಿತು. ನಿಮ್ನವರ್ಗದ ಅಧಿಕ ಸಂಖ್ಯಾತರಿಗೆ ಈ ಅಧಿಕಾರದ ಸಂಸರ್ಗವಿರಲಿಲ್ಲ. ಯಾವ ಮಧ್ಯಮ ವರ್ಗದವರು ಉದಾತ್ತ ರಾಜನೀತಿಯ ರಾಗಾಲಾಪನ ಮಾಡುತಿದ್ದರೋ ಅವರು ಪ್ರತಿ ಹೆಜ್ಜೆಗೂ 'ಹೌದು', 'ಇಲ್ಲ', ಎಂದು ತಲೆಯಲ್ಲಾಡಿಸಲಾರಂಭಿಸಿದರು.

ಮಧ್ಯಮ ವರ್ಗದ ಉದಾರಮತಾಭಿಮಾನಿಗಳಲ್ಲಿ ಕೆಲವರು ಅಧಿಕಾರ ಕ್ಷೇತ್ರದ ಹೊರಗೇ ಇದ್ದು ಪ್ರಯತ್ನಿಸಿದರೂ, ಆ ಕ್ಷೇತ್ರದಲ್ಲಿ ಪ್ರವೇಶಿಸಲಾಗದಂತಹ ಅವರ ಮಾತನ್ನು ಯಾರು ಕೇಳಬೇಕು?

ರಾಣಿಯು ವಿಲಾಯತಿಗೆ ಅರ್ಜಿಯನ್ನು ಕಳುಹಿಸಿದಳು. ಆದರೆ ಅದಕ್ಕೆ ಪ್ರತ್ಯುತ್ತರವೇ ಬರಲಿಲ್ಲ.

ಪಾರ್ಲಿಮೆಂಟಿನಲ್ಲಿಯೂ ಈ ವಿಚಾರವನ್ನು ಚರ್ಚಿಸಲಾಯಿತು. ಒಬ್ಬ ಸದಸ್ಯನು ಕಂಪೆನಿಯ ಡೈರೆಕ್ಟರುಗಳ ಹಳೆಯ ಮತವನ್ನು ಕುರಿತು ಮಾತನಾಡುತ್ತಾ "ನಮ್ಮ ಇಲಾಖೆಯನ್ನು ಇನ್ನೂ ಹೆಚ್ಚಿಸುವುದು ಬುದ್ಧಿವಂತಿಕೆಯಲ್ಲ, ರಾಜ್ಯವನ್ನು ವಿಸ್ತರಿಸುವುದು ಸಂಕಟಪೂರಿತವಾದುದು. ಅಲ್ಲದೆ ಬ್ರಿಟಿಷರ ಧ್ಯೇಯ, ಪ್ರತಿಷ್ಠೆ ಮತ್ತು ನೀತಿಗೆ ಪ್ರತಿಕೂಲವಾಗಿದೆ ಎಂದನು. ಆ ಸದಸ್ಯನು ಅಂತರರಾಷ್ಟ್ರೀಯ ಕಾನೂನಿನ ನ್ಯಾಯವನ್ನು ವಿಮರ್ಶಿಸಿದನು. ಆತನ ವಾಕ್ಚಾತುರ್ಯವನ್ನು ಹೊಗಳಿ ಅವನ ಬುದ್ಧಿಯನ್ನು ನಿಂದಿಸಿದರು.

ಆಗಸ್ಟ್ ೨ನೇ ತಾರೀಖು ಸನ್ ೧೮೫೪ ರಲ್ಲಿ ತಮ್ಮ ಪೂರ್ವ ಪ್ರತಿಜ್ಞೆಯೆಲ್ಲವನ್ನೂ ಮರೆತು ಬ್ರಿಟಿಷ್ ಸರ್ಕಾರವು ಝಾನ್ಸಿಯ ರಾಜ್ಯವನ್ನು ಆಂಗ್ಲೇಯ ಇಲಾಖೆಗೆ ಸೇರಿಸಿಕೊಳ್ಳಬೇಕೆಂಬ ಮುದ್ರೆಯನ್ನೊತ್ತಿ ಗೌರ್ನರ್ ಜನರಲ್ಲನು ಮಾಡಿದ ಕರಾರಿಗೆ ಒಪ್ಪಿಗೆಯಿತ್ತನು.

ಚುಕ್ಕೀಚೌಧುರಿ, ಮಗನಗಂಧಿ, ಲಾಲಾಶ್ಯಾಮ್, ಝುಮ್ಮಿ, ಭಗ್ಗೀದಾವೂಜು, ಪೂರಣ್‌ಕೋರಿ ಮತ್ತು ಚಂದಿ ಚಮ್ಮಾರ್ ಇತ್ಯಾದಿಗಳು ಎಲ್ಲರೂ ತಮ್ಮ ಗತಿಸಿದ ಸ್ವತಂತ್ರತೆಯೆಡೆಗೆ ಆಕಾಂಕ್ಷೆಯ ದೃಷ್ಟಿಯಿಂದ ನೋಡಲಾರಂಭಿಸಿದರು. ಝಲಕಾರಿಗೆ ವಸ್ತ್ರಾಭರಣಗಳಲ್ಲಿದ್ದ ಹುರುಪು ಮಾಯವಾಯಿತು.

## ೨೬

ಝಾನ್ಸಿಯ ಆಂಗ್ಲೇಯ ಕ್ಲಬ್ಬಿನ ಮುಂಭಾಗದಲ್ಲಿದ್ದ ಮೈದಾನವನ್ನು ಶುದ್ಧಿ

ಮಾಡಿಸುತ್ತಿದ್ದರು. ಬಿಸಿಲಿನಲ್ಲಿ ಕೂಲಿಗಳು ಏದುತ್ತಾ ಕೆಲಸಮಾಡುತ್ತಿದ್ದರು. ಅವರ ಮಾಲೀಕನು ಹತ್ತಿರದಲ್ಲೇ ನಿಂತು ಕೆಲಸದ ಮೇಲುಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದನು.

ಕ್ಲಬ್ಬಿಗೆ, ಸಂಜೆಗೆ ಮುಂಚೆಯೇ, ಕಮಿಷನರ್ ಸ್ಕೀ, ಡೆಪ್ಯುಟಿ ಕಮಿಷನರ್ ಗಾರ್ಡನ್ ಮತ್ತು ಸೈನ್ಯಾಧಿಕಾರಿ ಕ್ಯಾಪ್ಟನ್ ಡನ್‌ಲಪ್ ಇವರುಗಳಿಗೆ ಉಪಹಾರಕ್ಕೆ ಆಹ್ವಾನವಿದ್ದಿತು. ಅವರು ಬರುವುದಕ್ಕೆ ಮುಂಚಿತವಾಗಿಯೇ ಈ ಸ್ಥಳವನ್ನು ಶುದ್ಧಿಗೊಳಿಸಬೇಕೆಂದು ಎಲಿಸ್ಸನ ಇಚ್ಛೆಯಾಗಿದ್ದಿತು.

ಝಾನ್ಸಿಯೊಂದಿಗೆ ಹಲವು ಜಿಲ್ಲೆಗಳನ್ನು ಸೇರಿಸಿ ಅದನ್ನು ಕಮಿಷನರ್ ಸಂಸ್ಥಾನವಾಗಿ ಮಾರ್ಪಡಿಸಿದರು. ಅದರಲ್ಲಿ ಝಾನ್ಸಿಯನ್ನೇ ಪ್ರತ್ಯೇಕ ಜಿಲ್ಲೆಯನ್ನಾಗಿ ಮಾಡಿ, ಈ ಜಿಲ್ಲೆಗೆ ಪ್ರಥಮ ಜಿಲ್ಲಾಧಿಕಾರಿಯನ್ನಾಗಿ ಕ್ಯಾಪ್ಟನ್‌ಗಾರ್ಡನ್‌ನನ್ನು ನೇಮಿಸಿದ್ದರು.

ಮೈದಾನವನ್ನು ಶುದ್ಧಿ ಮಾಡುತ್ತಿದ್ದ ಕೂಲಿಗಳು ಸ್ವಲ್ಪ ನಿಧಾನವಾಗಿ ಕೆಲಸ ನಡೆಸುತ್ತಿದ್ದರು. ಎಲಿಸ್ಸನಿಗೆ ಅದನ್ನು ಕಂಡು ಕೋಪ ಬಂದಿತು. ಅವನು ಕೂಲಿಗಳ ಮೇಸ್ತ್ರಿಯನ್ನು ಬೈದನು.

ಮೇಸ್ತ್ರಿಯು "ಸ್ವಾಮಿ, ಇವರು ಪುಕ್ಕಟ್ಟೆ ಕೆಲಸಮಾಡುತ್ತಿದ್ದಾರೆ. ಅದಕ್ಕೋಸ್ಕರ ಹೊಡೆದು ಕೆಲಸ ಮಾಡಿಸಲು ಹಿಂದೆಗೆದೆನು. ಈಗ ಅವರ ಮೂಳೆ ಮುರಿದು ಕೆಲಸ ತೆಗೆಯುತ್ತೇನೆ" ಎಂದನು.

ಎಲಿಸ್ಸನು "ಈಗ ಮೂಳೆ ಮುರಿಯುವುದು ಬೇಡ. ಸದ್ಯಕ್ಕೆ ಅವರಿಂದ ಹೇಗಾದರೂ ಕೆಲಸಮಾಡಿಸು. ಹೆಚ್ಚು ದ್ರವ್ಯ ದೊರಕುವುದು. ರಿಯಾಸತಿಯಾಗಿದ್ದಾಗ ಇವರಿಗೆ ಪುಕ್ಕಟ್ಟೆ ಕೆಲಸ ಮಾಡಬೇಕಾಗುತ್ತಿದ್ದಿತು." ಎಂದನು.

ಎಲಿಸ್ಸನು ಬಂಗಲೆಯೊಳಕ್ಕೆ ಹೊರಟುಹೋದನು. ಮೇಸ್ತ್ರಿಯು "ಸಂಸ್ಥಾನದಲ್ಲಿ ಬಿಟ್ಟಿ ಕೆಲಸ ಮಾಡಿದರೂ ಅದಕ್ಕೆ ಸರಿಯಾದ ರಿಯಾಯತಿಯು ದೊರಕುತ್ತಿದ್ದಿತು. ಈಗ ನೋಡು, ಹುಡುಗನಿಗೂ ಹುಡುಗಿಗೂ ಮದುವೆಯಾಗಬೇಕಾದರೆ ಸಹಾಯಮಾಡುತ್ತಾರೆಯೆ?" ಎಂದು ಯೋಚಿಸಲಾರಂಭಿಸಿದನು.

"ಈಗ ಮೊದಲ ಕಾಲವಲ್ಲ. ಆಂಗ್ಲೇಯರ ಒತ್ತಾಯವಿದೆ. ಸರಿಯಾಗಿ ಕೆಲಸ ಮಾಡಿ. ಇಲ್ಲದಿದ್ದರೆ ಚರ್ಮ ಸುಲಿಸಿಕೊಳ್ಳುತ್ತೀರಿ" ಎಂದು ಕೂಗಿಕೊಳ್ಳುತ್ತಾ ಮೇಸ್ತ್ರಿಯು ಕೆಲಸ ಮಾಡಿಸಲಾರಂಭಿಸಿದನು.

ಕೂಲಿಕಾರರು ಗೊಣಗುಟ್ಟುತ್ತಾ "ನಮಗೇನು ಹಿಂದಿನ ಕಾಲದಲ್ಲಿ ಜಹಗೀರಿಯು ದೊರಕಲಿಲ್ಲ. ಈಗ ಆಂಗ್ಲೇಯರೇನೂ ಅದನ್ನು ಕೊಡುವುದಿಲ್ಲ" ಎಂದು ಉತ್ತರವಿತ್ತರು.

"ಎಷ್ಟು ಕೆಲಸಮಾಡಿದರೆ ಅಷ್ಟು ಹಣ ದೊರಕುವುದು."

"ನಮ್ಮದು ನಮ್ಮದೇ ಅದೇನೋ ಖಂಡಿತ."

"ನಮ್ಮವರಿಂದ ಏಟು ತಿನ್ನುತ್ತಿದ್ದೆವು, ಅವರೊಡನೆ ಜಗಳವೂ ಆಡುತ್ತಿದ್ದೆವು. ಆದರೆ ಇವರೊಂದಿಗೆ ಏನೂ ಹೇಳುವುದಕ್ಕೆ ಸಾಧ್ಯವಿಲ್ಲಪ್ಪ."

ಮೇಸ್ತ್ರಿಯು ಅವರ ಬಾಯಿ ಮುಚ್ಚಿಸಲು "ಹುಚ್ಚುಚ್ಚಾಗಿ ಮಾತನಾಡಬೇಡಿ. ಸಾಹೇಬರಿಗೆ ನಮ್ಮ ಭಾಷೆಯು ಚೆನ್ನಾಗಿ ಅರ್ಥವಾಗುತ್ತದೆ. ಅವರೇನಾದರೂ ಇದನ್ನು ಕೇಳಿದರೆ ನಿಮ್ಮ ಜೀವ ನನ್ನ ಜೀವ ಎರಡೂ ಹಾರಿಹೋಗುತ್ತವೆ" ಎಂದು ಹೇಳಿದನು.

ಕೂಲಿಯವರು ತಮ್ಮ ಕೆಲಸವನ್ನು ಸಂಜೆಗೆ ಮುಂಚೆಯೇ ಮುಗಿಸಿ ಕೂಲಿ ತೆಗೆದುಕೊಂಡು ಹೊರಟು ಹೋದರು.

ನಿಯುಕ್ತ ಸಮಯಕ್ಕೆ ಸರಿಯಾಗಿ ಆಂಗ್ಲೇಯ ಅಧಿಕಾರಿಗಳ ಕೂಟವು ಏರ್ಪಟ್ಟಿತು. ತಿಂಡಿ ತೀರ್ಥಗಳ ಜೊತೆಯಲ್ಲೇ ಕೆಲಸಕಾರ್ಯಗಳ ಮಾತುಕಥೆಯೂ ಪ್ರಾರಂಭವಾಯಿತು.

ಎಲಿಸ್—ಝಾನ್ಸಿಯ ಜನತೆಯು ನಿವೃತ್ತಸೈನಿಕರನ್ನು ಎತ್ತುಗಟ್ಟಿ ಎಲ್ಲಿ ದಂಗೆ ಏಳುವರೋ ಎಂಬ ಸಂದೇಹವಿತ್ತು.

ಡನ್‌ಲಪ್—ನಮ್ಮಪಡೆಯು ಸಿದ್ಧವಿದ್ದಿತು.

ಸ್ಕೀನ್—ಬಂದೋಬಸ್ತು ಸಮರ್ಪಕವಾಗಿದ್ದಿತು.

ಗಾರ್ಡನ್—ಅವರೆಲ್ಲರೂ ರಾಣಿಯ ಬಳಿಗೆ ಹೋಗಿದ್ದರೆಂದು ಕೇಳಿದೆ.

ಎಲಿಸ್—ಅದು ಸಹಜವೇ.

ಗಾರ್ಡನ್—ಆದರೆ ರಾಣಿಯು ಅವರಿಗೆ ಯಾವ ವಿಧವಾದ ಪ್ರೋತ್ಸಾಹವನ್ನೂ ಕೊಡಲಿಲ್ಲ, ವಿವೇಕಶಾಲಿ.

ಸ್ಕೀನ್—ಆಕೆಯು ಪುರುಷರೂ ತಲೆತಗ್ಗಿಸುವಂತಹ ಸವಾರಳಂತೆ. ನನಗೆ ಆಶ್ಚರ್ಯವಾಯಿತು.

ಗಾರ್ಡನ್—ಹಿಂದೂಸ್ಥಾನಿ ವ್ಯಾಯಾಮಗಳನ್ನು ವಿಶೇಷವಾಗಿ ಮಾಡುತ್ತಾಳೆ.

ಎಲಿಸ್—ಎಲ್ಲಿ ಸಹಗಮನ ಮಾಡುವಳೋ ಎಂಬ ಶಂಕೆಯಿದ್ದಿತು. ಆದುದರಿಂದ ಗಂಗಾಧರರಾಯನ ಶವಸಂಸ್ಕಾರದ ಸಮಯದಲ್ಲಿ ಕ್ಯಾಪ್ಟನ್ ಮಾರ್ಟಿನ್ನನನ್ನು ಸಸೈನ್ಯನನ್ನಾಗಿ ಕರೆದುಕೊಂಡುಹೋಗಿದ್ದೆ.

ಗಾರ್ಡನ್—ಆಗ ನಾನು ಇಲ್ಲಿ ಇರಲಿಲ್ಲ.

ಸ್ಕೀನ್—ಇಲ್ಲಿನ ಜನರು ಶಾಂತಿಪ್ರಿಯರು ಮತ್ತು ಕಾನೂನಿಗೆ ಮಾನ್ಯತೆ ಇತ್ತಿದ್ದಾರೆ. ಇಲ್ಲಿ ಇದಕ್ಕೆ ಮೊದಲು ಎರಡು ಬಾರಿ ಸರ್ಕಾರಿ ಆಳ್ವಿಕೆ ಇತ್ತು. ಆದುದ

ರಿಂದ ನಮ್ಮ ಆಡಳಿತವನ್ನು ಇಷ್ಟಪಡುತ್ತಾರೆ. ಸಂಸ್ಥಾನದ ಅಸಂತುಷ್ಟವಾತಾವರಣವನ್ನು ಇಲ್ಲಿನವರೆಗೆ ಹೇಗೆ ಸಹಿಸುತ್ತಿದ್ದರೋ ತಿಳಿಯದು.

ಎಲಿಸ್—ಇದು ಪೂರ್ವದೇಶವೆಂಬುದನ್ನು ಮರೆಯ ಬೇಡ. ಇಲ್ಲಿನ ಜನರಲ್ಲಿ ತ್ರಾಣವೇ ಇಲ್ಲ. ಇವರಲ್ಲಿ ಮಧ್ಯಮವರ್ಗದ ಹೆಸರೇ ಇಲ್ಲ. ರಾಜನು ದಬ್ಬಾಳಿಕೆಯಿಂದ ಆಳುತ್ತಿದ್ದನು.

ಡ್ಕಲಪ್—ನಮ್ಮ ಶಾಸನವು ಅವರಿಗೆ ನ್ಯಾಯ ಕಾನೂನುಗಳನ್ನು ದೊರಕಿಸಿ ಕೊಡುವುದು. ಸುವ್ಯವಸ್ಥಿತವಾದ ಶಾಸನದಿಂದ ಇವರು ಸಮೃದ್ಧಿಯನ್ನೂ ಸುಖವನ್ನೂ ಹೊಂದುವರು.

ಸ್ಕೀನ್—ಇಲ್ಲಿನ ಮಹನೀಯರನ್ನು ಆಗಾಗ್ಗೆ ನಮ್ಮ ಬಳಿಗೆ ಆಹ್ವಾನಿಸುತ್ತಿರಬೇಕು. ಅವರು ಸಮಾಜದ ಮುಖಂಡರು. ಇವರನ್ನು ನಮ್ಮ ಹತೋಟಿಯಲ್ಲಿಟ್ಟುಕೊಂಡರೇ ನಮ್ಮ ಶಾಸನಕ್ಕೆ ಯಾವವಿಧವಾದ ವಿಘ್ನತೊಂದರೆಗಳೂ ಬರುವುದಿಲ್ಲ. ಅಲ್ಲದೇ ಯಾರ ಮನಸ್ಸಿನಲ್ಲಿ ಹಳೆಯ ರಿಯಾಸತಿಯ ಕಡೆಗೆ ಪಕ್ಷಪಾತಭಾವವಿರುವುದೋ ಅವರೂ ದಾರಿಗೆ ಬರುವರು.

ಗಾರ್ಡನ್—ಸರಿಯೇ. ನಾವು ಅವರಿಗೆ ಜಹಗೀರುಗಳನ್ನು ಕೊಡಲಾಗುವುದಿಲ್ಲ. ಆದರೆ ಅದಕ್ಕೆ ತಕ್ಕ ಪದವಿಗಳನ್ನು ಕೊಡಬಹುದು. ಅವರು ಅದನ್ನು ದೊಡ್ಡ ಪುರಸ್ಕಾರವೆಂದು ತಿಳಿಯುವರು.

ಸ್ಕೀನ್—ನವಾಬ್ ಆಲಿಬಹದ್ದೂರನು ಬಹಳ ಮಾನ್ಯನೂ, ನಂಬಿಕೆಗೆ ಅರ್ಹನೂ ಅಲ್ಲದೆ ಶಿಷ್ಟನೂ ಆಗಿರುವನು. ನಾನು ಅವನನ್ನು ಭೇಟಿಮಾಡಿದ್ದೇನೆ. ಅವನೊಡನೆ ಸರಿಯಾದ ಸಂಪರ್ಕವಿಟ್ಟುಕೊಳ್ಳಬೇಕು.

ಎಲಿಸ್—ನಾನು ಈ ಸಂಸ್ಥಾನದ ಅಧಿಕಾರವನ್ನು ಗಾರ್ಡನ್ನನಿಗೆ ವಶಪಡಿಸಿದಾಗ ಆತನಿಗೆ ತಿಳಿದು ಹೇಳಿದ್ದೇನೆ. ಆಲೀಬಹದ್ದೂರನು ತನ್ನ ಮಾಸಿಕ ವೃತ್ತಿಯನ್ನು ಹೆಚ್ಚಿಸಬೇಕೆಂದು ಪ್ರಾರ್ಥಿಸಿದ್ದಾನೆ. ಆದರೆ ಹಾಗೆ ಮಾಡಲಾಗುವುದಿಲ್ಲ. ಅವನಿಗೆ ಅದನ್ನು ಸರಿಯಾದ ರೀತಿಯಲ್ಲಿ ತಿಳಿಯಪಡಿಸಬೇಕು. ಆದರೆ ಅವನಿಗೆ ನವಾಬ್ ಪದವಿಯನ್ನು ಆ ಜನ್ಮ ಕೊಡಬಹುದು.

ಗಾರ್ಡನ್—ನಾನು ಅವನಿಗೆ ಅವನ ಮಹಲನ್ನು ಹಿಂದಿರುಗಿ ಕೊಡಿಸಿದ್ದೇನೆ. ಅದಕ್ಕೆ ಅವನು ಬಹಳ ಕೃತಜ್ಞನಾಗಿದ್ದಾನೆ.

ಸ್ಕೀನ್—ಸರಿಯಾದ ಕೆಲಸ ಮಾಡಿದೆ. ಅವನಿಗೆ ಯಾರಾದರೂ ಪುತ್ರನಿದ್ದರೆ ಅವನನ್ನು ತಹಸೀಲುದಾರನನ್ನಾಗಿ ಮಾಡಬಹುದಾಗಿತ್ತು.

ಎಲಿಸ್—ಮಗನೇನೋ ಇರುವನು; ಆದರೆ ಅವನಿಂದ ಕೆಲಸಮಾಡಿಸಲು ಆಲಿಬಹದ್ದೂರನು ಇಚ್ಛಿಸುವುದಿಲ್ಲ.

ಸ್ಕೀನ್—ಏಕೆ? ನಮ್ಮ ತಹಸೀಲುದಾರರಿಗೆ ಬಹಳ ಗೌರವವಿದೆ. ಅವರಿಗೆ ನಾವು ಕುರ್ಚಿಯನ್ನು ಕೊಟ್ಟು ಆಹ್ವಾನಿಸುತ್ತೇವೆ. ಅಲ್ಲದೆ ಜೋಡನ್ನು ಧರಿಸಿ ನಮ್ಮ ಸಮ್ಮುಖದಲ್ಲಿ ಬರಲು ಅನುಮತಿ ಕೊಟ್ಟಿದ್ದೇವೆ.

ಗಾರ್ಡನ್—ಈ ವಿಚಾರದಲ್ಲಿ ಈ ದೇಶೀಯರು ಬಹಳ ಮರ್ಯಾದೆಯನ್ನಪೇಕ್ಷಿಸುತ್ತಾರೆ.

ಸ್ಕೀನ್—ವಣಿಕ ಮಹಾಶಯರನ್ನೂ ಆಹ್ವಾನಿಸಬೇಕು. ಇವರ ವ್ಯಾಪಾರ ಸಾಪಾರಗಳಿಂದ ಜನರ ಮೇಲೆ ಬಹಳ ಪರಿಣಾಮ ಉಂಟಾಗುವುದು. ವ್ಯಾಪಾರವು ಈಗ ಸುರಕ್ಷಿತವಾಗಿದೆ. ಇಲ್ಲಿಂದ ಬೊಂಬಾಯಿಯವರೆಗೆ ಸಾಮಾನುಗಳು ಯಾವ ಆತಂಕ ಅಡಚಣೆಗಳೂ ಇಲ್ಲದೆ ಹೋಗಿರಬಹುದು. ಅವರಿಗೆ ನಮ್ಮ ವಿಲಾಯತಿಯ ವಸ್ತುಗಳನ್ನು ನಗರಗಳಲ್ಲಿಯೂ, ಹಳ್ಳಿಗಳಲ್ಲಿಯೂ ಮಾರಾಟ ಮಾಡಿದರೆ ವಿಶೇಷ ಲಾಭ ದೊರಕುವುದು. ಕೆಲವು ದಿನಗಳಲ್ಲಿಯೇ ಅತ್ಯಂತ ಧನಾಢ್ಯರಾಗುತ್ತಾರೆ.

ಎಲಿಸ್—ಇಂದು ನಾನು ಕೆಲವು ಮುಖ್ಯಸ್ಥರನ್ನು ಆಹ್ವಾನಿಸಿದ್ದೇನೆ. ನವಾಬ್ ಆಲಿಬಹದ್ದೂರನಿಗೂ ಸೂಚನೆಯಿತ್ತಿದ್ದೇನೆ.

ಸ್ಕೀನ್—ನನಗೆ ಆ ವಿಷಯವು ತಿಳಿದಿದೆ. ಗಾರ್ಡನ್ನನು ನನಗೆ ಎಲ್ಲವನ್ನೂ ವಿಶದವಾಗಿ ತಿಳಿಸಿರುವನು. ಅವರಿಗೆ ಇನ್ನು ಹಲವು ದಿನಗಳಲ್ಲಿಯೇ ಝಾನ್ಸಿಗೆ ರೈಲುಮಾರ್ಗವೇರ್ಪಡುವುದೆಂದು ತಿಳಿಸಬೇಕು. ಅದರಿಂದ ತಿಂಗಳಾರುಗಟ್ಟಲೆ ನಡೆಸುತ್ತಿದ್ದ ಯಾತ್ರೆಗಳನ್ನು ಹಲವು ದಿನಗಳಲ್ಲಿಯೇ ಮುಗಿಸಬಹುದು. ರೈಲಿನ ಮೂಲಕ ಜನರು ಅವರು ಸಂದರ್ಶಿಸಬೇಕಾದ ಮುಖ್ಯತೀರ್ಥಗಳನ್ನು ನೋಡಬಹುದು.

ಎಲಿಸ್—ಕೆಲವು ಶಾಲೆಗಳನ್ನು ತೆರೆಯಬೇಕು.

ಸ್ಕೀನ್—ಅದನ್ನು ನಂತರ ಪರಿಗಣಿಸೋಣ. ಈಗ ಸದ್ಯಕ್ಕೆ ಆಸ್ಪತ್ರೆ ಮತ್ತು ಹಳ್ಳಿಯ ರಾಜಮಾರ್ಗಗಳನ್ನು ಪರ್ಯಾಲೋಚಿಸಬೇಕು.

ಗಾರ್ಡನ್—ನಮ್ಮ ರೀತಿಯ ಶಿಕ್ಷೆಯು ದೊರೆತಮೇಲೆಯೇ ನಮಗೆ ಹಿಂದೂಸ್ಥಾನೀಯರಲ್ಲಿ ನಮ್ಮ ಮನಸ್ಸಿಗೆ ಒಪ್ಪುವಂತಹ ಅಧಿಕಾರಿಗಳು ದೊರೆಯುವರು.

ಸ್ಕೀನ್—ಹೌದು, ಸ್ವಲ್ಪದಿನಗಳನಂತರ ಗುಮಾಸ್ತರ ಆವಶ್ಯಕತೆಯು ಅನೇಕವಾಗಿ ಬರಬಹುದು.

ಗಾರ್ಡನ್—ಆದರೆ ಕೇವಲ ಗುಮಾಸ್ತರ ವರ್ಗವನ್ನು ಉತ್ಪತ್ತಿಮಾಡುವುದಕ್ಕೆ ಸಹಾಯಕವಾದ ಶಿಕ್ಷೆಯನ್ನು ಕೊಡುವ ರೀತಿಯನ್ನು ನಾವಿನ್ನೂ ಸಂಪೂರ್ಣವಾಗಿ ಸ್ವೀಕರಿಸಿಲ್ಲ.

ಸ್ಕೀನ್—ಅದೇನೋ ಕಲ್ಕತ್ತ, ಮದರಾಸು, ಆಗ್ರ ಮುಂತಾದ ಸ್ಥಳಗಳಿಗೆ ಸರಿ.

ಝಾನ್ಸಿಯು ಹಿಂದುಳಿದ ಸಂಸ್ಥಾನ. ಬುಂದೇಲು ಖಂಡವಾದರೋ ವನಕ್ಕೆ ಸಮಾನ. ಇಲ್ಲಿ ಪಾಠಶಾಲೆಗಳನ್ನು ಪ್ರಾರಂಭಿಸಿದರೆ ಅವರನ್ನು ಮಧ್ಯಮ ತರಗತಿಗಿಂತ ಮುಂದೆ ಓದಿಸಬಾರದು. ಹಿಂದೂ ಬಾಲಕರು ಎಡ್‌ಮಂಡ್ ಬರ್ಕನ ಕೃತಿಗಳನ್ನು ಓದಿ, ಮದವೇರಿ ಉನ್ಮತ್ತರಾಗುವುದಕ್ಕೆ ಬಿಡಬಾರದೆಂಬುದು ನನ್ನ ಮತ.

ಎಲಿಸ್ಸ್—ಅನುಭವದಿಂದ ಗಾರ್ಡನ್ನನಿಗೆ ಎಲ್ಲವೂ ವ್ಯಕ್ತವಾಗುವುದು.

ಭಂಗಾರದ ದಪ್ಪ ಸರಪಣಿಗೆ ನೇತು ಹಾಕಿದ್ದ ಗಡಿಯಾರವನ್ನು ಜೇಬಿನಿಂದ ತೆಗೆದು, ಹೊತ್ತು ನೋಡಿ, ಸ್ಕೀನ್ ಸಾಹೇಬನು "ಎಲಿಸ್ಸ್, ನಿನ್ನ ಆಹ್ವಾನಿತರಿನ್ನೂ ಬರಲಿಲ್ಲ. ಹೊತ್ತಾಯಿತು." ಎಂದನು.

ಎಲಿಸ್ಸನು "ಇವರ ಧರ್ಮದಲ್ಲಿ ಯಾವುದಕ್ಕೂ ಪರಿಮಿತಿಯಿಲ್ಲ. ಆದುದರಿಂದ ಸಮಯ ನಿಷ್ಠೆಗೆ ಮಹತ್ವವನ್ನು ಕೊಡುವುದಿಲ್ಲ" ಎಂದನು.

ಎಲಿಸ್ಸನು ಅಲ್ಲಿಂದ ಎದ್ದು ಸ್ವಲ್ಪ ದೂರಹೋಗಿ ಹಿಂದಿರುಗಿ ಬಂದು "ಬಂದರು. ನಾನು ಬರಲಿಲ್ಲವಲ್ಲ ಎಂದು ನೋಡುತ್ತಿದ್ದೆ. ಎಲ್ಲಾ ಹಿಂದಿನ ಠೀವಿಯೆ: ರುಮಾಲು, ಪೇಟ, ದುಪ್ಪಟ್ಟ, ತಲೆಯಿಂದ ಕಾಲಿನವರೆಗೆ ಒಡವೆಗಳು ತುಂಬಿವೆ" ಎಂದು ಹೇಳಿದನು.

ಗಾರ್ಡನ್ನನು ನಸುನಗುತ್ತಾ "ನಾನು ದರ್ಬಾರಿನಲ್ಲಿ ಈ ಎಲ್ಲ ಠೀವಿಯನ್ನೂ ನೋಡಿದ್ದೇನೆ.

ಸ್ಕೀನ್—ಇದೂ ಒಂದು ದರ್ಬಾರು, ಗಾರ್ಡನ್, ಡೆಪ್ಯುಟಿ ಕಮಿಷನರ ದರ್ಬಾರ್.

ಇದನ್ನು ಕೇಳಿ ಎಲ್ಲರೂ ನಕ್ಕರು.

ಸ್ಕೀನನು "ನಾವೆಲ್ಲರೂ ಹೋಗುತ್ತೇವೆ. ಎಲಿಸ್ಸ್ ಮತ್ತು ಡನ್‌ಲಪ್‌ರ ವಿನಹ ಮತ್ತೆ ಯಾರೂ ಇಲ್ಲಿರುವುದು ಅವಶ್ಯಕವಿಲ್ಲ" ಎಂದನು.

ಸ್ಕೀನ್ ಮುಂತಾದವರು ಅಲ್ಲಿಂದ ಹೊರಟುಹೋದರು. ಎಲಿಸ್ಸಿನ ಮನೆಯಲ್ಲಿ ಒಂದು ವಿಸ್ತಾರವಾದ ಕೊಠಡಿಯಲ್ಲಿ ಈ ದರ್ಬಾರನ್ನು ಏರ್ಪಡಿಸಿದ್ದರು.

ಸ್ಕೀನ್ ಮುಂತಾದವರು ಅಲ್ಲಿಂದ ಹೊರಟುಹೋದರು. ಎಲಿಸ್ಸನ ಮನೆಯ ಒಂದು ವಿಸ್ತಾರವಾದ ಕೊಠಡಿಯಲ್ಲಿ ಈ ದರ್ಬಾರನ್ನು ಏರ್ಪಡಿಸಿದ್ದರು. ಅಲ್ಲಿ ಒಂದು ಸ್ವಲ್ಪ ವಿಸ್ತಾರವಾಗಿಯೂ ಮತ್ತು ಎತ್ತರವಾಗಿಯೂ ಇದ್ದ ಕಾಲುಮಣೆ, ಅದರ ಮೇಲೆ ಎರಡು ಕುರ್ಚಿಗಳಿದ್ದವು. ಎಲಿಸ್ಸ್ ಮತ್ತು ಗಾರ್ಡನ್ ಹೋಗಿ ಆ ಕುರ್ಚಿಗಳಲ್ಲಿ ಕುಳಿತುಕೊಂಡರು. ಆ ದೊಡ್ಡ ಕಾಲುಮಣೆಯ ಎದುರಿಗೆ ಸ್ವಲ್ಪ ತಗ್ಗಾಗಿಯೂ ಮತ್ತು ಸ್ವಲ್ಪ ಚಿಕ್ಕದಾಗಿಯೂ ಇದ್ದ ಮತ್ತೊಂದು ಕಾಲುಮಣೆ ಇದ್ದು ಅದರ ಮೇಲೆ ಇನ್ನೆರಡು ಕುರ್ಚಿಗಳನ್ನಿರಿಸಿದ್ದರು. ಡನ್‌ಲಪ್ ಸಾಹೇಬನು ಅವುಗಳಲ್ಲೊಂದನ್ನು ಅಲಂಕರಿಸಿದನು. ಮತ್ತೊಂದು ಖಾಲಿಯಿತ್ತು. ಅನತಿದೂರದಲ್ಲಿ ಒಬ್ಬ ಗುಮಾಸ್ತನು

ನಿಂತಿದ್ದನು.

ಸ್ವಲ್ಪ ಹೊತ್ತಿನಲ್ಲಿಯೇ ಊರಿನ ಪ್ರಮುಖರೂ, ಮುಖ್ಯ ವರ್ತಕರೂ, ಸಾಹುಕಾರರೂ ಇತ್ಯಾದಿ ಅಲ್ಲಿಗೆ ಬಂದು ಪ್ರಣಾಮಮಾಡಿ ನಿಂತುಕೊಂಡರು. ಅವರಲ್ಲಿ ಆಲಿಬಹದ್ದೂರನೂ ಇದ್ದನು.

ಎಲಿಸ್ಸನು ಗುಮಾಸ್ತನಿಗೆ ಸಂಜ್ಞೆಮಾಡಿದನು. ಅವನು ಆಲಿಬಹದ್ದೂರನನ್ನು ಕಾಲುಮಣೆಯ ಬಳಿಗೆ ಕರೆತಂದನು. ಆಲಿಬಹದ್ದೂರನು ಮತ್ತೊಮ್ಮೆ ಬಗ್ಗಿ ಬಗ್ಗಿ ಸಲಾಮು ಮಾಡಿದನು. ಎಲಿಸ್ಸನು ಅವನನ್ನು ಖಾಲಿಯಿದ್ದ ಕುರ್ಚಿಯ ಮೇಲೆ ಕುಳ್ಳಿರಿಸಿದನು.

ನವಾಬ್ ಆಲಿಬಹದ್ದೂರನ ಇಚ್ಛೆಯು ಪರಿಪೂರ್ಣವಾಯಿತು.

ಗುಮಾಸ್ತನು ಉಳಿದ ಪ್ರಮುಖರನ್ನು ಕೆಳಗೆ ನೆಲದಮೇಲೆ ಸಾಲಾಗಿ ಇರಿಸಿದ್ದ ಕುರ್ಚಿಯ ಮೇಲೆ ಕುಳ್ಳಿರಿಸಿದನು.

ಸಭೆಯು ಪ್ರಾರಂಭಿಸಿತು.

ಎಲಿಸ್ಸನು ಎದ್ದುನಿಂತು "ನಾನು ನನ್ನ ಕೆಲಸವನ್ನು ಕ್ಯಾಪ್ಟನ್ ಗಾರ್ಡನ್ನರಿಗೆ ವರ್ಗಾಯಿಸಿ ಕೊಟ್ಟಿರುವೆನು. ಈಗತಾನೆ ಕಮಿಷನರ್ ಸಾಹೇಬರು ನಿಮ್ಮಗಳ ಮತ್ತು ಪ್ರಜೆಗಳ ಅಭ್ಯುದಯಕ್ಕೆ ಹೆಚ್ಚುಗಮನವನ್ನು ಕೊಡಬೇಕೆಂದು ಅಪ್ಪಣೆಮಾಡಿದ್ದಾರೆ. ನಿಮ್ಮಗಳ ಯೋಗಕ್ಷೇಮವೇ ನಮ್ಮ ಹಗಲಿರುಳಿನ ಚಿಂತೆಯಾಗಿದೆ. ನೀವುಗಳು ಯಾವ ಅಡ್ಡಿ ಆತಂಕಗಳೂ ಇಲ್ಲದೆ ವ್ಯಾಪಾರಗಳನ್ನು ನಡೆಸಿಕೊಂಡು ಹೋಗಿ. ಇಲ್ಲಿಂದ ಬೊಂಬಾಯಿಯವರೆಗೆ ರಕ್ಷಣೆಯನ್ನು ಏರ್ಪಡಿಸಿದೆ. ಕಳ್ಳಕಾಕರನ್ನು ಅಡಗಿಸುವ ಶಕ್ತಿಯು ನಮಗಿದೆ. ನಿಮ್ಮ ಧರ್ಮರಕ್ಷಣೆಯನ್ನು, ಮತ್ತೊಬ್ಬರಿಗೆ ತೊಂದರೆಯಾಗದಂತೆ, ನಡೆಸಿಕೊಂಡು ಹೋಗಿ. ಅದರಲ್ಲಿ ನಮಗೆ ಯಾವ ಸಂಬಂಧವೂ ಇಲ್ಲ. ಆದಾಗ್ಯೂ ನಾವು ನಮ್ಮ ಈ ನ್ಯಾಯಧರ್ಮವೇ ಸರ್ವಶ್ರೇಷ್ಠವೆಂದು ಗಣಿಸಿದ್ದೇವೆ. ಶೀಘ್ರದಲ್ಲಿಯೆ ಪಾಠಶಾಲೆಗಳನ್ನು ತೆರೆಯುವೆವು. ಅಲ್ಲಿ ನಿಮ್ಮ ಭಾಷೆಯೊಂದಿಗೆ ಆಂಗ್ಲೇಯ ಭಾಷೆಯನ್ನೂ ಹೇಳಿಕೊಡಲಾಗುವುದು. ಇದರಿಂದ ನಿಮ್ಮ ಮಕ್ಕಳು ವಿಲಾಯಿತಿಯ ಮಧುರವಾದ ಭಾಷೆಯನ್ನು ಕಲಿಯಬಹುದು. ಚೆನ್ನಾಗಿ ಆಂಗ್ಲಭಾಷೆಯನ್ನು ಕಲಿತವರಿಗೆ ಉನ್ನತ ಉದ್ಯೋಗಗಳನ್ನು ಕೊಡಲಾಗುವುದು. ಇದರಿಂದ ನೀವು ರಾಜಶಾಸನಗಳಲ್ಲಿಯೂ ಕೈಯಿಡಬಹುದು. ಕೋರ್ಟು ಕಛೇರಿಗಳು ನಿರಂತರವೂ, ಸರ್ವರಿಗೂ ತೆರೆದಿವೆ. ಯಾರು ಬೇಕಾದರೂ ನಿಸ್ಸಂಕೋಚವಾಗಿ ತಮ್ಮ ಫಿರ್ಯಾದುಗಳನ್ನು ದಾಖಲೆಮಾಡಿ ನ್ಯಾಯಪಡೆಯಬಹುದು. ಯಾರಿಗೂ ಯಾವ ರಿಯಾಯ್ತಿಯೂ ಇರುವುದಿಲ್ಲ. ಅಪರಾಧಿಗಳಿಗೆ ಕೊಡುವ ದಂಡನೆಗಳು ಕಠೋರವಾಗಿದ್ದಾಗ್ಯೂ ಅಮಾನುಷವಲ್ಲ. ಯಾರಿಗೂ ಕೈಕಾಲುಗಳನ್ನು ಕತ್ತರಿಸುವುದಿಲ್ಲ.

ಚೇಳು ಮುಂತಾದವುಗಳಿಂದ ಕುಟುಕಿಸುವುದೂ ಇಲ್ಲ. ನೀವುಗಳೆಲ್ಲರೂ ಸುಖಿಗಳಾಗಿರಬೇಕೆಂದು ನಮ್ಮ ಹೆಬ್ಬಯಕೆ. ತಮ್ಮಲ್ಲಿ ಯಾರಾದರೂ ಏನಾದರೂ ಹೇಳುವುದಿದ್ದರೆ ಹೇಳಬಹುದು" ಎಂದು ಹೇಳಿ ಕುಳಿತನು.

ಅಲ್ಲಿ ನೆರೆದಿದ್ದ ಝಾನ್ಸಿಯ ಪ್ರಮುಖರೆಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡಲಾರಂಭಿಸಿದರು.

ಮಗನ್ ಗಾಂಧಿಯೆಂಬ ಸಾಹುಕಾರನು "ಮಹಾಸ್ವಾಮಿಯವರಲ್ಲಿ ನಮ್ಮದೊಂದು ವಿನಂತಿ. ನಮ್ಮ ದೇಶದಲ್ಲಿ ಹಿಂದೆ ಎಂದೂ ಗೋವಧೆ ಮಾಡಲಿಲ್ಲ. ಮುಸಲ್ಮಾನ್ ಬಾದಷಹರೂ ಈ ಕಾರ್ಯವನ್ನು ಮಾಡಗೊಡಲಿಲ್ಲ. ನಿಮ್ಮ ಆಳ್ವಿಕೆಯು ಪ್ರಾರಂಭವಾದಂದಿನಿಂದಲೂ ಇದು ಶುರುವಾಗಿದೆ. ನೀವು ಶಕ್ತಿವಂತರು, ಇದನ್ನು ಹೇಗಾದರೂ ಮಾಡಿ ನಿಲ್ಲಿಸಬೇಕೆಂದು ಪ್ರಾರ್ಥಿಸುತ್ತೇವೆ" ಎಂದನು.

ಎಲಿಸ್ಸನು ಕುಳಿತಿದ್ದಂತೆಯೇ "ನಿಮ್ಮ ನಗರದಲ್ಲೇನೂ ಗೋವಧೆ ಮಾಡುವುದಿಲ್ಲ; ಆದರೆ ಛಾವನಿಯಲ್ಲಿ ಮಾತ್ರ ಗೋಮಾಂಸವನ್ನು ತಿನ್ನುವವರಿಗೋಸ್ಕರ ವಿಧಿಯಿಲ್ಲದೇ ಮಾಡಲಾಗುವುದು" ಎಂದು ಉತ್ತರವಿತ್ತನು.

ಮಗನ್ ಗಾಂಧಿಯು ತನ್ನ ಕಣ್ಣೀರನ್ನೊರಸಿಕೊಂಡು ಕುಳಿತು ಬಿಟ್ಟನು. ಎಲಿಸ್ಸನು ಮೆಲ್ಲಗೆ ಗಾರ್ಡನ್ನನೊಂದಿಗೆ "A sentimental fool" ಎಂದು ಹೇಳಿದನು.

ಆಲಿಬಹದ್ದೂರನೂ ಏನನ್ನೊ ಹೇಳುವುದಕ್ಕಾಗಿ ಗಾರ್ಡನ್ ಮತ್ತು ಎಲಿಸ್ಸರ ಮುಖವನ್ನು ನೋಡಿದನು. ಅವರು ಅವನಿಗೆ ಅನುಮತಿಯಿತ್ತರು.

ಆಲಿಬಹದ್ದೂರನು "ಕಂಪೆನಿ ಸರ್ಕಾರವು ಏರ್ಪಟ್ಟದ್ದಕ್ಕಾಗಿ ಪರಮಾತ್ಮನಿಗೆ ನಮ್ಮ ಧನ್ಯವಾದಗಳನ್ನರ್ಪಿಸುತ್ತೇವೆ. ನಮ್ಮ ಈ ದೊಡ್ಡ ಅಧಿಕಾರಿಗಳು ಬಹಳ ದುಷ್ಟರು. ಅವರು ನಗರದಲ್ಲೂ, ಸಂಸ್ಥಾನಾದ್ಯಂತವೂ ಅತ್ಯುತ್ತಮವಾದ ಮುಂಜಾಗರೂಕತೆಯ ಏರ್ಪಾಡುಗಳನ್ನು ಮಾಡುತ್ತಾರೆ. ಎಲ್ಲರೂ ಅವರವರ ಮನೆಗಳಲ್ಲಿ ಭಯವಿಲ್ಲದೆ ಸೌಖ್ಯದಿಂದ ಮಲಗಬಹುದು. ಕಳ್ಳಕಾಕರ ಭೀತಿಯಿಲ್ಲ. ಈಗ ಪಾಠಶಾಲೆಗಳನ್ನಾರಂಭಿಸುತ್ತಾರೆ. ದೇಶವೆಲ್ಲವೂ ಜ್ಞಾನಾರ್ಜನೆಯಿಂದ ದೇದೀಪ್ಯಮಾನವಾಗುವುದು. ನಿಮ್ಮ ವ್ಯಾಪಾರವು ವರ್ಧಿಸುವುದು. ನೀವುಗಳು ಸಿರಿವಂತರಾಗುವಿರಿ" ಎಂದು ಹೇಳಿ ಕುಳಿತನು.

ಅಲ್ಲಿ ಕುಳಿತಿದ್ದ ಸೇಠ್ ಸಾಹುಕಾರನು ಗಟ್ಟಿಯಾಗಿ ನಗಬೇಕೆಂದಿದ್ದವನು ಮುಗುಳ್ನಗೆ ನಕ್ಕನು.

ಎಲಿಸ್ಸ್ ಮತ್ತು ಗಾರ್ಡನ್ ಇದನ್ನು ನೋಡಿದರು.

ಗಾರ್ಡನ್ನನು ಸಭೆಯನ್ನು ಮುಕ್ತಾಯಗೊಳಿಸಬೇಕೆಂದು ಎಲಿಸ್ಸನಿಗೆ

ಸೂಚನೆಯಿತ್ತನು. ಆದರಂತೆಯೇ ಆತನು ಅದನ್ನು ಸಮಾಪ್ತಿಮಾಡಿದನು.

ಆ ದರ್ಬಾರು ತಾಂಬೂಲ ವಿತರಣೆಯಿಲ್ಲದೆಯೇ ವೈಶಿಷ್ಟ್ಯ ಹೊಂದಿ ಮುಕ್ತಾಯವಾಯಿತು. ಪ್ರಮುಖರೆಲ್ಲರೂ ಪೆಚ್ಚುಮೋರೆಯಿಂದ ಮನೆಗಳಿಗೆ ಹಿಂದಿರುಗಿದರು.

ಅವರೆಲ್ಲರೂ ಹೊರಟುಹೋದ ಮೇಲೆ ಎಲಿಸ್ಸನು ಗಾರ್ಡನ್ನನನ್ನು ಕುರಿತು—

"ಸ್ಲೀನನ ಅಭಿಪ್ರಾಯ ಮತ್ತು ಇಂದಿನ ಕಾರ್ಯಕ್ರಮಗಳ ವಿವರಣೆಯನ್ನು ಲೆಫ್ಟಿನೆಂಟ್ ಜನರಲ್ ಸಾಹೇಬರ ಬಳಿಗೆ ಆಗ್ರಾಕ್ಕೆ ಕಳುಹಿಸಬೇಕು" ಎಂದನು.

"ಆಲಿಬಹದ್ದೂರನು ಬಹಳ ಚತುರ ಮತ್ತು ಪ್ರಭಾವಶಾಲಿ. ಅವನನ್ನು ನಮ್ಮ ಕೈಯ್ಯಲ್ಲಿಟ್ಟುಕೊಳ್ಳಬೇಕು. ಠಾಕೂರರನ್ನು ಬಗ್ಗಿಸುವುದು ಕಷ್ಟ, ಆದರೆ ಬಗ್ಗಿಸಲೇ ಬೇಕು. ಒಂದು ವೇಳೆ ಈಜಾತಿಯ ಹಲವರನ್ನು ಪೋಲಿಸ್‌ಠಾಣೆದಾರರನ್ನಾಗಿ ನೇಮಿಸಿದ್ದೇ ಆದರೆ ಬಹಳ ಒಳ್ಳೆಯದಾಗುವುದು. ರಾಣಿಯು ಕರೆದರೆ ಅವಶ್ಯಕವಾಗಿ ಹೋಗು. ಆದರೆ ಯಾವ ವಚನವನ್ನೂ ಕೊಡಬೇಡ, ಏಕೆಂದರೆ ಅವಳ ವಿಚಾರದಲ್ಲಿ ಇನ್ನೇನನ್ನೂ ಮಾಡಲು ಸಾಧ್ಯವಿಲ್ಲ. ಪಾಠಶಾಲೆಗಳನ್ನು ತೆರೆಯಲು ಆತುರ ಪಡಬಾರದು. ಹಿಂದೂ ಮುಸಲ್ಮಾನರಿಗೆ ಹುದ್ದೆಗಳನ್ನು ಕೊಡುವುದರಲ್ಲಿ ಲಾಭದಾಯಕವಾದ ಶಿಸ್ತನ್ನು ಪಾಲಿಸಬೇಕು. ಮತ್ತು ಸಾಧ್ಯವಾದ ಮಟ್ಟಿಗೂ ಇಬ್ಬರಿಗೂ ಅವರವರ ಹಕ್ಕುಬಾಧ್ಯತೆಗಳನ್ನು ತಿಳಿಸುತ್ತಿರಬೇಕು" ಎಂದು ಎಲಿಸ್ಸನು ಮುಂದುವರೆದನು.

ಗಾರ್ಡನ್—ನಾನು ಮೂರ್ಖನಲ್ಲ. ನಾನು ನೀತಿ ಮತ್ತು ಶಿಕ್ಷೆಯ ವಿಚಾರವಾಗಿ ಹೇಳುತ್ತಿದ್ದುದು ಕೇವಲ ಸ್ಲೀನನ ಆಳವನ್ನು ಕಂಡುಹಿಡಿಯುವುದಕ್ಕಾಗಿ.

ಎಲಿಸ್—ಸ್ಲೀನನು ಅಪ್ರತಿಮ ಬುದ್ಧಿಶಾಲಿ.

## ೩೭

ಡೆಪ್ಯುಟಿ ಕಮಿಷನರ್ ಗಾರ್ಡನ್ನನ ಆಡಳಿತವು ಬಹಳ ಭರಾಟೆಯಿಂದ ಸಾಗಿತು. ಜಹಗೀರುಗಳನ್ನು ಕಸಿದುಕೊಂಡಾಯಿತು. ಜಮೀನ್ದಾರರನ್ನು ನೇಮಿಸಲಾಯಿತು. ಮಂದಿರ ಮತ್ತು ದೇವಾಲಯಗಳಿಗೆ ಪೂಜಾ ಸೌಕರ್ಯಕ್ಕಾಗಿ ಬಿಟ್ಟು ಕೊಟ್ಟಿದ್ದ ಮಾನ್ಯಗಳು ಸಮಾಪ್ತವಾದವು. ಪೂಜಾರಿಗಳಿಗೆ ಇದರಿಂದ ಧಕ್ಕೆ ತಗುಲಿತು. ಅವರು ಅರ್ಜಿಗಳನ್ನು ಸಲ್ಲಿಸಿದರು. ಸಾಹೇಬರ ಬಂಗಲೆಗಳ ಬಳಿ ಹೋಗಿ ವಿನಂತಿ ಮಾಡಿಕೊಂಡರು. ಏನೂ ಪ್ರಯೋಜನವಾಗಲಿಲ್ಲ. ಗಾರ್ಡನ್ನನ ದಕ್ಷತೆಯು ಕಳ್ಳಕಾಕರಿಂದ ಹಿಡಿದು ಪೂಜಾರಿಗಳವರೆಗೆ ಎಲ್ಲರನ್ನೂ ಎಚ್ಚೆತ್ತು ಕೊಳ್ಳುವಂತೆ ಮಾಡಿತು. ಮಾತು ಮಾತಿಗೂ ಅರ್ಜಿಗಳನ್ನು ಸಲ್ಲಿಸುವುದೂ, ಅವುಗಳ ತಿರಸ್ಕಾರ ಇವೇ ಹೆಚ್ಚಾಯಿತು.

ಕಾನೂನಿನ ಮಹತ್ವದಿಂದ ವಕ್ಕೀಲರಿಗೆ ಆದಾಯವು ಹೆಚ್ಚಿತು. ಈ ವೃತ್ತಿಗಳಿಗೆ ಯಾವ ಪರೀಕ್ಷೆಯನ್ನೂ ಏರ್ಪಡಿಸಲಾಗಲಿಲ್ಲ. ಯಾವ ರೀತಿ ಡೆಪ್ಯುಟಿಕಮಿಷನರ್ ಸಾಹೇಬನು ಜಮೀನುದಾರಿಗಳನ್ನೂ ಮತ್ತು ನೌಕರಿಗಳನ್ನೂ ಪ್ರದಾನಮಾಡುತ್ತಿದ್ದನೊ. ಅದೇ ರೀತಿಯಲ್ಲಿ ಮೊಕದ್ದಮೆಯ ತೀರ್ಪನ್ನುಕೊಡುತ್ತಿದ್ದನು. ಬುದ್ಧಿವಂತರಾದವರು ಆಂಗ್ಲೇಯ ಕಾನೂನು, ಸರ್ಕಾರದ ನೀತಿ, ರೀತಿಗಳನ್ನು ಕಲಿತು ಪ್ರಗತಿಯನ್ನು ಹೊಂದಿದರು. ಅವರುಗಳಿಲ್ಲದೆ ನ್ಯಾಯಾಸ್ಥಾನದಲ್ಲಿ ಒಂದು ಕಡ್ಡಿಯೂ ಅಲುಗದಂತಹ ಸನ್ನಿವೇಶ ವೇರ್ಪಟ್ಟಿತು. ಈ ವರ್ಗದವರು ಆ ಕಾಲದಲ್ಲಿ ಅರಿದೋ ಅರಿಯದೆಯೋ ಎಲ್ಲಾ ವಿಚಾರಗಳಲ್ಲಿಯೂ ಕಾನೂನಿನ ಪ್ರತಿ ಬಂಧಕಗಳನ್ನು ತರುವ ಸಹಾಯವನ್ನೆಸಗಿದರು. ಈ ಒಂದು ಆಂಗ್ಲೇಯ ಸುಧಾರಣೆಯನ್ನು ಪ್ರತಿಯೊಬ್ಬ ಹಿಂದೂಸ್ಥಾನಿಯೂ ಆತ್ಮಪೂರಿತವಾಗಿ ಸ್ವೀಕರಿಸಬೇಕಾಗಿದ್ದುದೇ ಆದರೂ, ಇವು ಯಾವ ವಾತಾವರಣದಲ್ಲಿ ಉದ್ಭವಿಸಿ, ಬೆಳೆದು ಬಂದಿತ್ತೋ ಅದು ಭಾರತೀಯರ ಮನಸ್ಸಿಗೆ ಒಪ್ಪಲಿಲ್ಲ. ಆದುದರಿಂದ ಕಾನೂನು ಕೃತ್ರಿಮವಾಗಿ ಪರಿಣಮಿಸಿತು.

ಆಂಗ್ಲೇಯರು ಹಿಂದೂಸ್ಥಾನದ ನ್ಯಾಯಾಲಯಗಳಲ್ಲಿ ಕಾನೂನು ಜಾರಿಗೆ ತಂದುದು ಪರೋಪಕಾರ ದೃಷ್ಟಿಯಿಂದಲ್ಲ.

ದೇಶದಲ್ಲಿ ಶಾಂತಿ ಏರ್ಪಟ್ಟು, ಆಂಗ್ಲೇಯರ ಅಧಿಕಾರವು ಸದಾ ಸರ್ವಕಾಲದಲ್ಲಿಯೂ ಈ ದೇಶದಲ್ಲಿ ಸ್ಥಾಪಿತವಾಗಿದ್ದು, ಅವರ ವ್ಯಾಪಾರಸಾಪಾರಗಳು ನಿರ್ವಿಘ್ನವಾಗಿ ನಡೆಯುತ್ತಿರಬೇಕೆಂಬ ಅಭಿಪ್ರಾಯದಿಂದ ಕಾನೂನು ಮಾಡಿ, ಅವನ್ನು ಜಾರಿಗೆ ತಂದರು. ಅಲ್ಲದೆ, ಗೌರ್ನರ್ ಜನರಲ್ಲಿನಿಂದ ಆದಿಯಾಗಿ ಪಟೇಲ ಚೌಕೀದಾರರವರೆಗೆ ಕಾಯಿದೆ ಕಾನೂನುಗಳಿಂದ ಬಂಧಿತವಾಗಿ ತಮ್ಮ ತಮ್ಮ ಕೆಲಸಗಳನ್ನು ಕರ್ತವ್ಯನಿಷ್ಠೆಯಿಂದ ನಡೆಸುತ್ತಾ ಯಾವ ಒಡಕೂ ಇಲ್ಲದಂತೆ ತಮ್ಮ ರಾಜ್ಯವು ಸುಭದ್ರವಾಗಿರಬೇಕೆಂಬುದು ಅವರ ಆಕಾಂಕ್ಷೆಯಾಗಿದ್ದಿತು. ಇವುಗಳಿದ್ದರೇನೇ ಆಂಗ್ಲೇಯ ರಾಜ್ಯವು ನಿರಂತರಕ್ಕೂ ಸ್ಥಾಪಿತವಾಗುತ್ತಿದ್ದಿತು. ಆಂಗ್ಲೇಯರು, ಹಿಂದೂ ಮುಸಲ್ಮಾನರ ಉನ್ನತಿ ಅವನತಿಗಳ ಇತಿಹಾಸವನ್ನು ಚೆನ್ನಾಗಿ ಮನನಮಾಡಿಕೊಂಡಿದ್ದರು. ಆದುದರಿಂದಲೇ ಅವರು ತಮ್ಮ ಆಳ್ವಿಕೆಯಲ್ಲಿ ಈ ಕುಂದು ಕೊರತೆಗಳಿಲ್ಲದಂತೆ ಮುನ್ನೆಚ್ಚರಿಕೆ ವಹಿಸಿದ್ದರು; ತಮಗೆ ಅವಕಾಶ ದೊರಕಿದಾಗಲೆಲ್ಲಾ ಈ ರಾಜರ ಮತ್ತು ಬಾದಷಹರ ಸುಬೇದಾರ್ ಮುಂತಾದ ಕರ್ಮಚಾರಿಗಳನ್ನು ಕಿತ್ತೊಗೆಯುತ್ತಿದ್ದರು.

ಆಗಾಗ್ಯೆ ಗಾರ್ಡನ್ ಸಾಹೇಬನು ನಗರದ ಮಹನೀಯರಿಗೆ ಭೇಟಿಕೊಡುವ ಆಕರ್ಷಣೆಯನ್ನುಂಟುಮಾಡಿದ್ದನು. ಅವರಿಗೆ ಮುಖಸ್ತುತಿಮಾಡಲು ತಿಳಿದಿದ್ದಿತು. ಗಾರ್ಡನ್ನನ ಮುಖಸ್ತುತಿಯನ್ನೂ ಮಾಡುತ್ತಿದ್ದರು. ಆದರೆ ಅವನ ಮುಂದೆ ಬಗ್ಗಿ ನಿಲ್ಲುವಾಗ ಮಾತ್ರ ಬೆನ್ನುಮೂಳೆಯು ನೋಯುತ್ತಿದ್ದಿತು ಮತ್ತು ಹಣೆಯ ಮೇಲೆ

ಸುಕ್ಕುಮೂಡುತ್ತಿದ್ದಿತು. ಮನೆಗೆ ಹಿಂದಿರುಗಿ ತಮಗಾದ ಲಾಭನಷ್ಟಗಳ ಜೊತೆಗೆ ಗಾರ್ಡನ್ನನ ಠೀವಿಯನ್ನು ಕಂಡು ಅವರ ಹೊಟ್ಟೆಯುರಿಯುತ್ತಿದ್ದಿತು. ಮತ್ತು ತಾವು ಮಾಡುತ್ತಿದ್ದ ಮುಖಸ್ತುತಿಯನ್ನು ಸ್ಮರಿಸಿ ನಗುತ್ತಿದ್ದರು.

ರಾಣಿಗೂ ಇವರುಗಳು ಈ ಸಮಾಚಾರವೆಲ್ಲವನ್ನೂ ಮುಟ್ಟಿಸುತ್ತಿದ್ದರು. ಅದನ್ನು ಗಂಭೀರದಿಂದ ಕೇಳಿ ಅವರ ಸಂಸಾರದ ಸುಖ ದುಃಖಗಳನ್ನು ಆಕೆಯು ಕೂಲಂಕಶವಾಗಿ ವಿಚಾರಿಸುತ್ತಿದ್ದಳು. ಮತ್ತೆ ಯಾವ ಅನ್ಯಸಮಾಚಾರಗಳನ್ನೂ ಅವರು ಅವಳೊಡನೆ ಆಡುತ್ತಿರಲಿಲ್ಲ.

ನಗರದ ಅರಮನೆಯ ಮುಂಭಾಗದಲ್ಲಿ ಒಂದು ರಾಜಕೀಯ ಪುಸ್ತಕಗಳ ನ್ನೊಳಗೊಂಡ ಪುಸ್ತಕಾಲಯವಿದ್ದಿತು. ಅದು ರಾಣಿಯ ವಶದಲ್ಲೇ ಇದ್ದಿತು. ಪುಸ್ತಕಾಲಯದ ಹಿಂಭಾಗದಲ್ಲೊಂದು ಇಳಿಜಾರು ಪ್ರದೇಶ, ಅದರ ತಳಭಾಗದ ಲ್ಲೊಂದು ಸುಂದರವಾದ ಉದ್ಯಾನವನವಿದ್ದಿತು. * ಈ ವನದಲ್ಲಿ ಕುದುರೆ ಸವಾರಿ ಮುಂತಾದ ವ್ಯಾಯಾಮವನ್ನು ಆಕೆಯು ಅಭ್ಯಸಿಸುತ್ತಿದ್ದಳು ; ಮತ್ತು ಅವಳ ಬಳಿಗೆ ಬರುತ್ತಿದ್ದ ನಗರದ ಸ್ತ್ರೀಯರಿಗೆ ನಿಷ್ಠೆಯಿಂದ ಇವುಗಳನ್ನು ಕಲಿಸುತ್ತಿದ್ದಳು. ಸುಂದರಿ, ಮುಂದರಿ ಮತ್ತು ಕಾಶೀಬಾಯಿಯರು ಈ ವ್ಯಾಯಾಮಗಳಲ್ಲಿ ಪ್ರವೀಣರಾಗಿ ಮಿಕ್ಕ ಸ್ತ್ರೀಯರನ್ನು ತರಪೇತು ಮಾಡುವುದರಲ್ಲಿ ರಾಣಿಗೆ ಸಹಾಯವೆ ಸಗುತ್ತಿದ್ದರು. ಆದರೂ ರಾಣಿಯು ಅಶ್ವಾರೋಹಣ ಮತ್ತು ಶಸ್ತ್ರ ಪ್ರಯೋಗ ವಿದ್ಯೆ ಗಳಲ್ಲಿ ತಾನು ಇನ್ನೂ ಪ್ರಾವೀಣ್ಯವನ್ನು ಹೊಂದಿಲ್ಲವೆಂದು ಭಾವಿಸಿದ್ದಳು.

ಪುರಾತನ ಯುದ್ಧಗಳ ನಕ್ಷೆಗಳು ಅವರ ಅರಮನೆಯಲ್ಲಿಯೇ ಇದ್ದವು. ಅವಳು ಅವನ್ನು ಶ್ರದ್ಧೆಯಿಂದ ಅಧ್ಯಯನ ಮಾಡುತ್ತಿದ್ದಳು. ಹೊಸ ಹೊಸದಾಗಿ ಯುದ್ಧಗಳ ನಕ್ಷಾರಚನೆಯನ್ನು ಮಾಡಿ ಪುನಃ ಅವುಗಳನ್ನು ನಾಶಪಡಿಸುತ್ತಿದ್ದಳು. ಅಲ್ಲದೆ ತನ್ನ ಸಖಿಯರೊಂದಿಗೂ ಕೂಡ ವಿಧವಿಧವಾದ ಅನೇಕ ಯುದ್ಧ ಪರಿಸ್ಥಿತಿಗಳ ವಿಚಾರವಾಗಿ ಚರ್ಚಿಸುತ್ತಿದ್ದಳು. ಅವಳಿಗೆ ಬೆಟ್ಟಗುಡ್ಡಗಳ ಮೇಲೆ ಕುದುರೆ ಸವಾರಿ ಮಾಡಬೇಕೆಂಬ ಆಶೆಯು ಅಂಕುರಿಸಿತು. ಝಾನ್ಸಿಯ ಅಕ್ಕ ಪಕ್ಕದಲ್ಲಿ ಬೆಟ್ಟ ಗುಡ್ಡ ಗಳಿದ್ದರೂ ಕೂಡ ಅವು ದಟ್ಟವಾದ ಅರಣ್ಯಗಳಿಂದ ಕೂಡಿ ಭೀಕರ ಪ್ರದೇಶಗಳಾಗಿ ದ್ದವು. ರಾಣಿಯು ಸಖಿಯರೊಂದಿಗೆ ಕುದುರೆಗಳ ಮೇಲೆ ಕುಳಿತು ಆ ಪ್ರದೇಶಗಳಲ್ಲೆಲ್ಲ ಸಂಚರಿಸುತ್ತಿದ್ದಳು. ಇದರಿಂದ ಅವಳಿಗೆ ಝಾನ್ಸಿಯ ಸುತ್ತು ಮುತ್ತಲಿನ ಪ್ರದೇಶಗಳ ಸೂಕ್ಷ್ಮ ಪರಿಚಯವಾಯಿತು. ಈ ಭೌಗೋಳಿಕ ಜ್ಞಾನವನ್ನು ನಿರಂತರವೂ ಹೆಚ್ಚಿಸಿ ಕೊಳ್ಳುತ್ತಲೇ ಇದ್ದಳು.

---

* ಈ ಉದ್ಯಾನವನವು ಈಗ ಹಾರ್ಡಿಗಂಜ್ ಎಂಬ ಸ್ಥಳವಾಗಿದೆ.

ಆಕೆಯ ಬಳಿಗೆ ಸಂದರ್ಶನಕ್ಕಾಗಿ ಬರುತ್ತಿದ್ದ ಸ್ತ್ರೀ ಪುರುಷರೆಲ್ಲರಿಗೂ ಶರೀರ ಪುಷ್ಟಿ ಹೊಂದುವಂತೆ ಅಂಗಸಾಧನೆ ಮಾಡಿದನಂತರವೇ ಮನೋದಾರ್ಢ್ಯದ ಮೂಲಕ ಭಗವಂತನ ಅನುಗ್ರಹವನ್ನು ಪಡೆಯುವಿರಿ ಎಂದು ಬೋಧಿಸಿದ್ದಳು.

ಅವಳ ವ್ಯಾಯಾಮದಲ್ಲಿಯ ಅಕ್ಕರೆಯು ಶೀಘ್ರದಲ್ಲಿಯೇ ವಿಖ್ಯಾತಿಹೊಂದಿತು. ಅಮೀರ್ ಖಾ ಮತ್ತು ವಜೀರ್ ಖಾ ಎಂಬ ಇಬ್ಬರು ಹೆಸರುವಾಸಿಗಳಾದ ಗುರುಗಳು ಅವಳಿಗೆ ದೊರಕಿದರು. ಬಿಟ್ಟೂರಿನಿಂದ ಬಾಲಗುರುವು ಬಂದು ಮಲ್ಲಯುದ್ಧದ ಸೂಕ್ಷ್ಮವನ್ನು ಹೇಳಿಕೊಟ್ಟು ಹೊರಟುಹೋದನು. ನರಸಿಂಹರಾಯತೋರಿಯನೂ ಕೂಡ ದಾಕ್ಷಿಣೇಯರ ಮೊಹಲ್ಲಾದಲ್ಲಿ ಒಂದು ಅಖಾಡವನ್ನು ತೆರೆದನು. ರಾಣಿಯು ತನ್ನ ಸಖಿಯರೊಂದಿಗೆ ಕುಸ್ತಿಯನ್ನು ಅಭ್ಯಾಸಮಾಡುತ್ತಿದ್ದಳು. ವಜೀರ್ ಖಾ ಮತ್ತು ಅಮೀರ್ ಖಾನರ ನಿರ್ದೇಶನದಲ್ಲಿ ರಾಣಿಯು ಭರ್ಜಿ, ಬಂದೂಕ, ಕತ್ತಿ, ಇತ್ಯಾದಿ ಶಸ್ತ್ರಾಸ್ತ್ರಗಳನ್ನು ಉಪಯೋಗಿಸುವುದರಲ್ಲಿ ಪ್ರವೀಣೆಯಾದಳು. ಅವಳ ಕಲಾಕೌಶಲ್ಯ ಕುಶಾಗ್ರಬುದ್ಧಿ ಇವುಗಳನ್ನು ಕಂಡು ಆ ವಿದ್ವಾಂಸರು ಆಶ್ಚರ್ಯಚಕಿತ ರಾಗುತ್ತಿದ್ದರು. ರಾಣಿಯು ಉದ್ದಂಡ ಪ್ರಕೃತಿಯವಳೆಂದು ಅವರು ತಿಳಿದಿದ್ದರು. ಆದುದರಿಂದಲೇ ಅವಳು ಎಲ್ಲಿ ಈ ವಿದ್ಯೆಗಳಲ್ಲಿ ಸ್ಪರ್ಧೆಗೆ ಅವರನ್ನು ಆಹ್ವಾನಿಸು ತ್ತಾಳೋ ಎಂದು ಶಂಕೆಪಡುತ್ತಿದ್ದರು. ಇದು ಕೇವಲ ಅವರ ಭ್ರಮೆಯಾಗಿದ್ದಿತು. ರಾಣಿಯು ಬಾಹ್ಯದಲ್ಲಿ ಪ್ರಚಂಡತೇಜೋರೂಪಿಯಾಗಿದ್ದರೂ ಆಂತರ್ಯದಲ್ಲಿ ಅತ್ಯಂತ ಕೋಮಲ ಸ್ವಭಾವದವಳೂ ಉದಾರಳೂ ಆಗಿದ್ದಳು.

ಇದೇ ರೀತಿಯಾಗಿ ತಿಂಗಳ ಮೇಲೆ ತಿಂಗಳು ಉರುಳಿದವು. ಒಂದು ದಿವಸ ತಾತ್ಯಾಟೋಪಿಯು ಝಾನ್ಸಿಗೆ ಬಂದನು. ರಾಣಿಯ ಸೈನ್ಯವು ಬಹಳ ದಿನಗಳಿಗೆ ಮುಂಚೆಯೇ ಖುಲಾಸೆಯಾಗಿದ್ದಿತು. ಆದರೆ ಸೈನಿಕರೂ ಮತ್ತು ಅವರ ನಾಯಕರು ತಮ್ಮ ಯುದ್ಧ ಕೌಶಲವನ್ನು ಮರೆತಿರಲಿಲ್ಲ, ಮತ್ತು ಅವರ ಸ್ವಾಭಿಮಾನವೂ ಕುಂದಿರ ಲಿಲ್ಲ.

ಮುಹಮ್ಮದ್ ಜಮಾಖಾನನು ಇನ್ನೂ ಕರ್ನಲ್ ಎಂದೇ ಹೇಳಿಕೊಳ್ಳುತ್ತಿ ದ್ದನು. ಆಗಿಂದಾಗ್ಗೆ ರಾಣಿಗೆ ತನ್ನ ಪ್ರಣಾಮಗಳನ್ನು ಅರ್ಪಿಸಲು ಬರುತ್ತಿದ್ದನು. ಇವನ ಮನೆಯಲ್ಲಿಯೇ ಪೂರ್ವದಲ್ಲಿ ತಾತ್ಯಾಟೋಪಿಯು ಬಂದು ಇಳಿದುಕೊಂಡಿ ದ್ದನು. ರಾತ್ರಿ ಸುಮಾರು ಎಂಟು ಘಂಟೆಯ ವೇಳೆಗೆ ತಾತ್ಯಾನು ರಾಣಿಯನ್ನು ಸಂದರ್ಶಿಸಲು ಹೋದನು. ರಾಣಿಯ ಬಳಿಯಲ್ಲಿ ಅವಳ ಮೂವ್ವರು ಸಖಿಯರಿದ್ದರು. ರಾಣಿಯು ತಾತ್ಯಾನಿಗೆ ಬಹು ತೇಜಸ್ವಿಯಾಗಿ ಕಂಡಳು.

ಕುಶಲ ಪ್ರಶ್ನೆಗಳಾದನಂತರ ಮಾತು ಕತೆಗಳಾರಂಭವಾದವು. ರಾಣಿಯು "ಈ ಬಾರಿ ರಾಜಾಸ್ಥಾನ ಮತ್ತು ಪಂಜಾಬು ಪ್ರದೇಶಗಳನ್ನು ಸುತ್ತಿ ಬಂದಿರುವೆಯಾ?"

ಎಂದು ಕೇಳಿದಳು.

ತಾತ್ಯಾನು "ಬಹಳ ಪ್ರದೇಶಗಳನ್ನು ಸುತ್ತಿ ಬಂದಿದ್ದೇನೆ. ಒಂದೆರಡು ಬಾರಿ ನಾನು ಬಂದಿಯಾಗುವ ಸಂಭವವೂ ಉದ್ಭವಿಸಿತ್ತು" ಎಂದು ಉತ್ತರಿಸಿದನು.

ಅವರೆಲ್ಲರೂ ಗಮನದಿಂದ ಕೇಳಲಾರಂಭಿಸಿದರು. ತಾತ್ಯಾನು ಮುಂದುವರಿಸಿದನು "ನಾನು ನನ್ನ ಕಥೆಯನ್ನು ರಾಜಪುಟಾನದಿಂದ ಪ್ರಾರಂಭಿಸುವೆನು. ದೊಡ್ಡ ದೊಡ್ಡ ರಾಜ್ಯಗಳಾದ ಜಯಪುರ, ಜೋಧಪುರ, ಬಿಕನೀರ್ ಇವೇ ಮುಂತಾದವುಗಳು ವಿಶೇಷವಾಗಿ ಯಾವಪಕ್ಷಕ್ಕೂ ಸೇರಿದಂತಿಲ್ಲ. ಎಲ್ಲವೂ ತಟಸ್ಥವಾಗಿವೆ. ಆದರೆ ಎಲ್ಲರೂ ಝಾನ್ಸಿಯ ವಿಚಾರದಲ್ಲಿ ಆಂಗ್ಲೇಯರು ನಂಬಿಕೆದ್ರೋಹವೆಸಗಿದ್ದಾರೆಂದು ಹೇಳುತ್ತಾರೆ. ನಮ್ಮ ವಿಚಾರದಲ್ಲಿ ಅವರು ಉದಾಸೀನರಾಗಿದ್ದಾರೆ. ಇದರಲ್ಲಿ ನಮದಾಗಲೀ ಅವರದಾಗಲೀ ಯಾವ ದೋಷವೂ ಇಲ್ಲ. ನಾವು ಏಕ ಚಕ್ರಾಧಿಪತ್ಯದ ಸ್ವರಾಜ್ಯಸ್ಥಾಪನೆಗಾಗಿ ಯತ್ನಿಸುತ್ತಿದ್ದೆವು. ಅವರಾದರೋ ತಮ್ಮ ತಮ್ಮದೇ ಆದ ಸ್ವಾತಂತ್ರ್ಯರಚನೆಯಲ್ಲಿ ಮಗ್ನರಾಗಿದ್ದರು. ರಾಜಸ್ಥಾನದಲ್ಲಿ ಕೆಲವೆಡೆಗಳಲ್ಲಿ ಮಹಾರಾಷ್ಟ್ರದ ವಿಚಾರದಲ್ಲಿ ಅಪ್ರಸನ್ನತೆಯಿದ್ದರೂ ಅಖಂಡ ಹಿಂದೂಸ್ಥಾನದ ಸ್ವಾತಂತ್ರ್ಯಕ್ಕಾಗಿ ಸಮಯ ಒದಗಿದಾಗ ತಮ್ಮ ಸರ್ವಸ್ವವನ್ನೂ ಮಾಸಲಾಗಿಡಲು ತಯಾರಾಗಿದ್ದಾರೆ. ಆದರೆ ಅಲ್ಲಿನ ಅಧಿಕಾಂಶ ರಾಜರು ಆಂಗ್ಲೇಯ ಸಹಾಯದಿಂದಲೇ ನಿರುಪದ್ರವಿಗಳಾಗಿ ಇರುವುದಾಗಿ ಭಾವಿಸಿಕೊಂಡು ತಮ್ಮ ಜಹಗೀರುದಾರರನ್ನೂ ಮತ್ತು ಪ್ರಜೆಗಳನ್ನೂ ಗಣಿಸದೆ ಇದ್ದುಬಿಟ್ಟಿರುವರು. ಯಾವುದು ಸೌಲಭ್ಯದಿಂದ ನಡೆದುಕೊಂಡು ಬಂದಿದೆಯೋ ಅದನ್ನೇ ಸಂತೋಷದಿಂದ ಮುಂದುವರೆಸಿಕೊಂಡು ಹೋಗುವ ಪಕ್ಷಪಾತಿಗಳಾಗಿದ್ದಾರೆ. ಸರಿಯಾದ ನಾಯಕತ್ವವಿಲ್ಲದೇ ಜೀವನದ ಸಾಧಾರಣ ಧ್ಯೇಯಗಳಲ್ಲಿಯೇ ಮಗ್ನರಾಗಿದ್ದಾರೆ. ಆದುದರಿಂದ ಇಂತಹ ಪರಿಸ್ಥಿತಿಯಲ್ಲಿ ಅವರಿಂದ ಏನನ್ನೂ ಅಪೇಕ್ಷಿಸಬಾರದು. ಅವರ ಸೇನೆಯು ಮಾತ್ರ ನಮ್ಮ ಸೇನೆಗೆ ಬೆಂಬಲಕೊಡುವುದೆಂಬ ವಿಶ್ವಾಸವಿದೆ. ಪಂಜಾಬಿನ ಸ್ಥಿತಿಯು ಇಷ್ಟು ಆಶಾಜನಕವಾಗಿಲ್ಲ. ರಣಜಿತ್‌ಸಿಂಗನ ಪಂಜಾಬು ಆಂಗ್ಲೇಯ ಇಲಾಖೆ ಮತ್ತು ಇತರ ಐದು ಸಂಸ್ಥಾನಗಳಾಗಿ ವಿಭಾಗವಾಗಿವೆ. ಈ ಸಂಸ್ಥಾನಗಳ ರಾಜರು ಕೈಗೆ ಬಂದ ತುತ್ತನ್ನು ಯಾವ ಕಾರಣದಿಂದಲೂ ಬಿಸುಡಲು ತಯಾರಾಗಿಲ್ಲ. ಜನರಿಗೆ ನಾಯಕರಿಲ್ಲದೆ ವಿವಶರಾಗಿದ್ದಾರೆ. ದಿಲ್ಲಿಯ ಬಹದ್ದೂರ್ ಷಹನು ವೃದ್ಧನು. ಆತನ ಹೆಂಡತಿಯು ತೇಜಸ್ವಿನಿ. ಬಾದಷಹನ ಹೆಸರಿನಲ್ಲಿ ಮುಸಲ್ಮಾನರು ಬಲಿದಾನ ಮಾಡಲು ಸಿದ್ಧರಿರಬಹುದು. ನಾನು ಕೆಲವು ಪ್ರಭಾವ ಶಾಲಿಗಳಾದ ಮುಸಲ್ಮಾನರನ್ನು ಸಂಧಿಸಿದ್ದೆ; ಅವರು ಹಿಂದೂಸ್ಥಾನದಲ್ಲಿ ಪುನಃ ಬಾದಷಹತೆಯನ್ನು ಸ್ಥಾಪಿಸುವ ಎನ್ನುತ್ತಿದ್ದರು. ನಾನು ಸ್ವರಾಜ್ಯ ಮತ್ತು ಬಾದಷಹತೆಯು ಸಮಂಜಸವಾಗಿ ಏರ್ಪಡುವುದು

ಎಂದು ಉತ್ತರವಿತ್ತೆ. ಅವರು ಅದು ಹೇಗೆ ಸಾಧ್ಯವೆಂದು ಹೇಳಿದುದಕ್ಕೆ "ಅವರವರ ಪ್ರಾಂತ್ಯದಲ್ಲಿ ಸ್ವರಾಜ್ಯ ಸ್ಥಾಪನೆ ಕೈಗೊಂಡರೆ ಬಾದಷಹನಿಗೆ ಅ ದ ರ ಲ್ಲಿ ಯಾವ ವ್ಯಾಪ್ತಿಯೂ ಇರುವುದಿಲ್ಲ. ಆದರೆ ಅಂತಹ ಕ್ರಾಂತಿಯ ಮಹತ್ಕಾರ್ಯಗಳೊಂದಿಗೆ ಸಂಬಂಧಿಸಿದ ಆಜ್ಞೆಗಳನ್ನು ಬಾದಷಹನ ಹೆಸರಿನಲ್ಲಿಯೇ ಹೊರಡಿಸಲಾಗುವುದು. ದಿಲ್ಲಿಯ ಅಕ್ಕ ಪಕ್ಕದ ಪ್ರದೇಶಗಳು ಬಾದಷಹನ ಅಧೀನತೆಯಲ್ಲಿರುವುವು. ಮಿಕ್ಕ ಎಲ್ಲಾ ಪ್ರಾಂತ್ಯಗಳೂ ಒಟ್ಟುಗೂಡಿ ಬಾದಷಹನ ಮತ್ತು ಸ್ವರಾಜ್ಯದ ಹೆಸರಿನಲ್ಲಿ ಬಾಹ್ಯ ಶತ್ರುವಿನೊಂದಿಗೆ ಹೋರಾಡೋಣ. ಹೀಗೆ ಒಗ್ಗಟ್ಟಿನಿಂದ ಹಿಂದೂಸ್ಥಾನವನ್ನು ಆಳಬಹುದು. ಆದರೆ ಎಂತಹ ಪರಿಸ್ಥಿತಿಯಲ್ಲಿಯೂ ಮೊದಲು ಎಲ್ಲರೂ ಒಟ್ಟಾಗಿ ಈ ಪರದೇಶೀಯರನ್ನು ಹೊಡೆದೋಡಿಸಲೇ ಬೇಕು ಎಂದು ಹೇಳಿದನು. ಈ ಪರಿಸ್ಥಿತಿಯಲ್ಲಿ ಇದೇ ಯುಕ್ತವಾದ ಯೋಜನೆಯಾದುದರಿಂದ ಅನೇಕರು ಇದಕ್ಕೆ ಸಮ್ಮತಿಸಿದರು. ಈ ಸಂದರ್ಭದಲ್ಲಿ ನಾನು ಬಂದಿಯಾಗುವುದರಲ್ಲಿದ್ದು ಸ್ವಲ್ಪದರದಲ್ಲಿ ತಪ್ಪಿಸಿಕೊಂಡೆ. ಒಬ್ಬ ಹಿಂದೂ ಡೆಪ್ಯುಟಿ ಕಮಿಷನರು ನನ್ನನ್ನು ಬಂಧಿಸಿದನು. ಆದರೆ ಸಿಪಾಯಿಗಳ ಕಣ್ಣಿಗೆ ಮಣ್ಣೆರಚಿ ತಪ್ಪಿಸಿಕೊಂಡೆ. ಇದರ ತರುವಾಯ ನಾನು ದಕ್ಷಿಣದ ಕಡೆಗೆ ಪ್ರವಾಸಮಾಡಿದೆ" ಎಂದನು.

ರಾಣಿಯು "ನೀನು ಬಹಳ ಚತುರನು. ನೀನು ಹೇಳುತ್ತಲೇ ಹೋಗು, ನಾನು ಸಾವಧಾನದಿಂದ ಕೇಳುತ್ತೇನೆ" ಎಂದಳು.

ತಾತ್ಯಾನು ನಸುನಗುತ್ತಾ ಹೇಳಿದನು "ಮರಾಠರ ಸಂಸ್ಥಾನಗಳ ರಾಜರ ಸ್ಥಿತಿಯು ಎಂದಿನಂತೆಯೇ ಇವೆ. ಕೇವಲ ಒಂದು ವ್ಯತ್ಯಾಸವಿದೆ—ಜನರು ಜಾಗ್ರತ ರಾಗಿದ್ದಾರೆ. ಸಿಪಾಯಿಗಳು ಸ್ವಾಭಿಮಾನಿಗಳು. ಮಹಾರಾಷ್ಟ್ರದ ಪ್ರಜೆಗಳು ಈಗಲೂ ಸ್ವರಾಜ್ಯಮತ್ತರಾಗಿದ್ದಾರೆ. ಬಡವರೂ, ಬಲ್ಲಿದರೂ, ರೈತರೂ, ಜಹಗೀರುದಾರರೂ ಎಲ್ಲರೂ ಒಂದೇ ಸಂಕೇತಕ್ಕೆ ಕೈಕಟ್ಟಿ ನಿಲ್ಲಲು ಸಿದ್ಧರಾಗಿದ್ದಾರೆ."

ರಾಣಿಯು ಕೂಡಲೇ ವೀರ್ಯದಿಂದ "ಪುನಃ ಮತ್ತೊಂದು ಬಾರಿ ಅದೇ ಪರ್ವತ ಪಂಕ್ತಿಗಳಲ್ಲಿ, ಮೈದಾನಗಳಲ್ಲಿ, ಮತ್ತು ಘಟ್ಟ ಶ್ರೇಣಿಗಳಲ್ಲಿ "ಹರ ಹರ ಮಹಾದೇವ್" ಎಂಬ ಘೋಷವು ಪ್ರತಿಧ್ವನಿತವಾಗಿ ಅವುಗಳಲ್ಲಿ ಕಂಪನವೇರ್ಪಡುವುದು" ಎಂದು ಹೇಳಿದಳು.

ರಾಣಿಯ ಸತೇಜವಾದ ವದನವು ಮತ್ತೂ ತೇಜೋಮಯವಾಯಿತು. ಒಡನೆಯೆ ಮುಗುಳ್ನಗೆ ಸೂಸಿ ಹೇಳಿದಳು.

"ತಾತ್ಯಾ, ನಿನ್ನೊಡನೆ ನಾನು ಪತೋಟಿಯಿಂದ ಮಾತನಾಡಬೇಕು. ಆದರೆ ಹಲವು ವೇಳೆ ನನ್ನ ವಾಗ್ಝರಿಯನ್ನು ನಿಯಂತ್ರಣ ಮಾಡಿಕೊಳ್ಳಲಾಗದೆ ನನ್ನ ಮೇಲೆ ನನಗೆ ರೋಷ ಉಂಟಾಗುವುದು."

ತಾತ್ಯಾನು ಗಂಭೀರದಿಂದ "ಬಾಯಿಸಾಹೇಬ್, ನನ್ನ ಹೃದಯದಲ್ಲಿ, ಇವರ ಹೃದಯದಲ್ಲಿ ಮತ್ತು ಎಲ್ಲ ಜನತೆಯ ಹೃದಯದಲ್ಲಿ ಯಾವ ಮಾತು ಅಡಕವಾಗಿದ್ದಿತೋ ಅದು ನಿಮ್ಮ ಬಾಯಿಯಿಂದ ಹೊರಬಿದ್ದಿತು" ಎಂದನು.

ರಾಣಿಯು "ಅದಕ್ಕೆ ಇನ್ನೂ ಸಮಯ ಒದಗಿ ಬಂದಿಲ್ಲ. ತಕ್ಕಸಮಯಕ್ಕೆ ಸರಿಯಾಗಿ ಹೊರಬೀಳಬೇಕು. ನೀನು ನಿನ್ನ ಕಥೆಯನ್ನು ಮುಂದುವರಿಸು"ಎಂದಳು.

ತಾತ್ಯಾನು ಹೇಳಿದನು "ನಾನು ಹೈದರಾಬಾದಿಗೆ ಹೋದೆ. ಮಿಕ್ಕ ಎಲ್ಲಾ ರಾಜರಂತೆ ನವಾಬನೂ ಆಂಗ್ಲೇಯರ ದಬ್ಬಾಳಿಕೆಗೆ ಒಳಪಟ್ಟು ಅಡಗಿ ಕುಳಿತಿದ್ದಾನೆ. ಸೇನೆಯು ಯಾವ ಪಕ್ಷಕ್ಕೆಂದರೆ ಆ ಪಕ್ಷಕ್ಕೆ ವಾಲುತ್ತದೆ. ಜನತೆಯು ನಮ್ಮೊಂದಿಗಿದೆ. ಮೈಸೂರು ಮತ್ತು ತಂಜಾವೂರುಗಳನ್ನೂ ಸುತ್ತಿ ಬಂದೆ. ಅಲ್ಲೂ ಇದೇ ಪರಿಸ್ಥಿತಿ"

ರಾಣಿಯು ಆ ಮಾತನ್ನು ಕೇಳಿ ಹುಸಿನಕ್ಕಳು. ಅದರ ಮಧುರತೆಯಲ್ಲಿ ಅವಳ ಆದರ್ಶವು ಪ್ರತಿಬಿಂಬಿತವಾಗಿದ್ದಿತು.

ರಾಣಿ—ತಾತ್ಯಾ, ಇನ್ನೂ ಸ್ವಲ್ಪಕಾಲಾವಕಾಶವಿದೆ. ಅಲ್ಲಿಯವರೆಗೆ ಮಹತ್ವಪೂರ್ಣವಾದ ಸ್ಥಳಗಳ ಪರಿಚಯವನ್ನು ನಕ್ಷೆಯ ಸಹಾಯದೊಂದಿಗೆ ಅಧ್ಯಯನಮಾಡು. ಯಾವರೀತಿ ಸೈನ್ಯವನ್ನು ಕೊಂಡೊಯ್ಯಬೇಕು ? ಎಲ್ಲಿ ಸೌಲಭ್ಯದಿಂದ ಯುದ್ಧಮಾಡಬಹುದು? ಎಲ್ಲಿ ನಾವು, ನಮಗೆ ಬೇಕಾದ ಸ್ಥಳದಲ್ಲಿ, ಯಾವ ಬಗೆಯಿಂದ ಶತ್ರುಗಳನ್ನು ಒಟ್ಟುಗೂಡಿಸಿ ಅವರನ್ನು ಯುದ್ಧ ಹೂಡಲು ಅಸಮರ್ಥರನ್ನಾಗಿ ಮಾಡಬಹುದು? ಈ ವಿಚಾರಗಳನ್ನು ಚೆನ್ನಾಗಿ ಪರಿಶ್ರಮದಿಂದ ಪರಿಶೀಲಿಸಬೇಕಾಗಿದೆ. ಇದರೊಂದಿಗೆ ಅರಬ್ಬಿ ಠಾಕಣಗಳನ್ನು ಸಂಗ್ರಹಿಸುವ ಯೋಜನೆಗೂ ಹೆಚ್ಚು ಪ್ರಾಮುಖ್ಯತೆಯನ್ನು ಕೊಡಬೇಕು. ತುಪಾಕಿ ಬಂದೂಕ, ತೋಪು, ಅವುಗಳ ಮದ್ದು ಗುಂಡುಗಳು ಮತ್ತು ಇತರ ಯುದ್ಧ ಸಾಮುಗ್ರಿಗಳನ್ನು ತಯಾರಿಸುವ ಕಾರ್ಯಾಗಾರವನ್ನು ಏರ್ಪಡಿಸಿಕೊಳ್ಳಬೇಕು. ಆಂಗ್ಲೇಯರ ಕಾರ್ಖಾನೆಗಳಲ್ಲಿ ನಮ್ಮವರನ್ನು ನೌಕರರನ್ನಾಗಿಟ್ಟು ಅವರು ಶೀಘ್ರದಲ್ಲಿ ಕೆಲಸವನ್ನು ಕಲಿಯುವಂತೆ ಮಾಡಬೇಕು. ನಮಗೆ ಪೂರ್ವದಿಂದಲೂ ಅಭ್ಯಾಸವಾಗಿ ಬಂದಿರುವ ಗುಡ್ಡಗಾಡು ಯುದ್ಧವನ್ನು ಮರೆಯಬೇಡ. ನಮ್ಮವರು ಈ ಅಭ್ಯಾಸವನ್ನು ತ್ಯಜಿಸಿ ಯುದ್ಧಮಾಡಿ ಸೋತರು.

ತಾತ್ಯಾ—ನಾನು ನಾನಾಸಾಹೇಬ್ ಮತ್ತು ರಾವ್‌ಸಾಹೇಬರ ಪ್ರೋತ್ಸಾಹ ಮತ್ತು ಆಜ್ಞೆಗಳ ಮೇರೆ ಈ ಎಲ್ಲ ವಿಚಾರಗಳನ್ನು ನೆನಪಿನಲ್ಲಿಟ್ಟಿದ್ದೇನೆ. ಈಗ ತಮ್ಮ ಆಜ್ಞೆಯು ದೊರೆಯಿತು. ಇನ್ನು ಹೆಚ್ಚಾಗಿ ಶ್ರದ್ಧೆ ವಹಿಸಿ ಕೆಲಸ ಮಾಡುವೆನು. ಇದುವರಗೂ ಇಷ್ಟು ತಿಂಗಳೂ ಕಾಲ್ನಡಗೆಯಲ್ಲಿಯೇ ಪ್ರವಾಸಮಾಡಿರುವೆನು. ಆದುದರಿಂದ ನನಗೆ ಈ ದೇಶದ ಭೂಗೋಳದ ಪರಿಚಯವು ಚೆನ್ನಾಗಿರುವುದು. ಹೇಗಾದರೂ ಮಾಡಿ ಹೇರಳವಾದಷ್ಟು ಮಂದಿ, ಸಾಮಾನು ಮತ್ತು ಜಾನುವಾರುಗಳನ್ನು ಸಂಗ್ರಹಿಸಿ ಎಲ್ಲಿಂದ

ಎಲ್ಲಿಯವರೆಗೆ ಬೇಕಾದರೂ ಅವನ್ನು ರವಾನಿಸ ಬಲ್ಲೆನು.

ರಾಣಿ—ಯುದ್ಧದ ನಕ್ಷೆಗಳನ್ನು ಅಧ್ಯಯನ ಮಾಡಿರುವೆಯಾ?

ತಾತ್ಯಾ—ಓಹೋ! ಚೆನ್ನಾಗಿ! ಪಂಜಾಬಿನಲ್ಲಿ ಆಂಗ್ಲೇಯರೊಡನೆ ಸಿಕ್ಕರು ಹೂಡಿದ ಯುದ್ಧದ ನಕ್ಷೆಯನ್ನು ಅಧ್ಯಯನ ಮಾಡಿರುವೆನು. ಸಿಕ್ಖರು ಅನ್ಯಾಯವಾಗಿ ಎಷ್ಟು ವೀರತ್ವವನ್ನು ಕಳೆದುಕೊಂಡರು. ಅಷ್ಟೊಂದು ಯುದ್ಧ ಸಾಮುಗ್ರಿಗಳೂ, ಅಂತಹ ತರಪೇತಾದ ಸೈನ್ಯ, ಒಂದು ವೇಳೆ ಒಳ್ಳೇ ನಾಯಕರ ವಶದಲ್ಲಿದ್ದಿದ್ದರೆ ಆಂಗ್ಲೇಯರು ಸಿಕ್ಕರನ್ನು ಎಂದೂ ಸೋಲಿಸಲಾಗುತ್ತಿರಲಿಲ್ಲ. ಆದರೆ ಅವರ ಸೋಲು ಒಂದು ವೇಳೆ ದೇಶ ದ್ರೋಹಿಗಳಿಂದಾದರೂ ಆಗಿರಬಹುದು.

ರಾಣಿ—ಅವರುಗಳು ದೌರ್ಭಾಗ್ಯದಿಂದ ತಮಗೆ ಸೋಲುಂಟಾಯಿತೆಂದು ಹೇಳುತ್ತಿರಬಹುದು.

ತಾತ್ಯಾ—ನಿಸ್ಸಂದೇಹವಾಗಿ ಅದನ್ನೆ ಹೇಳುತ್ತಿರುವರು.

ರಾಣಿ—ಪಂಜಾಬಿನಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯವಿದೆಯೆ?

ತಾತ್ಯಾ—ಹಿಂದೂ ಮತ್ತು ಸಿಕ್ಖ್ ಸ್ತ್ರೀಯರಿಗೆ ಸ್ವಾತಂತ್ರ್ಯವಿದೆ.

ರಾಣಿ—ಹಾಗಿದ್ದರೆ ಪಂಜಾಬು ಎಂದಾದರೊಂದು ದಿನ ಎದ್ದು ನಿಂತೇ ನಿಲ್ಲುವುದು.

ತಾತ್ಯಾ—ಆದರೆ ಮುಸಲ್ಮಾನ ಸ್ತ್ರೀಯರಿಗೆ ಸ್ವಾತಂತ್ರ್ಯ ಕಡಿಮೆ.

ರಾಣಿ—ಇದು ಶೋಚನೀಯ, ಆದರೆ ಒಂದಿಲ್ಲ ಒಂದು ದಿನ ತಮ್ಮ ಸಹೋದರಿಯರ ಪ್ರಭಾವದಿಂದ ಸ್ವತಂತ್ರರಾಗುತ್ತಾರೆ.

ತಾತ್ಯಾ—ನಾನು ಪಂಜಾಬನ್ನು ನನ್ನ ಯೋಜನೆಯಲ್ಲಿ ಸೇರಿಸಿಕೊಂಡಿದ್ದೇನೆ. ಯಾವಾಗ ಈ ತೀವ್ರ ಯೋಜನೆಯಲ್ಲಿ ಪಂಜಾಬು ಸಮ್ಮಿಶ್ರಿತವಾಗುವುದೋ ಅದು ತಲೆಬಾಗಿ ನಿಂತಿರಲು ಸಾಧ್ಯವಿಲ್ಲ.

ರಾಣಿ—ನಾನು ಸಿಕ್ಖರ ಯುದ್ಧ ನಕ್ಷೆಯನ್ನು ಅಧ್ಯಯನ ಮಾಡಲಿಚ್ಛಿಸುವೆನು.

ತಾತ್ಯಾಟೋಪಿಯು ಕಾಗದದ ಮೇಲೆ ಚಿತ್ರ ಬರೆದು ಅವಳಿಗೆ ಎಲ್ಲವನ್ನೂ ವಿಶದಪಡಿಸಿದನು. ರಾಣಿ ಮತ್ತು ಸಖಿಯರು ಅದನ್ನು ಮನನಮಾಡಿಕೊಂಡರು.

ತಾತ್ಯಾ—ನಮಗೆ ವಿಶ್ವಸನೀಯ ಗೂಢಚಾರರ ಪಡೆಯ ಆವಶ್ಯವಿದೆ. ರಾಣಿಯು ಮುಗುಳ್ನಗೆ ನಕ್ಕು ನಾನು ಅದನ್ನು ಆಗಲೇ ಕಾರ್ಯಗತ ಮಾಡಿದ್ದೇನೆ ಎಂದಳು.

ತಾತ್ಯಾ ಉತ್ಸುಕತೆಯಿಂದ "ಹೇಗೆ? ಎಲ್ಲಿ?" ಎಂದು ಕೇಳಿದನು. ರಾಣಿಯು ಉತ್ತರವೀಯುತ್ತಾ "ಇಲ್ಲೆ, ನನ್ನ ಮೂವ್ವರು ಸಖಿಯರೂ ಕೆಲಸವನ್ನು ಕಲಿತುಕೊಳ್ಳುತ್ತಲೂ, ಮಾಡುತ್ತಲೂ ಇದ್ದಾರೆ. ನಾನು ಇತರ ಸ್ತ್ರೀಯರನ್ನು ತರಪೇತುಮಾಡುತ್ತಿದ್ದೇನೆ. ಆದರೆ ಕೆಲಸವು ಬಹಳ ಕಷ್ಟತರವಾದುದು. ನಿಧಾನವಾಗಿ ನಡೆಸುತ್ತಿ

ದ್ದೇನೆ." ಎಂದು ಕೇಳಿದಳು.

ತಾತ್ಯಾನು ಆನಂದ ಪೂರಿತನಾಗಿ ಹೇಳಿದನು "ಝಾನ್ಸಿಯಲ್ಲಿ ಒಂದು ವಿಲಕ್ಷಣ ವಾದ ವಿಚಾರವನ್ನು ಕಂಡೆ. ಝಾನ್ಸಿಯ ನಿವಾಸಿಗಳೇನೋ ನಿಮ್ಮ ಭಕ್ತರು. ಆದರೆ ಝಾನ್ಸಿಯನ್ನು ತೊರೆದು ಹೊರಗೆ ಹೋಗಿರುವವರೂ ಕೂಡ ಝಾನ್ಸಿಗಾಗಿ ತಮ್ಮ ತನುಮನಗಳನ್ನರ್ಪಿಸಲು ಸಿದ್ಧರಾಗಿದ್ದಾರೆ."

"ಆದುದರಿಂದಲೇ ನನಗೆ ಝಾನ್ಸಿಯ ಮೇಲೆ ಇಷ್ಟು ಅಭಿಮಾನ" ಎಂದು ರಾಣಿಯು ಹೇಳಿದಳು

ತಾತ್ಯಾನು "ನಾನು ಗವಾಲಿಯರಿನ ಪರಿಸ್ಥಿತಿಯನ್ನು ಅರಿತುಕೊಂಡು ದಕ್ಷಿಣಕ್ಕೆ ಪ್ರವಾಸಮಾಡಿದೆ. ಅಲ್ಲಿ ಒಬ್ಬ ಬ್ರಾಹ್ಮಣನನ್ನು ಕಂಡೆ. ಆತನು ನನ್ನನ್ನು ಗುರುತಿಸಿದನು. ನನಗೂ ಅವನ ಗುರುತು ಹತ್ತಿತು. ಅವನಿಗೆ ಗತಿಸಿದ ಮಹಾರಾಜರು ಒಂದು ಅಪರಾಧಕ್ಕಾಗಿ ದೇಶತ್ಯಾಗದ ದಂಡನೆಯನ್ನು ವಿಧಿಸಿದ್ದರು.

ರಾಣಿಯು "ನಾನು ಈ ಅಪರಾಧದ ವಿಷಯವನ್ನು ಕೇಳಿದ್ದೇನೆ." ಎಂದಳು.

"ನಾರಾಯಣ ಶಾಸ್ತ್ರಿಯು ಆವನಿಗೆ ಯಾವ ಕಾರ್ಯವನ್ನು ವಹಿಸಿದರೂ ಅದನ್ನು ತನ್ನ ಪ್ರಾಣವನ್ನೇ ಪಣವಾಗಿಟ್ಟು ನೆರವೇರಿಸುವುದಾಗಿ ಆಶ್ವಾಸನೆಯಿತ್ತನು." ಎಂದು ತಾತ್ಯಾ ಹೇಳಿದನು.

ರಾಣಿಯು "ಅವನು ಇಲ್ಲಿಂದ ಕರೆದುಕೊಂಡು ಹೋದ ಸ್ತ್ರೀಯನ್ನು ತ್ಯಜಿಸಿ ಬಿಟ್ಟನೆ?" ಎಂದು ಕೇಳಿದಳು.

ತಾತ್ಯಾ ಉತ್ತರವಿತ್ತು "ಇಲ್ಲ ಬಾಯಿಸಾಹೇಬ್, ಅವನು ತ್ಯಜಿಸಿಲ್ಲ" ಎಂದು ಸ್ಪಷ್ಟವಾಗಿ ಹೇಳಿದನು.

ರಾಣಿ—ಸಮಾಜವು ಅವರನ್ನು ಹೇಗೆ ಗ್ರಹಣಮಾಡಿತು?

ತಾತ್ಯಾ—ಅವರು ಸಮಾಜದಿಂದ ಹೊರಗಿದ್ದಾರೆ. ಶಾಸ್ತ್ರಿಯು ಮೀಸೆಯನ್ನು ಬೋಳಿಸಿ ಬೈರಾಗಿ ವೇಷದಿಂದಿದ್ದಾನೆ.

ರಾಣಿ—ಅವರಿಗೆ ನೀನೇನು ಕೆಲಸವಿತ್ತೆ?

ತಾತ್ಯಾ—ಸೇನೆಯೊಂದಿಗೆ ಸಂಪರ್ಕವಿಟ್ಟುಕೊಳ್ಳುವ ಕೆಲಸ. ನಾರಾಯಣ ಶಾಸ್ತ್ರಿಗೆ ಜ್ಯೋತಿಷ್ಯವು ತಿಳಿದಿದೆ. ಅಲ್ಲದೆ ಕವಿತೆಗಳನ್ನು ರಚಿಸಬಲ್ಲನು. ಅವುಗಳ ಮೂಲಕ ಅವನು ಸೇನೆಯ ಸಂಪರ್ಕವಿಟ್ಟುಕೊಳ್ಳಬಹುದು.

ರಾಣಿ—ಸೇನೆಯೊಂದೇ ಅಲ್ಲವೆ ಧನಿಕರೊಡನೆಯೂ ಸಂಪರ್ಕವಿಟ್ಟುಕೊಳ್ಳುವುದಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಬೇಕು.

ತಾತ್ಯಾ—ಕೊಡುತ್ತಲಿದ್ದೇನೆ.

ರಾಣಿ—ಪಾಪ, ನೀನೊಬ್ಬಂಟಿಗನಾಗಿ ಅನೇಕ ಕೆಲಸಗಳನ್ನು ಮಾಡಬೇಕಾಗಿದೆ.

ತಾತ್ಯಾ—ಇಲ್ಲ, ನಾನಾ ಸಾಹೇಬ್, ರಾವ್‌ಸಾಹೇಬ್ ಮುಂತಾದ ಅನೇಕರು ಈ ಕೆಲಸದಲ್ಲಿ ನನ್ನೊಡನಿರುವರು. ದಿಲ್ಲಿ, ಮೀರತ್ತು ಮುಂತಾದ ಸ್ಥಳಗಳಲ್ಲಿ ಅನೇಕ ಮುಸಲ್ಮಾನರೂ ಕೂಡ ತಲೆ ಕೊಟ್ಟು ಕಾರ್ಯನಿರತರಾಗಿದ್ದಾರೆ.

ರಾಣಿ—ಶೀಘ್ರದಲ್ಲಿಯೇ ಏನಾದರೂ ನಡೆಯುವ ಸಂಭವವುಂಟೆಂದು ತೋರುತ್ತದೆ. ಆದರೆ ಅರ್ಧಂಬರ್ಧ ತಯಾರಿಯಲ್ಲಿ ಏನನ್ನೂ ಮಾಡಬಾರದೆಂದು ಯೋಚಿಸುತ್ತೇನೆ. ಬಹಳ ದಿನಗಳ ಹಿಂದೆ ಮದರಾಸಿನಲ್ಲಿ ಸಿಪಾಯಿಗಳು ಇದ್ದಕ್ಕಿದ್ದಂತೆಯೇ ಉಪದ್ರವ ಮಾಡಿದರು. ಆದರೆ ಅವೆಲ್ಲವೂ ವ್ಯರ್ಥವಾದವು. ಇದರ ಪರಿಣಾಮವೇನೆಂದರೆ ಮದರಾಸಿಗಳನ್ನು ಹೆಚ್ಚಾಗಿ ಸೇನೆಯಲ್ಲಿ ಸೇರಿಸಿಕೊಳ್ಳುತ್ತಿಲ್ಲ. ಆಂಗ್ಲೇಯರು ಎಚ್ಚೆತ್ತು ಜಾಗರೂಕರಾಗಿದ್ದಾರೆ.

ತಾತ್ಯಾ—ಆಂಗ್ಲೇಯರು ಎಷ್ಟೇ ಸಾವಧಾನತೆ, ಕುಟಿಲತೆ ಮತ್ತು ಬುದ್ಧಿವಂತಿಕೆಯಿಂದ ಕೆಲಸವನ್ನು ಆಗಮಾಡಿಸಿಕೊಂಡರೂ ನಮ್ಮ ಜನತೆಯು ಅವರ ರಾಜ್ಯಭಾರವನ್ನು ಅಪೇಕ್ಷಿಸುವುದಿಲ್ಲ. ಆದುದರಿಂದ ರಾಜನವಾಬರ ಸಖ್ಯವಿಲ್ಲದಿದ್ದರೂ ನಮ್ಮ ಉತ್ಸಾಹವೇನು ಕಡಿಮೆಯಾಗುವುದಿಲ್ಲ.

ರಾಣಿಯು ನಸುನಕ್ಕು "ಅದು ನನಗೆ ಗೊತ್ತು" ಎಂದಳು.

ತಾತ್ಯಾನು "ಬಾಯಿಸಾಹೇಬ್, ಈಗ ನಿಮಗೆ ಮಲಗುವ ಹೊತ್ತಾಯಿತು. ಇನ್ನೂ ಊಟವಾಯಿತೋ ಇಲ್ಲವೋ ತಿಳಿಯದು. ನಾನು ಇಲ್ಲಿ ಒಂದೆರಡು ದಿನ ತಂಗಿದ್ದು ಹೊರಟುಹೋಗುತೇನೆ. ಶೀಘ್ರದಲ್ಲಿಯೇ ತಮ್ಮ ಸೇವೆಯಲ್ಲಿ ಉಪಸ್ಥಿತನಾಗಿ ಏನಾದರೂ ಒಂದು ಮಹತ್ವವಾದ ವಿಷಯದಲ್ಲಿ ಕಾಣುತ್ತೇನೆ." ಎಂದನು.

ರಾಣಿ—ನಾನೀಗ ಊಟಮಾಡುವುದಿಲ್ಲ. ಹಾಲು ಕುಡಿದು ಮಲಗಿಕೊಳ್ಳುವೆನು. ಇಲ್ಲದಿದ್ದರೆ ನಾಳಿನ ಕಾರ್ಯಕ್ರಮಗಳಿಗೆ ಕುಂದುಂಟಾಗುವುದು. ನೀನು ದಿವಾನ್ ರಘುನಾಥಸಿಂಹ ಮತ್ತು ದಿವಾನ್ ಜವಾಹರ್‌ಸಿಂಹ ಇವರನ್ನು ಕಂಡಿದ್ದೆಯಾ?

ತಾತ್ಯಾ—ಹಿಂದೆ ಬಂದಾಗ ಸಂಧಿಸಿದ್ದೆ. ಈಸಲ ಕಾಣಲಾಗಲಿಲ್ಲ.

ರಾಣಿ—ಅವರನ್ನು ಅವಶ್ಯಕವಾಗಿ ಹೋಗಿ ನೋಡು. ರಘುನಾಥಸಿಂಹರು ಹೊಸ ಬಡಾವಣೆಯಲ್ಲಿ ಗಣಪತಿ ಕಿಡಕಿಯ ಹೊರಗಡೆ ವಾಸಿಸುತ್ತಾರೆ. ಮತ್ತು ಜವಾಹರ್‌ಸಿಂಹರು ಕಟೇಲಿ ಹಳ್ಳಿಯಲ್ಲಿರುತ್ತಾರೆ.

ತಾತ್ಯಾ—ನಾನು ಅವರನ್ನು ಕಾಣುವೆನು.

ತಾತ್ಯಾನು ಅಲ್ಲಿಂದ ಹೊರಬಿದ್ದನು.

## ೩೭

ಸುಮಾರು ಎಂಟು ಘಂಟೆಯ ವೇಳೆಗೆ ತಾತ್ಯಾ, ರಘುನಾಥಸಿಂಹ ಮತ್ತು ಜವಹರ್‌ಸಿಂಹರು ರಾಣಿಯ ಬಳಿಗೆ ಬಂದರು. ರಘುನಾಥಸಿಂಹನು ಒಳ್ಳೆಯ ಬಲ ಶಾಲಿಯೂ ಶರೀರ ಪುಷ್ಟಿಯುಳ್ಳವನೂ ಆಗಿದ್ದನು. ಜವಹರಸಿಂಹನು ಸ್ವಲ್ಪ ತೆಳ್ಳ ಗಿದ್ದರೂ ದೃಢಕಾಯನಾಗಿದ್ದನು.

ಮೂವ್ವರೂ ರಾಣಿಗೆ ವಂದಿಸಿ ಕುಳಿತುಕೊಂಡರು.

ರಾಣಿಯು "ಜವಹರ್‌ಸಿಂಹರನ್ನು ಬಲವಂತಪಡಿಸಿ ಕರೆತಂದೆಯಾ ?" ಎಂದು ತಾತ್ಯಾನನ್ನು ಕೇಳಿದಳು.

ಜವಹರಸಿಂಹನು ಕೈಮುಗಿದು "ದಿವಾನ್ ರಘುನಾಥಸಿಂಹರ ಒಂಟಿಯ ಬೇಹುಗಾರನು ನನ್ನನ್ನು ಕರೆತಂದನು. ಆತನು ಬೆಳಗಿನಜಾವಕ್ಕೆ ಮುಂಚೆಯೇ ಬಂದು ನನ್ನನ್ನು ನಿದ್ದೆಯಿಂದ ಎಬ್ಬಿಸಿದನು" ಎಂದು ಹೇಳಿದನು.

ತಾತ್ಯಾ ಹೇಳಿದನು "ನಾನು ಸ್ವತಃ ಅಲ್ಲಿಗೆ ಹೋಗಲಿಲ್ಲ. ದಿವಾನರನ್ನು ಜವಹರ ಸಿಂಹರನ್ನು ಬರಮಾಡುವಂತೆ ಪ್ರಾರ್ಥಿಸಿಕೊಂಡೆ. ಆದರಂತೆಯೇ ಅವರು ಒಡನೆಯೆ ಒಂಟಿಯ ಬೇಹುಗಾರನನ್ನು ಕಳುಹಿಸಿದರು. ಕುದುರೆ ಸವಾರನು ಹೋಗಿದ್ದರೆ ದಿವಾನ್‌ಸಾಹೇಬರೂ ಕುದುರೆಯ ಮೇಲೆ ಬರಬೇಕಾಗಿದ್ದಿತು. ಆದರಿಂದ ಒಂದುವೇಳೆ ಯಾರಾದರೂ ಅನುಮಾನ ಪಡಬಹುದೆಂದು ಒಂಟಿಯನ್ನು ಕಳುಹಿಸಿದೆವು."

ಜವಹರಸಿಂಹನು "ಶ್ರೀಮಂತ ಸರ್ಕ್ಕಾರ್, ನನಗೆ ಯಾರ ಭಯವೂ ಇಲ್ಲ. ಝಾನ್ಸಿ ಮತ್ತು ನಮ್ಮ ಧಣಿಗಳಿಗಾಗಿ ನನ್ನ ಶರೀರ ತ್ಯಾಗಮಾಡುವ ದಿನವನ್ನು ನಿರೀಕ್ಷಿ ಸುತ್ತಿರುವೆನು." ಎಂದು ಹೇಳಿದನು.

ರಘುನಾಥ ಸಿಂಹನು ಬಾಗಿ ವಂದಿಸಿದನು.

ರಾಣಿಯು ಮುಗಳ್ನಗೆಯೊಂದಿಗೆ ಹೇಳಿದಳು "ನಿಮ್ಮಗಳ ಪರಾಕ್ರಮ ಮತ್ತು ಭರವಸೆಗಳನ್ನೇ ನಂಬಿರುವೆನು. ತಾವುಗಳು ಜೋಹರ್ ಪದ್ಧತಿಯಂತೆ ಆತ್ಮತ್ಯಾಗ ಮಾಡುವ ದಿನವು ಬಂದೇ ಬರುವುದು. ತಾತ್ಯಾ ನಿಮಗೆ ಹಲವು ವಿಷಯಗಳನ್ನು ತಿಳಿ ಸಿರಬಹುದಲ್ಲವೆ ?"

ರಘುನಾಥಸಿಂಹ—ಅರುಹಿರುವರು ಸರ್ಕಾರ್. ಸ್ವಲ್ಪದರಲ್ಲೇ ಎಲ್ಲವೂ ಅರ್ಥ ವಾಯಿತು. ವಿಶದವಾಗಿ ಕೇಳಿ ತಿಳಿದುಕೊಳ್ಳುವ ಆವಶ್ಯಕವೇನಿಲ್ಲ. ನಮ್ಮ ಮಾತೆ ಯನ್ನು ನೋಡಲು ಆಸೆಯಾದುದರಿಂದ ನೋಡಲು ಬಂದೆವು.

ಜವಹರ್—ತಾವು ತಮ್ಮ ಪವಿತ್ರಹಸ್ತಗಳಿಂದ ನಮ್ಮ ಕತ್ತಿಗಳ ಮೇಲೆ ಗಂಗಾ ಜಲವನ್ನು ಸಂಪ್ರೋಕ್ಷಿಸಬೇಕು.

ರಘು—ಅಲ್ಲದೆ ತಮ್ಮ ಆಶೀರ್ವಾದವನ್ನೂ ದಯಪಾಲಿಸಬೇಕು.

ರಾಣಿಯು ನಕ್ಕು "ನೀವು ನಿಮ್ಮ ಪ್ರಾಣವನ್ನು ಧಾರೆಯೆರೆಯಲು ಸಿದ್ಧರಿರುವಿರೆಂದು ನಾನು ಚೆನ್ನಾಗಿ ತಿಳಿದಿದ್ದೇನೆ. ಆದರೆ ನೀವು ಅಲ್ಪಕಾರಣಕ್ಕಾಗಿ ಪ್ರಾಣತ್ಯಾಗ ಮಾಡಬಾರದೆಂದು ಆಶಿಸುತ್ತೇನೆ. ಸಮಯ ಒದಗಿದಾಗಲೇ ಕತ್ತಿಯನ್ನು ಒರೆಯಿಂದ ಎಳೆಯಬೇಕು.

ತಾತ್ಯಾ—ಇವರಿಗೆ ಗೌರ್ನರ್ ಸಾಹೇಬನ ಆಜ್ಞೆಯನ್ನು ಕೇಳಿ ಬಹಳ ಕ್ರೋಧವುಂಟಾಯಿತು. ಅವರು ಒಡನೆಯೆ ಅದಕ್ಕೆ ಪ್ರತ್ಯುತ್ತರ ಕೊಡಬೇಕೆಂದು ತವಕಿಸಿದರು.

ರಾಣಿ—ಆಂಗ್ಲೇಯರ ಅತ್ಯಾಚಾರವು ಹೆಚ್ಚುವುದು ಒಳ್ಳೆಯದೇ. ನಂತರ ಭಗವಂತನೂ ನಮ್ಮ ಪ್ರಾರ್ಥನೆಯನ್ನು ಶೀಘ್ರನಾಗಿ ಕೇಳುವನು. ಮುಖ್ಯವಾಗಿ ಇಷ್ಟು ಅಲ್ಪಕಾರಣಕ್ಕಾಗಿ ದ್ವೇಷ ಬೆಳಸುವುದು ಸರಿಯಲ್ಲ.

ಆ ಇಬ್ಬರು ಸನ್ಮಾನಿತರೂ ಒಪ್ಪಿಕೊಂಡರು. ತಮ್ಮ ಹೊಳೆಯುತ್ತಿದ್ದ ಕತ್ತಿಗಳನ್ನು ರಾಣಿಯ ಪದತಳದಲ್ಲಿರಿಸಿ ಕೈ ಜೋಡಿಸಿ ನಿಂತರು. ರಾಣಿಯು ಮುಂದರಿಗೆ ಗಂಗಾಜಲವನ್ನು ತರುವಂತೆ ಆಜ್ಞೆ ಮಾಡಿದಳು. ಅದರಂತೆಯೆ ಆವಳು ಗಂಗಾಜಲವನ್ನು ತಂದಳು. ರಾಣಿಯು ಮೊದಲು ಜವಹರ್ ಸಿಂಹನ ಕತ್ತಿಯ ಮೇಲೂ ನಂತರ ರಘುನಾಥ ಸಿಂಹನ ಕತ್ತಿಯ ಮೇಲೂ ಸಂಪ್ರೋಕ್ಷಿಸಿದಳು.

ಅವರಿಬ್ಬರೂ ರಾಣಿಯ ಚರಣ ಸ್ಪರ್ಶಮಾಡಿ ತಮ್ಮ ತಮ್ಮ ಒರೆಯಲ್ಲಿ ಸೇರಿಸಿಕೊಂಡರು.

ರಾಣಿಯು ಪುಳಕಿತಳಾದಳು.

ಒಂದು ಕ್ಷಣದನಂತರ ಶಾಂತತೆಯನ್ನು ತಾಳಿ "ಈ ಗಂಗಾಜಲದ ಪವಿತ್ರತೆಯನ್ನು ಯಾವಾಗಲೂ ಕಾಪಾಡಬೇಕು. ಅಂತಃ ಕಲಹದಲ್ಲಿ ಇದನ್ನು ಉಪಯೋಗಿಸಬಾರದು. ಮತ್ತೆ ಕಲುಷಿತ ಕಾರ್ಯದಲ್ಲಿಯೂ ಇದನ್ನು ಒರೆಯಿಂದ ಸೆಳೆಯಕೂಡದು." ಎಂದು ಹೇಳಿದಳು.

ಅವರಿಬ್ಬರೂ ನತಮಸ್ತಕರಾಗಿ ಶಿರಸಾವಹಿಸಿದರು.

ರಘುನಾಥಸಿಂಹನು "ಈಗ ತಮ್ಮ ಆಶೀರ್ವಾದವು ದೊರಕಬೇಕು" ಎಂದು ನುಡಿದನು.

ರಾಣಿಯು ರುದ್ಧಿತವಾಗಲಿದ್ದ ಕಂಠವನ್ನು ಸರಿಪಡಿಸಿಕೊಂಡು "ನಿಮ್ಮ ಹಸ್ತಗಳು ಸ್ವರಾಜ್ಯದ ಆದರ್ಶಪಾಲನೆ ಮಾಡಲಿ, ನೀವು ಸುಖದಿಂದಿರಿ. ನಿಮ್ಮ ನಾಮಸ್ಮರಣೆಯಿಂದಲೇ ಮುಂದೆ ಬರುವ ಪೀಳಿಗೆಯು ಶುದ್ಧವಾಗುವಂತಹ ಪವಿತ್ರವಾದ ಹೆಸರನ್ನು ಗಳಿಸಿರಿ" ಎಂದು ಹರಸಿದಳು.

ಜವಾಹರಸಿಂಹನು "ತಾಯಿ, ಈ ಆಶೀರ್ವಾದವೂ ಮತ್ತು ಆ ಪವಿತ್ರ ಗಂಗಾ

ಜಲವೂ ಯಾವಾಗಲೂ ನಮ್ಮೊಂದಿಗಿರುವುವು" ಎಂದನು.

ರಘುನಾಥಸಿಂಹನು "ಸರ್ಕಾರ್, ಇಂದು ಏಕೋ ನಾವುಗಳು ಎಷ್ಟೋ ವಿಜಯಗಳನ್ನು ಗಳಿಸಿದಂತೆ ಭಾಸವಾಗುತ್ತಿದೆ" ಎಂದನು.

ರಾಣಿಯು "ನೀವು ವಿಜಯಿಗಳಾಗುವುದರಲ್ಲಿ ನನಗೆ ಸಂದೇಹವೇ ಇಲ್ಲ" ಎಂದಳು.

ರಘುನಾಥಸಿಂಹನು "ತಾಯಿ, ನಮಗೆ ಆಶೀರ್ವಾದವೇನೋ ದೊರಕಿತು. ಪ್ರಸಾದ ದೊರಕುವುದೊಂದು ಬಾಕಿ ಉಳಿದಿದೆ" ಎಂದನು.

ರಾಣಿಯು ಒಡನೆಯೆ ಮುಂದರಿಯನ್ನು ಕುರಿತು "ಇಂದು ನಾನು ತಯಾರಿಸಿದ ಲಡ್ಡುಗಳನ್ನು ತೆಗೆದುಕೊಂಡು ಬಾ" ಎಂದು ಹೇಳಿದಳು.

ಮುಂದರಿಯು ಒಂದು ದೊಡ್ಡ ತಟ್ಟೆಯ ತುಂಬ ಲಡ್ಡುಗಳನ್ನಿರಿಸಿ ತಂದಳು.

ಜವಹರ್‌ಸಿಂಹನು ನಗುತ್ತಾ "ಇಷ್ಟು ಬೇಕಿಲ್ಲ ತಾಯಿ, ನಾವು ಭೋಜನ ಮಾಡಿ ಬಂದಿದ್ದೇವೆ" ಎಂದನು.

ರಾಣಿಯು ಎದ್ದು ಒಂದೊಂದು ಕೈಯ್ಯಲ್ಲಿ ಒಂದೊಂದು ಲಡ್ಡುವನ್ನು ಹಿಡಿದು "ನಾನು ತಯಾರಿಸಿದ ಲಡ್ಡುಗಳನ್ನು ನನ್ನ ಕೈಯ್ಯಿಂದಲೇ ತಿನ್ನಿಸುತ್ತೇನೆ" ಎಂದು ಹೇಳಿದಳು

ರಾಣಿಯು ಅವರೆಲ್ಲರಿಗೂ ಲಡ್ಡುವನ್ನು ತಿನ್ನಿಸಿ ತನ್ನ ಸಖಿಯರಿಗೂ ಕೊಟ್ಟಳು. ಎಲ್ಲರೂ ತಿಂದು ಕೈಬಾಯಿಗಳನ್ನು ತೊಳೆದು ಕೊಂಡರು.

ರಾಣಿಯು ನಂತರ ಹೇಳಿದಳು—ಈಗ ನೀವುಗಳು ಇಷ್ಟು ಮಾತ್ರ ಮಾಡಬೇಕು—ನಿಮ್ಮ ಸಂಬಂಧೀಕರೊಡನೆ ಹೆಚ್ಚು ವಿಶ್ವಾಸ ಬೆಳಸಿ ಅವರನ್ನು ನಿಮ್ಮವರನ್ನಾಗಿ ಮಾಡಿಕೊಳ್ಳಿ. ಎಲ್ಲರೂ ಕಾರ್ಯದಲ್ಲಿ ನಿರತರಾಗಲಿ. ನೀಚ ಜಾತಿಯ ಸ್ತ್ರೀ ಪುರುಷರನ್ನೂ, ಬಡವರನ್ನೂ, ರೈತಾಪಿ ಜನರನ್ನೂ ಯಾರನ್ನೂ ಕೀಳೆಂದು ತಿಳಿಯಬೇಡಿ. ಎಲ್ಲ ಜಾತಿಯ ಮತ್ತು ವರ್ಗದವರಿಗೂ ನಿಮ್ಮ ಉದ್ದೇಶವನ್ನು ತಿಳಿಸದೇ ಶಸ್ತ್ರಾಸ್ತ್ರಗಳ ಪ್ರಯೋಗಗಳನ್ನು ಕಲಿಸಿಕೊಡಿ. ಇದಕ್ಕಾಗಿ ಶಿಖಾರಿ, ಉತ್ಸವ, ಮದುವೆ ಮುಂತಾದ ಸಂದರ್ಭಗಳು ಬರುತ್ತವೆ.

ಜವಹರ್‌ಸಿಂಹ—ಒಳ್ಳೆಯದು.

ರಘುನಾಥಸಿಂಹ—ಹಾಗೆಯೇ ಆಗಲಿ.

ತಾತ್ಯಾ ಹೇಳಿದನು. "ನಾನು ಇವರಿಗೆ ಯಾವ ಸಂಬಂಧೀಕನೂ ಕಳ್ಳತನ ಅಥವಾ ಸೂರೆ ಮಾಡದಂತೆ ತಕ್ಕ ಏರ್ಪಾಡು ಮಾಡಿ ಎಂದು ಹೇಳಿದೆ. ಆದರೆ ಇವರು ಅದು ಬಹಳ ಕಷ್ಟವೆಂದು ಹೇಳುತ್ತಾರೆ. ನಾನು ಹೇಳುವುದು ಸೂರೆ ಮಾಡುವುದಾದರೆ ಖಜಾನೆಯನ್ನೊ ಅಥವಾ ಠಾಣೆಯನ್ನೊ ಮಾಡಲಿ ಎಂದು"

ರಾಣಿಯು ನಿರೋಧಿಸುತ್ತಾ "ತಾತ್ಯಾ ಅದು ಉಚಿತವಲ್ಲ. ಅನಾಚಾರ, ಅತ್ಯಾಚಾರಗಳಿಗೆ ಒಂದು ಬಾರಿ ಪ್ರೋತ್ಸಾಹ ದೊರಕಿದರೆ ಅವು ಪುನಃ ಪುನಃ ತಲೆ ಎತ್ತುವುವು. ಯಾವಾಗ ಸ್ವರಾಜ್ಯ ಸ್ಥಾಪನೆಗೆ ಯುದ್ಧವು ಪ್ರಾರಂಭವಾಗುವುದೋ ಆಗ ತನಗೆ ತಾನೆ ಅವೆಲ್ಲವೂ (ಖಜಾನೆ, ಠಾಣೆ ಎಲ್ಲವೂ) ನಮ್ಮ ಅಧಿಕಾರಕ್ಕೆ ಸೇರಿ ಹೋಗುವುವು. ಈಗ ಅದರ ಗೊಡವೆ ಬೇಡ." ಎಂದು ಹೇಳಿದಳು.

ರಘುನಾಥಸಿಂಹ ಮತ್ತು ಜವಹರಸಿಂಹರು ಈ ಮಾತಿಗೆ ಸಮ್ಮತಿಸಿದರು.

ತಾತ್ಯಾನು "ಕ್ಯಾಪ್ಟನ್ ಗಾರ್ಡನ್ನನು ತನ್ನ ಅಧಿಕಾರ ಚಲಾವಣೆಯನ್ನು ಬಹು ದರ್ಪದಿಂದ ನಡೆಸುತ್ತಿರುವನು. ಪ್ರಾಯಶಃ ಜನರೆಲ್ಲರೂ ತನ್ನ ಪಕ್ಷಕ್ಕೆ ಇರುವರೆಂದು ತಿಳಿದುಕೊಂಡಿರಬಹುದು" ಎಂದನು.

ರಾಣಿಯು "ಜನರೇನೂ ಮೂರ್ಖರಲ್ಲ" ಎಂದಳು.

ತಾತ್ಯಾ, ದಿವಾನ್ ಜವಹರಸಿಂಹ ಮತ್ತು ದಿವಾನ್ ರಘುನಾಥಸಿಂಹರು ಅಪ್ಪಣೆ ಪಡೆದು ಅಲ್ಲಿಂದ ಹೊರಟುಹೋದರು.

ರಾಣಿಯು ತನ್ನ ಸಖಿಯರನ್ನು ಕುರಿತು "ಇವರಿಬ್ಬರಲ್ಲಿ ಝಾಂಸಿಯ ಸ್ವರಾಜ್ಯ ಸೇನೆಯ ನಾಯಕರಾಗಲು ಯಾರು ಅರ್ಹರು?" ಎಂದು ಪ್ರಶ್ನಿಸಿದಳು.

ಮುಂದರಿ—ದಿವಾನ್ ರಘುನಾಥಸಿಂಹ.

ಸುಂದರಿ—ನಾನೂ ಹಾಗೇ ಎಣಿಸುತ್ತೇನೆ.

ಕಾಶಿ—ಜವಹರಸಿಂಹ.

ಎಲ್ಲರೂ ರಾಣಿಯ ಮುಖವನ್ನು ನೋಡಿದರು.

ಮುಂದರಿಯು "ನಮ್ಮಿಬ್ಬರ ಮಾತು ಸತ್ಯವಾಗುವುದು" ಎಂದಳು.

ಸುಂದರಿ "ಬಾಯಿಸಾಹೇಬ್, ಅವಳೇನು ಹೇಳುತ್ತಾಳೆ ಕೇಳಿದಿರಾ?" ಎಂದಳು.

ಕಾಶೀಬಾಯಿಯು ನಗುತ್ತಾ "ಅವರು ಈಗಲೇ ಉತ್ತರವನ್ನು ತಿಳಿಸುವರು" ಎಂದಳು.

ರಾಣಿಯು "ಸಮಯ ಬಂದಾಗ ತಿಳಿಸುವೆನು" ಎಂದಳು.

## ೩೮

ಬ್ರಿಟಿಷ್ ಸರ್ಕಾರದ ಅಧಿಕಾರಿಗಳಿಗೆ ಅವರ ಪ್ರಭುತ್ವದ ಕಾನೂನಿನ ಮೇಲೆ ಜಿಲ್ಲೆಯಲ್ಲಿ ಪ್ರವಾಸಮಾಡುವುದು, ಅಲ್ಲಿಯ ಕಛೇರಿಗಳ ಕಾರ್ಯಕ್ರಮಗಳನ್ನು ವಿಶದವಾಗಿ ಪರಿಶೀಲಿಸುವುದೂ, ಪೋಲಿಸ್‌ಠಾಣೆ, ಬಂದೀಖಾನೆ ಮುಂತಾದವುಗಳ ಮೇಲೆ ಉಸ್ತುವಾರಿ ಇಡುವುದು ಇವೇ ಮುಂತಾದ ಮಹತ್ವಪೂರ್ಣ ಕೆಲಸಗಳಿದ್ದವು. ಪ್ರವಾಸ

ಮಾಡುವಾಗ ಗ್ರಾಮಪಂಚಾಯಿತಿಗಳ ಬದಲು ಆಂಗ್ಲೇಯ ನ್ಯಾಯಾಸ್ಥಾನಗಳು ನ್ಯಾಯಪರಿಶೀಲನೆಯ ಕೆಲಸಗಳನ್ನು ಸುಲಭವಾಗಿ ಮಾಡುತ್ತಿದ್ದವು. ಇದಲ್ಲದೆ ಈ ಪ್ರವಾಸಗಳು ಶಿಕಾರಿ, ನಯನಮನೋಹರ ಪ್ರಕೃತಿಯ ನವೀನ ದೃಶ್ಯಗಳ ನೋಟ, ಅಲ್ಲದೆ ಜನಜೀವನದೊಂದಿಗೆ ಸಂಪರ್ಕ ಮುಂತಾದುವನ್ನು ಕೊಡುತ್ತಿದ್ದವು. ಇದರ ಪರಿಣಾಮವಾಗಿ ಅವರ ರಾಜ್ಯಭಾರವು ಚೆನ್ನಾಗಿ ಬೇರೂರಲಾರಂಭಿಸಿತು.

ಗಾರ್ಡನ್ನನು ಪ್ರವಾಸಮಾಡುತ್ತಾ ಮಹುವಿಗೆ ಹೋದನು. ಪದ್ಧತಿಯಂತೆ ಪರಿಶೀಲನೆಗಾಗಿ ಠಾಣೆಗೆ ಹೋದನು. ಸಹಾಯಕ ಠಾಣೆದಾರನಾದ ಆನಂದರಾಯನು ಆ ಸಂಸ್ಥಾನದ ವಾಡಿಕೆಯಂತೆ ತಲೆಗೆ ರುಮಾಲನ್ನು ಸುತ್ತಿ, ಗಡ್ಡವನ್ನು ಬಾಚಿ, ಮಧ್ಯಕ್ಕೆ ಬೈತಲೆ ತೆಗೆದು ಕಿವಿಗಳಿಗೆ ಸುತ್ತಿಕೊಂಡಿದ್ದನು. ಅವನು ಠಾಣೇದಾರ ನೊಂದಿಗೆ ಈತನನ್ನು ಸ್ವಾಗತಿಸಲು ಮುಂದೆ ಬಂದನು. ಗಾರ್ಡನ್ನನಿಗೆ ಆನಂದ ರಾಯನ ಈ ರೀತಿಯಾದ ಗಡ್ಡದ ಅಲಂಕಾರವು ರುಚಿಸಲಿಲ್ಲ. ಆತನು ಅದೇ ಕ್ಷಣ ದಲ್ಲಿ ತನ್ನ ಅಭಿಮತ ಆಜ್ಞೆಯನ್ನು ಉಚ್ಚರಿಸಲು ತವಕಿಸಿದನು. ಆದರೆ ಸ್ವಲ್ಪ ನಿಧಾನಿಸಿ ಠಾಣೆಯ ಪರಿಶೀಲನೆಯಾದನಂತರ ಆನಂದರಾಯನನ್ನು ಬರಮಾಡಿಕೊಂಡು "ನೀನು ಠಕ್ಕನಂತೆ ಏಕೆ ಗಡ್ಡವನ್ನು ಬೆಳಸಿಕೊಂಡಿರುವೆ ?" ಎಂದು ಕೇಳಿದನು.

ಆನಂದರಾಯನು ಯಾವ ಉತ್ತರವನ್ನೂ ಕೊಡಲಾಗಲಿಲ್ಲ.

ಗಾರ್ಡನ್ ಸಾಹೇಬನು "ಈ ರೀತಿಯಾಗಿ ಠಾಣೆಯ ಇತರ ಯಾವ ಅಧಿ ಕಾರಿಯೂ ಗಡ್ಡವನ್ನು ಬೆಳಸಿಲ್ಲ; ಅವರಿಗಿಂತ ನೀನು ಬಹಳ ದೊಡ್ಡವನೆಂದು ಭಾವಿಸಿ ರುವೆಯಾ ?" ಎಂದು ಕೇಳಿದನು.

ಆನಂದರಾಯನ ಪಿತ್ಥವು ಕೆರಳಿತು. ಆದರೆ "ಇಲ್ಲ" ಎಂಬ ಶಬ್ದವು ಅವನ ಬಾಯಿಂದ ಹೊರಬಿದ್ದಿತು.

"ಮಾತನಾಡುವುದಕ್ಕೂ ವಿನಯ ವಿಲ್ಲವೆ ?" ಎಂದು ಗಾರ್ಡನ್ನನು ಕೇಳಿದನು.

ಆನಂದರಾಯನು ತಲೆ ತಗ್ಗಿಸಿದನು.

ಗಾರ್ಡನ್ನನು "ಗಡ್ಡವನ್ನು ಬೆಳೆಸುವುದಾದರೆ ನೇರವಾಗಿ ಬೆಳೆಸು, ಕಿವಿಗೆ ಸುತ್ತಿ ಕೊಳ್ಳಬೇಡ. ಹೋಗಿ ಸರಿಪಡಿಸಿಕೊಂಡು ಬಾ" ಎಂದು ಆಜ್ಞೆಯಿತ್ತನು.

ಆನಂದರಾಯನು ಆಜ್ಞೆಯನ್ನು ಪಾಲಿಸಿ ಹಿಂದಿರುಗಿದನು. ಅವನ ಮುಖವು ಬಿಳುಪೇರಿದ್ದಿತು.

ಗಾರ್ಡನ್ನನ ಮುಖದಲ್ಲಿ ಸಂತೋಷದ ಮುಗಳ್ನಗೆ ಏರ್ಪಟ್ಟು "ಈಗ ಸರಿಯಾ ಗಿದೆ. ಹೋಗು" ಎಂದು ಹೇಳಿದನು.

ಅದೇ ಸಮಯಕ್ಕೆ ಸರಿಯಾಗಿ ಒಬ್ಬ ಬೇಹುಗಾರನು ಕಮಿಷನರ್ ಸ್ಕೀನ್ ಸಾಹೇಬನಿಂದ ಒಂದು ಪತ್ರವನ್ನು ತೆಗೆದುಕೊಂಡು ಬಂದನು. ಅದರಲ್ಲಿ ಸ್ಕೀನನು ಈ

ರೀತಿ ಬರೆದಿದ್ದನು—"ಸಾಗರ ಸಿಂಹನೆಂಬ ದರೋಡೆಗಾರನನ್ನು ಹಿಡಿದಿರುವೆವು. ಆತನನ್ನು ಬಂದಿಖಾನೆಯಲ್ಲಿಡಲಾಗಿದೆ. ನಾನು ಬಂದಿಖಾನೆಯನ್ನು ಪರಿಶೀಲಿಸಲಿಚ್ಛಿಸುವೆನು. ಆದುದರಿಂದ ಒಂದು ದಿನದ ಮಟ್ಟಿಗೆ ಬಂದು ಹೋಗುವುದು."

ಗಾರ್ಡನ್ನನು ಕುದುರೆಯ ಗಾಡಿಯಲ್ಲಿ ಝಾನ್ಸಿಗೆ ಹೊರಟನು. ಮಾರ್ಗದಲ್ಲಿ ಕುದುರೆಗಳನ್ನು ಬದಲಿಸುತ್ತಾ ಎರಡು ದಿನಗಳಲ್ಲಿ ಝಾನ್ಸಿಯನ್ನು ತಲಪಿದನು.

ಮಾರನೆಯದಿನ ಅವರಿಬ್ಬರೂ ಬಂದಿಖಾನೆಗೆ ಭೇಟಿಯಿತ್ತರು. ಭಕ್ಷೀಷ್ ಆಲಿಯು ಬಂದಿಖಾನೆಯ ದರೋಗನಾಗಿದ್ದನು. ಬಹಳ ನಮ್ರತೆಯಿಂದ ಬಗ್ಗಿ ಬಗ್ಗಿ ಸಲಾಮು ಮಾಡುತ್ತಾ ಅವರನ್ನು ಇದಿರುಗೊಳ್ಳಲು ಬಂದನು. ಅವರಿಗೆ ಆತನನ್ನು ಕಂಡು ಪರಮಸಂತೋಷವಾಯಿತು. ಈ ವಿಧವಾದ ಮೇಲಾಡಂಬರವನ್ನು ಅವರು ಬಹಳ ಮೆಚ್ಚುತ್ತಿದ್ದರು.

ಬಂದಿಖಾನೆಯ ಒಳಹೊಕ್ಕು ಸಾಗರಸಿಂಹನನ್ನು ಕಂಡರು. ಆತನು ಬಲಿಷ್ಠನೂ, ಸ್ಫೂರ್ತಿಯುತನೂ ಆಗಿದ್ದನು. ಅವನ ಕಣ್ಣುಗಳು ತೀಕ್ಷ್ಣವಾಗಿ ಹೊಳೆಯುತ್ತಿದ್ದವು. ಗಡ್ಡವನ್ನು ಬೈತಲೆ ತೆಗೆದು ಕಿವಿಗೆ ಸುತ್ತಿಕೊಂಡಿದ್ದನು. ಅವನ ಕೈಗಳನ್ನು ದಪ್ಪವಾದ ಸಂಕೋಲೆಗಳಿಂದ ಬಂದಿಸಿದ್ದರು.

"ನಿನ್ನ ಹೆಸರೇನು ?" ಸ್ಕೀನನು ಕೇಳಿದನು.

"ನಿಮಗೆ ಗೊತ್ತಿಲ್ಲವೇನು ?"

"ನಿನ್ನ ಬಾಯಿಯಿಂದ ಕೇಳಲು ಅಪೇಕ್ಷಿಸುತ್ತೇವೆ."

"ಕುಮಾರ್ ಸಾಗರಸಿಂಹ."

"ನಿಮ್ಮ ಊರಾವುದು ?"

"ಭರವಾಸಾಗರದಿಂದ ಸ್ವಲ್ಪದೂರ. ರಾವಲಿ."

"ನಿನಗೇಕೆ ಈ ಸ್ಥಿತಿಯುಂಟಾಯಿತು ?"

"ಏಕೆಂದರೆ, ಇದಕ್ಕಿಂತ ಉತ್ತಮವಾದುದು ದೊರಕಲಿಲ್ಲ."

"ನಮ್ಮ ಪಡೆಯಲ್ಲೇಕೆ ಕೆಲಸ ಮಾಡಬಾರದು ? ನಿನಗೆ ಒಳ್ಳೆಯ ಸಂಬಳ ದೊರಕುವುದು"

"ನಮ್ಮ ಮನೆತನದಲ್ಲಿ ಅಧಿಕಾರಿಗಳಾಗುವುದೇ ವಾಡಿಕೆಯಾಗಿದೆ. ನಾನೇಕೆ ಬಡ ಸಿಪಾಯಿಗಿರಿಯನ್ನು ಮಾಡಲಿ ?"

"ನೀನು ನಿಧಾನವಾಗಿ ನಾಯಕ್, ಹವಲ್‌ದಾರ್ ಮತ್ತು ಸುಬೇದಾರನಾಗಬಹುದಾಗಿತ್ತು."

"ನನ್ನ ಪೂರ್ವಿಕರ ಮನೆತನದಲ್ಲಿ ಐದಾರು ಸಹಸ್ರ ಸಿಪಾಯಿಗಳು ಕೆಲಸ ಮಾಡುತ್ತಿದ್ದರು. ಸೇನಾಪತಿಯ ವಂಶದಲ್ಲಿ ಹುಟ್ಟಿ ಹವಾಲ್‌ದಾರಿ, ಸುಬೇದಾರಿಯನ್ನು

ಮಾಡಲಿ ?"

"ಓಹೊ ! ನೀನೇನು ಜನರಲ್ಲನಾಗಬೇಕೆಂದಿರುವೆಯಾ ?"

"ಏನು ಜನರಲ್ ಪದವಿಯನ್ನು ಗಳಿಸುವುದು ಬಹಳ ದೊಡ್ಡ ಮಾತೆ ?"

"ಡಕಾಯತನಿಂದ ಜನರಲ್ ! ಹಿಂದೂ ಸ್ಥಾನದಲ್ಲಿ ಎಲ್ಲವೂ ಚಿತ್ರ ವಿಚಿತ್ರ ವಾಗಿದೆ. ಜನರಲ್ಲಿನಿಂದ ಡಕಾಯಿತನಾಗಬಹುದು. ಆಗ ಡಕಾಯಿತನಿಂದ ಜನರಲ್ಲ ನಾಗುವುದು ಕಷ್ಟಸಾಧ್ಯವೇನಲ್ಲ. ನಿನಗೆ ಇದು ಗೊತ್ತೆ. ಸಾಗರಸಿಂಹ ..."

"ಕುಮಾರ್ ಸಾಗರಸಿಂಹನೆಂದು ಸಂಬೋಧಿಸಿ. ನನ್ನನ್ನು ಯಾರೂ ಬರೀ ಸಾಗರಸಿಂಹನೆಂದು ಕರೆಯುವುದಿಲ್ಲ."

"ಹಾಗೆಯೇ ಆಗಲಿ, ಕುಮಾರ್ ಸಾಗರಸಿಂಹ. ನಿನಗೆ ಈ ಬಂದಿಖಾನೆಯಲ್ಲಿ ಫಾಸಿಖಾನೆಯಿದೆಯೆಂದೂ ಮತ್ತು ನನಗೆ ಫಾಸಿ ಶಿಕ್ಷೆಯನ್ನು ವಿಧಿಸಲು ಅಧಿಕಾರ ವಿದೆಯೆಂದೂ ತಿಳಿದಿರುವುದೆ ? ನಿನ್ನ ಕಾರ್ಯಾಚರಣೆಯನ್ನು ಕೇಳಿದ್ದೇನೆ. ಅವುಗಳು ರುಜುವಾತಾಗುವುವು. ನಂತರ ನಿನ್ನ ಮೊಕದ್ದಮೆಯನ್ನು ನಾಳೆನಾಡಿದ್ದರಲ್ಲಿ ಮುಗಿಸಿ ಅದೇ ದಿವಸ ಗಲ್ಲಿಗೇರಿಸುತ್ತೇನೆ."

"ನನಗೆ! ಸಾಗರಸಿಂಹನಿಗೆ ಮಾತ್ರವೆ ?"

"ನಿನ್ನ ಜೊತೆಯಲ್ಲಿ ಮತ್ತೆ ಯಾರಾರಿರುವರು ?"

"ಅನೇಕ ಜನರಿದ್ದಾರೆ."

"ಹೆಸರು ಹೇಳಬಲ್ಲೆಯಾ ?"

"ನಾನೇಕೆ ಹೇಳಲಿ, ನನಗೆ ಅದರಲ್ಲೇನು ಲಾಭವಿದೆ ?"

"ಲಾಭವಿದೆ. ಒಂದುವೇಳೆ ಎಲ್ಲಾ ನಿಜಾಂಶವನ್ನು ತಿಳುಹಿಸಿದರೆ ಸರ್ಕಾರದ ಪರ ಸಾಕ್ಷಿದಾರನಾಗಿ ಬಿಡುಗಡೆಯನ್ನು ಹೊಂದುವೆ."

"ಹಾಗೆಯೇ ಆಗಲಿ. ಈ ಸಂಕೋಲೆ, ಹಸಿವು, ಬಾಯಾರಿಕೆಯಿಂದಾಗಿ ಬುದ್ಧಿ ಭ್ರಮಣೆಯುಂಟಾಗಿದೆ. ಇಂದು ವಿಶ್ರಾಂತಿ ದೊರೆತರೆ ನಾನು ಖಂಡಿತ ನಾಳೆ ಹೇಳು ತ್ತೇನೆ. ಆದರೆ ನೀವಿತ್ತ ವಚನವನ್ನು ನೆನಪಿನಲ್ಲಿಡಬೇಕು."

"ಹಾಗೆಯೇ ಆಗಲಿ."

ಸ್ಕೀನನು ದರೋಗನನ್ನು ಕರೆದು ಸಾಗರಸಿಂಹನ ಸಂಕೋಲೆಗಳನ್ನು ಸಡಿಲ ಮಾಡಿ, ಅವನಿಗೆ ಒಳ್ಳೆಯ ಆಹಾರವನ್ನು ಕೊಡುವಂತೆ ಆಜ್ಞೆಯನ್ನಿತ್ತನು. ಭಕ್ಷೀಷ್ ಆಲಿಯು ಕೈದಿಗೆ ಎಲ್ಲಾ ವಿಧವಾದ ರಿಯಾಯತಿಯನ್ನೂ ಕೊಡಬೇಕೆಂದು ಅರ್ಥ ಮಾಡಿಕೊಂಡನು.

ಸ್ಕೀನ್ ಮತ್ತು ಗಾರ್ಡನ್ ಅತ್ತ ಹೊರಟಮೇಲೆ ಬಕ್ಷೀಷ್‌ಆಲಿಯು ಸಾಗರ ಸಿಂಹನ ಸಂಕೋಲೆಗಳನ್ನು ತೆಗೆದುಬಿಟ್ಟು ಆತನ ಮೇಲೆ ಸಾಧಾರಣ ಪಹರೆಯನ್ನು

ಇಡಿಸಿದನು.

ಸಾಗರಸಿಂಹನು "ದರೋಗಸಾಹೇಬರೇ, ನನಗೆ ಬಹಳ ಹಸಿವಾಗುತ್ತಲಿದೆ. ಯಾರಾದರೂ ಒಬ್ಬ ಬ್ರಾಹ್ಮಣನನ್ನು ಕರೆಸಿ ಒಳ್ಳೆಯ ಭೋಜನವನ್ನು ಮಾಡಿಸಿ" ಎಂದನು.

ಭಕ್ಷೀಷ್ ಆಲಿಯು "ಕುವರ್‌ಸಾಹೇಬರೇ, ನಿಮಗೆ ತಟ್ಟೆ ತುಂಬ ಪೂರಿ, ಮಿಠಾಯಿಗಳನ್ನು ಕೊಡಲು ಸಿದ್ಧನಿದ್ದೇನೆ. ಆದರೆ ಈ ಅಧಿಕಾರಿಗಳ ಭಯದಿಂದ ಸುಮ್ಮನಿರ ಬೇಕಾಗಿದೆ. ಈಗ ಅಪ್ಪಣೆಯಾಗಿದೆಯಲ್ಲಾ, ಏನು ಬೇಕಾದರೂ ಸ್ವೀಕರಿಸಿ" ಎಂದನು.

ರುಚಿಯಾದ ಅಡಿಗೆಯನ್ನು ಮಾಡಿಸಿ ಕುಮಾರ ಸಿಂಹನಿಗೆ ಬಡಿಸಿದುದಾಯಿತು. ಪ್ರಹರಿಗಳಿಗೂ ಆತನ ವಿಚಾರದಲ್ಲಿ ಆತಂಕವು ಕಡಿಮೆಯಾಯಿತು.

ಸಂಜೆಯಾಗಿ ರಾತ್ರಿಯು ಸಮೀಪಿಸಿತು. ಪ್ರಹರಿಗಳು ಎಚ್ಚರವಾಗಿದ್ದು ಬೇಸತ್ತು ನಿದ್ರೆಮಾಡಲಾರಂಭಿಸಿದರು. ಭಕ್ಷೀಷ್ ಆಲಿಯು ಬೆಳಿಗ್ಗೆಯಿಂದ ಪರಿಶ್ರಮ ಪಟ್ಟುದುದಕ್ಕಾಗಿ ದಣಿದು ಮೈಮರೆತು ನಿದ್ದೆ ಹೋದನು.

ಕುವರ ಸಾಗರಸಿಂಹನಿಗೆ ಸುಸಮಯವು ದೊರಕಿತು. ಚಂದ್ರಖರದಾಯಿಯ ವಾಕ್ಯವೊಂದು ನೆನಪಿಗೆ ಬಂದಿತು. "ಫೇರ್‌ಸಾ ಜನನೀ ಜನ್ಮ ಹೈ ಫೇರ್‌ನಾ ಖೇಂಚ್ ಕಮಾನ್." (ಜನ್ಮವೆತ್ತುವುದು ಒಂದೇಸಲ. ಎಂತಹ ಮಹತ್ ಕಾರ್ಯಮಾಡಲೂ ಸುಸಮಯವನ್ನು ಮುಂದೂಡಬಾರದು.)

ಸದ್ದಿಲ್ಲದೆ ಮಧ್ಯರಾತ್ರಿಯಲ್ಲಿ ಗೋಡೆಯನ್ನು ಹಾರಿ, ಸ್ಕೀನ್ ಮತ್ತು ಗಾರ್ಡನ್ನರು ಎಷ್ಟೇ ಕಷ್ಟಪಟ್ಟರೂ ಪುನಃ ಕಂಡುಹಿಡಿಯಲಾಗದಂತಹ ದಟ್ಟವಾದ ಅರಣ್ಯದಲ್ಲಿ ಬೆಳಗಾಗುವ ವೇಳೆಗೆ ಕಣ್ಮರೆಯಾದನು.

ಮುಂಜಾನೆಯ ವೇಳೆಗೆ ಬಂದಿಖಾನೆಯಲ್ಲಿ ಗೊಂದಲವೇರ್ಪಟ್ಟಿತು. ಭಕ್ಷೀಷ್ ಆಲಿಗೆ ಚಿತ್ತಭ್ರಮಣೆಯುಂಟಾಗಿ ಹಲವು ಸಮಯ ಬಂದಿಖಾನೆಯಲ್ಲಿ ಎಲ್ಲರ ಮೇಲೂ ಎಗರಾಡುತ್ತಲೂ, ಹಲವು ಸಮಯ ಮನೆಗೆ ಹೋಗಿ ಹೆಂಡತಿ ಮಕ್ಕಳ ಮುಂದೆ ತಲೆ ಚಚ್ಚಿಕೊಳ್ಳುತ್ತಲೂ ಇದ್ದನು.

ಸ್ಕೀನ್ ಮತ್ತು ಗಾರ್ಡನ್ನರಿಗೆ ಸಾಗರಸಿಂಹನು ತಪ್ಪಿಸಿಕೊಂಡು ಹೋದ ಸಮಾಚಾರವು ತಿಳಿದು ಅವರಿಬ್ಬರೂ ರೌದ್ರಾವೇಶದಿಂದ ಅಲ್ಲಿಗೆ ಬಂದರು.

ಬಕ್ಷೀಷ್‌ಆಲಿಯು ಬಹು ನಮ್ರತೆಯಿಂದ ಸಲಾಮು ಮಾಡಿದನು. ನಂತರ ಅತ್ಯಂತ ಕಾತರತೆಯಿಂದ "ಹುಜೂರ್ ಸಂಕೋಲೆಗಳನ್ನು ತೆಗೆದು ಒಳ್ಳೆಯ ಊಟವನ್ನು ಕೊಡುವಂತೆ ಅಪ್ಪಣೆಯಾಗಿದ್ದಿತು. ನಾನು ಅಂತೆಯೆ ನಡೆಸಿ ಅವನ ಮೇಲೆ ಕಾವಲನ್ನಿಟ್ಟೆನು. ಆದರೂ ಕೂಡ ಅವನು ರಾತ್ರೋರಾತ್ರಿ ಅವಕಾಶವನ್ನು ಕಲ್ಪಿಸಿ

ಕೊಂಡು ಕಣ್ಮರೆಯಾಗಿದ್ದಾನೆ." ಎಂದು ಹೇಳಿದನು.

ಸ್ಕೀನನು ಕ್ರೋಧದಿಂದ ಉನ್ಮತ್ತನಾಗಿ "ಬೇವಕೂಫ್, ಕತ್ತೆ, ಅಯೋಗ್ಯ ನಾವು ಇಂತಹ ಆಜ್ಞೆಯನ್ನೇ ಕೊಟ್ಟೆವು" ಎಂದು ಹೇಳುತ್ತಾ ಪಾದರಕ್ಷೆಯಿದ್ದ ಕಾಲಿನಿಂದಲೇ ಬಕ್ಷೀಷ್ಆಲಿಯನ್ನು ಒದ್ದನು. ಬಡಪಾಯಿಯು ಕೆಳಗೆ ತತ್ತರಿಸಿಬಿದ್ದನು. ಆದರೂ ಅವನನ್ನು ಸ್ಕೀನನು ಪುನಃ ಪುನಃ ಒದ್ದನು.

ಆಗ ಅವನ ಕೋಪವು ಸ್ವಲ್ಪ ಇಳಿಮುಖವಾಯಿತು.

ಗಾರ್ಡನ್ನನು "ಬಕ್ಷೀಷ್ಆಲಿ, ನಿನ್ನನ್ನು ಸಾಹೇಬರು ಇಷ್ಟಕ್ಕೇ ಬಿಟ್ಟರೆಂದು ತಿಳಿದುಕೊಳ್ಳಬೇಡ. ನಾನು ನಿನ್ನನ್ನು ಕೆಲಸದಿಂದ ವಜಾಮಾಡಬೇಕೆಂದಿರುವೆನು" ಎಂದು ಹೇಳಿದನು.

ಬಕ್ಷೀಷ್ಆಲಿಯು ಅಳಲಾರಂಭಿಸಿದನು. ಸ್ಕೀನನು ಗಾರ್ಡನ್ನನಿಗೆ ಸಂಜ್ಞೆ ಮಾಡಿದನು. ಆದರೆ ಅದನ್ನು ಅವನು ನೋಡಲಿಲ್ಲ.

ಗಾರ್ಡನ್ನನು ಪುನಃ "ಒಳ್ಳೆಯದು ನಿನ್ನನ್ನು ಕೆಲಸದಿಂದ ವಜಾ ಮಾಡುವುದಿಲ್ಲ. ಆದರೆ ಯಾರ ಪಹರೆಯಲ್ಲಿದ್ದು ಸಾಗರಸಿಂಹನು ತಪ್ಪಿಸಿಕೊಂಡು ಹೋದನೋ ಆ ಪ್ರಹರಿಯನ್ನು ಕೆಲಸದಿಂದ ವಜಾ ಮಾಡಲಾಗುವುದು" ಎಂದನು.

ಆ ಸಿಪಾಯಿಯನ್ನು ಕೆಲಸದಿಂದ ವಜಾ ಮಾಡಲಾಯಿತು.

ಬಕ್ಷೀಷ್ಆಲಿಗೆ ಪಹರೆಯುವರೂ ಮತ್ತು ಕೈದಿಗಳ ಮುಂದೆಯೇ ಅವಮಾನವಾಯಿತು. ಹೊಡೆದು ಬಡಿದಿದ್ದರಿಂದ ಆತ್ಮಾಭಿಮಾನವು ಮತ್ತೂ ಕೆರಳಿತು. ಮನೆಗೆ ಹೋಗಿ ಬಹಳವಾಗಿ ರೋದಿಸಿದನು. ಅವನ ಹೆಂಡತಿ ಮಕ್ಕಳೂ ಅತ್ತರು.

ಬಕ್ಷೀಷ್ ಆಲಿಯು "ನಿಮ್ಮೆಲ್ಲರನ್ನು ಕತ್ತಿಯಿಂದ ತುಂಡರಿಸಿ ನಾನು ಗುಂಡಿನಿಂದ ಹೊಡೆದು ಕೊಂಡು ಪ್ರಾಣತ್ಯಾಗ ಮಾಡಬೇಕೆಂದು ನನ್ನ ಮನವು ಹಾತೊರೆಯುತ್ತಿದೆ. ರಾಜ ಗಂಗಾಧರರಾಯನಾಗಲೀ ಅಥವಾ ರಾಣೀ ಲಕ್ಷ್ಮಿಬಾಯಿಯಾಗಲಿ ಯಾವಾಗಲೂ ನನ್ನನ್ನು ಸ್ವಲ್ಪವಾದರೂ ಅವಮಾನ ಪಡಿಸಲಿಲ್ಲ. ಇಂದು ಈ ಪರಂಗಿಯವರು ನನ್ನ ಮರ್ಯಾದೆಯನ್ನು ಮಣ್ಣು ಪಾಲು ಮಾಡಿದರು" ಎಂದು ಗೋಳಾಡಿದನು.

ಹೆಂಡತಿಯು ಅಳುತ್ತಅಳುತ್ತಲೇ ಸಮಾಧಾನಪಡಿಸಿದಳು. ಕಷ್ಟದಿಂದ ತನ್ನ ಅವಮಾನವನ್ನು ನುಂಗಿಕೊಂಡು ಆ ದಿನವೆಲ್ಲಾ ಉಪವಾಸದಿಂದಲೇ ಕಳೆದನು.

"ನಾನು ಹೇಗೆ ಮುಖ ತೋರಿಸಲಿ? ಈ ಎಂಟು ಮಹಾದ್ವಾರಗಳ ರಕ್ಷಕನಾಗಿದ್ದ ಆ ಮರ್ಯಾದೆಯೆಲ್ಲಿ, ಈ ಅವಮಾನವೆಲ್ಲಿ ?" ಎಂದು ಪುನಃ ಪುನಃ ಆತ್ಮನಿಂದೆಮಾಡಿಕೊಂಡನು. ಹೆಂಡತಿ ಮಕ್ಕಳನ್ನು ಕೊಂದು ಪ್ರತಿಕ್ರಿಯೆ ಮಾಡಿಕೊಳ್ಳಬೇಕೆಂಬ ಅಪೇಕ್ಷೆಯುಂಟಾಗುತ್ತಿದ್ದಿತು. ಆದರೆ ಅವರ ಅಳುವ ವಿಷಾದಪೂರಿತ ಮುಖಗಳನು ನೋಡಿ ಸಹನೆ ಹೊಂದುತ್ತಿದ್ದನು.

ಕಡೆಯಲ್ಲಿ ಆತ್ಮಘಾತಮಾಡಿಕೊಳ್ಳುವ ನಿಶ್ಚಯವು ಅವನ ಮನದಲ್ಲಿ ಎಲ್ಲಿಯೋ ಅಡಗಿಹೋಯಿತು. ಪುನಃ ಎಂದಿನಂತೆ ತನ್ನ ಕಾರ್ಯದಲ್ಲಿ ಉದ್ಯುಕ್ತನಾದನು.

ಸ್ಕೀನ್ ಅಥವಾ ಗಾರ್ಡನ್ನರು ಯಾವಾಗಲಾದರೂ ಬಂದಿಖಾನೆಯ ಪರಿಶೀಲನೆಗೆ ಬಂದರೆ ಯಾರೋ ಕೊಲೆಗಡುಕರು ಬಂದಂತೆ ಅವನಿಗೆ ಭಾಸವಾಗುತ್ತಿದ್ದಿತು.

## ೩೯

ರಾಣಿಗೆ ಹೆಚ್ಚುಕಡಿಮೆ ಝಾನ್ಸಿಯ ಎಲ್ಲಾ ಘಟನೆಗಳೂ ಆಗಿಂದಾಗ್ಗೆ ತಿಳಿದು ಬರುತ್ತಿದ್ದವು. ಅವಳ ಜ್ಞಾಪಕಶಕ್ತಿಯು ಜನರನ್ನು ಮುಗ್ಧಗೊಳಿಸುತ್ತಿದ್ದಿತು. ಬಕ್ಷೀಷ್‌ಆಲಿ ಮತ್ತು ಆನಂದರಾಯರ ವಿಷಯಗಳನ್ನು ವಿಶದವಾಗಿ ಕೇಳಿದಳು. ಗಡ್ಡವನ್ನು ತೆಗೆಯಬೇಕೆಂದು ಹೇಳಿದ ಪ್ರಸಂಗವು ಬಂದಿಖಾನೆಯ ದರೋಗನನ್ನು ಹೊಡೆದು ಬಡಿದುದಕ್ಕಿಂತ ಉಲ್ಬಣವಾಗಿಲ್ಲದಿದ್ದರೂ ರಾಣಿಗೆ ಈ ಘಟನೆಗಳ ಮೂಲ ತತ್ವವನ್ನು ಅರಿಯಲು ಹೆಚ್ಚುಕಾಲ ಹಿಡಿಯಲಿಲ್ಲ. ಸ್ಕೀನನಿಗೂ ಗಾರ್ಡನ್ನನಿಗೂ ದೊರೆತ ಪ್ರೇರಣೆಯ ಮೂಲವು ಒಂದೇ ಆಗಿದ್ದಿತು—ಉದ್ದಂಡತನ, ಅವಹೇಳನೆ, ಮತ್ತು ಉಪೇಕ್ಷೆ. ರಾಣಿಯ ಪ್ರಶಸ್ತವಾದ ಲಲಾಟವು ಕೆಂಪೇರಿ 'ಆಹಾ'! ಎಂದಳು.

ಹೊಟ್ಟೆಯ ಪಾಡಿಗಾಗಿ ಇವರಿಗೆ ಇದೆಲ್ಲವನ್ನೂ ಸಹಿಸಿಕೊಳ್ಳಬೇಕಾಗಿದೆ ಎಂದು ರಾಣಿಯ ಹೃದಯವು ಮಿಡಿಯಿತು.

ಈ ವಿಧವಾದ ಘಟನೆಗಳು ಆಗಿಂದಾಗ್ಗೆ ನಡೆಯುತ್ತಲೇ ಇದ್ದವು. ಆಂಗ್ಲೇಯರು ತಮ್ಮ ಪ್ರಭುತ್ವವನ್ನು ಪೊಳ್ಳು ಬೆದರಿಕೆಗಳ ತಳಪಾಯದ ಮೇಲೆ ನಿಲ್ಲಿಸಿದ್ದರು. ಈ ಬೆದರಿಕೆಗಳು ಅತ್ಯಾಚಾರದ ರೂಪವನ್ನು ಹೊಂದುತ್ತಿದ್ದವು. ಇವು ಹಿಂದೂಸ್ಥಾನೀಯರ ಮನದಲ್ಲಿ ಆಂಗ್ಲೇಯರ ಪ್ರತಾಪದ ಚಿತ್ರವನ್ನು ರಚಿಸುತ್ತಿದ್ದವು.

ಆದರೆ ಈ ಗೊಡ್ಡು ಬೆದರಿಕೆ ಮತ್ತು ಪ್ರತಾಪಗಳು ಹಿಂದೂ ಮುಸಲ್ಮಾನ ಹೃದಯಗಳಲ್ಲಿ ಸಾಧುಗಳೂ ಮತ್ತು ಫಕೀರರೂ ಅನಾದಿಕಾಲದಿಂದಲೂ ಉತ್ಪನ್ನ ಮಾಡಿದ ಪರಿಣಾಮವನ್ನು ಉಂಟುಮಾಡಲಾಗಲಿಲ್ಲ.

ರಾಣಿಯು ಈ ಎಲ್ಲ ವಿಷಯಗಳನ್ನು ಶ್ರದ್ಧೆಯಿಂದ ವಿವಿಧಮುಖೇನ ಕೇಳುತ್ತಿದ್ದಳು.

ಗಾರ್ಡನ್ನನು ಕೂಡ ಝಾನ್ಸಿ ನಗರ ಮತ್ತು ತನ್ನ ಸ್ವಾಧೀನದಲ್ಲಿದ್ದ ಜಿಲ್ಲೆಗಳನ್ನು ದರ್ಪದಿಂದ ಆಳುತ್ತಿದ್ದನು. ಆದರೆ ಅವನಿಗೂ ಸಾಧಾರಣವಾಗಿ ಎಲ್ಲಾ ಆಂಗ್ಲೇಯರಿಗೂ ಇದ್ದಂತಹ ಅಹಂಭಾವ ಮತ್ತು ಸ್ವಾರ್ಥಪರತೆಯ ಕಾರಣದಿಂದ ನಿಜ ಸ್ಥಿತಿಗಳು ವ್ಯಕ್ತವಾಗುತ್ತಿರಲಿಲ್ಲ.

ಒಂದು ದಿವಸ ಗಾರ್ಡನ್ನನು ನಗರದ ಪೋಲಿಸ್ ಠಾಣೆಯನ್ನು* ಪರಿಶೀಲಿಸಲು ಕುದುರೆಯ ಮೇಲೆ ಬರುತ್ತಿದ್ದನು. ಒಬ್ಬ ಸಾಧಾರಣ ಹಿಂದು ಗೃಹಸ್ಥನ ಮನೆಯ ಮದುವೆ ಮೆರವಣಿಗೆಯು ಅವನಿಗೆದುರಾಯಿತು. ವರನು ಅಶ್ವಾರೂಢನಾಗಿದ್ದನು. ಇದು ಆಂಗ್ಲೇಯರ ನೂತನ ಶಾಸನಕ್ಕೆ ವಿರುದ್ಧವಾಗಿದ್ದಿತು. ಆದುದರಿಂದ ಗಾರ್ಡನ್ನನು ವರನನ್ನು ಕುದುರೆಯಿಂದ ಇಳಿಯಲು ಆಜ್ಞೆಮಾಡಿದನು. ಮೆರವಣಿಗೆಯವರು ನಿರೋಧಮಾಡಿದರು. ಆದರೆ ಅವನು ಅದಕ್ಕೆ ಗಮನಕೊಡಲಿಲ್ಲ. ಅವನ ಕಣ್ಣುಗಳು ಕೆಂಪೇರಿದವು.

ವರನ ತಂದೆಯು ವಿನಯದಿಂದ "ಇಲ್ಲಿ ನಮ್ಮ ರಾಜರೂ ಕೂಡ ವರನ ಹಕ್ಕು ಬಾಧ್ಯತೆಗಳನ್ನು ಗೌರವಿಸುತ್ತಾರೆ" ಎಂದು ಹೇಳಿದನು.

"ಚುಪ್ಪ್, ಮುಚ್ಚುಬಾಯಿ" ಎಂದು ಗಾರ್ಡನ್ನನು ಅವನನ್ನು ಬೆದರಿಸಿದನು. ವರನು ಕುದುರೆಯಿಂದ ಇಳಿಯಲೇ ಬೇಕಾಯಿತು.

ನವಾಬ್ ಆಲೀಬಹದ್ದೂರನು ಗಾರ್ಡನ್ ಮತ್ತು ಸ್ಕೀನರ ಬಳಿಗೆ ಆಗಾಗ್ಗೆ ಬಂದುಹೋಗುತ್ತಿದ್ದನು; ಅದರಲ್ಲಿಯೂ ಅಧಿಕವಾಗಿ ಗಾರ್ಡನ್ನನ ಬಳಿ. ನಿವೃತ್ತಿ ವೇತನವನ್ನು ಹೆಚ್ಚಿಸಿಕೊಳ್ಳುವ ಆಶೆಯನ್ನು ಅವನು ತ್ಯಜಿಸಿರಲಿಲ್ಲ. ಅಲ್ಲಿ ಇಲ್ಲಿನ ಸುದ್ದಿಯನ್ನು ಪೀರ್‌ಆಲಿಯು ಅವನಿಗೆ ಮುಟ್ಟಿಸುತ್ತಿದ್ದನು. ಅದನ್ನು ಅವನು ಗಾರ್ಡನ್ನನ ಬಳಿಗೆ ಒಯ್ಯುತ್ತಿದ್ದನು.

ಪೀರ್‌ಆಲಿಯು ದಿವಾನ್ ಜವಾಹರಸಿಂಹನು ಬಂದಿದ್ದ ಸಂಗತಿಯನ್ನು ನವಾಬನಿಗೆ ತಿಳಿಸಿದನು. ಆದರೆ ಆ ವೇಳೆಗೆ ತಾತ್ಯಾ ಮತ್ತು ದಿವಾನ್ ಜವಾಹರ ಸಿಂಹರು ಝಾನ್ಸಿಯನ್ನು ಬಿಟ್ಟು ಹೊರಟುಹೋಗಿದ್ದರು.

ನವಾಬನು ಹೇಳಿದನು "ಇದರಲ್ಲೇನೋ ನನಗೆ ಸಂದೇಹವಿದೆ. ಕಟೇಲಿಯ ಜವಹರ ಸಿಂಹನು ರಾಜನ ಸೈನ್ಯದಲ್ಲಿ ಒಬ್ಬ ಉನ್ನತ ಹುದ್ದೇದಾರನು. ಬಿಟ್ಟೂರಿನಿಂದ ಈ ವೇಳೆಯಲ್ಲಿ ಆ ಇನ್ನೊಬ್ಬ ಯುವಕನು ಬರುವುದಕ್ಕೆ ಕಾರಣವಿಲ್ಲದೇ ಇಲ್ಲ. ಏನು ಕರ್ನಲ್ ಜಮಾಖಾನನೂ ಇವರನ್ನು ಕಂಡಿದ್ದನೆ?"

ಪೀರ್‌ಆಲಿಯು "ಹೇಳಲಾಗುವುದಿಲ್ಲ. ಇದ್ದರೂ ಇರಬಹುದು, ನನಗೆ ಅನುಮಾನವೇನೋ ಇದೆ. ಬಿಟ್ಟೂರಿಂದ ಬಂದ ಟೋಪೆ ಎಂಬ ವ್ಯಕ್ತಿಯು ಕರ್ನಲ್ ಸಾಹೇಬರ ಮನೆಯಲ್ಲಿಯೇ ತಂಗಿದ್ದನು" ಎಂದು ಉತ್ತರವಿತ್ತನು.

"ಇವರಿವರಲ್ಲಿ ಏನು ಮಾತು ಕಥೆ ನಡೆಯಿತು, ಯಾವ ಯಾವ ವಿಚಾರಗಳು ಚರ್ಚಿಸಲ್ಪಟ್ಟವು ಎಂಬುದನ್ನು ಅತ್ಯವಶ್ಯ ತಿಳಿದು ಕೊಳ್ಳಬೇಕು."

---

* ಇದನ್ನು ಈಗ ಹಳೆಯ ಕೊತ್ವಾಲಿಯೆಂದು ಕರೆಯುತ್ತಾರೆ.

"ನಾನು ಅದನ್ನು ಅರಿಯಲು ಪ್ರಯತ್ನಿಸಿದೆ. ಆದರೆ ಅವರು ರಘುನಾಥಸಿಂಹನ ಮನೆಯಲ್ಲಿ ಯಾರಿಗೂ ಯಾವ ಮಾತೂ ಕೇಳಿಸದಂತಹ ಸ್ಥಳದಲ್ಲಿ ಕುಳಿತಿದ್ದರು."

"ಇವರೇನು ರಾಣೀ ಸಾಹೇಬರ ಬಳಿಗೂ ಹೋಗಿದ್ದರೊ?"

"ಹೌದು. ಅಲ್ಲದೆ ಹಿಂದಿರುಗುವಾಗ ನಗುನಗುತ್ತಾ ಬಂದರು."

"ಕರ್ನಲ್ ಸಾಹೇಬರ ಮನೆಯಲ್ಲಿ ಆ ಟೋಪಿಯೋ ಅಥವಾ ಟೋಪೆನೋ ಏನು ಮಾಡುತ್ತಿದ್ದನು?"

ಕರ್ನಲ್ ಸಾಹೇಬರ ಮನೆಯ ಬಳಿಯಲ್ಲಿ ನಾಟಕಶಾಲೆಯ ಜ್ಯೂಹಿಯು ವಾಸ ಮಾಡುತ್ತಿರುವಳು. ಅವಳಲ್ಲಿ ಅವನಿಗೆ ಅನುರಾಗವಿದೆ."

"ಹಾಗೂ ಇರಬಹುದು. ಆದುದರಿಂದಲೇ ಅವನು ಕರ್ನಲ್ ಸಾಹೇಬರ ಮನೆಯಲ್ಲಿ ತಂಗುತ್ತಿರ ಬಹುದು. ಆದರೆ ಜವಹರ್ ಸಿಂಹ, ಟೋಪೆ, ರಘುನಾಥಸಿಂಹ ಇವರು ಒಂದುಗೂಡಿ ತಮ್ಮ ತಮ್ಮಲ್ಲಿಯೇ ಬಹಳ ಹೊತ್ತು ಚರ್ಚೆಮಾಡುವುದರ ಅರ್ಥವೇನಿರ ಬಹುದು? ಖುದಾಬಕ್ಷನೆಲ್ಲಿ?"

"ಅವನಿಗಾದರೋ ಮೋತಿಬಾಯಿಯ ಹುಚ್ಚು ಹಿಡಿದಿರುವುದು."

"ಮೋತೀಬಾಯಿಯು ಯಾವಾಗಲಾದರೂ ರಾಣಿಯ ಬಳಿಗೆ ಹೋಗುವಳೆ?"

"ಅಹುದು. ಆಗಾಗ್ಗೆ ಹೋಗಿ ಬರುವುದುಂಟು."

"ಅವಳಿಂದ ಪ್ರಯೋಜನ ಪಡೆಯಲಾಗುವುದಿಲ್ಲವೆ?"

"ಪ್ರಯತ್ನಿಸುವೆನು."

ನವಾಬ ಸಾಹೇಬನು ಯೋಚಿಸಿ "ಸಂಗೀತ ಹಾಡುವ ನೆಪದಲ್ಲಿ ಅವಳನ್ನು ನನ್ನ ಬಳಿಗೆ ಕರೆದುಕೊಂಡು ಬಾ" ಎಂದು ಹೇಳಿದನು.

"ಆದರೆ ಅವಳು ಎಲ್ಲಿಗೂ ಹೋಗುವುದಿಲ್ಲ. ಹೊರಗೆ ತಲೆಯಿಡುವುದೇ ಅಪ ರೂಪ."

"ನನ್ನ ಬಳಿಗೆ ಬಂದು ಹಾಡುವಳು. ಆದರೆ ಖುದಾಬಕ್ಷನಿಗೆ ಈ ಸಮಾಚಾರವು ತಿಳಿಯ ಕೂಡದು. ಅವನೊಂದಿಗೆ ನಂತರ ನಿಧಾನವಾಗಿ ಮಾತನಾಡೋಣ."

ಪೀರ್ಅಲಿಯು ತನ್ನ ಮನೆಗೆ ಹೋದನು. ಅಲ್ಲಿ ಮೋತೀಬಾಯಿಯು ಹಾಜರಿದ್ದಳು. ಇದು ಶುಭಶಕುನವೆಂದೆಣಿಸಿ ಆತನು ಅವಳನ್ನು ಸ್ವಾಗತಿಸಿ ಮಾತನಾಡಲುಪಕ್ರಮಿಸಿದನು.

ಪೀರ್ಅಲಿಯು ಸಂತುಷ್ಟನಾಗಿ "ನಾನು ನಿಮ್ಮ ಬಳಿಗೆ ಬರಬೇಕೆಂದಿದ್ದೆ" ಎಂದು ಹೇಳಿದನು.

ಮೋತಿಬಾಯಿಯು ಹುಸಿನಗೆಯ ಮಳೆಗರೆದು ಸೆರಗಿನಿಂದ ಅವಕುಂಠನವನ್ನು ಎಳೆದುಕೊಂಡು ನಾಚಿಕೆಯಿಂದ ತಲೆತಗ್ಗಿಸಿ ಹೇಳಿದಳು.

"ನಾನೇ ಸ್ವತಃ ಬಂದಿದ್ದೇನೆ. ನೀವೇಕೆ ತೊಂದರೆ ತೆಗೆದುಕೊಳ್ಳುತ್ತಿದ್ದಿರಿ."

"ನವಾಬ್ ಸಾಹೇಬರಿಗೆ ಸಂಗೀತವನ್ನು ಕೇಳುವ ಅಪೇಕ್ಷೆಯುಂಟಾಗಿದೆ."

'ನಾನೊಬ್ಬನೇ ಕುಳಿತು ಕೇಳುತ್ತೇನೆ. ಸಭೆ ಸೇರಿಸುವುದೇನೂ ಬೇಡ' ಎಂದು ಹೇಳಿದರು.

"ನಾನು ಅದನ್ನೇ ಯೋಚಿಸಿಕೊಂಡು ಬಂದಿದ್ದೇನೆ. ಇನ್ನೂ ಹೆಚ್ಚು ಕಾಲ ಮುಸುಕು ಹಾಕಿಕೊಂಡು ರಹಸ್ಯವಾಗಿರಲು ಸಾಧ್ಯವಿಲ್ಲ. ಬಹಿರಂಗವಾಗಿ ನೃತ್ಯಗಾನ ಮಾಡಲು ನನ್ನಿಂದ ಸಾಧ್ಯವಿಲ್ಲ. ಉಪವಾಸ ಸಾಯಲು ಸಿದ್ಧಳಿದ್ದೇನೆ. ಆದರೆ ನವಾಬ್ ಸಾಹೇಬರಂತಹ ದೊಡ್ಡ ಮನುಷ್ಯರಲ್ಲಿ ಗಾನಮಾಡಿ ಬರುವುದರಿಂದ ನನ ಗಾವ ನ್ಯೂನತೆಯೂ ಉಂಟಾಗುವುದಿಲ್ಲ."

"ನವಾಬ್ ಸಾಹೇಬರ ಅಭಿಪ್ರಾಯವೂ ಇದೇ ಆಗಿದೆ. ಅವರು ಸಭೆಯನ್ನೇ ರ್ಪಡಿಸಲು ಇಚ್ಛಿಸುವುದಿಲ್ಲ."

"ನೀವೂ ಸಂಗೀತ ಕೇಳಿರಿ."

"ನಾನು ಕರ್ತವ್ಯದೃಷ್ಟಿಯಿಂದಲೂ ಮತ್ತು ಮನೋಲ್ಲಾಸಕ್ಕಾಗಿಯೂ ಅಲ್ಲಿ ಕುಳಿತಿರುವೆನು. ಉಸ್ತಾದ್ ಮೃಗಲಖಾನನ ಧ್ರುವ ಪದವನ್ನು ಬಿಟ್ಟರೆ ತಮ್ಮ ಬ್ಯಾಲ್ ಮತ್ತು ನಾಟಕೀಯಗೀತಗಳೇ ಮನಮೋಹಕತೆಯನ್ನುಂಟು ಮಾಡಬಲ್ಲವು. ನಿಜ ವನ್ನೂ ಹೇಳುವುದಾದರೆ ಮೃಗಲಖಾನನ ಸಂಗೀತವನ್ನು ದಿನವೆಲ್ಲಾ ಕೇಳಿದರೂ ತೃಪ್ತಿ ಯಾಗುವುದಿಲ್ಲ."

"ಹಾಗಿದ್ದರೆ ನಾನೆಷ್ಟು ಘಂಟೆಗೆ ಬರಲಿ?"

"ಸಾಯಂಕಾಲದ ಹೊತ್ತು ಚೆನ್ನಾಗಿರುತ್ತದೆಂದು ತೋರುತ್ತದೆ."

"ಹಾಗೆಯೇ ಆಗಲಿ. ಆದರೆ ನಾನು ಎಂಟು ಘಂಟೆಯವೇಳೆಗೆ ಹಿಂದಿರುಗ ಬೇಕು."

"ಆಗಲಿ, ಎರಡು ಘಂಟೆಗಳಿಗಿಂತ ಹೆಚ್ಚೇನು ಕೆಲಸವಿದೆ?"

ಮೋತೀಬಾಯಿಯು ವೇಳೆಯನ್ನು ನಿಶ್ಚಯಿಸಿಕೊಂಡು ಹೊರಟು ಹೋದಳು. ಪೀರ್ ಆಲಿಯು ತನ್ನಲ್ಲಿಯೇ ಆಲೋಚನೆ ಮಾಡುತ್ತಾ "ವಯಸ್ಸೇನೋ ಸ್ವಲ್ಪ ಹೆಚ್ಚಾ ಗಿದೆ. ಆದರೆ ಬುಗ್ಗೆಯಂತೆ ಉಕ್ಕುತ್ತಿರುವ ಮನಮೋಹಕವಾದ ಯೌವ್ವನವಿದೆ" ಎಂದು ಕೊಂಡನು.

ಆತನು ಈ ಎಲ್ಲ ಸಂಗತಿಯನ್ನೂ ನವಾಬನಿಗೆ ತಿಳಿಸಿದನು.

ಸಂಧ್ಯಾಕಾಲ ಆರು ಘಂಟೆಗೆ ಮೋತೀಬಾಯಿಯು ನವಾಬನಲ್ಲಿಗೆ ಬಂದಳು. ಪರದೆಯ ಪ್ರತಿಬಂಧಕವನ್ನು ತೊರೆದಿದ್ದಾಯಿತು. ಆದಿಯಲ್ಲಿ ಸ್ವಲ್ಪ ನಾಚಿದಳು. ಆಲೀಬಹದ್ದೂರನೂ ಅದು ಸ್ವಾಭಾವಿಕವೆಂದು ಕೊಂಡನು. ರಂಗಮಂಟಪದ

ಮೇಲೆ ಯಾವ ಶೀಲ ಸಂಕೋಚಗಳೂ ಇಲ್ಲದೆ ನೃತ್ಯ ಗೀತ ಹಾವಭಾವಗಳನ್ನು ಪ್ರದರ್ಶಿಸುತ್ತಿದ್ದ ಅಭಿನೇತ್ರಿಯು ಇಷ್ಟುದಿವಸ ಈ ಪರದೆಯ ಸೋಗನ್ನೇಕೆ ಹಾಕುತ್ತಿದ್ದಳು ಎಂಬುದೇ ಅವನಿಗೆ ಆಶ್ಚರ್ಯವಾಗಿದ್ದಿತು. ನವಾಬನು ರಸಿಕಭಾವ ದಿಂದ "ರಂಗಶಾಲೆಯಲ್ಲಿ ನಿಮ್ಮ ಕಲಾಕೌಶಲ್ಯವನ್ನು ನೋಡಿ ಮೆಚ್ಚಿದ್ದೇನೆ. ಆದರೆ ಈಗ ನನ್ನ ಮನೆಯಲ್ಲಿಯೂ ನೀವು ಏತಕ್ಕಾಗಿ ಇಷ್ಟು ಲಜ್ಜೆ ಮತ್ತು ಸಂಕೋಚಪಟ್ಟು ಅವಕುಂಠನವತಿಯಾಗಿರುತ್ತೀರಿ ಎಂಬುದು ನನಗೆ ಅರ್ಥವಾಗುತ್ತಿಲ್ಲ" ಎಂದು ಹೇಳಿದನು.

ಮೋತಿಬಾಯಿಯು "ಹುಜೂರ್, ಅಭ್ಯಾಸವಾಗಿ ಹೋಯಿತು. ಅದಿನ್ನೂ ಸಂಪೂರ್ಣವಾಗಿ ಬಿಟ್ಟಿಲ್ಲ. ಹೊಟ್ಟೆಯ ಪಾಡಿಗಾಗಿ ಅಲ್ಪಸ್ವಲ್ಪವನ್ನು ತೊರೆಯ ಬೇಕಾಗಿ ಬಂದಿತು. ಆದರೆ ಸಂಪೂರ್ಣವಾಗಿ ತೊರೆದುಬಿಡುವುದಿಲ್ಲ. ಬಹು ಜನರು ಆಂಗ್ಲೇಯ ಸರ್ಕಾರದ ನೌಕರಿಯನ್ನು ಸ್ವೀಕರಿಸಿದ್ದಾರೆ. ನನಗೆ ಯಾವ ಚಾಕರಿಯೂ ಸಿಗುವಂತಿಲ್ಲ. ಆದುದರಿಂದ ಸಂಗೀತದಿಂದ ಹೊಟ್ಟೆ ಹೊರೆದುಕೊಳ್ಳಬೇಕಾಗಿದೆ. ನಿಮ್ಮಂತಹ ರಸಿಕ ಶಿಖಾಮಣಿಗಳನ್ನು ಸಂತೋಷಗೊಳಿಸುವುದರಲ್ಲಿಯೇ ನನ್ನ ಉದರಕ್ಕೆ ಬೇಕಾದಷ್ಟು ಲಭಿಸುವುದು" ಎಂದು ಹೇಳಿದಳು.

ನವಾಬ್ ಸಾಹೇಬನಿಗೆ ಮೋತೀಬಾಯಿಯ ಸಂತುಷ್ಟಿಯು ರುಚಿಸಿತು. ಅವಳು ಪ್ರಸನ್ನಳಾಗಿರುವಳೆಂದು ಊಹಿಸಿಕೊಂಡನು.

ಸುಮಾರು ಒಂದು ಘಂಟೆಯ ಕಾಲ ಮೋತೀಬಾಯಿಯು ನೃತ್ಯಗಾನಗಳನ್ನು ಮಾಡಿದಳು. ಆದರನಂತರ ನವಾಬನಿಗೂ ಮತ್ತು ಮೋತೀಬಾಯಿಗೂ ಸಾಕಷ್ಟು ಮನರಂಜನೆಯಾಯಿತೆಂದು ಭಾಸವಾಯಿತು.

ನವಾಬ್‌ಸಾಹೇಬನು "ಸ್ವಲ್ಪ ವಿಶ್ರಮಿಸಿಕೊಳ್ಳಿ ನಂತರ ನೋಡೋಣ. ಅದು ವರೆಗೂ ಮಾತನಾಡೋಣ. ಪೀರ್ ಆಲಿ! ಎಲೆ ಅಡಿಕೆಯನ್ನು ತೆಗೆದು ಕೊಂಡು ಬಾ" ಎಂದು ಹೇಳಿದನು.

ಪೀರ್‌ಆಲಿಯು ತಾಂಬೂಲದ ಹರಿವಾಣವನ್ನು ತಂದಿರಿಸಿದನು.

ನವಾಬನು "ನೀವು ಯಾವಾಗಲಾದರೂ ಅರಮನೆಗೆ ಹೋಗುತ್ತೀರಾ? ಅಲ್ಲಿ ಏನುತಾನೆ ಕೆಲಸವಿದ್ದೀತು?" ಎಂದು ಕೇಳಿದನು.

ಮೋತೀಬಾಯಿಯು "ಹೋಗುವುದುಂಟು. ರಾಣಿ ಸಾಹೇಬರಿಗೆ ಮೀರಾ ಬಾಯಿಯ ಭಜನೆಗಳೆಂದರೆ ಬಹು ಪ್ರೀತಿ. ಅವುಗಳನ್ನು ಹಾಡಿಸಿ ಕೇಳುತ್ತಾರೆ. ನಿತ್ಯವೂ ಹೋಗುವುದಿಲ್ಲ. ಯಾವಾಗಲಾದರೂ ಒಂದೊಂದು ಸಲ ಹೋಗಿ ಹಾಡಿ ಬರುತ್ತೇನೆ. ಅಲ್ಲಿ ಏನಾದರೂ ಪುರಸ್ಕಾರ ದೊರೆಯುವುದು" ಎಂದು ಉತ್ತರವಿತ್ತಳು.

"ರಾಣೀಸಾಹೇಬರ ವೇತನದಿಂದ ಅನೇಕರಿಗೆ ಪುರಸ್ಕಾರ ದೊರೆಯುತ್ತದೆ. ಇದ

ರಿಂದ ಆಕೆಗೆ ಬಹು ತೊಂದರೆಯುಂಟಾಗುತ್ತಿರಬಹುದು."

"ಸಂದೇಹವಿಲ್ಲದೆ. ಆದರೆ ಆಕೆಯು ಬಹಳ ಉದಾರಿ. ಅವರ ಸ್ವಂತ ಖರ್ಚು ಬಹಳ ಕಡಿಮೆ. ದಾನ ಧರ್ಮಗಳನ್ನು ಮಾಡುವುದರಲ್ಲಿ ಬಹಳ ವೆಚ್ಚಮಾಡುತ್ತಾಳೆ."

"ಬಹಳ ಶಿಷ್ಟ ಸಂಪ್ರದಾಯಸ್ಥೆ. ಅಲ್ಲದೆ ಅಲ್ಲಿಂದ ಇಲ್ಲಿಂದ ಬಂದು ಹೋಗುವ ಸಂಬಂಧೀಕರಿಗೂ ವಾಡಿಕೆಗೆ ಅನುಸಾರವಾಗಿ ಅಲ್ಪ ಸ್ವಲ್ಪ ಕೊಡಬೇಕಾಗುವುದು."

ಮೋತೀಬಾಯಿಯ ಕಣ್ಣು ಚುರುಕಾಗಿ ಬಾಗಿಲಹಿಂದೆ ಅವಿತುನಿಂತು ಪೀರ್ ಅಲಿಯು ಕಿವಿಗೊಟ್ಟು ಸಂಭಾಷಣೆಯನ್ನು ಕೇಳುತ್ತಿರುವನೆಂದು ಗ್ರಹಿಸಿತು.

ಆಕೆಯು ಮುಗುಳ್ನಗೆ ನಗುತ್ತಾ "ಬಂದುಹೋಗುವರೇನೋ ಬಹಳ ಮಂದಿ. ಆದರೆ ಅವರಿಗೆ ಕೊಟ್ಟು ತೆಗೆದುಕೊಳ್ಳುವುದನ್ನು ನಾನರಿಯೆ" ಎಂದಳು.

"ಅವರೊಂದಿಗೆ ಮಾತುಕಥೆಯಾಡುವುದರಲ್ಲೇ ರಾಣಿಯ ಹೆಚ್ಚು ಸಮಯವು ವ್ಯಯವಾಗುತ್ತಿರಬಹುದು. ಪ್ರಾಯಶಃ ಪೂಜೆ, ಪುರಸ್ಕಾರ, ಸವಾರಿ, ಕಸರತ್ತು ಇವುಗಳಲ್ಲಿಯೂ ಅನೇಕ ಗಂಟೆಗಳು ಕಳೆದುಹೋಗುತ್ತಿರಬಹುದು" ಎಂದು ನವಾಬ್ ಅಲಿಯು ಸೂಚಿಸಿದನು.

ಮೋತೀಬಾಯಿಯು ಒಡನೆಯೇ "ಇಷ್ಟು ಕೆಲಸಗಳಿಗೂ ಸಮಯವನ್ನು ಹೇಗೆ ಹೊಂದಿಸುವರೋ ನನಗೆ ತಿಳಿಯದು. ಸವಾರಿ ಕುಸ್ತಿ ಕಸರತ್ತು ಮುಂತಾದುವನ್ನು ಮಾಡಿ ಇತರ ಮಹಿಳೆಯರಿಗೂ ಹೇಳಿಕೊಡುತ್ತಾರೆ. ಅಲ್ಲದೆ ಗೀತಾಶ್ರವಣ ಮಾಡುತ್ತಾರೆ. ನಿತ್ಯವೂ ಅದೆಷ್ಟು ಜನ ಸ್ತ್ರೀಪುರುಷರಿಗೆ ಸಂದರ್ಶನವಿತ್ತು ಮಾತುಕಥೆಯಾಡುತ್ತಾರೋ ನನಗೆ ಅರಿವಿಲ್ಲ. ಇದರ ಮಧ್ಯೆ ಸಂಗೀತವನ್ನು ಆಗಾಗ್ಯೆ ಕೇಳುತ್ತಾರೆ" ಎಂದಳು.

ಆಲೀಬಹದ್ದೂರನು ತನ್ನ ಗಡ್ಡವನ್ನು ನೇವರಿಸಿಕೊಳ್ಳುತ್ತಾ "ಬಾಯ್‌ಜೀ, ನಿಮ್ಮ ಗಾನವು ದೇವತೆಗಳನ್ನೂ ಆಕರ್ಷಿಸುವುದು" ಎಂದನು.

ಮೋತೀಬಾಯಿಯು ನಸುನಕ್ಕು, ಲಜ್ಜೆಯನ್ನಭಿನಯಿಸುತ್ತಾ "ಆದರೆ ರಾಣಿಯು ಈಗ ಒಂದು ಕಾರ್ಯವನ್ನು ಮಾತ್ರ ವಿಶೇಷವಾಗಿ ಮಾಡುತ್ತಿಲ್ಲ. ಬಹುಶಃ ಸಂಪೂರ್ಣವಾಗಿ ತ್ಯಜಿಸಿಬಿಟ್ಟಿರಬೇಕು. ಹಿಟ್ಟಿನ ಗೋಲಿಗಳನ್ನು ಮಾಡಿ ಮೀನುಗಳಿಗೆ ತಿನ್ನಿಸುತ್ತಿದ್ದರು. ಅದನ್ನು ಈಗ ಅವರ ಸಖಿಯರು ಮಾಡುತ್ತಿರುವರು" ಎಂದಳು.

"ದಾಸಿಯರಲ್ಲವೇ ಬಾಯಿಜೀ ?"

"ಅವರನ್ನು ಆಕೆಯು ದಾಸಿಯರೆಂದು ಸಂಬೋಧಿಸುವುದಿಲ್ಲ. ಸಖಿಯರೆಂದೇ ಕರೆದು ಅಂತೆಯೇ ನಡೆಸುವರು".

"ಆಕೆಯು ಬಹಳ ಉತ್ತಮಳು. ಈಗ ಅವಕುಂಠನವನ್ನು ಬಿಟ್ಟುಬಿಟ್ಟಿರುವಳು. ನಾನು ಆಕೆಯನ್ನು ನೋಡಿರುವೆನು. ಗುಡ್ಡಗಾಡುಗಳಲ್ಲಿ ಸಂಚರಿಸುವುದಕ್ಕೆ ಆಕೆಗೇನು

ಸಂತೋಷವಾಗುವುದೋ ನನಗೆ ಗೊತ್ತಿಲ್ಲ."

"ನನ್ನನ್ನೂ ಕುದುರೆಯ ಸವಾರಿ ಕಲಿ ಎಂದು ಹೇಳಿದರು."

"ನಿಜವೆ? ನೀವು ಕುದುರೆಯ ಸವಾರಿ ಮಾಡುವುದನ್ನು ಕಲಿತಿರುವಿರಾ?"

"ಮೊದ ಮೊದಲು ಬಹಳ ಭಯವಾಯಿತು. ಈಗ ಸ್ವಲ್ಪ ಕಲಿತುಕೊಂಡಿರುವೆನು. ಅವರ ಸಖಿ ಮುಂದರಿ ಬಹಳ ಉತ್ತಮ ಸವಾರಳು. ಅವಳೇ ಮಿಕ್ಕ ಮಹಿಳೆಯರಿಗೆ ಸವಾರಿ ಮಾಡುವುದನ್ನು ಹೇಳಿಕೊಡುತ್ತಾಳೆ."

"ಏನು. ಮಹಿಳೆಯರಿಗೆ ಶಸ್ತ್ರಾಸ್ತ್ರ ಪ್ರಯೋಗ ಮಾಡುವುದನ್ನು ಕಲಿಸಿ ಕೊಡಲಾಗುವುದೊ?"

"ರಾಣಿಯು ಅದರಲ್ಲಿ ಪಾರಂಗತೆ."

"ನೀವು ಕಲಿತಿರುವಿರಾ?"

"ಕಲಿತು ಕೊಳ್ಳುತ್ತಿದ್ದೇನೆ."

"ಏತಕ್ಕಾಗಿ?"

"ನಾನು ನನ್ನ ಅಂಗಸೌಷ್ಠವವನ್ನು ಕಾಪಾಡಲು ಬಯಸುತ್ತೇನೆ. ಆದುದರಿಂದ ಕಲಿಯುತ್ತಿದ್ದೇನೆ. ರಾಣೀಸಾಹೇಬರೂ ಕೂಡ ಇದೇ ಅರ್ಥದಿಂದ ಕುದುರೆ ಸವಾರಿ, ಕಸರತ್ತು ಮುಂತಾದುವನ್ನು ಮಾಡುತ್ತಾರೆ. ಬೇರೆ ಮತ್ತಾವ ಕಾರಣವೂ ನನಗೆ ತಿಳಿಯದು."

"ನೀವು ಕುದುರೆ ಸವಾರಿ ಮಾಡುವುದನ್ನು ನೋಡಿದರೆ ನನಗೆ ಪರಮ ಸಂತೋಷವಾಗುವುದು. ಬಹುಶಃ ರೋಮಾಂಚವೂ ಆಗುವುದು. ನಿಮ್ಮ ರೂಪ ಲಾವಣ್ಯಗಳು ಮೊದಲಿಗಿಂತಲೂ ಈಗ ಚೆನ್ನಾಗಿವೆ. ಪ್ರಾಯಶಃ ಇವು ನಿಮ್ಮ ವ್ಯಾಯಾಮಗಳ ಮಹಿಮೆ ಇರಬಹುದು."

ಆಲೀಬಹದ್ದೂರನು ಒಬ್ಬ ಸ್ತ್ರೀಯನ್ನು ಪರಾಜಿತಳನ್ನಾಗಿ ಮಾಡಬೇಕಾದರೆ, ಅವಳ ಪ್ರಶಂಸೆ ಮಾಡಬೇಕೆಂದು ಯೋಚಿಸಿದ್ದನು.

ಮೋತೀಬಾಯಿಯು ಪರಾಜಿತಳಾದವಳಂತೆ ತೋರಿಬಂದಳು. ನಸುನಗುತ್ತಾ ಲಜ್ಜೆಯಿಂದ, ತುಟಿಗಳನ್ನು ಕಚ್ಚುತ್ತಾ, ತನ್ನ ಕಟಾಕ್ಷಗಳಿಂದ ಅವನನ್ನು ಮದೋನ್ಮತ್ತನಾಗಿ ಮಾಡಿ "ನೀವು ಬಹಳವಾಗಿ ನನ್ನನ್ನು ಪ್ರಶಂಸಿಸಿದರಿ" ಎಂದು ಹೇಳಿದಳು.

ನವಾಬನು "ನಾನು ಸುಳ್ಳನ್ನು ಹೇಳಲಿಲ್ಲ" ಎಂದನು.

ಆತನು ಪುನಃ ನಕ್ಕು, ತಾಂಬೂಲವನ್ನು ಅವಳಿಗೂ ಕೊಟ್ಟು ತಾನೂ ಸೇವಿಸಿದನು. ನಂತರ ಎಚ್ಚರಿಕೆಯಿಂದ "ರಾಣಿಸಾಹೇಬರ ಬಳಿ ಯಾರು ಬರುತ್ತಾರೆ ಅಥವಾ ಬಂದಿರುತ್ತಾರೆ?" ಎಂದು ಪ್ರಶ್ನಿಸಿದನು.

ಮೋತೀಬಾಯಿಯು ವಿಳಂಬಮಾಡದೆ ಉತ್ತರವಿತ್ತಳು "ಬೇಕಾದಷ್ಟು ಮಂದಿ

ಬರುತ್ತಾರೆ. ಬಿಟ್ಟೂರಿನಿಂದ ತಾತ್ಯಾಟೋಪಿ, ಕಟೇಲಿಯಿಂದ ದಿವಾನ ಜವಹರ ಸಿಂಹರು, ದುಲ್ಹಾಜು ಇತ್ಯಾದಿ ಹೀಗೆಯೇ ಯಾರು ಯಾರೋ ಬರುತ್ತಾರೆ. ಅವರ ಹೆಸರುಗಳು ನೆನಪಿಗೆ ಬರುವುದಿಲ್ಲ ಏನೆಂದು, ಹೇಳಲಿ. ಇನ್ನು ಮುಂದೆ ನೆನಪಿನಲ್ಲಿಡುತ್ತೇನೆ."

"ಖಂಡಿತವಾಗಿ ನೆನಪಿನಲ್ಲಿಟ್ಟಿದ್ದು ನನಗೆ ತಿಳಿಸುತ್ತಿರಿ. ಹಣ ಕಾಸಿಗೇನೂ ತ್ರಾಸಪಡಬೇಡಿ. ನನ್ನ ಬಳಿ ಇರುವುದೆಲ್ಲಾ ನಿಮ್ಮದೇ ಎಂದು ತಿಳಿದು ಕೊಳ್ಳಿ."

"ಎಲ್ಲಾ ನಿಮ್ಮ ಕೃಪೆ. ನಾನು ಆಪದ್ಬಾಂಧವರನ್ನೆಂದಿಗೂ ಮರೆಯುವುದಿಲ್ಲ."

"ಬಂದು ಹೋಗುವವರು ಏನೇನು ಮಾತನಾಡಿ ಕೊಳ್ಳುತ್ತಾರೋ ಅದನ್ನು ನನಗೆ ತಿಳಿಸುತ್ತಿರಿ. ಈಗ ಸದ್ಯದಲ್ಲಿ ಏನಾದರೂ ಮಾತು ಕಥೆ ನಡೆದಿದ್ದರೆ...."

" ಹಾಂ, ನನಗೆ ಕೆಲವು ವಿಚಾರಗಳು ತಿಳಿದಿವೆ ಹೇಳಲೆ ?"

"ಅಗತ್ಯವಾಗಿ ಹೇಳಿ. ನಾನೂ ಗಮನದಿಂದ ಕೇಳುತ್ತೇನೆ."

"ರಾಣೀ ಸಾಹೇಬರು ತಮ್ಮ ದತ್ತು ಪುತ್ರನ ಉಪನಯನ ಮಹೋತ್ಸವವನ್ನು ಮಾಡಲಿಚ್ಛಿಸುತ್ತಿದ್ದಾರೆ. ಅದರ ಏರ್ಪಾಡುಗಳು ನಡೆಯುತ್ತಿವೆ."

"ಏನು ದಿವಾನ ರಘುನಾಥ ಸಿಂಹ ಮತ್ತು ಜವಹರ ಸಿಂಹರೊಂದಿಗೆ ? "

"ಹೌದು. ಅವರು ತಮ್ಮ ಹಿಂದಿನ ನೌಕರರನ್ನೂ, ಸಂಬಂಧೀಕರನ್ನೂ ನಗರದ ಮಹನೀಯರನ್ನೂ ಮತ್ತು ಹಳ್ಳಿಯ ರೈತಾಪಿ ಜನರನ್ನೂ ಆಹ್ವಾನಿಸುವರು. ಅವರಿಗೆ ತಮ್ಮ ಪೂರ್ವಿಕರ ಪದ್ಧತಿಯು ತಿಳಿಯದಿದ್ದುದರಿಂದ ಬಂದವರೊಡನೆಯೆಲ್ಲಾ ಈ ವಿಚಾರವನ್ನು ಚರ್ಚಿಸುತ್ತಾರೆ. ಈ ಮಧ್ಯೆ ಮಹೋತ್ಸವಕ್ಕೆ ಬಹಳ ದ್ರವ್ಯವನ್ನೂ ವೆಚ್ಚ ಮಾಡಲಿದ್ದಾರೆ. ಓಹೊ! ಒಂದು ಮಾತು ಹೇಳುವುದು ಮರೆತಿದ್ದೆ; ಅವರು ತಮ್ಮ ಅರ್ಜಿಯನ್ನು ವಿಲಾಯಿತಿಗೆ ಕಳುಹಿಸಿದ್ದಾರೆ. ಆದುದರಿಂದ ಹಿರಿಯ ಕಿರಿಯ ಆಂಗ್ಲೇಯ ನೌಕರರೊಂದಿಗೆ ತನ್ನ ವಿಚಾರವನ್ನು ಶಿಫಾರಸ್ಸು ಮಾಡಬೇಕೆಂದು ಹೇಳಿ ಕೊಳ್ಳುತ್ತಾರೆ."

"ಮುಂದೆ ಏನಾದರೂ ಹೆಚ್ಚು ವಿಷಯ ತಿಳಿದರೆ ಅದನ್ನು ನೀವು ಖಂಡಿತ ನನಗೆ ತಿಳಿಸಬೇಕು."

"ಅದು ನನ್ನ ಕರ್ತವ್ಯವೆಂದೂ ಸೌಭಾಗ್ಯವೆಂದೂ ತಿಳಿದಿದ್ದೇನೆ" ಎಂದು ಹೇಳಿ ಮೋತೀಬಾಯಿಯು ಹೊರಡಲುದ್ಯುಕ್ತಳಾದಳು. ಕಡೆಯದಾಗಿ ತನ್ನ ಕಟಾಕ್ಷವನ್ನು ಬೀರಿ ಮುಗುಳ್ನಗೆಯೊಂದಿಗೆ ಅವನಿತ್ತ ತಾಂಬೂಲವನ್ನು ಸ್ವೀಕರಿಸಿದಳು.

"ನಾನು ಇಲ್ಲಿಂದ ನೆಟ್ಟಗೆ ರಾಣಿಸಾಹೇಬರ ಬಳಿಗೆ ಹೋಗಿ ಒಂದೆರಡು ಭಜನೆಗಳನ್ನು ಹಾಡಿ ಮನೆಗೆ ಸೇರುವೆನು. ಏನಾದರೂ ವಿಶೇಷ ಸಮಾಚಾರವು ತಿಳಿದರೆ ಒಡನೆಯೆ ಬಂದು ಬಿನ್ನವಿಸಿಕೊಳ್ಳುತ್ತೇನೆ" ಎಂದು ಹೇಳಿ ಹೊರಟಳು.

ಪೀರ್‌ಆಲಿಯು "ನಿಮ್ಮನ್ನು ನಾನು ಮಹಲ್ಲಿನವರೆಗೆ ತಲಪಿಸಿಬರುತ್ತೇನೆ" ಎಂದು ಒತ್ತಾಯಪಡಿಸಿದನು.

ಅದಕ್ಕೆ ಮೋತೀಬಾಯಿಯು ಸಮ್ಮತಿಸಿದಳು.

ಮಾರ್ಗದಲ್ಲಿ ಜನರ ಓಡಾಟವು ಕಡಿಮೆಯಾಗಿದ್ದಿತು. ಆದರೆ ಸಂಪೂರ್ಣವಾಗಿ ನಿಂತಿರಲಿಲ್ಲ. ಮೋತೀಬಾಯಿಯು ಸಮಯವರಿತು ಪೀರ್‌ಆಲಿಯೊಡನೆ "ನಾನು ನವಾಬರ ಸಮ್ಮುಖದಲ್ಲಿ ಅವಕುಂಠನವನ್ನು ತ್ಯಜಿಸಿಬಿಟ್ಟೆನು. ಇನ್ನು ಮುಂದೆ ಇತರರ ಮುಂದೆಯೂ ತ್ಯಜಿಸಲು ಯತ್ನಿಸುವೆನು" ಎಂದು ಹೇಳಿದಳು.

ಪೀರ್‌ಆಲಿಯು ಅವಳ ಮಾತಿನ ಅರ್ಥವನ್ನು ಗ್ರಹಿಸಿ "ಖುದಾಬಕ್ಷರು ನನ್ನ ಸ್ನೇಹಿತರು. ಅವರಲ್ಲಿ ಈ ವಿಚಾರವನ್ನು ತಿಳಿಸಿದರೆ ನನ್ನ ಬಾಯಿಗೆ ಸಕ್ಕರೆ ಹಾಕುತ್ತಾರೆ" ಎಂದನು.

ಮೋತೀಬಾಯಿಯು "ಈಗಲೇ ಬೇಡ. ಅವರು ಬಹಳವಾಗಿ ಧಿಕ್ಕರಿಸುವರು, ನಿಮ್ಮಂತೆ ಅವರು ಈ ವಿಚಾರದಲ್ಲಿ ಮುಂಬರಿದಿಲ್ಲ" ಎಂದಳು.

ಪೀರ್‌ಆಲಿಯು ಅಪ್ರತಿಭನೂ ಪ್ರಸನ್ನನೂ ಆದನು. ಅವನಿಗೆ ಅವಳ ಮಾತು ಕೇಳಿ ಮನಸ್ಸಿನಲ್ಲೇ ಉಳುಕಿತು.

ಮೋತೀಬಾಯಿಯನ್ನು ಮಹಲ್ಲಿನ ಬಳಿಗೆ ಕರೆದೊಯ್ದು ಅವನು ಹಿಂದಿರುಗಿದನು.

ರಾಣಿಯು ಕಥಾಶ್ರವಣವನ್ನು ಮುಗಿಸಿದ್ದಳು. ಮೋತೀಬಾಯಿಯು ಅವಳ ಬಳಿಗೆ ಹೋಗಿ ನಿಂತು ಪ್ರಣಾಮ ಮಾಡಿದಳು. ಎಲ್ಲರೂ ಹೊರಟು ಹೋದನಂತರ ರಾಣಿಯು ಅವಳನ್ನು ಪ್ರಶ್ನಿಸಿದಳು "ಸಮಾಚಾರವೇನು, ಮೋತೀ ?"

ಮೋತಿಯು ವಿನಯದಿಂದ "ಮಹಾರಾಣಿಯರಿಗೆ ಒಂದು ಮೀರಾಭಜನೆಯನ್ನು ಹಾಡಿಬಿಟ್ಟು ನಂತರ ನಿವೇದಿಸಿಕೊಳ್ಳುತ್ತೇನೆ" ಎಂದಳು.

ಮೋತೀಬಾಯಿಯು ತಂಬೂರಿಯನ್ನು ಮೀಟುತ್ತಾ ಮೀರಾ ಭಜನೆಯನ್ನು ಹಾಡಿದಳು. ನಂತರ ತಂಬೂರಿಯನ್ನು ಅದರ ಸ್ಥಳದಲ್ಲಿರಿಸಿ "ತಮಗೆ ವಿರುದ್ಧವಾಗಿ ಮತ್ತೊಬ್ಬ ಗೂಢಚಾರನು ಹುಟ್ಟಿರುತ್ತಾನೆ" ಎಂದು ಹೇಳಿದಳು.

ರಾಣಿಯು ಶಾಂತಚಿತ್ತದಿಂದ "ಯಾರದು, ಮೋತೀ ?" ಎಂದು ಕೇಳಿದಳು.

"ನವಾಬ್ ಆಲಿಬಹದ್ದೂರ್."

"ನನಗೆ ಆತನಮೇಲೆ ಮೊದಲಿನಿಂದಲೂ ಶಂಕೆಯಿದ್ದಿತು. ಏನಾಯಿತು ಹೇಳು." ಮೋತೀಬಾಯಿಯು ಆದಿಯಿಂದ ಅಂತ್ಯದವರೆಗೆ ಸವಿಸ್ತಾರವಾಗಿ ನಡೆದ ಸಂಗತಿಯನ್ನೆಲ್ಲಾ ವಿವರಿಸಿದಳು.

ರಾಣಿಯು ಉಪನಯನದ ಮಾತನ್ನು ಕೇಳುತ್ತಾ "ನನಗೆ ನಿನ್ನ ಬುದ್ಧಿಯನ್ನು

ಕಂಡು ಬಹಳ ಆಶ್ಚರ್ಯವಾಗುತ್ತದೆ ಮೋತಿ. ನನ್ನ ಮನಸ್ಸಿನಲ್ಲಿ ದಾಮೋದರ ರಾಯನ ಉಪನಯನವನ್ನು ಬಂಧುಬಳಗವನ್ನೆಲ್ಲಾ ಆಹ್ವಾನಿಸಿಮಾಡಬೇಕೆಂದು ಕೆಲವು ದಿನಗಳಿಂದ ತೋರಿದೆ. ಆದರೆ ನಾನಾರಲ್ಲಿಯೂ ಈ ಅಭಿಪ್ರಾಯವನ್ನು ವ್ಯಕ್ತ ಪಡಿಸಿಲ್ಲ. ಅಂತಹುದರಲ್ಲಿ ನೀನು ಹೇಗೆ ಕಂಡುಹಿಡಿದೆ ?" ಎಂದು ಹೇಳಿದಳು.

ಮೋತೀಬಾಯಿಯು ಉತ್ತರಿಸುತ್ತಾ "ಸರ್ಕಾರ್, ನೀವು ಒಂದು ದಿನ ರಾಜ ಕುಮಾರರೊಂದಿಗೆ 'ನಿನ್ನ ಉಪನಯನವು' ನಡೆಯುವುದೆಂದು ಹೇಳಿದಿರಿ. ಅದು ಜ್ಞಾಪಕವಿದ್ದಿತು. ಅದನ್ನು ಈಗ ಉಪಯೋಗಪಡಿಸಿಕೊಂಡೆ" ಎಂದು ಹೇಳಿದಳು.

ರಾಣಿಯು ನಸುನಗುತ್ತಾ "ನೀನು ಖುದಾಬಕ್ಷನನ್ನೂ ಪರೀಕ್ಷೆಮಾಡಬೇಕಾಗು ವುದು" ಎಂದಳು.

ಮೋತೀಬಾಯಿಯು ತಲೆತಗ್ಗಿಸಿ "ಸರ್ಕಾರ್ ನಾನು ಪರೀಕ್ಷೆಮಾಡುತ್ತೇನೆ. ನಮ್ಮ ಕಾರ್ಯಕ್ಕೆ ಒದಗುವುದಾದರೆ ನಮ್ಮ ಪಟ್ಟಿಗೆ ಹೆಸರನ್ನು ದಾಖಲೆ ಮಾಡೋಣ, ಇಲ್ಲದಿದ್ದರೆ ಬೇರ್ಪಡಿಸೋಣ" ಎಂದು ಖಚಿತವಾಗಿ ಹೇಳಿದಳು.

"ನನಗೆ ಭರವಸೆಯಿದೆ ಮೋತಿ. ಅಪರಂಜಿಯು ಅಪರಂಜಿಯೆ." ರಾಣಿಯು ಪುನಃ "ಜ್ಯೂಹಿ ಮತ್ತು ದುರ್ಗಿಯರು ಏನನ್ನಾದರೂ ಮಾಡುತ್ತಿರುವರೆ ?" ಎಂದು ಪ್ರಶ್ನಿಸಿದಳು.

ಮೋತೀಬಾಯಿಯು "ಮಾಡುತ್ತಿರುವರು. ದುರ್ಗಿಯು ಆಂಗ್ಲೇಯ ಸೈನ್ಯದ ಹಿಂದೂಸ್ಥಾನಿ ಹುದ್ದೇದಾರರಿಗೆ ನರ್ತನಗಾಯನಗಳನ್ನು ಪ್ರದರ್ಶಿಸಿ ರಹಸ್ಯ ಸಮಾ ಚಾರಗಳನ್ನು ಒಟ್ಟುಗೂಡಿಸುತ್ತಿದ್ದಾಳೆ. ಜ್ಯೂಹಿಯ ಪರೀಕ್ಷೆಯು ಇನ್ನೂ ಬಾಕಿ ಉಳಿದಿದೆ" ಎಂದು ಉತ್ತರ ವಿತ್ತಳು.

"ಇದರಲ್ಲಿ ನನ್ನ ಸಂಬಂಧವು ಪ್ರಕಟವಾಗುವುದಿಲ್ಲ ತಾನೆ?" ಎಂದು ರಾಣಿ ಕೇಳಿದಳು.

"ಇಲ್ಲ ಸರ್ಕಾರ್" ಎಂದಳು ಮೋತಿ.

ರಾಣಿಯು "ನನಗೆ ನಿನ್ನ ಬುದ್ಧಿ ಮತ್ತು ಕೌಶಲ್ಯದಲ್ಲಿ ಭರವಸೆಯಿದೆ" ಎಂದಳು.

ಮೋತಿಯು ಉತ್ಸಾಹಭರಿತಳಾಗಿ ಆಶ್ವಾಸನೆಯಿತ್ತಳು.

ನನ್ನ ಅಭಿನಯವು ತಮ್ಮ ಚರಣಗಳಿಗೆ ಸ್ವಲ್ಪವಾದರೂ ಸೇವೆಯನ್ನು ಸಲ್ಲಿಸಿ ದರೆ ಆಗ ನನ್ನ ಜನ್ಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ." ಎಂದಳು.

ನಂತರ ಮೋತೀಬಾಯಿಯು ತನ್ನ ಮನೆಗೆ ಹಿಂದಿರುಗಿದಳು.

## ೪೦

ಮೋತೀಬಾಯಿಯು ಮನೆಗೆ ಬರುತ್ತಲೇ ಖುದಾಬಕ್ಷನನ್ನು ಕಂಡಳು. ಒಡನೆಯೆ ಅವಳು ಅವಕುಂಠನವನ್ನು ಎಳೆದುಕೊಂಡಳು.

ಖುದಾಬಕ್ಷನು "ಪೀರ್‌ಆಲಿಯು ಈಗತಾನೆ ನನ್ನ ಸೌಭಾಗ್ಯದ ಸಂದೇಶವನ್ನಿತ್ತನು. ಆದುದರಿಂದಲೇ ಇಲ್ಲಿಗೆ ಬಂದೆ. ಈ ಕಿವಿಗಳು ಶುಭವಾರ್ತೆಯನ್ನು ಕೇಳಿ ಬಹು ದಿನಗಳಾಗಿದ್ದವು. ಒಂದು ಮಾತು ಕೇಳಲು ......." ಎಂದು ಹೇಳಿ ನಿಲ್ಲಿಸಿದನು.

"ದಯಮಾಡಿ" ಎಂದು ಸ್ವಾಗತ ಬಯಸಿ ಮೋತಿಯು ದಿವಾ‌ಣ್‌ಖಾನೆಯೆಡೆಗೆ ನಡೆದಳು.

ಖುದಾಬಕ್ಷನು ಅಲ್ಲಿ ಪೀಠವನ್ನಲಂಕರಿಸಿದನು. ಮೋತೀಬಾಯಿಯು ದೀಪವನ್ನು ಹೊತ್ತಿಸಿ ವೈಯ್ಯಾರದಿಂದ ಕುಳಿತುಕೊಂಡಳು.

ನಂತರ ಅವಳೇ ಮಾತಿಗೆ ಪ್ರಾರಂಭಿಸಿದಳು "ನಾನು ಬಹಳ ಆಯಾಸ ಹೊಂದಿದ್ದೇನೆ. ಆದುದರಿಂದ ಹೇಳುವ ಮಾತನ್ನು ಶೀಘ್ರವಾಗಿ ಹೇಳಿ ಮುಗಿಸಿದರೆ ಮಹೋಪಕಾರವಾಗುತ್ತದೆ" ಎಂದು ಹೇಳಿದಳು.

ಖುದಾಬಕ್ಷನು "ನಾನು ಏತಕ್ಕಾಗಿ ಬಂದೆನೋ ಅದನ್ನು ಹೇಳಿಯಾಯಿತು. ಈಗ ನೀವು ಮನೆಯಲ್ಲಿದ್ದುಕೊಂಡು ನನಗೆ ತಮ್ಮ ಸೇವೆ ಮಾಡಲು ಅವಕಾಶಕೊಡಬೇಕೆಂದು ನನ್ನ ವಿನಂತಿ" ಎಂದು ನುಡಿದನು.

ಮೋತೀಬಾಯಿಯು ಮುಗುಳ್ನಗೆ ಬೀರಿದಳು. ಆತನನ್ನು ಕಡೆಗಣ್ಣಿನ ನೋಟದಿಂದ ನೋಡುತ್ತಾ "ಹಾಗೆಂದರೆ ನಾನು ನಿಮ್ಮ ಕೈದಿಯಾಗಿರಬೇಕೆಂದು ನಿಮ್ಮ ಅಭಿಪ್ರಾಯ ?" ಎಂದು ಕೇಳಿದಳು.

ಖುದಾಬಕ್ಷನು ಹರ್ಷೋನ್ಮತ್ತನಾದನು.

"ನಾನು ನಿಮ್ಮ ಕೈದಿಯಾಗಿರುತ್ತೇನೆ."

"ಈ ತರಹ ಮಾತನ್ನು ನೀವು ಎಷ್ಟು ಮಂದಿ ಸ್ತ್ರೀಯರೊಂದಿಗೆ ಅಂದಿರುತ್ತೀರಿ?"

"ದೇವರೇ ಸಾಕ್ಷಿ; ಇದನ್ನು ನಾನು ಹೇಳುವ ಅವಶ್ಯಕತೆಯೇ ಇಲ್ಲ."

"ಅದು ನನಗೆ ಗೊತ್ತು. ಆದರೆ ಸತ್ಯದ ಮೇಲೆ ಆಣೆಯಿಟ್ಟು ಹೇಳುವುದಾದರೆ ನಾನೂ ಒಬ್ಬ ಗೌರವ ಸ್ತ್ರೀ, ಇದಕ್ಕೂ ದೇವರೇ ಸಾಕ್ಷಿ."

"ಅದನ್ನು ನಾನು ಬಲ್ಲೆ. ಆದುದರಿಂದಲೇ ಇಷ್ಟು ವರ್ಷಗಳು ಕಾದು ಅಶ್ರುಧಾರೆಯನ್ನೇ ಹರಿಸಿದ್ದೇನೆ."

"ನಾನು ಕಣ್ಣೀರಿನ ಹೊಳೆ ಅಥವಾ ನದಿಗಳನ್ನು ಪ್ರವಹಿಸಬಲ್ಲವರಿಂದ ದೂರವಿರಲು ಅಪೇಕ್ಷಿಸುತ್ತೇನೆ."

"ನಾನು ನನ್ನ ರಕ್ತವನ್ನು ಹರಿಸಲೂ ಸಿದ್ಧನಿದ್ದೇನೆ."

"ಇದರ ನಂಬಿಕೆಯನ್ನುಂಟುಮಾಡಬೇಕು."

"ನಂಬಿಕೆ ಕೊಡುತ್ತೇನೆ. ದೇವರ ಮೇಲೆ ಆಣೆಯಿಡುತ್ತೇನೆ."

"ಬದಲಾಯಿಸುವುದಿಲ್ಲ ತಾನೆ ?"

"ಆ ಯೋಚನೆಯು ನನ್ನ ಮನಸ್ಸಿನಲ್ಲಿ ಹೊಕ್ಕೊಡನೆಯೆ ನನ್ನ ಕತ್ತನ್ನು ತುಂಡರಿಸಿಕೊಳ್ಳುವೆನು."

ಮೋತೀಬಾಯಿಯು ನಸುನಕ್ಕು ತನ್ನ ಮಾಯೆಯನ್ನು ಪ್ರಸರಿಸಿದಳು. ತರುವಾಯ "ನವಾಬ್ ಆಲಿಬಹದ್ದೂರನ ಸೇವೆಮಾಡಲು ಸಾಧ್ಯವೆ ?" ಎಂದು ಕೇಳಿದಳು. "ಮಾಡಬಲ್ಲೆನು. ನಿಮ್ಮ ಅಪ್ಪಣೆಯಂತೆ ನಡೆಯಲು ಸಿದ್ಧನಿರುವೆನು. ಯಾರ ಸೇವೆಯನ್ನೂ ಮಾಡಲು ನಾನು ಒಪ್ಪುತ್ತಿರಲಿಲ್ಲ. ಈಗ ಆ ಪಣವನ್ನು ಮುರಿಯುವೆನು. ಏನು ಕೆಲಸ ಮಾಡಬೇಕಾಗುವುದು ? ನವಾಬ್‌ಸಾಹೇಬರಾಗಲಿ, ಪೀರ್‌ಆಲಿಯಾಗಲೀ ನನಗೆ ಏನನ್ನೂ ಹೇಳಲಿಲ್ಲ."

"ನಾನು ಹೇಳುತ್ತೇನೆ. ಗೂಢಚಾರರ ಕೆಲಸ ಮಾಡಬೇಕಾಗುವುದು" ಮೋತೀಬಾಯಿಯು ಉಪದೇಶ ಮಾಡುವ ರೀತಿಯಲ್ಲಿ ಹೇಳಿದಳು.

"ಗೂಢಚಾರನ ಕೆಲಸ ! ಎಂತಹ ಗೂಢಚಾರ ?"

"ರಾಣಿ ಸಾಹೇಬರ ಬಳಿ ಯಾರಾರು ಬರುತ್ತಾರೆ, ಏತಕ್ಕಾಗಿ ಬಂದು ಹೋಗುತ್ತಾರೆ, ಅವರೇನು ಮಾತನಾಡುತ್ತಾರೆ, ಯಾವ ಸಂಚುಗಳನ್ನು ಹೂಡುತ್ತಾರೆ. ಆಂಗ್ಲೇಯ ಸರ್ಕಾರಕ್ಕೆ ವಿರುದ್ಧವಾಗಿ ಎಲ್ಲಿ ಏನು ನಡೆಯುತ್ತಿದೆ. ಇವೇ ಮುಂತಾದ ವಿಷಯಗಳನ್ನು ಕಂಡುಹಿಡಿಯಬೇಕಾಗುವುದು. ನವಾಬ್ ಸಾಹೇಬರು ಈ ಸೇವೆಗೆ ಪ್ರತ್ಯುಪಕಾರವಾಗಿ ಹೇರಳವಾದ ಬಹುಮಾನವನ್ನು ಕೊಡುವರು. ಮತ್ತು ಆಂಗ್ಲೇಯ ಸರ್ಕಾರದಿಂದಲೂ ಕೊಡಿಸುವರು. ದೊಡ್ಡ ದೊಡ್ಡ ಬ್ರಿಟಿಷ್ ಅಧಿಕಾರಿಗಳೊಂದಿಗೆ ಸಂಧಿಸುವಿರಿ ಮತ್ತು ನಿಮ್ಮ ಏಳಿಗೆಗೆ ಅನುಕೂಲವಾಗುವ ಸಂದರ್ಭಗಳು ಒದಗುವುವು."

ಖುದಾಬಕ್ಷನು ಈ ಮಾತುಗಳನ್ನು ಕೇಳಿ ಕಿಡಿಕಿಡಿಯಾದನು. ಹಣೆಯ ನರಗಳು ಉಬ್ಬಿದವು. ಕಂಠವು ರುದ್ಧಿತವಾಯಿತು. ಮೋತೀಬಾಯಿಯು ಇದೆಲ್ಲವನ್ನೂ ನೋಡಿ ಸಂತುಷ್ಟಳಾದಳು.

ಖುದಾಬಕ್ಷನು ಕಷ್ಟದಿಂದ "ನೀವು ನನ್ನನ್ನು ಬಹಳ ಕೀಳಾಗಿ ಭಾವಿಸಿದ್ದೀರಿ. ನಾನು ಒಬ್ಬ ಸೈನಿಕನಿಗೆ ಸಮಾನ. ರಾಜನ ಅತ್ಯಾಚಾರವು ಎಷ್ಟು ತೀವ್ರವಾಗಿದ್ದಿತೋ ಅಂತೆಯೇ ಆತನ ಕೃಪೆಯೂ ನನ್ನ ಮೇಲಿದ್ದಿತು. ಆದರೆ ನಾನು ನಿಮಗೆ ನಂಬಿಕೆ ದ್ರೋಹಿಯಾಗಿ ಕಾಣುತ್ತೇನೆ. ಇದುವರೆಗೂ ಯಾವುದೋ ಆಸೆಯ ಮೇಲೆ ಜೀವ ಧರಿಸಿದ್ದೆ. ಈಗ ಅದರ ಆವಶ್ಯಕತೆ ಇಲ್ಲ. ನಾನು ಹೋಗುತ್ತೇನೆ. ಮುಂಜಾನೆಯ

ವೇಳೆಗೆ ಖುದಾಬಕ್ಷನ ಹೆಸರೊಂದು ಮಾತ್ರ ಉಳಿಯುವುದು. ಆದರೆ ಯಾವಾಗಲಾದರೂ ಅಪ್ಪಿತಪ್ಪಿ ನನ್ನ ಗೋರಿಯೆಡೆಗೆ ಬಂದರೆ ಒಂದೆರಡು ಪುಷ್ಪಗಳನ್ನು ಹಾಕಲು ಮರೆಯಬೇಡಿ" ಎಂದು ಹೇಳಿ ಹೊರಡಲುದ್ಯುಕ್ತನಾದನು. ಆತನ ಮುಖವು ನಿಸ್ತೇಜವಾಗಿದ್ದಿತು.

ಮೋತೀಬಾಯಿಯು ತಟ್ಟನೆ ಅವನ, ಕೈಹಿಡಿದು "ಬಾಗಿಲನ್ನು ಭದ್ರಪಡಿಸಿ, ಬಂದು ಕುಳಿತು ನಾನು ಹೇಳುವುದನ್ನು ಕೇಳಿ" ಎಂದು ಹೇಳಿದಳು.

ಆತನು "ಇನ್ನೂ ಹೇಳುವುದು ಬಾಕಿಯಿದೆಯೆ ?" ಎಂದು ಕೇಳಿದನು.

ಮೋತೀಬಾಯಿಯು ಜಾಗ್ರತೆಯಾಗಿ ಉತ್ತರವಿತ್ತಳು "ಬೇಕಾದಷ್ಟಿದೆ."

ಖುದಾಬಕ್ಷನ ಕಾಲುಗಳು ಕಂಪಿಸುತ್ತಿದ್ದವು. ಆತನು ಬಾಗಿಲನ್ನು ಹಾಕುವುದಕ್ಕಾಗಿ ಹೋಗಿ ತನ್ನ ತಲೆಯನ್ನು ಬಾಗಿಲಿನಿಂದಾಚೆ ಹೊರಗಿಟ್ಟು ನೋಡಿದನು. ಯಾರೋ ಅಲ್ಲಿ ನಿಂತಿದ್ದವನು ಓಡಿಹೋದನು. ಖುದಾಬಕ್ಷನಿಗೆ ಆತನ ಗುರುತು ಸಿಗಲಿಲ್ಲ. ಆತನು ಗುರುತು ಹಿಡಿಯುವ ಪ್ರಯತ್ನಮಾಡಲಿಲ್ಲ. ದಿವಾನ್‌ಖಾನೆಗೆ ಬಂದು ನಿಂತು "ಇನ್ನೇನು ಉಳಿದಿದೆಯೋ ಹೇಳಿ" ಎಂದನು.

"ಕುಳಿತುಕೊಂಡು ಕೇಳಿ."

"ಬೇಡ ಇದಕ್ಕೋಸ್ಕರ ನಾನು ಆಣೆಯಿಟ್ಟು ನಂಬಿಕೆ ಕೊಡಲಿಲ್ಲ."

ಮೋತೀಬಾಯಿಗೆ ನಗುಬಂದಿತು. ಅವಳ ನಗುವು ಅವನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ಅದನ್ನು ಕಂಡು ಅವಳ ನಗುವು ಇಮ್ಮಡಿಸಿತು. "ಒಂದುವೇಳೆ ನಾನು ನಿಮ್ಮನ್ನು ರಾಣಿ ಲಕ್ಷ್ಮೀಬಾಯಿಯ ಸೇವೆಮಾಡಬೇಕೆಂದು ಹೇಳಿದರೆ ನಿಮ್ಮ ಗೌರವಕ್ಕೆ ತಕ್ಕುದಾಗಿರಬಹುದೆ ?" ಎಂದಳು.

"ನೀವೇನು ನನ್ನನ್ನು ಪರಿಹಾಸ್ಯಮಾಡುತ್ತಿರುವಿರಾ ?"

"ಎಂದಿಗೂ ಇಲ್ಲ. ನಾನು ನಂಬಿಕೆಯ ಪರಿಮಳವನ್ನು ಗ್ರಹಣಮಾಡುತ್ತಿರುವೆನು."

"ಮತ್ತೆ, ಆ ಮಾತನ್ನು ಹೇಗೆ ಹೇಳಿದಿರಿ ?"

"ಹೇಳುತ್ತೇನೆ. ಮೊದಲು ನನ್ನ ಆ ಪ್ರಶ್ನೆಗೆ ಉತ್ತರ ಕೊಡಿ."

"ರಾಣಿಸಾಹೇಬರಿಗಾಗಿ ನನ್ನ ತಲೆಯನ್ನು ಕೊಡಲು ಸಿದ್ಧನಿರುವೆನು. ಆದರೆ ಈಗ ಅಂತಹ ಸಂದರ್ಭವೇನಿದೆ ?"

"ಸಂದರ್ಭ ಬರುವುದು. ಆದರೆ ನನಗೆ ವಚನವನ್ನು ಕೊಡಿ."

"ಇದೊ ವಚನವನ್ನು ಕೊಡುತ್ತೇನೆ. ಆಂಗ್ಲೇಯನೊಬ್ಬನು ಬಂದು ಕೇಳಿದರೂ—ಅವನಿಗೂ ಇದೇ ಮಾತನ್ನು ಹೇಳುತ್ತೇನೆ."

"ಹಾಗೆಂದಿಗೂ ಮಾಡಬೇಡಿ. ನವಾಬರೊಂದಿಗಾಗಲೀ, ಪೀರ್‌ಆಲಿಯೊಂದಿ

ಗಾಗಲಿ ಅಥವಾ ಯಾರೊಂದಿಗೇ ಆಗಲಿ ಹೇಳಬೇಡಿ."

"ಹಾಗೆಯೇ ಆಗಲಿ."

"ಹಾಗೆಂದರಾಯಿತೆ? ರಾಣಿಯ ಸೇವೆಗಾಗಿ ಪ್ರಮಾಣಮಾಡಿ."

"ನನ್ನ ನಾಲಗೆಯೊಂದೇಕೆ ನನ್ನ ರೋಮರೋಮವೂ ಪ್ರಮಾಣ ಮಾಡುವುದು."

"ನನಗೆ ಈಗಲೀಗ ಭರವಸೆಯುಂಟಾಯಿತು. ಮೊದಲು ಆಲೀಬಹದ್ದೂರ್ ನವಾಬರ ನೌಕರಿ ಮತ್ತು ಗೂಢಚಾರ ವೃತ್ತಿಯ ವಿಷಯವಾಗಿ ನಿಮ್ಮ ಮನಸ್ಸಿನ ಆಳವನ್ನು ಕಂಡುಹಿಡಿಯುವುದಕ್ಕಾಗಿ ಕೇಳಿದೆ. ನೀವು ಪರೀಕ್ಷೆಯಲ್ಲಿ ತೇರ್ಗಡೆಯಾದಿರಿ."

"ನಾನು ಕಾರ್ಯತಃ ಮಾಡಿ ನನ್ನ ಜಯವನ್ನು ತೋರ್ಪಡಿಸುವೆನು. ಆಗ ಆ ಮಾತನ್ನು ಹೇಳಿರಿ."

ಮೋತೀಬಾಯಿಯು ನಸುನಕ್ಕು "ಇಷ್ಟೇ ಅಲ್ಲದೆ ಇನ್ನೂ ಹೇಳುತ್ತೇನೆ" ಎಂದಳು.

ಇದನ್ನು ಕಂಡು ಖುದಾಬಕ್ಷನಿಗೆ ರೋಮಾಂಚವಾಗಿ "ಈಗ ನಾನು ನಿಮ್ಮ ಕೈದಿಯಾದೆನೆಂದು ಹೇಳಿಕೊಳ್ಳಬಹುದು" ಎಂದು ಹೇಳಿದನು.

ಮೋತೀಬಾಯಿಯು "ಈಗ ಇನ್ನೂ ಕೈದಿಯಾಗುವ ವೇಳೆಯು ಬಂದಿಲ್ಲ. ರಾಣಿಯು ಎಂದು ಸ್ವರಾಜ್ಯವನ್ನು ಸ್ಥಾಪಿಸಿ ಉತ್ಸವವನ್ನು ಏರ್ಪಡಿಸುವಳೋ ಅಂದು ನಾನು ಕಡೆಯ ಬಾರಿ ನೃತ್ಯಮಾಡಿ ಆಶ್ರಿತೆರಾಗಿ ನಿಮ್ಮ ಬಂದಿಯಾಗುವೆನು. ಅದುವರಗೆ ನಿಮ್ಮ ಮತ್ತು ನಮ್ಮ ಪವಿತ್ರತೆಯು ಝಾನ್ಸಿಯ ರಾಣಿ ಎಂದು ಕರೆಸಿಕೊಳ್ಳುವ ಆ ದೇವಿಯ ಕೈಯ್ಯಲ್ಲಿರುವುದು" ಎಂದಳು. ಆ ಸಮಯದಲ್ಲಿ ಆ ನರ್ತಕಿಯ ಮುಖ ಮಂಡಲವು ಶೋಭಾಯಮಾನವಾಯಿತು.

ಖುದಾಬಕ್ಷನೂ ಒಬ್ಬ ಸೈನಿಕನು. ಆತನ ರಕ್ತವೂ ಕುದಿಯಲಾರಂಭಿಸಿತು. ಮುಷ್ಟಿಬಿಗಿಹಿಡಿದು "ಹಾಗೆಯೇ ಆಗಲಿ ನನಲ್ಲಿ ಯಾವಾಗಲಾದರೂ ತಪ್ಪನ್ನು ಕಂಡರೆ ಆಗ ನನ್ನ ಮುಖಕ್ಕೆ ಸಗಣಿಯನ್ನು ಬಳಿಯಿರಿ. ರಾಣಿಯವರೊಂದಿಗೆ ಖುದಾಬಕ್ಷನು ಅವರ ಕಡೆಯ ನೌಕರ ಮತ್ತು ಸಿಪಾಯಿ, ಸಮಯ ಬಂದರೆ ಆತನು ಸೇವೆಗೆ ಸಿದ್ಧನಿದ್ದು ಗುಂಡಿಗೆ ಎದೆ ಕೊಡಲು ಮುಂಬರುವನು ಎಂದು ತಿಳಿಸಿ. ಸಂಬಳ ಸಾರಿಗೆ ಮಾತನ್ನು ಎತ್ತಬೇಡಿ. ಅವರೇ ಕೊಟ್ಟಿರುವ ಭಾಗ್ಯವು ನನ್ನ ಎರಡು ಹೊತ್ತಿನ ಊಟಕ್ಕೆ ಹೇರಳವಾಗಿರುವುದು." ಎಂದು ಹೇಳಿದನು.

ಮೋತಿಯು "ನನಗೆ ಇಂದು ಬಹಳ ಸಂತೋಷವಾಯಿತು. ನಾನು ರಾಣಿಯವರಿಗೆ ಈ ಮಾತನ್ನು ನಾಳೆಯೇ ತಿಳಿಸುವೆನು. ಆದರೆ ನೀವೆಂದಿಗೂ ಈ ಮಾತನ್ನು ನವಾಬರೊಂದಿಗಾಗಲೀ, ಪೀರ್ಅಲಿಯೊಂದಿಗಾಗಲೀ ಹೇಳ ಬೇಡಿ. ಜ್ಞಾಪಕವಿರಲಿ"

ಎಂದಳು.

"ನಾನು ಯಾರೊಂದಿಗೂ ಏನೂ ಹೇಳಬೇಕಾಗಿಲ್ಲ. ಅಂತ್ಯದಲ್ಲಿ ಪೀರ್ ಆಲಿಯ ವಿಚಾರವಾಗಿ ನಿಮ್ಮದು ಬರಿಯ ಭ್ರಮೆಯೆಂದು ನಿಮಗೇ ವಿಶದವಾಗುವುದು" ಎಂದು ಖುದಾಬಕ್ಷನು ಹೇಳಿದನು.

ಖುದಾಬಕ್ಷನು ಹೊರಟುಹೋದನು.

ರಾಣಿಗೆ ಮೋತೀಬಾಯಿಯು ಮರುದಿನ ಈ ಎಲ್ಲಾ ಸಂಭಾಷಣೆಯನ್ನೂ ಶ್ರುತಪಡಿಸಿದಳು.

## ೪೧

ರಾಣಿಯು ಕುದುರೆ ಸವಾರಿ ಮಾಡಲು ಹೊರಗೆ ಹೊರಡುವಾಗ ಪುರುಷವೇಶ ವನ್ನು ಧರಿಸುತ್ತಿದ್ದಳು. ತಲೆಯ ಮೇಲೆ ಕಬ್ಬಿಣದ ಕುಲಾವಿ, ಅದರ ಮೇಲೆ ರುಮಾಲು, ರುಮಾಲಿನ ಕೊನೆಯು ಕುಚ್ಚಿನಂತೆ ಇಳಿಬಿದ್ದು ಗಾಳಿಗೆ ಹಾರಾಡುತ್ತಿದ್ದಿತು. ಕುಪ್ಪಸದ ಮೇಲೆ ನಿಲುವಂಗಿ, ಪಾಯಿಜಾಮೆಯನ್ನು ತೊಟ್ಟು ಇವುಗಳ ಮೇಲೆ ಸೊಂಟದ ಪಟ್ಟಿಯನ್ನು ಬಿಗಿದಿರುತ್ತಿದ್ದಳು. ಈ ಪಟ್ಟಿಯ ಎರಡು ಪಕ್ಕಗಳಲ್ಲಿಯೂ ಒಂದೊಂದು ಪಿಸ್ತೂಲು ಮತ್ತು ಒರೆಯಲ್ಲಿ ಖಡ್ಗಗಳು ಇರುತ್ತಿದ್ದವು. ಇವೇ ಅಲ್ಲದೆ ಒಂದೊಂದು ಬಾರಿ ಭರ್ಜಿಯನ್ನು ತೆಗೆದುಕೊಂಡು ಹೋಗುತ್ತಿದ್ದಳು. ಇಷ್ಟು ಶಸ್ತ್ರಾಸ್ತ್ರಗಳನ್ನೂ ಧರಿಸಿ ಕುದುರೆಯನ್ನು ನಾಗಾಲೋಟದಿಂದ ವೇಗವಾಗಿ ಓಡಿಸುತ್ತಿದ್ದಳು. ಅವಳಿಗೆ ಕಾಥೇವಾಡಿನ ಕುದುರೆಗಳ ಮೇಲೆ ಬಹಳ ಪ್ರೇಮ. ಅದರಲ್ಲೂ ಬಿಳಿಯ ಬಣ್ಣದ್ದು. ರಾಣಿಯು ಕುದುರೆಗಳ ಲಕ್ಷಣವನ್ನು ಚೆನ್ನಾಗಿ ತಿಳಿದುಕೊಂಡಿದ್ದಳು.

ಅವಳು ಕುಲಾವಿಯನ್ನು ಧರಿಸಿ ರುಮಾಲನ್ನು ಕಟ್ಟುವುದರಲ್ಲಿ ಒಂದು ಅನಾನು ಕೂಲವೂ ಕಂಡು ಬರುತ್ತಿದ್ದಿತು.—ಅವಳ ಉದ್ದವಾದ ಕೇಶಧಾಮ. ವಿಧವೆಯಾಗಿದ್ದುದರಿಂದ ಮಹಾರಾಷ್ಟ್ರದ ಪದ್ಧತಿಯಂತೆ ಕೂದಲು ತೆಗೆಯುವುದರಲ್ಲಿ ಯಾವ ಬಾಧೆಯೂ ಇರಲಿಲ್ಲ. ತನ್ನ ಕೂದಲಿನ ಮೇಲೆ ಅವಳಿಗೆ ಅಂತಹ ಮೋಹವೂ ಇರಲಿಲ್ಲ. ಕಾಶಿಗೆ ಹೋಗಿ ಮುಂಡನ ಮಾಡಿಸಿಕೊಳ್ಳಲೇ ಎಂದು ಆಲೋಚಿಸಿದಳು. ಪರ್ಯಟನವೂ ಆಗುವುದು ಮತ್ತು ಕಾಶಿಯಲ್ಲಿದ್ದುಕೊಂಡು ಅಲ್ಲಿನ ರಾಜಕೀಯ ಪದ್ಧತಿಗಳನ್ನು ತಿಳಿದುಕೊಳ್ಳಲೂ ಬಹುದು, ಎಂದು ಮನವು ಸೂಚಿಸಿತು. ಜನ್ಮವಿತ್ತ ಮನೆಗೆ ಹೋಗಿ ಅದನ್ನು ಸಂದರ್ಶಿಸಬಹುದೆಂಬ ಮತ್ತೊಂದು ಅಭಿಪ್ರಾಯ ಉದ್ಭವಿಸಿತು.

ವಿಚಾರಮಾಡಿದ ನಂತರ ಡೆಪ್ಯುಟಿ ಕಮಿಷನರ್ ಸಾಹೇಬನ ಅನುಮತಿ

ಇಲ್ಲದೆ ಕಾಶೀಯಾತ್ರೆಯು ನೆರವೇರುವುದಿಲ್ಲವೆಂದು ತಿಳಿದು ಬಂದಿತು.

ಅನುಮತಿಗಾಗಿ ಗಾರ್ಡನ್ ಸಾಹೇಬನಿಗೆ ಅರ್ಜಿಯನ್ನು ಸಲ್ಲಿಸಲಾಯಿತು. ಅವನಿಗೆ ಜವಹರ್‌ಸಿಂಹ ಮುಂತಾದವರು ರಾಣಿಯ ಬಳಿಗೆ ಹೋಗುತ್ತಿದ್ದ ಸಮಾಚಾರವು ಮುಟ್ಟಿದ್ದಿತು. ಅವನು ಈ ವಿಷಯವಾಗಿ ಕ್ರುದ್ಧನಾಗಿದ್ದನು. ಅಲ್ಲದೆ ತನ್ನ ಅಧಿಕಾರವನ್ನು ಚಲಾಯಿಸುವ ಹಮ್ಮಿನಲ್ಲಿದ್ದನು. ಆದುದರಿಂದ ಅರ್ಜಿಯನ್ನು ನಿರಾಕರಿಸಿದನು. ಈ ವಿಚಾರವನ್ನು ಕೇಳಿದವರಿಗೆ ಮನನೊಂದಿತು.

ರಾಣಿಯು "ನಾನು ಹಿಂದೂಸ್ಥಾನಕ್ಕೆ ಸ್ವರಾಜ್ಯ ದೊರಕಿದ ಮೇಲೆಯೇ ಮುಂಡನ ಮಾಡಿಸಿಕೊಳ್ಳುವೆನು. ಇಲ್ಲದಿದ್ದರೆ ಸ್ಮಶಾನದಲ್ಲಿ ಅಗ್ನಿದೇವನೇ ಆ ಕಾರ್ಯವನ್ನು ಮಾಡುವನು" ಎಂದು ಪ್ರತಿಜ್ಞೆ ಮಾಡಿದಳು.

ಅವಳ ಈ ಭೀಷಣಪ್ರತಿಜ್ಞೆಯು ತಿಳಿಯಿತು. ಅವರು ಇದನ್ನು ಕೇಳಿ ಪ್ರಸನ್ನರಾದರು—ಅವರಿಗೆ ಇಷ್ಟು ಸುಂದರ ಕೇಶಧಾಮವು ಅಕಾಲಕ್ಷಯ ಹೊಂದುವುದು ಸ್ವಲ್ಪವೂ ಇಷ್ಟವಿರಲಿಲ್ಲ.

ದಾಮೋದರರಾಯನು ರಾಣಿಯ ಪ್ರೇಮದಲ್ಲಿ ಬೆಳೆದನು. ಯಾವ ಮಾತೆಯೂ ತನ್ನ ಶಿಶುವನ್ನು ಅಷ್ಟು ಆದರದಿಂದ ಸಲಹಿರಲಾರಳು.

ಸಮಯವು ಕಳೆಯುತ್ತಾ ಬಂದಿತು. ಅದರೊಂದಿಗೆ ರಾಣಿಯ ಯೋಚನೆಗಳು ಸಮೃದ್ಧಿಯಾಗಿ ಪುಷ್ಟೀಕೃತವಾಗುತ್ತಾ ಬಂದವು. ಎಲ್ಲೆಲ್ಲಿ ಏನೇನು ನಡೆಯುತ್ತಿದ್ದವೋ ಆ ಸಮಾಚಾರಗಳೆಲ್ಲಾ ಅವಳಿಗೆ ಸಕಾಲಕ್ಕೆ ಮುಟ್ಟುತ್ತಿದ್ದವು. ಅವಳು ಯುದ್ಧಸಾಮಗ್ರಿಗಳನ್ನು ತಯಾರುಮಾಡುವ ಕೆಲಸಗಾರರನ್ನು ಒಟ್ಟುಗೂಡಿಸುವುದರಲ್ಲಿ ಬಹಳ ಶ್ರದ್ಧೆ ವಹಿಸುತ್ತಿದ್ದಳು. ಮತ್ತು ಸಾಮಗ್ರಿಗಳನ್ನೂ ತಯಾರು ಮಾಡಿಸುತ್ತಿದ್ದಳು.

ಈ ವಿಚಾರದಲ್ಲಿ ರಾಣಿಯ ಗೂಢಚಾರರು ಮತ್ತು ವಿಶ್ವಾಸಕರೂ ಬೆಂಬಲಗೊಡುತ್ತಿದ್ದರು. ಇದರಲ್ಲಿ ನಾನಾಸಾಹೇಬ, ರಾವ್‌ಸಾಹೇಬ, ಬಹದ್ದೂರ್‌ಷಹಾ ಮತ್ತು ಔಧಿನ ಸಹಾನುಭೂತಿಯುಳ್ಳ ಜನರು ತಮ್ಮ ತಮ್ಮ ನಿಯುಕ್ತ ಕೆಲಸಗಳಲ್ಲಿ ನಿಷ್ಣಾತರಾಗಿದ್ದರು. ಬಿಹಾರ ಮತ್ತು ಬಂಗಾಳಗಳಲ್ಲಿ ಸ್ವಾತಂತ್ರ್ಯದ ಅಗ್ನಿಜ್ವಾಲೆಯು ಹೊಗೆಯಾಡುತ್ತಿದ್ದಿತು. ಮಹಾರಾಷ್ಟ್ರ, ಮಧ್ಯದೇಶ, ಬುಂದೇಲುಖಂಡ, ಉತ್ತರ ಹಿಂದೂಸ್ಥಾನಗಳಾದರೋ ಈ ಸ್ವಾತಂತ್ರ್ಯದ ಕಿಚ್ಚಿನ ಯೋನಿಯಂತಿದ್ದವು. ಇಲ್ಲಿ ಸ್ತ್ರೀಯರೂ ಕೂಡ ಈ ಕೆಲಸಗಳಲ್ಲಿ ನಿಯುಕ್ತರಾಗಿದ್ದರು.

ರಾಣಿಯು ಜನತೆಯನ್ನು ಒಟ್ಟಾಗಿಸುವ ಸಮಯವು ಒದಗಿದೆಯೆಂದು ಅರಿತಳು. ಆದರೆ ಈ ಸಂದರ್ಭದಲ್ಲಿ ತುರಂತಹಾಗಿ ಜನರನ್ನು ಒಂದುಗೂಡಿಸುವುದು ದುಷ್ಕೃತವಾಗಬಹುದು. ಆದುದರಿಂದ ಒಂದು ಸಲ ತನ್ನ ಸಹಾಯಕರೆಲ್ಲರನ್ನೂ ಒಂದು ಗೂಡಿಸಿ

ನಂತರ ಈ ಯೋಜನೆಯನ್ನು ಮುಂದುವರಿಸಬೇಕೆಂದು ಸಂಕಲ್ಪಿಸಿದಳು. ಪ್ರತಿಯೊಂದು ಕೆಲಸಮಾಡುವಾಗಲೂ ಮೊದಲು ಸೂಕ್ತವಾದ ಆಲೋಚನೆಗಳನ್ನು ಮಾಡಿ ನಂತರ ಅದನ್ನು ಕಾರ್ಯರೂಪಕ್ಕೆ ತರುತ್ತಿದ್ದಳು.

ಈ ಕಾರಣಕ್ಕಾಗಿಯೇ ದಾಮೋದರರಾಯನ ಉಪನಯನ ಮಹೋತ್ಸವವನ್ನು ಏರ್ಪಡಿಸಿ ಆ ಸಮಾರೋಹಕ್ಕೆ ಅನೇಕ ಪ್ರಮುಖರನ್ನು ಬೇರೆ ಬೇರೆ ಪ್ರಾಂತ್ಯಗಳಿಂದ ಕರೆಸಿ ಅವರನ್ನು ಒಟ್ಟುಗೂಡಿಸಿ ಮುಂದಿನ ಕಾರ್ಯಕ್ರಮವನ್ನು ಪರಾಮರ್ಶಿಸಬೇಕೆಂದು ಯೋಚಿಸಿದಳು.

ಈ ಮಹೋತ್ಸವಕ್ಕೆ ಒಂದು ಲಕ್ಷ ರೂಪಾಯಿಗಳ ಅವಶ್ಯಕತೆಯಿದ್ದಿತು. ಅವಳಲ್ಲಿ ನಗದು ಹಣವಿರಲಿಲ್ಲ.

ದಾಮೋದರರಾಯನಿಗೆ ಆರು ವರ್ಷಗಳು ತುಂಬಿ ಏಳನೇ ವರ್ಷವು ಉದಯಿಸಿದ್ದಿತು. ಅದು ಉಪನಯನಕ್ಕೆ ಸಕಾಲವಾಗಿದ್ದಿತು. ಅಲ್ಲದೆ ಅದೇ ವರ್ಷದಲ್ಲಿ ಒಂದು ದೊಡ್ಡ ಸಮ್ಮೇಳನವು ನಡೆಯಬೇಕಾದುದು ಅವಶ್ಯಕವೆಂದು ಅವಳ ಮತವಾಗಿದ್ದಿತು.

ಮೋತೀಬಾಯಿ ಮುಂತಾದವರು ಆಂಗ್ಲೇಯರಿಗೆ ಅವರ ಹಿಂದೂಸ್ಥಾನಿ ಸೈನ್ಯದ ಬಗ್ಗೆ ಸಂತುಷ್ಟತೆಯುಂಟಾಗಿದೆಯೆಂದು ಸಮಾಚಾರ ತಿಳಿಸಿದರು.

ರಾಣಿಯು ಪುರೋಹಿತರನ್ನು ಕರೆಸಿ ಮುಹೂರ್ತವನ್ನು ನಿಶ್ಚಯಿಸಿದಳು. ಮುಹೂರ್ತ ನಿಶ್ಚಯವಾದ ತರುವಾಯ ರಾಣಿಯು ದಾಮೋದರರಾಯನ ಹೆಸರಿನಲ್ಲಿ ಆಂಗ್ಲೇಯರ ಖಜಾನೆಯಲ್ಲಿದ್ದ ಆರು ಲಕ್ಷ ರೂಪಾಯಿಗಳಲ್ಲಿ ಒಂದು ಲಕ್ಷವನ್ನು ಈ ಮುಹೂರ್ತಕ್ಕೆ ಕೊಡಿಸಬೇಕೆಂದು ಅರ್ಜಿಯನ್ನು ಗಾರ್ಡನ್ ಸಾಹೇಬನ ಬಳಿಗೆ ಕಳುಹಿಸಿದಳು.

ಮೊಟ್ಟಮೊದಲು ಗಾರ್ಡನ್ನನಿಗೆ ಅರ್ಜಿಯನ್ನು ನಿರಾಕರಿಸಬೇಕೆಂದು ತೋರಿತು. ನಂತರ ಯೋಚಿಸಿ ಹಿಂದೂಗಳಿಗೆ ಇದೊಂದು ಮುಖ್ಯವಾದ ಸಮಾರಂಭವೆಂದು ಭಾವಿಸಿ ಅಂತಿಮನಿರ್ಣಯವನ್ನು ಮುಂದೆ ಹಾಕಿದನು.

ಆತನು ಈ ವಿಷಯವಾಗಿ ಜನರನ್ನು ಪ್ರಶ್ನಿಸಲಾರಂಭಿಸಿದನು. ಆಲಿಬಹದ್ದೂರನನ್ನು ವಿಚಾರಿಸಲು ಆತನು ಬ್ರಾಹ್ಮಣರಿಗೆ ಈ ಕರ್ಮವು ಅತ್ಯವಶ್ಯಕವೆಂದು ತಿಳಿಸಿದನು. ಸೇಠ್ ಸಾಹುಕಾರರನ್ನು ಕೇಳಲು ಅವರು ಅದು ಅನಿವಾರ್ಯವೆಂದರು. ಅಂತ್ಯದಲ್ಲಿ ನಿರ್ಣಯವನ್ನು ತನ್ನ ಕೈಕೆಳಗಿನ ಅಧಿಕಾರಿಯ ನಿಶ್ಚಯಕ್ಕೆ ಬಿಟ್ಟನು. ಆ ಪೇಶ್ಕಾರನನ್ನುಕೇಳಲು ಆತನು "ಹುಜೂರ್, ಉತ್ತಮಜಾತಿ ಹಿಂದೂಗಳಲ್ಲಿ, ಅದರಲ್ಲೂ ಬ್ರಾಹ್ಮಣರಲ್ಲಿ ಈ ಕಾರ್ಯವನ್ನು ಯಾವ ಕಾರಣದಿಂದಲೂ ನಿಲ್ಲಿಸಲಾಗುವುದಿಲ್ಲ" ಎಂದು ಹೇಳಿದನು.

ಗಾರ್ಡನ್ನನು ನಂತರ ಕಮಿಷನರನನ್ನೂ, ಕಮಿಷನರನು ಲೆಫ್ಟಿನೆಂಟ್ ಗೌರ್ನ ರನ್ನೂ ಅನುಮತಿಗಾಗಿ ಪ್ರಾರ್ಥಿಸಿದರು. ಅಂತ್ಯದಲ್ಲಿ ಝಾನ್ಸಿಯ ನಾಲ್ಕು ಪ್ರಮುಖರ ಜಾಮೀನು ದೊರಕಿದರೆ ಆಗ ಗಾರ್ಡನ್ನನ ಇಷ್ಟಪ್ರಕಾರ ಹಣವನ್ನು ಕೊಡಬಹು ದೆಂದು ಉತ್ತರ ದೊರಕಿತು.

ಗಾರ್ಡನ್ ಸಾಹೇಬನು ರಾಣಿಗೆ ಈ ರೀತಿಯಾಗಿ ಸಂದೇಶ ಕಳುಹಿಸಿದನು. "ಖಜಾನೆಯಲ್ಲಿರತಕ್ಕಂತಹ ಹಣವು ಅಪ್ರಾಪ್ತವಯಸ್ಕನಾದ ದಾಮೋದರರಾಯನಿಗೆ ಸೇರಿದುದು. ಒಂದು ವೇಳೆ ಪ್ರಾಪ್ತವಯಸ್ಕನಾಗಿ ಸರ್ಕಾರದ ಮೇಲೆ ದಾವಾ ಹೂಡಿ ದರೆ ಆಗ ಸರ್ಕಾರವು ತನ್ನ ಬೊಕ್ಕಸದಿಂದ ಈ ಹಣವನ್ನು ತೆರಬೇಕಾಗುವುದು. ಆದುದರಿಂದ ನನ್ನ ಮನಸ್ಸಿಗೆ ಒಪ್ಪಿಗೆಯಾಗುವಂತಹ ನಾಲ್ಕು ಜನ ಪ್ರಮುಖರನ್ನು ಜಾಮೀನಾಗುವುದಕ್ಕೆ ಏರ್ಪಡಿಸುವುದು."

ರಾಣಿಗೆ ಈ ಅಪಮಾನದಿಂದ ಉಂಟಾದ ಕ್ಷೋಭೆಯ ಪ್ರಮಾಣವನ್ನು ಯಾವ ಮಾನಸಿಕ ಬಲದಿಂದ ತನ್ನ ಕೋಪವನ್ನು ತಡೆದಳೋ ಆ ಮನಸ್ಸಿಗೇ ಗೊತ್ತು. ತನ್ನ ಸ್ವಂತ ಹಣಕ್ಕಾಗಿ "ನನ್ನ ಮನ ಒಪ್ಪುವ ನಾಲ್ಕು ಜಾಮೀನುದಾರರ" ಅವಶ್ಯ ಕತೆ!

ಆಂಗ್ಲೇಯರ, ಆಂಗ್ಲೇಯ ಸರ್ಕಾರದ, ಗಾರ್ಡನ್ನನ ಅಹಂಕಾರವು ಮಿತಿ ಮೀರಿದೆಯೆಂದು ಝಾನ್ಸಿಯ ಪ್ರಮುಖರನೇಕರು ಯೋಚಿಸಿದರು.

ಝಾನ್ಸಿಯಲ್ಲಿ ನಾಲ್ಕೇನು ನಾಲ್ವತ್ತು ಪ್ರಮುಖರು ಬೇಕಾದರೂ ಇದ್ದರು. ರಾಣಿಗಾಗಿ ಜಾಮೀನು ನಿಲ್ಲಲು ಎಲ್ಲರೂ ಸಿದ್ಧರಿದ್ದರು.

ಕೆಲವರು ಖುದಾಬಕ್ಷ ಮತ್ತು ದಿವಾನ ರಘುನಾಥಸಿಂಹರೊಡನೆ "ಅರ್ಜಿಕೊಡ ಬೇಕಾದಷ್ಟು ಮಹತ್ತರವಾದ ಆತಂಕವೇನು? ಇಷ್ಟು ಹಣವನ್ನು ನಾವುಗಳೇ ನಜ ರಾಗಿ ರಾಣಿಗೆ ಒಪ್ಪಿಸಬಹುದಾಗಿದ್ದಿತು" ಎಂದು ಹೇಳಿಕೊಂಡರು.

ಆದರೆ ರಾಣಿಗೆ ತನ್ನ ಹಣವನ್ನು ಹೊಂದಬೇಕೆಂಬ ಹಠವಿದ್ದಿತು. ಆದುದರಿಂದ ಅವಳು ಆ ಪ್ರಸ್ತಾಪವನ್ನು ಸ್ವಾಗತಿಸಲಿಲ್ಲ.

ಗಾರ್ಡನ್ ಸಾಹೇಬನ ಮುಂದೆ ಜಾಮೀನು ಕೊಡಲು ನಾಲ್ವರು ಮಹನೀ ಯರು ಮುಂದೆ ಬಂದರು. ಲಾಲಾ ಭೀಮಲಾಲ್, ಮಗನ್‌ಗಂಧಿ, ಮೋತಿ ಖತ್ರಿ ಮತ್ತು ಶ್ಯಾಮ ಚೌಧುರಿ.

ಗಾರ್ಡನ್ನನು ಇವರನ್ನು ನಿರುತ್ಸಾಹಿಗಳಾಗಿ ಮಾಡಬೇಕೆಂದೆಣಿಸಿ "ಸರಿಯಾಗಿ ಯೋಚಿಸಿ ಕೆಲಸಮಾಡಿ; ದಾಮೋದರರಾಯನು ಪ್ರೌಢವಯಸ್ಕನಾದಮೇಲೆ ದಾವಾ ಹೂಡಲು ಮೂರು ವರ್ಷಗಳ ವರೆಗೆ ಅವನಿಗೆ ಅವಧಿಯುಂಟು" ಎಂದು ಎಚ್ಚರ ಗೊಳಿಸಿದನು.

ಅವರು ಅವಶ್ಯಬಿದ್ದಾಗ ಜಾಮಿನಾನು ಹಣವನ್ನು ತಾವೇ ಸ್ವಂತವಾಗಿ ನಗದು ರೂಪಿನಲ್ಲಿ ವಾಪಸ್ಸು ಕೊಡಲು ಒಪ್ಪಿರುವುದಾಗಿ ಭರವಸೆಯಿತ್ತರು.

ಗಾರ್ಡನ್ನನು ಈ ಉತ್ತರವನ್ನು ಕೇಳಿ ಲಜ್ಜಿತನಾಗಿ ಸಾಮಾನ್ಯ ಜಾಮಿನಿನ ಮೇಲೆ ಒಂದು ಲಕ್ಷ ರೂಪಾಯಿಗಳನ್ನು ಕೊಟ್ಟನು.

ನಿಯುಕ್ತಸಮಯಕ್ಕೆ ಸರಿಯಾಗಿ ಬ್ರಹ್ಮೋಪನಯನವು ಏರ್ಪಟ್ಟಿತು. ದೂರ ಪ್ರಾಂತ್ಯಗಳಿಂದ ಬಹುಮಂದಿ ಝಾನ್ಸಿಗೆ ಬಂದು ಗುಂಪು ಸೇರಿದರು. ಝಾನ್ಸಿಯ ಜನಸಂಖ್ಯೆಯೇ ಹೇರಳವಾಗಿದ್ದಿತು. ನವಾಬ್ ಆಲೀಬಹದ್ದೂರನು ಕೂಡ ಸಹಾಯ ವೆಸಗಲು ನಿಂತನು.

ಶುಭಮುಹೂರ್ತದಲ್ಲಿ ದಾಮೋದರರಾಯನಿಗೆ ಬ್ರಹ್ಮೋಪದೇಶವು ಸಾಂಗವಾಗಿ ನೆರವೇರಿತು. ಜನರು ಪರಮ ಸಂತುಷ್ಟರಾಗಿ ಯಥೇಚ್ಛವಾಗಿ ನಜರನ್ನು ತಂದು ಒಪ್ಪಿಸಿದರು. ಲಕ್ಷಾಂತರ ರೂಪಾಯಿಗಳು ಬಂದು ಸೇರಿದವು.

ನಂತರ ಸಂತೋಷಕೂಟವೂ ಏರ್ಪಟ್ಟಿತು. ವಾದ್ಯಸಂಗೀತಗಳೊಡನೆ ದುರ್ಗಾ ಬಾಯಿಯ ನೃತ್ಯವು ನಡೆಯಿತು. ಇದಾದನಂತರ ಜನಿತ ಅತಿಥಿಗಳೊಡನೆ ಪ್ರತ್ಯೇಕ ಕೂಟವು ನಡೆಯಿತು. ರಾಣಿ ಲಕ್ಷ್ಮೀಬಾಯಿಯು ಬಿಳಿಯ ಸೀರೆಯನ್ನುಟ್ಟು ಒಂದು ಉನ್ನತ ಪೀಠದಲ್ಲಿ ಮಂಡಿಸಿದ್ದಳು. ಅವಳ ಅಕ್ಕಪಕ್ಕದಲ್ಲಿ ಆಪ್ತ ಸಖಿಯರೂ, ಸ್ವಲ್ಪ ದೂರದಲ್ಲಿ ನಾನಾಸಾಹೇಬ, ಅವನ ತಮ್ಮ, ತಾತ್ಯಾಟೋಪೆ, ದಿವಾನ್ ಜವಹರಸಿಂಹ, ರಘುನಾಥಸಿಂಹ, ಖುದಾಬಕ್ಷ ಇತ್ಯಾದಿ ಆಸನಗಳನ್ನು ಅಲಂಕರಿಸಿದ್ದರು.

ರಾಣಿಯು "ಈ ಯಜ್ಞವು ಹೇಗೆ ನಿಮ್ಮಗಳ ಸಹಾಯದಿಂದ ಸಫಲವಾಯಿತೋ ಅದೇ ಪ್ರಕಾರ ಆ ದೊಡ್ಡ ಯಜ್ಞವನ್ನು ಕೈಗೂಡಿಸಬೇಕು" ಎಂದಳು.

ನಾನಾಸಾಹೇಬನು "ಒಳ್ಳೆಯ ಕೆಲಸಗಾರರೂ ಮತ್ತು ಅವಶ್ಯಕವಾದ ಸಾಮಾನು ಗಳು ದೊರೆತಿವೆ. ಯಜ್ಞ ಸಾಮಗ್ರಿಗಳನ್ನು ಹೊಂದಿಸುವವರು ಅಶ್ವಮೇಧಯಾಗಕ್ಕೆ ಬೇಕಾಗುವ ಕುದುರೆಗಳಿಗೆ ಏರ್ಪಾಡುಮಾಡಿರುವರು" ಎಂದನು.

ತಾತ್ಯಾ—ನಾನು ಸ್ವಲ್ಪ ಅರ್ಥವಾಗುವ ಸಾಧಾರಣ ಭಾಷೆಯಲ್ಲಿ ಮಾತನಾಡ ಬೇಕೆಂದಿರುವೆನು.

ರಾಣಿ—ಅಗತ್ಯವಾಗಿ ಮಾತನಾಡಬಹುದು, ಇಲ್ಲಿರುವವರೆಲ್ಲರೂ ನಮ್ಮ ಆಪ್ತರು, ಹೊರಗೆ ಸ್ತ್ರೀಯರ ಪ್ರಬಲವಾದ ಪಹರೆಯಿದೆ. ಕೆಲಸದ ವಿಷಯವಾಗಿ ಮಾತುಕಥೆ ಗಳಾದನಂತರ ಅಧಿವೇಶನವು ಸಮಾಪ್ತವಾಗುವುದು.

ತಾತ್ಯಾ—ಉತ್ತರ ಮತ್ತು ಪೂರ್ವ ಹಿಂದೂಸ್ಥಾನದಲ್ಲಿ ಕೆಲಸವು ಜಾಗ್ರತೆ ಯಾಗಿ ನಡೆಯುತ್ತಿದೆ. ಆಂಗ್ಲೇಯರು ಪ್ರತಿಭಟನೆಯನ್ನು ಕಂಡು ತಾವು ತಯಾರಿಸು ತ್ತಿದ್ದ ಕೋಟೆಗಳ ತಯಾರಿಕೆಯನ್ನು ಹೆಚ್ಚು ಕಡಿಮೆ ನಿಲ್ಲಿಸಿದ್ದಾರೆ. ಆದರೆ ಅದರ

ವಿಷಯವಾಗಿ ಉತ್ಪನ್ನವಾದ ದ್ವೇಷವು ಸ್ವಲ್ಪವೂ ಕಡಿಮೆಯಾಗಿಲ್ಲ. ಈಗ ಆಂಗ್ಲೇಯರು ಹಿಂದೂ ಸಿಪಾಯಿಗಳನ್ನು ಹಣೆಗೆ ತಿಲಕವನ್ನಿಟ್ಟು ಕವಾತಿಗೆ ಬರಲು ಅನುಮತಿಸುವುದಿಲ್ಲ. ಆದುದರಿಂದ ಅವರಲ್ಲಿ ಮನಸ್ತಾಪ ಹರಡುತ್ತಿದೆ.

ಖುದಾಬಕ್ಷ—ಇಲ್ಲಿನ ಸೈನ್ಯದಲ್ಲಿರುವ ಮುಸಲ್ಮಾನಿ ಸಿಪಾಯಿಗಳಲ್ಲಿಯೂ ಆವೇಶವು ತುಂಬಿದೆ. ಅವರ ಧರ್ಮವನ್ನು ಹಾಳು ಮಾಡುವುದಕ್ಕೆ ಯಾವ ಚರ್ಬಿಯ ತೋಟಿಗಳನ್ನು ಜಾರಿಗೆ ತಂದಿದ್ದರೋ ಅದನ್ನು ಸಂಪೂರ್ಣವಾಗಿ ನಿಲ್ಲಿಸಿಲ್ಲ.

ತಾತ್ಯಾ—ಒಂದಾನೊಂದು ಕಾಲದಲ್ಲಿ ಆಂಗ್ಲೇಯ ಪ್ರತಿನಿಧಿಯ ಮಸ್ತಕವು ಬಾದಷಹನು ಕಾಲಿಡುವ ಪೀಠವನ್ನು ಮುಟ್ಟುತ್ತಿದ್ದಿತು. ಈಗ ನಮ್ಮ ತಲೆಗಳ ಮೇಲೆ ಅವರು ಕಾಲಿಡುವಂತಾಗಿದೆ *. ಕಲಾ ಕೋವಿದರ ಕಲೆ, ಶಿಲ್ಪಿಕಾರರ ಶಿಲ್ಪ, ಮತ್ತು ಇನ್ನೂ ಅನೇಕ ವೃತ್ತಿಗಳು ನಾಶವಾದವು. ಈಗ ಧರ್ಮಕರ್ಮಗಳನ್ನು ಕೊನೆಗಾಣಿಸುವುದರಲ್ಲಿದ್ದಾರೆ. ದೇಶವನ್ನೂ ಮತ್ತು ಪ್ರಜೆಗಳನ್ನೂ ಈ ದಬ್ಬಾಳಿಕೆಯಿಂದ ರಕ್ಷಿಸುವ ಕಾಲ ಬಂದಿದೆ.

ರಾಣಿ—ಇನ್ನೂ ಕೆಲವು ಕಾರ್ಯಗಳನ್ನು ಪೂರಯಿಸುವುದಿದೆ ಎಂದು ನನ್ನ ಅಭಿಪ್ರಾಯ.

ರಘುನಾಥಸಿಂಹ—ನಿಮ್ಮಾಜ್ಞೆಯಂತೆ ನಾವು ಬುಂದೇಲುಖಂಡದಿಂದಲೇ ಪ್ರಾರಂಭಿಸಲು ಸಿದ್ಧರಿದ್ದೇವೆ.

ರಾಣಿ—ಈಗಲೇ ಬೇಡ. ಓರ್ಛ, ಅಜಯಗಡ ಮತ್ತು ಛತ್ರಪುರದ ರಾಜರು ಇನ್ನೂ ಬಾಲಕರು. ಈ ರಾಜ್ಯದ ಮೇಲಾಳ್ವಿಕೆಯು ಆಂಗ್ಲೇಯರ ಕೈಯ್ಯಲ್ಲಿದೆ. ಇದಲ್ಲದೆ ಕ್ರಾಂತಿಯನ್ನು ಆರಂಭಿಸಿದರೇ ದರೋಡೆಗಾರರು ಹೆಚ್ಚಿಕೊಳ್ಳುವರು. ನಮ್ಮ ಜನರಿಗೆ ಇದರಿಂದ ತೊಂದರೆಯುಂಟಾಗುವುದು. ನಮ್ಮಲ್ಲಿ ಸುಸಜ್ಜಿತವಾದ ಸೇನೆಯು ಸೇರುವವರೆಗೆ ನಾವು ಈ ಕೆಲಸವನ್ನು ಪ್ರಾರಂಭಿಸಕೂಡದು. ಆಂಗ್ಲೇಯರನ್ನು ಎದುರಿಸುವುದರ ಜೊತೆಗೆ ಈ ಜನೋಪದ್ರವಿಗಳನ್ನೂ ಎದುರಿಸಬೇಕಾಗುವುದು. ಇಲ್ಲದಿದ್ದರೆ ಜನರ ಕೋಪವು ಆಂಗ್ಲೇಯರ ಕಡೆಯಿಂದ ನಮ್ಮ ಮೇಲೆ ತಿರುಗುವುದು. ಹಿಂದೂಸ್ಥಾನಿ ಸಿಪಾಯಿಗಳನ್ನು ನಮ್ಮ ಕಡೆಗೆ ಸೆಳೆಯಬೇಕು. ಯಾವಾಗ ಈ ವ್ಯವಸ್ಥೆಗಳು ಸಮರ್ಪಕವಾಗಿರುವುದೋ ಆಗ ನನ್ನ ಸಮ್ಮತಿಯನ್ನು ಕೊಡುತ್ತೇನೆ.

ರಾಣಿಯ ಈ ಮಾತಿಗೆ ಎಲ್ಲರೂ ಸಮ್ಮತಿಯಿತ್ತರು.

---

* ಸರ್ ೧೯೧೨ ರಲ್ಲಿ ಜಾರ್ಜ ರಸಲ್‌ನನ್ನು ಕಳುಹಿಸಿದ ಪತ್ರ, ಪರಿಶಿಷ್ಟವನ್ನು ನೋಡಿ.

## ೪೨

ಮಹುವಿನ ಶಿಬಿರದಿಂದ ಮೀರತ್ತಿನ ಛಾವನಿಯವರೆಗೂ ಮತ್ತು ಅಲ್ಲಿಂದ ಡಮ್‌ಡಮ್ ಬ್ಯಾರಕ್‌ಪುರಗಳ ಛಾವನಿಗಳವರೆಗೂ ಅಲ್ಲಲ್ಲೇ ವಿವಿಧ ಕಾರ್ಯಕಲಾಪಗಳು ಕಾಣತೊಡಗಿದವು. ಈ ಛಾವನಿಗಳಲ್ಲಿ ಸಾಧುಗಳೂ ಫಕೀರರೂ ವಿವಿಧ ವೇಷರೂಪಗಳನ್ನು ಧರಿಸಿ ಕ್ರಾಂತಿಯ ಕಾರ್ಯಕ್ರಮವನ್ನು ಮಾಡತೊಡಗಿದರು.

ಗವಾಲಿಯರಿನ ದಂಡಿನಲ್ಲಿ ನಾರಾಯಣಶಾಸ್ತ್ರಿಯು ಛೋಟಿಯನ್ನು ಕರೆದುಕೊಂಡು ಗಾಯನ ನರ್ತನ ಮಾಡಲಾರಂಭಿಸಿದನು. ಛೋಟಿಯ ಹಾಡುಗಳನ್ನು ಕೇಳಿ ಸಿಪಾಯಿಗಳು ಆಕರ್ಷಿತರಾದರು. ಕಡೆಯಲ್ಲಿ ಎಲ್ಲರೂ ಸಂತುಷ್ಟರಾಗಿ ಹಣ ಕೊಡಲಾರಂಭಿಸಿದರು.

ನರ್ತಕಿಯು "ನೀವು ಸಿಂಧ್ಯಾ ಸರ್ಕಾರದ ನೌಕರರೋ ಅಥವಾ ಆಂಗ್ಲೇಯರ ನೌಕರರೋ ?" ಎಂದು ಕೇಳಿದಳು.

"ಆಂಗ್ಲೇಯರ ನೌಕರರು."

"ಆಂಗ್ಲೇಯರ ಉಪ್ಪನ್ನು ತಿನ್ನುವವರ ಹಣವನ್ನು ಮುಟ್ಟುವುದಿಲ್ಲ." ಎಂದು ವೈಯ್ಯಾರದಿಂದ ಹೊರಟುಹೋದಳು.

ಸಿಪಾಯಿಗಳು ನಾರಾಯಣಶಾಸ್ತ್ರಿಯನ್ನು ಕುರಿತು "ಇವಳಾರು, ಬಹಳ ಗರ್ವಿಷ್ಟಳಂತೆ ಕಾಣುತ್ತಾಳೆ ?" ಎಂದು ಕೇಳಿದರು.

ನಾರಾಯಣ—ಅವಳೊಬ್ಬ ಬೈರಾಗಿನಿಯೇ, ಆದರೆ ಝಾನ್ಸಿ ರಾಣಿಯ ರಾಜ್ಯದ ಹುಡುಗಿ.

"ಅವಳ ರಾಜ್ಯವು ಕೈತಪ್ಪಿಹೋಯಿತಲ್ಲ ?"

"ಆಂಗ್ಲೇಯರು ಬಾಯಿ ಸಾಹೇಬರಿಂದ ಕಸಿದುಕೊಂಡರು. ಪುನಃ ಹಿಂದಿರುಗಿ ಬಂದೇ ಬರುವುದು."

ಶಿಬಿರದ ಸಿಪಾಯಿಗಳು ಹೊತ್ತು ಹೊತ್ತಿಗೆ ಕವಾತು ಮಾಡಲು ಹೋಗುವರು. ಮರುಮಾತಿಲ್ಲದೆ ದಿನಚರಿಯನ್ನು ನಡೆಸುವರು. ಆದರೆ ಎಲ್ಲವೂ ನಿರಾಸಕ್ತತೆಯಿಂದ.

ಆಂಗ್ಲೇಯರಿಗೆ ಮೇಲಿನ ಸವಿಮಾತುಗಳೂ ಮತ್ತು ನಯವಿನಯಗಳೂ ಮಾತ್ರ ಕಂಡು ಬರುತ್ತಿದ್ದವು. ಆದರೆ ಅಂತರಂಗದಲ್ಲಿ ಅಡಗಿದ್ದ ಕೋಲಾಹಲವು ಅವರಿಗೆ ತಿಳಿದಿರಲಿಲ್ಲ. ಅವರಿಗೆ ಹಿಂದೂಸ್ಥಾನವು ಸ್ವಪ್ನ ಪ್ರಾಯದಂತೆ ನಿಮಿಷ ಮಾತ್ರದಲ್ಲಿ ಕೈ ಸೇರಿತು. ಅಂತೆಯೇ ಅವರು ರಾಜ್ಯಭಾರವನ್ನು ನಡೆಸುತ್ತಾ ಬಂದರು. ಈ ಸ್ವಪ್ನವು ಎಂದೂ ಮುರಿಯುವುದಿಲ್ಲವೆಂದು ಭ್ರಮಿಸಿದ್ದರು. ಹಿಂದೂಸ್ಥಾನವನ್ನು ಸುಲಭದಲ್ಲಿ ಗಳಿಸಿದ್ದಾಯಿತು; ಆದರೆ ಶಾಶ್ವತವಾಗಿ ತಮ್ಮ ಕೈಯ್ಯಲ್ಲಿ ನಿಲ್ಲುವುದಿಲ್ಲವೆಂಬ ಅಂಶವನ್ನು

ಅವರು ಅರಿತಿರಲಿಲ್ಲ. ಹೊರಗಿನಿಂದ ಬಂದ ರಾಜ್ಯನಿರ್ಮೂಪಕರಿಗೆ ಈ ರಾಜ್ಯವನ್ನು ಪರಾಜಿತಮಾಡಲು ಹೆಚ್ಚು ಕಾಲ ಹಿಡಿಯಲಿಲ್ಲ. ವಿಜೃಂಭಣೆಯಿಂದ ಪಟ್ಟಾಭಿಷೇಕ ಮಾಡಿಕೊಂಡರು. ರಾಜ ಸಿಂಹಾಸನಗಳನ್ನು ಒಡೆದು ತಲೆ ಕೆಳಗು ಮಾಡಿದರು, ಆದರೆ ಪ್ರಭುತ್ವದೃಷ್ಟಿಯಿಂದ ಅವರ ಇರುವಿಕೆಯು ಕೇವಲ ಭಾವನಿಯ ಸರಹದ್ದಿಗೆ ಒಳಪಟ್ಟದ್ದಿತು.

ಮುಖ್ಯವಾಗಿ ಜನತೆಗೆ ಕ್ರೋಧೋತ್ಪನ್ನಮಾಡಿ, ಅಸಂತುಷ್ಟತೆಯನ್ನು ಪ್ರಸರಿಸಿ ಯಾರುತಾನೇ ಯಾವ ಅಭುಕ್ತಮೂಲೆಯಲ್ಲೇ ಆಗಲಿ ರಾಜ್ಯಭಾರಮಾಡಲು ಸಾಧ್ಯವೆ? ಅದೂ ಅಲ್ಲದೆ ಈ ದೇಶದ ಜನರು ವ್ಯಕ್ತಿತ್ವವುಳ್ಳವರು, ಮಹಾಸಂಸ್ಕೃತರು; ಹೀಗಿದ್ದೂ ವಿದೇಶೀ ಶಾಸನವನ್ನು ಅವರು ಬಹುದಿನ ಸಹಿಸರು. ಆದುದರಿಂದಲೇ ಅವರ ಅಂತರಾತ್ಮವು ಸುಲಭದಲ್ಲಿಯೇ ಸ್ತ್ರೀಪುರುಷ ಮುಖಂಡರ ಮಾತನ್ನು ಲಾಲಿಸುತ್ತಾ, ಮನಸ್ಸಿನಲ್ಲಿಯೇ ಯಾವಾಗ ಸಮಯವು ದೊರಕುವುದೋ, ಎಂದು ಈ ಹೊಣೆಯನ್ನು ಕಳೆದುಕೊಳ್ಳುವೆವೋ ಎಂದು ಸುಸಂಧಿಗಾಗಿ ಹಾತೊರೆಯುತ್ತಿದ್ದರು.*

ಗಾರ್ಡನ್ ಮತ್ತು ಸ್ಕೀನ್ ಮುಂತಾದ ಆಂಗ್ಲೇಯರು ಇಲ್ಲಿನ ಜನರು ಶುದ್ಧ ಮೂಢರು ಮತ್ತು ಅವಿವೇಕಿಗಳು. ಅಲ್ಪವೇತನ ಪಡೆಯುವ ಬಹು ಸಂಖ್ಯಾತ ಹಿಂದುಗಳು ಉತ್ತಮವೇತನ ಗಳಿಸುವ ಆಂಗ್ಲೇಯರಿಗೆ ನಿರಂತರವೂ ಅಡಿಯಾಳಾಗಿ ಸಹಕರಿಸುತ್ತಿರುವರು ಎಂದು ಆಲೋಚಿಸಿದರು.

ಆಂಗ್ಲೇಯರ ಎಲ್ಲಾ ಸ್ವಾರ್ಥಕಾರ್ಯಗಳೂ ಶಾಸ್ತ್ರ ಮತ್ತು ವೈಜ್ಞಾನಿಕ ಡೌಲಿನಲ್ಲಿ ನಡೆಯುತ್ತಿದ್ದವು. ಕೇವಲ ಈ ಡೌಲಿನಿಂದ ಯಾವ ಪರಿವರ್ತನೆಯನ್ನೂ ಹೊಂದದೇ ಇದ್ದುದು ಭಾರತೀಯ ಮಾನವ ಪ್ರಕೃತಿ.

ರೈಲು, ತಂತಿ, ಇತ್ಯಾದಿ ಇಲಾಖೆಗಳು ಜಾರಿಗೆ ಬಂದವು. ಕೆರೆಕಟ್ಟೆಗಳನ್ನು ಉತ್ತಮಗೊಳಿಸಿ ನಾಲೆಗಳನ್ನು ತೋಡಿಸಿದರು. ಢಕಾಯಿತರನ್ನು ದರೋಡೆಗಾರರನ್ನು ಮಟ್ಟಹಾಕಿದರು. ರೈತಾಪಿ ಜನರು ಯಾವ ಬಾಧಕವೂ ಇಲ್ಲದೆ ಸಾಗುವಳಿ ಮಾಡಲಾರಂಭಿಸಿದರು. ದೇವಸ್ಥಾನ ಮತ್ತು ಮಸೀದಿಗಳಲ್ಲಿ ಸ್ವೇಚ್ಛಾನುಸಾರ ಪೂಜೆ ಪುರಸ್ಕಾರಗಳನ್ನು ನೆರವೇರಿಸ ಬಹುದಾಗಿದ್ದಿತು. ಪಾಠಶಾಲೆಗಳು ತೆರೆಯಲ್ಪಟ್ಟವು. ರಸ್ತೆಗಳನ್ನು ಮಾಡಿಸಿ, ಸಾಲು ಮರಗಳನ್ನು ನೆಡಿಸಿದರು. ಪಂಚಾಯಿತಿಗಳನ್ನು ಮುಚ್ಚಿ ನ್ಯಾಯಾಲಯಗಳನ್ನು ತೆರೆದರು. ಆದರೆ ಹಿಂದೂ ಮುಸಲ್ಮಾನರ ಮನಸ್ಸಿನಲ್ಲಿ ತಮ್ಮಿಂದ ಕಸಿದುಕೊಂಡ ಅಧಿಕಾರವು ಪುನಃ ಎಂದು ತಮ್ಮ ಕೈ ಸೇರುವುದೋ ಎಂದು ಆಶಾಕಾಂಕ್ಷಿತರಾಗಿದ್ದುದನ್ನು ಆಂಗ್ಲೇಯರು ಅರಿತು ಕೊಳ್ಳಲಿಲ್ಲ.

---

* ಪರಿಶಿಷ್ಟದಲ್ಲಿ ಸರ್‌ಜಾನ್ ಮಾಲ್ಕಮ್ಮರ ಹೇಳಿಕೆಯನ್ನು ನೋಡಿ.

# ಮಧ್ಯಾಹ್ನ

## ೪೩

ದಿವಾಲಿಯು ಸಂಭ್ರಮದಿಂದ ಮುಗಿದಿದ್ದಿತು. ಸಂಪ್ರದಾಯದಂತೆ ಲಕ್ಷ್ಮೀ ಪೂಜೆಯು ನಡೆಯಿತು. ದೀಪಗಳನ್ನು ಹೊತ್ತಿಸಿದರು. ನಗರವೆಲ್ಲವೂ ಜಗಜಗಿಸುತ್ತಿದ್ದಿತು. ಝಾನ್ಸಿಯ ಕಿಲ್ಲೆಯ ಮೇಲೆಯೂ ಕೂಡ ಹಿಂದೂ ಮತ್ತು ಮುಸಲ್ಮಾನ ಸಿಪಾಯಿಗಳು ದೀಪಗಳನ್ನು ಹೊತ್ತಿಸಿದರು. ಷಹರಿನಲ್ಲಿದ್ದ ಲಕ್ಷ್ಮೀಬಾಯಿಯ ಅರಮನೆಯ ಮೇಲೂ ದೀಪಗಳು ಜ್ವಲಿಸಿದವು. ಆದರೆ ಅವಳ ಹೃದಯದಲ್ಲಿ ನಿಸ್ತಬ್ಧತೆಯಿದ್ದಿತೆ ವಿನಹ ಯಾವ ಉತ್ಸಾಹವೂ ಇರಲಿಲ್ಲ.

ಈ ಬಾರಿ ಆಂಗ್ಲೇಯರ ಬಂಗಲೆಗಳ ಮೇಲೆ ದೀಪೋತ್ಸವವಿರಲಿಲ್ಲ. ಏಕೆಂದರೆ ಈ ಸಂಪರ್ಕಗಳಿಂದ ಅವರ ಈಸಾಯಿ ಮತಕ್ಕೆ ಧಕ್ಕೆ ತಗಲುವುದೆಂದು ಅವರ ಅಭಿಪ್ರಾಯವಾಗಿದ್ದಿತು. ಇದರಿಂದ ಜನರಿಗೆ ಆಂಗ್ಲೇಯರು ನಮ್ಮವರಲ್ಲ ಮತ್ತು ಎಂದಿಗೂ ನಮ್ಮವರಾಗಲು ಸಾಧ್ಯವಿಲ್ಲ ಎಂಬ ಭಾವನೆಯು ಪ್ರಮಾಣ ಪೂರ್ವಕವಾಗಿ ನಿದರ್ಶನಕ್ಕೆ ಬಂದಿತು.

ಮನೆಯ ಬಾಗಿಲಲ್ಲಿ ದೀಪವನ್ನು ಇಟ್ಟನಂತರ ಜ್ಯೂಹಿಯೂ ಮೋತೀಬಾಯಿಯೂ ಬಂದರು. ಜ್ಯೂಹಿಯು ಯೌವ್ವನದ ವಸಂತದಲ್ಲಿದ್ದಳು. ಅವಳ ಕಣ್ಣುಗಳು ಹೊಳೆಯುತ್ತಿದ್ದವು. ನೀಳವಾದ ಭ್ರೂಯುಗ್ಮಗಳು ಬಹು ಆಕರ್ಷಣೀಯವಾಗಿದ್ದವು. ಆದರೆ ಇಂದು ಆಕೆ ಸ್ವಲ್ಪ ಖಿನ್ನಳಾಗಿದ್ದಳು. ಮೋತೀಬಾಯಿಯು ತನ್ನ ಸೇವಕಿಯನ್ನು ಹೊರಗಡೆ ಕುಳ್ಳಿರಿಸಿ ಜ್ಯೂಹಿಯೊಡನೆ ಏಕಾಂತದಲ್ಲಿ ಮಾತನಾಡಲು ಒಳಗೆ ಕರೆದು ಕೊಂಡು ಹೋದಳು.

"ಇಂದೇಕೆ ಇಷ್ಟು ನಿರಾಶಳಾಗಿರುತ್ತಿ, ಏನು ಕಾರಣ ?" ಎಂದು ಮೋತಿಯು ಕೇಳಿದಳು.

"ಬಿಟ್ಟೂರಿನ ಸರದಾರರು ಬಂದಿರುವರು" ಎಂದು ಜ್ಯೂಹಿಯು ಉತ್ತರವಿತ್ತಳು.

ಮೋತೀ—ಹಾಗಿದ್ದಮೇಲೆ ನೀನು ಪ್ರಸನ್ನಳಾಗಿರಬೇಕಲ್ಲವೆ ? ಆದರೆ ಅದಕ್ಕೆ ತೀರ ವ್ಯತಿರಿಕ್ತವಾಗಿ ಮುಖವು ಬಾಡಿಹೋಗಿರುವುದಲ್ಲಾ ?

ಜ್ಯೂಹಿ—ಇಂದು ಮೊದಲಬಾರಿ ಮಾತುಕಥೆ ನಡೆಯಿತು. ಆದರೆ ತಡೆದು ತಡೆದು ಮಾತನಾಡಿದರು.

ಮೋತೀ—ಯಾವ ವಿಚಾರವಾಗಿ ?

ಜ್ಯಾಹಿ—ಅವರು ತಮ್ಮ ನಿವಾಸಸ್ಥಾನಕ್ಕೆ ನನ್ನನ್ನು ಕರೆಸಿದರು. ಹಿಂದೆ ಈ ರೀತಿ ಯಾವಾಗಲೂ ನಡೆದಿರಲಿಲ್ಲ. ನನಗೆ ಬಹಳ ಸಂಕೋಚವಾಯಿತು. ಆದರೆ ಧೈರ್ಯಮಾಡಿ ಹೊರಟೆ. ಅವರ ಇದಿರಿಗೆ ಹೋದಾಗ ನಾಚಿಕೆಯ ಭರದಲ್ಲಿ ಬಹು ಕಷ್ಟದಿಂದ ಮುಗುಳ್ನಗೆ ನಕ್ಕು ಕೈಮುಗಿದು ಸುಮ್ಮನೆ ನಿಂತುಬಿಟ್ಟೆ.

ಮೋತೀ—ಅಭಿನಯವೇನೂ ತೆಗೆದುಹಾಕುವಂತೆ ಇರಲಿಲ್ಲವಲ್ಲ?

ಜ್ಯಾಹಿ—ಅಭಿನಯವೇನು ಇರಲಿಲ್ಲ. ಅಭಿನಯಮಾಡಬೇಕೆಂದಿದ್ದೆ. ಆದರೆ ಮಾಡಲಾಗಲಿಲ್ಲ. ನಾನು ನನ್ನನ್ನೇ ಮರೆತುಬಿಟ್ಟೆ. ಅವರು ಹುಬ್ಬುಗಂಟಿಕ್ಕಿ "ಏನು ಸೇನೆಯಲ್ಲಿ ಹೋಗಿ ಹೀಗೆ ನಿಂತುಕೊಳ್ಳುವೆಯೋ ?" ಎಂದು ಕೇಳಿದರು. ಆಗ ನಾನು ಬಿನ್ನವಿಸಿಕೊಂಡೆ.

ಮೋತೀ—ಅವರು ಬಹಳ ಅವಸರದಲ್ಲಿದ್ದಿರಬೇಕು ಅಥವಾ ಅವಸರಪಡಿಸಿರಬೇಕು........

ಜ್ಯಾಹಿ—ನನಗೆ ಅತ್ಯಾಶ್ಚರ್ಯವಾಯಿತು. ಮೊದಲು ಅನೇಕ ವೇಳೆ ನನ್ನನ್ನು ನೋಡಿದ್ದರು.

ಮೋತೀ—ಇತ್ತೀಚೆಗೆ ?

ಜ್ಯಾಹಿ—ಇಲ್ಲ. ಕೆಲವು ತಿಂಗಳುಗಳ ಹಿಂದೆ ಅವರು ಕರ್ನಲ್ ಸಾಹೇಬರ ಮನೆಯಲ್ಲಿ ತಂಗಿದ್ದಾಗ ನೋಡಿದ್ದರು.

ಮೋತೀ—ಆಗೇನಾಯಿತು? ನನಗೆ ಅರ್ಥವಾಗಲಿಲ್ಲ.

ಜ್ಯಾಹಿ—ಅವರನ್ನು ನೋಡಿ ನನ್ನ ಮನಸ್ಸು ಅಲ್ಲಿಂದ ಕಾಲ್ತೆಗೆಯಲೆಳಸದೆ ಅಲ್ಲೋಲಕಲ್ಲೋಲವಾಯಿತು. ಅವರು ಒಂದೇ ಒಂದು ಕ್ಷಣಮಾತ್ರ ನನ್ನನ್ನು ನೋಡಿದರು. ಆ ಒಂದು ಕ್ಷಣದೊಳಗಾಗಿ ಅವರು ನನ್ನನ್ನು ಎಷ್ಟೋ ಗಂಟೆಗಳ ಕಾಲ ನೋಡುತ್ತಿದ್ದಂತೆ ಭಾಸವಾಯಿತು. ನಾನು ಒಡನೆಯೇ ನನ್ನ ದೃಷ್ಟಿಯನ್ನು ಅಲ್ಲಿಂದ ತಿರುಗಿಸಿದೆ. ಮತ್ತೆ ಅವರು ಮನೆಯ ಮುಂದೆ ಹಾದು ಹೋದರು. ನಾನು ಸಮಯ ಸಾಧಿಸಿ ಆ ಹೊತ್ತಿಗೆ ಅವರ ಕಣ್ಣಿಗೆ ಬಿದ್ದೆ. ಅವರು ಕ್ಷಣಮಾತ್ರ ನನ್ನನ್ನು ನೋಡಿದರು. ಆದರೆ ನಾನು ಮಾತ್ರ ಅವರನ್ನು ಬಹಳ ಹೊತ್ತಿನವರೆಗೆ ಪುನಃ ಪುನಃ ನೋಡುತ್ತಿದ್ದೆ. ಅವರು ಮುಂದೆ ಹೊರಟು ಹೋದರು. ನನಗೆ ಬಹಳ ದುಃಖವಾಯಿತು.

ಮೋತೀ—ದುಃಖವೇನೋ ಆಗುತ್ತದೆ. ಆದರೆ ಮುಂದೇನಾಯಿತು.

ಜ್ಯಾಹಿ—ಅವರು ಇಲ್ಲಿ ಇನ್ನೂ ಎರಡು ಮೂರು ದಿನಗಳಿದ್ದರು. ನಾನು ಮತ್ತೆ ಅವರನ್ನು ನೋಡಲು ಪ್ರಯತ್ನಿಸಿದೆ. ಅವರು ನನ್ನನ್ನು ನೋಡಿದರು. ನಾನು ಸಂತೃಪ್ತಳಾದೆ. ಅವರು ಹೊರಟುಹೋಗುವ ದಿವಸ ಲಜ್ಜೆಯನ್ನು ಬೀದಿಗೊತ್ತಿ

ಕಿಟಕಿಯಿಂದ ಅವರಿಗೆ ನಮಸ್ಕರಿಸಿದೆ. ಅವರೂ ನಸುನಗುತ್ತಾ ನನ್ನ ವಂದನೆಯನ್ನು ಸ್ವೀಕರಿಸಿದರು.

ಮೋತೀ—ಸರಿಯೆ. ಮತ್ತೇನಾಯಿತು?

ಜ್ಯೂಹಿ—ಅವರಿಗೆ ಸಮಯ ಒದಗಿ ಮತ್ತೆ ನನ್ನ ಮನೆಗೆ ಕೃಪೆಗೈದರು.

ಮೋತೀ—ಅದನ್ನು ನೀನು ಮೊದಲೇ ಹೇಳಿದ್ದೆ.

ಜ್ಯೂಹಿ—ನನಗೆ ಭಯವಾಯಿತು. ತಲೆಯನ್ನು ತಗ್ಗಿಸಿ ನಿಂತುಬಿಟ್ಟೆ. ಆಗ ಅವರು "ನೀನು ನನ್ನನ್ನು ಸಂತುಷ್ಟಗೊಳಿಸಬೇಕಾದರೆ ಮೋತೀಬಾಯಿಯವರು ಯಾವ ಕೆಲಸವನ್ನು ನಿಯಂತ್ರಿಸುವರೋ ಅದನ್ನು ಬಹು ಜಾಗರೂಕತೆಯಿಂದ ಮಾಡು" ಎಂದರು. ನಾನು ಸಮ್ಮತಿ ಸೂಚಿಸುತ್ತಲೇ ತಲೆಯಾಡಿಸಿದೆ. ಆದರೆ ಬಾಯಿಯಿಂದ ಯಾವ ಶಬ್ದವೂ ಹೊರಬೀಳಲಿಲ್ಲ. ಪುನಃ ಅವರು "ಹೃದಯದ ಅಂತರ್ಯವನ್ನು ನಾಲಿಗೆಯು ಬಹಿರಂಗಪಡಿಸಬೇಕಾದುದಿಲ್ಲ. ನನಗೆ ಕ್ಷೇಮ ಸಮಾಚಾರವು ತಿಳಿಯುತ್ತಲೇ ಇರುವುದು. ದೇವರು ನಿನಗೆ ಸಹಾಯಮಾಡಲಿ" ಎಂದು ಹೇಳಿ ಹೊರಟುಹೋದರು. ನಾನು ಅವರ ದೃಷ್ಟಿಯೊಂದಿಗೆ ನನ್ನ ದೃಷ್ಟಿ ಬೆರಸಲು ನೋಡಿದೆ, ಆದರೆ ಅದು ಸಾಧ್ಯವಾಗಲಿಲ್ಲ. ಅವರು ಹೊರಟುಹೋದರು. ಅವರ ಬೆನ್ನಿನ ಕಡೆಯೇ ನೋಡುತ್ತಾ ನಿಂತೆ. ನಂತರ ನಾನೇನು ಮಾಡುತ್ತಿರುವೆನೆಂಬುದು ನಿಮಗೇ ತಿಳಿದಿದೆ.

ಮೋತೀ—ನಾನು ಮಹಾರಾಣಿಯವರಿಗೆ ಎಲ್ಲವನ್ನು ತಿಳಿಸುತ್ತಲೇ ಇರುವೆನು. ಅವರು ಸರದಾರ ಸಾಹೇಬರಿಗೆ ಸೂಚನೆಯನ್ನು ಕೊಡುತ್ತಲೇ ಇರುವರು.

ಜ್ಯೂಹಿ—ಈ ನಡುವೆ ಒಂದು ದಿನದ ಮಟ್ಟಿಗೆ ಪುನಃ ಬಂದಿದ್ದರು.

ಮೋತೀ—ಹೂಂ.

ಜ್ಯೂಹಿ—ಆವಾಗಲೂ ಮನೆಗೆ ಬಂದು ಸ್ವಲ್ಪ ಹೊತ್ತಿದ್ದು ಹೊರಟು ಹೋದರು. ನಾನು ಮನದಣಿಯುವಂತೆ ನೋಡಬೇಕೆಂದು ನಿರ್ಧರಿಸಿದ್ದೆ. ಆದರೆ ಅದು ಸಫಲವಾಗಲಿಲ್ಲ. ಅವರು ಒಂದೆರಡು ಪ್ರಶ್ನೆಯನ್ನು ಕೇಳಿದರು ಮತ್ತು ಕೆಲವು ಮಾತುಗಳನ್ನಾಡಿದರು. ನನ್ನ ಶಿರವೂ, ನನ್ನ ಕಣ್ಣುಗಳೂ ಎತ್ತಲಾರದಷ್ಟು ಭಾರವಾದಂತೆ ಭಾಸವಾದವು. ಅವರ ಮಾತನ್ನು ಕೇಳುತ್ತಾ ಸಮ್ಮತಿ ಸೂಚಿಸುತ್ತಲಿದ್ದು ಕೊನೆಗಣ್ಣಿನಲ್ಲಿ ನೋಡುತ್ತಿದ್ದೆ. ಅವರು ಮಾತನಾಡುತ್ತಾ ಮುಗುಳ್ನಗೆ ಸೂಸುತ್ತಿದ್ದರು. ನನಗೆ ಕಚಕುಳಿ ಇಟ್ಟಂತಾಗುತ್ತಿತ್ತು. ಘಟ್ಟಿಯಾಗಿ ನಗಲೇ ಎನ್ನಿಸಿತು. ಆದರೆ ನಗಲಾಗಲಿಲ್ಲ. ಮಾತನ್ನೂ ಬಹಳ ಕಡಿಮೆಯಾಗಿ ಆಡಿದೆ. ನಡೆದ ಸಂಭಾಷಣೆಯನ್ನು ನಿಮಗೆ ತಿಳಿಸಿದ್ದೇನೆ. ಆದರೆ ಬಾಕಿ ಎಲ್ಲವನ್ನು ತಿಳಿಸುವುದಕ್ಕೆ ಆ ದಿನ ಅವಕಾಶ ಒದಗಲಿಲ್ಲ.

ಮೋತೀ—ಅಯ್ಯೋ! ಹುಚ್ಚಿ. ಇದರಲ್ಲಿ ವ್ಯಾಕುಲಿತಳಾಗುವುದಕ್ಕೇನಿದೆ?

ಜ್ಯೂಹಿ—ಇಲ್ಲ ಬಾಯಿಜೀ, ನಾನು ಮಾಡುತ್ತಿರುವುದೆಲ್ಲವೂ ನಿಮ್ಮ ಅಪ್ಪಣೆಯ ಮೇರೆಗೆ ಮತ್ತು ಉಪ್ಪಿಟ್ಟ ರಾಜರಾಣಿಯರ ಋಣ ತೀರಿಸುವುದಕ್ಕೆ. ನಾನು ಕರ್ತವ್ಯಕ್ಕಾಗಿ ಪ್ರಾಣ ಒಪ್ಪಿಸಲು ಸಿದ್ಧಳಿರುವೆನು. ಆದರೇನು ಅವರು ಒಂದು ಬಾರಿ ಕೂಡ ನನ್ನ ತಲೆಯನ್ನು ನೇವರಿಸಲಾಗುತ್ತಿರಲಿಲ್ಲವೆ?

ಮೋತೀ—ಅದೇನೋ ಅವರ ತಪ್ಪು. ಕೆಲಸಮಾಡುವವರ ಮನಸ್ಸಂತೋಷ ಪಡಿಸುವುದಕ್ಕೂ, ಉತ್ತೇಜನ ಕೊಡುವುದಕ್ಕೂ ಸವಿಮಾತಿನ ಮಳೆಯನ್ನೇ ಕರೆಯಬೇಕು.

ಜ್ಯೂಹಿ—ಅವರನ್ನು ನಿಮಗಿಂತ ಹೆಚ್ಚಾಗಿ ನೋಡುತ್ತಿರುತ್ತೇನೆ.

ಮೋತೀ—ನಾನು ಎಂದಾದರೊಂದು ದಿನ ನಿನಗೆ ಮಹಾರಾಣಿಯವರ ಸಂದರ್ಶನ ಮಾಡಿಸುತ್ತೇನೆ. ಅವರು ನಿನ್ನೊಡನೆ ಎಲ್ಲವನ್ನೂ ವಿಶದವಾಗಿ ಮಾತನಾಡುವರು.

ಜ್ಯೂಹಿ—ನನ್ನ ಪ್ರಿಯತಮನೂ ಅಲ್ಲಿಗೆ ಬರುತ್ತಿರುವನಲ್ಲವೆ?

ಮೋತೀ—ಬಹಳ ಸಲ ಬಂದು ಹೋಗಿರುವನು. ಆದರೆ ರಾಣಿಯು ಈಗ ಹೆಚ್ಚು ಜನರನ್ನು ಕಾಣುವುದು ಉಚಿತವಲ್ಲವೆಂದು ಭಾವಿಸುತ್ತಾಳೆ. ನೀನು ಅವರ ಸಖಿಯರ ಸೇನೆಯಲ್ಲಿ ಸೇರುವ ವೇಳೆಯೂ ಒಂದು ದಿನ ಬರುವುದು.

ಜ್ಯೂಹಿ—ಅವರ ಚರಣಯುಗ್ಮಗಳಲ್ಲಿ ನನ್ನ ಶಿರವನ್ನರ್ಪಿಸಲು ತವಕಿಸುತ್ತೇನೆ.

ಮೋತೀ—ಸರದಾರ ಸಾಹೇಬರೊಂದಿಗೆ ನಾನೇನು ನಿವೇದಿಸಿಕೊಂಡೆ?

ಜ್ಯೂಹಿ—ಆತನ ತಾಟಸ್ಥ್ಯವು ನನ್ನ ಹೃದಯವನ್ನು ಭೇದಿಸುತ್ತಿದ್ದಿತು. ಆದುದರಿಂದ ಮೊದಲು ಉಂಗುಷ್ಠದಿಂದ ನೆಲವನ್ನು ಕೆರೆಯುತ್ತಾ ನಿಂತೆ. ನಂತರ ಧೈರ್ಯಮಾಡಿ "ಸೇನೆಯಲ್ಲಿರುವ ಹಿಂದೂ ಮುಸಲ್ಮಾನರನ್ನು ಕ್ರೈಸ್ತರನ್ನಾಗಿ ಪರಿವರ್ತಿಸಲು ಪ್ರಯತ್ನವು ನಡೆಯುತ್ತಿದೆ. ಸೈನಿಕರು ವಿಮೋಚನೆಗಾಗಿ ಬೇಡಿಕೊಂಡರು. ಸೈನಿಕರಲ್ಲಿ ಹೆಚ್ಚು ವೇತನದ ಪ್ರಲೋಭವನ್ನೂ ಬಿತ್ತಿದ್ದಾರೆ. ಕ್ರೈಸ್ತರಾಗಿ ಪರಿವರ್ತಿತರಾದರೆ ಅವರ ವೇತನ ಮತ್ತು ಭತ್ಯಗಳು ಹೆಚ್ಚಿಸಲ್ಪಡುವುವು. ಮತ್ತು ಯಾರು ಮೊಟ್ಟಮೊದಲು ಕ್ರೈಸ್ತರಾಗುವರೋ ಅವರಿಗೆ ಹವಾಲ್ದಾರ್ ಹುದ್ದೆಯು ಒಡನೆಯೇ ದೊರಕುವುದು ಎಂದು ಆಶೆಯನ್ನು ಹುಟ್ಟಿಸಿದ್ದಾರೆ" ಎಂದೆ. ಮನಸ್ಸು ರೋಧಿಸುವಂತಾಗಿತ್ತು. ಆದುದರಿಂದ ಮತ್ತೇನೂ ಹೇಳಲಾಗಲಿಲ್ಲ. ಈಗ ಪೂಜೆ ಮಾಡಬೇಕು ನಂತರ ಉಳಿದದ್ದನ್ನು ಹೇಳುವೆನು ಎಂದು ಹೇಳಿ ಬಿಟ್ಟೆ. ಕಷ್ಟದಿಂದ ಲಕ್ಷ್ಮೀ ಪೂಜೆಯನ್ನು ಮಾಡಿ ದೀಪಗಳನ್ನು ಹೊತ್ತಿಸಿ ನಿಮ್ಮಲ್ಲಿಗೆ ಬಂದೆನು.

ಮೋತೀಬಾಯಿಯು ಜ್ಯೂಹಿಯನ್ನು ರೋದನೆಮಾಡಲು ಬಿಡದೆ ಸಮಾಧಾನ ಪಡಿಸಿ ಹೇಳಿದಳು. "ಹೀಗೆ ಮನಃಕ್ಲೇಶ ಮಾಡಿಕೊಳ್ಳಬಾರದು. ನೋಡು, ಅವರು

ಎಷ್ಟು ಕಠಿಣರಾಗಿದ್ದು ನಾಜೂಕಾಗಿ ಕೆಲಸಮಾಡುತ್ತಲಿದ್ದಾರೆ. ನಾಟಕಶಾಲೆಯಲ್ಲಿ ಆಟ ನೋಡಲು ಬರುತ್ತಿದ್ದವರೆಲ್ಲಾ ಮನೆಯಿಂದೇನು ನಸುನಗುತ್ತಾ ಬರುತ್ತಿದ್ದರೇನು? ಸಂಸಾರದ ಸುಖದುಃಖಗಳನ್ನು ಮರೆಯಲು ಜನರು ನಾಟಕಶಾಲೆಗೆ ಬರುತ್ತಾರೆ. ಅವರ ಪ್ರಶಂಸೆ ಮತ್ತು ಅವಹೇಳನಗಳನ್ನು ಗಣಿಸುತ್ತಾ ರಂಗಮಂಟಪದ ಮೇಲೆ ಮನಃ ಕ್ಲೇಶಮಾಡಿಕೊಂಡರೆ ಆಟವು ಸುಮುಖವಾಗಿ ನೆರವೇರುವುದೋ ಇಲ್ಲ ಕೆಟ್ಟು ಹೋಗುವುದೋ ?

ಜ್ಯೂಹಿಯು ಮೋತೀಬಾಯಿಯ ಭುಜದಮೇಲೆ ತನ್ನ ತಲೆಯನ್ನಿಟ್ಟುಕೊಂಡು "ರಂಗಮಂಟಪದ ಮೇಲೆ ಯಾವಾಗ ತಾನೆ ನಾವು ನಮ್ಮ ನೈಜರೂಪದಲ್ಲಿ ಕಾಣಿಸಿ ಕೊಳ್ಳುತ್ತೇವೆ ?" ಎಂದು ಕೇಳಿದಳು.

ಮೋತೀಬಾಯಿಯು ಜ್ಯೂಹಿಯ ಪ್ರಶ್ನೆಯ ಅರ್ಥವನ್ನು ಕಂಡುಕೊಂಡು "ನಾನು ಅದಕ್ಕೆ ತಕ್ಕ ಉತ್ತರ ಬರಮಾಡಲೇ ?" ಎಂದಳು.

ಜ್ಯೂಹಿಯು ಒಡನೆಯೇ ಕಣ್ಣುಗಳಿಂದ "ಅದು ನಿಮ್ಮಿಂದ ಹೇಗೆ ಸಾಧ್ಯ" ಎಂದು ಕೇಳಿದಳು.

ಮೋತೀ—ನಾನು ರಂಗಮಂಟಪದಮೇಲೆ ನನ್ನನ್ನೇ ಮರೆತು ಅಭಿನೇತ್ರಿ ಯಾಗುತ್ತೇನೆ. ಏನು, ನೀನು ಸಿಪಾಯಿಗಳ ಮುಂದೆ ಲಜ್ಜೆ ಸಂಕೋಚಗಳನ್ನು ತೋರ್ಪಡಿಸುತ್ತೀಯೇನು?

ಜ್ಯೂಹಿ—ಎಂದಿಗೂ ಇಲ್ಲ. ಅಪರಿಚಿತರೊಂದಿಗೆ ಮಾತನಾಡುತ್ತಿರುವೆನೆಂದು ಭಾಸವಾಗುವುದಿಲ್ಲ. ಏನು ಹರಟುತ್ತಿರುವೆನೆಂಬುದೇ ನನಗೆ ತಿಳಿಯುವುದಿಲ್ಲ. ನನ್ನ ಕಣ್ಣುಗಳು ಏನನ್ನೂ ನೋಡುವುದಿಲ್ಲ. ಆದರೆ ಕಿವಿಗಳೆರಡೂ ಯಾವಾಗಲೂ ತೆರೆದೇ ಇರುವುವು.

ಮೋತೀ—ಸರದಾರರೆದುರಿಗೆ?

ಜ್ಯೂಹಿಯು ಉತ್ಸಾಹದಿಂದ ಹೇಳಿದಳು. "ಅವರೆದುರಿಗೆ ನನಗೆ ರೋಮಾಂಚ ವಾಗಿ ಬೆವರಿಳಿದು ಮಾತೇ ಮರೆತುಹೋಗುವುದು. ಏನು, ನೀವು ಅವರೊಂದಿಗೇನಾ ದರೂ ಹೇಳಿಬಿಡುವಿರಾ?

ಮೋತೀಬಾಯಿಯು "ಇಂದೇ ಅವರನ್ನು ಕಂಡು ಎಲ್ಲವನ್ನೂ ಅವರೊಡನೆ ಹೇಳುವೆನು" ಎಂದಳು.

ಜ್ಯೂಹಿಯು ಅನುರೋಧಮಾಡುತ್ತಾ "ಬೇಡ, ನನ್ನ ಪರವಾಗಿ ಏನನ್ನೂ ಹೇಳ ಬೇಡಿ. ಕಡೆಯ ಪಕ್ಷ ನಾನು ನಿಮ್ಮೊಂದಿಗೆ ಹೇಳಿದ ಮಾತುಗಳನ್ನು ವ್ಯಕ್ತಗೊಳಿಸ ಬೇಡಿ. ಬಹುಶಃ ಇದೆಲ್ಲವೂ ನನ್ನ ಭ್ರಮೆಯೇ ಇರಬಹುದು. ಅವರು ಅದನ್ನು ಅನ್ಯಥಾ ಭಾವಿಸಬಹುದು. ಮಹಾರಾಣಿಯವರೂ ನನ್ನ ವಿಷಯದಲ್ಲಿ ಅಸಮಾಧಾನ ಪಡ

ಬಹುದು. ನಾನು ಮಹಾರಾಣಿಯವರನ್ನು ದೇವತೆಯೆಂದು ಭಾವಿಸಿರುವೆನು.” ಎಂದು ಹೇಳಿದಳು.

ಮೋತಿ—ಮೂರ್ಖಳಲ್ಲ. ನೀನು ಆಕ್ಷೇಪಣೆ ಮಾಡಿದೆಯೆಂದು ಅರ್ಥಬರುವಂತೆ ನಾನು ಹೇಳವುದಿಲ್ಲ. ನಿನ್ನ ಕಾರ್ಯಕ್ರಮದ ವಿಚಾರವಾಗಿ ತಿಳಿಸುತ್ತೇನೆ, ಅಷ್ಟೆ. ಅವರು ಸಂತುಷ್ಟರಾಗಿ ನನ್ನನ್ನು ಬರಮಾಡಿಕೊಳ್ಳುವರು.

ಜ್ಯೂಹಿ—ಕರ್ನಲ್ ಸಾಹೇಬರ ಮನೆಗೆ?

ಮೋತೀ—ಮತ್ತೆಲ್ಲಿ? ನಿನ್ನ ಮನೆಗೆ?

ಜ್ಯೂಹಿ—ನಿಮ್ಮ ಮನೆಗೆ ಬರುವೆನು.

ಮೋತೀ—ನೋಡೋಣ. ಅವರು ಎಲ್ಲಿ ಉಚಿತವೆಂದು ಭಾವಿಸುವರೋ ಅಲ್ಲಿ.

## ೪೪

ಅದೇ ಕ್ಷಣ ಮೋತೀಬಾಯಿಯು ಮಹಲ್ಲಿಗೆ ಹೋದಳು. ರಾಣಿಯೂ ಪೂಜೆಯಲ್ಲಿ ನಿರತಳಾಗಿದ್ದಳು. ಲಕ್ಷ್ಮಿಯು ಅವಳ ಇಷ್ಟದೇವತೆ. ಆದುದರಿಂದ ಲಕ್ಷ್ಮೀ ಪೂಜೆಗೆ ಅವಳು ಇತರ ಎಲ್ಲಾ ಕರ್ತವ್ಯಗಳಿಗಿಂತಲೂ ಹೆಚ್ಚು ಗಮನಕೊಡುತ್ತಿದ್ದಳು. ಹೆಬ್ಬಾಗಿಲಿನ ಬಳಿ ನಾನಾಸಾಹೇಬ್ ಮತ್ತು ತಾತ್ಯಾ ಕುಳಿತಿದ್ದರು. ತಾತ್ಯಾ ಮೋತೀಬಾಯಿಯನ್ನು ದೂರದಿಂದಲೇ ನೋಡಿ ಗುರುತು ಹಿಡಿದನು. ಅವಳು ಅವರನ್ನು ಕರೆದುಕೊಂಡು ಹೋಗಿ ಏಕಾಂತದಲ್ಲಿ ಮಾತನಾಡಲುಪಕ್ರಮಿಸಿದಳು.

ತಾತ್ಯಾನು “ಇಲ್ಲಿನ ಪರಿಸ್ಥಿತಿಯು ಸರಿಯಾಗಿ ಏನೂ ತಿಳಿದು ಬರಲಿಲ್ಲ, ಜ್ಯೂಹಿಯನ್ನು ಸ್ವಲ್ಪ ಹೊತ್ತಿಗೆ ಮೊದಲು ಕಂಡಿದ್ದೆ. ಆದರೆ ಅವಳು ಏನೂ ಹೇಳಲಾರದಷ್ಟು ಸ್ಥಂಬಿತಳಾಗಿದ್ದಳು, ಪುನಃ ಬಂದು ತಿಳಿಸುತ್ತೇನೆ ಎಂದು ಆಶ್ವಾಸನೆಕೊಟ್ಟು ಹೊರಟುಹೋದಳು” ಎಂದು ಮಾತಿಗೆ ಉಪಕ್ರಮಿಸಿದನು.

ಮೋತಿಯು ನಿಸ್ಸಂಕೋಚದಿಂದ “ನೀವು ಸ್ತ್ರೀಯರ ನಿಜಪ್ರಕೃತಿಯನ್ನು ಅರಿತುಕೊಂಡಿಲ್ಲ” ಎಂದು ಉತ್ತರಿಸಿದಳು.

“ಸ್ತ್ರೀ ಬುದ್ಧಿಯು ಅಸಾಧ್ಯ ವಕ್ರವಾಗಿ ಚಲಿಸುವುದೆಂದು ಕೇಳಿದ್ದೇನೆ. ಇದುವರೆಗೂ ಈ ವಿಷಯವನ್ನು ಪರಿಶೋಧಿಸಲು ಅವಕಾಶ ದೊರೆಯಲಿಲ್ಲ. ಯಾವಾಗ ಅವಕಾಶ ದೊರಕುವುದೋ ಆಗ ಅರ್ಥಮಾಡಿಕೊಳ್ಳಲು ಯತ್ನಿಸುತ್ತೇನೆ” ಎಂದು ತಾತ್ಯಾ ಹೇಳಿದನು.

ಮೋತೀಬಾಯಿಯು ನಸುನಗುತ್ತಾ “ನೀವು ಬಹುಶಃ ಯಾವಾಗಬೇಕಾದರೂ ಅರ್ಥಮಾಡಿಕೊಳ್ಳಬಹುದು, ಆದರೆ ಅವಶ್ಯಕತೆ ಬಾರದಿದ್ದರೆ ಒಳ್ಳೆಯದೇ ಆಯಿತು.

ಈಗ ನಾನು ಹೇಳುವುದನ್ನು ಕೇಳಿ” ಎಂದಳು.

ತಾತ್ಯಾ—ನಾನು ಧ್ಯಾನಿಸಿಕೇಳುತ್ತಿದ್ದೇನೆ.

ಮೋತೀ—ಸೈನ್ಯದ ಸಿಪಾಯಿಗಳನ್ನು ಬಲವಂತವಾಗಿ ಕ್ರೈಸ್ತಮತಕ್ಕೆ ಪರಿವರ್ತಿಸಲು ಪ್ರಯತ್ನವು ನಡೆಯುತ್ತಿದೆ. ಶ್ರೀ ರಾಮಚಂದ್ರಸ್ವಾಮಿಯನ್ನೂ ಮತ್ತೆ ಪೈಗಂಬರ ಮುಹಮ್ಮದ್ದರನ್ನೂ ಮನಸ್ವೀ ದೂಷಿಸುತ್ತಿರುವರು. ಒಬ್ಬ ಆಂಗ್ಲೇಯ ಅಧಿಕಾರಿಯು ಇನ್ನು ಕೆಲವು ದಿವಸಗಳಲ್ಲಿಯೇ ಅಖಂಡ ಹಿಂದೂಸ್ಥಾನವು ಕ್ರೈಸ್ತಮತವನ್ನವಲಂಬಿಸುವುದು. ಒಂದು ದೇವಸ್ಥಾನವೂ ಉಳಿಯುವುದಿಲ್ಲ, ಒಂದು ಮಸೀದಿಯೂ ಇರುವುದಿಲ್ಲ ಎಂದು ಹೇಳಿಕೊಂಡನು.

ತಾತ್ಯಾ—ಈ ಸಮಾಚಾರವು ಎಲ್ಲಾ ಕಡೆಯಿಂದಲೂ ಬಂದಿರುತ್ತದೆ.

ಮೋತೀ—ಏನು, ನಿಜವಾಗಿಯೂ ಅಂಥಾ ದಿನವು ಬರುವುದೆ?

ತಾತ್ಯಾ—ಧೈರ್ಯವಾಗಿರು, ಅಂತಹ ದಿನವೆಂದಿಗೂ ಬರುವುದಿಲ್ಲ. ಇಲ್ಲಿನ ಸಿಪಾಯಿಗಳು ಎಂತಹ ಭಾವನೆಯನ್ನು ಹೊಂದಿದ್ದಾರೆ ಎಂಬುದನ್ನು ನನಗೆ ತಿಳಿಸು.

ಮೋತೀ—ಯಾವೊಬ್ಬ ಹಿಂದೂ ಅಥವಾ ಮುಸಲ್ಮಾನ ಸಿಪಾಯಿಯಾಗಲೀ ಎಂತಹ ಆಸೆಗೊಳಗಾದರೂ ತನ್ನ ಧರ್ಮವನ್ನು ಬಿಡುವುದಿಲ್ಲ ಎಂಬ ವಿಶ್ವಾಸ ನನಗಿದೆ.

ತಾತ್ಯಾ—ಇದು ನಮ್ಮೆಲ್ಲರಿಗೂ ತಿಳಿದಿರುವ ವಿಷಯ. ಆಂಗ್ಲೇಯರ ದುಷ್ಟ ವ್ಯವಹಾರವು ನಮ್ಮ ಇಲ್ಲಿನ ಸೈನ್ಯದ ಮೇಲೆ ಏನು ಪರಿಣಾಮವನ್ನುಂಟು ಮಾಡಿದೆ ಎಂಬುದನ್ನು ನನಗೆ ಹೇಳು.

ಮೋತೀ—ಅವರಲ್ಲಿ ಕೆಲವರು ಒಡನೆಯೇ ಹೊಡೆದಾಡಲು ತವಕಿಸಿದರು. ಆದರೆ ತಾಳ್ಮೆಗೊಳಗಾಗಿ ನಿಂತರು.

ತಾತ್ಯಾ—ಈಗಿನ್ನೂ ಹೊಡೆದಾಡುವ ಹೊತ್ತು ಬಂದಿಲ್ಲ. ಪ್ರತಿಯೊಂದು ಕಡೆಯಲ್ಲಿಯೂ ಮೂರು ಜನ ನಂಬಿಕೆಗೆ ಅರ್ಹರಾದ ಹುದ್ದೇದಾರರನ್ನು ಆರಿಸಬೇಕು. ಅವರಿಗೆ ಯಾವಾಗ ಏನು ಮಾಡಬೇಕು ಎಂಬುದನ್ನು ಒಂದೆರಡು ತಿಂಗಳಲ್ಲಿ ತಿಳಿಸಲಾಗುವುದು. ಅವರಿಗೆ ಈಗ ಹೇಳಬೇಕಾದುದೇನೆಂದರೆ, ನೀವು ಎಂದಿಗೂ ಈ ನಾಯಿಗಳಾಗುವುದಿಲ್ಲ; ಆದರೆ ನಿಮ್ಮ ತಾಳ್ಮೆಯನ್ನು ಮಾತ್ರ ತೊರೆಯಬೇಡಿ. ಕ್ರೋಧವು ಎಷ್ಟೇ ಉಲ್ಬಣವಾಗಿರಲಿ ಅದನ್ನು ಹೊರಗೆ ತೋರ್ಪಡಿಸಬೇಡಿ; ಇಲ್ಲದಿದ್ದರೆ ಎಲ್ಲಾ ಯೋಜನೆಗಳೂ ಮಣ್ಣುಪಾಲಾಗುವುವು. ಇನ್ನೊಂದು ಬಾರಿ ಬಂದಾಗ ಏನು ಮಾಡಬೇಕು, ಯಾವಾಗ ಮಾಡಬೇಕು ಎಂಬುದನ್ನು ತಿಳಿಸುತ್ತೇನೆ. ಈ ಕೆಲಸವನ್ನು ನೀವೋ ಅಥವಾ ಜ್ಯೂಹಿಯೋ ಮಾಡಬಲ್ಲಿರಾ?

ಮೋತೀ—ನಾನು ಬಹಿರಂಗದಲ್ಲಿ ಬಹಳ ಕಡಿಮೆ ಚಲಿಸುತ್ತೇನೆಂದು ಪ್ರಸಿದ್ಧಿಯಾಗಿದ್ದೇನೆ. ಮಹಲ್ಲಿಗೆ ಬಂದು ಹೋಗುತ್ತಿರುವೆನು. ನಾನು ಸೈನ್ಯ ಶಿಬಿರಗಳಿಗೆ

ನಾಟ್ಯ ನೃತ್ಯಗಳಿಗಾಗಿ ಹೋಗಿ ಬಂದರೆ ಒಡನೆಯೇ ಅನುಮಾನಕ್ಕೆ ಆಸ್ಪದವಾಗುವುದು. ಅಲ್ಲದೆ ಮಹಾರಾಣಿಯವರೂ ಇದಕ್ಕೆ ಸಮ್ಮತಿಸುವುದಿಲ್ಲ. ಜ್ಯೂಹಿಯನ್ನು ಈ ಕಾರಣಕ್ಕಾಗಿಯೇ ಮಹಲ್ಲಿಗೆ ಕರೆಸುವುದಿಲ್ಲ. ಅವಳು ಬಹಳ ರಮ್ಯವಾಗಿ ಹಾಡುತ್ತಾ ನೃತ್ಯ ಮಾಡುವಳು. ಈಶ್ವರನು ಅವಳಿಗೆ ಒಳ್ಳೆಯ ರೂಪ ಲಾವಣ್ಯಗಳನ್ನು, ಆಕರ್ಷಣಾ ಶಕ್ತಿಯನ್ನು ದಯಪಾಲಿಸಿರುವನು. ಅವಳು ನಿಮಗಾಗಿ ಕಾದಿರುವಳು.

ತಾತ್ಯಾ—ನನಗಾಗಿ ! ಈಗ ಕತ್ತಿಯನ್ನು ಸೆಳೆದು ನಿಲ್ಲುವ ಸಮಯ. ವಿಷಯ ಲಾಲಸೆಗಳಲ್ಲಿ ಮುಳುಗುವುದಕ್ಕಾಗುವುದಿಲ್ಲ.

ಮೋತೀ—ಹಾಗಿದ್ದ ಪಕ್ಷದಲ್ಲಿ ಆಕೆಯನ್ನು ನಿಮ್ಮ ಧ್ಯೇಯದಲ್ಲಿ ಮಗ್ನಳಾಗುವಂತೆ ಪರಿವರ್ತಿಸಿ. ಆದುದರಿಂದಲೇ ನಾನು ನಿಮ್ಮನ್ನು ಸ್ತ್ರೀಯರ ಪ್ರಕೃತಿಯನ್ನರಿತವರಲ್ಲವೆಂದು ಹೇಳಿದೆ.

ತಾತ್ಯಾ—ನಾರೀ ಪ್ರಕೃತಿಯು ಪುರುಷ ಪ್ರಕೃತಿಯಿಂದ ಅಷ್ಟೊಂದು ಬೇರ್ಪಟ್ಟಿದೆಯೇನು?

ಮೋತೀ—ಹೇಳಲಾಗುವುದಿಲ್ಲ. ಎಂದಾದರೊಂದು ದಿವಸ ನೀವು ಅರ್ಥಮಾಡಿಕೊಳ್ಳುವಿರಿ.

ತಾತ್ಯಾ—ನನಗೆ ನಾರೀ ಪ್ರಕೃತಿಯು ಸಂಪೂರ್ಣವಾಗಿ ತಿಳಿಯದೆ ಏನೂ ಇಲ್ಲ. ಆದರೆ ನನಗೆ ಮಹತ್ವಪೂರಿತ ಕಾರ್ಯಗಳು ಮುಂದಿರುವುದರಿಂದ ಮತ್ತೇನೂ ತೋರುವುದಿಲ್ಲ.

ಮೋತೀ—ನೀವು ಕೃಪೆಮಾಡಿ ಜ್ಯೂಹಿಯೊಂದಿಗೆ ಸವಿಮಾತನ್ನಾಡಿ. ಒಂದು ಬಾರಿ ಅವಳ ತಲೆಯನ್ನು ನೇವರಿಸಿ ಷಹಭಾಸ್ ಕೊಡಿ. ನಂತರ ಅವಳು ಅವಳ ಚಾತುರ್ಯವನ್ನು ತೋರಿಸುವಳು.

ತಾತ್ಯಾ—ನಿಮ್ಮ ಸಲಹೆಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳುವೆನು.

ಮೋತೀಬಾಯಿಯು ನಕ್ಕು ನುಡಿದಳು. "ನೀವು ಸ್ತ್ರೀಯರಿಂದ ಕಲಿಯಬೇಕಾದುದು ಬಹಳವಿದೆ."

ತಾತ್ಯಾವಿಗೆ ಮೋತೀಬಾಯಿಯ ಸೌಂದರ್ಯದಲ್ಲಿ ವಿಲಕ್ಷಣವಾದ ತೇಜಸ್ಸಿದೆಯೆಂದೂ, ಆ ತೇಜಸ್ಸಿನಲ್ಲಿ ಒಂದು ದೃಢಸಂಕಲ್ಪವು ಅಡಕವಾಗಿದೆಯೆಂದೂ ತೋರಿ ಅವನು ನಗುತ್ತಾ "ಒಪ್ಪಿಕೊಂಡೆ. ಆದರೆ ನಿಮ್ಮ ಜ್ಯೂಹಿಯು ನಾನು ಹೇಳಿದ ಕಾರ್ಯವನ್ನು ಮಾಡುತ್ತಿರುವುದನ್ನೂ ನೋಡಲಿಚ್ಛಿಸುತ್ತೇನೆ."

ಮೋತೀಬಾಯಿಯು ನಗುತ್ತಾ "ನನ್ನ ಜ್ಯೂಹಿಯೆಂದು ಕರೆಯಬೇಡಿ. ನಿಮ್ಮ ಜ್ಯೂಹಿ" ಎಂದಳು.

"ಓಹೊ! ಭೇಷಾಗಿ, ನನ್ನ ಜ್ಯೂಹಿಯೆಂದೇ ಕರೆಯಿರಿ. ಸೈನ್ಯದ ದೇಶೀ ಅಧಿ

ಕಾರಿಗಳ ಮೇಲೆ ಅವಳ ಪ್ರಭಾವವು ಚೆನ್ನಾಗಿ ಮೂಡಿದೆಯೆ ?"

"ಅನೇಕರ ಮೇಲೆ ಉಂಟಾಗಿದೆ."

"ಆ ಪ್ರಭಾವವನ್ನು ಹೆಚ್ಚಿಸಬೇಕು."

"ಹೆಚ್ಚುವುದು."

"ಯಾವ ವಿಧವಾದ ದುಡುಕು, ಸಿಡುಕು, ಸಂಘರ್ಷಣೆಗಳೂ ಆಗದಂತೆ ಪ್ರಯತ್ನಪಡಬೇಕು. ರೀತಿ ಸಮಯಗಳು ನಿಯುಕ್ತವಾಗುವುವು. ಅದರ ದಾರಿಯನ್ನು ಪ್ರತೀಕ್ಷಿಸಿ."

"ಆಗಬಹುದು."

"ಒಂದು ಪಡೆಗೆ ಮೂವರು ಅಧಿಕಾರಿಗಳಂತೆ ಚುನಾಯಿಸಬೇಕು."

"ಜ್ಯೂಹಿಯು ಈ ಕೆಲಸ ಮಾಡಬಲ್ಲಳೆಂದು ನಮಗೆ ಭರವಸೆಯಿದೆ."

"ನಾನು ಇಂದೇ ಅವಳೊಡನೆ ಮಾತನಾಡುವೆನು. ರಾಣಿಸಾಹೇಬರೊಡನೆ ಮಾತನಾಡಲು ಇರುವಿರಷ್ಟೆ ?"

"ಮತ್ತಾವಾಗಲಾದರೂ ಅವರನ್ನು ನೋಡುವೆನು. ನಾನು ಹೇಳಿದುದನ್ನು ಅವರಿಗೆ ನೀವೆ ತಿಳಿಸಿಬಿಡಿ. ನಾನಿನ್ನು ಹೊರಡುತ್ತೇನೆ."

ತಾತ್ಯಾ ಮೊದಲಾದವರು ರಾಣಿಯೊಂದಿಗೆ ಏಕಾಂತದಲ್ಲಿ ಮಾತನಾಡಬೇಕೆಂದಿರುವರೆಂದು ಮೋತೀಬಾಯಿಯು ಅರಿತುಕೊಂಡಳು. ಆದುದರಿಂದಲೇ ಅವಳು ಅಲ್ಲಿ ನಿಲ್ಲದೇ ಹೊರಟುಹೋದಳು.

ಪೂಜೆಯು ಸಮಾಪ್ತವಾದೊಡನೆ ತಾತ್ಯಾ ಮತ್ತು ನಾನಾಸಾಹೇಬ್ ರಾಣಿಯನ್ನು ದರ್ಶನ ಮಾಡಿದರು. ರಾಣಿ ಲಕ್ಷ್ಮೀಬಾಯಿಯು ಸಾಕ್ಷಾತ್ ಲಕ್ಷ್ಮಿಯಂತೆ ತೋರ್ಪಡುತ್ತಿದ್ದಳು.

ನಾನಾ ಹೇಳಲುಪಕ್ರಮಿಸಿದನು. "ಅಜಿಮುಲ್ಲಾಖಾ಼ ಎಂಬ ಆಪ್ತರೊಬ್ಬರನ್ನು ವಿಲಾಯತಿಗೆ ಕಳುಹಿಸಿದ್ದೆ. ಆದರೆ ಮನವಿಯ ಅರ್ಜಿಯು ಸ್ವೀಕೃತವಾಗಲಿಲ್ಲ. ಸ್ವೀಕೃತವಾಗಿದ್ದರೆ ಕಡೇಪಕ್ಷ ಸ್ವಲ್ಪ ಹಣವಾದರೂ ದೊರಕುತ್ತಿತ್ತು. ನಮ್ಮ ದಾದಾಸಾಹೇಬರ ಕಾಲದಲ್ಲಿ ಬಾಕಿ ಬರಬೇಕಾದ ಅರವತ್ತಾರು ಲಕ್ಷ ರೂಪಾಯಿಯಾದರೂ ಸಿಗುತ್ತಿತ್ತು. ಆದರೆ ಆಂಗ್ಲೇಯ ಸರ್ಕಾರವು ನಂಬಿದವರಿಗೆ ದ್ರೋಹ ಮಾಡಿ ಅನ್ಯಾಯ ಮಾಡುತ್ತಿದೆ. ಎಲ್ಲವನ್ನೂ ಅದು ನಿರಾಕರಿಸಿದೆ. ಈಗ ಇದಕ್ಕಾಗಿ ನಾವು ವ್ಯಥೆಪಡಬೇಕಾಗಿಲ್ಲ. ಸಾಕಾದಷ್ಟು ಹಣವು ಬಂದು ಸೇರುವುದು. ಅಜಮುಲ್ಲಾಖಾನನು ದೇಶ ವಿದೇಶಗಳನ್ನು ಸುತ್ತಿ ಬಂದಿರುವನು. ಆತನು ಇಟಲಿ, ತುರ್ಕಿ, ರಷ್ಯಾ, ಇರಾನ್ ಮುಂತಾದ ದೇಶಗಳ ಪರ್ಯಟನ ಮಾಡಿದನು. ಅವನು ತುರ್ಕಿಯೊಡನೆ ಪತ್ರವ್ಯವಹಾರ ನಡೆಸಿರುವನು. ಇಟಲಿಯಲ್ಲಿ ಈಗ ಗ್ಯಾರಿಬಾಲ್ಡಿ ಎಂಬ ಒಬ್ಬ ಪ್ರಸಿದ್ಧ ಪುರುಷ

ನಿರುವನು. ಅವನು ಆಂಗ್ಲೇಯ ನೌಕಾಪಡೆಯನ್ನು ತನ್ನ ನೌಕಾಪಡೆಯಿಂದ ನಷ್ಟ ಪಡಿಸಲು ಉದ್ಯುಕ್ತನಾಗಿರುವನು. ರಷ್ಯಾದಿಂದಲೂ ಸಹಾಯ ದೊರೆಯುವುದು. ಆಂಗ್ಲೇಯರು ಹಿಂದೂಸ್ಥಾನದಲ್ಲಿ ಬಹಿರಂಗವಾಗಿಯೇ ಶಿಕ್ಷಣದ ಹಿನ್ನೆಲೆಯಲ್ಲಿ ಬಹು ನಿಂದನೀಯ ಕಾರ್ಯಮಾಡುತ್ತಿದ್ದಾರೆಂದು ಎಲ್ಲರೂ ಹೇಳುತ್ತಿದ್ದಾರೆ. ಬಾದಷಹ ಬಹದ್ದೂರ್‌ಷಹನು ಇರಾನಿನ ಷಹನಿಗಿಂತ ಹೆಚ್ಚಾಗಿ ಓದು ಬರಹ ಬಲ್ಲವನು. ಕಾಬೂಲ್ ದೇಶವು ನಿರುತ್ಸಾಹಿಯಾಗಿದೆ. ಆದರೆ ಬಹುಶಃ ಇರಾನಿನಿಂದ ಬಾದ ಷಹನಿಗೆ ಸಹಾಯವು ದೊರಕಬಹುದು.

ರಾಣಿ—ಹೊರನೋಟಕ್ಕೆ ಈ ಅಭಿಪ್ರಾಯಗಳ ಪ್ರಭಾವವು ಆಂಗ್ಲೇಯರ ಮೇಲೆ ತಕ್ಕಪರಿಣಾಮವನ್ನೇನೋ ಉಂಟುಮಾಡುವುವು. ಆದರೆ ವಾಸ್ತವದಲ್ಲಿ ಕಾರ್ಯವು ಸದೃಢ ಪ್ರಾಬಲ್ಯದಿಂದ ನಮ್ಮ ದೇಶದಲ್ಲಿಯೇ ನಡೆಯಬೇಕು. ಜನತೆಯು ನಮ್ಮ ಪರವಾಗಿದೆಯೆಂದು ನನಗೆ ನಂಬಿಕೆಯಿದೆ. ಅದೇ ನಮಗೆ ಹಿರಿಯಬೆಂಬಲವು. ಆಂಗ್ಲೇಯರ ಬಳಿ ತರಪೇತಾದ ಹಿಂದೂಸ್ಥಾನಿ ಸೈನ್ಯವಿದೆ. ಅವೆಲ್ಲವೂ ಸಂಪೂರ್ಣ ವಾಗಿ ನಮ್ಮ ವಶವಾಗಬೇಕು. ಫಿರಂಗಿ ಹಾರಿಸುವವರು, ಮತ್ತು ಮದ್ದು ಗುಂಡು ಗಳನ್ನು ತಯಾರಿಸುವ ಕಾರ್ಮಿಕರು ನಮ್ಮಲ್ಲಿರುವರು. ಉಪದ್ರವ ಉಂಟಾದ ಕೂಡಲೇ ಆಂಗ್ಲೇಯರು ತಮ್ಮ ಮದ್ದು ಗುಂಡು ಮುಂತಾದ ಸಾಮಗ್ರಿಗಳನ್ನು ನಾಶ ಪಡಿಸಿ ಬಿಡುವರು. ಆಮೇಲೆ ನಾವು ಖಾಲಿತೋಪುಗಳನ್ನಿಟ್ಟುಕೊಂಡು ಏನೂ ಮಾಡಲಾಗುವುದಿಲ್ಲ.

ತಾತ್ಯಾ—ಅದಕ್ಕೆ ತಕ್ಕ ಏರ್ಪಾಡು ಮಾಡಲಾಗಿದೆ.

ರಾಣಿ—ನಮಗೆ ಗುಂಡು ಹಾರಿಸುವಾಗ ಹಿಂದೊಡೆಯದಂತಹ ಮತ್ತು ಬೇಗ ಕಾವೇರದಂತಹ ತೋಪುಗಳು ಬೇಕಾಗಿವೆ.

ತಾತ್ಯಾ—ಅಂತಹ ತೋಪುಗಳನ್ನು ತಯಾರಿಸುವ ಕಾರ್ಮಿಕರನ್ನು ಹುಡುಕು ತ್ತಿದ್ದೇವೆ. ಕೆಲವರು ದೊರಕಿಯೂ ಇದ್ದಾರೆ. ಝಾನ್ಸಿಯಲ್ಲಿಯೂ ಈ ಕೆಲಸವನ್ನು ಮಾಡುವ ಚತುರರು ಇರುವರೆಂದು ಕೇಳಿರುವೆನು.

ರಾಣಿ—ಇದ್ದಾರೆ. ನಾನು ಕೆಲವರನ್ನು ಒಟ್ಟುಗೂಡಿಸಿಯೂ ಇದ್ದೇನೆ. ಬಹಳ ಕಡಿಮೆಯಾಗಿ ಹೊಗೆ ಕಾರುವಂತಹ ಮದ್ದುಗುಂಡುಗಳನ್ನು ತಯಾರಿಸುವವರನ್ನೂ ಹುಡುಕಿಟ್ಟಿದ್ದೇನೆ.

ನಾನಾ—ಇನ್ನು ಹೆಚ್ಚು ವಿಳಂಬಮಾಡಬಾರದು.

ರಾಣಿ—ಇನ್ನೆಷ್ಟು ದಿನಗಳಾಗಬಹುದು?

ನಾನಾ—ಕೆಲವು ತಿಂಗಳುಗಳಿಗಿಂತ ಅಧಿಕವಾಗಲಾರದು.

ರಾಣಿ—ನನ ಅಭಿಪಾಯದಲಿ ಇನೂ ಸಲ ಶಿಸು ಮತು ವಿಗಹಣದ

ಅವಶ್ಯಕತೆ ಇದೆ.

ತಾತ್ಯಾ—ನನ್ನ ಅಭಿಪ್ರಾಯವೂ ಅದೇ ಆಗಿದೆ. ಬಾಯಿಸಾಹೇಬ್! ಆದರೆ ವಿಸ್ಫೋಟನೆಯು ಶೀಘ್ರದಲ್ಲೇ ಆಗುವುದೆಂದು ತೋರುತ್ತದೆ. ಆಂಗ್ಲೇಯರು ಹಿಂದೂ ಮುಸಲ್ಮಾನ ಸಿಪಾಯಿಗಳನ್ನು ಕ್ರೈಸ್ತರನ್ನಾಗಿ ಪರಿವರ್ತಿಸಲು ಪ್ರಯತ್ನಿಸುತ್ತಿದ್ದಾರೆ. ಸೈನ್ಯದ ನಿಜಸ್ಥಿತಿಯನ್ನರಿಯಲು ಅನೇಕ ಯೋಜನೆಗಳನ್ನು ಕೈಗೊಂಡಿರುವೆನು. ಎಲ್ಲಾ ಕಡೆಯಿಂದಲೂ ಒಂದೇ ವಿಧವಾದ ಸಮಾಚಾರವು ಬರುತ್ತಿದೆ. ಆಂಗ್ಲೇಯ ಕರ್ನಲ್ ಮತ್ತು ಕ್ಯಾಪ್ಟನ್ ಸಾಹೇಬರುಗಳು ಪಾದ್ರಿಗಳಂತೆ ವರ್ತಿಸುತ್ತಿದ್ದಾರೆ. ಅವರು ಮುದ್ರಣಾಲಯದ ಸಹಾಯದಿಂದ ಲಕ್ಷೋಪಲಕ್ಷ ಚಿಕ್ಕ ದೊಡ್ಡ ಪುಸ್ತಕಗಳನ್ನು ಮುದ್ರಿಸಿ ಸೈನಿಕರಿಗೆ ಹಂಚುತ್ತಿದ್ದಾರೆ. ಈ ಪುಸ್ತಕಗಳಲ್ಲಿ ಹಿಂದೂ ಮುಸಲ್ಮಾನ ಧರ್ಮಗಳನ್ನು ಮನಸ್ವೀ ನಿಂದಿಸಿದ್ದಾರೆ. ಇವರ ಮೇಲೆ ವೇತನ ಮತ್ತು ಭತ್ಯಗಳನ್ನು ಹೆಚ್ಚಿಸುವ ಪ್ರಲೋಭವನ್ನು ಒಡ್ಡಿ ಸೈನಿಕರನ್ನು ಕ್ರೈಸ್ತರನ್ನಾಗಿಸಲು ಪ್ರಯತ್ನಿಸುತ್ತಿದ್ದಾರೆ. ಚರ್ಬಿಯಿಂದ ಕೂಡಿದ ತೋಟಿಗಳ ತಯಾರಿಕೆಯನ್ನು ನಿಲ್ಲಿಸಿದ್ದಾರೆಂದು ಭಾವಿಸಿದ್ದೆ. ಆದರೆ ಅವು ಇನ್ನೂ ತಯಾರಾಗುತ್ತ ಇವೆ. ಈ ತೋಟಿಗಳ ವಿಷಯವು ಎಲ್ಲಾ ಕಡೆಗೂ ಹರಡಿದೆ. ಈಗ ಅದು ನಿಶ್ಚಯವಾದ ಸುದ್ದಿಯೆಂದು ಖಂಡಿತವಾಯಿತು. ಇವೆಲ್ಲವೂ ಸಿಪಾಯಿಗಳಿಗೆ ಅಸಮಾಧಾನವನ್ನುಂಟುಮಾಡಿರುವುದು. ಧರ್ಮ ಸಂರಕ್ಷಣೆಗಾಗಿ ಅವರು ಪ್ರಾಣತ್ಯಾಗಮಾಡಲು ಹಾತೊರೆಯುತ್ತಿರುವರು. ಆದುದರಿಂದ ಅವರನ್ನು ಇನ್ನು ಹೆಚ್ಚಾಗಿ ತಡೆಯಲು ಸಾಧ್ಯವಿಲ್ಲ.

ರಾಣಿ—ಯಾವಾಗ ತ್ವರೆಮಾಡಬೇಕೆಂಬ ಆತುರವು ಇರುವುದೋ ಆಗ ಬಿರುಗಾಳಿಯಂತೆ ಕೆಲಸಮಾಡಬೇಕು. ಆದರೆ ಈಗ ಸಮಯಾನುಸಾರ ಕೆಲಸವನ್ನು ಮುಂದುವರೆಸು. ಯುದ್ಧದಲ್ಲಿ ಧರ್ಮದ ಸಮನ್ವಯವಿರಬೇಕು.

ನಾನಾ—ಇದಕ್ಕೆ ಪ್ರಯತ್ನಪಡುತ್ತಿದ್ದೇವೆ. ನಾವು ಇಲ್ಲಿ ಅಲ್ಲಿ ತಿರುಗಾಡುತ್ತಾ ದಕ್ಷಿಣ ದೇಶಕ್ಕೆ ತೀರ್ಥಯಾತ್ರೆಗಾಗಿ ಹೋಗುತ್ತೇವೆ. ರಾಜಮಹಾರಾಜರೊಂದಿಗೆ ಹೆಚ್ಚು ಸಂಪರ್ಕವಿಟ್ಟುಕೊಳ್ಳುವುದಿಲ್ಲ. ಆದರೆ ಜನನಾಯಕರೊಡನೆ ಕಲೆತು ಮಾತನಾಡುತ್ತೇವೆ. ಸ್ವರಾಜ್ಯ ಯುದ್ಧವನ್ನು ಅನೇಕ ದಿನಗಳವರೆಗೆ ಮುಂದುವರೆಸಬೇಕಾದರೆ ನಮಗೆ ಬುಂದೇಲುಖಂಡ, ಔಧ್ ಮತ್ತು ಮಹಾರಾಷ್ಟ್ರಗಳ ಸಹಾಯವು ಅತ್ಯಾವಶ್ಯಕ.

ತಾತ್ಯಾ—ಇಲ್ಲಿನ ಸ್ತ್ರೀಯರು ಮಾಡುತ್ತಿರುವ ಕೆಲಸವನ್ನು ನೋಡಿ ನನಗೆ ಅತ್ಯಾಶ್ಚರ್ಯವಾಯಿತು.

ರಾಣಿ—ಹೌದು. ಮೋತೀಬಾಯಿ ಮತ್ತು ಅವಳ ಸಂಗಡಿಗರು ಬಹು ಪ್ರಮುಖವಾದ ಕೆಲಸ ಮಾಡುತ್ತಿರುವರು.

ತಾತ್ಯಾ—ಮೋತೀಬಾಯಿಯು ಈಗ ತಾನೆ ಬಂದು ಹೋದಳು. ನೀವು ಆಗ ಪೂಜೆಯಲ್ಲಿದ್ದಿರಿ. ಸಿಪಾಯಿಗಳಲ್ಲಿ ಈಸಾಯಿಮತವನ್ನು ಹರಡುವುದಕ್ಕೆ ಯಾವ ಯಾವ ವಿಧವಾದ ಪ್ರಯತ್ನಗಳು ನಡೆಯುತ್ತಿವೆಯೆಂಬುದನ್ನು ಅವಳೇ ಹೇಳಿದಳು. ನಮ್ಮ ಪಕ್ಷದ ಇತರರೂ ಈ ಕೆಲಸದಲ್ಲಿ ನಿರತರಾಗಿದ್ದಾರೆ. ಅವರನ್ನೂ ವಿಚಾರಿಸಿ ನೋಡಿದೆನು. ಮೋತೀಬಾಯಿಯ ವೃತ್ತಾಂತದಿಂದ ಅವರು ಹೇಳಿದುದು ಪುಷ್ಟೀಕೃತವಾಯಿತು.

ರಾಣಿ—ಮೋತೀಬಾಯಿಗೆ ನಮ್ಮ ಪಕ್ಷದ ಇತರರೂ ಈ ಕೆಲಸಮಾಡುತ್ತಿರುವರೆಂದು ತಿಳಿದಿದೆಯೆ ?

ತಾತ್ಯಾ— ಇಲ್ಲ ಬಾಯಿಸಾಹೇಬ್.

ನಾನಾ—ಒಂದು ವಿಭಾಗದ ಕಾರ್ಮಿಕರು ಮತ್ತೊಂದು ವಿಭಾಗದ ಕಾರ್ಮಿಕರ ವಿಚಾರ ತಿಳಿಯಲಾಗದಂತೆ ಎಚ್ಚರಿಕೆ ವಹಿಸಿದ್ದೇವೆ.

ರಾಣಿ—ಒಂದೊಂದು ಪಡೆಯಲ್ಲೂ ಮೂರು ಮೂರು ಜನ ಅಧಿಕಾರಿಗಳನ್ನೇಕೆ ಚುನಾಯಿಸುತ್ತಿದ್ದೀರಿ ? ಇಬ್ಬರೇ ಸಾಕಾಗಿದ್ದಿತು.

ನಾನಾ—ಒಂದು ವೇಳೆ ಇಬ್ಬರನ್ನು ವರ್ಗಾಯಿಸಿದರೆ ಅಥವಾ ಅವರು ಮಡಿದು ಹೋದರೆ ಕೆಲಸ ನಡೆಸಲು ಒಬ್ಬರಾದರೂ ಉಳಿಯುವರು.

ರಾಣಿ—ಈಗ ನಿಮಗೆ ಅವರನ್ನು ಉತ್ತೇಜನಗೊಳಿಸುವ ಅವಶ್ಯಕತೆಯಿಲ್ಲ. ಅವರುಗಳೇ ಮುಂಬರಿದು ಬರಬೇಕು.

ನಾನಾ—ಅಲ್ಲಲ್ಲೇ ಇವೆರಡಕ್ಕೂ ಅಡ್ಡಿಗಳಿವೆ.

ರಾಣಿ—ಆಂಗ್ಲೇಯರೂ ಗೂಢಚಾರರನ್ನು ನೇಮಿಸಿದ್ದಾರೆ.

ನಾನಾ—ಹೌದು, ಆದರಲ್ಲಿ ಇಷ್ಟೇ ವ್ಯತ್ಯಾಸ. ಅವರ ಗೂಢಚಾರರು ದುಡ್ಡಿಗಾಗಿ ತಮ್ಮ ಗೌರವ ಮತ್ತು ದೇಶಗಳನ್ನು ಮಾರಾಟ ಮಾಡಲು ಸಿದ್ಧರಿದ್ದಾರೆ. ನಮ್ಮವರಾದರೋ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ತಮ್ಮ ಧರ್ಮ, ಮಾತೃಭೂಮಿ ಮತ್ತು ಸ್ವಾತಂತ್ರ್ಯಕ್ಕಾಗಿ ತನುಮನಧನಗಳನ್ನು ಅರ್ಪಿಸಲು ಸಿದ್ಧರಾಗಿದ್ದಾರೆ. ಪ್ರಭುತ್ವದ ಬಹು ಮುಖ್ಯವಾದಅಂಗವೆಂದು ಗಣಿಸಲ್ಪಡುವ ಪೋಲೀಸು ಖಾತೆಯೂ ನಮ್ಮ ಪರವಾಗಿಯೇ ಇದೆ.

ರಾಣಿ—ಆದುದರಿಂದಲೇ ನಾವು ಅವರೆಲ್ಲರ ಧರ್ಮ ಮತ್ತು ಯೋಗಕ್ಷೇಮಗಳಿಗೆ ಜವಾಬುದಾರರು.

ನಾನಾ—ಮುಸಲ್ಮಾನರು ಇನ್ನೂ ಹೆಚ್ಚು ಆಕ್ರೋಶಗೊಂಡಿದ್ದಾರೆ. ಬಾದಷಹನಿಗೆ ಈದ್ ಮತ್ತು ನವರೋಜ್ ದಿನಗಳಲ್ಲಿ ಸಲ್ಲುತ್ತಿದ್ದ ನಜರುಮುಜರೆಗಳು ಈಗ ಹತ್ತು ಹದಿನಾಲ್ಕು ವರ್ಷಗಳಿಂದ ನಿಂತು ಹೋಗಿವೆ. ಆಂಗ್ಲೇಯರು ಬಾದಷಹನು ದೆಹಲಿಯ ಕೆಂಪುಕೋಟೆಯನ್ನು ತ್ಯಜಿಸಿ ಮಾಂಫೈರ್‌ಗೆ ಹೊರಟು ಹೋಗಬೇಕೆಂದೂ,

ತಾವು ಆತನ ಸ್ಥಾನವನ್ನು ಆಕ್ರಮಿಸಿ ಕೆಂಪುಕೋಟೆಯಿಂದ ತಮ್ಮ ಕೆಂಗಣ್ಣುಗಳನ್ನರಳಿಸಿ ಹಿಂದೂಸ್ಥಾನವನ್ನಾಳಬೇಕೆಂದೂ ಆಶಿಸುತ್ತಿದ್ದಾರೆ. ಮೊದಮೊದಲು ಯಾರು ನಾವು ತಮ್ಮ ಸ್ವಾಮಿಭಕ್ತರು ಚರಣದಾಸರು ಎಂದು ನಮ್ರತೆಯಿಂದ ಹೇಳಿಕೊಳ್ಳುತ್ತಿದ್ದರೋ ಅವರು ಈಗ ತಾವೇ ಮೇಲೆದ್ದು ನಾವೇ ಮಾಲೀಕರೆಂದು ಹೇಳಿಕೊಳ್ಳುತ್ತಿದ್ದಾರೆ.

ರಾಣಿ—ಏನು, ಅವರು ಇದೆಲ್ಲವನ್ನು ಬಹಿರಂಗವಾಗಿಯೇ ನಡೆಸುತ್ತಿರುವರೇನು?

ನಾನಾ—ನಿಸ್ಸಂದೇಹವಾಗಿ. ಅವರಿಗೆ ಈಗ ಯಾರ ಭಯವೂ ಇಲ್ಲ. ವಿವಿಧ ಉಪಾಯಗಳಿಂದ ಹಿಂದೂ ಮುಸಲ್ಮಾನರಲ್ಲಿ ಜಗಳವೇರ್ಪಡುವಂತೆ ವ್ಯವಸ್ಥೆ ನಡೆಸುತ್ತಿದ್ದಾರೆ.

ರಾಣಿಯು ಚಿಂತಿಸಲಾರಂಭಿಸಿದಳು.

"ಬಹಳ ಸಾವಧಾನ ಮತ್ತು ಸಂಯಮಗಳಿಂದ ಕೆಲಸವನ್ನು ನೆರವೇರಿಸಬೇಕಾಗಿದೆ. ನಮಗೆ ನಮ್ಮ ಕಾರ್ಯದ ಪ್ರಗತಿಯು ವೇಳೆ ವೇಳೆಗೆ ತಿಳಿಯುತ್ತಿರಬೇಕು." ಎಂದು ರಾಣಿಯು ತನ್ನ ಅಭಿಪ್ರಾಯವನ್ನು ಸೂಚಿಸಿದಳು.

ರಾಣಿಯು ಕಿಟಕಿಯ ಕಡೆಗೆ ದೃಷ್ಟಿಯನ್ನು ಹೊರಳಿಸಿದಳು. ರಾತ್ರಿ ಹೊತ್ತೇರಿ ಹೋಯಿತೆಂದು ಅವರಿಬ್ಬರೂ ರಾಣಿಯ ಚರಣ ಸ್ಪರ್ಶ ಮಾಡಿ ಹೊರಟುಹೋದರು.

ಅವರಿಬ್ಬರೂ ಅವಳಿಗಿಂತ ಹಿರಿಯರಾದರೂ ಅವಳ ಪಾದಗಳನ್ನು ಮುಟ್ಟಿದುದು ಇದೇ ಮೊದಲ ದಿನ.

ತಾತ್ಯಾ ಅಲ್ಲಿಂದ ಹೊರಟು ಜ್ಯೂಹಿಯ ಮನೆ ಸೇರಿದನು. ಹೊತ್ತು ಮೀರಿದ್ದರೂ ಜ್ಯೂಹಿಯು ಇನ್ನೂ ಮಲಗಿರಲಿಲ್ಲ. ತಾತ್ಯಾ ಒಳಗೆ ಬಂದೊಡನೆಯೇ ಲಜ್ಜೆಯಿಂದ ಭರಮಾಡಿದಳು. ನಾಚಿಕೆಯಿಂದ ಮುಖವೆಲ್ಲವೂ ಕೆಂಪೇರಿದ್ದಿತು.

ತಾತ್ಯಾ ಕುಳಿತು ಮುಗುಳ್ನಗೆ ನಗುತ್ತಾ "ನೀನು ನನಗೆ ಎಲ್ಲವನ್ನೂ ತಿಳಿಸಲಿಲ್ಲ. ನನಗೂ ಬಹಳ ತುರತ್ತಾದ ಕೆಲಸವಿದ್ದಿತು. ಆದುದರಿಂದ ಸಾವಧಾನವಾಗಿ ನಿನ್ನನ್ನು ಪ್ರಶ್ನಿಸಲು ಆಗಲಿಲ್ಲ" ಎಂದನು.

ಜ್ಯೂಹಿಯು ತಗ್ಗಿಸಿದ್ದ ತಲೆಯನ್ನು ಎತ್ತಿದಳು. ಅವಳ ಕಣ್ಣುಗಳಲ್ಲಿ ಮೋಹದ ಮಾಧುರ್ಯವು ತುಂಬಿದ್ದಿತು. ಅವಳು ದೃಷ್ಟಿಯನ್ನು ಮೇಲಿಡದೆ ಹೇಳಿದಳು. "ಏನೂ ಪರವಾಗಿಲ್ಲ, ಲಕ್ಷ್ಮೀಪೂಜೆ ಮಾಡುವುದಕ್ಕೆ ಮನೆಗೆ ಬರಬೇಕಾಗಿದ್ದಿತು. ಆದುದರಿಂದ ಬಂದುಬಿಟ್ಟೆ. ಈಗ ಎಲ್ಲವನ್ನೂ ತಿಳಿಸುವೆನು.

ಅವಳು ತಾತ್ಯನ ಸೂಚನೆಯ ಮೇರೆಗೆ ಕುಳಿತುಕೊಂಡಳು. ನಂತರ ತನ್ನ ನೃತ್ಯಗೀತಗಳ ದ್ವಾರಾ ಝಾನ್ಸಿಯಲ್ಲಿದ್ದ ಆಂಗ್ಲೇಯ ಸೇನೆಯಲ್ಲಿ ಏನೇನು ಮಾಡುತ್ತಿರುವೆನೆಂಬುದನ್ನು ಕೂಲಂಕಷವಾಗಿ ಅರುಹಿದಳು. ಆಕೆಯು ಮಾತನಾಡು

ತ್ತಿದ್ದಂತೆಯೇ ಅವಳ ತುರುಬಿನಲ್ಲಿದ್ದ ಮಲ್ಲಿಗೆಯ ಹೂವು ಅಲುಗಾಡುತ್ತಿದ್ದಿತು.

ಮಾತು ಕಥೆಗಳು ಮುಗಿದನಂತರ ತಾತ್ಯನು ಎದ್ದು ಅವಳ ತಲೆಯ ಮೇಲೆ ಕೈಯ್ಯನ್ನಿಟ್ಟು ನೇವರಿಸಿದನು. ಆ ಸಮಯದಲ್ಲಿ ಒಂದು ಹೂವ್ವು ಕಳಚಿ ಕೆಳಗೆ ಬಿದ್ದಿತು. ತಾತ್ಯಾ ಅದನ್ನು ಪುನಃ ಮುಡಿಸಲು ಪ್ರಯತ್ನಿಸಿದನು. ಜ್ಯೂಹಿಯು ನತ ಮಸ್ತಕಳಾಗಿ "ಹೋಗಲಿ, ಬಿಡಿ" ಎಂದಳು.

"ಅದನ್ನು ನಾನು ಮುಡಿಸಿ ಬಿಟ್ಟೆ, ಜ್ಯೂಹಿ. ಈ ದೇಶದ ಮುಕ್ತಿ ಮತ್ತು ನಿನ್ನ ಪುಷ್ಪಗಳ ಪರಿಮಳದ ಸಮ್ಮೇಳನವಾಗುವ ದಿನವು ಬರಲಿ ಎಂದು ಮಹಾಲಕ್ಷ್ಮಿಯಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ."

ಜ್ಯೂಹಿಯು ಎದ್ದು ನಿಂತಳು, ಕಣ್ಣುಗಳು ನಿಶ್ಚಲವಾಗಿದ್ದವು. ಶ್ವೇತ ಭೂಮಿಕೆಯಲ್ಲಿ ಕರಿಯ ಶಿಲಾಮೂರ್ತಿಯನ್ನು ನಿಲ್ಲಿಸಿದಂತೆ ಪ್ರಕಾಶಿಸಿದಳು.

"ಒಂದು ವೇಳೆ ಈ ಕಾರ್ಯದಲ್ಲಿ ನಾನು ಅಥವಾ ನನ್ನಂತಹ ಮತ್ತಾರಾದರೂ ಸ್ತ್ರೀಯರು ಮೃತಪಟ್ಟರೆ ಈ ಕಳಚಿ ಬಿದ್ದ ಹೂವ್ವಿನ ಸುಗಂಧ ಮತ್ತು ದೇಶದ ಮುಕ್ತಿಯ ಸಮ್ಮೇಳನ ಮಾಡುತ್ತೇನೆಂಬ ವಚನವನ್ನು ಮರೆಯ ಬೇಡಿ" ಎಂದಳು ಜ್ಯೂಹಿ.

ತಾತ್ಯಾ "ಎಂದಿಗೂ ಇಲ್ಲ, ಜ್ಯೂಹಿ" ಎಂದನು.

ಜ್ಯೂಹಿ—ನೀವು ಯಾವಾಗ ಹೊರಡುತ್ತೀರಿ? ಮತ್ತೆ ಯಾವಾಗ ಬರುತ್ತೀರಿ?

ತಾತ್ಯಾ—ನಾಳೆ ಹೊರಡುತ್ತೇನೆ. ಶೀಘ್ರದಲ್ಲಿಯೇ ಹಿಂದಿರುಗುತ್ತೇನೆ. ಯಾವಾಗ ಬರುತ್ತೇನೆಂದು ಈಗ ಖಚಿತವಾಗಿ ಹೇಳಲಾಗುವುದಿಲ್ಲ.

ತಾತ್ಯ ನಮಸ್ಕಾರ ಮಾಡಿ ಹೊರಬಿದ್ದನು. ಅಂದು ಅವನಿಗೆ, ಅವಳ ವರ್ಗ ಬೋಧಕ ನಾಮ ಮಂಗಳಮುಖಿ ಎಂಬ ಹೆಸರು ಜ್ಯೂಹಿಗೆ ಸಾರ್ಥಕವಾಯಿತು ಎಂದು ತಿಳಿಯಿತು.

## ೪೫

ಜ್ಯೂಹಿಯು ಶಿಬಿರಗಳಿಗೆ ಹೋಗಿಬರುವದು ಹೆಚ್ಚಿತು. ಅವಳ ನೃತ್ಯ ಗೀತ ಗಳಲ್ಲಿ ಮೋಹಕತೆ, ಆಕರ್ಷಣೆಗಳು ಇನ್ನೂ ವರ್ಧಿಸಿದವು. ಆದರೆ ಸಿಪಾಯಿಯೇ ಆಗಲಿ ಅಧಿಕಾರಿಯೇ ಆಗಲಿ ಯಾರೂ ಅವಳ ಉಂಗುಷ್ಠವನ್ನೂ ಮುಟ್ಟಲು ಸಾಧ್ಯ ವಾಗುತ್ತಿರಲಿಲ್ಲ. ಅವರು ಜ್ಯೂಹಿಯು ಹೃದಯ ಹೀನಳೆಂದು ಭಾವಿಸುತ್ತಿದ್ದರು.

ಅವಳಿಗೆ ಪ್ರತಿಯೊಂದು ಪಡೆಯಲ್ಲಿಯೂ ಮೂರು ಮೂರು ಉಪಯುಕ್ತ ಅಧಿ ಕಾರಿಗಳನ್ನು ಆರಿಸುವುದರಲ್ಲಿ ಹೆಚ್ಚು ಕಾಲವಿಳಂಬವಾಗಲಿಲ್ಲ. ಆ ಹುದ್ದೇದಾರರಿಗೂ ಕೂಡ ತಾವು ಒಂದಾನೊಂದು ದಿನ ಒಂದು ಮಹತ್ಕಾರ್ಯವನ್ನು ಮಾಡಬೇಕಾಗು

ವುದು ಎಂಬ ಅಂಶವನ್ನು ಸ್ಪಷ್ಟ ಪಡಿಸಲಾಗಿದ್ದಿತು. ಆದರೆ ಎಂದು ಆ ಅವಕಾಶ ಒದಗುವುದು ಎಂಬುದು ಮಾತ್ರ ತಿಳಿದಿರಲಿಲ್ಲ. ಸ್ವಯಂ ಜೂಹಿಗೆ ಅದು ತಿಳಿದಿರಲಿಲ್ಲ. ಪಡೆಯಲ್ಲಿ ಇನ್ನೂ ಕೆಲವು ಜನ ಈ ಕಾರ್ಯದಲ್ಲಿ ನಿಯುಕ್ತರಾಗಿದ್ದರು. ಅವರಿಗೆ ಈ ಸಮಯವು ತಿಳಿದಿರಲಿಲ್ಲ. ಆದರೆ ಜ್ಯೂಹಿಯು ನಡೆಸುತ್ತಿರುವ ಕೆಲಸವು ಅದೇ ಯೋಜನೆಯ ಒಂದು ಅಂಗವೆಂದೂ ಅದರಲ್ಲಿ ತಾವು ಭಾಗವಹಿಸುತ್ತಿರುವೆವೆಂದೂ ಅರ್ಥಗತವಾಗಿದ್ದಿತು. ಅವರು ಒಬ್ಬರಿಗೊಬ್ಬರು ಸಂಧಿಸಿ ಮಾತನಾಡುವುದು ನಿಷೇಧಿಸಲ್ಪಟ್ಟದ್ದಿತು.

ಒಂದು ದಿನ ಜ್ಯೂಹಿಯ ನೃತ್ಯಗೀತಗಳ ರಸಾಸ್ವಾದನೆ ಮಾಡುವುದಕ್ಕಾಗಿ ಕ್ಯಾಪ್ಟನ್ ಡನ್‌ಲಪ್ ಬಂದಿದ್ದನು. ಒಂದು ಕ್ಷಣ ಅವಳು ಆಶ್ಚರ್ಯಭರಿತಳಾಗಿ ನಾಚಿಕೆಯಿಂದ ಹಿಂಜರಿದಳು. ಆದರೆ ಒಡನೆಯೇ ಎಚ್ಚೆತ್ತು ಇನ್ನೂ ಉಲ್ಲಾಸದಿಂದ ನೃತ್ಯಮಾಡಿದಳು.

ಮುಖ್ಯವಾಗಿ ಅವನ ಗೂಢಚಾರರು ಅವನಿಗೆ ನರ್ತಕಿಯರು ಬಂದು ಸಿಪಾಯಿಗಳೊಂದಿಗೆ ಧರ್ಮಕರ್ಮಗಳ ವಿಚಾರವಾಗಿ ಮಾತನಾಡುವರೆಂದು ಹೇಳಿದ್ದರು. ಅದನ್ನು ಸ್ವತಃ ಕಂಡುಕೊಳ್ಳಲು ಅಲ್ಲಿಗೆ ಬಂದಿದ್ದನು.

ನೃತ್ಯಗೀತಗಳು ಅವನಿಗೆ ಬಹುಬೇಗ ಸಾಕಾದವು. ಅವನೂ ಇತರ ಆಂಗ್ಲೇಯರಂತೆ ಭಾರತೀಯ ಕಲೆಯನ್ನು ಉಪೇಕ್ಷೆಯಿಂದ ಕಾಣುತ್ತಿದ್ದನು. ಆದರೆ ಜ್ಯೂಹಿಯ ರೂಪವು ಮನಮೋಹಕವಾಗಿದ್ದಿತು. ಅವನಿಗೆ ಇಂತಹ ಸುಂದರಿಯ ಮನಸ್ಸಿನಲ್ಲಿ ಛಲ ಕಪಟಗಳು ಹುದುಗುವುವೆಂದು ತೋರಲಿಲ್ಲ. ಆದರೂ ಅವಳನ್ನು ಪ್ರಶ್ನಿಸಿದನು.—

ಡನ್‌ಲಪ್—ನೀನು ಶಿಬಿರದಿಂದ ಎಷ್ಟು ಹಣಸಂಪಾದನೆ ಮಾಡಿಕೊಂಡು ಹೋಗುತ್ತಿ ?

ಜ್ಯೂಹಿ—ಎಷ್ಟು ದೊರಕಿದರೆ ಅಷ್ಟು. ಹುಜೂರ್.

ಡನ್‌ಲಪ್—ನೃತ್ಯಗೀತಗಳು ಹೊರತಾಗಿ ಮತ್ತೇನಾದರೂ ಜೀವನಕ್ಕಾಗಿ ಉದ್ಯೋಗ ಮಾಡುತ್ತಿಯಾ ?

ಜ್ಯೂಹಿ—ಇಲ್ಲ. ನಾನು ಅವಿವಾಹಿತೆ ; ಕುಮಾರಿ.

ಡನ್‌ಲಪ್—ನಿಮ್ಮಲ್ಲಿ ವಿವಾಹವೂ ಉಂಟೇನು ?

ಜ್ಯೂಹಿ—ಅವಶ್ಯಕವಾಗಿ, ನಾವು ಕೇವಲ ನೃತ್ಯಗೀತಗಳನ್ನು ಮಾತ್ರ ಪ್ರದರ್ಶಿಸುತ್ತೇವೆ.

ಡನ್‌ಲಪ್—ನೀನು ರಾಣೀ ಸಾಹೇಬರಲ್ಲಿಯೂ ನರ್ತನ ಪ್ರದರ್ಶಿಸಲು ಹೋಗುತ್ತೀಯಾ ? ಅವರಿಗೆ ನೃತ್ಯಗೀತಗಳಲ್ಲಿ ಬಹಳ ಅಭಿರುಚಿಯಿದೆಯೆಂದು ಕೇಳಿದ್ದೇನೆ.

ಜ್ಯೂಹಿ—ನಾನು ಅಲ್ಲಿಗೆ ಹೋಗುವುದಿಲ್ಲ. ಯಾವಾಗಲೂ ಹೋಗಿಯೂ ಇಲ್ಲ. ಅವರಿಗೆ ಈ ಕಲೆಗಳಿಗಿಂತ ಭಕ್ತಿಗೀತೆಗಳ ಭಜನೆಯು ಬಹು ಪ್ರಿಯ.

ಡನ್‌ಲಪ್—ರಾಣಿಸಾಹೇಬರು ಗಾಯನ ಮಾಡುತ್ತಾರಯೆ ?

ಜ್ಯೂಹಿ—ಇಲ್ಲವೇ ಇಲ್ಲ. ನನಗೇನು ಗೊತ್ತು ?

ಡನ್‌ಲಪ್—ರಾಣಿಸಾಹೇಬರು ನಿನಗೆ ಕುದುರ ಸವಾರಿ ಹೇಳಿಕೊಡಲಿಲ್ಲವೆ ?

ಜ್ಯೂಹಿ—ನಾನು ಅವರ ಬಳಿ ಹೋಗುವುದೇ ಇಲ್ಲ. ಕುದುರೆ ಸವಾರಿಯನ್ನೇಕೆ ಅವರು ಕಲಿಸುತ್ತಿರುವರು ?

ಡನ್‌ಲಪ್—ಇತರ ಸ್ತ್ರೀಯರಿಗೆ ಕಲಿಸುತ್ತಿರುವರೆ ?

ಜ್ಯೂಹಿ—ಕಲಿಸುತ್ತಿರುವರೆಂದು ಕೇಳಿದ್ದೇನೆ.

ಡನ್‌ಲಪ್—ಮೋತೀಬಾಯಿಯೆಂಬ ವೇಶ್ಯೆಯನ್ನು ಬಲ್ಲೆಯಾ ?

ಜ್ಯೂಹಿ—ಅವಳು ವೇಶ್ಯೆಯಲ್ಲ. ಹಾಗೆಂದು ನಿಮಗಾರು ಹೇಳಿದರು ?

ಡನ್‌ಲಪ್—ನನಗೆ ಎದುರು ಜವಾಬು ಕೊಡುತ್ತೀಯಾ ! ನಿನ್ನನ್ನು ಕತ್ತು ಹಿಡಿದು ತಳ್ಳಿಸಿ ಬಿಡಬಲ್ಲೆನೆಂಬುದನ್ನು ತಿಳಿದಿರುವೆಯಾ ?

ಜ್ಯೂಹಿ—ನಾನು ನಿಮಗೇನು ಕೆಡಕುಮಾಡಿದೆ ?

ಡನ್‌ಲಪ್—ಸರಿ, ನಡೆ. ಇನ್ನು ಮುಂದೆ ಯಾವಾಗಲೂ ಛಾವನಿಯಲ್ಲಿ ಬರ ಕೂಡದು.

ಜ್ಯೂಹಿಯು ಖಿನ್ನವದನಳಾಗಿ ಅಲ್ಲಿಂದ ಹೊರಟುಹೋದಳು. ಆದರೆ ಡನ್‌ಲಪ್ಪನ ಶಿಬಿರದ ಗಡಿಯನ್ನು ದಾಟಿದೊಡನೆಯೇ ಅವಳ ತುಟಿಯ ಮೇಲೆ ಮುಗುಳ್ನಗೆ ಮೂಡಿತು. ಅವಳಿಗೆ 'ಒಂದು ದಿನ ಪುಷ್ಪದ ಸುಂಗಧವೂ ದೇಶದ ಮುಕ್ತಿಯೂ ಸಮ್ಮೇಳನವಾಗುವುದೆಂಬ ಮಾತು' ನೆನಪಿಗೆ ಬಂದಿತು.

ಅವಳು ಕತ್ತುಹಿಡಿದು ದಬ್ಬಿಸಿಕೊಂಡು ಬಂದಿದ್ದರೆ ಚೆನ್ನಾಗಿದ್ದಿತು ಅಥವಾ ಈ ಶರೀರದಿಂದ ಸ್ವಲ್ಪ ರಕ್ತಪಾತವಾಗಿದ್ದರೆ ಇನ್ನೂ ಮೇಲಾಗುತ್ತಿತ್ತು ಎಂದೆಣಿಸಿದಳು.

ನರ್ತಕಿಯು ಹೊರಟುಹೋದರೂ ಅವಳ ಸೌಂದರ್ಯವು ಡನ್‌ಲಪ್ಪನ ಹೃದಯದ ಒಂದು ಬದಿಯಲ್ಲಿ ತನ್ನ ಹೃದಯ ಭೇದಕ ಪ್ರತಿಬಿಂಬವನ್ನು ಛಾಪಿಸಿತು. ಆದರ ವೇದನೆಯು ಸಿಪಾಯಿಗಳ ಮೇಲಿನ ಕ್ಷೋಭೆಯ ರೂಪವನ್ನು ತಾಳಿತು.

ಡನ್‌ಲಪ್‌ನು "ನೀವು ಈ ಮೋಸಗಾತಿ ಸ್ತ್ರೀಯ ಮೋಹದಲ್ಲಿ ನಿಮ್ಮ ಹಣ ಮತ್ತು ಹೊತ್ತನ್ನು ವ್ಯರ್ಥಮಾಡುತ್ತೀರಿ. ಈ ಸ್ತ್ರೀಯ ಕಪಟವು ನಿಮ್ಮನ್ನು ಕ್ರೈಸ್ತ ಮತಾವಲಂಬಿಗಳಾಗುವುದನ್ನು ನಿರೋಧಿಸುತ್ತಿದೆ. ಈ ರಕ್ಕಸಿಯನ್ನು ಮನದಿಂದ ತೊರೆದು ಸದ್ಧರ್ಮದ ಮೇಲೆ ಭಕ್ತಿಯನ್ನಿಟ್ಟರ ಮುಕ್ತಿ ಲಭಿಸುವುದಲ್ಲದೆ ಹಣವೂ ಕೈ ಸೇರುವುದು" ಎಂದು ಸಿಪಾಯಿಗಳನ್ನು ಕುರಿತು ಹೇಳಿದನು.

ಈ ಮುಕ್ತಿ ಮತ್ತು ಧನ ಸಂಬಂಧದ ವಿಷಯವನ್ನು ಸಿಪಾಯಿಗಳು ಬಹು ದಿನಗಳಿಂದ ಕೇಳುತ್ತಲೇ ಇದ್ದರು. ಮೊದಮೊದಲು ಈ ವಾರ್ತೆಯನ್ನು ಕೇಳಿ ಅವರು ನಗುತ್ತಿದ್ದರು. ಈಗ ಅವರು ಉರಿದು ಬೀಳಲಾರಂಭಿಸಿದ್ದರು. ಆದರೆ ಎಲ್ಲವನ್ನೂ ಮೌನವಾಗಿ ಕೇಳಿದರು.

ಡನ್‌ಲಪ್ ತನ್ನ ಮಾತು ಇವರಿಗೆ ಮನದಟ್ಟಾಗಿದೆ ಎಂದು ಭಾವಿಸಿ ಮುಂದುವರೆಯುತ್ತಾ "ನಿಮ್ಮ ದೇವಿ ದೇವರುಗಳು ಕುರೂಪಿಗಳು ಮತ್ತು ಕೆಲಸಕ್ಕೆ ಬಾರದವರು. ಅವರ ಮೇಲೆ ನಂಬಿಕೆಯಿಟ್ಟು ಮೂರ್ಖರಾಗಿದ್ದೀರಿ. ನಿಮ್ಮ ಮಾರ್ಗವು ಸರಿಯಾದುದಲ್ಲ. ನೀವು ಕ್ರೈಸ್ತರಾದರೆ ಒಬ್ಬ ದೇವರು ಮತ್ತು ಆತನ ಪುತ್ರ ಇವರುಗಳ ಮೇಲೆ ಮಾತ್ರ ನಂಬಿಕೆಯಿಡಬೇಕಾಗುವುದು; ಪ್ರಪಂಚದ ತುಂಬ ತುಂಬಿರುವ ಭೂತ ಪ್ರೇತ ಪಿಶಾಚಿಗಳ ಮೇಲೆಲ್ಲಾ ವಿಶ್ವಾಸವಿಡಬೇಕಾದುದಿಲ್ಲ. ಹಿಂದೂ ಮುಸಲ್ಮಾನರೆಲ್ಲರೂ ಮೂರ್ಖರು. ಇಂಗ್ಲೀಷ್ ಓದಿದರೆ ನಿಮ್ಮ ಜ್ಞಾನವು ವಿಕಾಸವಾಗುವುದು" ಎಂದು ನುಡಿದನು.

ಸಿಪಾಯಿಗಳು ಈ ಮಾತಿಗೂ ಉತ್ತರವೀಯಲಿಲ್ಲ.

ಡನ್‌ಲಪ್ಪನು "ರಿಸಾಲ್ದಾರ್, ನೀನು ಮೊದಲು ಈ ಧರ್ಮವನ್ನು ಕೈಗೊಳ್ಳಬೇಕು. ಹಾಗಿಲ್ಲದಿದ್ದರೆ ನಿನ್ನ ಹುದ್ದೆಯು ಶೋಭಿಸದು. ನಮಗೆ ಒಬ್ಬ ಈಸಾಯಿ ಮತಾವಲಂಬಿ ಹುದ್ದೇದಾರನು ದೊರಕಿದರೆ ನಿನ್ನ ಕೆಲಸವು ಕೊನೆಗಾಣುವುದು." ಎಂದನು.

ರಿಸಾಲ್ದಾರ್ "ಅಪ್ಪಣೆಯಂತೆ" ಎಂದು ಉತ್ತರವಿತ್ತನು.

ಡನ್‌ಲಪ್ಪನು, ರಿಸಾಲ್ದಾರನು ಈಸಾಯಿಯಾಗಲು ಹೆಚ್ಚು ಕಡಿಮೆ ಸಮ್ಮತಿಸಿದ್ದಾನೆಂದು ಭಾವಿಸಿ "ಯಾವಾಗ?" ಎಂದು ಕೇಳಿದನು.

ರಿಸಾಲ್ದಾರನು ಉತ್ತರವೀಯುತ್ತಾ "ಕೆಲವು ತಿಂಗಳ ಅವಕಾಶವಿದೆ, ಹುಜೂರ್" ಎಂದನು.

ಡನ್‌ಲಪ್ಪನು ಈ ವಾಕ್ಯದ ಗೂಢಾರ್ಥವನ್ನು ಅರಿತುಕೊಳ್ಳಲಿಲ್ಲ.

ಆತನು ಹೊರಟು ಹೋದಮೇಲೆ ಎಲ್ಲಾ ಸಿಪಾಯಿಗಳೂ ವ್ಯಂಗ್ಯ ಕ್ಷೋಭೆ ಇವುಗಳಲ್ಲಿ ಪ್ರಮತ್ತರಾದರು. ಅವರಿಗೆ ಮಧುರವಾಗಿ ಗಾನ ಮಾಡುವ ರೂಪವತಿಯಾವ ನರ್ತಕಿಯನ್ನು ಅವಮಾನಗೊಳಿಸಿದುದು ದುಃಖದಾಯಕವಾಗಿದ್ದಿತು. ತಮ್ಮ ಧರ್ಮವನ್ನು ಅಲ್ಲಗಳೆದುದಕ್ಕಾಗಿ ಕ್ರೋಧವು ಉಕ್ಕಿಬಂದಿತು. ಮತ್ತು ಆಂಗ್ಲೇಯನ ಬಾಯಿಯಿಂದ ತಮ್ಮ ರಾಣಿಯ ಮಾತು ಹೊರಟುದು ಅವರನ್ನು ಇನ್ನೂ ಉದ್ರೇಕಿಸಿತು.

"ಆ ಬಡಪಾಯಿಯನ್ನು ತಳ್ಳಿಸಿ ಹೊರಗೆ ಹಾಕುವುದಾಗಿ ಬೆದರಿಸಿದನು. ಎಂತಹ ಕಾಡುಮನುಷ್ಯ!"

"ಅರೆ! ಧರ್ಮಕರ್ಮಗಳನ್ನು ತ್ಯಜಿಸಿ ಎಂದು ಹೇಳುತ್ತಾನಲ್ಲಾ, ಆ ಹೆಂಡ ಕುಡುಕನಿಗೆ ಧರ್ಮದ ವಿಚಾರವೇನು ಗೊತ್ತು ?"

"ಅವನನ್ನು ಮನಬಂದಂತೆ ಒದೆಯಲೇ ಎನ್ನಿಸುತ್ತಿದೆ."

"ಸ್ವಲ್ಪ ಇರು. ಹೊತ್ತು ಬರುವುದು. ಈಗ ಸದ್ಯಕ್ಕೆ ತಾಳ್ಮೆಯನ್ನು ಕಳೆದುಕೊಳ್ಳಬೇಡ. ಇನ್ನೂ ಸ್ವಲ್ಪ ಬಾಕಿ ಉಳಿದಿರುವುದು. ನಮ್ಮ ಮುಖಂಡರು, ಇವೆಲ್ಲಕ್ಕೂ ಔಷಧಿಯನ್ನು ಕಂಡುಹಿಡಿಯುತ್ತಿರುವರು."

"ಸರಿಯಾಗಿ ಹೇಳಿದೆ. ಯಾವಾಗ ಧರ್ಮವೇ ಇರುವುದಿಲ್ಲವೋ ಆಗ ದೇವಾಲಯ ಮಸೀದಿಗಳು ನಿರ್ನಾಮವಾಗುವುವು. ಆಗ ಹಕೀಮರು ವೈದ್ಯಮಾಡಲು ಬರುವರೆ."

"ತೋಟಿಗಳನ್ನು ಪುನಃ ಜಾರಿಗೆ ತಂದಿದ್ದಾರೆ. ಕಲ್ಕತ್ತೆಯ ಕಾರ್ಖಾನೆಯಲ್ಲಿ ಕೋಟ್ಯಾನುಕೋಟಿ ತೋಟಿಗಳನ್ನು ತಯಾರಿಸುತ್ತಿರುವರಂತೆ. ಒಂದು ಸೇರಿಗೆ ನಾಲ್ಕಾಣೆಯಂತೆ ಗೋವಿನ ಕೊಬ್ಬನ್ನು ಸರಬರಾಜುಮಾಡಲು ಒಬ್ಬ ಆಂಗ್ಲೇಯನಿಗೊ ಕ್ರೈಸ್ತನಿಗೋ ಗುತ್ತಿಗೆ ಕೊಟ್ಟಿದ್ದಾರಂತೆ."

"ಬರಲಿ ಬಿಡು. ಜೀವದೊರಸೆ ಅವುಗಳನ್ನು ಮುಟ್ಟುವುದಿಲ್ಲ. ಹಾಗೇನಾದರೂ ಬಲಾತ್ಕರಿಸಿದರೆ ಮೊದಲನೆಯ ಗೋಲಿ ಈ ಹುಚ್ಚು ಡನ್‌ಲಪನ ಎದೆಗೆ ಬೀಳುವುದು."

"ಈಶ್ವರನು ಒಬ್ಬನೆಂಬುದೇನೋ ಸರಿ. ಹಿಂದುಗಳಾಗಲೀ ಮುಸಲ್ಮಾನರಾಗಲೀ ಬೇರೆ ಏನನ್ನೂ ನಂಬಲಿಲ್ಲ. ಆದರೆ ಈಶ್ವರನಿಗೆ ಒಬ್ಬನೇ ಮಗನೆಂದು ಈ ಡನ್‌ಲಪ್ಪನಿಗೆ ಹೇಗೆ ತಿಳಿಯಿತು ?"

"ಯಾವ ಕಾರ್ಖಾನೆಯಲ್ಲಿ ಈ ಅಸ್ಪೃಶ್ಯ ತೋಟಿಗಳು ಉತ್ಪನ್ನವಾಗುವುವೋ ಅಲ್ಲಿಂದಲೇ ಈ ಧರ್ಮವೂ ಜನ್ಮವೆತ್ತಿರಬೇಕು."

"ನಾವೇನೋ ಇಲ್ಲಿ ಪೈಗಂಬರ್ ಮಹಮ್ಮದ್ದರನ್ನು ಈಶ್ವರನೆಂದು ನಂಬುತ್ತೇವೆ. ಆದರೆ ಮಗನಾರೂ ಇಲ್ಲ."

"ಅವರ ಮಕ್ಕಳೇ ನಾವು."

"ಈ ಡನ್‌ಲಪ್ಪನು ತನ್ನ ಮತ್ತು ತನ್ನಿತರ ಆಂಗ್ಲೇಯ ಸಹೋದರರನ್ನು ಮಾತ್ರ ದೇವರ ಮಕ್ಕಳೆಂದು ಕೊಳ್ಳುತ್ತಾನೆ. ಇತರರನ್ನು ಮಕ್ಕಳೆಂದು ಒಪ್ಪುವುದಿಲ್ಲ.

"ಹಾಯ್! ಆ ದಿನವೆಂದು ಬರುವುದೋ ಕಾಣೆ."

"ಅನೇಕ ದಿನಗಳಿಂದ ನಾವು ನಮ್ಮ ಸಹೋದರರೊಂದಿಗೆ ಹೊಡೆದಾಡಿದೆವು ಮತ್ತು ಈ ಆಂಗ್ಲೇಯರ ಮೋಸದಿಂದ ಅವರನ್ನು ನಾಶಮಾಡಿದೆವು."

"ಇವರು 'ನಮ್ಮ ಉಪ್ಪುತಿನ್ನುತ್ತೀರಿ ಅದರ ಋಣವನ್ನು ತೀರಿಸಿ' ಎನ್ನುತ್ತಾರೆ. ನಾವು 'ಉಪ್ಪೇನು ನಿಮ್ಮಪ್ಪನ ಮನೇದೇ ?' ಎಂದು ಕೇಳುತ್ತೇವೆ."

"ಒಳ್ಳೆಯದು ಇವರ ವಂಶ ವೃಕ್ಷದಿಂದ ದೇವರ ಸಂಬಂಧೀಕರೆಂದು ಸ್ಥಿರಪಡಿಸಿ ಕೊಟ್ಟರೆ ಆಗ ಪರವಾಗಿಲ್ಲ."

"ಇದನ್ನು ನಾವು ಬೇಕಾದರೆ ಸ್ಥಿರಪಡಿಸಿ ಕೊಡಬಲ್ಲೆವು. ಏತಕ್ಕೆಂದರೆ ನಾವು ದೇವರ ಪೂಜೆ ಮಾಡುತ್ತೇವೆ. ಅವರ ಪಾದಾರವಿಂದಗಳಲ್ಲಿ ನಮಾಜು ಮಾಡುತ್ತೇವೆ. ಆದರೆ ಇವರುಗಳು ಸಮಯ ಸಿಕ್ಕಿದರೆ ಸಾಕು ಹೆಂಡ ಕುಡಿಯುವುದು, ಕ್ಲಬ್ಬಿನಲ್ಲಿ ಹೋಗಿ ಕುಣಿಯುವುದು ನಂತರ ವಾರಕ್ಕೊಂದು ಭಾನುವಾರ ದೇವಸ್ಥಾನಕ್ಕೆ ಹೋಗಿ (ಪಾಪ ಕರ್ಮ ಮಾಡುವುದಿಲ್ಲವೆಂದು ಪ್ರತಿಜ್ಞೆ) "ತೋಬಾ!" ಎನ್ನುವುದೂ, ಪುನಃ ಹಿಂತಿರುಗಿ ಬಂದು ಅದೇ ದಿನಚರಿಯನ್ನು ಅವಲಂಬಿಸುವುದು."

"ನಾವು ಕಸಬಳಿಯುವುದೂ, ಇವರು ದೊಡ್ಡ ದೊಡ್ಡ ವೇತನಗಳನ್ನು ಕುರ್ಚಿಯ ಮೇಲೆ ಕುಳಿತು ಹೊಡೆಯುವುದು."

"ನಮ್ಮ ಹಿಂದೂಸ್ಥಾನಿ ಸಿಪಾಯಿಗಳ ಶಿಬಿರವನ್ನು ನೋಡು; ಇವರ ಬಂಗಲೆಗಳನ್ನು ನೋಡು, ನನಗೆ ಒಣ ರೊಟ್ಟಿ, ಬೇಯಿಸಿದ ಬೇಳೆ; ಇವರಿಗೆ ಕೋಳಿ ಮೊಟ್ಟೆ, ಬಿಸ್ಕತ್ತುಗಳು. ನಮಗೆ ಅಲ್ಪ ವೇತನ, ಇವರಿಗೆ ಮೊಹರುಗಳ ರಾಶಿ, ನಿತ್ಯವೂ ವಿಲಾಯಿತ್ತಿಗೆ ಸಾಗಿಸುವುದಕ್ಕೆ.

"ಇದರ ಮೇಲೆ "Damn fool" ಎಂಬ ಬೈಗಳು. ಮರ್ಯಾದೆಯಿಂದ ಮಾತನಾಡುವುದಂತೂ ಇಲ್ಲವೇ ಇಲ್ಲ. ಇವರ ಊರಿನವರೆಲ್ಲಾ ಶುದ್ಧ ಕಾಡುಮನುಷ್ಯರು."

"ಎಲ್ಲರನ್ನು ಹಾಳು ಮಾಡಿದರು. ಝಾನ್ಸಿಯ ದೇವಿಯನ್ನು ನೋಡು, ಎಷ್ಟು ಕಷ್ಟದಿಂದ ದಿನಗಳನ್ನು ದೂಡುತ್ತಿದ್ದಾಳೆ."

"ನೀನು ದೇವಿಯೆಂದು ಹೇಳಿದುದು ಸರಿಯೇಪ್ಪಾ. ಒಂದು ದಿನ ಕಮಾಸೀರ್ ಗುಡ್ಡದ ಬಳಿ ಕುದುರೆ ಸವಾರಿಮಾಡಿಕೊಂಡು ಹೋಗುತ್ತಿದ್ದಳು. ಆಕೆಯನ್ನು ಕಂಡು ಮಿಂಚು ಸುಳಿದಂತೆ ನನಗೆ ಭಾಸವಾಯಿತು. ಅವಳ ಚರಣಸ್ಪರ್ಶಮಾಡಲೇ ಎಂದು ಮನವು ಕಾತರಗೊಂಡಿತು"

"ಡನ್‌ಲಪ್ಪನಂತಹ ಗರ್ವಿಷ್ಠನಿಗೆ ಆಕೆಯು ಕೆನ್ನೆಗೆರಡೇಟು ಕೊಟ್ಟು ನಡುಗಿಸಬಲ್ಲಳು."

"ರಾಣಿಯ ಧ್ವಜವು ಕೋಟೆಯಮೇಲೆ ಎಂದು ಹಾರಾಡುವುದೋ! ಆ ಸುದಿನವು ಎಂದು ಬರುವುದೋ ಕಾಣೆ."

"ಕಿಲ್ಲೆಯಲ್ಲಿ ಆಂಗ್ಲೇಯರ ವಸತಿಯನ್ನು ನೋಡಿ ನನ್ನರಕ್ತವು ಕುದಿಯುತ್ತಿರುವುದು."

"ಪುರಜನರಿಗೆ ಕೋಟೆಯಲ್ಲಿ ಹೋಗುವುದಕ್ಕೇ ಅನುಮತಿಯಿಲ್ಲ."

"ಯಾವಾಗ ಅದು ನಮ್ಮ ರಾಜ್ಯವಾಗುವುದೋ, ಆಗ ಕೋಟೆಯ ಬಳಿ ಬೀಸುವ ಗಾಳಿಯನ್ನು ಸೆಳೆಯುವುದಕ್ಕೂ ಇವರನ್ನು ಬಿಡುವುದಿಲ್ಲ."

"ತಿಂಗಳು, ತಾರೀಖು ಯಾವುದಾದರೂ ಸರಿಯಾಗಿ ತಿಳಿಯಿತೆ?"

"ಸುಮ್ಮನಿರು ಈಗಲ್ಲ. ಆ ವೇಳೆಯನ್ನು ನಿರೀಕ್ಷಿಸುವುದಕ್ಕೆ ಅಪ್ಪಣೆಯಾಗಿದೆ."

"ಇನ್ನು ಸಹಿಸಿಕೊಂಡಿರುವುದಕ್ಕಾಗುವುದಿಲ್ಲ. ಎಲ್ಲಿಯವರೆಗೆ ನಮ್ಮ ಧರ್ಮ ಮತ್ತು ಸಂಪ್ರದಾಯಗಳ ಅವಹೇಳನವನ್ನು ಕೇಳಿಕೊಂಡಿರುವುದು?"

## ೪೨

ಸ್ ೧೮೫೭ ನೇ ಇಸವಿಯಲ್ಲಿ ಈಸ್ಟ್ ಇಂಡಿಯಾ ಕಂಪೆನಿಯ ಮುಖಂಡರು ಭಾರತವರ್ಷದಲ್ಲಿ ಒಂದು ಕೊನೆಯಿಂದ ಮತ್ತೊಂದು ಕೊನೆಯವರೆಗೆ ಕ್ರೈಸ್ತಮತ ವನ್ನು ಹರಡುವ ಸ್ವಪ್ನವನ್ನು ಕಂಡರು. ಕೊಬ್ಬಿನಿಂದ ಕೂಡಿದ ತೋಟೆಗಳ ವಾಸ್ತ ವಾಂಶವನ್ನು ಕೆಲವು ಜವಾಬ್ದಾರಿಯುತರಾದ ಆಂಗ್ಲೇಯ ಲೇಖಕರು ಒಪ್ಪಿಕೊಂಡಿದ್ದಾರೆ. ಅದರ ತಯಾರಿಕೆಯನ್ನು ರದ್ದುಗೊಳಿಸಲು ಯತ್ನ ನಡೆಯಿತೆಂಬುದೂ ಸತ್ಯವೇ ಆದರೆ ಆ ಪ್ರಯತ್ನಗಳು ಶಿಥಿಲವಾದವು.

ಹಿಂದೂ ಮುಸಲ್ಮಾನರು ತಮ್ಮ ಧರ್ಮಗಳನ್ನು ತೊರೆದು ಈಸಾಯಿ ಮತ ಮತ್ತು ಆಂಗ್ಲೇಯರ ಶಾಸನಗಳನ್ನು ಯಾವಾಗ ಒಪ್ಪಿಕೊಳ್ಳುವರೋ ಎಂದು ಆ ಸುಸಂಧಿಗಾಗಿ ಕಂಪೆನಿಯ ಬೋರ್ಡಿನ ಅಧ್ಯಕ್ಷನು ನಿರೀಕ್ಷಿಸುತ್ತಿದ್ದನು.

ಆದರೆ ಇಂಗ್ಲೆಂಡಿನಲ್ಲಿದ್ದ ಕೆಲವು ರಾಜ ಕಾರಣಿಗಳಿಗೆ ಭಾರತದಲ್ಲಿ ವಿಸ್ಫೋಟನ ವಾಗಲಿದ್ದ ಜ್ವಾಲಾಮುಖಿಯ ಕಾಲ ತಗುಲಿತು. ಕಂಪೆನಿಯ ಮುಖ್ಯ ಕಾರಕೂನ ನಾದ ಡಲ್ಹೌಸಿಯು ಕಂಪೆನಿ ಸರ್ಕಾರದ ವ್ಯಾಪಾರವನ್ನು ವಿಪರೀತವಾಗಿ ವೃದ್ಧಿ ಪಡಿಸಿದ್ದುದರಿಂದಲೂ ಅದರ ಲೆಖ್ಖಾಚಾರಗಳ ಗಡಿಬಿಡಿಯನ್ನು ಸರಿಪಡಿಸಬೇಕಾಗಿದ್ದು ದರಿಂದಲೂ ಅವನನ್ನು ಇಂಗ್ಲೆಂಡಿಗೆ ಕರೆಸಿಕೊಳ್ಳಲಾಯಿತು. ಆತನ ಬದಲು ಕ್ಯಾನಿಂಗ ನನ್ನು ಕಳುಹಿಸಿದರು.

ಭಾರತದಲ್ಲಿ ಹೊಗೆಯಾಡುತ್ತಿದ್ದ ವಿಪತ್ತಿನ ಮುನ್ಸೂಚನೆಯನ್ನು ಕ್ಯಾನಿಂಗನು ಸ್ಪಷ್ಟವಾಗಿ ಕಂಡನು. ಆದರೂ ಆತ್ಮವಿಶ್ವಾಸವಿದ್ದುದರಿಂದ ಆತನು ಭಾರತಕ್ಕೆ ಬಂದನು. ಬಂದೊಡನೆಯೇ ಈಸಾಯಿಮತ ಪ್ರಚಾರಕ್ಕಾಗಿ ಹಿಂದೂಸ್ಥಾನದ ಖಜಾನೆಯಿಂದ ಹೆಚ್ಚು ಹಣವನ್ನು ಪ್ರತ್ಯೇಕಿಸಿಟ್ಟನು. ಪಂಜಾಬು ಕಂಪೆನಿಯ ಮಿತ್ರ ಸಂಸ್ಥಾನವೆಂದು ಭಾವಿಸಲಾಗಿದ್ದಿತು. ಆದರೆ ಈ ಮತ ಪ್ರಚಾರಣೆಯ ವೇಗ ದಿಂದ ಅದೂ ಅವರ ಕೈ ತಪ್ಪಿತು.

ಇಲ್ಲಿಯಾದರೋ ನಾನಾಸಾಹೇಬ್, ತಾತ್ಯಾ, ಬಹದ್ದೂರ್‌ಷಹ, ಆತನ ಪತ್ನಿ ಬೇಗಂ ಜಿನತ್‌ಮಹಲ್, ಔಧಿನ ಬೇಗಂ ಹಜರತ್‌ಮಹಲ್ ಮತ್ತು ರಾಣಿ ಲಕ್ಷ್ಮಿಬಾಯಿ ಇವರುಗಳ ಪ್ರಭಾವವು ವ್ಯಾಪಿತವಾಗಿ ಸೂಕ್ಷ್ಮ ಪ್ರಚಾರವೂ ನಡೆದಿದ್ದಿತು. ಸ್ವಾತಂತ್ರ್ಯಯುದ್ಧಕ್ಕೆ ಸಂಪೂರ್ಣಹಿಂದೂಸ್ಥಾನದಲ್ಲಿ ವಿಸ್ಫೋಟನವಾಗುವುದಕ್ಕೆ ಇನ್ನೂ ಸ್ವಲ್ಪ ಏರ್ಪಾಡು ನಡೆಯ ಬೇಕಾಗಿದ್ದಿತು. ಆವೇಳೆ ಮತ್ತು ದಿನವು ಮಾತ್ರ ಇನ್ನೂ ನಿಯುಕ್ತವಾಗಿರಲಿಲ್ಲ.

ಸ್ ೧೮೫೭ ನೇ ಜನವರಿ ತಿಂಗಳು ಉದಯಿಸಿತು. ಡಂಡಮ್ಮಿನ ಛಾವನಿಯಲ್ಲಿ ಒಂದು ಘಟನೆಯು ಸಂಘಟಿಸಿತು. ಒಬ್ಬ ಝಾಡಮಾಲಿಯು ಒಬ್ಬ ಬ್ರಾಹ್ಮಣ ಸಿಪಾಯಿಯಿಂದ ನೀರು ಕುಡಿಯುವ ಪಾತ್ರೆಯನ್ನು ಬೇಡಿದನು.

ಬ್ರಾಹ್ಮಣ ಸಿಪಾಯಿಯು ಝಾಡಮಾಲಿಗೆ ಪಾತ್ರೆಯನ್ನು ಹೇಗೆತಾನೆ ಕೊಡ ಬಲ್ಲನು ! ಆತನು ಝಾಡಮಾಲಿಯೋ ಅಲ್ಲವೋ ಅಂತೂ ಪ್ರಚಾರಕನೆಂಬುದೇನೋ ಖಂಡಿತ. ಆತನು ಅಲ್ಲಿಂದ ಓಡಿಹೋಗಲೂ ಇಲ್ಲ, ಸರಿಯಲೂ ಇಲ್ಲ, ನಿಂತಲ್ಲಿಯೇ ಸ್ಥಿರವಾಗಿ ನಿಂತಿದ್ದನು.

"ನೋಡು, ಇವನ ಗರ್ವವನ್ನು ! ಜಾತಿಮತವಂತೆ !! ಹಲ್ಲಿನಿಂದ ಕಚ್ಚಿ ತೆಗೆದು ಚಲಾಯಿಸ ಬೇಕಾದ ತೋಟೆಗಳು ಬರಲಿವೆ. ಅದಕ್ಕೆ ಗೋವು ಮತ್ತು ಹಂದಿಯ ಕೊಬ್ಬನ್ನು ಹಚ್ಚಿದ್ದಾರೆ. ನೋಡೋಣ. ನಿನ್ನ ಜಾತಿಯು ಆ ತೋಟೆಯನ್ನು ಉಪಯೋಗಿಸಿದನಂತರ ಉಳಿಯುತ್ತದೆಯೋ ಹೋಗುತ್ತದೆಯೋ" ಎಂದು ಆ ಝಾಡ ಮಾಲಿಯು ಹೇಳಿದನು.

ತೋಟೆಗಳ ವಿಷಯವಾಗಿ ಬಹಳ ದಿನಗಳಿಂದ ವಿರುದ್ಧ ಪ್ರಚಾರವು ಡಂಡಮ್ಮಿನಲ್ಲಿ ಮಾತ್ರವಲ್ಲದೆ ಹೆಚ್ಚು ಕಡಿಮೆ ಹಿಂದೂಸ್ಥಾನದ ಎಲ್ಲಾ ಶಿಬಿರಗಳ ಹಿಂದೂಸ್ಥಾನಿ ಸಿಪಾಯಿಗಳಿಗೂ ತಿಳಿದಿದ್ದಿತು. ಡಂಡಮ್ಮಿನಲ್ಲಿ ತೋಟೆಗಳ ತಯಾರಿಕೆಯ ಕಾರ್ಖಾನೆಯಿದ್ದು ಅಲ್ಲಿ ಹೇರಳವಾಗಿ ತೋಟೆಗಳನ್ನು ಉತ್ಪತ್ತಿ ಮಾಡುತ್ತಿದ್ದರು. ಆದುದರಿಂದಲೇ ಆ ವ್ಯಂಗ್ಯನುಡಿಯು ಬ್ರಾಹ್ಮಣ ಸಿಪಾಯಿಯ ಮನದಲ್ಲಿ ನಾಟಿತು. ಅವನು ಈ ಸಮಾಚಾರವನ್ನು ಇತರ ಸಿಪಾಯಿಗಳಲ್ಲಿ ಹೇಳಿಕೊಂಡನು. ಅವರ ಮನಗಳಲ್ಲಿ ಕ್ಷೋಭೆಯು ಹರಡುತ್ತಲೂ, ಉಕ್ಕುತ್ತಲೂ ಇದ್ದಿತು. ಸಿಪಾಯಿಗಳ ಮಾತು ಅವರ ಆಂಗ್ಲೇಯ ಅಧಿಕಾರಿಗಳವರೆಗೆ ಮುಟ್ಟಿತು. ಅವರು ಇದನ್ನು ಶುದ್ಧ ಕಾಡು ಹರಟೆ ಎಂದರು. ಸಿಪಾಯಿಗಳು ಕೋಟೆಯ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಹಿಂದೂಸ್ಥಾನಿ ಕೂಲಿಗಾರರಿಂದ ಸರಿಯಾದ ಸಮಾಚಾರವನ್ನು ಸಂಗ್ರಹಿಸಿದರು. ಅವರು ಈ ಅಂಶವು ನಿಜವೆಂದು ಸಮರ್ಥಿಸಿದರು. ಡಂಡಮ್ಮಿನ ಈ ಸಿಪಾಯಿಗಳು ಸಾವಿರಾರು ಪತ್ರಗಳನ್ನು ಬರೆದು ಹಿಂದೂಸ್ಥಾನದ ಎಲ್ಲಾ ಛಾವನಿಗಳಿಗೂ ಕಳುಹಿಸಿದರು.

ಸಿಪಾಯಿಗಳು ಎಲ್ಲೆಡೆಯಲ್ಲಿಯೂ ಎಚ್ಚೆತ್ತು ತವಕಿಸಲಾರಂಭಿಸಿದರು.

ಝಾನ್ಸಿಯ ಛಾವನಿಗೂ ಪತ್ರಗಳು ಬಂದವು. ಇಷ್ಟೊಂದು ಪತ್ರಗಳು ಅತ್ಯಂತ ಗೂಢವಾಗಿ ಎಲ್ಲೆಲ್ಲಿಯೂ ಹರಡಿದ್ದುದು ಆಶ್ಚರ್ಯವನ್ನುಂಟುಮಾಡಿತು. ಜೂಹಿ ಮುಂತಾದವರು ಛಾವನಿಗೆ ಹೋಗುತ್ತಿರಲಿಲ್ಲ. ಆದರೆ ಅವರಿಗೆ ಸಮಾಚಾರ ವನ್ನು ಕೊಡುವವರು ಛಾವನಿಗಳೊಂದಿಗೆ ಸಂಪರ್ಕವನ್ನಿಟ್ಟುಕೊಂಡಿದ್ದರು. ರಾಣಿಗೂ ಈ ಘಟನೆಯ ಸಮಾಚಾರವು ಮುಟ್ಟಿತು. ಅವಳಿಗೆ ಈಗಲೇ ಎಲ್ಲಿಯಾದರೂ ಸಿಪಾಯಿಗಳು ಗಡಿಬಿಡಿ ಮಾಡಿಯಾರೆಂದು ಯೋಚನೆಯಾಯಿತು.

ವಸಂತ ಪಂಚಮಿಯೂ ಕಳೆಯಿತು. ಫೆಬ್ರವರಿ ತಿಂಗಳು; ಕೃಷ್ಣಪಕ್ಷವು ಆರಂಭಿಸಿದ್ದಿತು; ರಾತ್ರಿಯಲ್ಲಿ ಕಾರಿರುಳು; ತಣ್ಣಗೆ ಮಂದಮಾರುತವು ಬೀಸುತ್ತಿದ್ದಿತು. ಆಕಾಶದಲ್ಲಿ ಅಲ್ಲಲ್ಲಿ ಅಸಂಖ್ಯಾತ ನಕ್ಷತ್ರಗಳು ಮಿನುಗುಟ್ಟುತ್ತಿದ್ದುವು. ಮೂಲೆ ಮೂಲೆಯಲ್ಲಿಯೂ ಚಿಟ್ಟೆಯ ಝೇಂಕಾರ ಧ್ವನಿ ಕೇಳಿಬರುತ್ತಿದ್ದಿತು.

ರಾಣಿಗೆ ನಿದ್ರೆ ಬರಲಿಲ್ಲ; ಕಠಿಣವಾದ ವ್ಯಾಯಾಮದಿಂದ ತಪ್ತವಾದ ಶರೀರಕ್ಕೆ ಗಾಳಿಯು ಬೀಸಿ ಛಳಿಯಾಗಲಾರಂಭಿಸಿತು. ಕಿಟಕಿಯು ತೆರೆದಿದ್ದಿತು; ಆ ಗವಾಕ್ಷದ ಮೂಲಕ ಆಕಾಶದಲ್ಲಿ ಮಿನುಗುತ್ತಿದ್ದ ಕೆಲವು ದೊಡ್ಡದೊಡ್ಡ ನಕ್ಷತ್ರಗಳು ಕಂಡು ಬರುತ್ತಿದ್ದವು. ದೂರದಲ್ಲಿ ರೈತಾಪಿ ಸ್ತ್ರೀಯರ ಕಾಲಂದಿಗೆಗಳ ಶಬ್ದವೂ ಮತ್ತು ಜನಪದ ಗೀತೆಗಳನ್ನು ಹಾಡುವ ಸ್ವರವೂ ಕೇಳಿಬರುತ್ತಿದ್ದವು.

ರಾಣಿಯು "ಇವರೇನು ಕ್ರೈಸ್ತರಾಗಿ ಪರಿವರ್ತಿತರಾಗಿ ಬಿಡುವರೆ? ಈಸಾಯಿಗಳಾದ ಮೇಲೆ ಈ ಪದಗಳನ್ನು ಹಾಡಬಲ್ಲರೆ? ಇವರ ಮಕ್ಕಳು ಚಿಣ್ಣಿದಾಂಡು ಮತ್ತು ಕಬಡ್ಡಿಗಳನ್ನು ಬಿಟ್ಟು ಮತ್ತೇನು ಆಟವಾಡುವರು? ಹೋಲಿ, ದಿವಾಲಿ, ದಸರಾ, ಈದ್ ಇವೆಲ್ಲವೂ ಕೊನೆಗಾಣುವುವೆ? ಸ್ತ್ರೀಯರ ಗತಿಯೇನಾಗುವುದು? ಇಂತಹ ಸುಂದರ ಉಡಿಗೆಗಳನ್ನು ತ್ಯಜಿಸಿ ಆಂಗ್ಲೇಯ ಪೋಷಾಕನ್ನು ಧರಿಸುವರೆ? ಕ್ರೈಸ್ತನು ಪುನರ್ಜನ್ಮವನ್ನು ನಂಬುವುದಿಲ್ಲ. ಆದುದರಿಂದ ಮುಕ್ತಿಯ ಅರ್ಥವೇನಾಯಿತು? ಗೀತ, ರಾಮಾಯಾಣ ಮುಂತಾದವುಗಳೇನಾಗುವುವು" ಎಂದು ಯೋಚಿಸಿದಳು.

ರಾಣಿಯು ಎದ್ದು ಕುಳಿತಳು. ಮಹಲ್ಲಿನ ಮುಂದಿದ್ದ ಭವ್ಯವಾದ ಪುಸ್ತಕ ಭಂಡಾರವು ನಿಬಿಡವಾದ ಆ ಕತ್ತಲೆಯಲ್ಲಿ ತನ್ನ ರೂಪರೇಖೆಯನ್ನು ಸ್ವಲ್ಪವಾಗಿ ಪ್ರಕಟಿಸುತ್ತಿದ್ದಿತು.

"ಏನು ವೇದ, ಶಾಸ್ತ್ರ, ಗೀತ, ಪುರಾಣ, ದರ್ಶನ, ಕಾವ್ಯ, ಇವೆಲ್ಲವೂ ವ್ಯರ್ಥ ವಾಗುವುವೆ? ಪುಸ್ತಕಗಳನ್ನೆಲ್ಲಾ ಸುಟ್ಟು ಬಿಡುವರೆ, ಅಥವಾ ಬಿಸುಡುವರೆ?"

ರಾಣಿಯು ತುಟಿ ಕಚ್ಚಿದಳು, ಕಣ್ಣುಗಳಿಂದ ಕಿಡಿ ಹಾರಿತು.

"ಎಂದಿಗೂ ಇಲ್ಲ, ಅದೆಂದಿಗೂ ಆಗುವುದಿಲ್ಲ. ನಾನು ಯುದ್ಧ ಮಾಡುತ್ತೇನೆ.

ಆ ಬಡಪಾಯಿಗಳ ಗೀತೆಯ ರಕ್ಷಣೆಗಾಗಿ, ಈ ಪುಸ್ತಕಗಳಿಗಾಗಿ, ಇವುಗಳಲ್ಲಿ ಅಡಕವಾಗಿರುವ ಮಹತ್ತರ ವಿಷಯಗಳಿಗಾಗಿ ಯುದ್ಧ ಮಾಡುವೆನು. ರೈತಾಪಿ ಜನರ ಪೀಳಿಗೆಯು ಈ ತಪಸ್ಸನ್ನು ಆಚರಿಸಲಾಗದಷ್ಟು ಶಕ್ತಿ ಹೀನರಾಗಿಲ್ಲ. ಕ್ರಿಮಿ ಕೀಟಗಳನ್ನು ನಾಶಪಡಿಸುವಂತೆ ಇವರನ್ನು ಹೊಸಕಿಬಿಡಲಾಗುವುದಿಲ್ಲ.

"ಇಲ್ಲ. ಕೃಷ್ಣ ಪರಮಾತ್ಮನು ಅಮರನು. ಗೀತೆಯು ಅಕ್ಷಯ. ನಾವುಗಳು ಸ್ಥಾಯಿಗಳು. ಭಗವಂತನ ದಯೆಯಿಂದ, ಶಂಕರನ ಆಶೀರ್ವಾದದಿಂದ, ಭಾರತದಲ್ಲಿ ಇನ್ನೂ ಎಷ್ಟು ಶಕ್ತಿಯಿದೆ ಎಂಬುದನ್ನು ನಾನು ಹೇಳಬಲ್ಲೆ, ನಾನು ಈ ಮಹಾಯತ್ನ ದಲ್ಲಿ ಮಡಿದರೆ ತಾನೆ ಏನು? ನನಗಿಂತ ಉತ್ತಮವಾದ ಮತ್ತೊಬ್ಬ ತಪಸ್ವಿಯು ಎದ್ದು ನಿಂತು ಈ ಮಾತೃಭೂಮಿಯನ್ನುದ್ಧರಿಸುವನು. ತಪಸ್ಸಿನ ಕಮವನ್ನು ಖಚಿತವಾಗಿ ಎಂದಿಗೂ ನಿಶ್ಚಯಮಾಡಲಾಗುವುದಿಲ್ಲ."

ರಾಣಿಯು ಮತ್ತೆ ಶಯನಿಸಿದಳು.

"ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ" ಎಂಬ ಗೀತೆಯ ಮಾತುಗಳನ್ನು ಮನಸ್ಸಿನಲ್ಲಿಯೇ ಯೋಚಿಸುತ್ತಾ ನಿದ್ರೆಮಾಡಲು ಯತ್ನಿಸಿದಳು. ಇಷ್ಟರಲ್ಲಿಯೆ ಸ್ತ್ರೀ ಸೈನ್ಯದ ಪ್ರಹರಿಯೊಬ್ಬಳು ಬಾಗಿಲೆಡೆಗೆ ಬಂದು ಕೆಮ್ಮಿದಳು. ರಾಣಿಯು ಎದ್ದು ಕುಳಿತಳು.

"ಏನದು?"

ಪ್ರಹರಿಯು ಒಳಗೆ ಪ್ರವೇಶಿಸಿದಳು.

"ಶ್ರೀಮಂತ್ ಸರ್ಕಾರ್, ಮೋತೀಬಾಯಿಯು ದರ್ಶನಕ್ಕಾಗಿ ಬಂದಿರುವಳು. ನಾನು ಅಡ್ಡಿಮಾಡಿದೆ. ಆದರೆ ಅವಳು ಅದಕ್ಕೆ ಒಪ್ಪಲಿಲ್ಲ. ಹಠಮಾಡಿನಿಂತಿರುವಳು. ಅರ್ಧಗಂಟೆ, ಬಹುಮುಖ್ಯವಾದ ಕೆಲಸವಿದೆಯೆಂದಳು. ತಮ್ಮ ಅಪ್ಪಣೆಯೇನು?" ಎಂದು ಕೇಳಿದಳು.

ರಾಣಿಯು ಮೋತೀಬಾಯಿಯನ್ನು ಒಳಗೆ ಬರಮಾಡಿಕೊಂಡು ಹತ್ತಿರದಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತುಕೊಳ್ಳುವಂತೆ ಹೇಳಿದಳು. ಆದರೆ ಅವಳು ಕುಳಿತು ಕೊಳ್ಳಲಿಲ್ಲ.

"ಸರ್ದಾರ್ ಈ ಪತ್ರವನ್ನು ದಯವಿಟ್ಟು ಓದಿ" ಎಂದು ಪತ್ರವನ್ನು ರಾಣಿಯ ಕೈಗೆ ಕೊಟ್ಟು ಓದಲು ದೀಪವನ್ನು ತಂದಿರಿಸಿದಳು. ಪತ್ರದಲ್ಲಿ ಯಾರ ಸಹಿಯೂ ಇರಲಿಲ್ಲ. ಆದರೆ ಅದರಲ್ಲಿ ಈ ರೀತಿ ಬರೆದಿದ್ದಿತು.

" ಇನ್ನು ಹೆಚ್ಚು ಸಹಿಸುವುದು ಅಸಾಧ್ಯ. ಎಲ್ಲಿಯವರೆಗೆ ಎದೆಗೆ ಚೂರಿಯನ್ನು ಚುಚ್ಚಿಕೊಳ್ಳಲಾದೀತು.? ಏಳಿ, ಧರ್ಮರಕ್ಷಣೆಗಾಗಿ ಸೊಂಟವನ್ನು ಕಟ್ಟಿರಿ. ಕೇವಲ ಹಲವೇ ಜನ ವಿದೇಶೀಯರು ನಮ್ಮ ವಿಸ್ತಾರವಾದ ಮಾತೃಭೂಮಿಯನ್ನು ಸುತ್ತುಗಟ್ಟಿ

ರುವರು. ಅವರನ್ನು ಕಿತ್ತೊಗೆಯಿರಿ. ದೇಶವನ್ನು ಸಂರಕ್ಷಿಸಿ, ಧರ್ಮವನ್ನು ಉದ್ಧಾರ ಮಾಡಿ."

ರಾಣಿ—ಈ ಪತ್ರವೆಲ್ಲಿ ದೊರಕಿತು?

ಮೋತಿ—ಈ ವಿಧವಾದ ಎಷ್ಟೋಪತ್ರಗಳು ಛಾವನಿಗೆ ಬಂದಿವೆ. ನಂಬಿಕೆಗೆ ಅರ್ಹರಾದ ಹಲವು ಜನರು ನನಗೆ ಈ ಸುದ್ದಿಯನ್ನು ಮಧ್ಯಾಹ್ನ ತಿಳಿಸಿದರು. ಈ ಪತ್ರವನ್ನು ಸರ್ದಾರ್ ತಾತ್ಯಾ ಸಾಹೇಬರು ಕೊಟ್ಟಿರುವರು.

ರಾಣಿ—ತಾತ್ಯಾಟೋಪೆ! ಎಲ್ಲಿರುವನು? ಅವನು ಝಾನ್ಸಿಗೆಂದು ಬಂದನು?

ಮೋತಿ—ಸಂಧ್ಯಾಕಾಲದಲ್ಲಿ ಬಂದರು ಮತ್ತು ಪ್ರಾತಃಕಾಲಕ್ಕೆ ಮುಂಚೆಯೇ ಹೊರಟುಹೋಗುವರು. ಅವರು ನಿಮ್ಮ ದರ್ಶನವನ್ನು ಈಗಲೆ ಪಡೆಯಬೇಕೆಂದು ಹೊರಗೆ ಕಾದಿರುವರು.

ರಾಣಿ—ಹೊರಗಿನ ಕೊಠಡಿಯಲ್ಲಿ ಕುಳ್ಳಿರಿಸು. ನಾನು ಈಗಲೇ ಬರುತ್ತೇನೆ.

ರಾಣಿಯು ಒಂದು ಶಾಲನ್ನು ಹೊದೆದು ಕೊಂಡು ತಕ್ಷಣವೇ ಹೊರಗಿನ ಕೊಠಡಿಗೆ ಹೋದಳು. ಮೋತೀಬಾಯಿಯನ್ನೂ ಅದೇ ಕೊಠಡಿಯಲ್ಲಿ ಕುಳ್ಳಿರಿಸಿದಳು.

ರಾಣಿಯು "ಈ ಪತ್ರದ ಪ್ರಯೋಜನವೇನು? ನನಗೆ ಇದು ಸರಿಯಾದ ಸಮಯವಲ್ಲವೆಂದು ತೋರುತ್ತದೆ" ಎಂದು ಕೇಳಿದಳು.

ತಾತ್ಯಾನು "ಹೌದು ಬಾಯಿಸಾಹೇಬ್, ಆದುದರಿಂದಲೇ ಅದನ್ನು ನಿಮ್ಮೆಡೆಗೆ ತಂದೆ. ಮೋತೀಬಾಯಿಯು ಈ ವಿಧವಾದ ಅನೇಕ ಪತ್ರಗಳು ಶಿಬಿರಕ್ಕೆ ಬಂದಿವೆಯೆಂದು ಹೇಳಿದಳು. ಸಿಪಾಯಿಗಳು ಮಿತಿಮೀರಿದ ಕೋಪದಲ್ಲಿರುವರು. ಆದರೆ ಯಾವ ವ್ಯವಸ್ಥೆಯಾಗಲೀ, ಸಂಘಟನೆಯಾಗಲೀ ನಡೆದಿಲ್ಲ. ಸರಿಯಾದ ಸಮಯಕ್ಕೆ ಮೊದಲೇ ಯಾವುದಾದರೂ ವಿಸ್ಫೋಟನೆಯುಂಟಾದರೆ ಅನೇಕ ಮಂದಿ ಸಿಪಾಯಿಗಳು ವ್ಯರ್ಥವಾಗಿ ಮರಣ ಹೊಂದುವರು. ಅಸಫಲತೆ ಮತ್ತು ನಿರಾಶೆಗಳು ದೇಶವನ್ನು ನುಚ್ಚುನುಚ್ಚು ಮಾಡುವುವು. ನಂತರ ಮುಂದೆ ಎಷ್ಟು ಕಾಲದವರೆಗೆ ಈ ದೇಶವು ಆಪತ್ತಿಗೆ ಗುರಿಯಾಗುವುದೋ ನಾನರಿಯೆ" ಎಂದು ಉತ್ತರವಿತ್ತನು.

ರಾಣಿ—ಇದನ್ನು ತಡೆಯಲೇ ಬೇಕು. ನಾವು ಏರ್ಪಡಿಸಿರುವ ಕಾರ್ಯವನ್ನು ತ್ವರೆಗೊಳಿಸಬೇಕು.

ತಾತ್ಯಾ—ಹಣ ಕಾಸುಗಳ ತೊಂದರೆಯೇನಿಲ್ಲ. ಬಹಳ ದಿನಗಳು ಹೋರಾಡಲು ಸಾಕಾಗುವಷ್ಟು ಹಣವು ಒಟ್ಟುಗೂಡಿದೆ. ಶಸ್ತ್ರಾಸ್ತ್ರಗಳ ಏರ್ಪಾಡು ಸಮರ್ಪಕವಾಗಿದೆ. ಆದುದರಿಂದ ಆದಷ್ಟು ಬೇಗ ಸಮಯವನ್ನು ನಿಯುಕ್ತಮಾಡಲಾಗಿದೆ. ದೆಹಲಿ ಮತ್ತು ಲಕ್ನೋ ಇತ್ಯಾದಿಗಳ ಜನರು ಸಮ್ಮತಿಸಿದ್ದಾರೆ. ನಿಮ್ಮ ಸಮ್ಮತಿಯನ್ನು ಪಡೆದು ನಾಳೆ ಮುಂಜಾನೆಗೆ ಮೊದಲೇ ಹೊರಡುವೆನು. ರಾಣಿಯು ಪ್ರಸನ್ನಳಾಗಿ

"ಯಾವ ತಾರೀಖು?" ಎಂದು ಕೇಳಿದಳು.

ತಾತ್ಯಾ—ಮೇ ತಿಂಗಳು ೩೧ ನೇ ತಾರೀಖು, ರವಿವಾರ ಮಧ್ಯಾಹ್ನ ೧೧ ಘಂಟೆಗೆ.

ರಾಣಿ - ಇನ್ನೂ ಮೂರು ನಾಲ್ಕು ತಿಂಗಳುಗಳಿವೆ. ನನಗೆ ಆದಿನವು ಯುಕ್ತವೆಂದು ತೋರುತ್ತದೆ. ದೇಶಾದ್ಯಂತವೂ ಒಟ್ಟಿಗೆತಾನೆ ?

ತಾತ್ಯಾ ಎಲ್ಲಾ ಕಡೆಯಲ್ಲಿಯೂ ಒಂದೇ ಬಾರಿಗೆ. ಅಲ್ಲಿಯವರೆಗೆ ಸಿಪಾಯಿ ಮತ್ತು ಪ್ರಜೆಗಳು ಆತ್ಮನಿಯಂತ್ರತೆಯಿಂದ ಕೆಲಸಮಾಡುವರೆಂದು ನಂಬಿದ್ದೇವೆ.

ರಾಣಿ—ಮೋತೀಬಾಯಿ, ಈಗ ನೀವುಗಳು ದಂಡಿನಲ್ಲಿ ಯಾರೂ ಆದಿನ ಮತ್ತು ನಿಯುಕ್ತ ವೇಳೆಯವರೆಗೆ ಯಾವ ಉಪದ್ರವವನ್ನೂ ಮಾಡದಂತೆ ಎಚ್ಚರಿಕೆವಹಿಸಿ ಕೆಲಸಮಾಡಬೇಕು.

ತಾತ್ಯಾ—ಪ್ರತಿಯೊಂದು ಪಡೆಯಲ್ಲಿಯೂ ಚುನಾಯಿತರಾಗಿರುವ ಮೂವ್ವರು ಹುದ್ದೇದಾರರಿಗೂ ಈ ತಾರೀಖು ಮತ್ತು ವೇಳೆಯನ್ನು ತಿಳಿಸಿ. ಅಲ್ಲಿಯವರೆಗೆ ಸರ್ವ ಪ್ರಕಾರದ ಅವಮಾನಗಳನ್ನೂ ಸಹಿಸಿಕೊಂಡು ಬರಬೇಕೆಂದು ಎಚ್ಚರಿಕೆ ಕೊಡಬೇಕು. ಸಮಯವು ಅದೇ. ಛಾವನಿಗೆ ತಾವರೆಯ ಪುಷ್ಪವು ಬರುವವರೆಗೂ ಯಾರಿಗೂ ಸಮಯವನ್ನು ತಿಳಿಸಕೂಡದು. ಮತ್ತು ಸಿಪಾಯಿಗಳು ಉದ್ರೇಕಿತರಾದರೆ ಅವರನ್ನು ಹತೋಟಿಯಲ್ಲಿಡಬೇಕು. ತಾವರೆಯು ವೈಶಾಖ ಮಾಸದಲ್ಲಿ ಅರಳುವುದು. ಪ್ರತಿಯೊಂದು ಕೆರೆಕುಂಟೆಗಳಲ್ಲಿಯೂ ಹೇರಳವಾಗಿ ದೊರಕುವುದು. ಅದನ್ನು ಸರಿಯಾದ ಸಮಯಕ್ಕೆ ಛಾವನಿಯಲ್ಲಿ ಮೆರವಣಿಗೆ ತರಲಾಗುವುದು. ಅದು ಎಲ್ಲಾ ಸಿಪಾಯಿಗಳಿಗೂ ತಮ್ಮ ಕರ್ತವ್ಯಗಳ ಬಗ್ಗೆ ಎಚ್ಚರಿಕೆ ಕೊಡುವುದಕ್ಕೂ ಮತ್ತು ತಾರೀಖು, ವೇಳೆ, ಇವುಗಳ ಸೂಚನೆ ಕೊಡುವುದಕ್ಕೂ ಆಗಮಿಸುತ್ತದೆ.

ಮೋತಿ—ನನಗೆ ಚೆನ್ನಾಗಿ ಅರ್ಥವಾಯಿತು.

ರಾಣಿ— ಈಗ ಎಲ್ಲಿ ಹೋಗುವೆ ?

ತಾತ್ಯಾ—ಗವಾಲಿಯರ್, ಅಲ್ಲಿಂದ ರಾಜಪುತ್ರಸ್ಥಾನಗಳಿಗೆ ಹೋಗುವೆನು. ಚೈತ್ರಮಾಸದನಂತರ ಮತ್ತೊಂದು ಬಾರಿ ಪರ್ಯಟನ ಮಾಡುವೆನು. ನಾನಾ ಸಾಹೇಬರು ತೀರ್ಥಯಾತ್ರೆಗಾಗಿ ಹೊರಡುವರು. ಅದೇ ನೆಪದಲ್ಲಿ ಕಾರ್ಯಕ್ರಮವನ್ನು ಎಲ್ಲಾ ಜಾಗಗಳಲ್ಲಿಯೂ ತಿಳಿಸಿಬರುವರು.

## ೪೭

ಫೆಬ್ರವರಿ ತಿಂಗಳಲ್ಲಿ ಒಂದು ದುರ್ಘಟನೆಯು ನಡೆಯಿತು. ಬ್ಯಾರಕ್‌ಪೂರಿನ ಹತ್ತೊಂಭತ್ತನೇ ಪಡೆಗೆ ತೋಟಿಗಳನ್ನು ಪಯೋಗಿಸಲು ಕೊಡಲಾಯಿತು. ಅದನ್ನು ಉಪಯೋಗಿಸಲು ಸಿಪಾಯಿಗಳು ಒಂದೇ ಮನಸ್ಸಿನಿಂದ ನಿರಾಕರಿಸಿದರು. ಬಂಗಾಳ ದಲ್ಲಿ ಆಸಮಯದಲ್ಲಿ ಯಾವ ಆಂಗ್ಲೇಯ ಪಡೆಯೂ ಇರಲಿಲ್ಲ. ಆದುದರಿಂದ ಜನರಲ್ ಸಾಹೇಬನು ಒಡನೆಯೇ ಬರ್ಮಾದೇಶದಿಂದ ಒಂದು ಆಂಗ್ಲೇಯ ಪಡೆಯನ್ನು ಬರ ಮಾಡಿಕೊಂಡು ೧೯ ನೇ ಪಡೆಯಿಂದ ಶಸ್ತ್ರಾಸ್ತ್ರಗಳನ್ನು ವಾಪಸ್ಸು ಪಡೆದು ಸಿಪಾಯಿ ಗಳನ್ನು ಕೆಲಸದಿಂದ ವಜಾಮಾಡಲು ನಿಶ್ಚಯಿಸಿದನು. ಸಿಪಾಯಿಗಳಿಗೆ ಈ ಸಮಾ ಚಾರವು ತಿಳಿಯಿತು. ಅವರಲ್ಲಿ ಕೆಲವರು ಗಲಭೆಯಿಲ್ಲದೆ ಶಸ್ತ್ರಾಸ್ತ್ರಗಳನ್ನೂ ಹಿಂದಿರು ಗಿಸಿ ಒಡನೆಯೇ ದಂಗೆಯೇಳಬೇಕೆಂದು ಸಂಕಲ್ಪಿಸಿಕೊಂಡರು. ಆ ಪಡೆಯ ಹಿಂದೂ ಸ್ಥಾನಿ ಹುದ್ದೇದಾರರು ಮೇ ೩೧ ನೇ ತಾರೀಖಿನವರೆಗೆ ತಡೆಯಬೇಕೆಂದು ಸಲಹೆ ಮಾಡಿದರು. ಆದರೆ ಆ ಪಡೆಯ ಮಂಗಲಪಾಂಡೆ ಎಂಬ ಒಬ್ಬ ಸಿಪಾಯಿಯು ಸ್ವಯಂ ಪ್ರತ್ಯೇಕವಾಗಿ ಒಬ್ಬ ಹುದ್ದೇದಾರನನ್ನು ಕೊಂದನು. ಅದಕ್ಕಾಗಿ ಅವನಿಗೆ ಗಲ್ಲಿನ ಶಿಕ್ಷೆಯು ದೊರೆಯಿತು.

ಈ ಸಮಾಚಾರವು ಬಹು ಬೇಗ ಉತ್ತರ ಹಿಂದೂಸ್ಥಾನದಲ್ಲೆಲ್ಲಾ ಹರಡಿತು.

ನಾನಾಸಾಹೇಬ್ ಮತ್ತು ಅಜಿಮುಲ್ಲಾ ಇವರಿಬ್ಬರೂ ಮಾರ್ಚಿ ತಿಂಗಳಲ್ಲಿ ತೀರ್ಥಯಾತ್ರೆಗಾಗಿ ಹೊರಟರು. ಡಿಲ್ಲಿಯಲ್ಲಿ ಗೂಢವಾದ ಮಂತ್ರಾಲೋಚನೆ ನಡೆ ಯಿತು. ಅಲ್ಲಿಂದ ಅಂಬಾಲಾಗೆ ಹೊರಟರು. ಇದಾದನಂತರ ಸುಮಾರು ಏಪ್ರಿಲ್ ತಿಂಗಳ ಮಧ್ಯದ ವೇಳೆಗೆ ಲಕ್ನೋವನ್ನು ಮುಟ್ಟಿದರು. ಅಲ್ಲಿ ನಾನಾಸಾಹೇಬನನ್ನು ವಿಜೃಂಭಣೆಯಿಂದ ಮೆರವಣಿಗೆ ಮಾಡಲಾಯಿತು. ಆತನು ಆಂಗ್ಲೇಯರೊಂದಿಗೆ ಪ್ರತ್ಯೇಕ ವಿಧದಲ್ಲಿ ಅವರಿಗೆ ಯಾವ ವಿಧವಾದ ಅನುಮಾನವೂ ಬಾರದಂತೆ ಆಗಿಂದಾಗ್ಗ್ಯೆ ಹೋಗಿ ಮಾತನಾಡುತ್ತಿದ್ದನು.

ಲಕ್ನೋವಿನನಂತರ ಆತನು ಕಾಲ್ಪಿ ಮತ್ತು ಝಾಂಸಿಗೆ ಹೋದನು. ಅಲ್ಲಿ ಯೋಜನೆಯ ಕಾರ್ಯಕ್ರಮವನ್ನು ನಿಶ್ಚಯಪಡಿಸಿಕೊಂಡು ಹೊರಟುಹೋದನು. ಉತ್ತರ ಹಿಂದೂಸ್ಥಾನದಲ್ಲಿದ್ದ ಹೆಚ್ಚು ಕಡಿಮೆ ಎಲ್ಲಾ ಛಾವನಿಗಳಿಗೂ ಹೋಗಿ ಅವ ರಿಬ್ಬರೂ ಬಿಟ್ಟೂರನ್ನು ಸೇರಿದರು. ಅಲ್ಲಲ್ಲೇ ಪ್ರಭಾವಶಾಲಿಗಳಾದ ಜನರನ್ನು ಪ್ರಚಾರಕ್ಕಾಗಿ ನಿಯೋಜಿಸಿದರು. ಈವರೆಗೂ ಆಂಗ್ಲೇಯರಿಗೆ ಕ್ರಾಂತಿಯ ಸ್ವರೂಪವು ಸ್ವಲ್ಪವಾದರೂ ಗೋಚರವಾಗಲಿಲ್ಲ.

ಬೇಸಿಗೆಯು ಪ್ರಾರಂಭಿಸಿತು. ಕೆರೆ ತಟಾಕಗಳಲ್ಲಿ ತಾವರೆಗಳು ಅರಳಿದವು.

ಪೈರು, ಕುಯಿಲಾದ ಧಾನ್ಯಗಳು ಮನೆಗಳಿಗೆ ಬರಲಾರಂಭಿಸಿದುವು. ಸ್ವಾತಂತ್ರ್ಯ ಸಮರಕ್ಕೆ ಎರಡು ಚಿಹ್ನೆಗಳು ಕಾಣಿಸಿಕೊಂಡವು—ತಾವರೆ ಮತ್ತು ದವಸಧಾನ್ಯ. ಭಾರತದ ಪ್ರತಿಯೊಂದು ಛಾವನಿಯಲ್ಲೂ ತಾವರೆ ಹೂವುಗಳು ಹರಡಿದವು.

ತಾವರೆ ಪುಷ್ಪಗಳಲ್ಲಿ ಸರ್ವಶ್ರೇಷ್ಠ. ಸರಸ್ವತಿಯ ಮಹಾನತೆಯೂ ಲಕ್ಷ್ಮಿಯ ವಿಶಾಲತೆಯೂ ಅದರ ಪರಾಗ ಮತ್ತು ಕೇಸರಗಳಲ್ಲಿ ದೃಗ್ಗೋಚರವಾಗದಂತೆ ಅಡಗಿವೆ. ಅದು ವಿಷ್ಣುವಿನ ನಾಭಿಯಿಂದ ಜನಿತವಾಯಿತು. ಅನಂತಕಾಲದವರೆಗೂ ಅದು ಅಲ್ಲೇ ಇರುವುದು. ಅದು ಹಿಂದೂಸ್ಥಾನದ ಪ್ರಕೃತಿಯ ಮೃದುಲ, ಮಂಜುಳ, ಮಂಗಳ ಮತ್ತು ಪಾವನತೆಯ ಚಿಹ್ನೆಯಾಗಿರುವುದು. ಅದರ ಬಣ್ಣ ತಿಳಿಗೆಂಪು; ರಕ್ತವರ್ಣವಲ್ಲ. ಹಿಂದೂಸ್ಥಾನದಲ್ಲಿ ನಡೆಯ ಬೇಕಾದ ಕ್ರಾಂತಿಯಲ್ಲಿ ಕಡುಗೊಲೆ ಯಾಗುವುದೇನೋ ನಿಶ್ಚಯವಾಗಿದ್ದಿತು. ಆದರೆ ಆ ಖೂನಿ ಮತ್ತು ಕ್ರಾಂತಿಯ ಗರ್ಭದಲ್ಲಿ ಮಂಜುಳತೆ ಮತ್ತು ಪಾವನತೆಯು ಅಡಕವಾಗಿದ್ದಿತು. ಆದುದರಿಂದಲೇ ೩೧ ನೇ ಇಸವಿಯ ದಂಗೆಗೆ ಇದನ್ನು ಮುನ್ಸೂಚಕವಾಗಿ ಆರಿಸಿದ್ದರು. ಕ್ರಾಂತಿಯನ್ನು ಹೂಡೋಣ—ಮಾನವೀಯತೆಯನ್ನು ಬಲಿತೆಗೆದುಕೊಂಡೇ ಮಾನವೀ ಯತೆಯ ರಕ್ಷೆಗಾಗಿ ಈ ಕ್ರಾಂತಿಯು ನಡೆಯಲಿ.

ತಾವರೆಯೊಂದಿಗೆ ರೊಟ್ಟಿಯನ್ನು ಮಾಡಿ ಕಳುಹಿಸುತ್ತಿದ್ದರು. ಒಂದು ಹಳ್ಳಿ ಯಿಂದ ಮತ್ತೊಂದು ಹಳ್ಳಿಗೆ ಒಂದು ರೊಟ್ಟಿಯನ್ನು ಕಳುಹಿಸುತ್ತಿದ್ದರು. ಪುನಃ ಆ ಹಳ್ಳಿಯಿಂದ ಹೊಸದಾಗಿ ರೊಟ್ಟಿಯನ್ನು ಮಾಡಿ ನೆರೆಹಳ್ಳಿಗೆ ರವಾನಿಸುತ್ತಿದ್ದರು. ಹಿಂದೂಸ್ಥಾನೀಯರ ಊಟದ ಸಂರಕ್ಷಣೆಗಾಗಿ ಹೂಡಿದ ಆ ಕ್ರಾಂತಿಗೆ ರೊಟ್ಟಿಯೇ ಪ್ರತೀಕವಾಗಿದ್ದಿತು.

ಯಾರು ಪ್ರತೀಕಗಳ ಕಲ್ಪನೆಯನ್ನು ಮಾಡಿದರೋ ಅವರು ಕಲ್ಪನೆಯ ಮೇಲ್ಮ ಟ್ಟವನ್ನು ಮುಟ್ಟಿದ್ದರೆಂದೇ ಹೇಳಬೇಕು—ಆ ಕಲ್ಪನೆಯು ಹಿಂದೂ ಮತ್ತು ಮುಸಲ್ಮಾನ ರಿಬ್ಬರಿಗೂ ಅನ್ವಯಿಸುತ್ತಿದ್ದಿತು.

ತಾವರೆ ಮತ್ತು ರೊಟ್ಟಿಗಳ ಈ ಸಂದೇಶವು ಎಲ್ಲಾ ಕಡೆಗೂ ಮುಟ್ಟುವುದಕ್ಕೆ ಮೊದಲೇ ಮೇ ೬ ನೇ ತಾರೀಖಿನಂದು ಮೀರತ್ತಿನಲ್ಲಿ ವಿಸ್ಫೋಟನವಾಯಿತು.

ಮೀರತ್ತಿನಲ್ಲಿ ಬಹಳ ದೊಡ್ಡ ಛಾವನಿಯಿದ್ದಿತು. ಅನೇಕ ಹಿಂದೂಸ್ಥಾನಿ ಮತ್ತು ಆಂಗ್ಲೇಯ ಪಡೆಗಳು ಅಲ್ಲಿದ್ದವು. ಒಂದು ಹಿಂದೂ ಪಡೆಯ ತೊಂಭತ್ತು ಸಿಪಾಯಿಗಳಿಗೆ ಚಲಾಯಿಸಲು ತೋಟೆಗಳನ್ನು ಕೊಟ್ಟರು. ಸಿಪಾಯಿಗಳಿಗೆ ಈ ತೋಟೆ ಗಳಲ್ಲಿ ಅಸ್ಪೃಶ್ಯವಾದ ಕೊಬ್ಬು ಮಿಶ್ರವಾಗಿತ್ತೆಂದು ತಿಳಿದಿದ್ದಿತು. ಆಂಗ್ಲೇಯರು ಆ ತೋಟೆಗಳಲ್ಲಿ ಆ ಕೊಬ್ಬು ಮಿಶ್ರವಾಗಿಲ್ಲವೆಂದು ಆಶ್ವಾಸನೆಯಿತ್ತರು. ಅದರಲ್ಲಿ ಐವತ್ತು ಸಿಪಾಯಿಗಳು ತೋಟೆಗಳನ್ನು ಮುಟ್ಟುವುದಿಲ್ಲವೆಂದರು. ಅವರನ್ನು ಸೈನ್ಯದ ಶಿಸ್ತಿ

ನಂತೆ (ಕೋರ್ಟ್‌ಮಾರ್ಷಲ್ ಮಾಡಿ) ಆಜ್ಞೆಯನ್ನು ಉಲ್ಲಂಘಿಸಿದುದಕ್ಕಾಗಿ ಅವರಿಗೆ ಹತ್ತು ವರ್ಷಗಳ ಕಠಿಣ ಸಜೆಯನ್ನು ವಿಧಿಸಿದರು. ಮೇ ಒಂಭತ್ತನೇ ತಾರೀಖು ಇವರನ್ನು ಆಂಗ್ಲೇಯ ಪಡೆ ಮತ್ತು ತೋಪುಖಾನೆಗಳ ಮುಂದೆ ಕರೆತಂದು ನಿಲ್ಲಿಸಿದರು. ನಂತರ ಸಮವಸ್ತ್ರಗಳನ್ನು ತೆಗೆಯಿಸಿ ಕೈಗೆ ಕೋಳಗಳನ್ನು ತೊಡಿಸಿದರು. ಈ ದೃಶ್ಯವನ್ನು ನೋಡಲು ಶಿಬಿರದ ಇತರ ಹಿಂದೂಸ್ಥಾನಿ ಸಿಪಾಯಿಗಳನ್ನು ಕರೆಸಿದ್ದರು.

ಇದಾದನಂತರ ಆ ತಪ್ಪಿತಸ್ಥರನ್ನು ಬಂದೀಖಾನೆಗೆ ಕರೆದುಕೊಂಡು ಹೊರಟು ಹೋದರು.

ಅವರ ಜೊತೆಯ ಸಿಪಾಯಿಗಳು ಕ್ರೋಧಗೊಂಡರು. ಆದರೆ ಅವರಿಗೆ ಮೇ ೩೧ ನೇ ತಾರೀಖಿನವರೆಗೂ ತಡೆಯಬೇಕೆಂದು ಆಜ್ಞೆಯಿದ್ದಿತು. ಆದುದರಿಂದ ಅವರು ಕೋಪವನ್ನು ನುಂಗಿ ಕೊಂಡರು. ಈ ಘಟನೆಯು ಬೆಳಿಗ್ಗೆ ನಡೆಯಿತು.

ಸಂಧ್ಯಾಕಾಲದಲ್ಲಿ ಹಿಂದೂಸ್ಥಾನಿ ಸಿಪಾಯಿಗಳು ಪೇಟೆಗೆ ಹೋದರು. ಎಲ್ಲದಕ್ಕೂ ಮೊದಲು ಅಲ್ಲಿದ್ದ ಕೆಲವು ವೇಶ್ಯೆಯರು "ಅಹಾ! ಎಂತಹ ಪುರುಷರು ನೀವು? ಸಹೋದರರನ್ನು ಬಂದೀಖಾನೆಗೆ ಕಳುಹಿಸಿ ಮೀಸೆಯನ್ನು ಹೊತ್ತು ತಿರುಗುತ್ತಿರುವಿರಲ್ಲಾ, ಎಲ್ಲಿಯಾದರೂ ಕೆರೆ ಭಾವಿಯಲ್ಲಿ ಬಿದ್ದು ಸಾಯಬಾರದೇ" ಎಂದು ಆಕ್ಷೇಪಿಸಲು ಪ್ರಾರಂಭಿಸಿದರು.

ಅದರೊಂದಿಗೆ ಗೃಹಸ್ಥ ಸ್ತ್ರೀ ಪುರುಷರೂ ದನಿಗೂಡಿಸಿದರು.

ಸಿಪಾಯಿಗಳು ತಮ್ಮ ಬಿಡಾರಗಳಿಗೆ ಹಿಂದಿರುಗಿದರು. ಅವರ ಧೈರ್ಯವೇ ಉಡುಗಿ ಹೋಗಿದ್ದಿತು. ಸ್ತ್ರೀಯರ ವಾಕ್ಯಗಳು ಅವರ ರಕ್ತವನ್ನು ಕುದಿಯುವಂತೆ ಮಾಡಿತು. ರಾತ್ರಿಯಲ್ಲಿ ಗೂಢಸಮಾಲೋಚನೆ ನಡೆಯಿತು. ಮೇ ೩೧ ರವರೆಗೆ ತಡೆಯಲು ಆಗುವುದಿಲ್ಲವೆಂದು ನಿಶ್ಚಯಿಸಿದರು. ಅದೇ ರಾತ್ರಿ—ನಾಳೆ ನಾಡಿದ್ದರಲ್ಲಿ ದೆಹಲಿಯನ್ನು ಮುಟ್ಟುವೆವು. ಎಲ್ಲರೂ ಸಿದ್ಧರಾಗಿರಿ—ಎಂದು ದೆಹಲಿಗೆ ಸಮಾಚಾರವನ್ನು ಕಳುಹಿಸಿದರು.

ಮೇ ೧೦ ನೇ ತಾರೀಖು ಮಾರತ್ತಿನಲ್ಲಿ ಕತ್ತಿ ಮತ್ತು ಬಂದೂಕುಗಳು ಕಾರ್ಯಗತವಾದವು. ಆಂಗ್ಲೇಯರನ್ನು ಕೊಂದು ಸಿಪಾಯಿಗಳು ಮಾರನೆಯದಿನ ದೆಹಲಿಯನ್ನು ಮುಟ್ಟಿದರು. ಅಲ್ಲಿನ ಹಿಂದೂಸ್ಥಾನಿ ಸೇನೆಯು ಅವರೊಂದಿಗೆ ಸೇರಿಕೊಂಡಿತು. ದೆಹಲಿಯ ಜನರೂ ಅವರಿಗೆ ಬೆಂಬಲವಿತ್ತರು.

ನಾಲ್ಕು ದಿಕ್ಕುಗಳಲ್ಲಿಯೂ "ದೀನ್! ದೀನ್! ಅಲ್ಲಾಹೋ ಅಕ್ಬರ್" ಮತ್ತು "ಹರಹರ ಮಹಾದೇವ್" ಎಂಬ ಶಬ್ದಗಳು ಒಂದರೊಂದಿಗೊಂದು ಮಿಳಿತವಾಗಿ ಘೋಷಿಸಿದವು. ದೆಹಲಿಯ ಹಿಂದೂಸ್ಥಾನಿ ಪಡೆಗಳು ದೆಹಲಿಯ ಕೆಂಪುಕೋಟೆಯ ಅಧಿಕಾರ ಚಲಾಯಿಸಿದವು. ಬಾದಷಹ ಬಹದ್ದೂರ್ ಷಹನನ್ನು ಭಾರತದ

ಸಾಮ್ರಾಟನೆಂದು ಘೋಷಿಸಿ ೨೧ ತೋಪುಗಳ ಸಲಾಮನ್ನು ಅರ್ಪಿಸಿದರು. ಬಾದ ಷಹನು ಕ್ರಾಂತಿಯ ಮುಖಂಡತ್ವವನ್ನು ಸ್ವೀಕರಿಸಿ ಮೊಟ್ಟಮೊದಲು ಗೋವಧೆಯನ್ನು ನಿಲ್ಲಿಸಬೇಕೆಂದು ಆಜ್ಞೆಯನ್ನು ಹೊರಡಿಸಿದನು.

ಮೇ ತಿಂಗಳಲ್ಲಿ ಉತ್ತರ ಹಿಂದೂಸ್ಥಾನದಲ್ಲೆಲ್ಲಾ ಕ್ರಾಂತಿಯ ಜ್ವಾಲೆಯು ಒಂದೊಂದು ದಿನ ಒಂದೊಂದೆಡೆ ಪ್ರಸರಿಸಿತು.

ಜೂನ್ ೪ ನೇ ತಾರೀಖು ಕಾನ್ಪುರದಲ್ಲಿ ಮಧ್ಯ ರಾತ್ರಿ ಇದ್ದಕ್ಕಿದ್ದಂತೆ ಮೂರು ಸಲ ಗುಂಡು ಹಾರಿಸಲಾಯಿತು. ಹಿಂದೂಸ್ಥಾನಿ ಸೇನೆಯು ಕಾನ್ಪುರದಲ್ಲಿ ಕ್ರಾಂತಿಯನ್ನು ಆರಂಭಿಸಿತು. ಬೆಳಗಾಗುವ ವೇಳೆಗೆ ಖಜಾನೆ ಮತ್ತು ಶಸ್ತ್ರಾಗಾರವು ಕ್ರಾಂತಿಕಾರರ ಕೈವಶವಾಯಿತು. ನಾನಾಸಾಹೇಬ್‌ನನ್ನು ರಾಜನೆಂದು ಘೋಷಿಸಲಾಯಿತು.

## ೪೮

ಸ್ಕೀನ್ ಗಾರ್ಡನ್ ಡಲಪ್ ಇತ್ಯಾದಿಗಳಿಗೆ ಮೇ ತಿಂಗಳಲ್ಲಿ ನಡೆದ ಘಟನೆಯ ಸಂಗತಿಯು ತಿಳಿಯಿತು. ಇದಕ್ಕೆ ಮೊದಲೇ ರಾಣಿಗೂ ಈ ಸಮಾಚಾರವು ಮುಟ್ಟಿತು. ರಾಣಿಯು ತನ್ನ ಮಹಲ್ಲಿಗೆ ಬಂದು ಹೋಗುವವರನ್ನೆಲ್ಲಾ ಒಂದು ನಿರ್ದಿಷ್ಟ ಸಮಯದವರೆಗೆ ಬರಕೂಡದೆಂದು ಆಜ್ಞೆ ಮಾಡಿದಳು. ಆವಳ ಬಳಿಗೆ ಬಂದು ಹೋಗುವವರಲ್ಲಿ ಮೋತೀಬಾಯಿಯು ಒಬ್ಬಳಾಗಿದ್ದಳು. ಅವಳ ಮೂಲಕವಾಗಿಯೇ ಎಲ್ಲಾ ಮಹತ್ವಪೂರ್ಣ ಸಂಗತಿಗಳನ್ನು ಅರಿಯುತ್ತಲೂ, ತಿಳಿಸುತ್ತಲೂ ಇದ್ದಳು. ಮೋತೀಬಾಯಿಯು ಖುದಾಬಕ್ಷ ಮತ್ತು ರಘುನಾಥಸಿಂಹರೊಡನೆ ಸಂಪರ್ಕವನ್ನಿಟ್ಟುಕೊಂಡಿದ್ದಳು. ಅವಳು ಇವರಿಗೆ ಎಲ್ಲಾ ಸಮಾಚಾರವನ್ನೂ ಸಂಪೂರ್ಣವಾಗಿ ತಿಳಿಸುತ್ತಿದ್ದಳು. ಇದು ಸ್ವಾಭಾವಿಕವೆ. ಅಂತೆಯೇ ಅವರಿಬ್ಬರೂ ಇತರರೊಂದಿಗೆ ಸಂಪರ್ಕದಲ್ಲಿದ್ದುಕೊಂಡು ಈ ಪ್ರಕಾರವಾಗಿ ಕೆಲಸವನ್ನು ನಡೆಸುತ್ತಿದ್ದರು.

ಮೋತೀಬಾಯಿಯು ಖುದಾಬಕ್ಷನಿಗೆ ಮಹಲ್ಲಿಗೆ ಬರುವ ಆಗಂತುಕರನ್ನು ಅಡ್ಡಿ ಮಾಡಿರುವ ಕಾರಣವನ್ನು ತಿಳಿಸಿದಳು. ಖುದಾಬಕ್ಷನು ಇದನ್ನು ಪೀರ್‌ಅಲಿಗೆ ಹೇಳಿದನು. ಆತನು ಒಡನೆಯೆ ಅದನ್ನು ತನ್ನ ಒಡೆಯ ನವಾಬ್ ಅಲೀಬಹದ್ದೂರಿನಲ್ಲಿ ನಿವೇದನೆಮಾಡಿಕೊಂಡನು. ಮೇ ೩೧ ನೇ ತಾರೀಖಿನ ವಿಚಾರ ಮತ್ತು ಇನ್ನೂ ಹಲವು ಮುಖ್ಯಸಂಗತಿಗಳು ಆಂಗ್ಲೇಯ ಆಫೀಸರುಗಳಿಗೆ ತಿಳಿಯಬಂದಿತು. ಆದರೆ ದೆಹಲಿ, ಮೀರತ್ತು ಮುಂತಾದ ಸ್ಥಳಗಳಲ್ಲಿ ಇದಕ್ಕೆ ಮೊದಲೇ ಬೇಕಾದಷ್ಟು ನಡೆದು ಒಂದು ಅಧ್ಯಾಯವು ಮುಗಿದಿತ್ತು. ಆದುದರಿಂದ ಅವರು ಮೇ ೩೧ ನೇ ತಾರೀಖಿನ ವರೆಗೆ ತಡೆದು ಆರಂಭವಾಗಲಿರುವ ಘಟನೆಗೆ ಪ್ರಾಮುಖ್ಯತೆ ಕೊಡಲಿಲ್ಲ.

ಸ್ಕೀನ್ ಸಾಹೇಬನು ಮೇ ತಿಂಗಳಲ್ಲಿ ಆಗ್ರಾದಲ್ಲಿದ್ದ ಲೆಫ್ಟಿನೆಂಟ್ ಗೌರ್ನರ್ ಸಾಹೇಬನಿಗೆ ಬರೆದ ಪತ್ರದಲ್ಲಿ ಝಾನ್ಸಿಯಲ್ಲಿ ಯಾವ ವಿದ್ರೋಹ ಚಿಹ್ನೆಯೂ ಇಲ್ಲ ಮತ್ತು ಸಿಪಾಯಿಗಳ ಮೇಲೆ ಸಂಪೂರ್ಣ ವಿಶ್ವಾಸವಿಡಬಹುದು ಎಂದು ವಿವರವಾಗಿ ಬರೆದಿದ್ದನು. ಜೂನ್ ೧ ನೇ ತಾರೀಖಿನ ಪತ್ರದಲ್ಲಿ ಆತನು ಎಲ್ಲದಕ್ಕಿಂತಲೂ ಮೊದಲು ಸ್ವಲ್ಪ ಉಪದ್ರವಗಳ ಸೂಚನೆಯುಂಟೆಂದು ಬರೆದಿದ್ದನು.

"ನನಗೆ ನಿನ್ನೆಯ ರಾತ್ರಿ ಕೆಲವು ಮುಖಂಡರು ಕೋಂಚಿನ ಮೇಲೆ ಧಾಳಿ ಮಾಡುವನೆಂಬ ಸಮಾಚಾರವು ದೊರಕಿತು. ನಾನು ಒಡನೆಯೇ ಡನ್‌ಲಪ್ಪನಿಗೆ ಸೂಚನೆಯಿತ್ತೆ. ಬೆಳಿಗ್ಗೆ ಊರಿನ ರಕ್ಷಣೆಗಾಗಿ ಸ್ವಲ್ಪ ಸೈನ್ಯವನ್ನು ಕಳುಹಿಸ ಲಾಯಿತು. ಸೇನೆಯು ಊರನ್ನು ತಲುಪಿದೊಡನೆಯೇ ಮುಖಂಡರ ಚಳುವಳಿಯು ಬದಲಾಯಿಸಿತು ಅಲ್ಲಲ್ಲಿ ಕೆಲವು ವಿದ್ರೋಹಿಗಳೇನೋ ಇರುವರು. ಆದರೂ ಕೂಡ ಇಲ್ಲಿನ ಜನರು ನಮಗೆಂದಿಗೂ ಕೇಡೆಣಿಸುವುದಿಲ್ಲ."

ಮುಖ್ಯವಾಗಿ ರಾಣಿಯ ದೃಢ ಸಂಕಲ್ಪದ ಕಾರಣ ಝಾಂಸಿಯಲ್ಲಿ ಆ ಸಮಯ ವಿಸ್ಫೋಟನವಾಗಲಿಲ್ಲ. ಮಹಲ್ಲಿಗೆ ಆಗಂತುಕರನ್ನು ನಿಷೇಧಿಸಿರುವ ವಾರ್ತೆಯನ್ನು ಕೇಳಿ ಆಂಗ್ಲೇಯರಿಗೆ ಮತ್ತಷ್ಟು ವಿಶ್ವಾಸವುಂಟಾಯಿತು. ರಾಣಿಗೆ ಈ ಆಂದೋಲನ ದಲ್ಲಿ ಯಾವ ಸಂಪರ್ಕವೂ ಇಲ್ಲವೆಂದೆಣಿಸಿದರು. ಕೊಂಚಹಳ್ಳಿಯ ಮೇಲೆ ಹಲವು ಮುಖಂಡರು ಧಾಳಿಮಾಡುವರೆಂಬ ಸುದ್ದಿಯು ಜೂನ್ ೧ ನೇ ತಾರೀಖು ಸ್ಕೀನನಿಗೆ ಮುಟ್ಟಿದುದರಲ್ಲಿ, ಆತನು ಬೇಕಾದಷ್ಟು ಅರ್ಥಮಾಡಿಕೊಳ್ಳಬಹುದಾಗಿದ್ದಿತು. ಆದರೆ ಆ ಮುಖಂಡರುಗಳಿಗೆ ಮೇ ೩೧ ನೇ ತಾರೀಖಿನಿಂದಾಚೆಗೆ ಕಾರ್ಯಕ್ರಮವು ನಿಯುಕ್ತ ವಾಗಿವೆಯೆಂಬುದು ತಿಳಿದಿರಲಿಲ್ಲವೆಂದು ತೋರುತ್ತದೆ. ಅಲ್ಲದೆ ಮಾರನೆಯ ದಿನವೇ ಹಿಂದೂಸ್ಥಾನಿ ಸಿಪಾಯಿಗಳ ಪಡೆಯು ಆ ಹಳ್ಳಿಯನ್ನು ಸೇರಿದುದು. ಆ ಮುಖಂಡರು ಗಳಿಗೆ ಮತ್ತಷ್ಟು ಹತೋತ್ಸಾಹವಾಯಿತು.

ಜೂನ್ ೪ ನೇ ತಾರೀಖು ಕಾನ್‌ಪುರದಲ್ಲಿಯೂ, ಝಾಂಸಿಯಲ್ಲಿಯೂ ಕ್ರಾಂತಿಯ ಲಕ್ಷಣಗಳು ತೋರಿಬಂದವು. ಗುರುಬಕ್ಷಸಿಂಹನೆಂಬ ಹವಾಲ್ದಾರನು ಕೆಲವು ಸೈನಿಕ ರೊಡನೆ ಪುರಾತನ ಕೋಟೆಯಿಂದ ಒಂದು ಮೈಲಿ ಆಚೆ ನಗರದ ಹೊರಭಾಗದಲ್ಲಿ ಕಂಪನಿಯವರು ನಿರ್ಮಿಸಿದ್ದ "ಸ್ಟಾರ್‌ಫೋರ್ಟ್" ಅಥವಾ 'ತಾರಾಘಡ'ವೆಂಬ ಚಿಕ್ಕ ಕೋಟೆಯನ್ನು ಹೊಕ್ಕು ಯುದ್ಧ ಸಾಮಗ್ರಿಗಳು ಹಣಕಾಸು ಮುಂತಾದುವನ್ನು ದೋಚಿಕೊಂಡು ಅವರನ್ನು ಇದುರಿಸಲು ಹೋದನು. ಸ್ಟಾರ್‌ಫೋರ್ಟಿನಲ್ಲಿ ಯಾವ ಸಾಮಗ್ರಿಯೂ ಇಲ್ಲದುದನ್ನು ಕಂಡು ಹಿಂದಿರುಗಿದನು. ಕಮೀಷನರಿಗೆ ಈ ವಿಚಾರವು ತಿಳಿಯಿತು. ಆತನ ಸಲಹೆಯಂತೆ ಛಾವನಿಯ ಎಲ್ಲಾ ಆಂಗ್ಲೇಯರೂ ತಮ್ಮ ಸಂಸಾರ ಗಳೊಂದಿಗೆ ಕೋಟೆಯಲ್ಲಿ ವಾಸಮಾಡಲು ಸಿದ್ಧರಾದರು. ಡನ್‌ಲಪ್ಪನು ನೌಗಾಂಗ್

ಎಂಬ ಸ್ಥಳದಲ್ಲಿದ್ದ ದಂಡಿನ ಸಹಾಯವನ್ನು ಕೋರಿ ಒಂದು ಪತ್ರ ಬರೆದನು.

ಆ ಸಮಯದಲ್ಲಿ ಅವರಿಗೆ ರಾಣಿಯ ಶೌರ್ಯ, ತೇಜಸ್ಸು, ಯೋಗ್ಯತೆ ಇವುಗಳ ಜ್ಞಾಪಕ ಬಂದಿತು.

ಗಾರ್ಡನ್ನನು ಕೆಲವು ಆಂಗ್ಲೇಯರೊಂದಿಗೆ ರಾಣಿಯ ಮಹಲ್ಲಿಗೆ ಬಂದನು. ಆತನು "ಈಗ ಶಿಬಿರದಲ್ಲಿ ಉಂಟಾಗಿರುವ ಈ ಅಲ್ಲೋಲಕಲ್ಲೋಲವನ್ನು ನಾವು ಅಡಗಿಸಬಲ್ಲೆವೆಂಬ ಭರವಸೆಯಿದೆ. ಆದರೆ ಏನಾದರೂ ಹೆಚ್ಚು ತೊಂದರೆ ಯುಂಟಾದರೆ ತಾವು ನಮಗೆ ಸಹಾಯಮಾಡಬೇಕೆಂದು ಕೋರುತ್ತೇವೆ" ಎಂದು ರಾಣಿಗೆ ಹೇಳಿಕಳುಹಿಸಿದನು.

ರಾಣಿಯು "ಈಗ ನಮ್ಮ ಬಳಿ ಉತ್ತಮ ಶಸ್ತ್ರಾಸ್ತ್ರಗಳಾಗಲೀ ಯೋಧರಾಗಲೀ ಇಲ್ಲ. ದೇಶದಲ್ಲಿ ಉಪದ್ರವವೇನೋ ಹರಡುತ್ತಿದೆ. ನನಗೆ ಅನುಮತಿದೊರಕುವು ದಾದರೆ ನಮ್ಮ ಮತ್ತು ಜನರ ರಕ್ಷಣೆಗಾಗಿ ಒಂದು ಒಳ್ಳೆಯ ಸೈನ್ಯವನ್ನು ಸೇರಿಸಬಲ್ಲೆ" ಎಂದು ಉತ್ತರ ಕೊಡಿಸಿದಳು. ಡನ್‌ಲಪ್ಪನು ಇದಕ್ಕೆ ಸಮ್ಮತಿಸಿ ಹೊರಟು ಬಂದನು.

ಮರುದಿನ ಛಾವನಿಯಲ್ಲಿ ಸ್ಕೀನ್ ಗಾರ್ಡನ್ ಮತ್ತು ಡನ್‌ಲಪ್ಪರ ಭೇಟಿಯಾಗಿ ಸಂಭಾಷಣೆಗಳು ನಡೆದವು. ಅವರಿಗೆ ಹಿಂದೂಸ್ಥಾನೀಯರನ್ನು ವ್ಯಕ್ತಿಗತವಾಗಿ ಅಪ ಮಾನಗೊಳಿಸಿದರೆ ಯಾವ ನಷ್ಟವೂ ಉಂಟಾಗುವುದಿಲ್ಲವೆಂಬ ಭರವಸೆಯು ಈಗಲೂ ಇದ್ದಿತು. ಅಖಂಡ ಸೈನ್ಯದಲ್ಲಿ ಎಲ್ಲೋ ಹಲ ಕೆಲವು ಮಂದಿ ಕುಪಿತರಾಗಬಹುದೇ ವಿನಃ ಎಲ್ಲರೂ ಆಗುವುದಿಲ್ಲ ಎಂದು ತಿಳಿದಿದ್ದರು.

ಇದೇ ಭರವಸೆಯ ಮೇಲೆ ಮತ್ತೊಬ್ಬ ಆಂಗ್ಲೇಯನನ್ನು ಜೊತೆಯಲ್ಲಿ ಕರೆದು ಕೊಂಡು ಶಿಬಿರದೆಡೆಗೆ ಬಂದನು. ಸಿಪಾಯಿಗಳಲ್ಲಿ ಮುಂದಿದ್ದ ರಿಸಲ್‌ದಾರ್ ಕಾಲೇ ಖಾನ್ ಒಡನೆಯೇ ತುಪಾಕಿಯನ್ನು ಹಾರಿಸಿದನು. ಆಂಗ್ಲೇಯರು ಭರದಿಂದ ಪರಾರಿಯಾದರು.

ಗಾರ್ಡನ್ ಒಬ್ಬನೇ ರಾಣಿಯ ಬಳಿಗೆ ಓಡಿಹೋದನು. ಮುಂದರಿಯ ಮಧ್ಯ ಸ್ಥಿಕೆಯಲ್ಲಿ ಸಂಭಾಷಣೆ ನಡೆಯಿತು.

ಗಾರ್ಡನ್—ನಾವು ಗಂಡಸರು. ನಮಗೆ ನಮ್ಮ ಚಿಂತೆಯಿಲ್ಲ. ನಮ್ಮ ಸ್ತ್ರೀಯ ರಿಗೂ ಮತ್ತು ಮಕ್ಕಳಿಗೂ ನಿಮ್ಮ ಮಹಲ್ಲಿನಲ್ಲಿ ಆಶ್ರಯ ಕೊಡಿ.

ಮುಂದರಿಯು ರಾಣಿಗೆ ಎಚ್ಚರಿಕೆ ಕೊಡುತ್ತಾ "ಸರ್ಕಾರ್, ನೀವು ಈ ಗೊಂದಲ ದಿಂದ ದೂರವಿರುವುದು ಒಳ್ಳೆಯದು. ಸೈನಿಕರು ನಮ್ಮ ಮಹಲನ್ನು ಒಡೆದು ನುಚ್ಚು ನೂರು ಮಾಡುವರು" ಎಂದಳು.

ರಾಣಿಯು ಸ್ವಲ್ಪ ಯೋಚಿಸಿ ಸ್ಥಿರಚಿತ್ತದಿಂದ ಹೇಳಿದಳು. "ನಮ್ಮ ಹೊಡೆ ದಾಟವು ಆಂಗ್ಲೇಯ ಪುರುಷರೊಂದಿಗೆ ವಿನಹ ಅವರ ಹೆಂಡಿರು ಮಕ್ಕಳೊಂದಿಗಲ್ಲ.

ನಾನು ಸಿಪಾಯಿಗಳನ್ನು ಹತೋಟಿಯಲ್ಲಿಡದಿದ್ದರೆ ಅವರ ಮುಖಂಡಳೆಂತಾಗುವೆನು? ಗಾರ್ಡನ್ನನಿಗೆ ಒಡನೆಯೇ ಮಕ್ಕಳನ್ನೂ ಸ್ತ್ರೀಯರನ್ನೂ ಮಹಲ್ಲಿಗೆ ಕಳುಹಿಸು ಎಂದು ಹೇಳು.

ಮುಂದರಿಯು ರಾಣಿಯ ಸಂದೇಶವನ್ನು ತಿಳಿಸಿದಳು.

ಗಾರ್ಡನ್ನನು ತಕ್ಷಣವೇ ಸ್ತ್ರೀಯರನ್ನೂ ಮಕ್ಕಳನ್ನೂ ಕರೆದುಕೊಂಡು ಮಹಲ್ಲಿಗೆ ಬಂದನು. ರಾಣಿಯು ಅವರಿಗೆ ಭೋಜನವಿತ್ತು ಸಂತೈಸಿದಳು.

ಆದರೆ ಸ್ಕೀನನು ಹಠಮಾಡಿ ಪುನಃ ಅವರನ್ನು ಕೋಟೆಗೆ ಒಯ್ದನು.

ಈ ಮಧ್ಯೆ ಸಿಪಾಯಿಗಳು ಛಾವನಿಯಲ್ಲಿ ಗುಲ್ಲೆಬ್ಬಿಸಿ ಗಡಿಬಿಡಿ ಮಾಡುವುದರಲ್ಲಿ ತಲ್ಲೀನರಾಗಿದ್ದರು. ನಂತರ ಅವರು ಉನ್ಮತ್ತರಾಗಿ ಕೋಟೆಯ ಮೇಲೆ ಧಾಳಿಯಿಡಲು ಹೊರಟರು. ಗಾರ್ಡನ್ ಮುಂತಾದವರು ಕೋಟೆಯ ಎಲ್ಲಾ ಬಾಗಿಲುಗಳನ್ನೂ ಮುಚ್ಚಿಸಿದರು. ಆದರೆ ಸಿಪಾಯಿಗಳು ಬಹು ಸಂಖ್ಯಾತರಾಗಿದ್ದು ಸಿಪಾಯಿಗಳ ವಶದಲ್ಲಿ ತೋಪುಗಳಿದ್ದವು. ಆದರೆ ಕೋಟೆಯಲ್ಲಿ ತೋಪುಗಳಿರಲಿಲ್ಲ. ಯುದ್ಧಸಾಮಗ್ರಿಗಳೂ ಬಹು ಕಡಿಮೆಯಿದ್ದವು. ಉಣ್ಣುವುದಕ್ಕಾದರೋ ಏನೇನೂ ಇರಲಿಲ್ಲ.

ನವಾಬ್ ಆಲಿಬಹದ್ದೂರನು "ಅಪ್ಪಣೆಯಾದರೆ ಓರ್ಛಾ ಮತ್ತು ದತಿಯಾಗಳಿಂದ ಸೈನ್ಯವನ್ನು ಕರೆಸುತ್ತೇನೆ" ಎಂದು ಪೀರ್‌ಆಲಿಯ ಮೂಲಕ ಆಂಗ್ಲೇಯರಿಗೆ ಹೇಳಿಕಳುಹಿಸಿದನು.*

ಆಂಗ್ಲೇಯರು ಬಹುವಾಗಿ ಭಯಪೀಡಿತರಾಗಿ ಅಥವಾ ಅತ್ಯಂತ ಶೋಚನೀಯ ಸ್ಥಿತಿಯಲ್ಲಿದ್ದುದರಿಂದ ಅವರು "ಅಂತಹ ಅವಶ್ಯಕತೆಯೇನಿಲ್ಲ. ಇದೇನು ಚಿಕ್ಕಕ್ರಾಂತಿ, ಅದನ್ನು ಅಡಗಿಸಿ ಬಿಡುತ್ತೇವೆ" ಎಂದು ಉತ್ತರವಿತ್ತರು.

ಪೀರ್‌ಆಲಿಯು ಆ ಜವಾಬನ್ನು ನವಾಬ್ ಆಲಿಬಹದ್ದೂರನಿಗೆ ತಿಳಿಸಿದನು. ಖುದಾಬಕ್ಷನಿಗೂ ಈ ವಿಚಾರವು ತಿಳಿಯಿತು. ರಾಣಿಗೆ ಈ ವರ್ತಮಾನವನ್ನು ಮೋತೀಬಾಯಿಯ ಮೂಲಕ ಹೇಳಿಕಳುಹಿಸಿ ತಾನು ರಘುನಾಥ ಸಿಂಹನೆಡೆಗೆ ಹೋದನು.

ಮೋತೀಬಾಯಿಯು "ಸರ್ಕಾರ್ ಈಗ ಸಮಯವು ಪ್ರಾಪ್ತವಾಗಿದೆ" ಎಂದು ಹೇಳಿ ಖುದಾಬಕ್ಷನು ಅರುಹಿದ ಸಂಗತಿಯನ್ನು ಶ್ರುತಪಡಿಸಿದಳು.

ರಾಣಿಯು "ನಿಯುಕ್ತ ಸಮಯಕ್ಕೆ ಸರಿಯಾಗಿ ಕೆಲಸ ಪ್ರಾರಂಭವಾಗದಿದ್ದುದರಿಂದ ಕಾರ್ಯಕ್ರಮದ ರೂಪವೇ ಬದಲಾಯಿಸಿದೆ. ಆದರೂ ನಮ್ಮ ಸೈನ್ಯವನ್ನು ಸಜ್ಜು

---

*ನವಾಬ್ ಆಲಿಬಹದ್ದೂರನು ಸರ್ ೧೮೫೭ ರಲ್ಲಿ ಕೊಟ್ಟ ಹೇಳಿಕೆಯ ನಕಲು ಬನ್ನೆ ಎಂಬುವರ ಬಳಿ ಇದೆ.

ಗೊಳಿಸಲು ಈಗಲೇ ಪ್ರಯತ್ನಿಸಬೇಕು. ರಘುನಾಥಸಿಂಹರಿಗೆ ಕಟೀಲಿಯಿಂದ ದಿವಾನ್ ಜವಹರ್‌ಸಿಂಹರನ್ನು ಕರೆಯಿಸಬೇಕೆಂದೂ ಮತ್ತು ವಿಶ್ವಸನೀಯವಾದ ಎಷ್ಟು ಸೈನ್ಯವನ್ನು ಒಟ್ಟುಗೂಡಿಸಲಾಗುವುದೋ ಅದನ್ನು ಎಂಟು ಮೈಲಿ ದೂರದಲ್ಲಿ ರಕ್ಸಾವಿನ ಹತ್ತಿರ ಒಂದೆಡೆ ಜಮಾಯಿಸಬೇಕೆಂದೂ ಹೇಳು. ಕುದುರೆ ಸವಾರರು ಹೆಚ್ಚಾಗಿರಲಿ. ನನ್ನ ಅಜ್ಞೆ ದೊರಕುವವರೆಗೂ ಝಾನ್ಸಿಗೆ ಬರಬಾರದೆಂದು ಅಪ್ಪಣೆ ಮಾಡು" ಎಂದಳು.

ಮೋತೀಬಾಯಿಯು ಈ ಆಜ್ಞೆಯನ್ನು ರಘುನಾಥಸಿಂಹನಿಗೆ ವರದಿ ಮಾಡಿದಳು. ಆತನು ಖುದಾಬಕ್ಷನನ್ನು ಕರೆದುಕೊಂಡು ಹೊರಬಿದ್ದನು. ಆ ದಿನ ಸಿಪಾಯಿಗಳು ಕಿಲ್ಲೆಯ ಮೇಲೆ ಆಕ್ರಮಣ ಮಾಡುತ್ತಲೇ ಇದ್ದರು. ಆದರೆ ಆಂಗ್ಲೇಯರು ಬಂದೂಕಿನ ಸಹಾಯದಿಂದ ಹಿಂದೂಡುತ್ತಿದ್ದರು.

ಎರಡನೆಯ ದಿನವೂ ಸಮರವು ಮುಂದುವರಿಯುತ್ತಲೇ ಇದ್ದಿತು. ಮಧಾಹ್ನದ ವೇಳೆಗೆ ಆಂಗ್ಲೇಯರ ಬಳಿ ತಿನ್ನುವುದಕ್ಕೆ ಒಂದು ಕಾಳೂ ಸಹಿತ ಇರಲಿಲ್ಲ. ಕಿಲ್ಲೆಯಲ್ಲಿದ್ದ ಮೂಲೆ ಮೂಲೆಯನ್ನೂ ಏನಾದರೂ ತಿನ್ನುವುದಕ್ಕೆ ಸಿಗಬಹುದೆಂಬ ಆಸೆಯಿಂದ ಹುಡುಕಲಾಯಿತು. ಆದರೆ ಪ್ರಯೋಜನವೇನೂ ಆಗಲಿಲ್ಲ. ಸಂಧ್ಯಾಕಾಲದ ವೇಳೆಗೆ ಯುದ್ಧದ ಭರವು ಕಡಿಮೆಯಾಯಿತು. ಆಂಗ್ಲೇಯರು ಹೇಗೋ ರಾಣಿಗೆ ತಮ್ಮ ಕ್ಷುದ್ಬಾಧೆಯ ಪರಿಸ್ಥಿತಿಯನ್ನು ತಿಳಿಯಪಡಿಸಿದರು.

ರಾಣಿಯು ಎರಡು ಮಣ ರೊಟ್ಟಿಯನ್ನು ತಕ್ಷಣವೇ ಮಾಡಿಸಿ ಕಾಶೀಬಾಯಿಯನ್ನು ಕುರಿತು "ನಿನಗೆ ಎಲ್ಲಾ ಗುಪ್ತ ಮಾರ್ಗಗಳೂ ತಿಳಿದಿರುವುದರಿಂದ ಹೇಗಾದರೂ ಮಾಡಿ ಈ ರೊಟ್ಟಿಗಳನ್ನು ಅವರಿಗೆ ತಲಪಿಸು. ಸುಂದರಿ ಮುಂದರಿಯನ್ನು ಜೊತೆಯಲ್ಲಿ ಕರೆದುಕೊಂಡುಹೋಗು. ಮತ್ತಾರೂ ಬೇಡ. ಎಲ್ಲಿ ಮಶಾಲಿನ ಅವಶ್ಯಕತೆ ಇರುವುದೋ ಅಲ್ಲಿ ಹೊತ್ತಿಸಿಕೊ" ಎಂದು ಹೇಳಿಕಳುಹಿಸಿದ್ದಳು.

ಸಖಿಯರಿಗೆ ರಾಣಿಯು ದಯಾಮಯಿಯೆಂದು ತಿಳಿದಿದ್ದಿತು. ಆದರೆ ಅದರ ಪರಿಮಿತಿಯನ್ನು ತಿಳಿದಿರಲಿಲ್ಲ. ಕಾಶಿಯು ನಮ್ರತೆಯಿಂದ "ಸರ್ಕಾರ್, ನಾವು ಈ ಪರಿಸ್ಥಿತಿಯಲ್ಲಿದ್ದರೆ ಆಂಗ್ಲೇಯರು ನಮಗೆ ತಿನ್ನಲೂ ಕುಡಿಯಲೂ ಏನಾದರೂ ಕೊಡುತ್ತಿದ್ದರೆ?" ಎಂದು ಕೇಳಿದಳು. ರಾಣಿಯು "ನಾವು ಆಂಗ್ಲೇಯರಂತಾಗಿ ನಮ್ಮಿಬ್ಬರ ಮಧ್ಯೆ ಇರತಕ್ಕ ವ್ಯತ್ಯಾಸವನ್ನು ಏಕೆ ನಿರ್ಮೂಲಮಾಡಬೇಕು. ಇವರನ್ನು ಹಸಿವಿನಿಂದ ಕೊಂದು ಉನ್ನತಿಗೆ ಬರುವುದು ನಮ್ಮ ಅನುಷ್ಠಾನವನ್ನು ಕಲುಷಿತ ಮಾಡಿದಂತಾಗುವುದು" ಎಂಧು ಉತ್ತರವಿತ್ತಳು.

ಕಾಶಿಯ ಮುಖಮಂಡಲವು ಲಜ್ಜೆಯಿಂದ ಕೆಂಪೇರಿತು. ರಾಣಿಯು ನಸುನಕ್ಕಳು.

ಕಾಶಿಯು ಪುನಃ "ನೀವು ಎಲ್ಲಿಯವರೆಗೆ ಇವರಿಗೆ ಅನ್ನಾಹಾರಗಳನ್ನು ಸರಬರಾಜು ಮಾಡುವಿರಿ?" ಎಂದು ಕೇಳಿದಳು.

"ನನ್ನ ಸುಸಜ್ಜಿತ ಸೈನ್ಯವು ಸಿದ್ಧವಾಗುವವರೆಗೆ. ನಂತರ ಆಂಗ್ಲೇಯರ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡು ಯಾವುದಾದರೂ ಸುರಕ್ಷಿತ ಸ್ಥಾನದಲ್ಲಿ ಅವರನ್ನು ಬಂದಿಗಳನ್ನಾಗಿಡುವೆನು."

ಆ ಮೂವ್ವರು ಸಖಿಯರೂ ರೊಟ್ಟಿಯನ್ನು ತೆಗೆದುಕೊಂಡು ಗುಪ್ತ ಮಾರ್ಗದಿಂದ ಕಿಲ್ಲೆಯನ್ನು ಸೇರಿದರು. ಗಾರ್ಡನ್ ಇತ್ಯಾದಿಗಳು ಅವರನ್ನು ಈ ಉಪಕಾರಕ್ಕಾಗಿ ವಂದಿಸಿದರು. ಅವರಲ್ಲಿ ಮಾರ್ಟಿನ್ ಎಂಬ ವ್ಯಕ್ತಿಯು ಸುರಂಗದ ಮಾರ್ಗವನ್ನು ನೋಡಿಬಿಟ್ಟನು. ಮತ್ತೆ ಮರುದಿನ ಈ ಮೂವ್ವರೂ ರೊಟ್ಟಿಯನ್ನು ಕೋಟೆಗೆ ತಲುಪಿಸಿ ಬಂದರು. ಮಾರ್ಟಿನ್ನನು ಮೆಲ್ಲನೆ ಇವರನ್ನು ಹಿಂಬಾಲಿಸಿ ಗುಪ್ತಮಾರ್ಗದಿಂದ ಹೊರಬಿದ್ದು ಆ ಗ್ರಾಮವನ್ನು ಸೇರಿದನು. ಇದು ಈ ಸ್ತ್ರೀಯರಿಗಾರಿಗೂ ತಿಳಿಯಲಿಲ್ಲ.

ಆ ದಿನ ಘೋರವಾದ ಯುದ್ಧವು ನಡೆಯಿತು. ಗಾರ್ಡನ್ನನು ಉತ್ತರ ದ್ವಾರದ ಮೇಲಿನ ಕಿಟಕಿಯಿಂದ ಇಣಿಕಿ ಇಣಕಿ ನೋಡುತ್ತಾ ಗುರಿಯಿಟ್ಟು ಬಂದೂಕವನ್ನು ಪ್ರಯೋಗಿಸುತ್ತಿದ್ದನು. ಸಿಪಾಯಿಗಳಿಗೆ ಇದನ್ನು ಕಂಡು ಆಶ್ಚರ್ಯವಾಯಿತು. ಅವನಿಗೆದುರಾಗಿ ಒಬ್ಬ ನಗರದ ಬಾಣವಿದ್ಯಾಪ್ರವೀಣನು ದೊರಕಿದನು. ಆತನು ಒಂದು ಕಲ್ಲಿನ ಮರೆಯಿಂದ ಗುರಿಯಿಟ್ಟು ಬಾಣವನ್ನು ಪ್ರಯೋಗಿಸಿದನು. ಅದು ಗಾರ್ಡನ್ನಿನ ಕಂಠವನ್ನು ಛೇದಿಸಿಕೊಂಡು ಹೋಯಿತು. ಅವನ ಮರಣದಿಂದ ಆಂಗ್ಲೇಯರು ಆಶಾರಹಿತರೂ ನಿರುತ್ಸಾಹಿಗಳೂ ಆದರು.

ಅತ್ತ ರಿಸಾಲ್ದಾರ್ ಕಾಲೇಖಾನನು ಕಿಲ್ಲೆಯ ವಾಯವ್ಯ ದಿಕ್ಕಿನಲ್ಲಿ ಶಂಕರ ಕಿಲ್ಲೆಯೆಂದು ಕರೆಯಲ್ಪಡುವಲ್ಲಿ, ಭಯಾನಕವಾದ ಆಕ್ರಮಣ ಮಾಡಿ ತನ್ನ ಸೇನೆಯ ತುಕ್ಕಡಿಯೊಂದಿಗೆ ಕಿಲ್ಲೆಯೊಳಗೆ ನುಗ್ಗಿದನು. ಆಂಗ್ಲೇಯರಿಗೆ ಇನ್ನು ಉಳಿಗಾಲವಿಲ್ಲವೆಂದು ಅವರು ಒಪ್ಪಂದಕ್ಕೆ ಬರುವಂತೆ ಸಲಹೆ ಮಾಡಿದರು. ಸಿಪಾಯಿಗಳು ಅವರನ್ನು ರಕ್ಷಿಸುವುದಾಗಿ ಆಶ್ವಾಸನವಿತ್ತರು. ಜೂ॥ ೮ ನೇ ತಾರೀಖು ಬೆಳಿಗ್ಗೆ ಸ್ಕೀನನು ಕಿಲ್ಲೆಯ ದಕ್ಷಿಣದ ಕಡೆಗಿರುವ ಸದರ್ ಬಾಗಿಲನ್ನು ತೆರೆದು ನಮ್ಮನ್ನು 'ಸಾಗರ್ ಎಂಬಲ್ಲಿಗೆ ಹೋಗಲು ಬಿಡಿ' ಎಂದನು.

ಸಿಪಾಯಿಗಳು ಅವರನ್ನು ಬಂಧಿಸಿದರು. ಮುಖಂಡ ಕಾಲೇಖಾನನು ಅಲ್ಲಿಂದ ಛಾವನಿಗೆ ಹೋದನು.

ಸ್ವಲ್ಪ ಹೊತ್ತಿನಮೇಲೆ ಅಲ್ಲಿನ ಬಂದೀಖಾನೆಯ ದರೋಗ ಬಕ್ಷೀಷ್‌ಅಲಿಯು ಕಿಲ್ಲೆಯೆಡೆಗೆ ಹೋದನು. ಅವನ ಕಣ್ಣುಗಳು ಕೆಂಪೇರಿದ್ದವು, ಮುಖವು ಬಾಡಿದ್ದಿತು. ಅವನು ಆಂಗ್ಲೇಯರ. ಕಡೆ ನೋಡಿ, ನಂತರ ಸಿಪಾಯಿಗಳೊಂದಿಗೆ "ರಿಸಾಲ್ದಾರ್

ಸಾಹೇಬರನ್ನು ಮಾರ್ಗದಲ್ಲಿ ಕಂಡಿದ್ದೆ. ಅವರು ಇವರೆಲ್ಲರನ್ನೂ ಥೋಕನ್ ಬಾಗಿಗೆ ಕರೆದುಕೊಂಡು ಹೋಗಬೇಕೆಂದು ಅಪ್ಪಣೆಯಿತ್ತರು" ಎಂದು ಹೇಳಿದನು.

ಸಿಪಾಯಿಗಳು ಆಂಗ್ಲೇಯರನ್ನು ಥೋಕನ್ ಬಾಗಿಗೆ ಕರೆದುಕೊಂಡು ಹೋದರು. ಅಲ್ಲಿಗೆ ಒಬ್ಬ ಕುದುರೆ ಸವಾರನು ಬಂದನು. ಬಕ್ಷೀಷ್‌ಆಲಿಯು ಅವನ ಕಿವಿಯಲ್ಲಿ ಏನನ್ನೋ ಗುಟ್ಟಾಗಿ ಹೇಳಿದನು. ಸವಾರನು ಹಿಂದು ಮುಂದು ನೋಡಿದನು.

ಬಕ್ಷೀಷ್ ಆಲಿಯು "ಸಹೋದರರೇ ಇಲ್ಲಿ ನಿಂತಿರುವ ಈ ಸ್ಕೀನ್ ಕಮಿಷನರ್ ಸಾಹೇಬನು ನನ್ನನ್ನು ಜೋಡಿನ ಕಾಲಿನಿಂದ ಒದೆದಿದ್ದ. ಈಗೇನು ನೋಡುತ್ತಿರುವಿರಿ?" ಎಂದನು.

ಸಿಪಾಯಿಗಳು ಒಬ್ಬರ ಮುಖವನ್ನು ಒಬ್ಬರು ನೋಡಲಾರಂಭಿಸಿದರು.

ಬಕ್ಷೀಷ್‌ಆಲಿ—ಈತನು ಜೋರಾಗಿ ಒದ್ದುದರಿಂದ ನಾನು ಮುಖಮಡಿಯಾಗಿ ಬಿದ್ದೆ. ನನ್ನನ್ನು ಹೊಡೆಯುವುದಕ್ಕೆ ಮುಂಚೆ ಸುವ್ವರ್ ಮುಂತಾದ ಅವಾಚ್ಯ ಶಬ್ದಗಳಿಂದ ಬೈದನು.

ಸ್ಕೀನನು ಭಯಭೀತನಾಗಿ ನಿಂತಿದ್ದನು. ಆದರೆ ಈ ಆರೋಪಣೆಯು ಅವನನ್ನು ಎಚ್ಚರಗೊಳಿಸಿತು. "ನಾನೆಂದಿಗೂ ಬೈಯ್ಯಲಿಲ್ಲ. ಒಂದು ವೇಳೆ ಹೊಡೆದಿರಬಹುದು, ನನಗೆ ನೆನಪಿಲ್ಲ. ಕಾರ್ಯದಲ್ಲಿ ತಪ್ಪು ಮಾಡಿದರೆ ಕೆಲವು ವೇಳೆ ಹೊಡೆಯಲೂ ಬೇಕಾಗುವುದು ಎಂದನು.

ಬಂದಿದ್ದ ಸವಾರನನ್ನು ಬಕ್ಷೀಷ್‌ಆಲಿಯು ಭಯಾನಕದೃಷ್ಟಿಯಿಂದ ನೋಡಿದನು.

ಸವಾರನು "ರಿಸಾಲ್ದಾರ್ ಸಾಹೇಬರು ಇವರೆಲ್ಲರನ್ನೂ ಕೊಲೆಮಾಡುವಂತೆ ಕಠಿಣಾಜ್ಞೆಯನ್ನಿತ್ತಿದ್ದಾರೆ" ಎಂದು ನಿಷ್ಠುರ ಧ್ವನಿಯಿಂದ ಹೇಳಿದನು.

ಬಕ್ಷೀಷ್‌ಆಲಿಯು ಎಲ್ಲರಿಗಿಂತಲೂ ಮೊದಲು ಸ್ಕೀನನನ್ನು ಹೊಡೆದನು. ನಂತರ ಎಲ್ಲರನ್ನೂ ತುಂಡರಿಸಿದರು. ಆ ಸಮಯದಲ್ಲಿ ಸಿಪಾಯಿಗಳ ಹೊರತಾಗಿ ಅಲ್ಲಿ ಮತ್ತಾರೂ ಇರಲಿಲ್ಲ.

ಅದೇಸಮಯಕ್ಕೆ ಸರಿಯಾಗಿ ರಿಸಾಲ್ದಾರ್ ಕಾಲೇಖಾನನು ಅಲ್ಲಿಗೆ ಬಂದನು. ರಕ್ತಸಿಕ್ತವಾಗಿದ್ದ ಕತ್ತಿಗಳನ್ನು ನೋಡಿ ಕ್ರುದ್ಧನಾಗಿ "ಇದೇನು ಮಾಡಿದಿರಿ?" ಎಂದು ಕೇಳಿದನು.

ಬಕ್ಷೀಷ್‌ಆಲಿಯು "ಮತ್ತೇನು ಮಾಡಬೇಕಾಗಿದ್ದಿತು?" ಎಂದು ಉತ್ತರವಿತ್ತನು.

ರಿಸಾಲ್ದಾರನು ತನ್ನ ಗಂಟಲನ್ನು ಸರಿಪಡಿಸಿಕೊಂಡು ತಗ್ಗಿದ ಧ್ವನಿಯಲ್ಲಿ "ಯಾರು ಅಪ್ಪಣೆಯಿತ್ತರು? ಏನು ರಾಣಿಸಾಹೇಬರೇನಾದರೂ ಆಜ್ಞೆಮಾಡಿದರೆ?"

ಎಂದು ಕೇಳಿದನು.

ಬಕ್ಷೀಷ್ ಆಲಿಯ ಬಳಿ ನಿಂತಿದ್ದ ಸವಾರನು "ರಾಣೀಸಾಹೇಬರಿಗೆ ಇದೇನೂ ಗೊತ್ತಿಲ್ಲ. ಅವರು ನಮ್ಮಿಂದ ದೂರದಲ್ಲಿರುವಂತೆ ತೋರುತ್ತದೆ" ಎಂದನು.

"ಮತ್ತೆ ಯಾರ ಅಪ್ಪಣೆಯ ಮೇರೆಗೆ ಈ ಕೊಲೆ ನಡೆಯಿತು?" ಎಂದು ರಿಸಾಲ್ದಾರನು ಮತ್ತೂ ಮೃದು ಸ್ವರದಿಂದ ಕೇಳಿದನು.

ಬಕ್ಷೀಷ್ ಆಲಿಯು "ನಿಮ್ಮ ಹೆಸರಿನಲ್ಲಿ ನನ್ನ ಅಪ್ಪಣೆಯಂತೆ" ಎಂದು ಉತ್ತರಿಸಿದನು.

"ಓಹೋ! ನಮ್ಮ ಮುಖಂಡರು ಇದನ್ನರಿತರೆ ಏನೆನ್ನುವರು? ಆದರೆ... ಆದರೆ"

ರಿಸಾಲ್ದಾರನು ಸ್ವಲ್ಪ ಹೊತ್ತು ನಿಶ್ಯಬ್ದನಾಗಿ ನಿಂತನು. ಸೂರ್ಯನ ಕಿರಣವು ಸುಡುತ್ತಾ ಮುಂದೋಡುತ್ತಿದ್ದಿತು. ರಿಸಾಲ್ದಾರನು ಮುಖದ ಮೇಲೆ ಕೈಯಾಡಿಸಿ ಹಣೆ ಚಚ್ಚಿಕೊಂಡನು. ಸ್ವಲ್ಪಹೊತ್ತು ಮೌನವಾಗಿದ್ದು "ಆಗಿದ್ದೇನೋ ಆಗಿ ಹೋಯಿತು. ಮುಂದೆ ಸರಿಯಾದ ಅಪ್ಪಣೆಯಿಲ್ಲದೆ ಯಾವ ಕೆಲಸವನ್ನೂ ಮಾಡಬಾರದು. ನಡೆಯಿರಿ ರಾಣೀ ಸಾಹೇಬರ ಮಹಲ್ಲಿಗೆ ಹೋಗೋಣ" ಎಂದನು.

ಹಾಗೆಯೇ ಕತ್ತಿಗಳನ್ನು ಹಿಡಿದುಕೊಂಡು ಮಹಲ್ಲಿನ ಕಡೆಗೆ ಹೋದರು.

## ೪೯

ಸಿಪಾಯಿಗಳಲ್ಲಿ ಸರಿಯಾದ ಶಿಸ್ತಿರಲಿಲ್ಲ. ತಿರಸ್ಕಾರ ಮತ್ತು ಕ್ರೋಧವು ಮನವನ್ನು ಆವರಿಸಿದ್ದಿತು. ತಮ್ಮ ವಿಜಯದಿಂದ ಹರ್ಷೋನ್ಮತ್ತರಾಗಿದ್ದರು.

ಅವರು ರಾಣಿಯ ಮಹಲನ್ನು ಸೇರುವ ಮುಂಚೆಯೇ ಅವರ ಕೂಗಾಟವು ಮಹಲನ್ನು ಮುಟ್ಟಿದ್ದಿತು. ಪಹರೆಯವರು ಮಹಲ್ಲಿನ ದ್ವಾರವನ್ನು ಮುಚ್ಚಿದರು. ಸೈನ್ಯದ ಕೆಲವು ಸಿಪಾಯಿಗಳು ನಗರವನ್ನು ಲೂಟಿಮಾಡಬೇಕೆಂದು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಂಡರು. ಶಿಸ್ತನ್ನರಿತಿದ್ದ ಸಿಪಾಯಿಗಳು ಸರಿಯಾದ ಮುಖಂಡರಿಲ್ಲದೇ ಕೇವಲ ಕೋಲಾಹಲ ಮಾಡುತ್ತಾ ಗುಂಪು ಗುಂಪಾಗಿ ನಗರದಲ್ಲೆಲ್ಲಾ ಸಂಚರಿಸಲು ಆರಂಭಿಸಿದರು. ಯಾರೂ ಯಾರಮಾತನ್ನೂ ಕೇಳುತ್ತಲೂ ಇರಲಿಲ್ಲ, ಕೇಳುವಂತೆಯೂ ಇರಲಿಲ್ಲ. ಪ್ರತಿಯೊಬ್ಬನೂ ತನ್ನ ಸೇಡು ತೀರಿಸಿಕೊಳ್ಳುವುದರಲ್ಲಿ ನಿರತನಾಗಿದ್ದನು.

ಇಷ್ಟರಲ್ಲಿ ರಿಸಾಲ್ದಾರ್ ಕಾಲೇಖಾನನು "ಪ್ರಪಂಚವು ಪರಮಾತ್ಮನದು, ದೇಶವು ಬಾದಷಹನದು, ರಾಜ್ಯವು ರಾಣೀ ಲಕ್ಷ್ಮೀಬಾಯಿಯವರದು" ಎಂದು ಬೊಬ್ಬೆಯಿಟ್ಟನು.

ನೆರೆದಿದ್ದ ಸಿಪಾಯಿಗಳೆಲ್ಲರೂ ಇದನ್ನೇ ಘೋಷಿಸಿದರು. ಸಿಪಾಯಿಗಳ ವಿಚಾರ ಶಕ್ತಿಯೂ ಇದೇ ಘೋಷಣೆಯ ಕಡೆಗೆ ತಿರುಗಿತು. ಇದರಿಂದ ಅವರಲ್ಲಿ ಅಲ್ಪಸ್ವಲ್ಪ ಶಿಸ್ತು ಏರ್ಪಟ್ಟಿತು. ಕಿಟಕಿಯ ಪರದೆಯು ಸರಿಯಿತು. ಅದರ ಹಿಂದೆ ಕೈಮುಗಿಯುತ್ತಾ ನಿಂತಿದ್ದ ಮಹಾರಾಣಿ ಲಕ್ಷ್ಮೀಬಾಯಿಯು ಕಂಡುಬಂದಳು. ಅವಳ ಹಿಂದೆ ಶಸ್ತ್ರ ಸಜ್ಜಿತರಾದ ಸಖಿಯರು ನಿಂತಿದ್ದರು.

ಗೌರವ ವದನ. ಕಂಠದಲ್ಲಿ ವಜ್ರದ ಹಾರ. ಆಕೆಯ ತುಟಿಗಳು ಒಂದನ್ನೊಂದು ಸ್ವಲ್ಪ ಅದುಮಿದಂತೆ ಕೂಡಿದ್ದವು. ಸಿಪಾಯಿಗಳು ಮತ್ತೊಮ್ಮೆ ಘೋಷಣೆ ಮಾಡಿದರು.

ರಾಣಿಯು ಪುನಃ ಕೈಯೆತ್ತಿ ನಮಸ್ಕರಿಸಿ ಶಾಂತಿಯಿಂದಿರಬೇಕೆಂದು ಸಂಕೇತ ಮಾಡಿದಳು. ಗೊಂದಲದಲ್ಲಿ ನಿಶ್ಶಬ್ದತೆಯೇರ್ಪಟ್ಟಿತು. ರಿಸಾಲ್ದಾರ್ ಕಾಲೇಖಾನನು ಮುಂದೆ ಬಂದನು.

ರಾಣಿಯು ಎತ್ತಿದ ಧ್ವನಿಯಿಂದ "ನೀನು ರಿಸಾಲ್ದಾರ್ ಕಾಲೇಖಾನನೇ?" ಎಂದು ಕೇಳಿದಳು.

ಧ್ವನಿಯು ಎತ್ತಿದ್ದರೂ ಕಂಠದಲ್ಲಿ ಮಧುರತೆಯಿದ್ದಿತು. ಕಾಲೇಖಾನನು ಸೈನಿಕ ಪದ್ಧತಿಯಂತೆ ಪ್ರಣಾಮ ಮಾಡಿ "ಹುಜೂರ್, ಚರಣ ಸೇವಕ ರಿಸಾಲ್ದಾರ್ ಕಾಲೇ ಖಾನನು ನಾನೆ" ಎಂದನು.

ರಾಣಿಯ ಮತ್ತು ರಿಸಾಲ್ದಾರನ ದೃಷ್ಟಿಗಳು ಕ್ಷಣಮಾತ್ರ ಕೂಡಿದವು. ಖಾನನ ಕಣ್ಣುಗಳು ತುಂಬಿಬಂದು ಅಧೋವದನನಾದನು. ರಾಣಿಯು "ಈ ಖಡ್ಗಗಳು ಎಂದು ರಕ್ತಸಿಕ್ತವಾದವು?" ಎಂದು ಕೇಳಿದಳು.

ಕಾಲೇಖಾನನು ಎಲ್ಲವನ್ನೂ ವಿವರಿಸಿದನು.

ರಾಣಿಯು "ಈ ದುಷ್ಕರ್ಮಗಳಿಂದ ನಾವು ಬಾದಷಾಹಿ ಮತ್ತು ಸ್ವರಾಜ್ಯ ಸ್ಥಾಪನೆಯನ್ನು ಮಾಡಬಲ್ಲೆವೆ? ನೀವು ಬಹಳ ಅಪಚಾರ ಮಾಡಿದಿರಿ. ಈ ಪ್ರಪಂಚ ದಿಂದ ನಿಯಮ ಸಂಯಮಗಳೆಲ್ಲವೂ ಮಾಯವಾದುವೆಂದು ಭಾವಿಸಿದಿರಾ?" ಎಂದು ಕೇಳಿದಳು.

ಕಾಲೇಖಾ—ಹುಜೂರ್........

ರಾಣಿ—ನಿಮ್ಮಲ್ಲಿ ಈಗಲೂ ಕೆಲವರು ಝಾನ್ಸಿಯ ನಗರವನ್ನು ಲೂಟಿ ಮಾಡ ಬೇಕೆಂದು ತವಕಿಸುತ್ತಿದ್ದೀರಿ. ನಿಮ್ಮನ್ನೇ ನೀವು ಮರೆತುಬಿಟ್ಟಂತೆ ಇದೆ. ನಿಮ್ಮ ಗಳಿಗೆ ಕಲಿಸಿರುವುದು ಇದನ್ನೇ ಏನು?

ಕಾಲೇಖಾ—ಹುಜೂರ್, ಇನ್ನು ಮುಂದೆ ನಿಮ್ಮ ಆಣತಿ ಇಲ್ಲದೆ ಏನಾದರೂ ವಿಪರೀತವು ನಡೆದರೆ ನಮ್ಮೆಲ್ಲರನ್ನೂ ತೋಪಿನ ಬಾಯಿಗೆ ಕಟ್ಟಿ ಹಾರಿಸಿಬಿಡಿ. ನಿಮ್ಮ ಆಜ್ಞೆಯನ್ನು ಪರಿಪಾಲಿಸಲು ಸಿದ್ಧರಿದ್ದೇವೆ.

ರಾಣಿ—ಹಾಗಿದ್ದಪಕ್ಷದಲ್ಲಿ ಶಿಬಿರಕ್ಕೆ ಹಿಂದಿರುಗಿರಿ. ಮುಂದೇನು ಮಾಡಬೇಕೆಂಬುದನ್ನು ಸಾಯಂಕಾಲದ ವೇಳೆಗೆ ಯೋಚಿಸಿ ತಿಳಿಸುತ್ತೇನೆ.

ಕಾಲೇಖಾನನು ಸಿಪಾಯಿಗಳೊಂದಿಗೆ ಮಾತನಾಡಲಾರಂಭಿಸಿದನು. ಕೆಲವರು ಛಾವನಿಗೆ ಹಿಂದಿರುಗಬೇಕೆಂದರು. ಮತ್ತೆ ಕೆಲವರು "ದಿಲ್ಲಿಗೆ ಹೋಗೋಣ ಅಲ್ಲಿ ಇನ್ನೂ ತಮಾಷೆ ಇರಬಹುದು" ಎಂದರು. ಇನ್ನು ಕೆಲವರು "ಮೊದಲು ಹಣವನ್ನು ಶೇಖರಿಸಿಕೊಳ್ಳೋಣ" ಎಂದರು. ಕಡೆಯಲ್ಲಿ "ರಾಣೀ ಸಾಹೇಬರಿಂದ ಹಣವನ್ನು ಪಡೆದು ದಿಲ್ಲಿಗೆ ಹೊರಡೋಣ. ಹಾಗೆ ಆಕೆಯಿಂದ ಹಣ ದೊರಕದಿದ್ದರೆ ನಗರದಿಂದ ಎಷ್ಟು ಹಣ ವಸೂಲಾಗುವುದೋ ಅಷ್ಟನ್ನು ತೆಗೆದುಕೊಂಡು ಝಾಂಸಿಯನ್ನು ರಾಣಿಯ ರಕ್ಷಣೆಯಲ್ಲಿ ಬಿಟ್ಟು ಮುಂದೆ ಹೊರಡೋಣ" ಎಂದು ಸಿಪಾಯಿಗಳು ನಿರ್ಣಯಿಸಿದರು.

ಕಾಲೇಖಾನನು ರಾಣಿಗೆ ಸಿಪಾಯಿಗಳ ನಿರ್ಣಯವನ್ನು ನಿವೇದಿಸಿಕೊಂಡು "ಸರ್ಕಾರ್, ಸಿಪಾಯಿಗಳು ಹಸಿದಿದ್ದಾರೆ" ಎಂದನು.

ರಾಣಿಯು ಪರಿಸ್ಥಿತಿಯನ್ನು ಕಂಡುಕೊಂಡು ದೂರದೃಷ್ಟಿಯಿಂದ ಕಾರ್ಯವನ್ನು ಸಾಧಿಸಿದಳು. "ಆಂಗ್ಲೇಯರು ನನ್ನಬಳಿ ಯಾವ ಹಣಕಾಸನ್ನೂ ಬಿಟ್ಟಿಲ್ಲ. ರಾಜ್ಯವು ಆಂಗ್ಲೇಯ್ನರ ಅಧೀನದಲ್ಲಿದ್ದಿತು. ನಾನೆಲ್ಲಿಂದ ಹಣವನ್ನು ತರಲಿ?" ಎಂದಳು.

ಕಾಲೇಖಾನನು "ನಾವು ನಿಸ್ಸಹಾಯಕರು, ವಿವಶರು; ತಾವಾದರೋ ಒಡೆಯರು. ತಮ್ಮೊಂದಿಗೆ ಏನೂ ಹೇಳಲಾಗುವುದಿಲ್ಲ. ಇಲ್ಲಿ ದ್ರವ್ಯವು ದೊರಕದಿದ್ದರೆ ನಗರದಿಂದ ಉತ್ಪತ್ತಿಮಾಡುವೆವು" ಎಂದನು.

ರಾಣಿಯು ಸಿಪಾಯಿಗಳು ನಗರವನ್ನು ಲೂಟಿಮಾಡಲು ಯತ್ನಿಸುತ್ತಿದ್ದಾರೆಂದು ತಿಳಿದು ತನ್ನ ಕತ್ತಿನಲ್ಲಿದ್ದ ವಜ್ರದ ಮಾಲೆಯನ್ನು ತೆಗೆದು ಕಾಲೇಖಾನನ ಕೈಯ್ಯಲ್ಲಿಟ್ಟು "ಇದರಿಂದ ನಿಮ್ಮ ಕಷ್ಟಗಳೆಲ್ಲಾ ನಿವಾರಣೆಯಾಗುವುವು. ಮನುಷ್ಯರಂತೆ ಇಲ್ಲಿಂದ ಹೊರಡಿರಿ. ಯಾರನ್ನೂ ಲೂಟಿ ಮಾಡಬೇಡಿ. ಶಿಸ್ತಿನಿಂದ ದಿಲ್ಲಿಯನ್ನು ಸೇರಿ ಹಿಂದೂಗಳ ಗಂಗೆ ಮತ್ತು ಮುಸಲ್ಮಾನರ ಖುರಾನಿನ ಪವಿತ್ರತೆಯನ್ನು ಕಾದುಕೊಳ್ಳಿ" ಎಂದಳು.

ಕೆಲವು ಸೈನಿಕರು ರಾಣಿಯ ಸೇವೆಯಲ್ಲಿರುವುದಕ್ಕೆ ಅಪೇಕ್ಷಿಸಿದರು. ಆದರೆ ಬಹಳ ಜನ ದೆಹಲಿಗೆ ಹೋಗಲು ಆಶಿಸಿದರು. ಆದುದರಿಂದ ಹೆಚ್ಚು ಕಡಿಮೆ ಎಲ್ಲರೂ ದೆಹಲಿಗೆ ಹೊರಟರು. ಕೆಲವರು ಮಾತ್ರ ಹಿಂದುಳಿದರು.
ಅವರಲ್ಲಿ ಲಾಲಿತ ಎಂಬ ತೋಪಚ್ಚಿಯೂ ಇದ್ದನು.

ಸಿಪಾಯಿಗಳು ಹೊರಟುಹೋದಮೇಲೆ ರಾಣಿಯು ರಕ್ನಾವಿನಿಂದ ದಿವಾಣ ಜವಹರಸಿಂಹ ಮುಂತಾದವರನ್ನು ಝಾನ್ಸಿಗೆ ಸೈನ್ಯ ಸಮೇತರನ್ನಾಗಿ ಕರೆಸಿದಳು.

ಸಿಪಾಯಿಗಳು ತಮ್ಮೊಡನೆ ಯುದ್ಧಸಾಮಗ್ರಿಗಳನ್ನೂ ತೋಪುಗಳನ್ನೂ ತೆಗೆದುಕೊಂಡು ಹೋಗಿದ್ದರು.

## ೫೦

ರಾತ್ರಿಯ ವೇಳೆಗೆ ಜವರಸಿಂಹನು ಸೈನ್ಯದೊಡನೆ ಝಾನ್ಸಿಗೆ ಬಂದು ಸೇರಿದನು. ರಾಣಿಯು ನಗರದತ್ತ ಮತ್ತು ಕೋಟೆಯ ಸಂರಕ್ಷಣೆಗಾಗಿ ವ್ಯವಸ್ಥೆ ಮಾಡಿ ಮರುದಿನ ಬೆಳಿಗ್ಗೆ ತನ್ನನ್ನು ನೋಡಬೇಕೆಂದು ದಿವಾನ್ ಜವಹರಸಿಂಹನಿಗೆ ಹೇಳಿಕಳುಹಿಸಿದಳು.

ಮಾರನೆಯ ದಿನ ಮಹಲ್ಲಿನಲ್ಲಿ ಬಹಳ ಜನ ಬಂದು ಕುಳಿತಿದ್ದರು. ಸೈನ್ಯ ಮತ್ತು ಶಾಸನದೊಂದಿಗೆ ಸಂಬಂಧಿಸಿದ ಸರದಾರರೂ, ಕರ್ಮಚಾರಿಗಳೂ, ಜಹಗೀರು ದಾರರೂ, ಸಾಹುಕಾರರೂ, ಮುಖಂಡರೂ ಎಲ್ಲರೂ ನೆರೆದಿದ್ದರು. ರಾಣಿಯು ಪರದೆಯ ಹಿಂದೆ ಬಂದು ಕುಳಿತಿದ್ದಳು.

" ನಾನು ಬಹು ಕಷ್ಟದಿಂದ ನೆನ್ನೆ ನಗರದಲ್ಲಿ ಲೂಟಿ ಮಾಡುವ ಪ್ರಯತ್ನವನ್ನು ತಪ್ಪಿಸಿದೆ. ವಿದ್ರೋಹಿಗಳು ಇಲ್ಲಿಂದ ಹೊರಟು ಹೋದರು. ಆದರೆ ಅವ್ಯವಸ್ಥೆ ಯನ್ನು ಹಿಂದೆ ಬಿಟ್ಟುಹೋಗಿದ್ದಾರೆ. ಢಕಾಯಿತಿ ಮತ್ತು ದರೋಡೆಗಳು ಹೆಚ್ಚುವ ಅಪಾಯವಿದೆ. ಜನರು ಎಚ್ಚರಿಕೆಯಿಂದಿರಬೇಕೆಂಬುದು ನನ್ನ ಆಶಯ. ಆದುದರಿಂದ ನಾನು ಝಾನ್ಸಿ ರಾಜ್ಯದ ಹಳೆಯ ಜಹಗೀರುದಾರರನ್ನೂ ಮತ್ತು ಸರದಾರರನ್ನೂ ಸ್ವಲ್ಪ ಸೇನೆ ತೆಗೆದುಕೊಂಡು ಬರುವಂತೆ ಹೇಳಿದೆ. ಇದರಲ್ಲಿ ಅವ್ಯವಸ್ಥೆಗೆ ಎಡೆ ಕೊಡ ಕೂಡದು. ನಿಮ್ಮನ್ನೂ ಮತ್ತು ಜನರ ಮುಖಂಡರನ್ನೂ ತಮ್ಮ ಅಭಿಪ್ರಾಯ ತಿಳಿಸು ವುದಕ್ಕಾಗಿ ಕರೆಸಿರುವೆನು. ನೀವುಗಳು ಈಗೇನು ಮಾಡಬೇಕೆಂಬುದನ್ನು ತಿಳಿಸಿ." ಎಂದು ಹೇಳಿದಳು.

ಗಾರ್ಡನ್ನಿನ ಪರ ಶಾಸನಾಧಿಕಾರಿಯು "ಸಾಗರದ ಡೆಪ್ಯುಟಿ ಕಮಿಷನ್ನರಿಗೆ ಕ್ರಾಂತಿಯ ಸಮಾಚಾರವನ್ನು ತಿಳಿಸಿ, ಜಬಲ್‌ಪುರದ ಕಮಿಷನ್ನರಿಗೆ ಆಂಗ್ಲೇಯರ ಪರವಾಗಿ ಪ್ರಭುತ್ವದ ಕಡಿವಾಣವನ್ನು ಕೈಗೆ ತೆಗೆದುಕೊಂಡಿದ್ದೇವೆ ಎಂದು ಬರೆದು ಕಳುಹಿಸಬೇಕೆಂಬುದು ನನ್ನ ಸಲಹೆ" ಎಂದನು.

ಅದನ್ನು ಮಾಲಿನ ಪರಶಾಸನಾಧಿಕಾರಿಯು ಸಮರ್ಥಿಸಿದನು. ನೇಯ್ಗೆಯವರ ಮುಖಂಡನು "ಬಹಳ ಕಷ್ಟದಿಂದ ಕಂಪೆನಿಯ ರಾಜ್ಯವನ್ನು ನಿರ್ಮೂಲ ಮಾಡಿ ಯಾಗಿದೆ. ಈಗ ಅವರಿಗೇಕೆ ಸಮಾಚಾರ ಕೊಡಬೇಕು? ಅವರನ್ನು ಮತ್ತೆ ಕರೆಸಿ ಝಾನ್ಸಿಯ ಪ್ರಜೆಗಳ ಪ್ರಾಣ ಹಿಂಡಬೇಕೆ ?" ಎಂದನು.

ಈ ಮಾತನ್ನು ಕೇಳಿ ಮೇಲೆ ಹೇಳಿದ ಇಬ್ಬರೂ ಆಗ್ರಹದಿಂದ ಕಣ್ಣುಕಣ್ಣು

ಬಿಟ್ಟರು.

ಮತ್ತೊಬ್ಬ ಮುಖಂಡನು "ನಾವು ಹೊಸ ಛಾವನಿಯನ್ನೇ ನಿರ್ಮಿಸೋಣ. ರಾಜ್ಯ ಭಾರವನ್ನು ನಮ್ಮ ರಾಣಿಯವರು ವಹಿಸುವರು. ಅವರು ವಹಿಸದಿದ್ದರೂ ಅವರೇ ನಮ್ಮ ಮಹಾರಾಣಿ" ಎಂದನು.

ಗಾಣಿಗರ ಮುಖ್ಯಸ್ಥನು "ನಮಗೆ ನಮ್ಮ ಹಳೇ ರಾಜ್ಯವೇ ಬೇಕು. ಪ್ರಪಂಚವೇ ತಲೆಕೆಳಗಾದರೂ ಸರಿಯೇ" ಎಂದನು.

ಪ್ರಮುಖ ಸಾವುಕಾರ ಮಗನ್‌ಗಂಧಿಯು "ಇಷ್ಟು ದಿನವೂ ಇದಕ್ಕಾಗಿ ಎದುರು ನೋಡಿ ನೋಡಿ ಕಣ್ಣೆಲ್ಲಾ ಕುರುಡಾಯಿತು. ಎಷ್ಟು ದಿನಗಳ ಪ್ರಾರ್ಥನೆಯ ಫಲವಾಗಿ ಈ ಸುದಿನವು ನೋಡಲು ಲಭಿಸಿತು. ನಮಗೆ ನಮ್ಮ ರಾಜ್ಯವು ಬೇಕೇ ಬೇಕು" ಎಂದನು.

ಶಾಸನಾಧಿಕಾರಿಗಳು ಪುನಃ ಕ್ರೋಧದಿಂದ ದೃಷ್ಟಿ ಬೀರಿದರು.

ಚಮ್ಮಾರರ ಮುಖಂಡನು "ಇವರು ಕಣ್ಣು ಬಿಡುತ್ತಿರುವುದು ನೋಡು. ರಾಜ್ಯವು ನಮ್ಮ ಬಾಯಿಸಾಹೇಬರದು. ಎಂದಿಗೂ ಅದು ಅವರದೇ. ನಾವೆಲ್ಲರೂ ನಮ್ಮ ಬಾಯಿಸಾಹೇಬರ ಮಕ್ಕಳು" ಎಂದನು.

ಮಾಲನಕಡೆ ಶಾಸನಾಧಿಕಾರಿಯು "ನವಾಬ್ ಅಲಿಬಹದ್ದೂರರನ್ನು ಕರೆಯಿಸಿ. ಅವರು ಒಳ್ಳೆಯ ಅನುಭವಸ್ಥರು. ಸರಿಯಾದ ಸಲಹೆಗಳನ್ನು ಕೊಡಬಲ್ಲರು. ಈ ಮೂರ್ಖರ ಸಲಹೆಗೆ ಬೆಲೆಕೊಟ್ಟರೆ ದುಷ್ಪರಿಣಾಮವಾಗಬಹುದು" ಎಂದನು.

ಅಹಿರರ ಮುಖಂಡನು ಕೋಪದಿಂದ "ನೀನೇನು ಮಹಾ ಪಂಡಿತನೊ?" ನಮಗೆ ಪರದೇಶೀಯರ ಆಳ್ವಿಕೆಯು ಬೇಕಾಗಿಲ್ಲ. ಅವರ ನೌಕರಿಯನ್ನು ಮಾಡಿದರೆ ಅವರು ನಮ್ಮ ಮುಖಕ್ಕೆ ಮಸಿ ಬಳಿಯುವರು." ಎಂದನು.

ಮೋರೋಪಂತನು ಜನಾಭಿಪ್ರಾಯಕ್ಕೆ ಬೆಂಬಲವಿತ್ತನು. ಆ ಸಭೆಯಲ್ಲಿ ಲಕ್ಷ್ಮಣರಾವ್ ಬಾಂಡೆ ಎಂಬ ಕುಶಾಗ್ರಮತಿಯೊಬ್ಬನಿದ್ದನು. ಆತನು "ಶಾಸನಾಧಿಕಾರಿಗಳೇ, ಆಂಗ್ಲೇಯರನ್ನೂ ಅವರ ಮತವನ್ನೂ ಅರಿತಿರುವೆನು. ಅವರುಗಳು, ಮಹಾರಾಣಿಯವರು ನಾಲ್ಕಾರು ದಿನ ಈ ಗೊಂದಲವನ್ನು ತಮ್ಮ ತಲೆಯ ಮೇಲೆ ಹೊತ್ತುಕೊಂಡು ಸಂಭಾಳಿಸಲಿ. ಅಷ್ಟರಲ್ಲಿ ಸಾಗರದ ಡೆಪ್ಯುಟಿ ಕಮಿಷನರನ್ನು ಕರೆಸಿ, ಅವರಿಗೆ ಎಲ್ಲವನ್ನೂ ಒಪ್ಪಿಸಿ, ನಂತರ ಮುಂದಿನ ಕಾರ್ಯವನ್ನು ದರ್ಪದಿಂದ ನಡೆಯುವಂತೆ ಮಾಡಬೇಕೆಂಬ ಅಭಿಪ್ರಾಯವನ್ನು ಹೊಂದಿದ್ದಾಳೆ." ಎಂದನು.

ತರುವಾಯ ಅವರಿಬ್ಬರನ್ನೂ ಒಬ್ಬೊಬರು ಒಂದೊಂದು ವಿಧವಾಗಿ ದೂಷಿಸ ಲಾರಂಭಿಸಿದರು.

ವೃದ್ಧನಾದರೂ ಚೈತನ್ಯಯುಕ್ತನಾಗಿದ್ದ ನಾನಾ ಬೋಪಟ್ ಕರನು "ನಾವು

ಈ ಶಾಸನಾಧಿಕಾರಿಗಳ ಸಲಹೆಯನ್ನು ಗಮನಿಸೋಣ, ಈ ಸಮಯದಲ್ಲಿ ನಾವು ಅತ್ಯವಶ್ಯಕವಾಗಿ ಮಹಾರಾಣಿಯು ಈ ರಾಜ್ಯದ ಸರ್ವಶಾಸನಾಧೀಶಳೆಂದೂ ಮತ್ತು ನಾವುಗಳು ಅವಳ ಪ್ರಜೆಗಳೆಂದೂ ಭಾವಿಸಿ ದೃಢತೆಯಿಂದ ನಮ್ಮ ಕರ್ತವ್ಯ ಪಾಲನೆ ಮಾಡಬೇಕು." ಎಂದನು.

ಅಲ್ಲಿ ನೆರೆದಿದ್ದವರೆಲ್ಲರೂ ಅತ್ಯಂತ ಸಂತೋಷ ಮತ್ತು ಉತ್ಸಾಹಗಳಿಂದ ಈ ಸಲಹೆಯನ್ನು ಅಂಗೀಕರಿಸಿದರು.

ಆ ಇಬ್ಬರು ಶಾಸನಾಧಿಕಾರಿಗಳನ್ನು ದರ್ಬಾರಿನಿಂದ ಹೊರಗೆ ಕಳುಹಿಸಲಾಯಿತು. ರಾಣಿಯು "ಈಗ ನೀವು ನನ್ನ ಮೇಲೆ ಹೊರೆಸಿರುವ ಈ ಜವಾಬ್ದಾರಿಯನ್ನು ಒಳ್ಳೆಯ ಸುಸಂಧಿಯೆಂದೆಣಿಸಿ ದೇವರ ಅನುಗ್ರಹದಿಂದ ಅದನ್ನು ನಿಭಾಯಿಸುತ್ತೇನೆ" ಎಂದಳು.

ಜನರು ಜಯಕಾರ ಮಾಡಿದರು.

ಗುಲಾಮ್ ಗೌಸ್ ಖಾ ಎಂಬ ತೋಪುಹಾರಿಸುವವನು (ತೋಪಚಿ) ಎದ್ದು ನಿಂತು ಕೈಕಟ್ಟಿ "ಪ್ರಭು, ನನಗೆ ನನ್ನ ಹಿಂದಿನ ಉದ್ಯೋಗವು ದೊರೆಯಬೇಕು" ಎಂದು ಅರಿಕೆಮಾಡಿಕೊಂಡನು.

ರಾಣಿಯು ಅವನನ್ನು ಚೆನ್ನಾಗಿ ಬಲ್ಲಳು. "ನಿನ್ನನ್ನು ಸದರ್ ತೋಪಚಿಯ ಕೆಲಸಕ್ಕೆ ನಿಯುಕ್ತಮಾಡಲಾಗಿದೆ. ಎಲ್ಲಾ ತೋಪುಗಳ ಮೇಲುಸ್ತುವಾರಿಯನ್ನು ನೋಡಿಕೊ ಮತ್ತು ಕೆಟ್ಟುಹೋಗಿರುವ ತೋಪುಗಳನ್ನು ಸರಿಪಡಿಸಿ ಸಿದ್ಧಪಡಿಸು" ಎಂದಳು.

ಗೌಸ್ ಖಾನನು "ಗದ್ಗದಿತನಾಗಿ" ತಮ್ಮ ಅಪ್ಪಣೆ. ಮತ್ತೊಂದು ಅರಿಕೆಯೇನೆಂದರೆ, ಸುಮಾರು ಮೂರುವರೆ ವರ್ಷಗಳ ಹಿಂದೆ ಎಲಿಸ್ಸನು ಕಿಲ್ಲೆಯ ಅರಮನೆಗೆ ಬಂದನು. ಆಗ ನನ್ನ ಮನಸ್ಸಿನಲ್ಲಿ ಬಹುಶಃ ಆತನು ಝಾನ್ಸಿರಾಜ್ಯವನ್ನು ಹಿಂದಿರುಗಿಸುವ ಮಹತ್ವಪೂರ್ಣ ಪತ್ರವನ್ನು ತಂದಿರಬೇಕು. ಅದಕ್ಕಾಗಿ ತೋಪು ಹಾರಿಸಿ ಮರ್ಯಾದೆ ಸೂಚಿಸಬೇಕು ಎಂದು ತೋಪಿಗೆ ಮದ್ದನ್ನು ತುಂಬಿಸಿ ಹಾರಿಸಲು ಸಿದ್ಧವಾಗಿದ್ದೆನು—ಇಂದು ನೀವು ನನ್ನ ಮನದಂತೆ ನಡೆಸಲು ಉತ್ತರವೀಯಬೇಕು" ಎಂದನು.

ರಾಣಿಯು ಮೃದು ಮಧುರ ಸ್ವರದಿಂದ "ಈಗ ಅಂತಹ ಮಹತ್ವಪೂರ್ಣವಾದುದೇನು ನಡೆದಿದೆ?" ಎಂದು ಕೇಳಿದಳು.

ಗೌಸ್ ಖಾ—ನಡೆದಿದೆ ಪ್ರಭು. ನಮ್ಮ ಹೃದಯದ ಅಂತರ್ಯ ಬಹಿರಂಗಗಳಿಗೆ ಅದು ಗೋಚರವಾಗಿದೆ.

ಮೋರೋಪಂತ್—ಹೌದು, ನಡೆದಿದೆ.

ಲಕ್ಷ್ಮಣರಾವ್—ಅದು ನಿಜ.

ನಾನಾಬೋಪಟ್‌ಕರ್—ಇದರಲ್ಲಿ ಸಂಶಯವೇ ಇಲ್ಲ.

ಕುಳಿತಿದ್ದ ಪ್ರಜೆಗಳೂ ಅದರೊಂದಿಗೆ ದನಿಗೂಡಿಸಿ ಜಯಜಯಕಾರ ಮಾಡಿದರು.

ರಾಣಿಯು ಅನುಮತಿಯಿತ್ತಳು.

ಗುಲಾಮ್ ಗೌಸ್ ಖಾನನು ಸ್ವಲ್ಪ ಹೊತ್ತಿನೊಳಗಾಗಿ ತೋಪುಗಳನ್ನೆಲ್ಲಾ ಪರೀಕ್ಷಿಸಿ ಅವುಗಳಲ್ಲಿ ಹಾರಿಸಲು ತಕ್ಕ ಸ್ಥಿತಿಯಲ್ಲಿದ್ದವುಗಳಿಂದ ತೋಪಿನ ಸಲಾಮುಗಳನ್ನು ಅರ್ಪಿಸಿದನು.

ಜನರ ಗುಂಪೆಲ್ಲವೂ ಚದುರಿದನಂತರ ರಾಣಿಯು ಏಕಾಂತದಲ್ಲಿ ತನ್ನ ಆಪ್ತ ಸರದಾರರೊಂದಿಗೆ ಹಲಕೆಲವು ಚರ್ಚೆಗಳನ್ನು ನಡೆಸಿದಳು.

ನಾನಾ ಬೋಪಟ್—ಈಗ ಪುಸ್ತಕ ಲಕ್ಷಣಗಳಿಂದ ಆಂಗ್ಲೇಯರೇನೂ ಇಲ್ಲಿಂದ ಸಮೂಲವಾಗಿ ಹೊರಟಂತೆ ಕಾಣುವುದಿಲ್ಲ. ಆದುದರಿಂದ ಜಬ್ಬಲ್‌ಪುರದ ಕಮಿಷನರ್ ಸಾಹೇಬರ ಬಳಿಗೆ, ಆಂಗ್ಲೇಯರ ಪರವಾಗಿ, ಮಹಾರಾಣಿಯವರು ಝಾನ್ಸಿಯ ರಾಜ್ಯಭಾರಮಾಡುತ್ತಿರುವರೆಂದೂ ಮತ್ತು ಇದರಿಂದ ಪ್ರಜೆಗಳಿಗೆ ಕಳ್ಳಕಾಕರ ಕಾಟವು ತಪ್ಪಿ ಅವರು ನಿಶ್ಚಿಂತರಾಗಿರುವರೆಂದೂ, ಒಂದು ಸಂದೇಶ ಕಳುಹಿಸಬೇಕು. ಒಂದು ವೇಳೆ ಆಂಗ್ಲೇಯರನ್ನು ಈ ದೇಶದಿಂದ ಓಡಿಸಿಬಿಟ್ಟರೆ ಝಾನ್ಸಿಯು ನಮ್ಮ ಕೈಯಲ್ಲೇ ಇರುತ್ತದೆ; ಅಥವಾ ಒಂದು ವೇಳೆ ಅವರು ಝಾನ್ಸಿಗೆ ಹಿಂದಿರುಗಿದರೂ ನಮ್ಮ ರಾಣಿಗೆ ಯಾವ ನಷ್ಟವೂ ಉಂಟಾಗುವುದಿಲ್ಲ.

ಮೋರೋಪಂತ್—ನಾನು ಈ ಮತವನ್ನು ಉಚಿತವೆಂದೆಣಿಸುವುದಿಲ್ಲ. ನಾನಾ ಸಾಹೇಬ್ ಮತ್ತು ದೆಹಲಿ ಲಕ್ನೋ ಮುಂತಾದೆಡೆಗಳಲ್ಲಿರುವ ನಮ್ಮ ಸಹೋದ್ಯೋಗಿಗಳೆಲ್ಲಾ ಇದನ್ನು ಕೇಳಿ ಏನೆಂದು ಭಾವಿಸುವರು?

ರಘುನಾಥಸಿಂಹ—ನಾನಾಸಾಹೇಬ್ ಮುಂತಾದವರು ನಮ್ಮನ್ನು ಚೆನ್ನಾಗಿ ಅರಿತಿರುವರು. ಅವರ ಮನಸ್ಸು ಪರಿಪಕ್ವವಾಗಿರುವುದರಿಂದ ಭ್ರಮೆಗೊಳ್ಳುವುದಿಲ್ಲ. ನನ್ನ ಬಳಿ ವಿಕ್ಟೋರಿಯಾ ರಾಣಿಯವರು ದಯಪಾಲಿಸಿದ ಸನ್ನದ್ದು ಮತ್ತು ಕತ್ತಿಗಳಿವೆ. ಸನ್ನದ್ದನ್ನು ರಹದಾರಿಯನ್ನಾಗಿ ಉಪಯೋಗಿಸಿಕೊಂಡು ಕತ್ತಿಯನ್ನು ದೇಶದ ಸ್ವಾತಂತ್ರ್ಯತೆಗಾಗಿ ನಿಯೋಗಿಸಿಕೊಳ್ಳೋಣ.

ದಿವಾನ್ ದುಲ್ಹಾಜು—ನಾನು ನನ್ನ ಶರೀರವನ್ನು ದೇಶಕ್ಕಾಗಿ ಚೂರು ಚೂರಾಗಿ ತುಂಡರಿಸಿಕೊಳ್ಳುವುದಕ್ಕೂ ಸಿದ್ಧನಾಗಿದ್ದೇನೆ. ನಮ್ಮ ರಾಜ್ಯವು ಸ್ಥಾಪಿತವಾಗಲಿ. ಅದಕ್ಕಾಗಿ ನಾನು ಘೋರಯುದ್ಧ ಮಾಡುತ್ತೇನೆ. ಇಂದು ಆನಂದದಿಂದ ನಾನು ಉನ್ಮತ್ತನಾಗಿರುವೆನು.

ಜವಹರ್‌ಸಿಂಹ—ಸಮಯ ಬಂದಾಗ ಎಲ್ಲದರ ಪರೀಕ್ಷೆಯೂ ಆಗುವುದು, ದಿವಾ್ನಸಾಹೇಬರೆ?

ದುಲ್ಹಾಜು—ಹೇಗೆ, ದಿವಾ್ನಸಾಹೇಬರೆ?

ಜವಹರಸಿಂಹ—ನೀವು ಸಿಟ್ಟಿಗೇಳುತ್ತಿದ್ದೀರಿ; ಯುದ್ಧಮಾಡಿ ಮಡಿಯುವುದು ಎಲ್ಲರಿಗೂ ಬರುತ್ತದೆ. ಆದರೆ ಈಗ ಶಾಂತಿಯಿಂದ ಸಲಹೆ ಮಾಡಬೇಕಾಗಿದೆ. ಇದೇ ನನ್ನ ನಿವೇದನೆಯ ಅರ್ಥ.

ಭಾವುಬಕ್ಷಿ—ನಾನಾಬೋಪಟ್‌ಕರ್‌ರು ಅಪ್ಪಣೆ ಕೊಡಿಸಿದ ವಿಚಾರವು ವಿಮರ್ಶಿಸಲು ಯೋಗ್ಯವೆಂದು ನನಗೆ ಭಾಸವಾಗುತ್ತದೆ.

ಮೋರೋಪಂತ್—ನಾನು ಈ ಸಲಹೆಗೆ ವಿರುದ್ಧನಲ್ಲ. ಆದರೆ ಪತಾಕೆಯ ಪ್ರಶ್ನೆ ಏಳುತ್ತದೆ. ಎಲ್ಲೆಲ್ಲೂ ಬಾದಷಹರ ಹಸುರ ಬಾವುಟವನ್ನು ಹಾರಿಸಲಾಗುತ್ತಿದೆ.

ರಾಣಿ—ಝಾನ್ಸಿಯಲ್ಲಿ ಕೇವಲ ಕಾವೀಬಣ್ಣದ ಧ್ವಜವನ್ನು ಹಾರಿಸೋಣ.

ನಾನಾಬೋಪಟ್‌ಕರ್—ನನಗೂ ಅದೇ ಸರಿಯೆಂದು ತೋರುತ್ತದೆ.

ರಾಣಿ—ನ್ಯಾಯನೀತಿಗಳ ನಿರ್ವಹಣವನ್ನು ನಾನಾಬೋಪಟ್ಕರರು ವಹಿಸಿಕೊಂಡು ಅವರಿಗೆ ಸರಿತೋರಿದಂತೆ ಮಾಡಲಿ. ನಾನು ಸ್ವತಃ ರಾಜನೀತಿ ರಣನೀತಿಗಳನ್ನು ನೋಡಿಕೊಳ್ಳುವೆನು.

ನಾನಾ—ನಾನೇ ಸ್ವತಃ ಆಂಗ್ಲೇಯರಿಗೆ ಆ ಸಂದೇಶವನ್ನು ಬರೆಯುವುದಿಲ್ಲ. ಗಾರ್ಡನ್ನನ ಕಡೆಯ ಅಧಿಕಾರಿಗಳು ಛೀಮಾರಿಮಾಡಿಕೊಂಡು ಹೋಗಿದ್ದಾರೆ. ಅವರಿಗೆ ಹೇಳಿದರೆ ಬರೆಯುವರು. ಅವರಿಂದ ಬರೆಸುವೆನು.

ಈ ವಿಚಾರಗಳೆಲ್ಲವೂ ಖಚಿತಗೊಂಡನಂತರ ರಾಜಕಾರ್ಯವಿಭಾಗಗಳಿಗೆ ಅಧಿಕಾರಿಗಳನ್ನು ನೇಮಿಸಲಾಯಿತು. ಲಕ್ಷ್ಮಣರಾಯನು ಪ್ರಧಾನ ಮಂತ್ರಿ, ತೋಪುಗಳನ್ನು ನಿಲ್ಲಿಸುವುದು ಮತ್ತು ಬಕ್ಷಿಯ ಕೆಲಸಕ್ಕೆ ಭಾವು ಬಕ್ಷಿ, ದಿವಾನ್ ಜವಹರ್‌ಸಿಂಹ ಪ್ರಧಾನ ಸೇನಾಪತಿ; ಕಾಲಾಳು ಬಲದ ಮೂವರು ಕರ್ನಲ್‌ಗಳು—ದಿವಾನ್ ರಘುನಾಥಸಿಂಹ, ಮಹಮುದ್ ಜಮಾಖಾನ್ ಮತ್ತು ಖುದಾಬಕ್ಷ; ಅಶ್ವಸೈನ್ಯದ ಪ್ರಧಾನಿ ಸ್ವಯಂ ರಾಣಿಯೇ; ಸುಂದರಿ, ಮುಂದರಿ ಮತ್ತು ಕಾಶಿ ಕರ್ನಲ್‌ಗಳಾದರು. ತೋಪುಖಾನೆಯ ಪ್ರಧಾನಿ ಗುಲಾಮ್ ಗೌಸ್‌ಖಾನ್. ದಿವಾನ್ ದುಲ್ಹಾಜು ಆತನ ಸಹಾಯಕ, ನಾನಾಬೋಪಟ್ಕರನು ನ್ಯಾಯಾಧೀಶ. ಮೋರೋಪಂತನು ಬಿಲ್ಲುಗಾರರ ನಾಯಕ ಮತ್ತು ಗೂಢಚಾರ ವಿಭಾಗಕ್ಕೆ ಜ್ಯೂಹಿಯ ಸಹಾಯದೊಂದಿಗೆ ಮೋತೀಬಾಯಿಯು ಮುಖ್ಯಸ್ಥಳಾಗಿ ನೇಮಿತಳಾದಳು.

ಪೋಲೀಸ್, ದಾನ ಧರ್ಮ, ನಗರದ ಸೌಂದರ್ಯ, ಸಂಪತ್ತು ಮುಂತಾದ ವಿಭಾಗಗಳಿಗೆ ಅಧಿಕಾರಿಗಳು ನೇಮಿತರಾದರು. ತಹಸೀಲುಗಳಲ್ಲಿ ತಹಸೀಲುದಾರರು

ನಿಯಮಿತರಾದರು. ಮಹುವಿನ ಪರಗಣಗಳನ್ನು ಕಾಶೀನಾಥ ಭೈಯ್ಯಾ ಎಂಬುವನಿಗೂ ಮತ್ತು ಆನಂದರಾಯನಿಗೂ ಕೊಡಲಾಯಿತು.

ಆ ದಿನ ಅತ್ಯಂತ ಉಷ್ಣವಾಯುವು ಚಲಿಸಿ ಬಹಳ ಸೆಖೆಯಾಗಿದ್ದಿತು. ಆದರೆ ದಿನವು ಹೇಗೆ ಕಳೆದುಹೋಯಿತೆಂಬುದೇ ಒಬ್ಬರಿಗೂ ಗೋಚರವಾಗಲಿಲ್ಲ. ಕಾರ್ಯಕ್ರಮವೆಲ್ಲವೂ ಮುಗಿದನಂತರ ರಾಣಿಯು ಸಭಾವಿಸರ್ಜನೆ ಮಾಡಿದಳು.

## ೫೧

ಎಲ್ಲಾ ಅಧಿಕಾರಿಗಳೂ ತಮ್ಮ ತಮ್ಮ ಕರ್ತವ್ಯಗಳನ್ನು ದಕ್ಷತೆಯಿಂದಲೂ ಜಾಗರೂಕತೆಯಿಂದಲೂ ನಿರ್ವಹಿಸಬೇಕೆಂದು ರಾಣಿಯು ಆದೇಶವಿತ್ತಳು.

ಬೆಳಗ್ಗಿನಿಂದಲೇ ಅಶ್ವಾರೋಹಿ ಮತ್ತು ಪದಾತಿ ಸೈನ್ಯಗಳಿಗೆ ಕಸರತ್ತು ಮಾಡಿಸುವುದು ಮತ್ತು ಧ್ವಜಾರೋಹಣ ಮುಂತಾದವು ಪ್ರಾರಂಭಿಸಿದ್ದುವು. ಸಮಯಕ್ಕೆ ಸರಿಯಾಗಿ ತುತ್ತೂರಿಯ ಧ್ವನಿಯಾಗಿ ಎಲ್ಲಾ ಕಾರ್ಯಕಲಾಪಗಳೂ ನಿರ್ದಿಷ್ಟಕಾಲಕ್ಕೆ ನಡೆಯುತ್ತಿದ್ದುವು. ಸೈನ್ಯಕ್ಕೆ ಹಳೆಯ ಸೈನಿಕರೇ ಮುಕ್ಕಾಲು ಪಾಲು ಬಂದು ಸೇರಿದರು, ಕೆಲವರು ಹೊಸಬರು ದಾಖಲೆಯಾದರು. ಎಲ್ಲಾ ಜಾತಿವರ್ಗದವರನ್ನೂ ಭೇದಭಾವವಿಲ್ಲದೆ ಸೇರಿಸಿಕೊಳ್ಳಲಾಯಿತು. ರಾಣಿಗೆ ಎಲ್ಲಾ ಕೋಮಿನವರೂ ಸೇರಿಕೊಂಡರೇನೆ ಆಗ ಜನತೆಗೆ ಸೈನ್ಯವು ತಮ್ಮದೆಂಬ ವಿಶ್ವಾಸವುಂಟಾಗುವುದೆಂಬ ನಂಬಿಕೆ ಇದ್ದಿತು.

ಝಾನ್ಸಿಯ ಕೋಟೆಯನ್ನು ಕೈವಶಮಾಡಿಕೊಂಡು ನಂತರ ಆಂಗ್ಲೇಯರು ಎಲ್ಲಾ ತೋಪುಗಳನ್ನೂ ನಿರುಪಯೋಗ ಮಾಡಿಬಿಟ್ಟಿದ್ದರು. ಆದುದರಿಂದ ತೋಪು ಮದ್ದು ಗುಂಡು ಮುಂತಾದುವನ್ನು ತಯಾರಿಸುವ ಕಾರ್ಖಾನೆಯನ್ನು ಒಡನೆಯೆ ಪ್ರಾರಂಭಿಸಲಾಯಿತು. ತುಪಾಕಿ, ಪಿಸ್ತೂಲು, ಕತ್ತಿ ಮುಂತಾದ ಅಸ್ತ್ರಗಳನ್ನು ತಯಾರುಮಾಡಲು ಒಡನೆಯೇ ಆರಂಭಿಸಿದರು. ಆದರೆ ಈ ಹೊಸಖಾರ್ಕಾನೆಗಳಿಂದ ಶಸ್ತ್ರಾಸ್ತ್ರಗಳು ಹೊರಬೀಳುವುದು ತ್ವರೆಯಿಂದ ಆಗುತ್ತಿರಲಿಲ್ಲ. ಆದುದರಿಂದ ರಾಣಿಯು ಎಲ್ಲಿ ಹಳೆಯ ಖಡ್ಗಗಳೂ ಮತ್ತಿತರ ಆಯುಧಗಳು ದೊರಕಿದರೂ ಅವುಗಳನ್ನು ಒಟ್ಟುಗೂಡಿಸುತ್ತಿದ್ದಳು. ಇದರೊಂದಿಗೆ ಪ್ರಜೆಗಳೂ ಧಾರಾಳವಾಗಿ ಧನಸಹಾಯಮಾಡಿದರು.

ಗುಲಾಮ್ ಗೌಸ್‌ಖಾನನು ಎರಡು ದಿನಗಳಲ್ಲಿ ತೋಪುಗಳನ್ನು ಸರಿಪಡಿಸಿದನು.

ಇದು ಒಳ್ಳೆಯದೇ ಆಯಿತು, ಏತಕ್ಕೆಂದರೆ ರಾಜ್ಯವನ್ನು ಕೈಗೆತೆಗೆದುಕೊಂಡ

ಐದನೆಯ ದಿನವೇ (ಜೂನ್ ೧೩ ನೇ ತಾರೀಖು ರಾತ್ರಿ) ಮೋತೀಬಾಯಿಯು ರಾಣಿಗೆ, ಸದಾಶಿವರಾವ್ ನೇವಾಳ್ಕರನು ಕರೇರಾದುರ್ಗವನ್ನು ಮುತ್ತಿರುವನೆಂದೂ, ಅಸಂಖ್ಯಾತ ಸೈನ್ಯ ಶೇಖರಿಸಿರುವನೆಂದೂ, ಮೋತೀಬಾಯಿಯು ಸಮಾಚಾರವಿತ್ತಳು.

ಸದಾಶಿವರಾಯನು ಝಾನ್ಸಿಯ ಗಾದಿಗೆ ಹಕ್ಕುದಾರನೆಂದು ದಾವಾ ಹೂಡಿದ್ದನು. ಝಾನ್ಸಿಯಲ್ಲಿ ವಾಸಿಸುತ್ತಿದ್ದು ಮೇ ೩೧ ನೇ ತಾರೀಖಿನ ಘಟನೆಗಳನ್ನು ಆತನು ಅರಿತಿದ್ದನು. ಆಗ ಅವನು ಕೊಳ್ಳೆಹೊಡೆಯುವುದಕ್ಕಾಗಿ ಝಾನ್ಸಿಯಿಂದ ಹೊರಬಿದ್ದನು. ಹಳ್ಳಿಗಳಲ್ಲಿ ಜನರು ಕ್ರಾಂತಿಗಾಗಿ ಸಿದ್ಧರಾಗಿದ್ದರು. ಅನೇಕ ಸಾಹಸಿ ಯುವಕರು ಕತ್ತಿಗಳನ್ನು ಒರೆಯಲ್ಲಿಟ್ಟು ಸದಾಶಿವರಾಯನನ್ನು ಅನುಸರಿಸಿದರು.

ಕರೇರಾವಿನಲ್ಲಿದ್ದ ತಹಸೀಲ್ದಾರರು ಮತ್ತು ಠಾಣೇದಾರರು ಆಂಗ್ಲೇಯರಿಂದ ನಿಯಮಿಸಲ್ಪಟ್ಟವರಾಗಿದ್ದರು. ಅವರನ್ನು ಸದಾಶಿವರಾಯನು ಹೊಡೆದೋಡಿಸಿದನು. ಒಡನೆಯೇ ಅಕ್ಕಪಕ್ಕದ ಜಹಗೀರುದಾರರಿಂದ ಹಣ ಸುಲಿಗೆ ಮಾಡಿ ಒಂದೆರಡು ದಿನಗಳಲ್ಲಿಯೇ ರಾಜ್ಯಾಭಿಷೇಕವನ್ನು ಮಾಡಿಸಿಕೊಂಡನು. ಮಹಾರಾಜ ಶ್ರೀ ಸದಾಶಿವ ನಾರಾಯಣನೆಂಬ ನಾಮಧಾರಣೆ ಮಾಡಿಕೊಂಡು ತಾನೆ ಝಾನ್ಸಿ ರಾಜ್ಯದ ನಿಜವಾದ ಹಕ್ಕುದಾರನೆಂಬುದಾಗಿ ಪ್ರಚುರಪಡಿಸಿದನು. ಹಳ್ಳಿಹಳ್ಳಿಗೂ ತಾನು ಮಹಾರಾಜನೆಂದು ಘೋಷಣೆಮಾಡುವ ಪತ್ರಿಕೆಗಳನ್ನೂ ಕಳುಹಿಸಿದನು. ಯಾರು ಅವನನ್ನು ಝಾನ್ಸಿಯ ರಾಜನೆಂದು ಒಪ್ಪಲಿಲ್ಲವೋ ಅವರ ಆಸ್ತಿಯನ್ನು ಒಡನೆಯೇ ವಶಪಡಿಸಿಕೊಂಡನು. ಎರಡು ಮೂರು ವಾರಗಳಲ್ಲಿಯೇ ಅಖಂಡ ಹಿಂದೂಸ್ಥಾನದ ಚಕ್ರವರ್ತಿಯೇ ಆಗುವನೋ ಎಂಬಂತೆ ದರ್ಪದಿಂದ ಮುಂದುವರಿದನು.

ಆತನು ಝಾನ್ಸಿಯು ಕೇವಲ ನಿಸ್ಸಹಾಯಕಳೂ ಅಲ್ಪವಯಸ್ಕಳೂ ಆದ ಸ್ತ್ರೀಯ ಕೈಯ್ಯಲ್ಲಿದೆಯೆಂದು ಭಾವಿಸಿದನು.

ಈ ಸಮಾಚಾರವು ಮುಟ್ಟುತ್ತಲೇ ರಾಣಿಯು ಸಿದ್ಧತೆಗಳನ್ನು ಮಾಡಿದಳು. ನಗರದ ಭದ್ರತೆಯ ಏರ್ಪಾಡುಗಳೆಲ್ಲವೂ ಸಮರ್ಪಕವಾಗಿದ್ದವು. ಉತ್ತರ ಪೂರ್ವ ಮತ್ತು ದಕ್ಷಿಣ ಭಾಗಗಳಲ್ಲಿ ಒಡನೆಯೇ ತಕ್ಕ ಬಂದೋಬಸ್ತುಗಳು ಏರ್ಪಟ್ಟವು. ಕರೇರಾವು ಝಾನ್ಸಿಗೆ ದಕ್ಷಿಣ ದಿಕ್ಕಿನಲ್ಲಿದ್ದು ಮಹಾರಾಜಾ ಸದಾಶಿವರಾಯನ ದೆಸೆಯಿಂದ ತೊಂದರೆಯಿದ್ದಿತು.

ಝಾನ್ಸಿಯ ಸೇನೆಯು ದಕ್ಷವಾಗಿಲ್ಲದಿದ್ದರೂ ಸೇನಾಪತಿಗಳು ಚತುರರೂ ಉತ್ಸಾಹಿತರೂ ಆಗಿದ್ದರು. ಕರೇರಾವಿನಿಂದ ಯಾವ ಆಕ್ರಮಣವೂ ಬರುವುದಕ್ಕೆ ಮೊದಲೇ ರಾಣಿಯು ತನ್ನ ಮೂವ್ವರು ಸಖಿಯರೊಂದಿಗೆ ಮುಗುಳ್ನಗುತ್ತಾ "ಮೂವರು ಕರ್ನಲ್‌ಗಳ ಸತ್ವಪರೀಕ್ಷೆಯು ಮಹಾರಾಜ ಸದಾಶಿವನಾರಾಯಣನ ಸಮ್ಮುಖದಲ್ಲಿ

ನಡೆಯುವುದು” ಎಂದಳು.

ಮುಂದರಿಯು “ಮಹಾರಾಜ ಸಾಹೇಬರು ಒಂದು ವೇಳೆ ನಮ್ಮ ಜನರಲ್ಲಿನ ಹೆಸರನ್ನು ಕೇಳುತ್ತಲೇ ಓಡಿಹೋದರೊ ?” ಎಂದಳು.

ರಾಣಿಯು ಮುತ್ತುಗಳು ಪ್ರಕಾಶ ಚೆಲ್ಲಿದಂತೆ ಮಂದಸ್ಮಿತಳಾದಳು. ಕಾಶಿಯು ಗಂಭೀರಪ್ರಕೃತಿಯವಳಾದರೂ ಬಹಳವಾಗಿ ನಕ್ಕಳು.

ರಾಣಿಯು “ಕಾಶಿ, ನಾನು ಬಹಳ ಹಿಂದೆಯೇ ಇರುತ್ತೇನೆ. ನೀವು ಮುಂದುವರಿದು ಯುದ್ಧವನ್ನು ಕೈಗೊಳ್ಳಬೇಕಾಗುವುದು” ಎಂದಳು.

ಕಾಶಿಯು “ಬಾಯಿಸಾಹೇಬ್ ಆ ಸಮಯದಲ್ಲಿ ನಿಮ್ಮ ಕುದುರೆಯು ಹಿಂದಿರಲು ಒಪ್ಪುವುದಿಲ್ಲ ಅಥವಾ ನೀವೇ ಒಪ್ಪುವುದಿಲ್ಲ” ಎಂದಳು.

ರಾಣಿಯು ಕಾಶಿಯನ್ನು ಬರಸೆಳೆದು “ನಿನ್ನ ಒಂದು ಮಾತೇನೋ ನಿಜವಾಗಿ ಹೋಯಿತು. ಆ ದಿನ ನೀನು ಜವಹರಸಿಂಹರು ಸೇನಾಪತಿಗಳಾಗುವರೆಂದು ಹೇಳಿದೆ, ಅಂತೆಯೇ ಆಯಿತು. ಈಗ ನೋಡೋಣ, ಕರೇರಾ ವಿಷಯದಲ್ಲಿ ಮುಂದರಿಯ ಮಾತು ನಿಜವಾಗುತ್ತದೆಯೋ ಇಲ್ಲವೋ. ಬಹುಶಃ ಯುದ್ಧವೇ ಆಗಬಹುದು” ಎಂದಳು.

ಮುಂದರಿಯು ಉತ್ಸಾಹದಿಂದ “ಸರ್ಕಾರ್, ಈ ಬಾರಿ ನನ್ನ ಮಾತೇ ನಿಜವಾಗುವುದು” ಎಂದಳು.

ರಾಣಿಯು ಉತ್ತರಿಸಿದಳು “ಹಾಗಾದರೆ ನನ್ನ ಕೈಯ್ಯಿಂದ ಲಡ್ಡುಮಾಡಿ ತಿನ್ನಿಸುವೆನು.”

ಮುಂದರಿಗೆ ರಾಣಿಯು ತಾನೆ ಮಾಡಿದ ಲಡ್ಡುಗಳನ್ನು ರಘುನಾಥಸಿಂಹ ಮುಂತಾದವರಿಗೆ ತಿನ್ನಿಸಿದುದರ ನೆನಪು ಬಂದಿತು.

ರಾಣಿಯು ಪ್ರಯಾಣ ಬೆಳಸಿದಳು. ಅವಳು “ಮಹಾರಾಜ ಸದಾಶಿವ ನಾರಾಯಣನಿಗೆ” ಯುದ್ಧ ಮಾಡುವುದಕ್ಕೂ ಅವಕಾಶವೀಯದಷ್ಟು ಜಾಗ್ರತೆ ತನ್ನ ಕುದುರೆ ಸವಾರರೊಡನೆ ಕರೇರಾವನ್ನು ಸೇರಿದಳು.

ಆಕೆಯು ಕರೇರಾವಿನ ಕೋಟೆಗೆ ಹಾಕಿದ್ದ ಬಲವಾದ ಮುತ್ತಿಗೆಯಿಂದ ಸದಾಶಿವರಾಯನು ಅತ್ಯಂತ ಪ್ರಯಾಸದಿಂದ ತಪ್ಪಿಸಿಕೊಂಡು ಓಡಿಹೋಗಿ ತನ್ನ ಪ್ರಾಣವನ್ನು ಉಳಿಸಿಕೊಂಡು ಸಿಂಧ್ಯನ ರಾಜ್ಯದ ನರವರ ಎಂಬಲ್ಲಿಗೆ ಹೋಗಿ ಶ್ವಾಸ ವೆಳೆದುಕೊಂಡನು.

ಅಲ್ಲಿಂದ ಆತನು ಸಿಂಧ್ಯನಲ್ಲಿ ಸಹಾಯವನ್ನು ಬೇಡಿದನು. ಗವಾಲಿಯರಿನಿಂದ ಅಲ್ಪ ಸಹಾಯ ಒದಗಿತು. ಆದರೆ ರಾಣಿಯು ಸದಾಶಿವರಾಯನನ್ನು ನರವರದಲ್ಲಿಯೂ ಮುತ್ತಿಗೆ ಹಾಕಿ ಕೈದಿಯನ್ನಾಗಿ ಹಿಡಿದು ಝಾನ್ಸಿಯ ಕೋಟೆಗೆ ಕರೆತಂದು

ಅಲ್ಲಿ ಅವನನ್ನು ಸೆರೆಯಲ್ಲಿಟ್ಟಳು.

ಮುಂದರಿಯು ಬಾಯಿಸಾಹೇಬ್, ನೋಡಿದಿರಾ ನನ್ನ ಭವಿಷ್ಯವು ಹೇಗೆ ಅಕ್ಷರ ಅಕ್ಷರವೂ ನಿಜವಾಯಿತು ?" ಎಂದಳು.

ಕಾಶಿ "ನನ್ನ ಮಾತು ಕೂಡ ನಿಜವಾಯಿತು. ನಾನು ಹೇಳಲಿಲ್ಲವೇ ಬಾಯಿ ಸಾಹೇಬರು ಎಲ್ಲರಿಗಿಂತ ಮುನ್ನುಗ್ಗುವರೆಂದು" ಎಂದಳು.

ರಾಣಿಯು "ನನ್ನ ಇಬ್ಬರು ಕರ್ನಲ್‌ಗಳ ಮಾತೂ ನಿಜವಾಯಿತು." ಎಂದಳು.

ಸುಂದರಿಯು ತನ್ನ ಸುಂದರವಾದ ಕಣ್ಣುಗಳಿಂದ ತನ್ನ ಅತೃಪ್ತಿಯನ್ನು ಸೂಚಿಸಿದಳು.

ರಾಣಿಯು "ನೀನು ಖ್ಯಾತಿಗಳಿಸುವೆ ಸುಂದರಿ. ಈಗ ನಿನ್ನ ಸರದಿ" ಎಂದಳು.

## ೫೨

ಕಾನ್ಪುರದ ಸೇನೆಯ ಜನರಲ್ ವ್ಹೀಲರ್ ಸಾಹೇಬನು ಆಂಗ್ಲೇಯ ಸ್ತ್ರೀಯರನ್ನು ಮಕ್ಕಳುಮರಿಗಳೊಂದಿಗೆ ಕೋಟೆಯೊಳಗಡೆ ಕರೆದುಕೊಂಡು ಹೋದನು.

ನಾನಾಸಾಹೇಬನು ಸಂಜೆಯ ವೇಳೆಗೆ ಶರಣಾಗತರಾಗದಿದ್ದರೆ ಕೋಟೆಗೆ ಮುತ್ತಿಗೆ ಹಾಕಲಾಗುವುದೆಂದು ವ್ಹೀಲರನನ್ನು ಎಚ್ಚರಿಸಿದನು. ಆದರೆ ಆತನು ಅದನ್ನು ಗಣನೆಗೆ ತರಲಿಲ್ಲ. ವಿಪ್ಲವಕಾರರು ಕಿಲ್ಲೆಗೆ ಮುತ್ತಿಗೆ ಹಾಕಿ ಗುಂಡಿನ ಮಳೆಗರೆದರು. ವ್ಹೀಲರನು ಅತಿಶಯವಾಗಿ ಹೋರಾಡಿದನು. ಇಪ್ಪತ್ತೊಂದು ದಿನ ಯುದ್ಧವು ನಡೆಯಿತು.

ಅಲಹಾಬಾದಿನಲ್ಲಿಯೂ ವಿಪ್ಲವವು ಪ್ರಾರಂಭವಾಗಿದ್ದಿತು. ಬಂಗಾಳದಿಂದ ಜನರಲ್ ನೀಲನು ಸೈನ್ಯಸಮೇತನಾಗಿ ಬಂದನು. ಆತನು ಅತ್ಯಂತ ನಿರ್ದಯೆಯಿಂದ ದಾರಿಯಲ್ಲಿ ಸಿಕ್ಕಿದ ಹಳ್ಳಿಪಳ್ಳಿಗಳನ್ನು ಸುಟ್ಟು, ಅಪರಾಧಿಗಳನ್ನೂ ನಿರಪರಾಧಿ ಗ್ರಾಮಸ್ಥರನ್ನೂ ಹತಮಾಡಿದನು. ಭಯಪಟ್ಟು ಅಲಹಾಬಾದಿನಿಂದ ದೋಣಿಗಳ ಮೂಲಕ ಪಾರಾಗುತ್ತಿದ್ದ ಸ್ತ್ರೀಪುರುಷ ಬಾಲಕರನ್ನು ಆತನ ಸೈನಿಕರು ಗುಂಡಿನಿಂದ ಹೊಡೆದು ಬಹುಮಂದಿಯನ್ನು ಸಂಹರಿಸಿದರು. ಆತನು ಮಾಡಿದ ಅನ್ಯಾಯ, ಅತ್ಯಾಚಾರ, ನರಹಿಂಸೆಗಳಿಂದ ಎಲ್ಲೆಲ್ಲಿಯೂ ಕಳವಳ, ಭಯ ಮತ್ತು ಕ್ರೋಧಗಳು ಹರಡಿದವು. ಕಾನ್ಪುರದಲ್ಲಿಯೂ ಕೂಡ ನೀಲ್‌ಸಾಹೇಬ ಮತ್ತು ಅವನ ಸಹೋದ್ಯೋಗಿಗಳ ದುಷ್ಕೃತ್ಯದ ಸಮಾಚಾರವು ಮುಟ್ಟಿ ದಾವಾಗ್ನಿಯಂತೆ ಹರಡಿತು.

ಹಿಂದೂ ಮುಸಲ್ಮಾನ ಸ್ತ್ರೀಯರ ಹೃದಯವು ಬೆಂದಿತು. ಅಜೀಜನ್ ಎಂಬ ಹೆಸರಿನ ಒಬ್ಬ ವೇಶ್ಯೆಯು ಕುದುರೆಯ ಮೇಲೆ ಸವಾರಿ ಮಾಡುತ್ತಾ ಸೊಂಟದಲ್ಲಿ

ಕತ್ತಿಯನ್ನು ಧರಿಸಿ ಶಹರು ಮತ್ತು ಛಾವನಿಗಳಲ್ಲಿ ಸಂಚರಿಸುತ್ತಾ ಉತ್ತೇಜನ ಮತ್ತು ಪ್ರೋತ್ಸಾಹಗಳನ್ನು ನೀಡಲು ಪ್ರಾರಂಭಿಸಿದಳು.

ವ್ಹೀಲರನು ಲಕ್ನೋವಿನಿಂದ ಸಹಾಯವನ್ನು ಅಪೇಕ್ಷಿಸಿದನು. ಆದರೆ ಅದು ಸ್ವಯಂ ಮುತ್ತಿಗೆಗೆ ಒಳಗಾಗಿ ಯಾವ ಸಹಾಯತೆಯನ್ನೂ ನೀಡಲಾಗಲಿಲ್ಲ. ಯತ್ನ ವಿಲ್ಲದೇ ಜನರಲ್ ವ್ಹೀಲರನು ಸಂಧಿಗಾಗಿ ಕಿಲ್ಲೆಯ ಮೇಲೆ ಶ್ವೇತ ಧ್ವಜವನ್ನು ಏರಿಸಿದನು.

ಇಷ್ಟರಲ್ಲಿ ಅಲಹಾಬಾದಿನ ಆಜುಬಾಜಿನಿಂದ ನೀಲನ ಸೈನ್ಯದ ಭೀಕರ ಅತ್ಯಾಚಾರದ ವರ್ತಮಾನವು ಮುಟ್ಟಿತು. ಹಿಂದೂಸ್ಥಾನಿಯ ಸೇನೆಯ ಕ್ರೋಧವು ಮಿತಿಮೀರಿ ಉನ್ಮಾದಕ್ಕೆ ತಿರುಗಿತು.

ಮುತ್ತಿಗೆ ಹಾಕಲ್ಪಟ್ಟ ಕಾನ್‌ಪುರದ ಆಂಗ್ಲೇಯ ಸೈನ್ಯವು ಶರಣಾಗತವಾಯಿತು. ಅದನ್ನು ಅಲಹಾಬಾದಿಗೆ ರವಾನಿಸುವುದಕ್ಕಾಗಿ ನಲವತ್ತು ನಾವೆಗಳನ್ನು ಸಿದ್ಧಪಡಿಸಿದರು. ಆಗ ನಾನಾಸಾಹೇಬನು ಬಿಟ್ಠೂರಿನಲ್ಲಿ ತನ್ನ ಮಹಲ್ಲಿನಲ್ಲಿದ್ದನು. ಸಿಪಾಯಿಗಳು ಕ್ರೋಧದಿಂದ ಆಂಗ್ಲೇಯ ಪುರುಷರನ್ನು ಸದೆಬಡಿದರು. ಈ ಕ್ರೂರ ಕೃತ್ಯದ ನಂತರ ಸ್ತ್ರೀಯರನ್ನೂ ಬಾಲಕರನ್ನೂ ವಧೆಮಾಡಲು ಯತ್ನಿಸಿದರು. ಆದರೆ ಸಮಯಕ್ಕೆ ಸರಿಯಾಗಿ ನಾನಾಸಾಹೇಬನಿಗೆ ಈ ಸಮಾಚಾರವು ತಿಳಿದು ಅವನು ಅವರನ್ನು ರಕ್ಷಿಸಿದನು. ನಂತರ ಅವರುಗಳನ್ನು ನಾವೆಯಲ್ಲಿ ಅಲಹಾಬಾದಿಗೆ ತಲಪಿಸುತ್ತಿರುವಾಗ ನಾನಾಸಾಹೇಬನ ಆಜ್ಞೆಯಿಲ್ಲದೆ, ಅವನ ಅಪ್ಪಣೆಗೆ ವಿರುದ್ಧವಾಗಿ ವರ್ತಿಸಿ ಆ ಸ್ತ್ರೀ ಬಾಲಕರನ್ನು ಕೊಲೆಮಾಡಿ ತಾವೇ ಕಳಂಕವನ್ನು ತಂದುಕೊಂಡರು.

ಕಾನ್‌ಪುರದ ಆಂಗ್ಲೇಯರಲ್ಲಿ ಕೇವಲ ಒಬ್ಬ ಸ್ತ್ರೀ ಮತ್ತು ನಾಲ್ವರು ಪುರುಷರು ಮಾತ್ರ ಜೀವದಿಂದ ಪಾರಾದರು.

ಈ ಘಟನೆಯು ಆಂಗ್ಲೇಯ ಮತ್ತು ಹಿಂದೂಸ್ಥಾನೀಯರ ಪರಸ್ಪರ ವೈಷಮ್ಯವನ್ನು ಹೆಚ್ಚಿಸಿ ಹಿಂಸಾತ್ಮಕ ಕೃತ್ಯಗಳಿಗೆ ಎಡೆಗೊಟ್ಟಿತು.

ಲಕ್ನೋವಿನಲ್ಲಿ ವಿಪ್ಲವವು ಮೇ ೩೦ ನೇ ತಾರೀಖು ಪ್ರಾರಂಭಿಸಿದ್ದಿತು. ಔಧಿನಲ್ಲೆಲ್ಲಾ ವಿಪ್ಲವದ ಜ್ವಾಲೆಯು ಹರಡಿತು. ಆದರೂ ಎಷ್ಟೋ ಕಡೆಗಳಲ್ಲಿ ದಂಗೇಕೋರರೇ ಆಂಗ್ಲೇಯ ಸ್ತ್ರೀ ಬಾಲಕರನ್ನು ಪ್ರಾಣಾಪತ್ತಿನಿಂದ ರಕ್ಷಿಸಿದರು.

ಅಲಹಾಬಾದನ್ನು ವಶಪಡಿಸಿಕೊಂಡು ಜನರಲ್ ನೀಲನು ಲಕ್ನೋವಿನ ಕಡೆಗೆ ತಿರುಗಿದನು ಮತ್ತು ಜನರಲ್ ಹೆವ್ಲಾಕನು ಕಾನ್‌ಪುರದತ್ತ ಮುಂಬರಿದನು.

ಔಧಿನ ದಂಗೆಯನ್ನು ಅಡಗಿಸುವುದು ಕಷ್ಟ ಸಾಧ್ಯವಾಗಿ ತೋರುತ್ತಿದ್ದಿತು. ಪಂಜಾಬಿನಲ್ಲೂ ಛಾವನಿಗಳಲ್ಲಿ ಕ್ರಾಂತಿಗಳೆದ್ದವು. ಆದರೆ ಅವುಗಳನ್ನು ಅಡಗಿಸುವುದಕ್ಕೆ ಆಂಗ್ಲೇಯರು ಹೆಚ್ಚು ಶ್ರಮ ಪಡಬೇಕಾಗಲಿಲ್ಲ.

ಝಾನ್ಸಿಯಲ್ಲಿ ಕ್ರಾಂತಿಯು ಆರಂಭವಾಗಿರುವ ಸಮಾಚಾರವು ಸಾಗರ, ಬುಂದೇಲು ಖಂಡಗಳನ್ನು ಮುಟ್ಟಿದುವು. ಗಾರ್ಡನ್ನನ ಪರ ಶಾಸನಾಧಿಕಾರಿಗಳು ಆಂಗ್ಲೇಯರ ಪರವಾಗಿ ರಾಣಿಯು ಮೂಲಕ ಝಾನ್ಸಿಯ ರಾಜಕೀಯವು ಇತ್ಯರ್ಥವಾಗುವ ಸಂದೇಶವುಳ್ಳ ಪತ್ರವನ್ನು ಸಾಗರಕ್ಕೆ ಕಳುಹಿಸಿದರು. ಝಾನ್ಸಿಯ ಆಂಗ್ಲೇಯ ಸ್ತ್ರೀ ಪುರುಷಬಾಲಕರ ಕಡುಗೊಲೆಯಲ್ಲಿ ರಾಣಿಯ ಪಾತ್ರವು ಏನೂ ಇಲ್ಲವೆಂದು ಆ ಪತ್ರದಲ್ಲಿ ಖಚಿತವಾಗಿ ತಿಳಿಯಪಡಿಸಿದ್ದಿತು. ಈ ಕಾಗದವು ತಲಪಿದನಂತರ ಸಾಗರದ ಆಂಗ್ಲೇಯರಿಗೆ ಸ್ವಲ್ಪ ಸಮಾಧಾನವಾಯಿತು. ಆದರೆ ಅವರು ವಿಪ್ಲವವನ್ನು ಅಲ್ಪ ಕಾಲದವರೆಗೆ ಮಾತ್ರ ತಡೆಗಟ್ಟಲು ಸಾಧ್ಯವಾಯಿತು. ಸಾಗರದ ಒಂದು ಹಿಂದೂಸ್ಥಾನಿ ಪಡೆಯು ಕ್ರಾಂತಿಯಲ್ಲಿ ಸೇರಿಹೋಯಿತು. ಉಳಿದ ಇನ್ನೊಂದು ಪಡೆಯು ಸರ್ಕಾರದ ಅವಿಚ್ಛಿನ್ನ ಭಕ್ತನಾಗಿದ್ದಿತು.

## ೫೨

ವಿಂಧ್ಯಖಂಡದ ಸಮಗ್ರ ಜನತೆಯಲ್ಲಿಯೂ ಕೋಲಾಹಲವೇರ್ಪಟ್ಟಿದ್ದಿತು. ಇಲ್ಲಿಯವರು ಯಾವ ಅತ್ಯಾಚಾರಿಯನ್ನೂ ಸುಲಭದಲ್ಲಿ, ತಕ್ಕಶಾಸ್ತಿ ಇಲ್ಲದೆ ಬಿಡುತ್ತಿರಲಿಲ್ಲ. ಸ್ವಾಭಿಮಾನವು ಕೆರಳಿ ಶಿರವೆತ್ತಿ ಕೈಯಲ್ಲಿ ಕತ್ತಿಯನ್ನು ಝಳಪಿಸಿದರು. ಬಹುಶಃ ಭಾರತದ ಈ ಒಂದೇ ಭಾಗದಲ್ಲಿ ದರೋಡೆಗಾರರನ್ನು "ಕ್ರಾಂತಿಕಾರರೆಂದು" ಕರೆಯುವರು.

ವಿಂಧ್ಯಖಂಡವನ್ನು ಚಿಕ್ಕ ದೊಡ್ಡ ರಿಯಾಸತಿಗಳಾಗಿ ವಿಭಾಗಿಸಿದ್ದರು. ಎಲ್ಲಾ ದೊಡ್ಡ ದೊಡ್ಡ ರಿಯಾಸತಿಗಳೂ ಕಂಪೆನಿ ಸರ್ಕಾರದೊಂದಿಗೆ ಸೇರಿಹೋಗಿದ್ದವು. ಭಾನ್ಪುರ ಮತ್ತು ಶಾಹಘಡಗಳು ಸಾಧಾರಣ ರಾಜ್ಯಗಳಾಗಿದ್ದು ವಿಪ್ಲವಕಾರರ ಪಕ್ಷವನ್ನವಲಂಬಿಸಿದುವು.

ರಾಣಿಗೆ ಈ ಎರಡು ರಾಜ್ಯಗಳ ಪ್ರಜೆಗಳು ಸ್ವಾತಂತ್ರ್ಯ ಪ್ರಿಯರೆಂದು ಚೆನ್ನಾಗಿ ವೇದ್ಯವಾಗಿದ್ದಿತು. ಸ್ವರಾಜ್ಯ ಸ್ಥಾಪನೆಗಾಗಿ ನಡೆಯುವ ಸಂಗ್ರಾಮಗಳಲ್ಲಿ ಭಾಗವಹಿಸಬೇಕೆಂದು ರಾಣಿಯು ಆ ರಾಜ್ಯಗಳಿಗೆ ಪತ್ರಗಳನ್ನು ಬರೆದು ಕಳುಹಿಸಿದಳು. ಅದಕ್ಕನುಸಾರವಾಗಿ ಆ ರಾಜ್ಯಗಳೆರಡೂ ಸಮರದಲ್ಲಿ ಭಾಗವಹಿಸಲು ಟೊಂಕ ಕಟ್ಟಿ ನಿಂತುವು.

ಭಾನ್ಪುರದ ರಾಜ ಮರ್ದನಸಿಂಹನು ತನ್ನ ಸೇನೆಯೊಂದಿಗೆ ಸಾಗರಜಿಲ್ಲೆಯನ್ನು ಪ್ರವೇಶಿಸಿ ಖುರಯಿ, ತಹಸೀಲು ಮತ್ತು ನರಯಾವಲಿಯ ಪರಗಣಗಳಲ್ಲಿ ತನ್ನ ಅಧಿಕಾರ ಚಲಾಯಿಸಿದನು. ನಂತರ ಝಾನ್ಸಿಯ ದಕ್ಷಿಣದಲ್ಲಿರುವ ಲಲಿತಪುರಕ್ಕೆ ಬಂದು

ಚಂದೇರಿಯ ಕಡೆ ಮುಂಬರಿದನು. ಚಂದೇರಿಯು ಆಂಗ್ಲೇಯರ ಕೈಯ್ಯಲ್ಲಿದ್ದು ಅಲ್ಲಿ ಕ್ರಾಂತಿಯೇನೂ ನಡೆದಿರಲಿಲ್ಲ.

ಅಲ್ಲಿಯ ಶಾಸನಾಧಿಕಾರಿಗೆ, ಪರಗಣಗಳೆಡೆಗೆ ಮರ್ದನಸಿಂಹನು ಮುಂದು ವರಿದು ಬರುತ್ತಿರುವ ಸುದ್ಧಿಯನ್ನು ಚಂದೇರಿಯ ನಿವಾಸಿಯೊಬ್ಬನು ತಿಳಿಸಿದನು. ಅವನು ಪರಂಗಿಯವರ ಪಕ್ಷಪಾತಿಯಾಗಿದ್ದನು.

ಆತನು "ಸಾಹೇಬರೇ, ಕ್ರಾಂತಿಯು ಪ್ರಾರಂಭಿಸಿದೆ. ಪ್ರಶಸ್ತ ಸೇನೆಯೊಂದು ಬರುತ್ತಿದೆ" ಎಂದನು.

ಸಾಹೇಬನು ಉಪೇಕ್ಷೆಯಿಂದ "ಅರ್ಜಿಬರೆಸಿಕೊಂಡು ಬಾ. ಸುಮ್ಮನೆ ಬಾಯಿ ಯಲ್ಲಿ ಹೇಳಿದರೆ ಕೇಳಲಾಗುವುದಿಲ್ಲ." ಎಂದನು.

ಸ್ವಲ್ಪ ಹೊತ್ತಿನಲ್ಲಿಯೇ ರಾಜಾಮರ್ದನಸಿಂಹನು ಬಂದು ಯಾವ ಅರ್ಜಿ ಪರ್ಜಿಗಳಿಗೂ ಕಾಯದೇ ಚಂದೇರಿಗೆ ಮುತ್ತಿಗೆ ಹಾಕಿ ಅಲ್ಲಿನ ಆಂಗ್ಲೇಯರ ಪ್ರಭುತ್ವ ವನ್ನು ಸಮಾಪ್ತಗೊಳಿಸಿದನು.

ಶಹಗಡದ ಭಕ್ತಬಲಿ ಎಂಬ ರಾಜನೂ ಕ್ರಾಂತಿಯಲ್ಲಿ ಸೇರಿದನು.

ಸಾಗರ, ದಮೋಹ, ಜಬ್ಬಲ್‌ಪುರಗಳಲ್ಲಿ ವಿದ್ರೋಹಿಗಳ ಸಂಖ್ಯೆಯು ಬಹಳ ವಾಗಿ ಹೆಚ್ಚಿಹೋಯಿತು. ದಮೋಹ ಜಿಲ್ಲೆಯ ಎಲ್ಲಾ ಪ್ರಜೆಗಳೂ ಕ್ರಾಂತಿಯಲ್ಲಿ ಸೇರಿಹೋದರು. ಇವರೆಲ್ಲರೂ ಶಹಗಡದ ರಾಜನೊಂದಿಗಿದ್ದರು. ಅವರೊಂದಿಗೆ ಹೋರಾಡಲು ಸೈನ್ಯವು ಬಂದಿತು. ಆದರೆ ಭಕ್ತಬಲಿಯು ಅದನ್ನು ಸುಲಭವಾಗಿ ಸೋಲಿಸಿದನು. ಇವನ ಸರದಾರ ಬೋಧನ್ ದೌವ್ವಾ ಎಂಬಾತನು ಗಡಕೋಟಾ ಎಂಬ ಸ್ಥಳದ ಮೇಲೆ ದಂಡೆತ್ತಿಹೋಗಿ ಅಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿದನು. ರಾಜಾಮರ್ದನ್‌ಸಿಂಹನು ಚಂದರೇಯಲ್ಲಿ ಅಧಿಕಾರವನ್ನು ಸ್ಥಾಪನೆಮಾಡಿದನಂತರ ಸಾಗರಕ್ಕೆ ಮರಳಿದನು. ಅದೇ ಸಮಯದಲ್ಲಿ ಜಬ್ಬಲ್‌ಪುರದ ಹಿಂದೂಸ್ಥಾನಿ ಸೈನ್ಯವು ದಂಗೆಯೆದ್ದಿತು. ಆಂಗ್ಲೇಯರು ಕುನ್ನಾರಾಜ್ಯದಿಂದ ಸಹಾಯ ಬೇಡಿದರು. ಆ ರಾಜನಾದರೋ ಆಂಗ್ಲೇಯರ ಸಹಾಯಕ್ಕಾಗಿ ಹೇರಳವಾದ ಸೈನ್ಯವನ್ನು ಕಳುಹಿಸಿ ದನು. ಪನ್ನಾವಿನ ಸೈನ್ಯವು ಕ್ರಾಂತಿಕಾರರನ್ನು ದಾಮೋಹ ಜಿಲ್ಲೆಯಲ್ಲಿ ಪರಾಜಿತ ರನ್ನಾಗಿಮಾಡಿ ಆಂಗ್ಲೇಯರ ಪರವಾಗಿ ಅಲ್ಲಿ ಶಾಸನಾಧಿಕಾರವನ್ನು ಸ್ಥಾಪಿಸಿತು. ಇದೇ ಸೇನೆಯು ಜಬ್ಬಲ್‌ಪುರದ ಕ್ರಾಂತಿಕಾರರೊಂದಿಗೂ ಯುದ್ಧಮಾಡಿ ಅವರನ್ನೂ ಸೋಲಿಸಿತು.

ಈ ಪ್ರಕಾರವಾದ ಪರಿಸ್ಥಿತಿಯು ಝಾನ್ಸಿಯ ಅಕ್ಕಪಕ್ಕದಲ್ಲಿ ನಾಲ್ಕುಕಡೆಗಳ ಲ್ಲಿಯೂ ಇದ್ದಿತು. ಈ ಪರಿಸ್ಥಿತಿಯಲ್ಲಿ ರಾಣಿ ಲಕ್ಷ್ಮೀಬಾಯಿಯು ಒಂದು ಸ್ವಚ್ಛ ಸ್ಫಟಿಕದ ಶಿಲೆಯಂತಿದ್ದು ಝಾನ್ಸಿ ಜಿಲ್ಲೆಯಲ್ಲಿ ಅತ್ಯಂತ ಪ್ರಬಲತೆಯಿಂದ ಶಾಂತಿ

ಸ್ಥಾಪನೆಮಾಡಿದಳು.

ಅವಳ ದಿನಚರಿಯು ಒಂದೇ ರೀತಿಯ ನಿಯಮ ಸಂಯಮಗಳೊಂದಿಗೆ ಸಾಗುತ್ತಿದ್ದಿತು. ಅವಳ ಕಾರ್ಯಕ್ರಮದಲ್ಲಿ ಕೇವಲ ಎರಡು ವ್ಯತ್ಯಾಸಗಳುಂಟಾದವು—ಬೆಳಗ್ಗಿನ ನಿತ್ಯಕರ್ಮ, ಪೂಜೆ, ಧ್ಯಾನಗಳಾದನಂತರ ರಾಜ್ಯದ ಅಧಿಕಾರಿಗಳನ್ನು ಸಂದರ್ಶಿಸಿ ಅವರ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದಳು. ಮತ್ತು ಮಧ್ಯಾಹ್ನ ಮೂರು ಘಂಟೆಯ ನಂತರ ಕಛೇರಿಯಲ್ಲಿ ಕುಳಿತು ಕೆಲಸಮಾಡುತ್ತಿದ್ದಳು. ಗುರುತರವಾದ ಮೊಕದ್ದಮೆಗಳನ್ನು ಸ್ವತಃ ಕೇಳಿ ಒಡನೆಯೇ ತೀರ್ಪನ್ನು ಕೊಡುತ್ತಿದ್ದಳು. ಆಗಾಗಲೆ ದಂಡನೆಗಳನ್ನು ಸ್ವತಃ ವಿಧಿಸುತ್ತಿದ್ದಳು. ಆದರೆ ಅದು ಕೇವಲ ಬಾಲಕರನ್ನೋ ಅಥವಾ ಸ್ತ್ರೀಯರನ್ನೋ ಹಿಂಸಿಸಿದ ಮೊಮಲೆಗಳಾಗಿರುತ್ತಿದ್ದವು.

ಆಕೆಯು ತನ್ನ ಕಛೇರಿಯಲ್ಲಿ ಕೆಲಸಮಾಡುವಾಗ ತಲೆಗೆ ಕಬ್ಬಿಣದಿಂದ ಮಾಡಿ ಮೇಲೆ ಕೆಂಪು ರೇಷ್ಮೆಯ ವಸ್ತ್ರವನ್ನು ಸುತ್ತಿದಂತಹ ಟೋಪಿಯನ್ನು ಧರಿಸುತ್ತಿದ್ದಳು; ಅದರ ಮೇಲೆ ಮುತ್ತು ಮಾಣಿಕ್ಯಗಳ ಝಾಲ. ಕಂಠದಲ್ಲಿ ವಜ್ರದಮಾಲೆ ಶೋಭಿಸುತ್ತಿದ್ದಿತು. ಭವ್ಯವಾದ ವಕ್ಷಸ್ಥಳದಲ್ಲಿ ಜರತಾರಿಯ ಕಂಚುಕ, ಸೊಂಟಕ್ಕೆ ಕಮರಬಂದು. ಕೆಲವು ವೇಳೆ ಸೀರೆಯನ್ನು ಮತ್ತೆ ಕೆಲವು ವೇಳೆ ಸಡಿಲವಾದ ಪಾಯಿಜಾಮೆಯನ್ನು ಧರಿಸುತ್ತಿದ್ದಳು.

ರಾಣಿಯ ಸಮೀಪದಲ್ಲೆ ದಿವಾಣ ಲಕ್ಷ್ಮಣರಾಯನು ಕಾಗದಪತ್ರ ಬರವಣಿಗೆಯ ಸಾಮಗ್ರಿ ಇವುಗಳೊಂದಿಗೆ ಕುಳಿತುಕೊಳ್ಳುತ್ತಿದ್ದನು.

ಆತನು ಹೆಚ್ಚಾಗಿ ಓದು ಬರಹವನ್ನು ಅರಿಯದಿದ್ದರೂ ತನ್ನ ನಿರಕ್ಷರತೆಯನ್ನು ಚಮತ್ಕಾರದಿಂದ ತೋರ್ಪಡಿಸಿಕೊಳ್ಳುತ್ತಿರಲಿಲ್ಲ. ಕೆಲವು ವೇಳೆ ರಾಣಿಯೇ ಸ್ವಹಸ್ತದಿಂದ ತೀರ್ಪನ್ನು ಬರೆಯುವಂತೆ ನಟಿಸಿ ಕೆಳಗೆ ಕುಳಿತಿರುವ ಮುತ್ಸದ್ದಿಗಳ ಮೂಲಕ ಬರೆಸಿ ಚಟಪಟನೆ ಮುದ್ರೆಯನ್ನು ಒತ್ತಿಬಿಡುತ್ತಿದ್ದನು. ನಿತ್ಯದ ಹಾಜರಿಯು ರಾಣಿಗೆ ಚೆನ್ನಾಗಿ ನೆನಪಿರುತ್ತಿದ್ದಿತು. ದಿನವೂ ಬರುವವರು ಒಂದು ದಿನ ತಪ್ಪಿಸಿಕೊಂಡರೂ ಅವರು ಬಂದೊಡನೆಯೇ ಗೈರುಹಾಜರಿಗೆ ಕಾರಣವನ್ನು ಕೇಳುತ್ತಿದ್ದಳು. ಅಲ್ಲದೆ ಸಮಯ ನಿಷ್ಠೆಗೆ ಬಹಳ ಪ್ರಾಮುಖ್ಯತೆ ಕೊಟ್ಟಿದ್ದಳು.

ಮಳೆಗಾಲವು ಸ್ವಲ್ಪ ನಿಧಾನವಾಗಿ ಪ್ರಾರಂಭಿಸಿದರೂ ಒಳ್ಳೆಯ ಪ್ರಚಂಡತೆಯಿಂದ ಮಳೆಗಾಳಿಗಳು ಶುರುವಾದವು. ಆದರೆ ರಾಣಿಯ ಕಾರ್ಯಕ್ರಮಕ್ಕೇನೂ ಅಡ್ಡಿಯಾಗಲಿಲ್ಲ. ಕುದುರೆ ಸವಾರಿಯಲ್ಲಂತೂ ಪರವಶಳಾಗುತ್ತಿದ್ದಳು. ಈ ಋತುವಿನಲ್ಲಿ ಸಾಧಾರಣವಾಗಿ ಢಕಾಯಿತಿ, ದರೋಡೆಗಳು ಸಂಪೂರ್ಣವಾಗಿ ನಿಂತು ಹೋಗುತ್ತಿದ್ದುವು. ಆದರೆ ಈ ಬಾರಿ ಬರವಾಸಾಗರದ ಕುಮಾರಸಾಗರಸಿಂಹನೆಂಬ ಢಕಾಯಿತನು ಅನೇಕ ದರೋಡೆಗಳನ್ನು ಮಾಡಿದ್ದಾನೆಂದೂ ಮತ್ತು ಬರವಾಸಾಗರದ ಠಾಣೇ

ದಾರನು ಅವನನ್ನು ಅಡಗಿಸಲು ಸಾಧ್ಯವಾಗಲಿಲ್ಲವೆಂದೂ ರಾಣಿಗೆ ಸುದ್ದಿಯು ಮುಟ್ಟಿತು.

ರಾಣಿಯು ಒಡನೆಯೆ ಒಂದು ನಿಶ್ಚಯಕ್ಕೆ ಬಂದು ಮೋತೀಬಾಯಿಯ ಮೂಲಕ ಖುದಾಬಕ್ಷನಿಗೆ ಹೇಳಿಕಳುಹಿಸಿದಳು.

ಆತನು ಬರುತ್ತಲೇ "ಸಾಗರಸಿಂಹನನ್ನು ಜಾಗ್ರತೆಯಾಗಿ ಅಡಗಿಸಬೇಕು' ಎಂದು ಹೇಳಿದಳು.

ಆತನು ಕೈಮುಗಿದು ಅಪ್ಪಣೆಯನ್ನು ಶಿರಸಾವಹಿಸಿದನು.

ರಾಣಿ—ನೀನು ಈಗಲೆ ೨೫ ಮಂದಿ ಶಿಪಾಯಿಗಳೊಡನೆ ಬರವಾಸಾಗರಕ್ಕೆ ಹೋಗಿ ಸಾಗರಸಿಂಹನನ್ನು ಜೀವಂತನಾಗಿಯೋ ಅಥವಾ ಮೃತನನ್ನಾಗಿಯೋ ಹಿಡಿದುಕೊಂಡು ಬಾ. ಆತನ ಅತ್ಯಾಚಾರದಿಂದ ಬರವಾಸಾಗರ ಮತ್ತು ಅದರ ಸುತ್ತುಮುತ್ತಿನ ಪ್ರದೇಶಗಳ ಜನರು ತ್ರಸ್ತರೂ ಸಂತಪ್ತರೂ ಆಗಿರುವರು. ಈ ಕೆಲಸವನ್ನು ನೀನೆಷ್ಟು ದಿನಗಳಲ್ಲಿ ಪೂರೈಸಬಲ್ಲೆ ? ಒಂದು ತಿಂಗಳಾಗಬಹುದೆ ?

ಖುದಾ—ಶ್ರೀಮಂತ್ ಸರ್ಕಾರ್, ಎಷ್ಟು ಜಾಗ್ರತೆ ಆಗುವುದೋ ಅಷ್ಟುಬೇಗನೆ ಸಾಧಿಸುವೆನು. ಆದರೆ ಮಳೆಗಾಲವಾದುದರಿಂದ ಸ್ವಲ್ಪ ತೊಂದರೆಯುಂಟಾಗಬಹುದು.

ರಾಣಿ—ಆದರೆ ವರ್ಷಾಕಾಲವು ಸಾಗರಸಿಂಹನಿಗೇನೂ ವಿಘ್ನಗಳನ್ನು ಒಡ್ಡುತ್ತಿರುವಂತೆ ಕಾಣುವುದಿಲ್ಲ.

ಖುದಾ—"ಸರ್ಕಾರ್........"

ರಾಣಿ—ಹೇಳು, ಹೇಳು.

ಖುದಾ—ಸರ್ಕಾರ್, ಈ ಜನರು ಗ್ರಾಮಸ್ಥರೊಂದಿಗೆ ಸೇರಿಕೊಂಡು ವರ್ತಕರನ್ನೂ ಮತ್ತು ಐಶ್ವರ್ಯವಂತರನ್ನೂ ಲೂಟಿಮಾಡಿ ದಟ್ಟವಾದ ಅರಣ್ಯಗಳಲ್ಲಿ ಓಡಿಹೋಗಿ ಅಡಗಿಕೊಳ್ಳುತ್ತಾರೆ.

ರಾಣಿ—ಇಷ್ಟು ಮಳೆ ಬೀಳುತ್ತಿರುವಾಗ ಗೊಂಡಾರಣ್ಯದಲ್ಲಿ ತಂಗಲು, ಉಣ್ಣಲು ಇವರಿಗೆಲ್ಲಿ ಸಾಧ್ಯ? ನೀನು ಅವರನ್ನು ಅರಣ್ಯದಲ್ಲಿ ಹುಡುಕಿದರೆ ಪ್ರಯೋಜನವಿಲ್ಲ. ಅವರು ತಂಗುವಸ್ಥಳಗಳನ್ನು ಹುಡುಕಬೇಕು. ಇನ್ನೂ ಹೆಚ್ಚು ಸಹಾಯ ಬೇಕಾದರೆ ಕರೆದುಕೊಂಡು ಹೋಗು.

ಖುದಾ—ಸರ್ಕಾರ್, ಏನೂ ಅವಶ್ಯಕವಿಲ್ಲ; ಇದೇ ಸಾಕು. ಏನಾದರೂ ತೊಂದರೆಯುಂಟಾದರೆ ಸಮಾಚಾರವನ್ನು ತಿಳಿಯಪಡಿಸುವೆನು. ಖುದಾಬಕ್ಷನು ಅಲ್ಲಿಂದ ಹೊರಟು ಹೋದನು.

ರಾಣಿಯು ಏಕಾಂತದಲ್ಲಿ ತನ್ನ ಸಖಿಯರೊಂದಿಗೆ ಪ್ರಸ್ತಾಪಮಾಡಲಾರಂಭಿಸಿದಳು.

"ಬಹು ಬಿರುಸಾದ ಮಳೆಗಾಳಿಗಳಲ್ಲಿ ಕುದುರೆಯನ್ನು ದೌಡಾಯಿಸಬಲ್ಲಿರಾ ?"

ಎಂದು ರಾಣಿಯು ಕೇಳಿದಳು.

"ಓಹೋ ದೌಡಾಯಿಸುವೆನು. ಅದನ್ನೂ ಅಭ್ಯಾಸಮಾಡಿಕೊಂಡಿದ್ದೇನೆ" ಎಂದು ಸುಂದರಿ ಉತ್ತರವಿತ್ತಳು.

"ಮುಂದರಿ, ಕಾಶೀ, ನೀವು ?"

ಅವರೂ ಅಭ್ಯಾಸ ಉಂಟೆಂದು ಸೂಚಿಸಿದರು. ಆದರೆ ಕಾಶಿಯ ಉತ್ತರವು ಅನುಮಾನಾಸ್ಪದವಾಗಿದ್ದಿತು.

ರಾಣಿಯು ನಸುನಗುತ್ತಾ "ಕಾಶಿಯು ಅಸ್ವಸ್ಥಳಾಗಿರುವಳೆಂದು ತೋರುತ್ತದೆ. ಆದುದರಿಂದ ಅವಳು ಮಹಲ್ಲಿನಲ್ಲಿಯೇ ಇದ್ದು ಅಲ್ಲಿನ ಕೆಲಸಕಾರ್ಯಗಳನ್ನು ನೋಡಿಕೊಳ್ಳಲಿ. ನಾನು ಝಾನ್ಸಿಯಿಂದ ಹೊರಗೆ ಹೋಗಿರುವೆನೆಂಬ ಸುದ್ದಿಯು ಯಾರಿಗೂ ತಿಳಿಯದಿರಲಿ. ಖುದಾಬಕ್ಷನು ಬರವಾಸಾಗರವನ್ನು ಸೇರಿದನಂತರ ನಾವಿಲ್ಲಿಂದ ಹೊರಡಬೇಕು" ಎಂದಳು.

ಖುದಾಬಕ್ಷನು ಅದೇ ದಿನ ಬರವಾಸಾಗರಕ್ಕೆ ಹೊರಟುಹೋದನು. ಸಾಯಂಕಾಲದ ವೇಳೆಗೆ ನೆನೆದು ಹಸಿದು ಬರವಾಸಾಗರವನ್ನು ಸೇರಿದನು. ಆದರೆ ಆತನಿಗೆ ಪುನಃಶಾಂತಿಯೇನೂ ಇರಲಿಲ್ಲ.

ಸ್ವಲ್ಪ ಸುಧಾರಿಸಿಕೊಂಡು ಭೋಜನಮಾಡಿದನು. ನಂತರ ಅಲ್ಲಿನ ಠಾಣೇದಾರನಿಂದ ಸಾಗರಸಿಂಹನ ಚಲನವಲನಗಳನ್ನು ಕೇಳಿ ತಿಳಿದುಕೊಂಡನು. ಖುದಾಬಕ್ಷನು ಝಾನ್ಸಿಯಿಂದ ಬರುವಾಗ ಬರವಾಸಾಗರದ ಠಾಣೇದಾರನು ಕಿಂಕರ್ತವ್ಯತಾಮೂಢನಾಗಿರುವನೆಂದು ಭಾವಿಸಿದ್ದನು. ಆದರೆ ಅಲ್ಲಿಗೆ ಬಂದನಂತರ ಆ ಭ್ರಮೆಯು ನಿರ್ಮೂಲವಾಯಿತು. ಸಾಗರಸಿಂಹನು ಅತ್ಯಂತ ಬುದ್ಧಿವಂತನಾದ ಸಾಹಸಿಯಾಗಿದ್ದನು. ಅವನೊಂದಿಗೆ ಉಪದ್ರವಿಗಳ ದೊಡ್ಡದಳವೇ ಇದ್ದಿತು. ಬರವಾಸಾಗರದ ಪೋಲೀಸು ಸಿಬ್ಬಂದಿಗಳು ಎಷ್ಟು ಪ್ರಯಾಸಪಟ್ಟರೂ ಆತನ ಚಟುವಟಿಕೆಗಳಿಗೆ ಯಾವ ಭಂಗವನ್ನೂ ತರಲಾಗಲಿಲ್ಲ.

ಸಾಗರಸಿಂಹನ ಮನೆಯು ಬರವಾಸಾಗರದಿಂದ ಸುಮಾರು ೫೦ ಮೈಲಿಗಳಷ್ಟು ದೂರದಲ್ಲಿ ರಾವಲಿ ಎಂಬ ಗ್ರಾಮದಲ್ಲಿದ್ದಿತು. ಆದರೆ ಆತನು ಸಾಧಾರಣವಾಗಿ ಮನೆಯಲ್ಲೇ ಇರುತ್ತಿರಲಿಲ್ಲ.

ಖುದಾಬಕ್ಷನಿಗೆ ಬರವಾಸಾಗರಕ್ಕೆ ಬಂದನಂತರ ತನ್ನ ಕಾರ್ಯದ ಕಠಿಣತೆಯು ಮನವರಿಕೆಯಾಯಿತು. ಹೆಚ್ಚು ಸಿಪಾಯಿಗಳನ್ನು ಬರಮಾಡಿಕೊಂಡ ತನಗೆ ಅಪಮಾನವಾಗುವುದೆಂಬ ಅಂಜಿಕೆಯಿದ್ದಿತು. ಕಾಲಾವಕಾಶವಾದರೋ ಕೇವಲ ಒಂದೇ ದಿನಗಳು ಮಾತ್ರವಿದ್ದಿತು. ಮೋತೀಬಾಯಿಯ ನೆನಪು ಬಂದಿತು. ಬಹುಶಃ ಅವಳು ತನ್ನ ಯಕ್ಷಿಣಿಯಿಂದ ಏನಾದರೂ ಬಗೆಹರಿಸಬಲ್ಲಳೆಂದು ಯೋಚಿಸಿದ ಒಡನೆಯೇ

ಅವನ ಮನಸ್ಸು ಆ ಕಲ್ಪನೆಯನ್ನು ಧಿಕ್ಕರಿಸಿತು.

ಮರುದಿನ ಮೋಡವು ಹೆಚ್ಚಾಗಿರಲಿಲ್ಲ. ಆಗಿಂದಾಗ್ಗೆ ಮೋಡವು ಮುಸುಕುತ್ತಿದ್ದಿತು. ಒಂದೆರಡು ಹನಿಗಳನ್ನುದುರಿಸಿ ಪುನಃ ಚದುರಿ ಹೋಗುತ್ತಿದ್ದಿತು. ನದಿ ನಾಲೆಗಳು ತುಂಬಿ ವೇಗದಿಂದ ಉಕ್ಕಿ ಹರಿಯುತ್ತಿದ್ದವು. ಖುದಾಬಕ್ಷನು ಬರವಾ ಸಾಗರದ ಠಾಣೇದಾರ, ಆತನ ಸಿಪಾಯಿಗಳು ಮತ್ತು ತನ್ನೊಡನೆ ಬಂದಿದ್ದ ಸಿಪಾಯಿಗಳೆಲ್ಲರನ್ನು ಕರೆದುಕೊಂಡು ರಾವಲಿಯ ಕಡೆಗೆ ಪ್ರವಾಸ ಮಾಡಿದನು. ಮಳೆಯಲ್ಲಿ ತೊಯ್ದು ಒದ್ದೆಯಾಗಿ, ಕೆಸರಿನಿಂದ ಆವೃತರಾಗಿ, ಬಂದೂಕಗಳನ್ನು ಬಟ್ಟೆಯಲ್ಲಿ ಮುಚ್ಚಿಕೊಂಡು ಜೇಬಿನಲ್ಲಿ ಹುರಿಗಡಲೆ, ಈರುಳ್ಳಿ ಇವುಗಳನ್ನು ತುಂಬಿಕೊಂಡು ಮಧ್ಯಾಹ್ನದ ವೇಳೆಗೆ ರಾವಲಿಯ ನದಿಯನ್ನು ಸೇರಿದರು. ಹೊಲಗಳಲ್ಲಿ ಏನೂ ಕೆಲಸವು ನಡೆಯುತ್ತಿರಲಿಲ್ಲ. ಆದುದರಿಂದ ಮಾರ್ಗದಲ್ಲಿ ಯಾರೂ ಕಾಣಿಸಲಿಲ್ಲ. ಎಲ್ಲರೂ ಹಳ್ಳಿಯಲ್ಲೇ ಇದ್ದು ಮಳೆ ನಿಲ್ಲುವುದಕ್ಕಾಗಿ ಕಾಯುತ್ತಿದ್ದರು. ಸಾಗರ ಸಿಂಹನೂ ಮನೆಯಲ್ಲೇ ಇದ್ದನು.

ಸಾಗರಸಿಂಹನ ಮನೆಯು ಎತ್ತರವಾದ ದಿಣ್ಣೆಯ ಮೇಲಿದ್ದಿತು. ಆತನು ಊಟವಾದನಂತರ ತೂಕಡಿಸುತ್ತಿದ್ದನು. ಹೊರಗೆ ಪ್ರಚಂಡ ಮಾರುತವು ಬೀಸುತ್ತಿದ್ದಿತು. ಮಧ್ಯೆ ಮಧ್ಯೆ ತುಂತುರು ಮಳೆ ಬರುತ್ತಿದ್ದಿತು. ಆದುದರಿಂದ ಖುದಾಬಕ್ಷನ ಪಡೆಯವರು ಬಂದ ಶಬ್ದವು ಕೇಳಿಸಲಿಲ್ಲ. ಹಳ್ಳಿಯವರು ಸಾಗರಸಿಂಹನಿಗೆ ಎಚ್ಚರಿಕೆ ಕೊಡುವುದರೊಳಗಾಗಿ ಖುದಾಬಕ್ಷನು ಸಾಗರಸಿಂಹನ ಮನೆಗೆ ಮುತ್ತಿಗೆ ಹಾಕಿದನು. ಸಾಗರಸಿಂಹನಿಗೆ ಕೇವಲ ಮನೆಯ ಬಾಗಿಲನ್ನು ಮುಚ್ಚುವಷ್ಟು ಅವಕಾಶ ಮಾತ್ರ ದೊರೆಯಿತು. ಮನೆಯಲ್ಲಿ ಅವನೊಡನಿದ್ದ ಸಹಚರರು ಜಾಗ್ರತೆಯಾಗಿ ಪೋಲಿಸರವರನ್ನು ಎದುರಿಸಲು ಸಿದ್ಧರಾದರು. ಸಾಗರಸಿಂಹನಿಗೆ ಇಂತಹ ಮಳೆಗಾಲದಲ್ಲಿ ಈ ಅವೇಳೆಯಲ್ಲಿ ಯಾರು ತನ್ನ ಮನೆಗೆ ಮುತ್ತಿಗೆ ಹಾಕುವ ಧೈರ್ಯ ಮಾಡಿದರು ಎಂದು ಆಶ್ಚರ್ಯವುಂಟಾಯಿತು. ಗೋಡೆಯ ಸಂದಿನಿಂದಲೆ ಹೊರಗಿರುವವರ ಬಳಿ ತೋಪುಗಳಿಲ್ಲ; ಆದುದರಿಂದ ಅವರು ಕೇವಲ ಮನೆಯೊಳಗ್ಗೆ ನುಗ್ಗಿ ತನಗೆ ನಷ್ಟವುಂಟುಮಾಡಬಲ್ಲರು ಎಂದು ಅರಿತುಕೊಂಡನು. ಸಾಯಂಕಾಲದವರೆಗೆ ಹೀಗೆಯೇ ಇದ್ದು ಬಿಡೋಣವೇ ಎಂದು ಯೋಚಿಸಿದನು. ಪುನಃ ಅವನಿಗೆ ಮುತ್ತಿಗೆ ಹಾಕಿರುವವರು ರಾಣಿಯ ಸಿಪಾಯಿಗಳಿರಬಹುದು, ಮತ್ತು ಅವರ ಹಿಂದೆ ಇನ್ನೂ ಹೆಚ್ಚು ಸೈನಿಕರನ್ನು ಸಹಾಯಕ್ಕಾಗಿ ಅಲ್ಲಲ್ಲೇ ಅಡಗಿಸಿರಬಹುದು ಎಂಬ ಚಿಂತೆಯೂ ಉಂಟಾಯಿತು. ಸಿಪಾಯಿಗಳು ಮಳೆಯಲ್ಲಿ ಬಹಳ ಹೊತ್ತಿನವರೆಗೆ ತಮ್ಮ ಬಂದೂಕಗಳನ್ನು ಚಲಾಯಿಸಲಾಗುವುದಿಲ್ಲವೆಂದೂ, ತಾನು ಮನೆಯೊಳಗೆ ಸುರಕ್ಷಿತವಾಗಿ ನಿಂತು ಬಹಳ ಹೊತ್ತಿನವರೆಗೆ ಕದನ ಮಾಡಬಹುದೆಂದೂ ಅವನಿಗೆ ತಿಳಿದಿದ್ದಿತು.

ಸಾಗರಸಿಂಹನ ಮನೆಯು ಗುಡ್ಡದ ತುಟ್ಟತುದಿಯಲ್ಲಿರದೆ ಸ್ವಲ್ಪ ತಳಭಾಗದಲ್ಲಿದ್ದಿತು. ಖುದಾಬಕ್ಷನು ಈ ಸನ್ನಿವೇಶದ ಲಾಭ ಪಡೆಯಲು ಪ್ರಯತ್ನಿಸಿದನು. ಆದರೆ ಸಾಗರಸಿಂಹನು ಮೊದಲನೆಯ ಬಾರಿ ಬಂದೂಕವನ್ನು ಪ್ರಯೋಗಿಸುತ್ತಲೇ ಖುದಾಬಕ್ಷನ ಕೆಲವು ಸಿಪಾಯಿಗಳು ಘಾಯಗೊಂಡರು. ನಂತರ ಖುದಾಬಕ್ಷನು ಮನೆಯ ಮೇಲೆ ಹತ್ತಿ ಆಕ್ರಮಣಮಾಡುವಂತೆ ತನ್ನ ಸಿಪಾಯಿಗಳಿಗೆ ಆಜ್ಞೆಮಾಡಿ ತಾನೇ ಮೊದಲು ಹತ್ತಿಹೋದನು.

ಸಾಗರಸಿಂಹನು ಪುನಃ ಬಂದೂಕಿನಲ್ಲಿ ಮದ್ದು ತುಂಬಿ ತಯಾರುಮಾಡಿಕೊಳ್ಳುವುದರೊಳಗಾಗಿ ಖುದಾಬಕ್ಷನು ಮತ್ತು ಅವನ ಸಿಪಾಯಿಗಳು ಮನೆಯ ಮೇಲೆ ಹತ್ತಿಬಿಟ್ಟಿದ್ದರು. ಸಾಗರಸಿಂಹನು ಬಂದೂಕನ್ನು ಚಲಾಯಿಸಿದನು. ಆದರೆ ಸರಿಯಾಗಿ ಕೆಲಸಮಾಡಲಿಲ್ಲ.

ಸಾಗರಸಿಂಹನು ಇನ್ನು ಸರ್ವನಾಶವಾಯಿತೆಂದು ಅರಿತು ಕತ್ತಿಯನ್ನು ಸೆಳೆದನು. ಖುದಾಬಕ್ಷನು ಮತ್ತು ಅವನ ಸಹಚರನೊಬ್ಬನು ಮನೆಯ ಅಂಗಳಕ್ಕೆ ಧುಮುಕಿದರು.

ಸಾಗರಸಿಂಹನೊಂದಿಗೆ ಹೋರಾಟವಾಗಲಿಲ್ಲ. ಖುದಾಬಕ್ಷನು ಘಾಯಗೊಂಡು ಕೆಳಗೆ ಬಿದ್ದನು. ಅವನ ಅನುಚರನನ್ನು ಪಕ್ಕಕ್ಕೆ ತಳ್ಳಿ ದಾರಿಮಾಡಿಕೊಂಡು ಸಾಗರಸಿಂಹನು ಹೊರಬಿದ್ದನು.

ಆ ವೇಳೆಗೆ ಖುದಾಬಕ್ಷನ ಇತರ ಸಿಪಾಯಿಗಳು ಮನೆಯ ಬಾಗಿಲನ್ನು ಒಡೆದುಕೊಂಡು ಒಳನುಗ್ಗಿದರು. ಖುದಾಬಕ್ಷ ಮತ್ತು ಆತನ ಅನುಚರರು ಆ ಹಳ್ಳಿಯಲ್ಲಿ ಉಳಿಯುವುದು ಸರಿಯಲ್ಲವೆಂದು ಯೋಚಿಸಿ ಎತ್ತಿನ ಗಾಡಿಯಲ್ಲಿ ರಾತ್ರಿಯ ವೇಳೆಗೆ ಬರವಾಸಾಗರಕ್ಕೆ ಬಂದು ತಲಪಿದರು.

ಖುದಾಬಕ್ಷನ ಗಾಯಗಳು ಬಹಳ ಗುರುತರವಾಗಿಲ್ಲದಿದ್ದರೂ ಅನೇಕ ಕಡೆ ಘಾಯಗಳಾಗಿದ್ದುದರಿಂದ ರಕ್ತಸ್ರಾವವು ಹೆಚ್ಚಾಗಿದ್ದಿತು. ಅವನಿಗೆ ಮತ್ತು ಘಾಯಗೊಂಡ ಇತರ ಸಿಪಾಯಿಗಳಿಗೂ ಪಟ್ಟಿಗಳನ್ನು ಕಟ್ಟಿ ಚಿಕಿತ್ಸೆಮಾಡಲಾಯಿತು. ಆ ರಾತ್ರಿಯೆಲ್ಲಾ ಖುದಾಬಕ್ಷನು ಪ್ರಜ್ಞಾಶೂನ್ಯನಾಗಿದ್ದನು.

ಬೆಳಿಗ್ಗೆ ರಾಣಿಯ ಬಳಿಗೆ ಸಮಾಚಾರವನ್ನು ಕಳುಹಿಸಲಾಯಿತು.

## ೫೪

ಆಕಾಶದಲ್ಲಿ ಮೋಡವು ಕವಿದು ಮಂದವಾದ ಗಾಳಿಯು ಬೀಸುತ್ತಿದ್ದಿತು. ಮಳೆಯು ಎಡೆಬಿಡದೆ ಜೊರೋ ಎಂದು ಹನಿಯಿಕ್ಕುತ್ತಿದ್ದಿತು. ಮಹಲ್ಲಿನ ಮೇಲಂತಸ್ತಿನ ಕೋಣೆಯೊಂದರಲ್ಲಿ ರಾಣಿಯು ಕಣ್ಣುಮುಚ್ಚಿಕೊಂಡು ಮೋತೀಬಾಯಿಯು ಹಾಡು

ತ್ತಿದ್ದ ಭಜನೆಯಲ್ಲಿ ಮಗ್ನಳಾಗಿದ್ದಳು. ಮುಂದರಿಯು ಆಕಳಿಸುತ್ತಿದ್ದಳು. ಸುಂದರಿಯು ಕುಳಿತಂತೆಯೇ ನಿದ್ರಾಮಗ್ನಳಾಗಿದ್ದಳು. ಕಾಶಿಬಾಯಿಯೊಬ್ಬಳು ಮಾತ್ರ ಎಚ್ಚರವಾಗಿ ಕುಳಿತಿದ್ದಳು.

ಭಜನೆಯು ಸಮಾಪ್ತವಾದ ಮೇಲೆ ರಾಣಿಯು ಧ್ಯಾನದಿಂದ ಎಚ್ಚತ್ತಳು. ಮುಂದರಿಯ ಆಕಳಿಕೆಯೂ ಕೊನೆಗೊಂಡಿತು. ಆದರೆ ಸುಂದರಿಯ ನಿದ್ರಾಸಮಾಧಿಗೆ ಮಾತ್ರ ಭಂಗ ಬರಲಿಲ್ಲ.

ರಾಣಿಯು ನಗುತ್ತಾ "ಸುಂದರಿ, ಕರಡಿ ಎಲ್ಲಿಂದ ಬಂದಿದೆ ನೋಡು" ಎಂದು ಹೇಳಿದಳು.

ಸುಂದರಿಗೆ ಎಚ್ಚರವಾಗಿ ಬೆಚ್ಚಿ "ಕರಡಿ ಎಲ್ಲಿದೆ, ಬಾಯಿಸಾಹೇಬ್?" ಎಂದಳು.

"ಹುಡುಕಿನೋಡಿದರೆ ಗೊತ್ತಾಗುತ್ತದೆ. ಅದು ಸಾಧಾರಣವಾದ ಕರಡಿಯಲ್ಲ" ಎಂದಳು ರಾಣಿ.

ಸುಂದರಿಯು ಆ ಮಾತನ್ನು ಕೇಳಿ ಲಜ್ಜಿತಳಾಗಿ, ಕೈಮುಗಿದು "ಸರ್ಕಾರ್, ಬೆಳಗ್ಗಿನಿಂದ ದಣಿದಿದ್ದೆನು. ಆದುದರಿಂದ ಈಗತಾನೆ ಸ್ವಲ್ಪ ನಿದ್ರೆ ಬಂದಿತು" ಎಂದಳು.

ಕಾಶೀ—ಸರ್ಕಾರ್, ಇವತ್ತು ದಿನವೆಲ್ಲಾ ಇವಳು ಬೀಸುವ ಕಲ್ಲಿನಲ್ಲಿ ಬೀಸುತ್ತಿದ್ದಳು. ಆದುದರಿಂದ ಬಹಳ ಸೋತಿರುವಳು.

ಸುಂದರಿ—ಇಲ್ಲ, ಕಾಶಿಬಾಯಿ ಬೀಸಲಿಲ್ಲ. ಆದರೂ ಬೇರೆ ಕೆಲಸಗಳನ್ನು ಮಾಡಿರುವೆನು.

ಮುಂದರಿ—ನೀನೊಬ್ಬಳೇ ಏನು!

ಆ ಸಮಯಕ್ಕೆ ಸರಿಯಾಗಿ ಪಹರೆಯವನು "ಬರವಾಸಾಗರದಿಂದ ಒಬ್ಬ ಸಿಪಾಯಿಯು ಬಹಳ ಮುಖ್ಯವಾದ ಸಮಾಚಾರವನ್ನು ತಂದಿರುವನು" ಎಂದು ನಿವೇದಿಸಿಕೊಂಡನು. ರಾಣಿಯು ಅವನನ್ನು ಮತ್ತೊಂದು ಕೋಣೆಗೆ ಕರೆದುಕೊಂಡು ಹೋದಳು. ಮುಖ್ಯವಾದ ಸಮಾಚಾರಗಳಿಗೆ ಸಮಯಾಸಮಯಗಳನ್ನು ನೋಡದೆ ಒಡನೆಯೆ ಅವುಗಳಿಗೆ ತಕ್ಕ ಗಮನವನ್ನು ಕೊಡಬೇಕೆಂಬುದು ಅವಳ ಆದೇಶವಾಗಿದ್ದಿತು.

ರಾಣಿಯು ಸಖಿಯರೊಂದಿಗೆ ಸಿಪಾಯಿಯಿದ್ದ ಕೋಣೆಗೆ ಹೋದಳು.

ಸಮಾಚಾರವನ್ನು ತಂದ ಸಿಪಾಯಿಯು "ಸರ್ಕಾರ್, ರಾವಲಿಯ ಢಕಾಯಿತನೊಂದಿಗೆ ಸರದಾರ್ ಖುದಾಬಕ್ಷರು ಹೋರಾಡಿ ಘಾಯಗೊಂಡಿದ್ದಾರೆ. ಅವರೊಡನೆ ಏಳು ಜನ ಸೈನಿಕರೂ ಘಾಯಹೊಂದಿದ್ದಾರೆ. ಸರದಾರರಿಗೆ ಕತ್ತಿಯಿಂದ ಪೆಟ್ಟು ಬಿದ್ದಿದೆ ಮತ್ತು ಸಿಪಾಯಿಗಳಿಗೆ ಗುಂಡಿನೇಟು ತಗುಲಿದೆ. ದೇವರ ದಯೆಯಿಂದ ಯಾರಿಗೂ ಮರಣಪ್ರಾಪ್ತವಾಗಲಿಲ್ಲ. ಮತ್ತು ಪ್ರಾಪ್ತವಾಗುವ ಭಯವಿಲ್ಲ. ಸಾಗರ

ಸಿಂಹನು ತಪ್ಪಿಸಿಕೊಂಡು ಓಡಿಹೋದನು. ಹೋರಾಟವು ಸಾಗರಸಿಂಹನ ಮನೆಯಲ್ಲೇ ನಡೆಯಿತು" ಎಂದು ಹೇಳಿದನು.

ಈ ಮಾತನ್ನು ಕೇಳಿ ಮೋತೀಬಾಯಿಯ ಮುಖವು ಕಳೆಗುಂದಿತು.

"ರಾವಲಿಯು ಬರವಾಸಾಗರದಿಂದ ಎಷ್ಟು ದೂರದಲ್ಲಿದೆ?" ಎಂದು ರಾಣಿಯು ಕೇಳಿದಳು.

"ಸುಮಾರು ಹತ್ತು ಹನ್ನೆರಡು ಮೈಲಿಗಳಷ್ಟು ದೂರದಲ್ಲಿದೆ, ಸರ್ಕಾರ್. ಗೂಢಚಾರರಿಂದ ಸಾಗರಸಿಂಹನು ತನ್ನ ಮನೆಯಲ್ಲಿಯೇ ಇರುವನೆಂದು ತಿಳಿಯ ಬಂದು ಸರದಾರರು ಒಡನೆಯೇ ಅವನ ಮನೆಗೆ ಮುತ್ತಿಗೆ ಹಾಕಿದರು." ಎಂದು ಉತ್ತರವಿತ್ತನು.

ರಾಣಿ—ಖುದಾಬಕ್ಷನಿಗೆ ಏಟು ಎಲ್ಲಿ ಬಿದ್ದಿರುವುದು? ಈಗ ಅವನ ಪರಿಸ್ಥಿತಿ ಹೇಗಿದೆ? ಈ ಹೋರಾಟವಾಗಿ ಎಷ್ಟು ದಿನಗಳಾದವು?

ಸಿಪಾಯಿ—ಹೋರಾಟವಾಗಿ ಇಂದಿಗೆ ನಾಲ್ಕು ದಿನಗಳಾದವು. ಸರದಾರರಿಗೆ ತೋಳು ಮತ್ತು ತೊಡೆಗೆ ಪೆಟ್ಟುಬಿದ್ದಿದೆ. ತಲೆಯಮೇಲೆಯೂ ಒಂದೆರಡು ಗಾಯಗಳಾಗಿವೆ. ಅವು ಈಗ ಮಾಗುತ್ತಿವೆ. ಸಿಪಾಯಿಗಳಿಗೆ ತೀವ್ರವಾದ ಗಾಯಗಳಾಗಿವೆ.

ರಾಣಿ—ಈ ಸಮಾಚಾರವನ್ನು ತರಲು ನಿನಗೇಕೆ ಇಷ್ಟು ಕಾಲವಿಳಂಬವಾಯಿತು?

ಸಿಪಾಯಿ—ಬೇತ್ವಾನದಿಯಲ್ಲಿ ಪ್ರವಾಹಬಂದು ದಾಟಲು ಅಸಾಧ್ಯವಾಯಿತು. ದೋಣಿಯನ್ನು ನಡೆಸಲಾಗಲಿಲ್ಲ. ಇಂದು ಮಧ್ಯಾಹ್ನ ನೀರು ಸ್ವಲ್ಪ ಕಡಿಮೆಯಾದುದರಿಂದ ಇಲ್ಲಿಗೆ ಬರಲು ಸಾಧ್ಯವಾಯಿತು.

ರಾಣಿ—ನಾನು ತಕ್ಕ ಏರ್ಪಾಡುಗಳನ್ನು ಮಾಡುತ್ತೇನೆ. ನೀನು ಹೋಗು.

ರಾಣಿಯು ತನ್ನ ಕೊಠಡಿಗೆ ಹಿಂದಿರುಗಿ "ನಾಳೆ ಬರವಾಸಾಗರಕ್ಕೆ ಹೋಗಲೇಬೇಕು" ಎಂದಳು.

ಕಾಶಿಯು "ಸರ್ಕಾರ್ ಈಗ ಹೋಗಬೇಡಿ. ಯಾವಾಗ ಮಳೆಯು ಬಿರುಸಾಗಿ ನದಿಯಲ್ಲಿ ಪ್ರವಾಹವು ಉಕ್ಕುವುದೆಂಬುದು ಹೇಳಲಾಗುವುದಿಲ್ಲ. ಆ ದಿನ ನೀವು ಬರವಾಸಾಗರಕ್ಕೆ ಹೋಗಬೇಕೆಂದು ತೀರ್ಮಾನ ಮಾಡಿದಾಗ ನಾನು ಅಡ್ಡಿ ಬರಲಿಲ್ಲ. ಆದರೆ ಇಂದು ನೀವು ಹೋಗಕೂಡದೆಂದು ಹಠ ಮಾಡುವೆನು." ಎಂದಳು.

ರಾಣಿಯು ಯೋಚಿಸಲಾರಂಭಿಸಿದಳು. ಮೋತೀಬಾಯಿಯ ಮುಖದಲ್ಲಿ ವಿದಿತವಾದ ಉದಾಸೀನವನ್ನು ಕಂಡು ಅವಳ ದುಗುಡವನ್ನರಿತಳು.

ರಾಣಿ—ನೀನು ಹೇಳುವುದು ಸರಿಯೆ, ಕಾಶಿ. ಪ್ರಕೃತಿಯನ್ನು ನಾವು ಎದುರಿ

ಸಲಾರೆವು. ನಾಳೆ ಮಳೆ ಬೀಳದಿದ್ದರೆ ಒಳ್ಳೆಯ ಕುದುರೆಗಳನ್ನು ಹತ್ತಿ ಹೊರಡೋಣ. ಆನೆಯ ಮೇಲೆಯೂ ಹೋಗಬಹದು; ಆದರೆ ಪ್ರದರ್ಶನವು ನನಗೆ ಇಷ್ಟವಿಲ್ಲ. ಅಲ್ಲದೆ ಆನೆಯ ಸವಾರಿ ಬಹಳ ನಿಧಾನ.

ಮೋತೀ—ಸರ್ಕಾರ್, ಜೊತೆಯೊಳಗೆ ಕೆಲವು ಅಶ್ವಾರೋಹಿ ಸಿಪಾಯಿಗಳನ್ನು ಕರೆದುಕೊಂಡು ಹೋಗಬೇಕು.

ರಾಣಿ—ಕರೆದುಕೊಂಡು ಹೋಗುವೆನು. ದಿವಾನ್ ರಘುನಾಥಸಿಂಹರಿಗೆ ಮುಂಜಾನೆಯವೇಳೆಗೆ ಈ ಸಮಾಚಾರವನ್ನು ತಿಳಿಸಿರಬೇಕು.

ಕಾಶಿ—ನಾನೂ ಬರುತ್ತೇನೆ.

ರಾಣಿ—ಅವಶ್ಯಕವಾಗಿ. ನಾನೇನು ನಿನ್ನನ್ನು ಅಡ್ಡಿಪಡಿಸಿರುವೆನೆ?

ಮೋತೀ—ಅಪ್ಪಣೆಯಾದರೆ ನಾನೂ ಬರಲಾಶಿಸುವೆನು.

ರಾಣಿ—ದೋಣಿಯನ್ನು ನಡೆಸಲಾಗದಿದ್ದರೆ ಕುದುರೆಯ ಮೇಲೆಯೇ ನದಿಯನ್ನು ದಾಟಬಲ್ಲೆಯಾ?

ಮೋತೀ—ಮಹಾರಾಣಿಯವರ ಸೇವೆಯಲ್ಲಿರುವಾಗ ನನಗೆ ನೀರು, ಬೆಂಕಿ ಮುಂತಾದವುಗಳ ಭಯವೇನಿಲ್ಲ.

ರಾಣಿಯು ಅನುಮತಿಯಿತ್ತಳು.

ರಾತ್ರಿಯೆಲ್ಲಾ ಮಳೆಯು ಆಗಿಂದಾಗ್ಗೆ ಸುರಿಯುತ್ತಲೇ ಇದ್ದಿತು. ಪ್ರಾತಃಕಾಲ ಆಕಾಶದಲ್ಲಿ ಮೋಡವು ಕವಿದಂತೆ ಕಂಡುಬರಲಿಲ್ಲ. ರಾಣಿಯು ೨೫ ಅಶ್ವಾರೋಹಿಗಳು, ತನ್ನ ಸಖಿಯರು, ಮತ್ತು ದಿವಾನ್ ರಘುನಾಥಸಿಂಹ ಇವರನ್ನೊಡಗೂಡಿ ಬರವಾಸಾಗರದತ್ತ ಹೊರಟಳು. ಜಾಗ್ರತೆಯಾಗಿಯೇ ಬೇತ್ವಾನದಿಯ ತೀರವನ್ನೂ ಸೇರಿದಳು. ಬೇತ್ವಾನದಿಯು ಎರಡು ದಂಡೆಯನ್ನೂ ಅತಿಕ್ರಮಿಸಿ ವೇಗದಿಂದ ಪ್ರವಹಿಸುತ್ತಿದ್ದಿತು.

ಮೇಲೆಯೆಲ್ಲಿಯೋ ಮಳೆಯು ಸುರಿದಿದ್ದುದರ ಪ್ರಯುಕ್ತ ನದಿಯು ತುಂಬಿ ಹರಿಯುತ್ತಿದ್ದಿತು. ನಾವಿಕರು ನಾವೆಯನ್ನು ನಡೆಸುವುದು ಅಸಂಭವವಾಗಿದ್ದು, ಸವಾರರಲ್ಲಿ ಅನೇಕರ ಹೃದಯವು ಕಂಪಿಸಿತು.

ಆಚೆಯ ದಡದಲ್ಲಿದ್ದ ಪರ್ವತಶ್ರೇಣಿಯು ಹಸಿರುಬಣ್ಣದ ರತ್ನಗಂಬಳಿ ಹೊದೆಸಿದಂತಿದ್ದು, ಆಕಾಶದಲ್ಲಿದ್ದ ಮೇಘಗಳು ಈ ಪರ್ವತಗಳ ಶಿಖರಗಳನ್ನು ಚುಂಬಿಸಿ ಅಲೆ ಅಲೆಯಾಗಿ ಮುಂದೆ ಹೋಗುತ್ತಿದ್ದವು. ರಭಸದಿಂದ ಹರಿಯುತ್ತಿದ್ದ ಬೇತ್ವಾನದಿಯ ಭೋರ್ಗರೆಯುವ ಶಬ್ದವು ರಣಭೂಮಿಯ ರೌರವವನ್ನು ಹೋಲುತ್ತಿದ್ದಿತು.

ರಾಣಿಯು ಹಿಂದಿರುಗಿ ಮೋತೀಬಾಯಿಯ ಮುಖವನ್ನು ನೋಡಿದಳು. ಮೋತೀಬಾಯಿಯ ದೃಷ್ಟಿಯು ಪರ್ವತ ಪಂಕ್ತಿಯ ಶಿರವನ್ನು ಮುಟ್ಟಿ ಹೋಗುತ್ತಿದ್ದ

ಮೇಘಖಂಡಗಳಲ್ಲಿ ನೆಟ್ಟಿದ್ದಿತು.

ರಾಣಿಯು "ಧುಮುಕಿರಿ" ಎಂದು ಆಜ್ಞೆಯಿತ್ತು ತಾನೇ ಮುಂದಾಳಾಗಿ ಕುದುರೆಯ ಮೇಲೆ ಕುಳಿತಂತೆಯೇ ನದಿಯಲ್ಲಿ ಮುನ್ನುಗ್ಗಿದಳು. ಮತ್ತೇನು? ಆಕೆಯ ಸಖಿಯರೂ, ಇತರ ಸವಾರರೂ ನದಿಯನ್ನು ಭೇದಿಸಿಕೊಂಡು ಹೊರಟರು.

ಬೇತ್ವಾನದಿಯಲ್ಲಿ ಮೇಲಿಂದ ಮೇಲೆ ಪ್ರವಾಹವು ಬಂದು ಹರಿದು ಹೋಗುತ್ತಿದ್ದಿತು. ಜಲರಾಶಿಗಳು ಅನೇಕ ಬಾರಿ ಒಂದಕ್ಕೊಂದು ಸಂಘರ್ಷಿಸಿ ಅಲ್ಲಲ್ಲಿ ಸುಳಿಗಳೇರ್ಪಡುತ್ತಿದ್ದವು. ಈ ಎಡಬಿಡದ ಪ್ರವಾಹದಿಂದ ಅಶ್ವಾರೋಹಿಗಳಿಗೆ ಮುಂದಿದ್ದ ದಡವೂ ಗೋಚರಿಸುತ್ತಿರಲಿಲ್ಲ. ನೀರಿನ ಅಲೆಗಳನ್ನು ದಾಟಿಕೊಂಡು ಹೋದಷ್ಟೂ ಮೇಲಿಂದ ಮೇಲೆ ಅಲೆಗಳು ಒಂದಕ್ಕೊಂದು ಸಂಘರ್ಷಿಸಿ ನೀರಿನ ಮೇಲಿನ ನೊರೆಯು ಚುಕ್ಕುಚುಕ್ಕಾಗಿ ಹೋಗುತ್ತಿದ್ದಿತು. ಶಬ್ದಮಯವಾದ ಪ್ರವಾಹವು ಅದರ ಗೂಢ ಭಾಷೆಯಲ್ಲಿ ಬಾರಿಬಾರಿಗೂ "ಪಾರಾಗು, ಪಾರಾಗು" ಎಂದು ಎಚ್ಚರಗೊಳಿಸುತ್ತಿದ್ದಂತಿದ್ದಿತ್ತು. ಕುದುರೆಗಳು ತೆರೆದ ಕಣ್ಣುಗಳಿಂದ ನೀರಿನಲ್ಲಿ ಬಿಸಿಯುಸಿರುಗರೆಯುತ್ತಾ ಮುಂದೆ ಸಾಗುತ್ತಿದ್ದವು. ಅವುಗಳಿಗೆ ತಮ್ಮ ಮತ್ತು ತಮ್ಮ ಸರದಾರರ ಕಷ್ಟವು ಚೆನ್ನಾಗಿ ತಿಳಿದ್ದಿದಿತು. ಸವಾರರ ಕಾಲುಗಳು ಕುದುರೆಗಳ ಕಿಬ್ಬೊಟ್ಟೆಗಳನ್ನು ಬಿಗಿಯಾಗಿ ಅಪ್ಪಿಕೊಂಡಿದ್ದವು. ಕೆಳಗೆ ಕುದುರೆಗಳ ಖುರಪುಟ ಧ್ವನಿ. ಕುದುರೆಗಳ ಕಾಲಿನ ಕೆಳಗೆ ಅದೆಷ್ಟು ಆಳವೋ ಭಗವಂತನೇ ಬಲ್ಲ. ಸವಾರರ ನಾಲ್ಕು ಕಡೆಯೂ ಸುಳಿಗಳು ತಿರುಗುತ್ತಿದ್ದವು. ಒಂದು ಸುಳಿಯ ಮಡುವನ್ನು ದಾಟಿದರೆ ಮತ್ತೊಂದು ಕಂಡು ಬರುತ್ತಿದ್ದಿತು. ಆದರೆ ತಮ್ಮ ರಾಣಿ ಮತ್ತು ಅವಳ ಸಖಿಯರು ಮುಂದುವರೆಯುತ್ತಿರುವುದನ್ನು ನೋಡಿ ಯಾವ ಸಿಪಾಯಿಯ ಹೃದಯದಲ್ಲಿ ತಾನೆ ಭಯವು ಹೆಚ್ಚುಕಾಲ ಮೂಡಿರಬಲ್ಲದು ?

ರಾಣಿಯ ಕುದುರೆಯ ತಲೆಮಾತ್ರ ನೀರಿನ ಮೇಲಿದ್ದು ಉಳಿದ ಭಾಗವೆಲ್ಲವೂ ಮುಳುಗಿ ಹೋಗಿದ್ದಿತು. ರಾಣಿಯ ಸೊಂಟದವರೆಗೂ ನೀರು ಮತ್ತು ಪ್ರವಾಹದೊಂದಿಗೆ ತೇಲಿ ಬಂದಿದ್ದ ಸೊಪ್ಪು ಸದೆ. ನೀರಿನ ತುಂತುರುಗಳು ಹಾರಿ ಕಣ್ಣುಗಳ ಮೇಲೆ, ಕೇಶಧಾಮದ ಮೇಲೆ ಮತ್ತು ಶರೀರದ ಆದ್ಯಂತವೂ ಹರಿಯುತ್ತಿದ್ದುವು. ಸಿಪಾಯಿಗಳಿಗೆ ಮತ್ತು ಸಖಿಯರಿಗೆ ಉತ್ತೇಜನ ಕೊಡುವಾಗ ನಗುನಗುತ್ತಾ "ಭೇಷ್! ಭೇಷ್!" ಎಂಬುತ್ತಿದ್ದುದು ಪ್ರಚಂಡ ಬೇತ್ವಾನದಿಯ ಮಲಿನ ಹಸ್ತಗಳಲ್ಲಿ ಮುತ್ತನ್ನು ಸುರಿದಂತಿದ್ದಿತು. ಚಲಿಸುತ್ತಿದ್ದ ಮೋಡಗಳ ಮುಂದೆ ಹಾರಿಹೋದ ಬಕುಳ ಪಕ್ಷಿಗಳ ಹಿಂಡು ಪರ್ವತಗಳನ್ನು ಸಂದರ್ಶಿಸಲು ಹೋಗುತ್ತಿದ್ದ ಮೋಡಗಳಿಗೆ ಬಿಳಿಯ ಆಭರಣ ತೊಡಿಸಿದಂತಿದ್ದಿತು.

ಗಿರಿಕಂದರಗಳಲ್ಲಿ ನುಗ್ಗಿ ಅವುಗಳನ್ನು ಆಚ್ಛಾದಿಸುತ್ತಿದ್ದ ಮೋಡಗಳಲ್ಲಿ ಆ

ಬಕುಲ ಪಕ್ಷಿಗಳು ಒಂದು ಕ್ಷಣ ಕಣ್ಮರೆಯಾಗಿ ಪುನಃ ಪುನಃ ಚೆಲ್ಲಾಪಿಲ್ಲಿಯಾಗಿ ಹಾರಿಹೋದವು. ನೀಲಾಕಾಶದಲ್ಲಿ ಮಿನುಗುಟ್ಟುವ ನಕ್ಷತ್ರಗಳಂತೆ ಗೋಚರಿಸಿದವು. ಬೆಟ್ಟದ ಮೇಲೆ ನಿಬಿಡವಾದ ದೊಡ್ಡ ದೊಡ್ಡ ವೃಕ್ಷಗಳು, ಹಸಿರು ಮತ್ತು ಶ್ಯಾಮಲ ವರ್ಣಗಳಿಂದ ಕಂಗೊಳಿಸುತ್ತಿದ್ದವು. ಬಕುಳ ಪಕ್ಷಿಗಳು, ಒಂದು ಮರದ ಮೇಲೆ ಕುಳಿತು ವಿಶ್ರಮಿಸಿಕೊಳ್ಳುತ್ತಿದ್ದುದು ವನದೇವಿಯು ಪ್ರಭೆಯನ್ನು ಪ್ರಸರಿಸಿದಂತೆ ಪ್ರಕಾಶಿಸಿತು. ಕಡೆಯ ವಿಷಮಧಾರೆಯನ್ನು ದಾಟಿದನಂತರ, ಸ್ವಲ್ಪ ಹೊತ್ತಿನಲ್ಲೆ ಆಚೆಯದಡವು ಕಂಡುಬಂದಿತು.

ರಾಣಿಯು ನಕ್ಕಳು. ಅವಳ ದಂತಪಂಕ್ತಿಯು ಬಕುಳ ಪಕ್ಷಿಗಳ ಬಿಳುಪಿನೊಂದಿಗೆ ಸ್ಪರ್ಧಿಸುವಂತಿದ್ದಿತು.

"ಅಗೋ ನೋಡಿ, ದಡವು ಸಮೀಪಿಸಿತು. ತಂಗಲು ಸ್ಥಳವು ದೊರಕಿತು" ಎಂದು ರಾಣಿಯು ಹರ್ಷೋತ್ಪನ್ನಳಾಗಿ ಹೇಳಿದಳು.

ಸ್ವಲ್ಪ ಹೊತ್ತಿನಲ್ಲಿಯೇ ಎಲ್ಲರೂ ಸುರಕ್ಷಿತವಾಗಿ ದಡವನ್ನು ಸೇರಿದರು. ಎಲ್ಲರೂ ನೀರಿನಲ್ಲಿ ತೊಯ್ದುಹೋಗಿದ್ದರು. ಆದರೆ ಅವನ ಸೊಂಟದಲ್ಲಿ ಕಟ್ಟಿದ್ದ ಆಯುಧಗಳು ಹೆಚ್ಚುಕಡಿಮೆ ನೆನೆಯದೆ ಇದ್ದವು. ಕುದುರೆಗಳೆಲ್ಲವೂ ಛಳಿಯಿಂದ ನಡುಗುತ್ತಿದ್ದವು.

ವಸ್ತ್ರಗಳನ್ನು ಒಣಗಿಸಿ, ಬದಲಾಯಿಸಿಕೊಂಡು ಕುದುರೆಗಳ ವಿಶ್ರಾಂತಿ ಕೊಡುವುದರಲ್ಲಿ ಸ್ವಲ್ಪ ಹೊತ್ತು ಕಳೆಯಿತು.

ಪುನಃ ಕುದುರೆಗಳನ್ನು ವೇಗವಾಗಿ ಓಡಿಸುತ್ತಾ ಮಧ್ಯಾಹ್ನದ ವೇಳೆಗೆ ರಾಣಿಯೂ ಅವಳ ಪರಿವಾರವೂ ಬರವಾಸಾಗರದ ದುರ್ಗವನ್ನು ತಲಪಿದರು.

ಬರವಾಸಾಗರದ ಕೋಟೆಯು ವಿಶಾಲವಾದ ಒಂದು ಕೆರೆಯ ಕಟ್ಟೆಯ ಮೇಲ್ಭಾಗದಲ್ಲಿದೆ. ಈ ಕೆರೆಯಿಂದ ಬರವಾಸಾಲೆಯೆಂಬ ಒಂದುನಾಲೆಯು ಪ್ರವಹಿಸುತ್ತಿರುವುದು. ಈ ನಾಲೆಯಿಂದಲೇ ಆ ತಟಾಕವು ಬಹಳ ವಿಶಾಲವಾಗಿ ತೋರುವುದು.

ಗಾಯಗೊಂಡ ಖುದಾಬಕ್ಷ ಮತ್ತು ಇತರ ಸಿಪಾಯಗಳು ಈ ಕಿಲ್ಲೆಯಲ್ಲೇ ಇದ್ದರು.

ರಾಣಿಯು ದುರ್ಗವನ್ನು ಸೇರಿದೊಡನೆಯೇ ಇವರನ್ನು ಹೋಗಿ ನೋಡಿದಳು. ಕೆಲವರ ತಲೆಯನ್ನು ನೇವರಿಸಿದಳು. ಕೆಲವರ ಗಾಯದ ಪಟ್ಟಿಗಳನ್ನು ಸರಿಪಡಿಸಿದಳು. ಸಿಪಾಯಿಗಳು ತಮ್ಮ ರಾಣಿಯ ವಾತ್ಸಲ್ಯವನ್ನು ಕಂಡು ಮುಗ್ಧರಾಗಿ ಹರ್ಷೋನ್ಮತ್ತರಾದರು.

ರಾಣಿಯು ಖುದಾಬಕ್ಷನ ಬಳಿಗೆ ಹೋದಳು. ಆತನು ತನ್ನ ಮಂಚದಿಂದ ಏಳಲು ಪ್ರಯತ್ನಿಸಿದನು. ಆದರೆ ಸಾಧ್ಯವಾಗಲಿಲ್ಲ. ಅವಳನ್ನು ಕಂಡು ಅವನ ಕಣ್ಣುಗಳು

ಅಶ್ರುಪೂರಿತವಾದವು; ಅವಳ ಚರಣ ಸ್ಪರ್ಶಮಾಡಲು ಯತ್ನಿಸಿದನು.

ರಾಣಿಯು ಅವನ ತಲೆಯನ್ನು ಸೇವರಿಸಿ ಮಂಚದ ಮೇಲೆ ಕುಳಿತಳು. ಸಖಿಯರೆಲ್ಲರೂ ಬಳಿಯಲ್ಲೆ ನಿಂತಿದ್ದರು. ಮೋತೀಬಾಯಿಯು ಅವರ ಹಿಂದೆ ನಿಂತು ಎವೆಯಿಕ್ಕದೆ ಖುದಾಬಕ್ಷನನ್ನು ನೋಡುತ್ತಿದ್ದಳು. ಖುದಾಬಕ್ಷನು ಅವಳನ್ನು ಕಂಡನು. ಆದರೆ ಅವನ ದೃಷ್ಟಿಯು ಮೋತೀಬಾಯಿಯೆಡೆಗಿರಲಿಲ್ಲ.

ಅವನು ರಾಣಿಗೆ ಸಾಗರಸಿಂಹನೊಡನೆ ನಡೆದ ಹೋರಾಟದ ವೃತ್ತಾಂತವನ್ನೆಲ್ಲಾ ವಿವರವಾಗಿ ತಿಳಿಸಿದನು.

ರಾಣಿ—ಸಾಗರಸಿಂಹನು ಎಲ್ಲಿಗೆ ಪಲಾಯನಮಾಡಿರುವನೆಂಬುದು ಏನಾದರೂ ಗೊತ್ತೆ?

ಖುದಾ—ಸರ್ಕಾರ್, ಹಳ್ಳಿಯವರು ಅವನಡಗಿರುವ ಸ್ಥಳವನ್ನು ತಿಳಿಸುವುದಿಲ್ಲ. ಅವರೇ ಅವನಿಗೆ ರಕ್ಷಣೆ, ಭೋಜನ, ವಸತಿ ಮುಂತಾದುವನ್ನು ಕೊಡುತ್ತಾರೆ. ಇಲ್ಲೇ ಅಕ್ಕಪಕ್ಕದ ಕಾಡಿನಲ್ಲಡಗಿರುವನೆಂಬುದು ಮಾತ್ರ ತಿಳಿದಿದೆ.

ರಾಣಿ—ಹಳ್ಳಿಯವರು ಸಾಧಾರಣವಾಗಿ ಕಳ್ಳಕಾಕರನ್ನು ಕಂಡು ಹೆದರುತ್ತಾರೆ. ಅವರಿಗೆ ನಿರ್ಭಯರಾಗಿರಲು ಯಾವ ಸಾಧನೆಯೂ ಇಲ್ಲ. ಆಂಗ್ಲೇಯರು ಪಂಚಾಯಿತಿಗಳನ್ನು ನಾಶಮಾಡಿದ ಕಾರಣ ಹಳ್ಳಿಗಳಲ್ಲಿ ಪರಸ್ಪರ ಸಹಾಯ ಪದ್ಧತಿಯೂ ನಿರ್ನಾಮವಾಗಿ ಕಳ್ಳಕಾಕರಿಗೆ ಸಹಾಯವನ್ನು ನೀಡುವಂತಾಗಿದೆ. ನೀನು ಚಿಂತಿಸಬೇಡ. ನಾನು ಮುಂದಿನ ವಿಷಯಗಳನ್ನು ನೋಡಿಕೊಳ್ಳುತ್ತೇನೆ.

ಖುದಾ—ಸರ್ಕಾರ್ ಈಗ ತಾವೇ ಸ್ವತಃ ಬಂದಿದ್ದೀರಿ. ಇನ್ನು ನನಗೇನು ಚಿಂತೆ? ಗಾಯವು ಹೆಚ್ಚು ಕಡಿಮೆ ಉತ್ತಮಗೊಂಡಿದೆ. ಒಂದೆರಡು ದಿನಗಳಲ್ಲಿ ಎಲ್ಲವೂ ಗುಣವಾಗುವುದು. ನಂತರ ಸಾಗರಸಿಂಹನನ್ನು ನೋಡಿಕೊಳ್ಳುವೆನು.

ರಾಣಿಯು ಅವನನ್ನು ವಿಶ್ರಮಿಸಿಕೊಳ್ಳುವಂತೆ ಒತ್ತಾಯ ಪಡಿಸಿ ಮೋತೀಬಾಯಿಯನ್ನು ಖುದಾಬಕ್ಷನ ಉಪಚಾರಕ್ಕೆ ನಿಲ್ಲಿಸಿ ಅರಮನೆಯತ್ತ ಹೊರಟು ಹೋದಳು. ನಂತರ ಅಲ್ಲಿ ಸ್ನಾನ ಧ್ಯಾನಗಳನ್ನು ಪೂರೈಸಿಕೊಂಡಳು.

ಮೋತೀಬಾಯಿಯ ಕಣ್ಣುಗಳು ಹನಿಗೂಡಿದವು, ಮುಖವು ಬಾಡಿದ್ದಿತು, ಅವಳುರುದ್ಧ ಕಂಠಿತಳಾಗಿದ್ದಳು. ಖುದಾಬಕ್ಷನು ಇವೆಲ್ಲವನ್ನು ಕಂಡು "ಇದೇನಿದು! ಕಂಬನಿ ! ನೀವು ಹರ್ಷದರ್ಪಗಳಿಂದ ನಗುತ್ತಿರಬೇಕು. ನಿಮ್ಮ ಕೈದಿ—ಅಲ್ಲ ನಿಮ್ಮ ಮಹಾರಾಣಿಯವರ ಸಿಪಾಯಿ,ತನ್ನಮಾಲೀಕಳಿಗಾಗಿ ಅಲ್ಪ ಸೇವೆಯನ್ನೆಸಗಿದ" ಎಂದು ಹೇಳಿದನು. ಮೋತಿಬಾಯಿಯು ಕಣ್ಣೊರಸಿಕೊಂಡು "ಬಾಧೆಯು ಬಹಳವಾಗಿದೆಯೆ ?" ಎಂದು ಕೇಳಿದಳು.

ಖುದಾಬಕ್ಷನು ಉತ್ತರಕೊಡುತ್ತಾ "ಸ್ವಲ್ಪವೂ ಇಲ್ಲ. ರಾಣಿಯು ನನ್ನ ತಲೆ

ಯನ್ನು ನೇವರಿಸಿದುದು ಅಮೃತ ಪ್ರಾಯವಾಗಿದ್ದಿತು. ನಿಜವಾಗಿ ಹೇಳುತ್ತೇನೆ. ಈಗಲೂ ರಾಣಿಯು ಆಜ್ಞೆಯಿತ್ತರೆ ಕುದುರೆಯ ಮೇಲೆ ಕುಳಿತು ಆ ಅತ್ಯಾಚಾರಿಯನ್ನು ಶರಣಾಗತನನ್ನಾಗಿ ಮಾಡಬಲ್ಲೆನು" ಎಂದನು.

ನಂತರ ಆತನು ಪಕ್ಕಕ್ಕೆ ತಿರುಗಿಕೊಳ್ಳಲು ಪ್ರಯತ್ನಿಸಿದನು. ಸ್ವಲ್ಪ ಕಷ್ಟ ವಾಯಿತು. ತನ್ನ ವೇದನೆಯನ್ನು ದಮನಮಾಡಿ "ಶ್ರೀಮಂತ್ ಸರ್ಕಾರರು ನಾನು ಸಂಪೂರ್ಣ ಗುಣಹೊಂದುವವರೆಗೂ ನಿಲ್ಲಲಾರರೆಂದು ತೋರುತ್ತದೆ" ಎಂದನು.

ಮೋತೀಬಾಯಿಯು ಸತೃಷ್ಣನಯನಳಾಗಿ "ನಾನೂ ಅವರೊಂದಿಗೆ ಹೊರಡು ವೆನು" ಎಂದನು.

ಖುದಾಬಕ್ಷನು ಕಣ್ಣುಹಾರಿಸಿ "ನೀವೂ ಹೊರಡುವಿರಾ?" ಎಂದು ಕೇಳಿದನು.

"ಏಕೆ? ನನಗೇನಾಗಿದೆ? ಆಕೆಯ ಛಾಯೆಯಲ್ಲಿ ಮನುಷ್ಯರು ಬಿರುಗಾಳಿ ಯಷ್ಟು ಬಲಿಷ್ಠರಾಗುವಾಗ ಸ್ತ್ರೀಯು ಪುರುಷನಂತಾಗುವುದು ಅಸಾಧ್ಯವೆ?"

ಖುದಾಬಕ್ಷನಿಗೆ ಮೋತೀಬಾಯಿಯು ರತ್ನಾವಳೀನಾಟಕದಲ್ಲಿ ರಂಗಮಂಟಪದ ಮೇಲೆ ರತ್ನಾವಳಿಯ ಪಾತ್ರಾಭಿನಯ ಮಾಡುತ್ತಿದ್ದುದನ್ನು ನೋಡಿದುದರ ನೆನಪು ಬಂದಿತು. ಒಂದಿಗೇ ಅರಳಿದ ಪುಷ್ಪ ಮತ್ತು ಅದರ ಕೋಮಲತೆಯ ಚಿತ್ರವು ಕಣ್ಣ ಮುಂದೆ ಮಿಂಚಿನಂತೆ ಹೊಳೆದು ಅದೃಶ್ಯವಾಯಿತು.

ಆತನು ನಿಟ್ಟುಸಿರಿಟ್ಟನು. ಕಣ್ಣುಮುಚ್ಚಿಕೊಂಡೆ "ನನಗೆ ಪಟ್ಟಿಕಟ್ಟಿ ಶುಶ್ರೂಷೆ ಮಾಡುವುದಕ್ಕಾಗಿ ನೀವು ಇಲ್ಲಿಯೇ ಇರಬೇಕು" ಎಂದು ಹೇಳಿದನು.

ಮೋತೀಬಾಯಿಯು ಸ್ನೇಹವನ್ನು ವ್ಯಕ್ತಪಡಿಸುತ್ತಾ "ಮಹಾರಾಣಿಯವರಲ್ಲಿ ಅರಿಕೆಮಾಡಿಕೊಳ್ಳಿ. ನಾನು ಅಗತ್ಯವಾಗಿ ಇರುತ್ತೇನೆ" ಎಂದಳು.

ಖುದಾಬಕ್ಷನು ಕಣ್ಣುತೆರೆದು ಹುಬ್ಬುಗಂಟಿಕ್ಕಿ ಸ್ವಲ್ಪ ತಡವರಿಸಿ ಮೆಲ್ಲನೆ ಹೇಳಿ ದನು "ರತ್ನಾವಳಿಯನ್ನು ಶುಶ್ರೂಷೆಗೆ ದಯಪಾಲಿಸಬೇಕೆಂದು ಮಹಾರಾಣಿಯವರಲ್ಲಿ ಭಿಕ್ಷೆ ಬೇಡುವೆನು"

ಮೋತೀಬಾಯಿಯು "ರತ್ನಾವಳಿ ಯಾರು?" ಎಂದು ಕೇಳಿದನು.

ಖುದಾಬಕ್ಷನು ಆಶ್ಚರ್ಯವ್ಯಕ್ತಪಡಿಸುತ್ತಾ "ನಾನು ರತ್ನಾವಳಿ ಎಂದೆನೆ?" ಎಂದು ಕೇಳಿದನು.

ಮೋತೀಬಾಯಿಯು ನಕ್ಕಳು. ಆ ನಗೆಯಲ್ಲಿ ಚಮತ್ಕಾರವಿದ್ದಿತು. ಆದರೆ ಅದು ಖುದಾಬಕ್ಷನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ.

ಮೋತೀಬಾಯಿ—ರತ್ನಾವಳಿ ಎಂದೇ ಹೇಳಿದಿರಿ. ಏನಾದರೂ ಸ್ವಪ್ನ ಕಾಣು ತ್ತಿದ್ದಿರಾ?

ಖುದಾಬಕ್ಷ—ಅದು ಸ್ವಪ್ನವಾಗಿದ್ದಿತು. ಈಗ ಸವಿಯಾದ ಜಾಗೃತಿಯು

ಕಣ್ಣಮುಂದೆಯೇ ಇದೆ.

ಮೋತೀಬಾಯಿಯು ಖುದಾಬಕ್ಷನ ಕಣ್ಣುಗಳಲ್ಲಿ ಪ್ರೇಮವನ್ನು ಅರಸುತ್ತಾ "ನಾನಾಗಿಯೇ ರಾಣಿಗೆ ಹೇಳಿಕೊಳ್ಳುವುದಿಲ್ಲ. ಹಾಗೆ ಮಾಡಿದರೆ ಅವರು ನನ್ನನ್ನು ಪುಕ್ಕಲಿಯೆಂದು ಭಾವಿಸಿಕೊಳ್ಳುತ್ತಾರೆ" ಎಂದಳು.

"ಹೌದು, ಹೌದು." ಖುದಾಬಕ್ಷನು ಸ್ವಲ್ಪ ತಲೆಯೆತ್ತಿ ಹೇಳಿದನು.

"ನೀನು ಬಹಳ ಧೈರ್ಯಶಾಲಿ, ನಾನೊಬ್ಬ ಹೇಡಿ ಎಂದು ರಾಣಿಯು ಭಾವಿಸಬೇಕೆಂಬುದು ನಿನ್ನ ಅಭಿಲಾಷೆಯೆ?"

"ನಾನೇನೂ ಹಾಗೆ ಹೇಳಲಿಲ್ಲ. ಭಗವಂತನ ಕೃಪೆಯಿಂದ ಜಾಗ್ರತೆಯಾಗಿ ಗುಣಹೊಂದಿ" ಎಂದು ಮೋತೀಬಾಯಿಯು ಹೇಳಿ ನಿಷ್ಕ್ರಮಿಸಿದಳು.

ಮೇಲಿನ ಭಾವನಿಗೆ ಹೊಂದಿಕೊಂಡಂತೆ ಸುತ್ತಲೂ ಗೋಡೆಯಿದ್ದು ಅದರಲ್ಲಿ ಝೂಲಿಯ ಕಿಟಕಿಯೊಂದಿದ್ದಿತು. ಮೋತೀಬಾಯಿಯು ಅದರ ಮೂಲಕ ಮುಂದಿದ್ದ ಕೆರೆಯ ಅಲೆಗಳನ್ನು ನೋಡುತ್ತಾ ಕಂಬನಿ ಸುರಿಸಿದಳು. ಅವಳು ರತ್ನಾವಳಿಯ ಪಾತ್ರವನ್ನು ವಹಿಸಿದಾಗಲೂ ಇಷ್ಟು ಅಶ್ರುವನ್ನು ಸುರಿಸಿರಲಿಲ್ಲ.

ತರುವಾಯ ದುಃಖವನ್ನು ತಡೆದುಕೊಂಡು ತನ್ನ ಕೆಲಸಕಾರ್ಯಗಳಲ್ಲಿ ಉದ್ಯುಕ್ತಳಾದಳು.

## ೫೫

ಸಂಧ್ಯಾಕಾಲಕ್ಕೆ ಮೊದಲೇ ಬರವಾಸಾಗರದ ಮುಖ್ಯಸ್ಥನೂ ಮತ್ತು ಪಂಚಾಯ್ತಿದಾರರೂ ರಾಣಿಯನ್ನು ಸಂಧಿಸಲು ದುರ್ಗಕ್ಕೆ ಬಂದರು. ನಜರು ಮುಜರೆಗಳಾದ ಮೇಲೆ ರಾಣಿಯು ಎಲ್ಲರ ಕ್ಷೇಮ ಸಮಾಚಾರಗಳನ್ನು ವಿಚಾರಿಸಿದಳು.

ಏಕಾಂತಕ್ಕೆ ಅವಕಾಶ ದೊರಕಿದಾಗ ಬರವಾಸಾಗರದ ಠಾಣೇದಾರನು ರಾಣಿಗೆ ಸಾಗರಸಿಂಹನು ಸಿಖನೀ ಎಂಬ ಅರಣ್ಯದಲ್ಲಿ ಆಶ್ರಯ ಹೊಂದಿರುವನೆಂದೂ ಆ ಅರಣ್ಯವು ಬರವಾಸಾಗರದಿಂದ ಹತ್ತು ಹನ್ನೆರಡು ಮೈಲಿ ದೂರವಿರುವುದೆಂದೂ ಹೇಳಿದನು.

ರಾಣಿಯು ಆತನಿಗೆ "ಯಾರಿಗೂ ಪತ್ತೆಯಾಗದಂತೆ ಬೆಳಿಗ್ಗೆ ಎಂಟು ಗಂಟೆಗೆ ತಯಾರಾಗಿರಬೇಕೆಂದು" ಆಜ್ಞೆಯಿತ್ತಳು.

ಪ್ರಾತಃಕಾಲ ಎಲ್ಲರೂ ಸಿದ್ಧರಾದರು. ಸಮಯಕ್ಕೆ ಸರಿಯಾಗಿ ಮೋತೀಬಾಯಿಯನ್ನು ಕರೆಸಿ "ನೀನು ಇಲ್ಲಿಯೇ ಇದ್ದು ಖುದಾಬಕ್ಷನ ಶುಶ್ರೂಷೆ ಮಾಡುತ್ತಲಿರು" ಎಂದು ರಾಣಿಯು ಹೇಳಿದಳು.

ಮೋತೀಬಾಯಿಯು ನತಮಸ್ತಕಳಾಗಿ "ನಾನು ರಾಣಿಯವರ ಸೇವೆಗಾಗಿ ಜೊತೆಯಲ್ಲೇ ಹೊರಡಲಿಚ್ಛಿಸುತ್ತೇನೆ. ಏಕೆ, ಯಾರಾದರೂ ಆ ವಿಚಾರವಾಗಿ ಪ್ರಾರ್ಥಿಸಿದರೆ?" ಎಂದು ಕೇಳಿದಳು.

"ಇಲ್ಲ ನಾನೇ ಹೇಳುತ್ತಲಿದ್ದೇನೆ" ಎಂದು ರಾಣಿಯು ಉತ್ತರವಿತ್ತಳು.

ಮೋತೀಬಾಯಿಯು ಹೊರಡಲೇಬೇಕೆಂದು ಹಠಮಾಡಿದಳು. ರಾಣಿಯ ಸಖಿಯರೂ ಅವಳ ಪ್ರಾರ್ಥನೆಯನ್ನು ಅನುಮೋದಿಸಿದರು. ನಂತರ ರಾಣಿಯು ಸಮ್ಮತಿಸಿದಳು.

ರಾಣಿಯು ತನ್ನ ಮತ್ತು ಬರವಾಸಾಗರದ ಠಾಣೆಯಲ್ಲಿದ್ದ ತುಕ್ಕಡಿಯನ್ನು ಕರೆದುಕೊಂಡು ಹೊರಟಳು. ಅವಳು ಈ ಪಡೆಯನ್ನು ಇಬ್ಭಾಗಮಾಡಿ; ಒಂದನ್ನು ದಿವಾನ್ ರಘುನಾಥಸಿಂಹನ ನೇತೃತ್ವದಲ್ಲಿ ರಾವಲಿಯೆಡೆಗೆ ರವಾನಿಸಿದಳು. ಇನ್ನೊಂದು ಭಾಗವನ್ನು ತಾನೇ ಸಿಖನಿಯ ಅರಣ್ಯದ ಕಡೆಗೆ ಕರೆದುಕೊಂಡು ಹೊರಟಳು.

ದಿವಾನ್ ರಘುನಾಥಸಿಂಹನು ಸಾಗರಸಿಂಹನ ಮನೆಯನ್ನು ಮುತ್ತಿದನು. ನಂತರ ಒಬ್ಬ ಹಳ್ಳಿಗನೊಂದಿಗೆ "ಆಯುಧವನ್ನು ಬಿಸುಟು ನನ್ನ ಬಳಿಗೆ ಬಾ. ಆಗ ರಾಣಿಯು ನಿನಗೆ ಸ್ವಲ್ಪವಾದರೂ ರಿಯಾಯ್ತಿಯನ್ನು ತೋರಿಸುವಳು. ಇಲ್ಲದಿದ್ದರೆ ನಿನ್ನ ಮನೆಯನ್ನು ಧ್ವಂಸಮಾಡುವೆನು" ಎಂದು ಸಾಗರಸಿಂಹನಿಗೆ ಸಂದೇಶ ಕಳುಹಿಸಿದನು.

ಹಳ್ಳಿಯವನು ಹಿಂದಿರುಗಿ ಬಂದು ಕುಮಾರ ಸಾಗರಸಿಂಹನು ಮನೆಯಲ್ಲಿ ಇಲ್ಲವೆಂದು ಹೇಳಿದನು.

ರಘುನಾಥಸಿಂಹ—ಹಾಗಿದ್ದ ಪಕ್ಷದಲ್ಲಿ ಮನೆಯನ್ನು ಕೆಡಹುವುದಕ್ಕೆ ಇನ್ನೂ ಅನುಕೂಲವಾಯಿತು.

ರಘುನಾಥಸಿಂಹನಿಗೆ ಸಾಗರಸಿಂಹನು ಮನೆಯಲ್ಲಿ ಇಲ್ಲವೆಂದು ತಿಳಿದ ಒಡನೆಯೇ ಸಿಖನಿಯಲ್ಲಿದ್ದ ರಾಣಿಗೆ ವರ್ತಮಾನವನ್ನು ಕಳುಹಿಸಿ ತಾನು ಮನೆಯನು ಸುತ್ತುಗಟ್ಟಿ ಅಲ್ಲಿಯೇ ಉಳಿದನು.

ರಾಣಿಯು ವನವನ್ನು ಸುತ್ತುವರಿಯಬೇಕೆಂಬ ನಿರ್ಣಯಮಾಡುತ್ತಿದ್ದ ಸಮಯಕ್ಕೆ ಸರಿಯಾಗಿ ಆ ಸಂದೇಶವು ಅವಳಿಗೆ ತಲುಪಿತು. ಅವಳ ಮನಸ್ಸಿಗೆ ಸಾಗರಸಿಂಹ ಅದೇ ಅರಣ್ಯದಲ್ಲಿ ಅಡಗಿರುವನೆಂದು ಭಾಸವಾಗ ತೊಡಗಿತು.

ಒಂದು ಗಂಟೆಯೊಳಗಾಗಿ ಗೂಢಚಾರನೊಬ್ಬನು ಬಂದು "ಸಾಗರಸಿಂಹನು ಎರಡು ಬೆಟ್ಟಗಳ ನಡುವಣ ಕಣಿವೆಯ ತುಟ್ಟತುದಿಯಲ್ಲಿ ಒಂದು ದೊಡ್ಡ ಪರ್ಣಕುಟೀರದಲ್ಲಿ ಊಟೋಪಚಾರಗಳ ತಯಾರಿಕೆಯಲ್ಲಿ ತೊಡಗಿದ್ದಾನೆ. ಅವನ ಬಳಿ ಕುದುರೆಗಳಿವೆ" ಎಂದು ತಿಳಿಸಿದನು.

ರಾಣಿಯು ತಕ್ಷಣವೇ ಆ ಎರಡು ಬೆಟ್ಟಗಳ ಉನ್ನತಸ್ಥಾನಗಳಲ್ಲಿ ಬಂದೂಕಗಳುಳ್ಳ ಸಿಪಾಯಿಗಳನ್ನಿರಿಸಿ ಕಣಿವೆಯ ತುದಿಗೂ ಕೆಲವು ಸಿಪಾಯಿಗಳನ್ನು ಕಾವಲಿಗಾಗಿ ರವಾನಿಸಿದಳು. ತಾನು ತನ್ನ ಸಖಿಯರು ಮತ್ತು ಮೋತೀಬಾಯಿಯೊಂದಿಗೆ ಆ ಕಣಿವೆಗಿದ್ದ ನಿಷ್ಕ್ರಮಣ ಮಾರ್ಗದಲ್ಲಿ ಕುದುರೆಗಳೊಂದಿಗೆ ಅಡಗಿ ಹಾದಿಕಾಯುತ್ತಿದ್ದಳು.

ಮೇಲಿದ್ದ ಸಿಪಾಯಿಗಳು ಮೆಲ್ಲಮೆಲ್ಲನೆ ಕಣಿವೆಯ ಇಳಿಜಾರಿನ ಕಡೆಗೆ ಮುಂದುವರಿದು ದರೋಡೆಗಾರರ ಸಾಮೀಪ್ಯವನ್ನು ಹೊಂದುತ್ತಲೆ ಬಂದೂಕವನ್ನು ಹಾರಿಸಬೇಕೆಂದು ರಾಣಿಯು ಆಜ್ಞೆಯಿತ್ತಿದ್ದಳು.

ಅಂತೆಯೆ ನಡೆಯಿತು.

ಢಕಾಯಿತರು ಗಾಬರಿಗೊಂಡು ಅನ್ನಾಹಾರ ಸಾಮಾನು ಸರಂಜಾಮುಗಳನ್ನು ಇದ್ದಲ್ಲಿಯೇ ಬಿಟ್ಟು ಬೆತ್ತಲೆ ಕುದುರೆಗಳನ್ನೇರಿ. ಕಣಿವೆಯ ನಿಷ್ಕ್ರಮಣ ಮಾರ್ಗದತ್ತ ದೌಡಾಯಿಸಿದರು.

ಮೇಲಿನಿಂದ ಮೂರು ದಿಕ್ಕಿನಿಂದಲೂ ಬಂದೂಕಿನ ಗೋಲಿಗಳು ಹಾರಿಬರುತ್ತಿದ್ದವು. ಆದರೆ ಢಕಾಯಿತರಲ್ಲೊಬ್ಬನಿಗಾದರೂ ಒಂದು ಗಾಯವೂ ತಾಗಲಿಲ್ಲ.

ನಿಷ್ಕ್ರಮಣ ಮಾರ್ಗದತ್ತ ಬರಲು ಅವರ ಎದುರಿನಿಂದ ಐದು ತುಪಾಕಿಗಳು ಸಿಡಿದವು. ಅದರ ಪರಿಣಾಮವಾಗಿ ಕುದುರೆಗಳು ಮಡಿದು ಢಕಾಯಿತರು ಗಾಯಗೊಂಡರು. ನಂತರ ತಸ್ಕರರು ತಮ್ಮ ಬಂದೂಕಗಳನ್ನು ಹಾರಿಸಿದರು. ಆದರೆ ರಾಣಿಯೂ ಮತ್ತು ಅವಳ ಸಖಿಯರೂ ಸರಿಯಾದೆಡೆ ಆಶ್ರಯಹೊಂದಿದ್ದುದರಿಂದ ಯಾವ ಅಪಾಯವೂ ಸಂಭವಿಸಲಿಲ್ಲ.

ದರೋಡೆಗಾರರು ಚಲ್ಲಾಪಿಲ್ಲಿಯಾಗಿ ಓಡಲಾರಂಭಿಸಿದರು. ಕಾಶೀ, ಸುಂದರಿ, ಮತ್ತು ಮೋತೀಬಾಯಿಯರು ಬೇರೆ ಬೇರೆಯಾಗಿ ಅವರನ್ನು ಹಿಂಬಾಲಿಸತೊಡಗಿದರು.

ರಾಣಿ ಮತ್ತು ಮುಂದರಿಯ ಮುಂದೆ ಕಡೆಯಲ್ಲಿ ಕುದುರೆಯ ಮೇಲೆ ಹಾದು ಹೋದ ಢಕಾಯಿತನು ಕೈಯ್ಯಲ್ಲಿ ಬಿಚ್ಚುಗತ್ತಿ ಹಿಡಿದು ಕಂಠದಲ್ಲಿ ಚಿನ್ನದ ಸರವನ್ನು ಧರಿಸಿದ್ದನು. ಆತನ ಉಡುಗೆ ತೊಡಗೆಗಳು ಉತ್ತಮವಾಗಿದ್ದವು. ಸಾಗರಸಿಂಹನ ವರ್ಣನೆಯನ್ನು ಕೇಳಿದ್ದ ರಾಣಿಯು ಈತನೇ ಅವನಿರಬಹುದೆಂದು ಹೋಲಿಕೆ ನೋಡಿ ನಿಶ್ಚಯಿಸಿದಳು ; ನಂತರ ನಸುನಗುತ್ತ ಆಕೆಯು ಮುಂದರಿಗೆ ಸೂಚನೆಯಿತ್ತಳು.

ಮುಂದರಿಯು ಒಡನೆಯೇ ಔಡುಕಚ್ಚಿ ಅವನನ್ನು ವೇಗದಿಂದ ಹಿಂಬಾಲಿಸಿದಳು. ರಾಣಿಯು ಮತ್ತೊಂದು ಕಡೆಯಿಂದ ಅವನ ಬೆನ್ನಟ್ಟಿದಳು. ಮಾರ್ಗವು ಕಠಿಣವೂ ಆದುದರಿಂದ ಸಾಗರಸಿಂಹನು ಇವರೀರ್ವರನ್ನು ಹಿಂದುಳಿಸಿ ತಪ್ಪಿಸಿಕೊಂಡು

ಹೋಗಲನುಕೂಲವಾಯಿತು. ಆದರೆ ಮುಂದೆ ಮೈದಾನವು ಸಿಕ್ಕಿದಮೇಲೆ ಅವನ ಕುದುರೆಯು ತಡವರಿಸಲಾರಂಭಿಸಿತು. ರಾಣಿಯ ಮತ್ತು ಮುಂದರಿಯ ಕುದುರೆಗಳು ಕಾಥೇವಾಡಿನ ಜಾತ್ಯಶ್ವಗಳಾದುದರಿಂದ ಅವರು ಅವನನ್ನು ಸಮಿಾಪಿಸಿ ಎರಡು ಕಡೆಗಳಿಂದಲೂ ಆಕ್ರಮಿಸಿ ಅವನನ್ನು ನಿರುಪಾಯನನ್ನಾಗಿ ಮಾಡಿದರು.

ರಾಣಿಯು ಕಂಠದಲ್ಲಿ ಥಳಥಳಿಸುತ್ತಿದ್ದ ವಜ್ರದ ಕಂಠಿಯನ್ನು ಧರಿಸಿದ್ದಳು. ಅದನ್ನು ಕಂಡೊಡನೆಯೇ ಆತನು ಯಾವ ರಾಣಿಯ ಶೌರ್ಯ ಪರಾಕ್ರಮಗಳ ವಿಷಯವನ್ನು ಅನೇಕ ಬಾರಿ ಕೇಳಿದ್ದನೋ ಸ್ವಯಂ ಅವಳೇ ಇಂದು ತನ್ನ ಪ್ರಾಣಕ್ಕೆ ಕಂಟಕವಾಗಿ ತನ್ನಿದಿರು ಬಂದಿದ್ದಾಳೆ ಎಂದು ಅರಿತುಕೊಂಡನು.

ಆತ್ಮರಕ್ಷಣೆಗಾಗಿ ಪ್ರೇರಿತನಾದ ಸಾಗರಸಿಂಹನು ರಾಣಿಯ ಮೇಲೆ ಆಕ್ರಮಣ ಮಾಡಿದನು. ತಕ್ಷಣವೇ ಮುಂದರಿಯು ಚುರುಕಿನಿಂದ ತನ್ನ ಕತ್ತಿಯನ್ನು ಅವನ ಮೇಲೆ ಬೀಸಿದಳು. ಅದು ಕುದುರೆಯ ಬೆನ್ನಿಗೆ ತಗುಲಿ ತೀವ್ರವಾದ ಗಾಯವಾಯಿತು. ಅತ್ತ ರಾಣಿಯೂ ಚಮತ್ಕಾರದಿಂದ ಕುದುರೆಯನ್ನು ಬಿಗಿಹಿಡಿದು ನಿಲ್ಲಿಸಿದಳು. ಸಾಗರಸಿಂಹನ ಖಡ್ಗ ಪ್ರಯೋಗವು ನಿರುಪಯೋಗವಾಯಿತು. ರಾಣಿಯು ಕ್ಷಣಾರ್ಧದಲ್ಲಿ ತನ್ನ ಕತ್ತಿಯನ್ನು ಸೆಳೆದು ಹೊಡೆದುದರ ಪರಿಣಾಮವಾಗಿ ಸಾಗರಸಿಂಹನ ಕತ್ತಿಯು ಎರಡು ತುಂಡಾಯಿತು. ಅವನು ತನ್ನ ಕುದುರೆಯನ್ನು ಓಡಿಸಲು ಪ್ರಯಾಸಪಟ್ಟನು. ಆದರೆ ಅದರ ಬೆನ್ನಿಗೆ ಬಲವಾದ ಕತ್ತಿಯ ಪೆಟ್ಟು ಬಿದ್ದಿದ್ದಿತು. ಮುಂದರಿಯು ತನ್ನ ಕತ್ತಿಯನ್ನು ಸಾಗರಸಿಂಹನ ಕತ್ತಿನ ಮೇಲಿಟ್ಟಳು. ರಾಣಿಯು ಒಡನೆಯೇ "ಇವನನ್ನು ಜೀವದೊರಸೆ ಹಿಡಿಯಬೇಕು" ಎಂದು ಹೇಳಿ ತನ್ನ ಕುದುರೆಯನ್ನು ಸಾಗರಸಿಂಹನ ಕುದುರೆಯ ಪಕ್ಕಕ್ಕೆ ತಂದು ಅವನ ಸೊಂಟಕ್ಕೆ ಕೈಹಾಕಿದಳು. ಮುಂದರಿಗೆ ತಾನೇನು ಮಾಡಬೇಕೆಂಬುದು ಅರಿವಾಗಿ ಅವಳು ಅದೇ ಅವನ ಸೊಂಟಕ್ಕೆ ಕೈಹಾಕಿದಳು. ಒಡನೆಯೇ ಇಬ್ಬರೂ ಸೇರಿ ಅವನನ್ನು ಕುದುರೆಯಿಂದ ಎತ್ತಿದರು. ಅವನ ಕುದುರೆಯು ಹಿಂದುಳಿಯಿತು. ಈ ವಜ್ರಪಾಶಕ್ಕೆ ಸಿಕ್ಕಿದ ಸಾಗರಸಿಂಹನು ತಪ್ಪಿಸಿಕೊಳ್ಳಲು ಉಪಾಯಗಾಣದೆ ತನ್ನ ಹಲ್ಲುಬಾಯಿಗಳನ್ನು ಉಪಯೋಗಿಸತೊಡಗಿದನು. ರಾಣಿಯು "ಎಚ್ಚರಿಕೆ, ಬಾಯನ್ನೇನಾದರೂ ತೆರೆದರೆ ಕತ್ತಿಯಿಂದ ಇರಿದು ಬಿಡುವೆನು" ಎಂದಳು.

ಈಗಲೀಗ ಸಾಗರಸಿಂಹನಿಗೆ ರಾಣಿಯ ಮತ್ತು ಮುಂದರಿಯ ಕೈವಾಡವೆಂತಹುದೆಂಬುದು ತಿಳಿದು ತನ್ನ ಪ್ರಾಣರಕ್ಷಣೆಗಾಗಿ ಯಾಚಿಸಿದನು. ಸ್ವಲ್ಪ ದೂರ ಹೋದ ಮೇಲೆ ರಾಣಿಯ ತುಕ್ಕಡಿಯು ಇದಿರಾಗಿ ಬಂದಿತು. ನಂತರ ಸಿಪಾಯಿಗಳು ಸಾಗರಸಿಂಹನನ್ನು ಆ ವಜ್ರಪಾಶದಿಂದ ಬಿಡಿಸಿ ಹಗ್ಗಗಳಿಂದ ಕಟ್ಟಿಹಾಕಿ ಕುದುರೆಯ ಮೇಲೆ ಕುಳ್ಳಿರಿಸಿದರು. ತರುವಾಯ ಅವರೆಲ್ಲರೂ ಅನತಿ ದೂರದಲ್ಲಿ ಒಂದು ಕಡೆ ವಿಶ್ರಮಿಸಿ

ಕೊಳ್ಳುತ್ತಾ ಸುಂದರಿ ಕಾಶಿ ಮತ್ತು ಮೋತೀಬಾಯಿಯರಿಗಾಗಿ ನಿರೀಕ್ಷಿಸುತ್ತಾ ಕುಳಿತರು. ರಾಣಿಯು ಕಹಳೆಯನ್ನು ಕೂಗಿಸಿದಳು. ಅದನ್ನು ಕೇಳಿ ಸ್ವಲ್ಪ ಹೊತ್ತಿನೊಳಗಾಗಿ ಕಾಶೀಬಾಯಿ ಮುಂತಾದವರೆಲ್ಲರೂ ಅಲ್ಲಿಗೆ ಬಂದು ಸೇರಿದರು. ಉಳಿದ ಢಕಾಯಿತರೆಲ್ಲರೂ ಪಲಾಯನಸೂತ್ರ ಮಾಡಿದ ವೃತ್ತಾಂತವು ಅವರಿಂದ ತಿಳಿದು ರಘುನಾಥಸಿಂಹನಿಗೆ ಈ ಎಲ್ಲಾ ವಿಷಯಗಳನ್ನೂ ಹೇಳಿ ಕಳುಹಿಸಿ ರಾಣಿಯು ಬರವಾಸಾಗರದತ್ತ ಸಾಗಿದಳು. "ಈಗಲೇ ಹೊತ್ತು ಮೀರಿಹೋಗಿದೆ. ಸಾಯಂಕಾಲಕ್ಕೆ ಮೊದಲೇ ಬರವಾಸಾಗರವನ್ನು ತಲಪಬೇಕು. ಆದುದರಿಂದ ಆ ಓಡಿಹೋದ ಢಕಾಯಿತರ ಗೊಡವೆಗೆ ಈಗ ಹೋಗುವುದು ಬೇಡ" ಎಂದು ರಾಣಿಯು ಹೇಳಿದಳು.

ರಾಣಿಯು ತನ್ನ ಪರಿವಾರದೊಂದಿಗೆ ಸಂಧ್ಯಾಕಾಲಕ್ಕೆ ಮುನ್ನವೇ ಬರವಾಸಾಗರವನ್ನು ತಲಪಿದಳು. ಸಾಗರಸಿಂಹನನ್ನು ಅಲ್ಲಿ ಬಲವಾದ ಪಹರೆಯಲ್ಲಿಟ್ಟರು. ಅಂದು ರಾತ್ರಿಯಾಗುವ ಮೊದಲೇ ರಘುನಾಥಸಿಂಹನು ಅವನ ಪಡೆಯೊಂದಿಗೆ ಬರವಾಸಾಗರಕ್ಕೆ ಹಿಂದಿರುಗಿದನು.

ಮನೆ ಮನೆಯಲ್ಲೂ ರಾಣಿಯ ಚಾತುರ್ಯ, ಶೌರ್ಯ ಪರಾಕ್ರಮಗಳ ಪ್ರಶಂಸೆಯೇ ಕೇಳಿಬರುತ್ತಿದ್ದುವು. ಮರುದಿನ ಹಳ್ಳಿಹಳ್ಳಿಯಲ್ಲೂ ಇದೇ ವಿಚಾರದ ಚರ್ಚೆಗಳಾರಂಭಿಸಿದುವು.

ಮರುದಿನ ಸಾಗರಸಿಂಹನನ್ನು ರಾಣಿಯ ಮುಂದೆ ಹಾಜರುಮಾಡಲಾಯಿತು. ಆತನು ವಂದಿಸಿ ಅವಳ ಚರಣ ಸ್ಪರ್ಶಮಾಡಲು ಕೈನೀಡಿದನು. ಆದರೆ ಪಹರೆಯವರು ಅವನನ್ನು ನಿರ್ಬಂಧಿಸಿದರು.

ರಾಣಿಯು ಪ್ರಶ್ನಿಸಿದಳು "ನಿನ್ನ ಹೆಸರೇನು ?"

ಆತನು "ಕುಮಾರ್ ಸಾಗರಸಿಂಹ, ಸರ್ಕಾರ್" ಎಂದು ಉತ್ತರವಿತ್ತನು.

ರಾಣಿಯು ಮುಗುಳ್ನಗೆ ನಕ್ಕಳು. ಆ ನಗುವನ್ನು ಕಂಡು ಸಾಗರಸಿಂಹನು ನಡುಗಿಹೋದನು.

ರಾಣಿಯು "ಇಂತಹ ಕುಲೀನ ಕುಮಾರನಾಗಿ ಈ ನಿಕೃಷ್ಟ ಆಚರಣೆಯೇಕೆ ?" ಎಂದು ಕೇಳಿದಳು.

ಸಾಗರಸಿಂಹನು "ಸರ್ಕಾರ್, ನಮ್ಮ ವಂಶಸ್ಥರು ಯಾವಾಗಲೂ ಯುದ್ಧಗಳಲ್ಲಿಯೇ ಭಾಗವಹಿಸುತ್ತಲೇ ಇರುವರು. ಓರ್ಛಾ ಮಹಾರಾಜರ ಸೇವೆಯಲ್ಲಿ ಯುದ್ಧಮಾಡಿದ್ದಾರೆ. ಛತ್ರಸಾಲ ಮಹಾರಾಜರ ಸೇವೆಯಲ್ಲಿದ್ದುಕೊಂಡು ರಣಭೂಮಿಯಲ್ಲಿ ಹೋರಾಡಿದ್ದಾರೆ. ಆಂಗ್ಲೇಯರು ಬಂದನಂತರ ಅವರ ಅಧೀನತೆಯನ್ನು ಸ್ವೀಕರಿಸದೇ ಇದ್ದ ಠಾಕೂರರಲ್ಲಿ ನಾವೂ ಒಬ್ಬರಾಗಿದ್ದೆವು. ಅವರು ನಮ್ಮ ಮೇಲೆ ದಬ್ಬಾಳಿಕೆಯನ್ನು ಆಚರಿಸಲುಪಕ್ರಮಿಸಿದ ನಂತರ ನಾವು ಸಿಟ್ಟೆದ್ದು ಅವರಿಗೆದುರಾಗಿ

ಢಕಾಯಿತರಾದೆವು. ನಾನು ಯಾವ ಸ್ತ್ರೀಯನ್ನೇ ಆಗಲಿ ಅಥವಾ ದೀನ ದರಿದ್ರರನ್ನೇ ಆಗಲಿ ಹಿಂಸಿಸಿಲ್ಲವೆಂದು ನನ್ನ ಮತ್ತು ನನ್ನ ಸಂಗಡಿಗರ ಪರವಾಗಿ ಪವಿತ್ರ ಗಂಗಾ ಮಾತೆಯ ಮೇಲೆ ಆಣೆಯಿಟ್ಟು ಪ್ರಮಾಣಮಾಡುತ್ತೇನೆ." ಎಂದನು.

ರಾಣಿಯು "ಇತ್ತೀಚೆಗೆ ನೀನು ಕೊಳ್ಳೆಹೊಡೆಯುತ್ತಿರುವ ಜನರು ನನ್ನ ಪ್ರಜೆಗಳಾಗಿದ್ದಾರೆ. ಆಂಗ್ಲೇಯರ ಅಧೀನರಲ್ಲ. ಢಕಾಯಿತರಿಗೆ ಪ್ರಾಣದಂಡನೆಯೇ ಶಿಕ್ಷೆ. ಆದುದರಿಂದ ಸಿದ್ಧನಾಗು. ನೀನಾಗಲೀ ನಿನ್ನ ಅನುಚರರಾಗಲೀ, ನಿಮ್ಮ ಮನೆ ಮಠಗಳಾಗಲೀ ಯಾವುದೂ ಉಳಿಯುವುದಿಲ್ಲ. ಎಲ್ಲವನ್ನೂ ಧ್ವಂಸಮಾಡಿ ನೆಲಸಮ ಮಾಡುವೆನು" ಎಂದಳು.

ಸಾಗರಸಿಂಹನು ತಲೆಯೆತ್ತದೆಯೇ ರಾಣಿಯನ್ನು ಓರೆ ನೋಟದಿಂದ ನೋಡಿದನು. ಅಷ್ಟು ಉಜ್ವಲವಾದ, ಪ್ರಭಾವಪೂರ್ಣವಾದ ಕಠಿಣ ನೇತ್ರಗಳನ್ನು ಅವನು ಹಿಂದೆಂದೂ ನೋಡಿರಲಿಲ್ಲ. ಆಕೆಯನ್ನು ಕಂಡು ಸಾಕ್ಷಾತ್ ದುರ್ಗಾದೇವಿಯೇ ಆತನೆದುರಿಗೆ ಬಂದಂತೆ ಅವನಿಗೆ ಭಾಸವಾಯಿತು.

ಸಾಗರಸಿಂಹನು "ಸರ್ಕಾರ್, ನಾನೊಂದು ಪ್ರಾರ್ಥನೆ ಮಾಡಿಕೊಳ್ಳಬಹುದೆ?" ಎಂದು ಕೇಳಿದನು.

ರಾಣಿಯು ಅನುಮತಿಯಿತ್ತಳು.

ಸಾಗರಸಿಂಹನು ಪ್ರಾರ್ಥಿಸುತ್ತಾ "ನನಗೆ ಮರಣದಂಡನೆಯನ್ನು ಬಂದೂಕದಿಂದಾಗಲಿ ಅಥವಾ ಕತ್ತಿಯಿಂದಾಗಲೀ ಉಂಟಾಗುವಂತೆ ಅನುಗ್ರಹಿಸಬೇಕು. ನೇಣು ಹಾಕುವ ಶಿಕ್ಷೆ ವಿಧಿಸಿದರೆ ನನಗೆ ಮತ್ತು ನನ್ನ ಜಾತಿಯುವರಿಗೆಲ್ಲಾ ಅಪಮಾನವಾಗುತ್ತದೆ. ಇದರಿಂದ ರಾಜದ್ರೋಹಿಗಳು ಹೆಚ್ಚಿಹೋಗುವರೇ ವಿನಹ ಕಡಿಮೆಯಾಗುವುದಿಲ್ಲ, ಸರ್ಕಾರ್" ಎಂದನು.

ರಾಣಿ—ಒಂದು ವೇಳೆ ನಾನು ನಿನ್ನನ್ನು ಖುಲಾಸೆಮಾಡಿದರೆ ಏನು ಮಾಡುವೆ ?

ಸಾಗರಸಿಂಹ—ತಮ್ಮ ಮುಂದೆ ಅನೃತವನ್ನಾಡುವುದಿಲ್ಲ, ಶ್ರೀಮಂತ್ ಸರ್ಕಾರ್. ಸರಿಯಾದ ಉದ್ಯೋಗವು ದೊರಕದಿದ್ದರ ಪುನಃ ದರೋಡೆಯನ್ನಾರಂಭಿಸುವೆನು. ಆದರೆ ನಿಮ್ಮ ರಾಜ್ಯದಲ್ಲಲ್ಲ.

ರಾಣಿ—ಒಂದು ವೇಳೆ ನಾನು ನೀನು ದರೋಡೆಯನ್ನೇ ಮಾಡಬಾರದೆಂದು ಹೇಳಿದರೆ ಅದಕ್ಕೆ ಬದಲಾಗಿ ನೀನೇನನ್ನು ಅಪೇಕ್ಷಿಸುತ್ತೀಯಾ ?

ಸಾಗರ—ನಿಮ್ಮ ಚರಣಸೇವೆಯಲ್ಲಿದ್ದುಕೊಂಡು ನಾಳಿನ ಯುದ್ಧದಲ್ಲಿ ನನ್ನ ಪರಾಕ್ರಮವನ್ನು ಪ್ರದರ್ಶಿಸಬೇಕೆಂದು ನನ್ನ ಆಸೆ.

ರಾಣಿ—ನಿನ್ನ ಸಂಗಡಿಗರೆಷ್ಟು ಮಂದಿ ಇದ್ದಾರೆ?

ಸಾಗರ—ಅರಣ್ಯದಲ್ಲಿ ೧೫–೧೬ ಮಂದಿ ಇದ್ದರು. ಹಳ್ಳಿಯಲ್ಲಿ ೬೦–೬೫

ಮಂದಿ ಇರುವರು.

ರಾಣಿ—ಅವರೆಲ್ಲಾ ಏನು ಮಾಡುವುದು?

ಸಾಗರ—ತಮ್ಮ ಆಜ್ಞೆಯಾದರೆ ಅವರು ನನ್ನೊಂದಿಗೆ ತಮ್ಮ ಸೇನೆಯಲ್ಲಿ ಕೆಲಸ ಮಾಡುವರು.

ರಾಣಿ—ನಾನು ಹಾಗೆ ಆಜ್ಞೆಮಾಡದಿದ್ದರೆ?

ಸಾಗರ—ತಮ್ಮ ರಾಜ್ಯವನ್ನೊಂದು ಉಳಿದು ಇತರ ಎಲ್ಲಾ ಸ್ಥಳಗಳಲ್ಲಿಯೂ ಅವರ ಕ್ರಾಂತಿಕಾರಕ ಅಧಿಕಾರವನ್ನಪೇಕ್ಷಿಸುತ್ತೇನೆ.

ರಾಣಿ—ನಾನು ನಿನ್ನನ್ನು ಈಕ್ಷಣವೇ ಖುಲಾಸೆ ಮಾಡಿದರೆ ನೀನೆಲ್ಲಿಗೆ ಹೋಗುವೆ?

ಸಾಗರ್—ಸರ್ಕಾರ್, ಝಾನ್ಸಿಗೆ.

ರಾಣಿ—ನೀನು ಯಾವುದಕ್ಕೆ ಎಲ್ಲಕ್ಕೂ ಮಿಗಿಲಾದ ಪೂಜ್ಯತೆ ಕೊಡುತ್ತೀಯೆ?

ಸಾಗರ—ಗಂಗಾಮಾತೆ, ತಮ್ಮ ಪಾದಾರವಿಂದ ಮತ್ತು ನನ್ನ ಕತ್ತಿ ಇವುಗಳಿಗೆ.

ರಾಣಿ—ನಾನು ನಿನ್ನನ್ನು ಕ್ಷಮಿಸಿ ಬಿಟ್ಟುಬಿಡುತ್ತೇನೆ. ಇವುಗಳ ಮೇಲೆ ಆಣೆಯಿಟ್ಟು ಶಪಥಮಾಡಿ ನಿನ್ನ ಸಂಗಡಿಗರೊಂದಿಗೆ ಝಾನ್ಸಿಯ ಸೇನೆಯಲ್ಲಿ ಭರ್ತಿ ಮಾಡಿಕೊ, ಹೋಗು.

ಸಾಗರಸಿಂಹನು ಶಪಥಮಾಡಿದನು. ರಾಣಿಯು ಅವನನ್ನು ಬಿಡುಗಡೆ ಮಾಡಿದಳು. ಅವನು ಅವಳ ಪಾದವನ್ನು ಮುಟ್ಟಿ ನಮಸ್ಕರಿಸಿ, ಕೈಮುಗಿದು "ಸರ್ಕಾರ್, ನಾನು ಮೊದಲು ಝಾನ್ಸಿಗೆ ಹೋಗಿ ಅಲ್ಲಿನ ಸೇನೆಯಲ್ಲಿ ಭರ್ತಿಯಾಗಿ ಮನೆಗೆ ಹಿಂದಿರುಗುತ್ತೇನೆ. "ನಂತರ ನನ್ನ ಸಂಗಡಿಗರ ಗುಂಪನ್ನು ಝಾನ್ಸಿಗೆ ಕರೆತಂದು ಅವರೆಲ್ಲರನ್ನೂ ಸೇನೆಯಲ್ಲಿ ಸೇರಿಸುತ್ತೇನೆ" ಎಂದು ಹೇಳಿದನು.

ರಾಣಿ—ಹಾಗಾಗಲಾರದು ಸಾಗರಸಿಂಹ. ನಿನ್ನ ಸಂಗಡಿಗರೆಲ್ಲರೂ ಬಂದು ನನ್ನ ಮುಂದೆ ಶಪಥಮಾಡಿ ಹೋಗುವವರೆಗೂ ನಾನು ಬರವಾಸಾಗರವನ್ನು ಬಿಡುವುದಿಲ್ಲ. ಅವರು ಶಪಥಮಾಡದಿದ್ದರೆ ಅವರನ್ನು ಬಂಧಿಸಿ ತಕ್ಕ ಶಿಕ್ಷೆಯನ್ನು ಕೊಡುತ್ತೇನೆ.

"ನಾನು ನಿಮ್ಮೆದುರಿಗೆ ಅವರೆಲ್ಲರನ್ನೂ ಹಾಜರು ಮಾಡದಿದ್ದರೆ ನನ್ನ ಹೆಸರು ಕುಮಾರ ಸಾಗರಸಿಂಹನೆಂದಲ್ಲ" ಎಂದು ಸಾಗರಸಿಂಹನು ಜಂಭದಿಂದ ಹೇಳಿದನು.

ಕಣ್ಣುಗಳಲ್ಲಿ ಲಜ್ಜೆಯು ಭಾಸವಾಗುತ್ತಿದ್ದಿತು.

ರಾಣಿಯು ಹುಸಿನಗು ನಕ್ಕು ಯೋಚಿಸಿದಳು.

"ನಿನ್ನನ್ನು ಕುಮಾರನೆಂದು ಸಂಬೋಧಿಸುವ ಮೊದಲು ನನ್ನಲ್ಲಿ ಇನ್ನೊಬ್ಬ ಸಾಮಂತನು ಆ ಪದವಿಯನ್ನು ಹೊಂದಲು ಅರ್ಹನಿರುವನು. ಅವನೇ ನಿನ್ನನ್ನು

ಒಡಿಯಲು ನಿನ್ನ ಮನೆಯನ್ನು ಹೊಕ್ಕನು. ಆಗ ನೀನು ಅವನನ್ನು ಗಾಯ ಪಡಿಸಿದೆ" ಎಂದು ರಾಣಿಯು ಹೇಳಿದಳು.

ಸಾಗರಸಿಂಹನು "ಸರ್ಕಾರ್, ಅಂದು ನಾನು ಅವನನ್ನು ಗಾಯಗೊಳಿಸದಿದ್ದರೆ ನಾನು ಬದುಕಲು ಬೇರೇ ಮಾರ್ಗವೇ ಇರಲಿಲ್ಲ" ಎಂದು ಉತ್ತರವಿತ್ತನು.

ರಾಣಿ ಆತನು ಇಲ್ಲಿಯೇ ಅಸ್ವಸ್ಥನಾಗಿರುವನು.

ಸಾಗರ—ನಾನು ಅವನನ್ನು ಸಂದರ್ಶಿಸಿ ಕ್ಷಮಾಪಣೆಯನ್ನು ಯಾಚಿಸಲಿಚ್ಛಿಸುವೆನು.

ರಾಣಿಯು ಖುದಾಬಕ್ಷನ ಕ್ಷೇಮ ಸಮಾಚಾರವನ್ನು ವಿಚಾರಿಸಿದಳು. ಆಗ ಆತನೇ ಒಬ್ಬ ಸಿಪಾಯಿಯ ಸಹಾಯದಿಂದ ರಾಣಿಯ ಬಳಿಗೆ ಬಂದನು. ಸಾಗರಸಿಂಹನು ಅವನಿಗೆ ಅಭಿವಾದನ ಮಾಡಿದನು.

ರಾಣಿಯು "ಖುದಾಬಕ್ಷ, ಈಗ ಹೇಗಿರುವೆ ?" ಎಂದು ಕೇಳಿದಳು.

ಖುದಾಬಕ್ಷನು "ತಮ್ಮಂಥ ದೊಡ್ಡವರ ರಕ್ಷಣೆಯಲ್ಲಿರುವಾಗ ಪರಿಸ್ಥಿತಿಯು ಕುಂದುವುದೇ ಇಲ್ಲ. ನಿಮ್ಮ ವಿಜಯಪತಾಕೆಯನ್ನು ಕೇಳಿದೊಡನೆಯೇ ನನ್ನ ಎಲ್ಲಾ ನೋವು, ದುಃಖಗಳೂ ಸ್ವಪ್ನವಾದಂತೆ ಮಾಯವಾದವು." ಎಂದು ಉತ್ತರಿಸಿದನು.

ರಾಣಿಯು "ನಾನು ಅಪರಾಧಿಯನ್ನು ಬಿಡುಗಡೆ ಮಾಡಿದ ಸಮಾಚಾರವನ್ನು ನೀನು ಕೇಳಿರಬಹುದಲ್ಲವೆ ?" ಎಂದು ಕೇಳಿದಳು.

ಖುದಾಬಕ್ಷನು "ನಾನು ಮಹಾರಾಣಿಯವರ ಕ್ಷಮಾಶೀಲತೆಯ ವಿಚಾರವನ್ನೆಲ್ಲಾ ಕೇಳಿದೆ" ಎಂದು ಉತ್ತರವಿತ್ತನು.

ರಾಣಿ—ಇಂದಿನಿಂದ ನಿನ್ನನ್ನು ಕುಮಾರ ಖುದಾಬಕ್ಷನೆಂದು ಸಂಬೋಧಿಸಲಾಗುವುದು. ಈತನನ್ನು ಕುಮಾರ ಸಾಗರಸಿಂಹನೆಂದು ಕರೆಯುವೆನು. ಇನ್ನುಮುಂದೆ ಯಾರ್ಯಾರು ಶೌರ್ಯ, ವೀರ್ಯ, ಪರಾಕ್ರಮ ಕಾರ್ಯಗಳನ್ನು ಸಾಧಿಸುವರೋ ಅವರೆಲ್ಲರನ್ನೂ ಕುಮಾರರೆಂದು ಕರೆಯಲಾಗಿ, ಅವರ ವರ್ಗವನ್ನು ಕುಮಾರಮಂಡಳಿಯೆಂಬ ಹೆಸರಿನಿಂದ ರಾಜ್ಯದ ಎಲ್ಲಾ ಕಾಗದಪತ್ರಗಳಲ್ಲಿಯು ಸಂಬೋಧಿಸಲಾಗುವುದು.

ಖುದಾಬಕ್ಷ ಗದ್ಗದಿತನಾಗಿ "ಸರ್ಕಾರ್, ತಮ್ಮ ಚರಣಸೇವೆಯಲ್ಲಿ ಎಂದು ನಮ್ಮೆಲ್ಲರ ಶಿರವು ಚೆಂಡಾಡುವುದೋ ಅಂದು ಕುಮಾರಮಂಡಳಿಯ ಹೆಸರು ಸಾರ್ಥಕ, ನಿಜ್ಯವಾಗುವುದು" ಎಂದು ರಾಣಿಯ ಚರಣಸ್ಪರ್ಶ ಮಾಡುತ್ತಾ ಹೇಳಿದನು.

ರಾಣಿಯು "ಕುಮಾರ ಖುದಾಬಕ್ಷನೇ, ಈಗ ಹೋಗಿ ವಿಶ್ರಾಂತಿಹೊಂದು" ಎಂದ ಹೇಳಿದಳು.

"ಈಗ ಮಾತೆಯ ಆಶೀರ್ವಾದವು ದೊರಕಿತು. ಇನ್ನು ಮೇಲೆ ವಿಶ್ರಾಂತಿಗೇನು ಕಡಿಮೆ ?"

ರಾಣಿಯು "ಸಾಗರಸಿಂಹ, ನಿನ್ನ ಹೆಸರನ್ನು ಇನ್ನು ಮುಂದೆ ನಮ್ಮ ಕಾಗದ ಪತ್ರಗಳಲ್ಲಿ 'ಕುಮಾರ ಸಾಗರಸಿಂಹ'ನೆಂದು ಸಂಬೋಧಿಸಲಾಗುವುದು. ಆದರೆ ನನಗೆ ಕುಮಾರ್, ರಾವ್, ದಿವಾನ್ ಇತ್ಯಾದಿಗಳನ್ನು ಬಾರಿಬಾರಿಗೆ ಸೇರಿಸಿಕೊಂಡು ಮಾತ ನಾಡಲು ಅಡಚಣೆಯಾಗುವುದು. ಆದ್ದರಿಂದ ಸಾಗರಸಿಂಹನೆಂದು ಕರೆದರೆ ನಿನಗೇನೂ ಅಸಮಾಧಾನವಿಲ್ಲವಲ್ಲ" ಎಂದು ಕೇಳಿದಳು.

ಸಾಗರಸಿಂಹನ ಕಂಠವು ಈ ಮಾತುಗಳನ್ನು ಕೇಳಿ ರುದ್ಧಿತವಾಯಿತು. ಇಷ್ಟು ದಿನವೂ ದರೋಡೆ, ಢಕಾಯಿತಕಾರ್ಯಗಳಲ್ಲಿ ಉದ್ಯುಕ್ತನಾಗಿದ್ದ ತನ್ನಲ್ಲಿಯೂ ಸ್ವಲ್ಪ ಪವಿತ್ರತೆ ಇದೆ ಎಂಬುದು ಅವನಿಗೆ ಆಗ ಭಾಸವಾಯಿತು.

ಸಾಗರಸಿಂಹನು ಕೈಮುಗಿದುಕೊಂಡು "ಎಂದಿಗೂ ಇಲ್ಲ ಸರ್ಕಾರ್. ನನ್ನನ್ನು ನನ್ನ ಅರ್ಧ ಹೆಸರಿನಿಂದಲೇ ಸಂಬೋಧಿಸಿದರೆ ಬಹಳವಾಯಿತು. ನನ್ನನ್ನು ಕ್ಷಮಿಸಿ" ಎಂದನು.

ಕುಮಾರ್ ರಘುನಾಥಸಿಂಹನು "ನಾವು ಕುಮಾರ ಪದವಿಯನ್ನು ಸಂಪೂರ್ಣ ವಾಗಿ ಗಳಿಸಿದನಂತರ ನಮ್ಮನ್ನು ಅರ್ಧಹೆಸರಿನಿಂದಲೇ ಸಂಬೋಧಿಸಲಾಗುವುದು" ಎಂದನು.

## ೫೭

ರಾಣಿಯು ಬರವಾಸಾಗರದಲ್ಲಿ ಪೂರಾ ಹದಿನೈದು ದಿವಸಗಳು ತಂಗಿದ್ದಳು. ಸಾಗರಸಿಂಹನ ಸಹಚರರೆಲ್ಲರೂ ತಮ್ಮ ಆಯುಧಗಳನ್ನು ಒಪ್ಪಿಸಿ ರಾಣಿಗೆ ಶರಣಾಗತ ರಾಗಿ ಅವಳ ಸೇನೆಯಲ್ಲಿ ಸೇರಿಕೊಂಡರು. ಅಂದಿನಿಂದಲೇ ಖುದಾಬಕ್ಷನು ಉತ್ತಮ ಗೊಳ್ಳುತ್ತಾ ಈಗ ಸಂಪೂರ್ಣಗುಣ ಹೊಂದಿದನು. ರಾಣಿಯು ಸೈನ್ಯ ಸಮೇತಳಾಗಿ ಝಾನ್ಸಿಗೆ ಹಿಂದಿರುಗಿದಳು. ಅವಳ ಪರಾಕ್ರಮದ ಹೆಮ್ಮೆಯಿಂದ ಪ್ರಜೆಗಳ ಎದೆ ಉಬ್ಬಿತು.

ನವಾಬ್ ಆಲೀ ಬಹದ್ದೂರನು ರಾಣಿಯನ್ನು ಅಭಿನಂದಿಸಲು ಬಂದು ವೀಳ್ಯ ವನ್ನು ಸ್ವೀಕರಿಸಿ ಹೊರಟುಹೋದನು. ಮೋತೀಬಾಯಿಗಾದರೋ ಆ ಅಭಿನಂದ ನೆಯು ಹೃತ್ಪೂರ್ವಕವಾದುದೆಂದು ತೋರಲಿಲ್ಲ.

ಆಲಿಬಹದ್ದೂರನೂ ಮತ್ತು ಪೀರ್ಆಲಿಯೂ ಒಬ್ಬರಿಗೊಬ್ಬರು ಸಲಹೆಮಾಡಿ ಕೊಂಡರು.

ಆಲೀ—ಪೀರಾಲಿ, ಝಾನ್ಸಿಯ ಬಂದೀಖಾನೆಯಿಂದ ತಪ್ಪಿಸಿಕೊಂಡು ಓಡಿ ಹೋಗಿದ್ದ ಸಾಗರಸಿಂಹನೇ ಇವನು. ರಾಣಿಯು ಇವನನ್ನೂ ಮತ್ತು ಇವನ ಸಹ

ಚರರಾದ ಇತರ ಥಕಾಯಿತರನ್ನೂ ಸೈನ್ಯದಲ್ಲಿ ಸೇರಿಸಿಕೊಂಡಿರುವಳು. ಇವೆಲ್ಲವೂ ಆಂಗ್ಲೇಯ ಸರ್ಕಾರಕ್ಕೆ ವಿರುದ್ಧ ವರ್ತನೆಯ ಪ್ರತ್ಯಕ್ಷಪ್ರಮಾಣಗಳು.

ಪೀರಾಲಿ--ಹುಜೂರ್, ಇಷ್ಟೇ ಅಲ್ಲದೆ ಆಕೆಯ ಹಳೆಯ ಮತ್ತು ಹೊಸ ನೌಕರರು ರಾಣಿಯು ನವಾಬ್ ಗೌರ್‍ನರ್ ಜನರಲ್ ಸಾಹೇಬರ ಪರವಾಗಿ, ರಾಜ್ಯವನ್ನು —ತಾನು ಕೇವಲ ನಿಮಿತ್ತಮಾತ್ರಕ್ಕಿದ್ದು—ಆಳುತ್ತಿರುವಳೆಂದು, ಆಂಗ್ಲೇಯರನ್ನು ಮೋಸಪಡಿಸಲು ಪ್ರಯತ್ನಿಸುತ್ತಿರುವರು.

ಆಲೀ—ಹೇಗಾದರೂ ಮಾಡಿ ನಿಜಸ್ಥಿತಿಯನ್ನು ಜಬ್ಬಲ್‌ಪುರಕ್ಕೆ ತಲಪಿಸಲೇ ಬೇಕು.

ಪೀರಾಲಿ—ಹುಜೂರ್, ತಮ್ಮ ಅಪ್ಪಣೆಯಾದರೆ ನಾನು ಹೋಗಲು ಸಿದ್ಧನಿರುವೆನು. ಆದರೆ ನಾನು ಹೋದರೆ ಶಂಕೆಗೆ ಆಸ್ಪದವಾಗದು.

ಆಲೀ—ಮಾಲಿನ ಪಕ್ಷದ ಶಾಸನಾಧಿಕಾರಿಗಳು ರಾಣಿಯ ನಡತೆಯ ಬಗ್ಗೆಕೋಪಗೊಂಡಿದ್ದಾರೆ. ಅವರು ಈ ಕೆಲಸವನ್ನು ಕೈಗೊಳ್ಳಲು ಸಿದ್ಧರಾಗಿರುವರು. ಒಂದು ವೇಳೆ ಅವರು ಹೋಗುವುದಾದರೆ ಅವರ ಖರ್ಚುವೆಚ್ಚಗಳನ್ನು ನಾನು ನೋಡಿಕೊಳ್ಳುತ್ತೇನೆ.

ಪೀರಾಲಿ—ಅವರು ಈ ಕೆಲಸಕ್ಕೆ ಒಪ್ಪುತ್ತಾರೆಂದು ನಾನು ಹೇಳಬಲ್ಲೆ. ಅವರನ್ನು ಟೀಕಮುಗಡದ ಮೂಲಕ ರವಾನಿಸಬೇಕು. ಅಲ್ಲಿ ಅವರು ದಿವಾನ ನತ್ಥೆಖಾನನಿಂದ ಒಂದು ಪತ್ರವನ್ನೂ ಮತ್ತು—ರಸ್ತೆಯು ಸುರಕ್ಷಿತವಲ್ಲದ್ದರಿಂದ—ಜನರ ಸಹಾಯವನ್ನೂ ಪಡೆದು ಹೋಗುವರು.

ಆಲೀ—ನೀನು ಹೇಳಿದುದು ಯುಕ್ತವೇ ಸರಿ. ಝಾನ್ಸಿಯಲ್ಲಿ ರಾಣಿಯ ವಿರುದ್ಧಪಕ್ಷದವರು ಎಷ್ಟು ಜನರಿದ್ದಾರೆಂಬುದನ್ನು ಪತ್ತೆಹಚ್ಚಬೇಕು.

ಪೀರಾಲಿ—ವಿರುದ್ಧಪಕ್ಷದವರು ಇವರೇ ಎಂದು ಹೆಸರು ಹಿಡಿದು ಹೇಳಲಾಗುವುದಿಲ್ಲ. ಆದರೆ ನಗರದ ಸ್ತ್ರೀಯರಿಗೆ ಇಷ್ಟು ಸ್ವಾತಂತ್ರ್ಯವನ್ನು ಕೊಟ್ಟಿರುವುದು ಅನೇಕರಿಗೆ ಮನಃಕ್ಲೇಶವನ್ನೇನೋ ಉಂಟುಮಾಡಿದೆ.

ಆಲೀ—ರಾಣಿಯ ಎದುರಾಳಿಗಳು ಬಹುಮಂದಿ ಇರಬಹುದು. ಆದರೆ ನಿನಗೆ ಅವರು ರಾಣಿಯ ಪಕ್ಷಪಾತಿಗಳೆಂದು ಭಾವನೆಯುಂಟಾಗಿರುವುದರಿಂದ ಅವರು ನಿನಗೆ ತಮ್ಮ ಮನವನ್ನು ವ್ಯಕ್ತಪಡಿಸುವುದಿಲ್ಲ.

ಪೀರಾಲಿ—ಹೀಗಿದ್ದ ಪಕ್ಷದಲ್ಲಿ ರಾಣಿಯ ವೈರಿಗಳೆಂದು ಗಣಿಸಲ್ಪಡುವುದರಲ್ಲಿ ಹಲವು ಕೆಲವರಾದರೂ ತಮ್ಮ ಬಳಿಗೆ ಖಂಡಿತವಾಗಿ ಬರುವರು.

ಆಲೀ—ಇರಬಹುದು. ಸಂಭವವಿದೆ. ಕಡೆಯಪಕ್ಷ ಆಂಗ್ಲೇಯ ಶಾಸನಾಧಿಕಾರಿಗಳು ಮುಂತಾದವರು ರಾಣಿಗೆ ವಿರೋಧಿಗಳಾಗಿರುವರು.

ನವಾಬ್ ಅಲೀಬಹದ್ದೂರನು ಶಾಸನಾಧಿಕಾರಿಗಳನ್ನು ಈ ಕೆಲಸಕ್ಕೆ ಒಪ್ಪಿಸಿ ತನ್ನ ಕಾಗದ ಒಂದನ್ನು ಅವರ ಕೈಗಿತ್ತನು. ಅವರು ಮೊದಲು ಟೀಕಮುಗಡಕ್ಕೆ ಹೋಗಿ ಅಲ್ಲಿಂದ ಜನಸಹಾಯ ಮತ್ತು ಹಣವನ್ನು ಶೇಖರಿಸಿಕೊಂಡರು. ದಿವಾ‍ನತ್ಥೇಖಾನನಿಗೆ ಅಲೀಬಹದ್ದೂರನ ಸಂಚು ಬಹಳ ಒಪ್ಪಿತು. ಆತನು ಅಲೀಬಹದ್ದೂರನ ಬಳಿಗೆ ನಂಬಿಕೆಗೆ ಅರ್ಹನಾದ ತನ್ನ ಆಪ್ತ ಭೃತ್ಯನನ್ನು ಕಳುಹಿಸಿದನು. ಅವನ ಮೂಲಕ ಪರಸ್ಪರ ಸಹಾಯವೆಸಗುವ ಒಪ್ಪಂದವೇರ್ಪಟ್ಟಿತು. ಅಲೀಬಹದ್ದೂರನಿಗೆ ನತ್ಥೇಖಾನನು ಎಂದಾದರೊಂದು ದಿನ ಝಾನ್ಸಿಯ ಮೇಲೆ ಆಕ್ರಮಣ ಮಾಡುವನೆಂದು ನಂಬಿಕೆಯುಂಟಾಯಿತು. ಅವನು ಆ ಸುದಿನವನ್ನು ಎದುರು ನೋಡಲಾರಂಭಿಸಿದನು.

ಓರ್ಛಾದಲ್ಲಿ ರಾಜಾ ಭಾರತೀಚಂದನಿಗೆ ಮೊದಲು ಸ೯ ೧೭೭೬ ರಲ್ಲಿ ರಾಜಾ ವಿಕ್ರಮಾಜೀತನೆಂಬುವವನಿದ್ದನು. ರಾಜ್ಯದಲ್ಲಿ ಹೀನಾವಸ್ಥೆಯುಂಟಾಗಿದ್ದಿತು. ರಾಜನ ಬಳಿ ಕೇವಲ ೫೦ ಮಂದಿ ಸೈನಿಕರು, ಒಂದು ಆನೆ ಮತ್ತು ಎರಡು ಕುದುರೆಗಳು ಮಾತ್ರ ಉಳಿದಿದ್ದವು. ಆರೇಳು ವರ್ಷಗಳೊಳಗಾಗಿ ಪುನಃ ಆತನು ತನ್ನ ರಾಜ್ಯವನ್ನು ಉತ್ತಮಗೊಳಿಸಿ, ವಿಸ್ತರಿಸಿ, ಟೀಕಮುಗಡವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಸ೯ ೧೮೧೨ ರಲ್ಲಿ ಆಂಗ್ಲೇಯರೊಂದಿಗೆ ಸಂಧಿ ಮಾಡಿಕೊಂಡನು. ಈತನು ತಾನು ಜೀವಂತನಾಗಿರುವಾಗಲೇ ತನ್ನ ರಾಜ್ಯವನ್ನು ಮಗ ಧರ್ಮಪಾಲನಿಗೆ ಕೊಟ್ಟನು. ಆದರೆ ಆತನು ವೃದ್ಧನಾಗಿದ್ದುದರಿಂದ ಶೀಘ್ರದಲ್ಲಿಯೇ ಮರಣ ಹೊಂದಿದನು. ನಂತರ ಆತನ ತಮ್ಮ ಏಳು ವರ್ಷಗಳ ಕಾಲ ರಾಜ್ಯವಾಳಿದನು. ಸ೯ ೧೮೪೧ ರಲ್ಲಿ ಗಾದಿಯು ಉತ್ತರಾಧಿಕಾರಿಯಿಲ್ಲದೇ ಖಾಲಿಯಾಗಿದ್ದಿತು. ಧರ್ಮಪಾಲನ ವಿಧವೆ, ರಾಣಿ ಲಡಯಿ ಗಾದಿಗೆ ವಾರಸ್ಸುದಾರಳಾಗಿ ನಿಂತಳು. ಧರ್ಮಪಾಲನ ಸಹೋದರನಿಗೆ ಸುಜಾತಸಿಂಹನೆಂಬ ಪುತ್ರನಿದ್ದನು. ಈತನಿಗೂ ರಾಣಿ ಲಡಯಿಗೂ ವೈಮನಸ್ಯವೇರ್ಪಟ್ಟು ಆತನು ಝಾನ್ಸಿಗೆ ಹೋದನು. ಅವನಿಗೆ ಗಂಗಾಧರರಾಯನು ರಾಜಾ ರಘುನಾಥ ರಾಯನ, ಹೊಸಬಸ್ತಿಯಲ್ಲಿದ್ದ ಮಹಲ್ಲಿನಲ್ಲಿ ಇಳಿದುಕೊಳ್ಳಲು ಸ್ಥಾನವೇರ್ಪಡಿಸಿದನು. ಈ ಪ್ರಯುಕ್ತ ತನ್ನ ವಸತಿಯನ್ನು ತೊರೆಯಬೇಕಾಗಿಬಂದು ಆಲೀಬಹದ್ದೂರನಿಗೆ ಝಾನ್ಸಿರಾಜನ ಮೇಲಿನ ಕ್ರೋಧವು ಮತ್ತೂ ವರ್ಧಿಸಿತು. ಸುಜಾತಸಿಂಹನ ಮರಣಾನಂತರ ೧೮೫೪ ರಲ್ಲಿ ರಾಣಿ ಲಡಯಿಗೆ ದತ್ತು ಸ್ವೀಕಾರಮಾಡಲು ಅನುಮತಿ ದೊರಕಿ-ಅವಳು ಹಮೀರಸಿಂಹನೆಂಬುವನೊಬ್ಬನನ್ನು ದತ್ತು ಸ್ವೀಕಾರ ಮಾಡಿದಳು. ಸ೯ ೧೮೫೭ ರ ವಿಪ್ಲವದಲ್ಲಿ ರಾಣಿ ಲಡಯಿಯು ಹಮೀರಸಿಂಹನ ರಕ್ಷಕಳಾಗಿದ್ದು ನತ್ಥೇಖಾನನು ಮಂತ್ರಿಯಾಗಿದ್ದನು. ಕೆಲವು ಆಂಗ್ಲೇಯರು ಟೀಕಮುಗಡಕ್ಕೆ ಆಶ್ರಯಕ್ಕಾಗಿ ಧಾವಿಸಿ ಬಂದರು. ಅವರಿಗೆ ಆಶ್ರಯ ಕೊಡಲಾಯಿತು.

ಇವರ ಸಲಹೆಯಂತೆ ಆಲೀಬಹದ್ದೂರನ ಪತ್ರವನ್ನು ಜಬಲ್ಪುರಕ್ಕೆ ಕಳುಹಿಸಲಾಯಿತು. ಮತ್ತು ಒಬ್ಬ ಆಪ್ತ ದೂತನ ಮೂಲಕ ಆಲೀಬಹದ್ದೂರನಿಗೆ "ಝಾನ್ಸಿಯಲ್ಲಿ ನಮಗೆ ಅನುಕೂಲವಾದಂತಹ ಒಂದು ಗುಂಪನ್ನು ಏರ್ಪಡಿಸಿ; ಒಂದೆರಡು ಸಂಘರ್ಷಣೆಗಳು ಏರ್ಪಟ್ಟರೂ ಉತ್ತಮವೆ. ನಾವು ತಕ್ಕ ಸಮಯಕ್ಕೆ ಸರಿಯಾಗಿ ಸಸೈನ್ಯರಾಗಿ ಬಂದು ಸೇರುತ್ತೇವೆ" ಎಂದು ಹೇಳಿ ಕಳುಹಿಸಿ ನತ್ಥೆಖಾನನು ಸಿದ್ಧತೆಗಳನ್ನು ಮಾಡತೊಡಗಿದನು.

ಆಲೀಬಹದ್ದೂರನಿಗೆ ಬಹಳ ಸಂತೋಷವಾಯಿತು. ಮೊಹರಮ್ ಹಬ್ಬವು ಬರುವುದರಲ್ಲಿದ್ದಿತು. ಸದವಕಾಶಕ್ಕೇನೂ ಕೊರತೆಯಿರಲಿಲ್ಲ. ಜೋರಾಗಿ ಮಳೆಗರೆದು ನಿಂತಿದ್ದಿತು. ಮೋಡವು ಚದುರಿದ್ದಿತು. ದಿನವೆಲ್ಲಾ ಚುರುಕಾದ ಬಿಸಿಲು, ರಾತ್ರಿಯಲ್ಲಿ ನಿರ್ಮಲಾಕಾಶದಲ್ಲಿ ಮಿನುಗುವ ತಾರೆಗಳು. ಮತ್ತು ಶೀತಲವಾದ ಗಾಳಿ ಬೀಸುತ್ತಿದ್ದಿತು. ಹಗಲೆಲ್ಲಾ ಪರಿಶ್ರಮಗೊಂಡ ಜನರು ಸಂಧ್ಯಾಕಾಲದಲ್ಲಿ ಆಮೋದ ಪ್ರಮೋದಗಳಲ್ಲಿ ನಿರತರಾಗಿ ರಾತ್ರಿಯಲ್ಲಿ ಗಾಢ ನಿದ್ರಾಪರವಶರಾಗುತ್ತಿದ್ದರು.

ಈ ಶಾಂತತೆಯ ಅಡಿಯಲ್ಲಿ ಜ್ವಾಲಾಮುಖಿಯೊಂದು ಹೊಗೆಯಾಡುತ್ತಿದ್ದುದು ಜನರಿಗೆ ಅರಿವಿರಲಿಲ್ಲ.

ಒಂದಾನೊಂದು ಕಾಲದಲ್ಲಿ, ಹಿಂದೂರಿಯಾಸತಿಗಳಲ್ಲಿ, ಶಿಯಾ ಪಂಗಡದ ಮುಸಲ್ಮಾನರನೇಕರು ಬಂದು ನೆಲೆಸಿದ್ದರು. ಕೆಲವರು ನೌಕರರಾಗಿಯೂ ಕೆಲವರು ಶಿಲ್ಪಿಗಳಾಗಿಯೂ, ಹಕೀಮರಾಗಿಯೂ ಅನೇಕ ಉದ್ಯೋಗಗಳನ್ನು ಅವಲಂಬಿಸಿ ಉದರ ಪೋಷಣೆ ಮಾಡಿಕೊಳ್ಳುತ್ತಿದ್ದರು. ಆದರೆ ಸುನ್ನಿ ಪಂಗಡದ ಮುಸಲ್ಮಾನರ ಸಂಖ್ಯೆಯು ಅಧಿಕವಾಗಿದ್ದಿತು. ಇವರಲ್ಲಿಯೂ ವು ನಾ ವ್ ಹೆಬ್ಬಾಗಿಲಿನ ಕಡೆ ಮೇವಾತಿಗಳೂ ಮತ್ತು ಬಡಗಾಂವ್ ಹೆಬ್ಬಾಗಿಲಿನ ಬಳಿ ಪಠಾಣರೂ ಇದ್ದರು. ಈ ಮೊಹಲ್ಲೆಗಳಲ್ಲಿ ಕೇ ವ ಲ ಮುಸಲ್ಮಾನರೇ ಅಲ್ಲದೆ ಮರಾಠರೂ, ಠಾಕೂರರೂ, ಗಾಣಿಗರೂ, ಮುಂತಾದ ಹಿಂದೂಗಳು ಮಧ್ಯೆ ಮಧ್ಯೆ ವಾಸಿಸುತ್ತಿದ್ದರು. ಬಡೇಗಾಂವ್ ಹೆಬ್ಬಾಗಿಲು ಮಸೀದಿಯಾಗಿದ್ದಿತು. ಮತ್ತು ಸ್ವಲ್ಪದೂರದಲ್ಲಿ ಕೃಷ್ಣನ (ಬಿಹಾರಿಜಿ) ಮಂದಿರವಿದ್ದಿತು. ಹಿಂದೂ ಮುಸಲ್ಮಾನರೀರ್ವರೂ ತಮ್ಮ ತಮ್ಮ ಮತಾನುಸಾರ ಹಬ್ಬ ಹರಿದಿನಗಳನ್ನು ಆಚರಿಸುತ್ತಿದ್ದರು. ಎಂದೂ, ಯಾವ ಜಗಳವೂ, ಮನಸ್ತಾಪವೂ, ಉದ್ಭವಿಸಿರಲಿಲ್ಲ.

ಆ ವರ್ಷ ದೊಡ್ಡ ಏಕಾದಶಿಯೂ ಮತ್ತು ಮೊಹರಮ್ ಎರಡು ಹಬ್ಬಗಳೂ ಒಂದೇ ದಿನ—ಸೋಮವಾರದಂದು—ಬಂದವು. ಸುನ್ನೀ ಮುಸಲ್ಮಾನರು ಎಂಟು ಹತ್ತು ದಿವಸಗಳಿಗೆ ಮುಂಚೆಯೇ ತಾಜಿಯಾಗಳನ್ನು ತಯಾರಿಸಲು ತೊಡಗಿದರು. ಈ ವರ್ಷ, ತಮ್ಮ ಝಾನ್ಸಿಯು ಸ್ವತಂತ್ರವಾಗಿ ಅವರ ರಾಣಿಯು ರಾಜ್ಯವಾಳುತ್ತಿದ್ದುದ

ರಿಂದ, ಉತ್ಸಾಹ ಪೂರಿತರಾಗಿ ತಾಜಿಯಾಗಳನ್ನು ಇನ್ನೂ ಅಧಿಕ ವಿಜೃಂಭಣೆಯಿಂದ ಮೆರವಣಿಗೆ ಮಾಡಬೇಕೆಂದಿದ್ದರು. ಮಂದಿರಗಳಲ್ಲಿಯೂ ಕೂಡ ಜನರು ನೃತ್ಯ ಗೀತ ಗಳೊಂದಿಗೆ ಮನೋಲ್ಲಾಸವನ್ನು ವ್ಯಕ್ತಗೊಳಿಸುತ್ತಿದ್ದರು. ಝೂನ್ಸಿಯ ಮಂದಿರ ಗಳಲ್ಲಿ ನಿತ್ಯವೂ ನಡೆಯುವ ದೇವತಾಲಂಕಾರಕ್ಕೆ ಇಂದಿಗೂ ಕೂಡ 'ಘಟಾ' ಎಂದು ಕರೆಯುತ್ತಾರೆ. ಒಂದು ದಿನ ನೀಲಾಂಬರದ ಘಟ, ಒಂದು ದಿನ ಪೀತಾಂಬರದ ಘಟ, ಮತ್ತೊಂದಿನ ಬೇರೊಂದು ರೀತಿಯದು. ಮಂದಿರದಲ್ಲೆಲ್ಲಾ ಒಂದೇ ವರ್ಣದ ವಸ್ತ್ರ ಮತ್ತು ಪುಷ್ಪಗಳ ಅಲಂಕಾರ. ಈ ರೀತಿಯಾದ ಅಲಂಕಾರವೂ ಏಕಾದಶಿಯ ವರೆಗೂ ನಡೆಯುತ್ತಿದ್ದಿತು. ಸೋಮವಾರದ ದಿನ ಸಾಯಂಕಾಲದ ತಾಜಿಯಾಗಳನ್ನು ಮುಳುಗಿಸುವ ಸಮಾರಂಭವು ನಡೆಯಬೇಕಾಗಿದ್ದಿತು. ಅದೇ ವೇಳೆಯಲ್ಲಿ ತೆಪ್ಪೋತ್ಸ ವವೂ ಆಗಬೇಕಾಗಿದ್ದಿತು. ಈ ಎರಡು ಮತದವರಲ್ಲಿಯೂ ಐಕಮತ್ಯವಿದ್ದಿದ್ದೇ ಆದರೆ ಸಂತೋಷ ಸ್ನೇಹಭಾವಗಳು ಉಕ್ಕಿ ಹರಿಯುವುವು. ಹಾಗಿಲ್ಲದೆ ವಿರಸವೇರ್ಪ ಟ್ಟರೆ ಒಂದು ಹೆಜ್ಜೆಯನ್ನೂ ಮುಂದಿಡಲು ಅಸಾಧ್ಯ.

ಮೋತೀಬಾಯಿ ಮತ್ತು ಜೂಹಿಯು ದಿವಾಲಿ ಹಬ್ಬವನ್ನು ಆಚರಿಸುತ್ತಿ ದ್ದಂತೆಯೆ ತಾಜಿಯಾ ದಾರಿಯನ್ನೂ ಆಚರಿಸುತ್ತಿದ್ದರು. ಈ ಮೊಹರಮ್ ಹಬ್ಬದ ವೇಳೆಯಲ್ಲಿಯೇ ರಾಣಿಯು ಮುರಳೀಮನೋಹರನ ದರ್ಶನಕ್ಕೆ ಹೋಗುವ ಕಾಲಕ್ಕೆ ಸರಿಯಾಗಿ ಇವರು ಅತ್ಯಂತ ಉತ್ಸಾಹದಿಂದ ಮಂದಿರಕ್ಕೆ ಹೋಗಿ ಭಗವಂತನಿಗೆ ನೃತ್ಯಗೀತಗಳನ್ನು ಸಮರ್ಪಿಸುತ್ತಿದ್ದರು. ಆದರೆ ಇವರು ಯಾವಾಗಲೂ ರಾಣಿ ಯೊಂದಿಗೇ ಇರುತ್ತಿದ್ದುದರಿಂದ ಯಾವ ಮುಸಲ್ಮಾನರೂ ಇದಕ್ಕೆ ಆಕ್ಷೇಪಿಸುತ್ತಿರಲಿಲ್ಲ.

ದುರ್ಗಾಬಾಯಿಯು ಸುನ್ನೀ ಪಂಗಡದ ಮುಸಲ್ಮಾನಳು. ಅವಳೂ ತಾಜಿಯಾ ದಾರಿಯನ್ನು ಆಚರಿಸುತ್ತಿದ್ದಳು. ನರ್ತಿಸುವುದು ಅವಳ ಉದ್ಯೋಗವಾಗಿದ್ದಿತು. ಮಂದಿರಗಳಲ್ಲಿ ನರ್ತಿಸಲು ಅವಳಿಗೆ ಆಹ್ವಾನ ಬಂದಿತು. ಅದರಂತೆಯೇ ಅವಳು ಮಂದಿರಗಳಿಗೆ ಹೋಗಲು ಪ್ರಾರಂಭಿಸಿದಳು. ಕೆಲವು ಮುಸಲ್ಮಾನರಿಗೆ ಇದು ಸರಿ ದೋರಲಿಲ್ಲ. ಅಂತೆಯೇ ಚರ್ಚೆಯು ಪ್ರಾರಂಭವಾಗಿ ಅದರಲ್ಲಿ ಆಲೀಬಹದ್ದೂರನು ಮುಖ್ಯ ಪಾತ್ರವಹಿಸಿದ್ದನು.

ಬೆಳಗಿನ ಜಾವ, ತಂಗಾಳಿ ಬೀಸುತ್ತಿದ್ದಿತು. ಬಿಸಿಲು ಚುರುಕಾಗಿರಲಿಲ್ಲ. ಮಿಠಾಯಿ ಅಂಗಡಿಯವರು ಹೊಸದಾಗಿ ಮಾಡಿದ ಮಿಠಾಯಿಗಳನ್ನು ತಟ್ಟೆಗಳಲ್ಲಿಟ್ಟು ವ್ಯಾಪಾರ ಪ್ರಾರಂಭಿಸಿದ್ದರು. ಮತ್ತೊಂದು ಕಡೆ ಹೂವಾಡಿಗರು ತಮ್ಮ ಗೂಡೆ ಗಳಲ್ಲಿದ್ದಿದ್ದ ಹೂವನ್ನೆಲ್ಲಾ ಮಾರಿ, ಗೂಡೆಗಳನ್ನು ಖಾಲಿ ಮಾಡುವುದರಲ್ಲಿದ್ದರು. ನರ್ತಕಿ ದುರ್ಗಾಬಾಯಿಯು ಮಿಠಾಯಿ ಅಂಗಡಿಯಲ್ಲಿ ಮಿಠಾಯಿಯನ್ನೂ, ಹೂವಾಡಿಗರ ಬಳಿ ಹೂವನ್ನೂ ಕೊಂಡು ಹೊರಟಳು. ಮಾರ್ಗದ ಮಧ್ಯದಲ್ಲಿ ಮಂಡಿ ಉಳುಕಿ

ಕಾಲಿಗೆ ಸ್ವಲ್ಪ ಪೆಟ್ಟಾಯಿತು. ಅದರೊಂದಿಗೆ ಕೈಯ್ಯಲ್ಲಿದ್ದ ಮಿಠಾಯಿ ದೊನ್ನೆಯಿಂದ ಸ್ವಲ್ಪ ಮಿಠಾಯಿಯು ಕೆಳಗೆ ಬಿದ್ದು ಹೋಯಿತು. ಅವಳ ಮುಖವು ವಿದೀರ್ಣವಾಯಿತು. ಬಳಿಯಲ್ಲಿ ಹಾದು ಹೋಗುತ್ತಿದ್ದ ಮನುಷ್ಯನೊಬ್ಬನು ಇದನ್ನು ಕಂಡು ನಕ್ಕನು. ಮತ್ತೊಬ್ಬರ ಕಷ್ಟವು ಅವನಿಗೆ ವಿನೋದವಾಗಿ ತೋರಿತು. ಮತ್ತೂ ಕೆಲವರು ಅವನೊಡನೆ ಸೇರಿ ನಗಲಾರಂಭಿಸಿದರು. ಅದರಲ್ಲೊಬ್ಬನು "ದುರ್ಗಿ, ಕೆಳಗೆ ಬಿದ್ದಿರುವ ಮಿಠಾಯಿಯನ್ನು ತೆಗೆದುಕೊ. ಅದೂ ಒಂದು ಭಂಗಿಯನ್ನು ಪ್ರದರ್ಶಿಸಿದಂತಾಗುವುದು" ಎಂದನು.

ದುರ್ಗಿಯು ನಗುತ್ತಾ "ಅರೆರೆ! ನನಗೋ ಏಟು ಬಿದ್ದಿದೆ. ನೀನು ನಗುತ್ತಿರುವೆಯಲ್ಲಾ?" ಎಂದಳು.

ಅಲ್ಲಿ ನಿಂತಿದ್ದ ಪೀರಾಲಿಯೂ ನಗಲಾರಂಭಿಸಿದನು.

ಪೀರಾಲಿಯು "ಈಗೇನಾಯಿತು ದುರ್ಗಾಬಾಯಿಯವರೇ? ಬಿತ್ತಿದಂತೆ ಬೆಳೆ" ಎಂದನು.

ಮಾತೇನೋ ಅಂತಹ ಗುರುತರವಾದುದಾಗಿರಲಿಲ್ಲ. ಆದರೆ ದುರ್ಗಾಬಾಯಿಗೆ ಅದು ಬಹು ತೀಕ್ಷ್ಣವಾಗಿ ಕಂಡಿತು. ಪೀರಾಲಿಯು ಶಿಯಾ ಪಂಗಡದವನು. ಅವನ ವ್ಯರ್ಥಾಲಾಪದಲ್ಲಿ ದುರ್ಗಾಬಾಯಿಯು ವ್ಯಂಗ್ಯಾರ್ಥವನ್ನು ಕಲ್ಪಿಸಿ "ನೀನು ಯಾರ ಮೊಲೆಹಾಲು ಕುಡಿದು ಉದ್ಧಾರವಾದೆಯೋ ಮಗನೆ! ದೇವರು ಒಂದಲ್ಲ ಒಂದು ದಿನ ನಿನಗೂ ಸರಿಯಾದ ಬುದ್ಧಿಯನ್ನು ಕಲಿಸದೇ ಇರುವುದಿಲ್ಲ. ನೆನಪಿರಲಿ" ಎಂದಳು.

ಪೀರಾಲಿ—ನಿನ್ನಂತಹ ಹೆಂಗಸಿನೊಡನೆ ಮಾತನಾಡಲಿಚ್ಛಿಸುವುದಿಲ್ಲ. ನಿನ್ನ ದಾರಿ ನೋಡಿಕೊಂಡು ಹೋಗು.

ದುರ್ಗಾ—ನೀನೇ ಮಾತನಾಡಿಸಲು ಅಲೆಯುತ್ತಿರುವೆ. ನಾನು ನಿನ್ನಂತಹವರನ್ನು ತುಚ್ಛರನ್ನಾಗಿ ಭಾವಿಸುವೆನು.

ಪೀರಾಲಿ—ಹುಷಾರ್! ಹಲ್ಲು ಹಿಡಿದು ಮಾತನಾಡು. ಹೆಚ್ಚು ಮಾತನಾಡಿದರೆ ನಾಲಿಗೆಯನ್ನು ತುಂಡರಿಸಿ ಎಸೆಯುವೆನು.

ದುರ್ಗಾ—ಬಲಪೌರುಷಗಳನ್ನೆಲ್ಲಾ ಹೆಂಗಸರ ಮೇಲೆ ತೋರಿಸಲು ಬಂದೆಯಾ? ನನ್ನ ನಾಲಿಗೆಯನ್ನು ತುಂಡರಿಸಲು ಬಂದರೆ ನಾನೇನು ಕತ್ತೆ ಕಾಯುತ್ತಿರುವೆನೆ? ಇದು ಯಾರ ರಾಜ್ಯವೆಂದು ನಿನಗೆ ಗೊತ್ತೊ?

ಪೀರಾಲಿಯು ಹಲ್ಲುಮಸೆದನು.

ಅಲ್ಲಿದ್ದ ಎಷ್ಟೋ ಜನರು "ಹೋಗಲಿಬಿಡಿ, ಹೋಗಲಿಬಿಡಿ" ಎಂದರು.

ಈ ದಾವಾಗ್ನಿಯು ಮೇಲೆ ಮಾತ್ರ ಬೂದಿ ಮುಚ್ಚಿಕೊಂಡು ಅಂತರದಲ್ಲಿ ಹೊಗೆಯಾಡುತ್ತಿದ್ದಿತು.

"ಒಬ್ಬ ಸುನ್ನಿ ಸ್ತ್ರೀಯು, ಅದರಲ್ಲಿಯೂ ನರ್ತಕಿ, ವೇಶ್ಯೆ, ಒಬ್ಬ ಶಿಯಾ ಪುರುಷನನ್ನು ಮೊಹರಮ್ ದಿನದಂದು ಧಿಕ್ಕರಿಸಿದಳು !"

ಈ ಒಂದು ಅಲ್ಪ ಸಂಘಟನೆಯು ಶಿಯಾ ಸುನ್ನಿಗಳ ಮಹತ್ತರವಾದ ಜಗಳಕ್ಕೆ ಅಂಕುರವಾಯಿತು.

ಶಿಯಾ ಪಂಗಡದವರು ಮನೆಯಲ್ಲೇ ನಿಶ್ಯಬ್ದವಾಗಿದ್ದು ಮೊಹರಂ ದಿನಗಳಲ್ಲಿ ಶೋಕಸಂತಾಪವನ್ನು ಆಚರಿಸುತ್ತಿದ್ದರು. ಸುನ್ನಿಯವರೂ ಕೂಡ ಇದನ್ನು ಆಚರಿಸುವುದುಂಟು. ಆದರೆ ತಾಜಿಯಾ ಮುಂತಾದವುಗಳನ್ನು ತಯಾರು ಮಾಡಬೇಕೆಂಬ ಯಾವ ಒತ್ತಾಯವೂ ಇರಲಿಲ್ಲ. ಆದರೂ ಕೂಡ ಅವುಗಳನ್ನು ತಯಾರಿಸಿ ವಿಜೃಂಭಣೆಯಿಂದ ಮೆರವಣಿಗೆ ಹೊರಡಿಸುತ್ತಿದ್ದರು.

ರಘುನಾಥರಾಯನ ಕಾಲದಲ್ಲಿ ಶಿಯಾ ಪಂಗಡಸ್ಥನಾದ ಅಲಿಬಹದ್ದೂರನ್ನು ಅತ್ಯಂತ ಪ್ರಭಾವಶಾಲಿಯಾಗಿದ್ದು, ರಾಜಕಾರಣದ ಸಲುವಾಗಿ ಜನರು ತಾಜಿಯಾ ಮೆರವಣಿಗೆಯನ್ನೂ ಯಾವ ವಿಜೃಂಭಣೆಯನ್ನು ನಡೆಸುತ್ತಿರಲ್ಲ. ಅಲೀಬಹದ್ದೂರನ ಪ್ರತಾಪವು ಮುರಿದು ಬಿದ್ದಿತು. ತಾಜಿಯಾಗೆ ಸಂಬಂಧಿಸಿದ ಶಿಷ್ಟಾಚಾರವು ಉಳಿದಿದ್ದಿತು. ಶಿಯಾಜನರು ಹೆಚ್ಚು ಗದ್ದಲವಿಲ್ಲದೆ ತಮ್ಮ ತಾಜಿಯಾಗಳನ್ನು ಕೊಂಡೊಯ್ಯುತ್ತಿದ್ದರು. ಅದೂ ಅಲ್ಲದೆ ಅವರು ಕೊಂಡೊಯ್ಯುವ ಸಮಯವು ಸುನ್ನಿ ಜನರ ತಾಜಿಯಾ ಮೆರವಣಿಗೆಗಳ ಸಮಯಕ್ಕೆ ಬೇರೆಯಾಗಿದ್ದು ಘರ್ಷಣೆಗಳಿಗೆ ಆಸ್ಪದವಿರಲಿಲ್ಲ. ಆದರೆ ಏಕಾದಶಿಯದಿನ ಪುಷ್ಪ ಪಲ್ಲಕ್ಕಿಯು ಹಗಲಿನಲ್ಲಿ ಮೆರವಣಿಗೆ ಹೊರಡಬೇಕಾಗಿದ್ದಿತು. ಶಿಯಾ ಸುನ್ನಿಗಳ ತಾಜಿಯಾಗಳೂ ಹಗಲಿನಲ್ಲೇ ಮೆರವಣಿಗೆ ಹೊರಡಬೇಕಾಗಿದ್ದಿತು. ಮಧ್ಯಾಹ್ನದ ವೇಳೆಗೆ ಈ ಎರಡು ಪಂಗಡಗಳ ತಾಜಿಯಾಗಳ ಮೆರವಣಿಗೆಯೂ ಹೊರಟು ಎರಡು ಗಂಟೆಗೆ ಪುಷ್ಪಪಲ್ಲಕ್ಕಿಯು ಹೊರಡುವುದೆಂಬ ಸಂಭವವಿದ್ದಂತೆ ತೋರಿತು. ಆದರೆ ಶಿಯಾ ಸುನ್ನಿಗಳು ಇದಕ್ಕೆ ಸಮ್ಮತಿಸಿದಂತೆ ತೋರಲಿಲ್ಲ. ದಿವಾನರು ಎರಡು ಪಂಗಡದವರಿಗೂ ಈ ವಿಷಯವನ್ನು ತಿಳಿಯ ಹೇಳಿ ರಾಜೀ ಮಾಡಿಸಲು ಪ್ರಯತ್ನಿಸಿ ವಿಫಲರಾದರು.

ತಾಜಿಯಾದಾರರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾ "ನಮ್ಮ ತಾಜಿಯಾವಿನದು ಮೂರನೆಯ ನಂಬರು. ಮೊದಲನೆಯ ನಂಬರಿನವರು ಮೊದಲು ಹೊರಡಲಿ. ಅವರ ಹಿಂದೆ ಎರಡನೆಯ ನಂಬರಿನವರು ಹೊರಡಲಿ. ನಾವು ಒಡನೆಯೇ ಅವರನ್ನು ಹಿಂಬಾಲಿಸುತ್ತೇವೆ."

"ನಮ್ಮದೇನೋ ಮೊದಲನೆಯ ನಂಬರು. ಆದರೆ ಶಿಯಾ ತಾಜಿಯಾ ಹೊರಟಮೇಲೆಯೇ ನಮ್ಮದು ಹೊರಡುವ ಪದ್ಧತಿ. ನೀವೇನೋ ಒಂಭತ್ತು ಗಂಟೆಯಿಂದಲೇ ತಾಜಿಯಾಗಳನ್ನು ಹೊರಡಿಸಲು ಪ್ರಾರಂಭಿಸಬೇಕೆಂದು ಹೇಳುತ್ತೀರಿ.

ನಾವೂ ಸಿದ್ಧವಾಗಿದ್ದೇವೆ. ಆದರೆ ಶಿಯಾ ಪಂಗಡದವರ ತಾಜಿಯಾವನ್ನು ಮೊದಲು ಹೊರಡಿಸಿ" ಎನ್ನುತ್ತಿದ್ದರು.

ಆದರೆ ಶಿಯಾ ಪಂಗಡದವರ ತಾಜಿಯಾಗಳು ಬೆಳಿಗ್ಗೆ ಅಷ್ಟು ಹೊತ್ತಿಗೆ ಹೊರಡಲಾಗುತ್ತಿರಲಿಲ್ಲ. ಈ ವಿಚಾರದಲ್ಲಿ ಯಾರಿಗೂ ಏನನ್ನೂ ಹೇಳುವಂತಿರಲಿಲ್ಲ. ಎಲ್ಲವೂ ಮತಾಚಾರಕ್ಕನುಸಾರವಾಗಿದ್ದಿತು. ಈ ವಿವಾದಗಳು ಹಬ್ಬಕ್ಕೆ ಎರಡು ದಿನ ಮೊದಲೇ ಪ್ರಾರಂಭವಾದುದು ಒಂದು ವಿಚಾರದಲ್ಲಿ ಒಳ್ಳೆಯದೇ ಆಯಿತು.

ಒಂದುವೇಳೆ ಶಿಯಾಗಳು ತಮ್ಮ ತಾಜಿಯಾಗಳನ್ನು ಬೆಳಿಗ್ಗೆ ಅಷ್ಟುಹೊತ್ತಿಗೆ ಹೊರಡಿಸಿದರೂ ಸುನ್ನಿಗಳು ತಮ್ಮ ತಾಜಿಯಾಗಳನ್ನು ಯಾವಾಗಲೂ ಮುಳುಗಿಸುತ್ತಿದ್ದ ಸಮಯಕ್ಕೆ ಮೊದಲೇ ಮುಳುಗಿಸಲು ಒಪ್ಪುವರೋ ಇಲ್ಲವೋ ಎಂಬುದು ಅನುಮಾನಾಸ್ಪದವಾಗಿದ್ದಿತು.

ಪೀರಾಲಿಯು ಈ ತೊಡಕಿನಲ್ಲಿ ಬಹಿರಂಗವಾಗಿ ಯಾವ ಪಾತ್ರವನ್ನೂ ವಹಿಸದಿದ್ದರೂ ಅಂತರಂಗದಲ್ಲಿ ಅವನ ಕೈವಾಡವು ಬಹಳವಾಗಿದ್ದಿತು.

ದಿವಾನನಿಗೆ ಈ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಾಗದಿರಲು ಆತನು ಹಳೆಯ ಕಾಗದ ಪತ್ರಗಳಿಗಾಗಿ ಕೋತ್ವಾಲಿಗೆ ಹೇಳಿಕಳುಹಿಸಿದನು. ಆದರೆ ಆ ಕಾಗದ ಪತ್ರಗಳೆಲ್ಲವೂ ವಿಪ್ಲವದ ಪ್ರಾರಂಭದಲ್ಲಿಯೇ ಭಸ್ಮೀಭೂತವಾಗಿದ್ದವು ಮತ್ತು ಅವುಗಳಿಂದ ಪ್ರಯೋಜನವೇನೂ ಆಗುತ್ತಿರಲಿಲ್ಲ. ದಿವಾನನು ವಿಸ್ಮಯಗೊಂಡನು.

ಈ ವಿವಾದವು ನಿಧಾನವಾಗಿ ರಾಣಿಯ ಬಳಿಗೆ ಹೋಯಿತು.

ಹಿಂದೂ ಮುಸಲ್ಮಾನರು ಒಂದೆಡೆ ಸೇರಿದರು. ರಾಣಿಯು ಅವರಿಗೆ ತಿಳಿಯ ಹೇಳಲು ಪ್ರಯತ್ನಿಸಿದಳು. ಜಗಳಗಳನ್ನು ಉಂಟುಮಾಡಬೇಕೆಂದಿದ್ದರೆ ಸುಲಭವಾಗಿ ಆಕೆಯು ಮಾಡಬಹುದಿದ್ದಿತು. ಆದರೆ ಆಕೆಯು ಉತ್ಸವವನ್ನು ಯಶಸ್ವಿಯಾಗಿ ನೆರವೇರಿಸುವುದರಲ್ಲಿ ಕಾತರಳಾಗಿದ್ದಳು.

ಆಕೆಯು ಬುದ್ಧಿವಾದವನ್ನು ಹೇಳಿದಳೆಂದರೆ ಎಲ್ಲರೂ "ಸರಿಯೆ, ಸರ್ಕಾರ್", "ಆಗಬಹುದು ಸರ್ಕಾರ್" ಎನ್ನುತ್ತಿದ್ದರು; ನಂತರ ಸ್ವಲ್ಪ ಹೊತ್ತು ಸುಮ್ಮನಿದ್ದು "ಆದರೆ" "ಮತ್ತೆ" ಎಂದು ಪ್ರಾರಂಭಿಸುತ್ತಿದ್ದರು.

ರಾಣಿಯು ಇದ್ದಕ್ಕಿದ್ದಂತೆಯೇ "ಏನು ಇಷ್ಟು ಮಂದಿ ಹಿಂದೂ ಮುಸಲ್ಮಾನರಲ್ಲಿ ಒಬ್ಬರಾದರೂ ಈ ಸಮಸ್ಯೆಯನ್ನು ಬಗೆಹರಿಸಲಾರರೆ ?" ಎಂದು ಕೇಳಿದಳು.

ಮಹಲಿನ ಬಳಿ ಒಬ್ಬ ಬಡಗಿಯು ವಾಸಿಸುತ್ತಿದ್ದನು. ಆತನು ಮುಂದೆ ಬಂದು ಸರ್ಕಾರ್ ತಮ್ಮಲ್ಲಿ ಒಂದು ವಿನಂತಿಮಾಡಿಕೊಳ್ಳಲಿಚ್ಛಿಸುವೆನು" ಎಂದನು.

ರಾಣಿ—ಹೇಳು.

ಬಡಗಿ—ಸರ್ಕಾರ್, ರಾಮ ರಹೀಮರು ಎಲ್ಲರಿಗೂ ದೊಡ್ಡವರು. ಅದರಂತೆಯೆ

ಮಂದಿರವು ಪುಷ್ಪಪಲ್ಲಕ್ಕಿಗಿಂತ ಮಹತ್ತರವಾದುದು ಮತ್ತು ಮಸೀದಿಯು ತಾಜಿಯಾಗಳಿಗಿಂತ ಶ್ರೇಷ್ಠವಾದುದು. ಮಸೀದಿಯಲ್ಲಿ ರಹೀಮನನ್ನು ಪೂಜಿಸಲಾಗುವುದು. ನಾನು ಮಸೀದಿಯೊಂದನ್ನು ತಯಾರುಮಾಡಿ ಸಕಾಲಕ್ಕೆ ಹೊರಡಿಸುತ್ತೇನೆ. ತಾಜಿಯಾಗಳೆಲ್ಲವೂ ಅದರೊಂದಿಗೆ ಒಟ್ಟಿಗೆ ಮೆರವಣಿಗೆ ಹೊರಡಲಿ. ಆಗ ನಾನು ಮುಂದೆ ತಾನು ಮುಂದೆಯೆಂಬ ಪ್ರಶ್ನೆಯೇ ಏಳುವುದಿಲ್ಲ.

ಸುನ್ನಿ ತಾಜಿಯಾದಾರರು ಅದಕ್ಕೆ ಸಮ್ಮತಿಸಿದರು.

"ಅಹುದು! ಅಹುದು! ಮಸೀದಿಯು ಎಲ್ಲಕ್ಕಿಂತಲೂ ಶ್ರೇಷ್ಠವಾದುದು."

"ಮಸೀದಿಯು ಎಲ್ಲಕ್ಕಿಂತಲೂ ಮೊದಲು ಹೊರಡಲಿ"

ಮಸೀದಿಯ ಹಿಂದೆ ನಮ್ಮೆಲ್ಲರ ತಾಜಿಯಾಗಳನ್ನು ಹೊರಡಿಸೋಣ."

ಆ ಬಡಗಿಯು ಎರಡು ದಿನಗಳಲ್ಲಿಯೇ ಬೆಂಡು ಕಾಗದಗಳ ಸಹಾಯದಿಂದ ಒಂದು ಸುಂದರವಾದ ಮಸೀದಿಯನ್ನು ನಿರ್ಮಿಸಿದನು. ಏಕಾದಶಿಯ ದಿನ ನಿಯುಕ್ತ ಸಮಯಕ್ಕೆ ಸರಿಯಾಗಿ ತಾಜಿಯಾಗಳು ಹೊರಟವು. ಆದಿಯಲ್ಲಿ ಮಸೀದಿಯಿದ್ದಿತು. ಹಿಂದೂಗಳ ಪುಷ್ಪಪಲ್ಲಕ್ಕಿಯು ಹೊರ ಹೊರಡಲು ಸ್ವಲ್ಪ ತಡೆಯಾಯಿತು. ಆದರೆ ಯಾರೂ ಇದನ್ನು ಗಣನೆಗೆ ತರಲಿಲ್ಲ. ಈ ರೀತಿಯಾಗಿ ಎದ್ದ ಬಿರುಗಾಳಿಯನ್ನು ಪ್ರಯಾಸವಿಲ್ಲದೇ ಅಡಗಿಸಲಾಯಿತು.

ನತ್ಥೇಖಾನನು ಸರ್ವಸಿದ್ಧತೆಯನ್ನು ಮಾಡತೊಡಗಿದ್ದನು. * ಝಾನ್ಸಿಯಲ್ಲಿ ಯಾವುದಾದರೂ ಜಗಳವೇರ್ಪಟ್ಟಿದ್ದೇ ಆದರೆ ಅನುಕೂಲವಾಗಿದ್ದಿತು. ಆದರೆ ಜಗಳವಿಲ್ಲದಿದ್ದರೂ ಝಾನ್ಸಿಗೆ ಆಘಾತಮಾಡಬೇಕಾಗಿದ್ದಿತು. ಏಕಾದಶಿಯ ಎರಡು ದಿನಗಳನಂತರ ಸಸೈನ್ಯನಾಗಿ ಆತನು ಓರ್ಛಾವಿಗೆ ಬಂದನು. ಮೂರನೆಯ ದಿನವೇ ಅನಂತನ ಚತುರ್ದಶಿ.§

ಅನಂತನ ಚತುರ್ದಶಿಯಂದು ಬೆಳಿಗ್ಗೆ ನತ್ಥ್ಯಾಖಾನನ ದೂತನೊಬ್ಬನು ದಿವಾನನ ಬಳಿಗೆ ಬಂದನು.

## ೫೭

ನತ್ಥೇಖಾನನ ದೂತನು ತಂದ ಸಂದೇಶದ ಸಾರಾಂಶವಿಂತಿದ್ದಿತು: "ಝಾನ್ಸಿಯು ಆದಿಯಲ್ಲಿ ಓರ್ಛಾರಾಜ್ಯದ ಒಂದು ಭಾಗವಾಗಿದ್ದಿತು. ಆದರೆ ಅದು ಅನುಚಿತ ರೀತಿ

* ನತ್ಥೇಖಾನನ ಬಳಿ ೨೦ ಸಹಸ್ರ ಸೈನ್ಯವಿದ್ದಿತೆಂದು ಹೇಳಿಕೊಳ್ಳುತ್ತಾರೆ.

§ ಆ ವರ್ಷ ಅನಂತನ ಚತುರ್ದಶಿ ಸೆಪ್ಟೆಂಬರ್ ೩ನೇ ತಾರೀಖಿನಂದು ಬಂದಿದ್ದಿತು.

ಯಿಂದ ಬೇರ್ಪಟ್ಟಿತು. ಆದುದರಿಂದ ಅದು ಈಗ ಓರ್ಛಾರಾಜ್ಯಕ್ಕೇ ಸೇರಬೇಕು. ಆಂಗ್ಲೇಯರು ರಾಣೀಸಾಹೇಬರಿಗೆ ಸಲ್ಲಿಸುತ್ತಿರುವ ಐದು ಸಹಸ್ರ ರೂಪಾಯಿಗಳ ಮಾಸಿಕ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗುವೆವು, ಆದರ ಕೋಟೆ ಕೊತ್ತಲು, ಶಸ್ತ್ರಾಸ್ತ್ರಗಳ ಸಹಿತ ನಗರವನ್ನು ನಮ್ಮ ವಶಮಾಡತಕ್ಕದ್ದು."

ಈ ಸಮಾಚಾರವು ನಗರದಲ್ಲಿ ಅತಿ ಶೀಘ್ರವಾಗಿ ಹರಡಿತು. ಅಲೀಬಹದ್ದೂರನ ನಿವಾಸವಿದ್ದ ಹೊಸ ಬಸ್ತಿಯಿಂದ ನತ್ಥೇಖಾನನು ಸೈನ್ಯಸಮೇತನಾಗಿ ಬಂದು ಆಗಲೇ ನಗರವನ್ನು ಸುತ್ತುಗಟ್ಟಿರುವನೆಂಬ ಸುದ್ದಿಯು ಹರಡಿತು. ಜನರು ಭಯಗ್ರಸ್ತ ರಾದರು.

ಮೋತೀಬಾಯಿಯು ನತ್ಥೇಖಾನನು ೨೦ ಸಹಸ್ರ ಸೇನೆ ಮತ್ತು ಅನೇಕ ತೋಪುಗಳೊಂದಿಗೆ ಓರ್ಛಾದಿಂದ ಹೊರಡುವವನಿದ್ದಾನೆಂಬ ಸಮಾಚಾರವನ್ನು ರಾಣಿಗೆ ತಲಪಿಸಿದಳು.

ರಾಣಿಯು "ಅವನು ಓರ್ಛಾವಿಗೆ ಎಂದು ಬಂದನು ?" ಎಂದು ಕೇಳಿದಳು.

"ನಿನ್ನೆಯ ದಿನ" ಮೋತೀಬಾಯಿಯು ಉತ್ತರವಿತ್ತಳು

ರಾಣಿಯು ತನ್ನ ಅಧಿಕಾರಿಗಳೊಂದಿಗೆ ಈ ವಿಚಾರವನ್ನು ವಿಮರ್ಶೆಮಾಡಿದಳು. ಝಾನ್ಸಿಯಲ್ಲಿ ಈ ಪರಿಸ್ಥಿತಿಯನ್ನು ಎದುರಿಸಲು ತಕ್ಕ ಸಿದ್ಧತಗಳಾಗಿರಲಿಲ್ಲ. ಆದುದ ರಿಂದ ಅಧಿಕಾರಿಗಳು ಗಾಬರಿಗೊಂಡರು.

ರಾಣಿಯೊಬ್ಬಳೇ ಧೈರ್ಯ ತಳದಿದ್ದು "ರಾಜನೀತಿಯನ್ನು ನೀವು ನೋಡಿ ಕೊಳ್ಳಿರಿ. ಯುದ್ಧಸಂಚಾಲನೆಯನ್ನು ನಾನು ಕೈಗೊಳ್ಳುವೆನು. ನತ್ಥೇಖಾನನಿಗೆ ಓಡಿ ಹೋಗಲು ಅತಿಪ್ರಯಾಸದಿಂದ ಒಂದು ಓಣಿಯು ಸಿಗಬಹುದು" ಎಂದಳು.

ನಾನಾಭೋಪಟ್ಕರನು "ಮಹಾರಾಣೀ, ನೀವು ವಿಜಯಮೂರ್ತಿ. ಯುದ್ಧದ ಅಂತಿಮ ಪರಿಣಾಮದ ವಿಚಾರದಲ್ಲಿ ನಮಗಾರಿಗೂ ಸಂದೇಹವಿಲ್ಲ. ಮಹಾರಾಣಿಯ ವರಿಗೆ ನನ್ನ ರಾಜನೀತಿಯಲ್ಲಿ ಭರವಸೆಯಿದ್ದರ ನನ್ನ ಪ್ರಾರ್ಥನೆಗ ಮನ್ನಣೆಯನ್ನೀಯ ಬೇಕು" ಎಂದನು.

ರಾಣಿಯು ಆ ಮಾತಿಗೆ ಸಮ್ಮತಿಸಿದಳು.

ಭೋಪಟ್ಕರನು "ನಮ್ಮ ಬಳಿಯಲ್ಲಿ ಆಂಗ್ಲೇಯರ 'ಯೂನಿಯನ್ ಜಾಕ್' ಧ್ವಜವಿದೆ. ನಮ್ಮ ಪತಾಕೆಯೊಂದಿಗೆ ಅದನ್ನೂ ಹಾರಿಸೋಣ. ಕೋಟೆಯಲ್ಲಿ ಬಂಧಿತರಾಗಿದ್ದ ಆಂಗ್ಲೇಯರ ಪೈಕಿ ಮಾರ್ಟಿನ್ ಎಂಬ ಒಬ್ಬ ವ್ಯಕ್ತಿಯು ಸೈನಿಕರ ವಶದಿಂದ ತಪ್ಪಿಸಿಕೊಂಡು ಈಗ ಆಗ್ರಾದಲ್ಲಿರುವನು. ಅವನಿಗ ನಾವು ಆಂಗ್ಲೇಯರ ಪರವಾಗಿ, ನತ್ಥೇಖಾನನ ವಿರುದ್ಧ ಯುದ್ಧಹೂಡಿರುವೆವೆಂದು ನಾನೊಂದು ಪತ್ರ ಬರೆದು ಕಳುಹಿಸುವೆನು. ನನ್ನ ರಾಜನೀತಿಗೆ ಆ ಪತ್ರದಿಂದ ಸಹಾಯ ಒದಗ

ಬಹುದು."

ರಾಣಿಯು "ಆದರೆ ಈ ರಾಜನೀತಿಯು ಎಷ್ಟು ದಿನಗಳವರೆಗೆ ನಡೆಯಬಲ್ಲದು? ಅಂತ್ಯದಲ್ಲಿ ನಾವು ದೇಶದಾದ್ಯಂತ ಸ್ವರಾಜ್ಯ ಸ್ಥಾಪಿಸಬೇಕಾಗಿದೆ. ಯೂನಿಯನ್ ಜಾಕ್ ಧ್ವಜದ ಆಸರೆಯಲ್ಲಿ ಸ್ವರಾಜ್ಯ ಸ್ಥಾಪನೆಯು ಅಸಂಭವ. ಮನಸ್ಸಿಗೆ ತೋರಿದಂತೆ ಪತ್ರ ಬರೆಯಬಹುದು. ಆದರೆ ಧ್ವಜವು ಪತ್ರಕ್ಕಿಂತ ಮಹತ್ತರವಾದುದು" ಎಂದಳು.

ಭೋಪಟ್ಕರನು "ಸರ್ಕಾರ್, ಧ್ವಜ ಮತ್ತು ಪತ್ರಗಳಿಗೆ ಅಜಗಜಾಂತರ ತಾರತಮ್ಯವೇನೋ ಇದೆ. ಆದರೆ ಈಗ ನಾವು ನಮ್ಮ ಆದರ್ಶವನ್ನು ಸ್ವಲ್ಪಕಾಲದವರೆಗೆ ಗೋಪ್ಯಮಾಡಿಡಬೇಕಾಗಿದೆ. ಸ್ವರಾಜ್ಯಸ್ಥಾಪನೆಯ ಪ್ರಯತ್ನವು ದೇಶದಾದ್ಯಂತ ನಾವು ಉದ್ದೇಶಿಸಿದಂತೆ ಮೇ ೩೧ ನೇ ತಾರೀಖು ನಡೆದಿದ್ದರೆ ಆಗ ರಾಜನೀತಿಯ ಪಥವೇ ಬೇರೆಯಾಗುತ್ತಿದ್ದಿತು. ಆದರೆ ಈಗ ಅದನ್ನು ಬದಲಾಯಿಸಬೇಕಾದುದು ಅತ್ಯವಶ್ಯಕವಾಗಿದೆ." ಎಂದನು.

ಲಾಲಾಭಾವುಬಕ್ಷಿಯು "ಸರ್ಕಾರ್, ತೋರಿಸುವ ಹೆಣ್ಣೇ ಬೇರೆ ಮದುವೆ ಮಾಡುವ ಹೆಣ್ಣೇ ಬೇರೆ ಎಂಬುದೇ ನಾನಾಭೋಪಟ್ಕರನ ಮಾತಿನ ತಾತ್ಪರ್ಯ" ಎಂದನು.

ರಾಣಿಯು "ನಾನಾಭೋಪಟ್ಕರನ ಮಾತನ್ನು ನಾನು ತೆಗೆದುಹಾಕಲಾರೆನು. ಆದರೆ ಕಾವಿಧ್ವಜವು ಎಲ್ಲದಕ್ಕಿಂತ ಎತ್ತರವಾದ ಬುರುಜಿನಮೇಲೆ ಹಾರಿಸಬೇಕು; ಯೂನಿಯನ್‌ಜಾಕ್ ಧ್ವಜವನ್ನು ಬೇಕಾದರೆ ಯಾವುದಾದರೂ ತಗ್ಗಾದ ಬುರ್ಜಿನಮೇಲೆ ಹಾರಿಸಿಕೊಳ್ಳಿ" ಎಂದಳು.

ಮಂತ್ರಿಮಂಡಲವು ಈ ಸಲಹೆಯನ್ನು ಅನುಮೋದಿಸಿತು.

ಪುನಃ ರಾಣಿಯು "ಲಾಲಾಭಾವು, ತ್ವರಿತವಾಗಿ ತೋಪುಗಳ ಪ್ರಬಂಧನೆಯನ್ನು ಮಾಡು. ಜವಹರಸಿಂಹನು ಮತ್ತು ರಘುನಾಥಸಿಂಹ ಮುಂತಾದವರಿಗೆ ಎಚ್ಚರಿಕೆ ಕೊಡು. ಎಲ್ಲಾ ಹೆಬ್ಬಾಗಿಲುಗಳನ್ನು ಶೇಖರಿಸು. ನತ್ಥೇಖಾನನು ಅನೇಕ ಕಡೆಗಳಿಂದ ಆಕ್ರಮಣ ಮಾಡಬಹುದು. ಕೋಟೆಯ ಮೇಲೆ ದೊಡ್ಡ ತೋಪುಗಳನ್ನು ನಿಲ್ಲಿಸಲಾಗಿದೆಯೆ ?" ಎಂದಳು.

ಭಾವು ಬಕ್ಷಿಯು ಉತ್ತರವಿತ್ತನು "ಸರ್ಕಾರ್, ಕೇವಲ 'ಕಡಕ್ ಬಿಜಲಿ' ಎಂಬ ತೋಪು ಮಾತ್ರ ಕೆಳಗಿದೆ. ಅದನ್ನು ಕೂಡಲೇ ಬತೇರಿಯ ಮೇಲೇರಿಸುವೆನು. ಮತ್ತು ತಮ್ಮ ಇತರ ಆಜ್ಞೆಗಳನ್ನು ಪಾಲಿಸುವೆನು. ದಿವಾನ್ ಜವಹರಸಿಂಹರು ಇಲ್ಲೇ ಇದ್ದಾರೆ, ಆದರೆ ದಿವಾನ್ ರಘುನಾಥಸಿಂಹರು ಉನಾವಿನ ಕಡೆ ಹೋಗಿದ್ದಾರೆ.

ರಾಣಿ—ಅವರನ್ನು ಒಡನೆಯೇ ಕರೆಸು.

ಭಾವುಬಕ್ಷಿ—ಅಪ್ಪಣೆ ಸರ್ಕ್ಕಾರ್.

ರಾಣಿ— ಬರವಾಸಾಗರದ ಸಾಗರಸಿಂಹನೆಲ್ಲಿರುವನು ?

ಭಾವು—ಮಹುವಿನ ಕಾಶೀನಾಥ ಬೈಯ್ಯಾವಿನೊಂದಿಗೆ ಕರೇರಾವಿನಕಡೆ ಹೋಗಿದ್ದಾನೆ.

ರಾಣಿ—ಅವರಿಬ್ಬರನ್ನೂ ಅಲ್ಲಿಂದ ಕರೆಸು. ನಮ್ಮ ಬಳಿ ಬಹಳ ಕಡಿಮೆ ಸೈನ್ಯವಿದೆ. ನತ್ಥೇಖಾನನು ೨೦ ಸಹಸ್ರ ಸೇನೆಯನ್ನು ತರುವುದು ವಾಸ್ತವವೇ ಆದರೆ ಅವನು ಎದುರಿನಿಂದಲೇ ಆಕ್ರಮಿಸುವನು. ಆದರೆ ಚಿಂತಿಸಬೇಕಾದುದಿಲ್ಲ. ನಮ್ಮ ಬಳಿ ಕೋಟೆಯಿದೆ, ತೋಪುಗಳಿವೆ ಮತ್ತು ಉತ್ತಮ ಗೋಲಂದಾಜಿಗಳೂ ಇದ್ದಾರೆ.

ಭಾವು—ನಮ್ಮಲ್ಲಿ ಗೋಲಂದಾಜಿಗಳ ಸಂಖ್ಯೆ ಕಡಿಮೆಯಿದೆ. ತಮ್ಮ ಅಪ್ಪಣೆಯಾದರೆ ಹೇಗೋ ಹಾಗೆ ಅವರನ್ನು ನಿಯುಕ್ತ ಮಾಡಲಾಗುವುದು.

ರಾಣಿ—ನಾನು ಕೆಲವು ಸ್ತ್ರೀಯರಿಗೆ ತೋಪಚಿಯ ಕೆಲಸವನ್ನು ಕಲಿಸಬೇಕೆಂದಿದ್ದೆ, ಆದರೆ ಅವರ ಶಿಕ್ಷಣ ಇನ್ನೂ ಪೂರೈಸಿಲ್ಲ. ಆದುದರಿಂದ ಗುಲಾಂ ಗೌಸ್ ಖಾನನನ್ನು ಓರ್ಛಾ ಹೆಬ್ಬಾಗಿಲಿನ ರಕ್ಷಣೆಗೆ ನಿಯಮಿಸಿ ನೀನು ಸ್ವತಃ 'ಕಡಕ್ ಬಿಜಲಿ' ಎಂಬ ತೋಪನ್ನು ಕೋಟೆಯ ದಕ್ಷಿಣ ದಿಕ್ಕಿನ ಬುರುಜಿನ ಮೇಲೇರಿಸಿ ಕೆಲಸಮಾಡಲೆತ್ನಿಸು. ನಾನು ನನ್ನ ಸ್ತ್ರೀ ಸೈನ್ಯದೊಂದಿಗೆ ಎಲ್ಲಾ ಕಂದಕಗಳಲ್ಲಿಯೂ ಇದ್ದುಕೊಂಡು ಜವಹರಸಿಂಹ ಮತ್ತು ಗೌಸ್‌ಖಾನರಿಗೆ ಸಹಾಯ ಮಾಡುವೆನು. ಪುರಜನರಿಗೆ ಗುಂಪು ಕಟ್ಟಿಕೊಂಡು ಹೊರಗೆ ತಿರುಗದೆ ತಮ್ಮ ಮನೆಗಳಲ್ಲಿ ನಿಶ್ಚಿಂತರಾಗಿರುವಂತೆ ಹೇಳು.

ಭೋಪಟ್ಕರನು ಮಾರ್ಟಿನ್ನನಿಗೆ ಒಂದು ಪತ್ರವನ್ನು ಬರೆದು ಆಗ್ರಾಕ್ಕೆ ಕಳುಹಿಸಿ ಕೆಳಗಿನ ಬತೇರಿಯೊಂದರ ಮೇಲೆ ಯೂನಿಯರ್ಸ್ ಜಾಕ್ ಧ್ವಜವನ್ನೇರಿಸಿದನು.

"ಲಕ್ಷ್ಮೀಬಾಯಿಯು ಒಬ್ಬ ಸ್ತ್ರೀ. ಖಾನಸಾಹೇಬರು ಅಬಲೆಯರ ರಕ್ಷಣೆ ಮಾಡಬೇಕಲ್ಲದೆ ಈ ರೀತಿಯಾದ ವ್ಯವಹಾರ ನಡೆಸುವುದು ಸರಿಯಲ್ಲ. ರಾಣಿಯು ಆಂಗ್ಲೇಯರ ಪರವಾಗಿ ಝಾನ್ಸಿಯ ರಾಜ್ಯ ಸೂತ್ರಗಳನ್ನು ಹಿಡಿದಿರುವಳು. ಓರ್ಛಾ ಆಂಗ್ಲೇಯರ ಮಿತ್ರರಾಜ್ಯವಾದುದರಿಂದ ಅಲ್ಲಿಂದ ಝಾನ್ಸಿಯ ಮೇಲೆ ಆಕ್ರಮಣಮಾಡುವುದು ಬಹಳ ಅನುಚಿತ. ಒಂದು ವೇಳೆ ಆಕ್ರಮಣಮಾಡಿದರೆ ಝಾನ್ಸಿಯು ಆತ್ಮರಕ್ಷಣೆಗೆ ಸಿದ್ಧವಾಗಿದೆ" ಎಂದು ನತ್ಥೇಖಾನನ ದೂತನು ತಂದಿದ್ದ ಸಂದೇಶಕ್ಕೆ ಉತ್ತರ ಕಳುಹಿಸಲಾಯಿತು.

ದೂತನು ಉತ್ತರವನ್ನು ಪಡೆದು ಒಡನೆಯೇ ಹಿಂದಿರುಗಿದನು.

ರಾಣಿಯು ದಿವಾನನೊಡನೆ "ನನಗೆ ಝಾನ್ಸಿಯ ಸಮಗ್ರ ನಿವಾಸಿಗಳೆಲ್ಲರನ್ನೂ ಯುದ್ಧವಿಶಾರದರನ್ನಾಗಿ ಮಾಡಲಾರದೇ ಹೋದೆವಲ್ಲಾ ಎಂದು ವ್ಯಸನವಾಗಿದೆ. ನಾನು

ನತ್ಥೇಖಾನನಿಂದ ಒಂದು ಬಾರಿ ಪಾರಾದೆನೆಂದರೆ ಈ ವಿಷಯಕ್ಕೆ ಹೆಚ್ಚು ಗಮನ ಕೊಡುವೆನು" ಎಂದಳು.

ಇದರನಂತರ ಅವಳು ಅನಂತಚತುರ್ದಶಿಯ ಪೂಜೆ ಪುರಸ್ಕಾರಗಳಲ್ಲಿ ಮಗ್ನಳಾದಳು.

ಜವಹರಸಿಂಹ, ಕರ್ನಲ್ ಜಮಾರ್ಖಾ, ಗುಲಾಂ ಗೌಸ್‌ಖಾ ಇತ್ಯಾದಿಗಳು ಅವರವರ ನಿಯುಕ್ತ ಕರ್ತವ್ಯಗಳನ್ನು ಬಿರುಸಿನಿಂದ ಸಾಗಿಸತೊಡಗಿದರು. ಅವರಿಗೆ ಒಂದೊಂದು ಕ್ಷಣವೂ ಮಹತ್ವಪೂರ್ಣವಾಗಿದ್ದಿತು.

ಭಾವುಬಕ್ಷಿಯು ದಕ್ಷಿಣದ ಕಡೆಯ ಎತ್ತರವಾದ ಬುರ್ಜಿನಮೇಲೆ ಕಡಕ್‌ಬಿಜಲಿಯನ್ನೇರಿಸಿದನು. ಗುಲಾಂ ಗೌಸ್‌ಖಾನನು ಒಂದು ದೊಡ್ಡ ತೋಪು ಮತ್ತು ಅನೇಕ ಚಿಕ್ಕ ತೋಪುಗಳನ್ನು ತೆಗೆದುಕೊಂಡು ಓರ್ಛಾ ಹೆಬ್ಬಾಗಿಲನ್ನು ತಲುಪಿದನು. ಎಲ್ಲಾ ಹೆಬ್ಬಾಗಿಲುಗಳ ಮೇಲೆಯೂ ತೋಪುಗಳನ್ನಿರಿಸಲಾಯಿತು. ಮದ್ದುಗುಂಡುಗಳನ್ನೂ ಗೋಲಂದಾಜಿಗಳನ್ನೂ ಅವರವರ ಸ್ಥಳಗಳಲ್ಲಿ ನಿಯುಕ್ತಮಾಡಲಾಯಿತು. ದಿವಾ ಜವಹರಸಿಂಹನ ಸೈನಿಕರು ಹೆಬ್ಬಾಗಿಲು, ಕೋಟೆಯ ಪ್ರಾಕಾರದ ಗೋಡೆಯ ಸಂದುಗಳಲ್ಲಿ ತಮ್ಮ ತಮ್ಮ ಬಂದೂಕಗಳೊಡನೆ ಅಡಗಿ ನಿಂತರು. ಅವರ ನಿದ್ರಾಹಾರಗಳಿಗೆಲ್ಲಾ ಅಲ್ಲೇ ತಕ್ಕ ಏರ್ಪಾಡುಗಳನ್ನು ಮಾಡಲಾಯಿತು. ನಾಲ್ಕೈದು ಗಂಟೆಗಳೊಳಗಾಗಿ ಝಾನ್ಸಿಯು ರಣಕ್ಷೇತ್ರದ ರೂಪವನ್ನು ಧರಿಸಿತು.

ಮೂರನೆಯ ಝಾಮ ಸುಮಾರು ಮೂರು ಗಂಟೆಯ ಸಮಯವಿರಬಹುದು. ರಾಣಿಯು ಅನಂತಚತುರ್ದಶಿಯ ಪೂಜೆಯನ್ನು ಸಮಾಪ್ತಗೊಳಿಸುವುದರಲ್ಲಿದ್ದಾಗ ಒಂದು ಆಸ್ಫೋಟನೆಯಾಯಿತು. ದಾಮೋದರರಾಯನಿಗೆ ಅನಂತನ ದಾರವನ್ನು ಕಟ್ಟಿ ಹೊರಬಂದಳು. ಆಗ ನತ್ಥೇಖಾನನು ಆಕ್ರಮಣವನ್ನು ಪ್ರಾರಂಭಿಸಿರುವನೆಂದೂ, ಬಹುಶಃ ಗುಂಡು ನಗರದಲ್ಲಿ ಬಿದ್ದು ಸಿಡಿದಿರಬೇಕೆಂದೂ ಅವಳಿಗೆ ಸಮಾಚಾರ ಮುಟ್ಟಿತು.

ರಾಣಿಯು ಬೆಳಗ್ಗಿನಿಂದಲೂ ಉಪವಾಸವನ್ನು ಕೈಗೊಂಡಿದ್ದಳಾದುದರಿಂದ ಸ್ವಲ್ಪ ಫಲಾಹಾರವನ್ನು ಸ್ವೀಕರಿಸಿದಳು. ಅಷ್ಟರಲ್ಲಿ ಟಂಕಸಾಲೆಯ ಹಿಂದಿದ್ದ ಒಬ್ಬ ಸೇಠನ ಮನೆಯಲ್ಲಿ ಗುಂಡುಬಿದ್ದಿತೆಂದು ತಿಳಿದುಬಂದಿತು. ರಾಣಿಯು ನತ್ಥೇಖಾನನ ಗೋಲಂದಾಜಿಗಳು ತಮ್ಮ ವಿದ್ಯೆಯಲ್ಲಿ ಪಾರಂಗತರಲ್ಲ. ಇಷ್ಟು ದೊಡ್ಡ ಕಿಲ್ಲೆಯ ಶಿಖರಕ್ಕೆ ಅವರು ಗುರಿ ಇಡಲಾರದೇ ಹೋದರು. ಅಥವಾ ಅವರು ಅತ್ಯಂತ ಚತುರರಾಗಿದ್ದು ಮಹಲ್ಲಿನ ಮೇಲೆ ಗುರಿಯಿಟ್ಟಿರಬೇಕು. ಆದರೆ ಆ ಗೋಲಿಯ ಪಥವು ಬದಲಿಹೋಗಿ ಮಹಲನ್ನು ಉಳಿಸಿತು ಎಂದು ಊಹಿಸಿದಳು.

ಯೋಧರ ವೇಷವನ್ನು ಧರಿಸಿ ತನ್ನ ಮೂವ್ವರು ಸಖಿಯರೊಂದಿಗೆ ಕುದುರೆ

ಯನ್ನು ಹತ್ತಿ ಓರ್ಛಾ ಹೆಬ್ಬಾಗಿಲಿನ ಕಡೆಗೆ ಭರದಿಂದ ಸಾಗಿ ಗುಲಾಂ ಗೌಸ್ ಖಾನನನ್ನು ಕಂಡ. “ಶತ್ರುಗಳು ಇದೇ ದಿಕ್ಕಿನಲ್ಲಿರುವರು. ತೋಪುಗಳನ್ನು ಗುರಿಯಿಟ್ಟು ಗುಂಡಿನ ಮಳೆಗರೆಸು” ಎಂದು ಹೇಳಿದಳು.

ನಂತರ ಕಾಶೀಬಾಯಿಯನ್ನು ಕುರಿತು “ನೀನು ಒಡನೆಯೇ ಕಿಲ್ಲೆಗೆ ಹೋಗಿ, ಭಾವು ಬಕ್ಷಿಯೊಂದಿಗೆ, ನತ್ಥೇಖಾನನ ಸೈನ್ಯವು ಯಾವಾಗ ಸುಸಂಧಿಯನ್ನು ಕಲ್ಪಿಸಿ ಕೊಳ್ಳಲು ಗುಡ್ಡದ ಹಿಂದೆ ಆಶ್ರಯ ಹೊಂದುವುದಕ್ಕೆ—ಪಶ್ಚಿಮಾಭಿಮುಖವಾಗಿ ಸೈಯರ್ ಹೆಬ್ಬಾಗಿಲಿನತ್ತ ತಿರುಗುವುದೋ ಆಗ ಕಡಕ್ ಬಿಜಲಿಯನ್ನು ಹಾರಿಸಬೇಕು. ಆ ಸೇನೆಯು ಓರ್ಛಾಬಾಗಿಲಿನಿಂದ ಪಶ್ಚಿಮದಕಡೆಗೆ ತಿರುಗುವವರೆಗೂ ಮೌನವಾಗಿರ ಬೇಕೆಂದು ತಿಳಿಸಿ ಬಾ” ಎಂದು ಹೇಳಿದಳು.

ಕಾಶೀಬಾಯಿಯು ಒಡನೆಯೇ ಹೊರಟುಹೋದಳು.

ಗೌಸ್ ಖಾನನು ತನ್ನ ತೋಪುಗಳನ್ನು ಸರಿಯಾದ ಜಾಗಗಳಲ್ಲಿ ನಿಲ್ಲಿಸಿ ಒಂದಾದ ಮೇಲೊಂದನ್ನು ಹಾರಿಸತೊಡಗಿದನು. ಒಟ್ಟು ಹನ್ನೊಂದು ತೋಪುಗಳಿದ್ದವು. ಒಂದು ತೋಪು ಗೋಲಿಗಳನ್ನು ಹಾರಿಸುತ್ತಿದ್ದಾಗ ಮತ್ತೊಂದು ತೋಪನ್ನು ಪುನಃ ಕಾರ್ಯಾಚರಣೆ ಪ್ರಾರಂಭಿಸಲು ಸಿದ್ಧಪಡಿಸಲಾಗುತ್ತಿದ್ದಿತು.

ಮದ್ದು ಗುಂಡು ಮತ್ತು ತೋಪು ಹಾರಿಸುವವರು ಎಲ್ಲದರ ವ್ಯವಸ್ಥೆಯೂ ಸಮರ್ಪಕವಾಗಿದ್ದಿತು.

ಓರ್ಛಾ ಹಬ್ಬಾಗಿಲಿನ ಈಶಾನ್ಯ ದಿಕ್ಕಿನಲ್ಲಿ “ಸಾಗರ್ ಕಿಡಿಕಿ” ಇದ್ದಿತು. ಅದಕ್ಕೆ ಅನತಿದೂರದಲ್ಲೇ ಲಕ್ಷ್ಮೀದ್ವಾರ. ಸುಂದರಿ ಮತ್ತು ಮುಂದರಿಯರೊಡನೆ ರಾಣಿಯು ಸಾಗರದ ಕಿಡಕಿ ಬಳಿ ಬಂದಳು. ಈ ಕಿಟಕಿಯಿಂದ ಓರ್ಛಾದ್ವಾರ ದತ್ತ ಪಶ್ಚಿಮದಕಡೆಗೆ ಸ್ವಲ್ಪ ದೂರದಲ್ಲಿ ಒಂದು ಮೋರಿಯಿದ್ದಿತು. ಈ ಕಾಲುವೆ ಯಲ್ಲಿಯೇ ನಗರದ ದಕ್ಷಿಣ ಭಾಗದ ನೀರೆಲ್ಲವೂ ಹರಿಯುತ್ತಿದ್ದಿತು. ಈ ಚರಂಡಿ ಯಲ್ಲಿ ಒಬ್ಬ ಗಿಡ್ಡನಾದ ಮನುಷ್ಯನು ಸುಲಭವಾಗಿ ಹಾದು ಪಾರಾಗುವಷ್ಟು ಸ್ಥಳಾವ ಕಾಶವಿದ್ದಿತು. ರಾಣಿಯು ಸಾಗರ ಕಿಟಕಿಯ ಮೇಲಿದ್ದ ತೋಪುಗಳಲ್ಲೊಂದನ್ನು ಈ ಮೋರಿಯ ಮೇಲೆ ಗೋಡೆಯ ಹಿಂಬದಿಗಿಡಿಸಿದಳು. ಅಲ್ಲಿ ಒಂದಕ್ಕಿಂತ ಹೆಚ್ಚು ತೋಪುಗಳನ್ನಿಡಲು ಸ್ಥಳವಿರಲಿಲ್ಲ.

ಸಾಗರ ಕಿಟಕಿಯ ಬಳಿ ದಿವಾನ್ ದುಲ್ಹಾಜುವು ತೋಪು ಹಾರಿಸುತ್ತಿದ್ದನು. “ನೀನು ಪಶ್ಚಿಮ ದಕ್ಷಿಣ ದಿಕ್ಕುಗಳ ಮಧ್ಯೆ ತೋಪನ್ನು ಹಾರಿಸು. ಶತ್ರುಗಳು ಕಾಣಿ ಸಲೀ, ಕಾಣಿಸದಿರಲೀ ನೀನು ಎಡೆಬಿಡದೆ ನಾನು ನಿಷೇಧಿಸುವವರೆಗೂ ತೋಪನ್ನು ಹಾರಿಸುತ್ತಲೇ ಇರು.” ಎಂದು ರಾಣಿಯು ಆಜ್ಞೆಯಿತ್ತಳು.

ದುಲ್ಹಾಜುವು ಈ ಆಪ್ಪಣೆಯನ್ನು ಕೇಳಿ ಸ್ವಲ್ಪ ದಿಕ್ಕುತೋರದಂತಾದನು.

ರಾಣಿಯು ಅವನಿಗೆ ಪರಿಸ್ಥಿತಿಯನ್ನು ವಿವರಿಸುತ್ತಾ "ನತ್ಥೇಖಾನನ ಸೈನ್ಯ ಮತ್ತು ಗೋಲಂದಾಜು ದಕ್ಷಿಣ ದಿಕ್ಕಿನಿಂದ ಓರ್ಛಾ ದ್ವಾರ ಮತ್ತು ಸೈಯರ್ ದ್ವಾರ ಗಳ ನಡುವೆಯೇ ಇರಬೇಕೆಂಬುದು ನನ್ನ ಅಭೀಷ್ಟ. ನಿನ್ನ ಕಡೆಯಿಂದ ಇಡಿದು ಪೂರ್ವ ಮತ್ತು ಉತ್ತರ ದಿಕ್ಕುಗಳಲ್ಲಿ ಮುಂದುವರೆಯಲು ಬಿಡಬಾರದು. ನನಗೆ ಎಲ್ಲಿ ಸೂಕ್ತವೆಂದು ತೋರುವುದೋ ಅಲ್ಲಿಯೇ ಯುದ್ಧ ನಡೆಯಬೇಕು, ತಿಳಿಯಿತೆ?" ಎಂದು ಹೇಳಿದಳು.

ದುಲ್ಹಾಜುವು "ಹಾಗೆಯೇ ಆಗಲಿ, ಸರ್ಕಾರ್" ಎಂದನು.

ಇದೇ ರೀತಿಯಾಗಿ ರಾಣಿಯು ಪ್ರತಿಯೊಂದು ಹೆಬ್ಬಾಗಿಲಿಗೂ ಹೋಗಿ ಅವಶ್ಯ ವಾದ ಆಜ್ಞೆಗಳನ್ನಿತ್ತು ಪುನಃ ಓರ್ಛಾ ದ್ವಾರಕ್ಕೆ ಮರಳಿದಳು. ನತ್ಥೇಖಾನನ ಸೈನ್ಯವು ಘಾತಗೊಂಡು ಹಿಮ್ಮೆಟ್ಟಿತು. ಆದರೆ ಗುಡ್ಡದ ಹಿಂದೆ ಆಶ್ರಯ ಪಡೆಯದೇ ಅವುಗಳ ಮಧ್ಯೆ ಇದ್ದ ಕಂದಕಗಳಲ್ಲಿ ರಕ್ಷಣೆ ಹೊಂದಲು ಯತ್ನಿಸಿತು.

ಇಷ್ಟರಲ್ಲಿಯೇ ರಾತ್ರಿಯಾಯಿತು. ರಾಣಿಯು ಮುಂದರಿಯನ್ನು ಅಲ್ಲಿಯೇ ಬಿಟ್ಟು ಮಹಲ್ಲಿಗೆ ಬಂದಳು. ಗೀತೆಯ ೧೮ ನೇ ಅಧ್ಯಾಯವನ್ನು ಪಾರಾಯಣ ಮಾಡುವುದು ಅಥವಾ ಶ್ರವಣ ಮಾಡುವುದು ಅವಳ ನಿತ್ಯಕ್ರಿಯೆಯಾಗಿದ್ದಿತು. ಅಂತೆಯೇ ಪಾರಾಯಣಮಾಡಿ ಅರ್ಧ ಗಂಟೆ ವಿಶ್ರಾಂತಿ ಹೊಂದುವುದರೊಳಗಾಗಿ ಮುಂದರಿಯು ನತ್ಥೇಖಾನನು ಕೋಟೆಯ ಪ್ರಾಕಾರದ ಮೇಲೆ ನಾಲ್ಕು ಕಡೆಯಿಂದಲೂ ಧಾಳಿಮಾಡಿರುವನೆಂದೂ, ಅದರಲ್ಲೂ ಓರ್ಛಾ ದ್ವಾರದಮೇಲೆ ಅಧಿಕೃತವಾದ ಧಾಳಿ ಯಾಗಿ ಪರಿಸ್ಥಿತಿಯು ವಿಷಮಿಸಿದೆಯೆಂದೂ ಸಮಾಚಾರವನ್ನಿತ್ತಳು.

ರಾಣಿಯು ತನ್ನ ಸಖಿಯರೊಂದಿಗೆ ಸವಾರಳಾಗಿ ಓರ್ಛಾ ದ್ವಾರವನ್ನು ತುರಂತ ವಾಗಿ ಸೇರಿದಳು.

ಹಾಲು ಚೆಲ್ಲಿದಂತಹ ಬೆಳದಿಂಗಳು ವ್ಯಾಪಿಸಿದ್ದಿತು. ಆಕಾಶವು ನಿರ್ಮಲ ವಾಗಿದ್ದಿತು. ಹತ್ತಿರದಲ್ಲಿದ್ದ ವಸ್ತುಗಳು ಕಾಣುತ್ತಿದ್ದವು; ದೂರದಲ್ಲಿದ್ದವು ಮಸುಕು ಮಸುಕಾಗಿ ಗೋಚರವಾಗುತ್ತಿದ್ದವು. ಸಾಗರ ಕಿಟಕಿಯಿಂದ ಗುಂಡಿನ ಮಳೆಗರೆ ಯುತ್ತಿದ್ದಿತು. ಓರ್ಛಾ ಹೆಬ್ಬಾಗಿಲಿನ ಸ್ಥಿತಿಯು ಈಗಲೋ ಆಗಲೋ ಕೈ ಬಿಡುವಂತಿ ದ್ದಿತು.

ರಾಣಿಯು ಗುಲಾಂ ಗೌಸ್‌ಖಾ ಮತ್ತು ಅವನ ಇತರ ತೋಪಚಿಗಳಿಗೆ "ಎರಡು ಬಾರಿ ಬೇಗ ಬೇಗ ತೋಪುಗಳನ್ನು ಹಾರಿಸಿ ಮೌನವಾಗಿ; ಶತ್ರುವು ತೋಪು ಹಾರಿಸುವುದನ್ನು ನಿಲ್ಲಿಸಿಬಿಟ್ಟರೆಂದು ಭಾವಿಸಿ ಮುಂದುವರೆಯುನು. ಹಾಗೆ ಅವನು ಮುನ್ನುಗ್ಗುತ್ತಲೇ ಪ್ರಾಕಾರದ ಗೋಡೆಯ ಸಂದುಗಳಿಂದ ತ್ವರಿತವಾಗಿ ಬಂದೂಕ ಗಳನ್ನು ಹಾರಿಸೋಣ. ಆಗ ವೈರಿಯು ತನ್ನ ತೋಪುಗಳನ್ನು ಎತ್ತರವಾದ ಗುಡ್ಡಗಳ

ಮೇಲ್ಗೆ ಹತ್ತಿ ಅಲ್ಲಿಂದ ದ್ವಾರವನ್ನೂ, ಬುರುಜಿಯನ್ನೂ ನಾಶಪಡಿಸಿ ಒಳ ಹೊಗಲು ಪ್ರಯತ್ನಿಸುವನು. ಆಗ ನಮ್ಮ ತೋಪುಗಳನ್ನು ಹಾರಿಸಬೇಕು" ಎಂದು ಹೇಳಿ ಯುದ್ಧ ನೀತಿಯನ್ನು ವಿವರಿಸಿದಳು.

ನಂತರ ಆಕೆಯು ಕಾಶೀಬಾಯಿಯನ್ನು ಕುರಿತು "ನೀನು ಕಿಲ್ಲೆಗೆ ಹೋಗಿ ಭಾವು ಬಕ್ಷಿಗೆ ಕಡಕ್ ಬಿಜಲಿಯನ್ನು ಪ್ರಯೋಗಿಸುವ ಸಮಯವು ಬಂದಿದೆ; ನಮ್ಮ ಓರ್ಛಾ ಹೆಬ್ಬಾಗಿಲಿನ ತೋಪುಗಳು ಶಾಂತವಾಗಿ ನಮ್ಮ ಬಂದೂಕಗಳ ಹೊಡೆತದ ನಂತರ ಶತ್ರುಗಳು ತೋಪುಗಳನ್ನು ಚಲಾಯಿಸಲು ಪಾರಂಭಿಸಿದಾಗ ಕಡಕ್ ಬಿಜಲಿ ಮತ್ತು ಅಲ್ಲಿರತಕ್ಕ ಇತರ ಎಲ್ಲಾ ತೋಪುಗಳನ್ನೂ ಓರ್ಛಾದ್ವಾರದಾಚೆ ಬಲಕ್ಕಿರುವ ಎತ್ತರವಾದ ಗುಡ್ಡಗಳ ಮೇಲೆ ಸರಿಯಾಗಿ ಗುರಿಯಿಟ್ಟು ಎಡೆಬಿಡದೆ ಹಾರಿಸಬೇಕು ಎಂದು ಹೇಳಿ ಬಾ" ಎಂದಳು.

ಕಾಶೀಬಾಯಿಯು ಆ ಸಂದೇಶವನ್ನು ಕೊಂಡು ಹೊರಟುಹೋದಳು. ಸುಂದರಿ ಮತ್ತು ಮುಂದರಿಯರನ್ನೂ ಇದೇ ವಿಧವಾದ ಸಂದೇಶಗಳನ್ನಿತ್ತು ಬೇರೆ ಬೇರೆ ದಿಕ್ಕುಗಳಿಗೆ ಕಳುಹಿಸಿದಳು.

ಗುಲಾಂ ಗೌಸ್ ಖಾನನು ಎರಡು ಬಾರಿ ಬೇಗನೆ ತೋಪುಗಳನ್ನು ಹಾರಿಸಿದನು. ನತ್ಥೇಖಾನನ ತೋಪುಗಳು ಪ್ರತಿ ಧಾಳಿ ಮಾಡಿದುವು. ನಂತರ ಗೌಸ್ ಖಾನನ ತೋಪುಗಳು ಶಾಂತವಾದವು. ನತ್ಥೇಖಾನನು ತೋಪಚಿಗಳು ಮಡಿದರೆಂದು ಭಾವಿಸಿದನು. ಅವನ ಸೈನ್ಯವು ಕೋಟೆ ಗೋಡೆಯನ್ನು ಲಗ್ಗೆ ಹತ್ತಲು ಮುಂದುವರೆಯಿತು. ಆಗ ಮೇಲಿಂದ ಬಂದೂಕಗಳ ಪ್ರಯೋಗವಾಯಿತು. ಅದರಿಂದೇನೂ ಹೆಚ್ಚು ಪರಿಣಾಮವಾಗಲಿಲ್ಲ. ಮೇಲಿಂದ ಮೇಲೆ ಬಂದೂಕಗಳಿಂದ ಗೋಲಿಗಳ ಸುರಿಮಳೆಯಾಯಿತೋ ಆಗ ಸಿಪಾಯಿಗಳು ಹಿಂದೆ ಸರಿದರು. ನತ್ಥೇಖಾನನು ತೋಪುಗಳನ್ನು ಉನ್ನತ ಪ್ರದೇಶದಲ್ಲಿರಿಸಿ ಓರ್ಛಾದ್ವಾರ ಮತ್ತು ಅದರ ಎಡಬಲಗಳ ಕೋಟೆಯ ಗೋಡೆಯ ಮೇಲೆ ಗುಂಡನ್ನು ಹಾರಿಸಿದರೆ ನಗರ ಪ್ರವೇಶ ಮಾಡಲು ಮಾರ್ಗ ದೊರಕಿ ಮುಂದೆ ಕಿಲ್ಲೆಯನ್ನು ವಶಪಡಿಸಿಕೊಳ್ಳಲು ಸರಳವಾಗುವುದೆಂದು ನಿಶ್ಚಯಿಸಿದನು. ಸಾಗರ ಕಿಟಕಿಯಿಂದ ಬರುತ್ತಿದ್ದ ಗುಂಡುಗಳ ವರ್ಷವನ್ನು ಎದುರಿಸಲು ಅವನ ಒಂದು ತೋಪು ಮೀಸಲಾಗಿದ್ದಿತು. ಓರ್ಛಾದ್ವಾರದ ತೋಪುಗಳು ಶಾಂತವಾಗಿದ್ದವು. ಆದುದರಿಂದ ತನ್ನ ಉಪಾಯವು ಫಲಕಾರಿಯಾಗುವುದೆಂದು ಆತನಿಗೆ ತೋರಿತು.

ಅವನು ಉನ್ನತ ಪ್ರದೇಶಗಳಲ್ಲಿ ತೋಪುಗಳನ್ನಿರಿಸಿ ಅವುಗಳನ್ನು ಹಾರಿಸತೊಡಗಿದನು. ದುರ್ಗದ ಗೋಡೆಯು ಆ ವಿನಾಶಕಾರಿ ತೋಪುಗಳಿಗೆ ತುತ್ತಾಯಿತು. ತೋಪ್ಚಿಗಳು ಮರುಧಾಳಿ ಮಾಡಲು ಎದ್ದರು. ಆದರೆ ರಾಣಿಯು ಅವರನ್ನು ತಡೆದಳು.

ನತ್ಥೇಖಾನನು ಎರಡನೆ ಬಾರಿ ಕಾರ್ಯಾಚರಣೆ ಪ್ರಾರಂಭಿಸುವುದರೊಳಗಾಗಿ

ಗುಡ್ಡದ ಮೇಲೆ ಧುಮಧುಮನೆ ಗುಂಡುಗಳು ಬಿದ್ದು ವಿಕಟವಾದ ಚೀತ್ಕಾರವೂ ಮತ್ತು ಅದರೊಂದಿಗೆ ಕಿಲ್ಲೆಯಿಂದ ಹೊಡೆದ ತೋಪುಗಳ ಘರ್ಜನೆಯೂ ಕೇಳಿಸಿಬಂದವು. ಭಾವುವಿನ ಗುರಿಯು ಬಹು ನಿರ್ದಿಷ್ಟವಾಗಿದ್ದಿತು. ಪುನಃ ಪ್ರತಿಧ್ವಾಳಿಯಾಯಿತು. ಇತ್ತ ರಾಣಿಯು ಗುಲಾಂ ಗೌಸ್‌ಖಾನನಿಗೆ ಅವನ ತೋಪುಗಳನ್ನು ಚಲಾಯಿಸಲು ಆಜ್ಞೆಯಿತ್ತಳು.

ಈಗಲೀಗ ನತ್ಥೇಖಾನನಿಗೆ ಯಾರೊಡನೆ ಯುದ್ಧಮಾಡುತ್ತಿರುವೆನೆಂಬುದರ ಅರಿವಾಯಿತು.

ಆತನು ಪರಿಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಿದನು. ಆದರೆ ಏನೂ ಪ್ರಯೋಜನವಾಗಲಿಲ್ಲ. ಆದುದರಿಂದ ತೋಪುಗಳನ್ನೂ, ಸಾಮಾನು ಸರಂಜಾಮು ಗಳನ್ನೂ ಇದ್ದಲ್ಲಿಯೇ ಬಿಟ್ಟು ಓಡಿಹೋದನು. ಆದರೆ ಅವನಿಂದ ಒಂದು ದುರಂತ ಪ್ರಾಪ್ತವಾಯಿತು—ಲಕ್ಷ್ಮೀದ್ವಾರದ ಮೇಲಿದ್ದ ಕರ್ನಲ್ ಜಮಾಖಾನನು ಮಡಿದನು.

ರಾತ್ರಿಯೆಲ್ಲಾ ಯುದ್ಧವು ಮಂದಗತಿಯಿಂದ ಸಾಗುತ್ತಲೆ ಇದ್ದಿತು. ಆದರೆ ರಾಣಿಯ ಚಾಣಾಕ್ಷತೆಯಿಂದ ಶತ್ರುವು ಒಂದು ಅಂಗುಲವೂ ಮುಂದುವರಿಯಲಾಗಲಿಲ್ಲ.

ಮಾರನೆಯ ದಿನವೂ ಯುದ್ಧವು ಮುಂದುವರಿಯಿತು—ನಗರದಾಚೆ ಸ್ವಲ್ಪ ದೂರದಲ್ಲಿ ನಡೆಯುತ್ತಿದ್ದಿತು. ನತ್ಥೇಖಾನನ ಸೈನ್ಯದ ಒಂದು ದೊಡ್ಡ ಭಾಗವು ಝಾನ್ಸಿಯ ಉತ್ತರಕ್ಕೆ ಹೋಗಿ ಪ್ರತಾಪಮಿಶ್ರನು ಕಟ್ಟಿದ್ದ ಪ್ರಾಕಾರದ ಗೋಡೆಯ ಆಶ್ರಯದಲ್ಲಿ ನಿಂತಿತು. ಆದರೆ ಇದೇ ಅದರ ಸರ್ವನಾಶಕ್ಕೆ ಕಾರಣವಾಯಿತು.

ದಿವಾನ್ ರಘುನಾಥಸಿಂಹನು ಒಂದು ದೂರದ ಹಳ್ಳಿಯಲ್ಲಿದ್ದುದರಿಂದ ಆತನಿಗೆ ಆಕ್ರಮಣದ ಸುದ್ದಿಯು ಸ್ವಲ್ಪ ವಿಳಂಬವಾಗಿ ಮುಟ್ಟಿತು. ಆತನು ಯುದ್ಧಾರಂಭ ವಾದ ಎರಡನೆಯ ದಿನ ಉನಾವಿನ ಕಡೆಯಿಂದ ಝಾನ್ಸಿಯ ಉತ್ತರದಿಕ್ಕಿನಲ್ಲಿ ಬಂದು ಸೇರಿದನು. ನಗರದ ಎಲ್ಲಾ ದ್ವಾರಗಳೂ ಭದ್ರಪಡಿಸಲಾಗಿದ್ದವು. ಅವನಿಗೆ ಅವನ್ನು ತೆರೆಯಿಸುವ ಅವಶ್ಯಕವೇನಿರಲಿಲ್ಲ. ಆತನು ಪ್ರತಾಪ ಮಿಶ್ರನು ನಿರ್ಮಿಸಿದ್ದ ಪ್ರಾಕಾ ರದ ಗೋಡೆಯ ಆಶ್ರಯದಲ್ಲಿದ್ದ ನತ್ಥೇಖಾನನ ಸೇನೆಯ ಆ ತುಕ್ಕಡಿಯಮೇಲೆ ಬಲ ವಾದ ಆಕ್ರಮಣ ಮಾಡಿದನು. ಇದರಿಂದ ಆ ಸೇನೆಯು ಬಹು ಸಂಕಟಕ್ಕೀಡಾ ಯಿತು. ಆ ಪ್ರಾಕಾರದ ಬಳಿಯಲ್ಲಿ ಒಂದು ಬೆಟ್ಟವಿದ್ದಿತು. ಅದರ ಆಸರೆಯಿಂದ ರಘುನಾಥಸಿಂಹನೂ ಮತ್ತು ನಗರದ ಪ್ರಾಕಾರದ ಗೋಡೆಯ ಹಿಂಬದಿಯಿಂದ ಝಾನ್ಸಿಯ ಸೈನ್ಯವೂ ತಮ್ಮ ಬಂದೂಕಗಳನ್ನು ಪ್ರಯೋಗಿಸಿ ನತ್ಥೇಖಾನನ ಈ ತುಕ್ಕಡಿಯನ್ನು ಧ್ವಂಸಮಾಡಿದರು. ಆಗ ಆ ಸೈನ್ಯವು ದಿಕ್ಕೆಟ್ಟು ಚಲ್ಲಾಪಿಲ್ಲಿಯಾ ಯಿತು. ಈ ವೇಳೆಗೆ ಆಗ್ನೇಯ ದಿಕ್ಕಿನಿಂದ ಕಾಶಿನಾಥನು ಬಂದು ಸೇರಿ ಆ ಸೇನೆಯು ಸರ್ವನಾಶವಾಗಲು ಮತ್ತೇನು ಉಳಿದಿದ್ದಿತೋ ಅದನ್ನು ಮಾಡಿ ಪೂರೈಸಿದನು.

ನಂತರ ಅನೇಕ ದಿನಗಳವರೆಗೂ ಝಾನ್ಸಿಯ ಅನತಿದೂರದಲ್ಲಿ ನತ್ಥೇಖಾನನ ಪರಾಜಿತ ಸೈನ್ಯದ ವಿಭಾಗಗಳು ಕಾದಾಡುತ್ತಿದ್ದು ಕಡೆಗೆ ಪಲಾಯನ ಮಾಡಿದವು. ನತ್ಥೇಖಾನನು ಅನೇಕ ಯುದ್ಧ ಸಾಮಗ್ರಿಗಳನ್ನು ಬಿಟ್ಟು ಓಡಿಹೋಗಬೇಕಾಯಿತು.

ಅವನು ತನ್ನಸೇನೆಯ ಹಲವರೊಂದಿಗೆ ಹೊಸ ಬಡಾವಣೆಯಲ್ಲಿದ್ದ ಆಲೀಬಹದ್ದೂರನ ಮನೆಗೆ ಹೋದನು. ಆಲೀಬಹದ್ದೂರನು ಇದನ್ನು ಅಷ್ಟಾಗಿ ಸ್ವಾಗತಿಸಲಿಲ್ಲ. ಆದರೆ ಆತನು ನಿರುಪಾಯನಾಗಿದ್ದನು.

ಕಾಶೀನಾಥನ ಪಡೆಯವರು ನತ್ಥೇಖಾನನು ಓಡಿಹೋದಮೇಲೆ ಅವನಿದ್ದ ಆಲೀಬಹದ್ದೂರನ ಮನೆಯನ್ನು ಆಕ್ರಮಣಮಾಡಿದರು. ನವಾಬನಿಗೆ ಆಗ ಸರ್ವನಾಶವಾಯಿತೆಂದು ವಿದಿತವಾಗಿ ತಲೆ ತಪ್ಪಿಸಿಕೊಳ್ಳಲು ಪ್ರಯತ್ನಿಸಿದನು. ಆತನ ಮನೆಯ ಹಿಂಬದಿಯಲ್ಲಿದ್ದ ತಗ್ಗಿನಲ್ಲಿ ಮೆಹದಿ ಉದ್ಯಾನವನವಿದ್ದಿತು. ಒಂದು ಸುರಂಗ ಮಾರ್ಗದಿಂದ ಈ ಉದ್ಯಾನದ ಮೂಲಕ ಹೊರಬೀಳಲು ಸಾಧ್ಯವಿದ್ದಿತು. ಜವಹರಸಿಂಹ ಇತ್ಯಾದಿಗಳು ಎಷ್ಟು ಬಲೆ ಬೀಸಿದರೂ ಆಲೀಬಹದ್ದೂರನಿಗೆ ತಪ್ಪಿಸಿಕೊಳ್ಳುವುದು ಕಷ್ಟವಾಗಲಿಲ್ಲ. ಅವನು ತನ್ನ ಸಂಸಾರದೊಂದಿಗೆ ಬೆಲೆ ಬಾಳುವ ವಸ್ತುಗಳನ್ನು ತೆಗೆದುಕೊಂಡು ಹೊರಬಿದ್ದನು.

ಇವರು ಒಂದು ಸುರಕ್ಷಿತ ಸ್ಥಾನವನ್ನು ಸೇರಿದನಂತರ ಪೀರಾಲಿಯು "ನೀವುಗಳು ಭಾಂಡೇರಾಕ್ಕೆ ಹೋಗಿರಿ, ನಾನು ಇಲ್ಲಿಯೆ ಇದ್ದು ರಾಣಿಯು ಸೇನೆಯನ್ನು ಸೇರಿಕೊಂಡು ಮಹಲಿನ ಮೇಲೆ ನಾನೂ ಧಾಳಿಮಾಡುವೆನು. ಅವರ ಸ್ನೇಹವನ್ನು ಗಳಿಸಿಕೊಂಡು ಮಹಲಿನಲ್ಲಿ ಯಾವ ಯಾವ ಸಾಮಗ್ರಿಗಳನ್ನು ಉಳಿಸಿಕೊಳ್ಳಬಹುದೋ ಅವನ್ನು ಉಳಿಸಿಕೊಳ್ಳಲು ಪ್ರಯತ್ನಿಸುವೆನು. ನಾನು ಇಲ್ಲಿಯೇ ಇದ್ದುಕೊಂಡಿದ್ದರೆ ನಿಮಗೆ ಸರ್ವಸಹಾಯವನ್ನೀಯ ಬಲ್ಲೆ." ಎಂದನು.

"ಅದು ಹೇಗೆ?" ಎಂದು ಆಲೀಬಹದ್ದೂರನು ಕಾತರದಿಂದ ಪ್ರಶ್ನೆಮಾಡಿದನು.

ಪೀರಾಲಿಯು "ನಿಮಗೆ ಆಗಿಂದಾಗ್ಗೆ ಸಮಾಚಾರವನ್ನು ಕೊಡುತ್ತಿರುವೆನು. ಮತ್ತು ಆಂಗ್ಲೇಯರು ರಾಣಿಯು ಮೇಲೆ ಯುದ್ಧಮಾಡಲು ಬಂದಾಗ ಅವರಿಗೆ ಬೇಕಾದ ಸಹಾಯವನ್ನೀಡುವೆನು. ನೀವು ಪುನಃ ಝಾನ್ಸಿಗೆ ಬರುವಿರಷ್ಟೆ? ಆಗ ಮಹಲ್ಲು ಪುನಃ ನಿಮ್ಮದಾಗುವುದು ಮತ್ತು ಕಂಪೆನಿ ಸರ್ಕಾರದಿಂದ ನಿಮಗೆ ಒಂದು ದೊಡ್ಡ ಜಹಗೀರಿಯೂ ದೊರಕುವುದು. ರಾಣಿಯ ರಾಜ್ಯಭಾರವು ಬಹಳ ದಿನ ಉಳಿಯಲಾರದು. ಸಧ್ಯಕ್ಕೆ ಈ ಅವಮಾನವನ್ನು ನುಂಗಿಕೊಂಡು ಸಾವಧಾನದಿಂದಿರಿ. ಇದಕ್ಕೆ ಸರಿಯಾದ ಪ್ರತಿಕ್ರಿಯೆಮಾಡುವ ಕಾಲವು ಬಂದೇ ಬರುವುದು. ಇದರಲ್ಲಿ ಸಂದೇಹವಿಲ್ಲ, ನಂಬಿಕೆಯಿಡಿ" ಎಂದು ಉತ್ತರವಿತ್ತನು.

ಆಲೀಬಹದ್ದೂರನು ಅಲ್ಲಿಂದ ಹೊರಟುಹೋದಮೇಲೆ ಪೀರಾಲಿಯು ರಾಣಿಯ ಸೈನ್ಯದೆಡೆ ಬಂದನು. ಆತನನ್ನು ಸೈನಿಕರೆಲ್ಲರೂ ಗುರುತಿಸಬಲ್ಲವರಿದ್ದು ಆವನನ್ನು ಹಿಡಿದು ಹೊಡೆಯಲು ಮುನ್ನುಗ್ಗಿದರು. ಸಾಗರಸಿಂಹನೂ ಅವರಲ್ಲೊಬ್ಬನಾಗಿದ್ದನು.

ಪೀರಾಲಿಯು "ಇದೇನು ನೀವು ಮಾಡುತ್ತಿರುವುದು? ನಾನು ನಿಮ್ಮ ಮಿತ್ರನೆಂಬುದು ನಿಮಗೆ ತಿಳಿಯದೆ? ನಾನು ರಾಣಿಯ ಹಿತಚಿಂತಕನೆಂಬುದು ಇಲ್ಲಿರುವವರೆಲ್ಲರಿಗೂ ತಿಳಿದಿದೆ. ನಾನೇನೋ ನವಾಬ್ ಸಾಹೇಬರ ಸೇವೆಯನ್ನು ಮಾಡುತ್ತಲಿದ್ದರೂ ಅವರಿಗೆ ಸರಿಯಾದ ಮಾರ್ಗದಲ್ಲಿ ನಡೆಯಿರಿ ಎಂದು ಬುದ್ಧಿವಾದವನ್ನು ಹೇಳುತ್ತಿದ್ದೆ. ಅದು ಅವರಿಗೆ ರುಚಿಸಲಿಲ್ಲ. ಈಗ ಅವರೇ ಅನುಭೋಗಿಸುವರು. ನಾನು ನಿಮಗೆ ಸಹಾಯವೆಸಗಲು ಬಂದಿರುವೆನು. ಈ ಮಹಲ್ಲು ತೋಪುಗಳಿಂದ ಸುಡಲೂ ಲಾಯಖ್ಖಿಲ್ಲ. ಇದನ್ನು ಬೆಂಕಿಯಿಟ್ಟು ಸುಟ್ಟುಬಿಡಿ" ಎಂದನು.

ಸೈನಿಕರಿಗೆ ಈ ಮಾತನ್ನು ಕೇಳಿ ಸ್ವಲ್ಪ ಭರವಸೆಯುಂಟಾಯಿತು. ಸಾಗರಸಿಂಹನು "ಎಲ್ಲಿಂದ ಬೆಂಕಿಯಿಡಬೇಕು, ನವಾಬನೆಲ್ಲಿರುವನು ?" ಎಂದು ಕೇಳಿದನು.

ಪೀರಾಲಿಯು "ಒಳಗಿರುವನು. ಹೆಬ್ಬಾಗಿಲಿನಿಂದ ಬೆಂಕಿಯನ್ನಿಡಲು ಪ್ರಾರಂಭಿಸಿ. ಆಗ ಬಾಗಿಲುಗಳು ತಾವೇ ತಾವಾಗಿ ತೆರೆಯುವುವು. ಒಳಗೆ ಬೇಕಾದಷ್ಟು ಸಾಮಾನು ಸರಂಜಾಮುಗಳಿವೆ. ನನಗೆಲ್ಲವೂ ತಿಳಿದಿದೆ. ನಿಮಗೆ ಸಮಗ್ರವಾಗಿ ತಿಳಿಸಬಲ್ಲೆ" ಎಂದನು.

ಸಿಪಾಯಿಗಳು ಹೆಬ್ಬಾಗಿಲಿಗೆ ಬೆಂಕಿಯನ್ನಿಟ್ಟರು. ಪೀರಾಲಿಯು ಸ್ವತಃ ಅಗ್ನಿಕಾರ್ಯವನ್ನು ಮಾಡಿದನು. ಮಹಲಿನೊಳಗೆ ಪ್ರವೇಶಮಾಡಿದ ಮೇಲೆ ಒಳಗೆ ಯಾರೂ ಇಲ್ಲವೆಂಬ ಅಂಶವು ವ್ಯಕ್ತವಾಯಿತು.

"ಈ ಗಡಿಬಿಡಿಯಲ್ಲಿ ನವಾಬ್ ಸಾಹೇಬನು ತಪ್ಪಿಸಿಕೊಂಡು ಹೋಗಿರುವಂತೆ ಕಾಣುತ್ತದೆ. ಆದರೆ ಸಾಮಾನುಗಳೆಲ್ಲಾ ಇದ್ದಲ್ಲಿಯೇ ಇವೆ." ಎಂದು ಪೀರಾಲಿಯು ಅಲ್ಲಿದ್ದ ಸಾಮಾನ್ಯ ಧನ ಸಂಪತ್ತಿಯನ್ನು ಲೂಟಿಮಾಡಲು ತೋರಿಸಿದನು. ಅಗ್ನಿಯು ಶಾಂತವಾಯಿತು. ಆದರೆ ನಷ್ಟವೇನೋ ಬಹಳವಾಗಿದ್ದಿತು.

ಪೀರಾಲಿಗೆ ರಾಣಿಯ ಕಡೆ ಸೇರಿ ನವಾಬನ ಮತ್ತು ನತ್ಯೇಖಾನನ ಎದುರಾಳಿಯಾಗಿ ಯುದ್ಧ ಮಾಡಿದನೆಂದು ಯಶಸ್ಸು ಲಭಿಸಿತು. ಕಾಶೀನಾಥ ಮತ್ತು ರಘುನಾಥ ಸಿಂಹರ ವಿಶ್ವಾಸವನ್ನು ಗಳಿಸಿದನು. ಮೋತೀಬಾಯಿಗೆ ಇದನ್ನು ಕಂಡು ಆಶ್ಚರ್ಯವಾಯಿತು. ಆದರೆ ವಿಜಯದ ದರ್ಪದಲ್ಲಿ ತಮ್ಮ ಹಿತಚಿಂತಕನ ಮೇಲೆ ಸಂಶಯಪಡುವುದು ಈಶ್ವರನಿಗೆ ಕೃತಜ್ಞತೆಯನ್ನು ಸಮರ್ಪಿಸುವುದರಲ್ಲಿ ಲೋಪಮಾಡಿದಂತಾಗುವುದು ಎಂದು ನಂಬಿ ಸುಮ್ಮನಾದಳು. ಆದುದರಿಂದಲೇ ಪೀರಾಲಿಯು ವಿಶ್ವಾಸಪಾತ್ರರಲ್ಲೊಬ್ಬನಾದನು.

ರಾಣಿಯು ಗುಲಾಂ ಗೌಸ್‌ಖಾ್, ರಘುನಾಥಸಿಂಹ ಮತ್ತು ಭಾವುಬಕ್ಷಿಯರಿಗೆ ವಿಶೇಷ ಪುರಸ್ಕಾರವಿತ್ತಳು.

ರಘುನಾಥಸಿಂಹನು ದಿವಾನಖಾನೆಯಲ್ಲಿ ರಾಣಿಯೊಡನೆ ಒಂದು ಪ್ರಾರ್ಥನೆಯನ್ನು ಮಾಡಿದನು.

"ಸರ್ಕಾರ್, ನನಗೆ ಎಲ್ಲವೂ ದೊರಕಿದವು. ಆದರೆ ಲಡ್ಡುಗಳು ಮಾತ್ರ ಬಾಕಿ ಉಳಿದಿವೆ."

ರಾಣಿಯು ನಕ್ಕು ಹತ್ತಿರವಿದ್ದ ಮುಂದರಿಯನ್ನು ಕುರಿತು "ಅಂದು ನೀನೇ ತಟ್ಟೆಯನ್ನು ತೆಗೆದುಕೊಂಡು ಬಂದೆ. ಇಂದೂ ನೀನೇ ತೆಗೆದುಕೊಂಡು ಬಾ" ಎಂದಳು.

ಮುಂದರಿಯು ಲಡ್ಡುಗಳ ತಟ್ಟೆಯನ್ನು ತಂದಳು. "ಈಗ ನೀನೇ ಹಂಚು" ಎಂದು ಆದೇಶವಿತ್ತಳು.

ಮುಂಧರಿಯು ರಘುನಾಥಸಿಂಹನಿಗೆ ಲಡ್ಡುಗಳನ್ನಿತ್ತಳು. ಅವನು ನಗುತ್ತಾ ಅವುಗಳನ್ನು ಸ್ವೀಕರಿಸಲು ಪ್ರಯತ್ನಿಸಿದನು. ಆದರೆ ಆತನಿಗೆ ಬಹಳ ತಿನ್ನಲು ಸಾಧ್ಯವಾಗಲಿಲ್ಲ. ಆತನ ಗಂಟಲಲ್ಲಿ ಏನೋ ಒಂದು ವಿಧವಾದ ತಡೆಯುಂಟಾಗುತ್ತಿದ್ದಿತು.

## ೫೮

ರಾತ್ರಿ ಮೋತೀಬಾಯಿಯು ಅರಮನೆಗೆ ಬಂದಳು. ರಾಣಿಯು ಅವಳಿಂದ ಭಜನೆಗಳನ್ನು ಹಾಡಿಸಿ ಕೇಳಿದಳು. ಅದು ಸಮಾಪ್ತವಾದನಂತರ ಕಾಶೀಬಾಯಿಯು "ಸರ್ಕಾರ್, ನಾನು ದೊಡ್ಡ ದೊಡ್ಡ ತೋಪುಗಳನ್ನು ಹಾರಿಸುವ ವಿದ್ಯೆಯನ್ನು ಕಲಿಯಬೇಕೆಂದಿರುವೆನು. ಭಾವುಬಕ್ಷಿಯವರು ಕಡಕ್‌ಬಿಜಲಿಯನ್ನು ಚಲಾಯಿಸುತ್ತಿರುವಾಗ ಅವರೊಡನಿದ್ದೆ ಗುರಿಯಿಡುವುದು, ಹೊರಗಿನ ಪರಿಸ್ಥಿತಿಯನ್ನು ಗಮನಿಸಿ ಅದಕ್ಕೆ ತಕ್ಕಂತೆ ತೋಪಿನ ಬಾಯನ್ನು ತಿರುಗಿಸುವುದು, ಒಬ್ಬಂಟಿಗನಾಗಿಯೇ ತೋಪಿಗೆ ಮದ್ದಿಟ್ಟು ಹೊತ್ತಿಸಿ ದೊಡ್ಡ ಶತ್ರುಸೈನ್ಯದಲ್ಲಿಯೂ ಗದ್ದಲವನ್ನೆಬ್ಬಿಸುವುದು, ಇವೇ ಮೊದಲಾದ ಕಾರ್ಯಗಳು ನನಗೆ ಬಹಳವಾಗಿ ಮನಸ್ಸಿಗೆ ಹಿಡಿಸಿತು" ಎಂದಳು.

ರಾಣಿಯು "ನಿಮ್ಮೆಲ್ಲರಿಗೂ ತೋಪು ಹಾರಿಸುವ ಮತ್ತು ಅದಕ್ಕೆ ಸಂಬಂಧಪಟ್ಟ ಕೆಲಸಗಳನ್ನು ಕಲಿಸಿಕೊಡಬೇಕೆಂದು ನಿಶ್ಚಯಮಾಡಿದ್ದೇನೆ. ಆದರೆ ಪೂರಾ ಶಿಕ್ಷೆಗೆ ಹೆಚ್ಚು ಸಮಯ ಹಿಡಿಯಬಹುದು" ಎಂದಳು.

ಸುಂದರಿಯು "ನಮ್ಮ ಗುಲಾಂ ಗೌಸ್‌ಖಾನನು ಬಹಳ ಚತುರನಾದ ತೋಪ್ಚಿಯು. ಅಲ್ಲದೇ ಆಂಗ್ಲೇಯ ಸೇನೆಯಿಂದ ಬಂದಿರುವ ಒಬ್ಬ ಲಾಲತಬ್ರಾಹ್ಮಣನೆಂಬುವನಿಗೂ ಈ ಕೆಲಸದ ಪರಿಚಯವು ಚೆನ್ನಾಗಿದೆ. ಅವನು ಅನುಭವದಿಂದಲೂ

ಲಾಭ ಪಡೆಯಬಹುದು" ಎಂದಳು.

ಮುಂದರಿಯು ಬಹಳ ಉತ್ಸಾಹದಿಂದ "ರಘುನಾಥಸಿಂಹರೂ ಈ ಕಾರ್ಯವನ್ನು ಚೆನ್ನಾಗಿಬಲ್ಲರು." ಎಂದಳು.

ಒಂದು ಕ್ಷಣಾರ್ಧ ರಾಣಿಯ ಕಣ್ಣುಗಳು ಅಸಾಧಾರಣ ಜಾಗ್ರತಿಹೊಂದಿ ಪುನಃ ಶಾಂತವಾದವು. ಮುಂದರಿಯು ಇದನ್ನು ಗಮನಿಸಲಿಲ್ಲ.

ರಾಣಿಯು ಮೋತೀಬಾಯಿಯನ್ನು ಕುರಿತು "ನಿನಗೆ ಈಗಲೂ ನಾಟಕಾಭಿನಯ ಮಾಡಲು ಬರುತ್ತದೆಯೋ ಇಲ್ಲ ಮರೆತು ಹೋಯಿತೋ ?" ಎಂದು ಕೇಳಿದಳು.

ಮೋತಿ—ಸರ್ಕಾರ್, ಒಂದು ಬಾರಿ ಈಜು ಕಲಿತವರಿಗೆ ಎಂದಾದರೂ ಮರೆಯಲು ಸಾಧ್ಯವೆ? ಆಜ್ಞೆಯಾದರೆ ಎಂದಾದರೂ ಒಂದು ಒಳ್ಳೆಯ ನಾಟಕವನ್ನು ಪ್ರದರ್ಶಿಸಲೆ ?

ರಾಣಿ—ನಿಶ್ಚಿಂತಳಾಗಿ ಎಂದಾದರೂ ಒಂದು ದಿನ ಅವಶ್ಯವಾಗಿ ನೋಡುವೆನು. ನಿನ್ನ ಅಭಿಪ್ರಾಯದಲ್ಲಿ ಯಾವ ನಾಟಕವನ್ನು ಎಲ್ಲದಕ್ಕಿಂತಲೂ ಉತ್ತಮವೆಂದು ಪರಿಗಣಿಸುತ್ತೀಯಾ ?

ಮೋತೀ—ರತ್ನಾವಳಿ, ಶಾಕುಂತಲಾ, ಹರಿಶ್ಚಂದ್ರ, ಪ್ರಬೋಧ ಚಂದ್ರೋದಯ ಇವುಗಳು ಚೆನ್ನಾಗಿಯೇ ಇರುವುವು.

ರಾಣಿ—ಗವಾಲಿಯರಿನ ಒಂದು ನಾಟಕಮಂಡಲಿಯು ಹರಿಶ್ಚಂದ್ರ ನಾಟಕವನ್ನು ಬಹಳ ಚೆನ್ನಾಗಿ ಅಭಿನಯಿಸುತ್ತಾರೆಂದು ಕೇಳಿದ್ದೇನೆ.

ಮೋತೀ—ನಮ್ಮ ಮಂಡಲಿಯ ಮತ್ತು ಗವಾಲಿಯರಿನ ಮಂಡಲಿಯ ನಾಟಕಗಳನ್ನು ನೀವೇ ಸರಿತೂಗಿ ನೋಡಿ, ಝಾನ್ಸಿಯ ಮಂಡಲಿಯು ಉತ್ತಮವೆನಿಸಿಕೊಳ್ಳುವುದರಲ್ಲಿ ನನಗೆ ಸಂಶಯವೇ ಇಲ್ಲ.

ರಾಣಿ—ಮೋತೀಬಾಯಿ, ನಾನು ಝಾನ್ಸಿಯ ಎಲ್ಲಾ ವಿಷಯಗಳಲ್ಲೂ ಮುಂದಾಳಾಗಿರುವುದನ್ನು ನೋಡಲು ಆಶಿಸುತ್ತೇನೆ. ಅಶ್ವಾರೋಹಣದಲ್ಲಿ, ಬಾಣ ಪ್ರಯೋಗದಲ್ಲಿ ವಜೀರ್ ಖಾ, ಅಮಾರ್ ಖಾನರು; ಗೋಲಂದಾಜಿ ಪಾರಂಗತ ಗುಲಾಂ ಗೌಸ್ ಖಾ; ಸೈನ್ಯಸಂಚಾಲನೆಯಲ್ಲಿ ಜವಹರಸಿಂಹ ರಘುನಾಥಸಿಂಹರು, ಗಾಯನದಲ್ಲಿ ಮೃಗಲಖಾ, ರಾಜನೀತಿಯಲ್ಲಿ ಭಾವು ಬಕ್ಷಿ, ಚಿಪ್ಪಿಗರಲ್ಲಿ ಬಲದೇವದರ್ಜಿ, ನೃತ್ಯದಲ್ಲಿ ದುರ್ಗಾ. ಇವರೆಲ್ಲರೂ ಝಾನ್ಸಿಯ ರಾಜ್ಯಕ್ಕೆ ಭೂಷಣಪ್ರಾಯರು. ಪ್ರತಿಯೊಂದು ವಿದ್ಯೆಯಲ್ಲಿಯೂ ಝಾನ್ಸಿಯು ಅಖಂಡ ಹಿಂದೂಸ್ಥಾನಕ್ಕೆ ಮುಂದಾಳಾಗಿರಲಿ. ಆದರೆ ಇವೆಲ್ಲವೂ ಆಂಗ್ಲೇಯರ ಹಸ್ತದಿಂದ ಬಿಡುಗಡೆಯಾದಾಗಲೇ ಸಾಧ್ಯ.

**ಮೋತೀ—ಸರ್ಕಾರ್,ನೀವು ಕೈಕೊಂಡಿರುವ ಈ ಯಜ್ಞಕ್ಕೆ ಎಂದಾದರೂ**

ಒಂದು ದಿನ ಪ್ರತಿ ಫಲ ದೊರಕದೇ ಇರದು.

ಮುಂದರಿ—ಸರ್ಕಾರ್, ಬ್ರಾಹ್ಮಣರು ಒಂದು ಯಜ್ಞವನ್ನು ಮಾಡಬೇಕೆಂದು ಸಲಹೆಯಿತ್ತಿದ್ದಾರೆ.

ರಾಣಿ—ಬ್ರಾಹ್ಮಣರಿಗೆ ಯಜ್ಞ ಮತ್ತು ಮೃಷ್ಟಾನ್ನ ಭೋಜನವು ಅವಶ್ಯಕ. ಆಗಲಿ ಮಾಡಿಸುವೆನು. ಆದರೆ ಯುದ್ಧ ದೇವತೆಯಾದ ಕಾರ್ತಿಕೇಯನು ಈ ಯುಗದಲ್ಲಿ ಮದ್ದುಗುಂಡುಗಳ ಹೋಮವನ್ನು ಚೆನ್ನಾಗಿ ಇಷ್ಟಪಡಲಾರಂಭಿಸಿದ್ದಾನೆ. ಕಲಿಯುಗದ ಬ್ರಾಹ್ಮಣರಿಗೆ ಈ ಹೋಮ ಮಾಡಿಸಲು ಪರಿಶ್ರಮವಿಲ್ಲ.

ಮುಂದರಿ—ನಮ್ಮ ಇಲ್ಲಿನ ಭಟ್ಟರೂ, ಶಾಸ್ತ್ರಿಗಳೂ ಅನುಷ್ಠಾನಗಳನ್ನು ಜಾರಿಗೆ ತರಬೇಕೆಂದು ಆಗ್ರಹಮಾಡುತ್ತಿರುವರು; ಎಲ್ಲಾ ಕಾರ್ಯಗಳನ್ನು ತೊರೆದು ಮೊದಲು ಅವುಗಳ ಪಾಲನೆಯಾಗಬೇಕೆಂದು ಹೇಳುತ್ತಿರುವರು.

ರಾಣಿ—ಎಲ್ಲಾ ಕಾರ್ಯವನ್ನೂ ಬಿಟ್ಟು ಇದನ್ನೇ ಮಾಡಲು ಸಾಧ್ಯವಿಲ್ಲ. ಆದರೆ ಇತರ ಕಾರ್ಯಗಳೊಂದಿಗೆ ಅಗತ್ಯವಾಗಿ ಮಾಡಬಹುದು. ನಾಳೆಯಿಂದ ಮೊದಲನೆಯದಾಗಿ ಮೋತೀಬಾಯಿಯು ಗೌಸ್‌ಖಾನನಿಂದಲೂ ಕಾಶೀಬಾಯಿಯು ಭಾವುಬಕ್ಷಿಯಿಂದಲೂ, ಮುಂದರಿಯು ರಘುನಾಥಸಿಂಹನಿಂದಲೂ ತೋಪು ಚಲಾಯಿಸುವುದನ್ನು ಕಲಿಯಬೇಕು. ಸುಂದರಿ ನೀನು ಯಾರಿಂದ........

ಸುಂದರಿ—ಸರ್ಕಾರ್, ದಿವಾನ್ ದುಲ್ಹಾಜುವಿಗೂ ಒಳ್ಳೆಯ ಪರಿಶ್ರಮವಿದೆ.

ರಾಣಿ—ಆತನ ಮೇಲೆ ನನ್ನ ಗಮನವು ಅಷ್ಟಾಗಿ ಹೋಗಿಲ್ಲ. ಆ ದಿನ ಅವನು ಗಾಬರಿಯಾಗಿ ಬಿಟ್ಟನು. ಆದರೂ ತೋಪು ಹಾರಿಸುವುದರಲ್ಲಿ ಗಣ್ಯನೇನೋ ಅಹುದು. ಸುಂದರಿಯು ಅವನಿಂದ ಕಲಿಯಲಿ.

ಕಾಶೀ—ಅಂದು ರಾತ್ರೆ ಭಾವುಬಕ್ಷಿಯಿತ್ತ ಪ್ರಹಾರಗಳನ್ನು ನತ್ಥೇಖಾನನು ಈ ಜನ್ಮದಲ್ಲಿ ಮರೆಯಲಾರನು. ಈಗಲೂ ಆ ಶಬ್ದವು ನನ್ನ ಕಿವಿಯಲ್ಲಿ ಮೊರೆಯುತ್ತಿರುವುದು.

ರಾಣಿ—ಈ ಬಾರಿ ಪರಂಗಿಯವರನ್ನು ಎದುರಿಸಬೇಕಾಗುವುದು. ಆಗ ನಿಮ್ಮೆಲ್ಲರ ಪರೀಕ್ಷೆಯಾಗುವುದು.

ಕಾಶೀ—ನಮ್ಮ ಪರೀಕ್ಷೆಯ ಫಲವು ನಿಮ್ಮನ್ನು ನಿರಾಶರನ್ನಾಗಿಸುವುದಿಲ್ಲ.

ಮೋತೀಬಾಯಿಗೆ ಒಂದು ಮಾತು ವೇದನೆಯನ್ನುಂಟುಮಾಡುತ್ತಿದ್ದಿತು. ಅವಳು ಪ್ರಾಸಂಗಿಕವಾಗಿ ಮಾತನಾಡುತ್ತಾ "ಸರ್ಕಾರ್, ಎಲ್ಲಾ ಕಾರ್ಯಕ್ರಮಗಳು ಒಂದರೊಂದಿಗೊಂದು ಮುಂದುವರಿಯುತ್ತಾ ಹೋಗಬೇಕೆಂದು ಅಪ್ಪಣೆ ಕೊಡಿಸಿದಿರಿ. ಅಂತೆಯೇ ನಾಟಕಶಾಲೆಯ ಕಾರ್ಯವನ್ನು ಪ್ರಾರಂಭಿಸಲೆ ?" ಎಂದು ಕೇಳಿದಳು.

ರಾಣಿಯು "ಅದಕ್ಕಾಗಿ 'ನೀನು ವಿಶ್ವಪ್ರಯತ್ನವನ್ನೇನು ಮಾಡಬೇಕಾಗಿದೆ?

ನೃತ್ಯಗಾಯನಗಳಲ್ಲಿ ಪಾರಂಗತಳಾಗಿರುವೆ. ತಕ್ಕ ಸಮಯ ಒದಗಿದಾಗ ನಿನಗೆ ತಿಳಿಸುವೆನು" ಎಂದಳು.

ಮೋತೀ—ಸರ್ಕಾರ್, ನೀವೇನೋ ದುರ್ಗಿಯ ನೃತ್ಯವನ್ನು ಪ್ರಶಂಸಿಸಿದಿರಿ. ಅವಳು ಕಥಕ್ ನಾಟ್ಯವನ್ನೇನೋ ಚೆನ್ನಾಗಿ ಬಲ್ಲಳು. ಆದರೆ ಪ್ರಾಚೀನ ನೃತ್ಯ ಕಲೆಯು ಸ್ವಲ್ಪವೂ ತಿಳಿಯದು.

ರಾಣಿಯು ಮುಗುಳ್ನಗೆ ಬೀರಿದಳು.

ರಾಣಿ—ನಾನು ಮರೆತಿದ್ದೆ ಮೋತಿ. ವಾಸ್ತವದಲ್ಲಿ ನೀನೇ ಝಾನ್ಸಿಯ ನೃತ್ಯ ಕಲಾಶಿರೋಮಣಿ, ಆದರೆ ನೀನು ವೈರಿಗಳನ್ನು ಗುಂಡುಗಳಿಂದ ಮುಗ್ಧರನ್ನಾಗಿ ಮಾಡಬೇಕಾಗುವುದು.

ಮೋತೀಬಾಯಿಯು ದೃಢತಾ ಪೂರ್ವಕವಾಗಿ "ಸರ್ಕಾರ್, ಅನಂತಕಾಲದವರೆಗೆ ಆ ಮಾತು ನೆನಪಿರುವಂತೆ ಶತ್ರುಗಳನ್ನು ಮುಗ್ಧ ಗೊಳಿಸುವೆನು." ಎಂದಳು.

ಮುಂದರಿಯು ಒತ್ತಾಯ ಪಡಿಸುತ್ತಾ "ಸರ್ಕಾರ್, ನಾಟಕವು ಒಂದು ದಿನ ನಡೆಯಲಿ" ಎಂದಳು.

ರಾಣಿಯು "ಹಾಗೇ ಆಗಲಿ ಮುಂದರಿ, ಮೋತೀಬಾಯಿಯು ಅದರ ಏರ್ಪಾಡು ಮಾಡುವಳು. ಯಜ್ಞದ ಪೂರ್ಣಾಹುತಿಯೆಂದಾಗುವುದೋ ಅಂದು ರಾತ್ರೆ ನಾಟಕ ಪ್ರದರ್ಶನವಾಗಲಿ. ಮೋತೀ ನಿನ್ನೊಂದಿಗೆ ಈ ನಾಟಕದ ವಿಚಾರವಾಗಿ ಸ್ವಲ್ಪ ಮಾತನಾಡಬೇಕಾಗಿರುವುದು.

ಮೋತೀ—ಅಪ್ಪಣೆಯಾಗಲಿ ಸರ್ಕಾರ್.

ರಾಣಿ—ನೀನು ಅಭಿನಯ ಮಾಡುವಾಗ ನಿನ್ನನ್ನೇ ನೀನು ಸಂಪೂರ್ಣವಾಗಿ ಮರೆತು ಬಿಡುವೆಯಾ ?

ಮೋತೀ—ಸಂಪೂರ್ಣ ಮರೆಯುಲಾರೆನು ಸರ್ಕಾರ್.

ರಾಣಿ—ಮರೆಯಲಾರದೆ ಜಾಗೃತವಾಗಿರುವುದೇನು ?

ಮೋತೀ—ನನ್ನ ನಿಜಸ್ಥಿತಿ, ಪ್ರೇಕ್ಷಕರು ಮತ್ತು ಅಭಿನಯ.

ರಾಣಿ—ಎಲ್ಲಾ ಪ್ರೇಕ್ಷಕರನ್ನೇ ?

ಮೋತೀ—ಇಲ್ಲಾ ಸರ್ಕಾರ್, ಯಾರು ವಿಶೇಷವಾದ ಅಭಿರುಚಿಯನ್ನು ತೋರಿಸುವರೋ ಅವರ ಮೇಲೆ ಸಾಮಾನ್ಯವಾಗಿ ಗಮನವೇರ್ಪಡುವುದು. ಆಗಲೀಗ ನಾಟಕವು ಕಳೆಕಟ್ಟುವುದು.

ರಾಣಿ—ನಿನಗೆ ಅಭಿರುಚಿಯಿರುವ ಪ್ರೇಕ್ಷಕರು ಇವರೇ ಎಂದು ಜ್ಞಾಪಕವಿರುವುದೆ ?

ಮೋತೀ—ಮೇಲಿಂದ ಮೇಲೆ ನಾಟಕ ನೋಡಲು ಅವರು ಬಂದರೆ ಆಗ

ಜ್ಞಾಪಕವಿರುವುದು.

ರಾಣಿ—ಅಂತಹ ನಿನ್ನ ಪ್ರೇಕ್ಷಕರ ಸ್ಮರಣೆಯು ಈಗಲೂ ನಿನಗಿರುವುದೆ?

ಮೋತೀಬಾಯಿಯ ಕಣ್ಣುಗಳು ಸ್ವಲ್ಪ ಲಜ್ಜೆಯಿಂದ ಕೂಡಿದವು. ಆದರೆ ಅದನ್ನು ತೋರ್ಪಡಿಸಿಕೊಳ್ಳದೇ "ಹೌದು ಸರ್ಕಾರ್, ಕೆಲವರು ನೆನಪಿನಲ್ಲಿರುವರು" ಎಂದು ಉತ್ತರವಿತ್ತಳು.

ರಾಣಿಯು "ನಿನಗೆ ಹೆಚ್ಚಾಗಿ ನೆನಪಿಗೆ ಬರುವವರು ಯಾರು?" ಎಂದು ಕೇಳಿದಳು.

ಮೋತೀಬಾಯಿಯು ಪರವಶಳಾಗಿ ದೃಷ್ಟಿಯನ್ನು ತಗ್ಗಿಸಿದಳು. ನಂತರ ತಲೆಯೆತ್ತಿ ಏನೋ ಹೇಳಲು ಹೋಗಿ ಸ್ವಲ್ಪ ನಕ್ಕಳು. ಪುನಃ ಗಂಭೀರಳಾಗಿ ಸ್ವಲ್ಪ ಕೆಮ್ಮಿ "ಯಾವ ಹೆಸರೂ ಸದ್ಯಕ್ಕೆ ನೆನಪಿಗೆ ಬರುತ್ತಿಲ್ಲಾ ಸರ್ಕಾರ್" ಎಂದು ನಕ್ಕಳು.

ರಾಣಿಗೂ ನಗೆ ಮೂಡಿತು. "ಆಗಲಿ, ಯಾವಾಗ ನೆನಪಿಗೆ ಬರುವುದೋ ಆಗ ತಿಳಿಸು. ಈಗೇನು ಅವಸರವಿಲ್ಲ" ಎಂದಳು.

ಕಾಶೀ—ಸರ್ಕಾರ್, ಇವಳ ಜೊತೆಯಲ್ಲಿ ಜೂಹಿಯೂ ಅಭಿನಯಿಸುತ್ತಿದ್ದಳು.

ರಾಣಿ—ಅವಳೂ ಈಗ ನಮ್ಮ ಕೆಲಸವನ್ನು ಮಾಡುತ್ತಿರುವಳು.

ಮೋತೀ—ಅವಳು ಚೆನ್ನಾಗಿ ಕೆಲಸಮಾಡಿದ್ದಾಳೆ ಮತ್ತು ಮುಂದೆಯೂ ಮಾಡುವಳು.

ರಾಣಿ—ಅವಳಿಗೂ ಗುಲಾಂ ಗೌಸ್‌ಖಾನನಿಂದ ತೋಪು ಚಲಾಯಿಸುವುದನ್ನು ಕಲಿಸಿಕೊಡು. ನನಗೆ ತೋಪ್ಚಿಗಳ ಅವಶ್ಯಕತೆ ಬಹಳವಾಗಿದೆ. ಯಾರಲ್ಲಿ ಒಳ್ಳೆಯ ತೋಪುಗಳೂ ಮತ್ತು ತೋಪ್ಚಿಗಳೂ ವಿಪುಲವಾಗಿವೆಯೋ ಅವರು ವಿಜಯಗಳಿಸುವರು.

ಕಾಶೀ—ಎಲ್ಲಿ ನಮ್ಮ ಶ್ರೀಮಂತ ಸರ್ಕಾರರಿರುವರೋ ಅಲ್ಲಿ ವಿಜಯವು ಶತಃಸಿದ್ಧ.

## ೫೯

ಝಾಂಸಿಯ ದಕ್ಷಿಣ ದಿಕ್ಕಿನಲ್ಲಿ ಸಾಗರವೆಂಬ ಜಿಲ್ಲೆ ಇದೆ. ಆ ಜಿಲ್ಲೆಯ ಆಗ್ನೇಯ ದಿಕ್ಕಿನಲ್ಲಿ ಭೋಪಾಲ್ ಸಂಸ್ಥಾನವು ನೆಲೆಸಿದೆ. ಆ ಸಂಸ್ಥಾನದಲ್ಲಿ ಆಮಾಪಾನಿ ಎಂಬ ಕೋಟೆಯಿದ್ದಿತು. ಅದಕ್ಕೆ ಅನತಿ ದೂರದಲ್ಲೇ ರಾಹತ್‌ಗಡವೆಂಬ ಕಿಲ್ಲೆ. ಆಮಾಪಾನಿಯ ಅಧಿಕಾರಿಯು ರಾಹತ್‌ಗಡದ ಮೇಲೆ ಆಕ್ರಮಣ ಮಾಡಿದನು. ರಾಹತ್‌ಗಡದಲ್ಲಿ ಬಹಳಮಂದಿ ಪಠಾಣರು ಒಟ್ಟುಗೂಡಿದರು.

ಸಾಗರದ ಸೇನೆಯು ದಂಗೆಯೆದ್ದು ಸಾಗರವನ್ನು ಲೂಟಿಮಾಡಿತು. ಜಬ್ಬಲ್ಪುರ

ದಲ್ಲಿ ವಿಪ್ಲವವೇರ್ಪಟ್ಟಿತು. ವಿಂಧ್ಯ ಖಂಡದಲ್ಲೆಲ್ಲಾ ವಿಪ್ಲವದ ಜ್ವಾಲೆಯು ಹರಡಿತು.

ಸನ್ ೧೮೫೭ ನೇ ಸೆಪ್ಟೆಂಬರ್ ತಿಂಗಳ ಮಧ್ಯದ ಹೊತ್ತಿಗೆ ಇಂಗ್ಲೆಂಡಿನಿಂದ ಜನರಲ್ ಸರ್ ಹ್ಯೂ ರೋಜನು ಸಸೈನ್ಯನಾಗಿ ಬೊಂಬಾಯಿಯಲ್ಲಿ ಬಂದಿಳಿದನು. ಕ್ರಾಂತಿಕಾರರ ಮೇಲೆ ಸೇಡು ತೀರಿಸಿಕೊಂಡು ಕ್ರಾಂತಿಯನ್ನು ಅಡಗಿಸಬೇಕೆಂಬುದು ಅವನ ದೃಢ ನಿಶ್ಚಯವಾಗಿದ್ದಿತು.

ಅದೇ ತಿಂಗಳು ದಿಲ್ಲಿಯ ಪತನವಾಗಿ ಬಹದ್ದೂರ್‌ಷಹನು ಕೈದಿಯಾದನು. ಆತನ ಇಬ್ಬರು ಪುತ್ರರನ್ನು ಕೊಂದುಹಾಕಲಾಯಿತು. ಲಕ್ನೋವಿನ ಮುತ್ತಿಗೆಯು ಕೊನೆಗೊಂಡಿತು. ಕಾನ್‌ಪುರದಲ್ಲಿ ತಾತ್ಯಾಟೋಪೆಯು ಮೂರು ಆಂಗ್ಲೇಯ ಜನರಲ್ಲರನ್ನು ಸೋಲಿಸಿದನು. ಆದರೆ ದಿಲ್ಲಿಯ ಪತನವು ಕ್ರಾಂತಿಕಾರರ ಮೇಲೆ ಕೆಟ್ಟ ಪರಿಣಾಮವನ್ನುಂಟುಮಾಡಿತು.

ಲಕ್ನೋವು ಮೊದಲ ಬಾರಿಗೆ ಪತನವಾದಾಗಲೂ ಕೂಡ ಔಧಿನ ಜನರು ಯುದ್ಧಮಾಡುತ್ತಲೇ ಇದ್ದರು. ಆಂಗ್ಲೇಯರು ಇಲಹಾಬಾದ್, ಫಾತೇಪುರ ಮುಂತಾದ ಸ್ಥಳಗಳಲ್ಲಿ ಪ್ರಚಂಡ ಹಿಂಸಾವೃತ್ತಿಯಿಂದ ಪ್ರೇರಿತರಾಗಿ ಘೋರವಾದ ಕ್ರೂರಕೃತ್ಯಗಳನ್ನು ನಡೆಸಿದರು. ಈ ಸಮಾಚಾರವು ಝಾನ್ಸಿಯನ್ನು ತಲಪಿತು. ಬಿಟ್ಟೂರು ಕೈಬಿಟ್ಟುಹೋಯಿತು. ನಾನಾಸಾಹೇಬನಿಗೆ ಅತ್ಯಂತ ಪ್ರಯಾಸದಿಂದ ರಾತ್ರೋರಾತ್ರಿ ತನ್ನ ಪತ್ನಿಯರನ್ನೂ ಮತ್ತು ಮಲತಾಯಿಯನ್ನೂ ನಾವೆಯಲ್ಲಿ ನದಿ ದಾಟಿಸಿ ಲಕ್ನೋವಿನ ಬೇಗಂ ಸಾಹೇಬರ ಆಶ್ರಯಕ್ಕೆ ತಲಪಿಸುವಷ್ಟು ಅವಕಾಶ ದೊರಕಿತು. ಪುನಃ ಅವನು ಝಾನ್ಸಿಯವರೊಂದಿಗೆ ಯಾವ ಸಂಪರ್ಕವನ್ನೂ ಇಟ್ಟುಕೊಳ್ಳಲಿಲ್ಲ. ರಾವ್‌ಸಾಹೇಬ್ ಮತ್ತು ತಾತ್ಯಾಟೋಪೆಯವರು ತಮ್ಮ ಸೈನ್ಯಗಳೊಂದಿಗೆ ಕಾಲ್ಪಿ ಎಂಬ ಸ್ಥಳಕ್ಕೆ ಬಂದು ಸೇರಿ ಅಲ್ಲಿಂದ ಮುಂದಿನ ಯುದ್ಧ ಯೋಜನೆಗಳನ್ನು ರಚಿಸತೊಡಗಿದರು. ಈ ವಿಚಾರವೆಲ್ಲವೂ ಝಾನ್ಸಿಗೆ ಮುಟ್ಟಿತು.

ಝಾನ್ಸಿಯಿಂದ ಪರಾಜಿತನಾಗಿ ಓಡಿಹೋದ ನತ್ಥೇಖಾನನು ಟೀಕಮಗಡದಲ್ಲಿ ಶಾಂತಿಯಿಂದಿರದೆ ಝಾನ್ಸಿಗೆ ಪೂರ್ವ ದಿಕ್ಕಿನಲ್ಲಿದ್ದ ಪರಗಣಗಳನ್ನು ಎರಡು ತಿಂಗಳ ಕಾಲ ಲೂಟಿಮಾಡುತ್ತಿದ್ದನು. ಪಂಡವಾಹ, ಗರೌಟ ಮತ್ತು ನೌಟ ಎಂಬ ಸ್ಥಳಗಳಲ್ಲಿ ಆತನು ನಡೆಸಿದ ಲೂಟಿಯು ಲೋಕವಿಖ್ಯಾತವಾಗಿದೆ. ಆದರೆ ರಾಣಿಯು ಈ ಲೂಟಿಯನ್ನು ಸ್ವಲ್ಪ ದಿನಗಳಲ್ಲಿಯೇ ಅಡಗಿಸಿದ ಪ್ರಯುಕ್ತ ನತ್ಥೇಖಾನನು ಹಿಮ್ಮೆಟ್ಟಲೇ ಬೇಕಾಯಿತು.

ರಾಣಿಯಲ್ಲಿದ್ದ ಅಲ್ಪ ಸೇನೆಯನ್ನು ನಡುಗಿಸುವುದಕ್ಕೂ ಅಚ್ಚರಿಗೊಳಿಸುವುದಕ್ಕೂ ಈ ಕೃತ್ಯಗಳು ಸಾಕಾಗಿದ್ದವು. ಆದರೆ ರಾಣಿಯು ಗಾಬರಿಗೊಂಡಿದ್ದನ್ನಾಗಲಿ, ಚಿಂತಾಮಗ್ನಳಾಗಿದ್ದನ್ನಾಗಲಿ ಯಾರೂ ಯಾವಾಗಲೂ ಕಾಣಲಿಲ್ಲ. ಅವಳ ಕಾರ್ಯವು

ಒಂಜೇ ಸಮನಾಗಿ ಮುಂದುವರಿಯುತ್ತಲೇ ಇದ್ದಿತು.

ಅದೇ ಕಾರ್ಯಕ್ರಮ; ಅದೇ ದಿನಚರಿ, ಅದೇ ಸದ್ಭಾವನೆ ಮತ್ತು ಜನ ಸಂರಕ್ಷಣೆಯ ನಾಯಕತ್ವ ಮತ್ತು ದೃಢಸಂಕಲ್ಪ. 'ಒಂದುವೇಳೆ ಒಬ್ಬಂಟಿಗಳಾಗಿ ಸ್ವರಾಜ್ಯಕ್ಕಾಗಿ ಯುದ್ಧ ಮಾಡಬೇಕಾಗಿ ಬಂದರ ಮಾಡುವೆನು' ಇದೇ ಅವಳ ಸ್ಥಿರ ಸಂಕಲ್ಪ. ಮತ್ತು ಒಂದೇ ಜನ್ಮದಲ್ಲಿ, ಒಂದು ಯುದ್ಧದಿಂದ ಸಂಪೂರ್ಣ ಸಂಪನ್ನತೆಯನ್ನು ಪಡೆಯುವುದು ಅಸಾಧ್ಯವೆಂಬುದು ಅವಳ ಅಚಲ ವಿಶ್ವಾಸ.

'ಸಂಭವಾಮಿ ಯುಗೇ ಯುಗೇ!'

ಇದನ್ನು ಅವಳು ಚೆನ್ನಾಗಿ ಓದಿ ಮನನಮಾಡಿದ್ದಳು. ಅದು ಯಾವಾಗಲೂ ಅವಳ ಜ್ಞಾಪಕದಲ್ಲಿದ್ದು ಒಂದೊಂದು ರಕ್ತ ಕಣದಲ್ಲಿಯೂ ಸಮ್ಮಿಳನವಾಗಿದ್ದಿತು.

ಅವಳು ತನ್ನ ಕಾಲದ ಸಾಧನ ಸಲಕರಣೆಗಳ ಸಂಪೂರ್ಣ ಉಪಯೋಗವನ್ನು ಪಡೆಯುತ್ತಿದ್ದಳು. ತಾನು ಜನ್ಮ ತಾಳಿದ ಸಮಾಜದಲ್ಲಿದ್ದುಕೊಂಡೇ ತನ್ನ ಧ್ಯೇಯವನ್ನು ಸಾಧಿಸಬೇಕಾಗಿದ್ದಿತು. ಆದರೆ ಆಕೆಯು ಆ ಸಮಾಜದ ಸಂಕೋಲೆಗಳನ್ನು ಸನ್ಮಾನಿಸಲಿಲ್ಲ. ಅವಳು ಆ ಯುಗದಿಂದ ಮುಂದುವರಿದಿದ್ದಳು ಮತ್ತು ತನ್ನೊಡನೆ ಸಮಾಜವನ್ನು ಮುಂದೆ ಕೊಂಡೊಯ್ಯಲು ಪ್ರಯತ್ನಿಸುತ್ತಿದ್ದಳು. ವಿಶೇಷವಾಗಿ ಝಾನ್ಸಿಯಲ್ಲಿಯೂ ಮತ್ತು ಸಾಧಾರಣವಾಗಿ ವಿಂಧ್ಯಖಂಡದಲ್ಲಿಯೂ ಸ್ತ್ರೀಯರು ಅಪೇಕ್ಷಿಸುತ್ತಿದ್ದ ಸ್ವಾತಂತ್ರ್ಯತೆ ಮತ್ತು ನಾರಿತ್ವಕ್ಕೆ ಲಕ್ಷ್ಮೀಬಾಯಿಯು ಬಹು ಪ್ರಾಮುಖ್ಯತೆಯನ್ನಿತ್ತು ನಿಕಟಸಂಬಂಧ ಬೆಳಸಿದಳು.

ಲಕ್ಷ್ಮೀ ದ್ವಾರದಾಚೆ, ಲಕ್ಷ್ಮೀತಟಾಕದ ತಡಿಯಲ್ಲಿರುವ ಮಹಾಲಕ್ಷ್ಮಿಯ ಮಂದಿರಕ್ಕೆ ರಾಣಿಯು ಪ್ರತಿಮಂಗಳವಾರ, ಮತ್ತು ಶುಕ್ರವಾರ ಪೂಜೆಗಾಗಿ ಹೋಗುತ್ತಿದ್ದಳು. ಹಲವು ಸಲ ಪಲ್ಲಕ್ಕಿಯಲ್ಲಿಯೂ ಮತ್ತೆ ಕೆಲವು ವೇಳೆ ಕುದುರೆಯ ಮೇಲೆಯೂ ಹೋಗುತ್ತಿದಳು. ಒಂದೊಂದು ಬಾರಿ ಪಲ್ಲಕ್ಕಿಗೆ ತೆರೆಹಾಕಿರುತ್ತಿದ್ದಿತು, ಕೆಲವು ವೇಳೆ ತೆರೆಯನ್ನು ತೆರೆದಿರುತ್ತಿದ್ದರು. ಕೆಲವುಸಲ ಸೀರೆಯನ್ನುಟ್ಟು ಸ್ತ್ರೀವೇಷದಲ್ಲಿಯೂ ಮತ್ತೆ ಕೆಲವುಸಲ ಸುಂದರವಾದ ಮುಂಡಾಸನ್ನು ಧರಿಸಿ ಪುರುಷವೇಷದಲ್ಲಿಯೂ ಇರುತ್ತಿದ್ದಳು. ಅನೇಕಬಾರಿ ಒಬ್ಬಂಟಿಗಳಾಗಿಯೂ ಮತ್ತೆ ಕೆಲವು ವೇಳೆ ಸಿಬ್ಬಂದಿಗಳೊಡಗೂಡಿ ವಿಜೃಂಭಣೆಯಿಂದಲೂ ಹೋಗುತ್ತಿದ್ದಳು. ಅವಳು ಪಲ್ಲಕ್ಕಿಯಲ್ಲಿ ಹೊರಟರೆ ಸುಂದರವಾಗಿ ಅಲಂಕೃತರಾದ ಸ್ತ್ರೀಯರು ಕೆಲವರು ಕೆಂಪು ಮಖಮಲ್ಲಿನ ಪಾದರಕ್ಷೆಗಳನ್ನು ಧರಿಸಿ, ಸೊಂಟದಲ್ಲಿ ಪಿಸ್ತೂಲುಗಳನ್ನು ಇಳೀಬಿಟ್ಟು ಪಲ್ಲಕ್ಕಿಯ ಪಕ್ಕಗಳನ್ನು ಹಿಡಿದು ಓಡುತ್ತಾ ಹೋಗುತ್ತಿದ್ದರು. ಪಲ್ಲಕ್ಕಿಯ ಮುಂದೆ ಕಾವೀ ಬಣ್ಣದ ಪತಾಕೆಯನ್ನು ಹಿಡಿದ ಸವಾರನೂ ಅವನ ಮುಂದೆ ಮತ್ತೆ ಕೆಲವು ಮಂದಿ ಸವಾರರೂ ಇರುತ್ತಿದ್ದರು. ಜೊತೆಯಲ್ಲಿ ನಗಾರಿ ನೌಪತ್ತುಗಳೂ, ಹಿಂಬದಿಯಲ್ಲಿ ಪಠಾಣರ ಮತ್ತು ಮೇವಾತಿಗಳ

ಸೇನೆಯೂ ಮತ್ತು ಪಕ್ಕದಲ್ಲಿ ಸವಾರನಾಗಿ ಪ್ರಾಯಶಃ ಭಾವು ಬಕ್ಷಿಯೂ ಹೋಗುತ್ತಿದ್ದನು.

ದಾರಿಯಲ್ಲಿ ಪ್ರಜೆಗಳ ವಿನಂತಿಯನ್ನ ಕೇಳುತ್ತಿದ್ದಳು. ಒಂದು ದಿನ ಒಬ್ಬ ಭಿಕ್ಷುಕ ಬ್ರಾಹ್ಮಣನು ದಾರಿಯಲ್ಲಿ ಬಂದು ನಿಂತಿದ್ದನು. ಆತನು ಕಾಶಿಯಿಂದ ಬಂದಿದ್ದನು. ಆತನ ಹೆಂಡತಿ ಮರಣ ಹೊಂದಿದ್ದ ಕಾರಣ ಆತನು ಪುನರ್ವಿವಾಹ ಮಾಡಿಕೊಳ್ಳಲು ಆಶಿಸುತ್ತಿದ್ದನು. ಆದರೆ ಆತನು ದಟ್ಟದರಿದ್ರನಾಗಿದ್ದುದರಿಂದ ಹೆಣ್ಣಿನವರು ಹೆಣ್ಣುಕೊಡಲು ಸಮ್ಮತಿಸುತ್ತಿರಲಿಲ್ಲ. ನಾನ್ನೂರು ರೂಪಾಯಿಗಳ ಆವಶ್ಯಕತೆಯಿದ್ದಿತು.

ಅದೇ ಸಮಯದಲ್ಲಿ ಕುಮಾರಮಂಡಲಿಗೆ ರಾಮಚಂದ್ರ ದೇಶಮುಖನೆಂಬ ಹೊಸ ವ್ಯಕ್ತಿಯನ್ನು ಸೇರಿಸಲಾಗಿದ್ದಿತು. ಆತನಿಗೆ ಖಜಾನೆಯಿಂದ ಈ ಬ್ರಾಹ್ಮಣನಿಗೆ ೫೦೦ ರೂಪಾಯಿಗಳನ್ನು ಕೊಡಿಸಬೇಕೆಂದು ಆಜ್ಞೆಯಿತ್ತಳು.

ದೇಶಮುಖನು "ಅಪ್ಪಣೆ" ಎಂದನು.

ಬ್ರಾಹ್ಮಣನು ಮಂಗಳಾಶೀರ್ವಾದ ಮಾಡಿದನು.

ರಾಣಿಯು ಮುಗುಳ್ನಗುತ್ತಾ ಬ್ರಾಹ್ಮಣನನ್ನು ಕುರಿತು "ವಿವಾಹದ ಸಮಯದಲ್ಲಿ ನನಗೆ ಔತಣಕ್ಕೆ ಆಹ್ವಾನ ಕೊಡಲು ಮರೆಯಬಾರದು." ಎಂದಳು.

ಬ್ರಾಹ್ಮಣನು ಗದ್ಗದಿತನಾದನು. ಅವನ ಕಣ್ಣುಗಳಲ್ಲಿ ಅಶ್ರುವುಕ್ಕಿತು. ಬಾಯಿಯಿಂದ ಒಂದು ವಚನವೂ ಹೊರಡಲಿಲ್ಲ. ಈ ಮಾತು ಸ್ನೇಹಿತರಲ್ಲಿ, ಸಖಿಯರಲ್ಲಿ, ಜನರಲ್ಲಿ, ಸೇನೆಯಲ್ಲಿ, ಬ್ರಾಹ್ಮಣ ಅಬ್ರಾಹ್ಮಣರಲ್ಲಿ, ಎಲ್ಲರಲ್ಲಿಯೂ ವಿದ್ಯುದ್ವೇಗದಿಂದ ಹರಡಿತು.

ಇಂತಹ ರಾಣಿಗೆ, ಇಂತಹ ರಾಣಿಯ ಆದರದ ಮಾತುಗಳಿಗಾಗಿ, ಇಂತಹ ಸ್ತ್ರೀಯ ಸಿದ್ಧಾಂತಕ್ಕಾಗಿ ಏತಕ್ಕೆ ತಾನೆ ಜನರು ತಮ್ಮ ಪ್ರಾಣಕೊಡಲು ಸಿದ್ಧರಾಗಿರುವುದಿಲ್ಲ?

ಆಶ್ವೀಜ ಮಾಸವು ಬಂದಿತು. ರಾಣಿಯು ಶಾಸ್ತ್ರೋಕ್ತ ವಿಧಿಗಳನ್ನು ನೆರವೇರಿಸಿದಳು. ನವರಾತ್ರಿಯ ಯಜ್ಞದ ಅನುಷ್ಠಾನಕ್ಕೆ ಏರ್ಪಾಡಾಯಿತು. ಮಹಲಿನ ಮುಂದೆ ಪುಸ್ತಕಾಲಯದ ಸಮೀಪದಲ್ಲಿದ್ದ ಮೈದಾನದಲ್ಲಿ ಯಜ್ಞವೇದಿಕೆ ಮತ್ತು ಮಂಟಪಗಳನ್ನು ನಿರ್ಮಿಸಿದ್ದರು. ನೂರು ಬ್ರಾಹ್ಮಣರು ಇತರ ವಿವಿಧ ಕಾರ್ಯಗಳಿಗಾಗಿಯೂ ನಿಯುಕ್ತರಾದರು.

ಗಣೇಶನ ಮಂದಿರದಲ್ಲಿ ಅಥರ್ವಣ ವೇದದ ಪಠಣಕ್ಕೆ ಪ್ರತ್ಯೇಕ ಏರ್ಪಾಡು ಮಾಡಲಾಗಿದ್ದಿತು. ದುರ್ಗಾಮಾತೆಯ ಮಂದಿರದಲ್ಲಿ ಸಪ್ತಶತಿಯ ಪಠಣಕ್ಕಾಗಿ ಹದಿನಾಲ್ಕು ಮಂದಿ ಬ್ರಾಹ್ಮಣರು ನಿಯುಕ್ತರಾಗಿ ಬೆಳ್ಳಿಯ ದೀಪಸ್ತಂಭಗಳಲ್ಲಿ ತುಪ್ಪದ

ದೀಪಗಳು ಉರಿಯುತ್ತಿರಲು ಪಠಣ ಮಾಡುತ್ತಿದ್ದರು. ಯಜ್ಞವು ಸಮಾಪ್ತವಾಗಲು ರಾಣಿಯ ಹೆಸರಿನಲ್ಲಿ ಮುಖ್ಯ ಸಂಕಲ್ಪವನ್ನು ಮತ್ತು ದಾಮೋದರರಾಯನ ಕೈಯ್ಯಿಂದ ನಾಂದೀ ಕರ್ಮವನ್ನು ಮಾಡಿಸಲಾಯಿತು. ಪುಣೆಯಿಂದ ಬಂದಿದ್ದ ಬ್ರಾಹ್ಮಣನೊಬ್ಬನು ಆಕ್ಷೇಪಣೆ ಮಾಡಿ ಶಾಸ್ತ್ರಗಳ ಸೂತ್ರದ ಆಧಾರದಮೇಲೆ ಚರ್ಚಿಸಿದನು. ಅವನ ಆಕ್ಷೇಪಣೆಗಳನ್ನು ಒಪ್ಪಿಕೊಳ್ಳಲೇಬೇಕಾಯಿತು. ಇದರಿಂದ ಅವನು ವಿಜಯ ಹೊಂದಿ ಗರ್ವಿತನಾಗಿ ಸಂತೋಷದಿಂದ ಉಬ್ಬಿಹೋದನು. *

ರಾಣಿಗೆ ಇದು ದುಸ್ಸಹವಾಯಿತು. ಆಕೆಯು ಕಾಶೀಬಾಯಿಯನ್ನು ಕುರಿತು "ಕಾಶೀ, ನೀನು ಯಾವಾಗಲೂ ಶಾಂತಿಯಿಂದ ಯೋಚಿಸಿ ವಿಚಾರ ಮಾಡುತ್ತೀಯೆ. ಬ್ರಾಹ್ಮಣರ ಈ ವಿವಾದದ ಬಗ್ಗೆ ನಿನ್ನ ಅಭಿಪ್ರಾಯವೇನು?" ಎಂದು ಕೇಳಿದಳು.

ಕಾಶಿಯು ಉತ್ತರಿಸುತ್ತಾ "ಸರ್ಕಾರ್, ಇವರುಗಳ ವಿತ್ತಂಡವಾದವು ಮುಗಿಯಲಿಲ್ಲ. ದೇಶದ ದೌರ್ಭಾಗ್ಯವು ತೀರಲಿಲ್ಲ. ಇವರುಗಳು ಯಾವಾಗಲೂ ಇದರಲ್ಲೇ ತೃಪ್ತಿಸಂತುಷ್ಟಿಗಳನ್ನು ಹೊಂದುತ್ತಿರುತ್ತಾರೆ. ಭಗವಂತನು ಏತಕ್ಕೆ ಈ ಶಾಸ್ತ್ರಜ್ಞರಿಗೆ ಇಷ್ಟು ಮೂರ್ಖತನವನ್ನು ಮುಡುಪಾಗಿತ್ತಿರುವನೋ ತಿಳಿಯದು", ಎಂದಳು.

ರಾಣಿಯು "ಕರ್ಮವೇನೋ ಉತ್ತಮವಾದುದು. ಆದರೆ ಅದನ್ನು ಮಾಡಿಸುವವರು ಕರ್ಮಿಷ್ಠರಾಗಿಲ್ಲ.

ಕಾಶಿಯು ದೈವವಶಾತ್ ರಾಜ್ಯಭಾರದ ಹೊರೆಯು ಇವರ ಮೇಲೆ ಇಲ್ಲದಿದ್ದರೆ ಈ ವೇಳೆಗೆ ನಾವೆಲ್ಲರೂ ಮುಳುಗಿ ಹೋಗುತ್ತಿದ್ದೆವು. ರಾಜಕೀಯ ಸಮಸ್ಯೆಗಳನ್ನು ಬಿಡಿಸುವುದರಲ್ಲಿ ಇವರು ಇಷ್ಟು ವಿವೇಕವನ್ನು ಉಪಯೋಗಿಸಿದ್ದರೆ ಎಷ್ಟು ಮಹತ್ಕಾರ್ಯವಾದಂತಾಗುವುದು" ಎಂದಳು.

ರಾಣಿಯು "ಕಾಶೀ, ಇವರು ರಾಜನೀತಿಯನ್ನು ಅಧ್ಯಯನ ಮಾಡಿದ್ದಾದರೆ, ವಿತ್ತಂಡವಾದ ಮಾಡುವುದಿಲ್ಲ. ಧರ್ಮದ ವಿಚಾರದಲ್ಲಿ ಇವರೇಕೆ ಇಷ್ಟು ಹಟತೊಟ್ಟಿರುವರೋ ತಿಳಿಯದು.

ವಿಜಯದಶಮಿಯಂದು ದರ್ಬಾರು ನಡೆಯಿತು. ಆಂಗ್ಲೇಯರು ಕಸಿದುಕೊಂಡಿದ್ದ ಜಹಗೀರುಗಳನ್ನು ಮಾಲೀಕರಿಗೆ ಕೊಡಲಾಯಿತು. ನತ್ಥೇಖಾನನೊಡನೆ ನಡೆಸಿದ ಯುದ್ಧದಲ್ಲಿ ಪರಾಕ್ರಮವನ್ನು ಪ್ರದರ್ಶಿಸಿದ್ದವರಿಗೂ ಅಥವಾ ಅವರ ವಾರಸ್ಸುದಾರರಿಗೂ ಮತ್ತು ಹಿಂದೆ ಪುರಸ್ಕಾರ ಹೊಂದದಿದ್ದವರಿಗೂ ಪಾರಿತೋಷಕಗಳನ್ನು ಕೊಡಲಾಯಿತು. ಸಾಗರಸಿಂಹ ಮತ್ತು ಪೀರಾಲಿಯರು ಬರೀ ಕೈಯ್ಯಿಂದ ಹಿಂದಿರುಗಲಿಲ್ಲ.

---

* ಪರಿಶಿಷ್ಟವನ್ನು ನೋಡಿ.

ಸಾಗರಸಿಂಹನು ಪುರಸ್ಕಾರ ಹೊಂದಲು ಮುಂದೆ ಬಂದಾಗ ರಾಣಿಯು "ನಿನಗೆ ನವಾಬ್ ಸಾಹೇಬರ ಮಹಲಿನಲ್ಲಿ ಏನೇನು ವಸ್ತುಗಳು ದೊರಕಿದವು?" ಎಂದು ಕೇಳಿದಳು.

ಸಾಗರಸಿಂಹನು ಉತ್ತರವೀಯುತ್ತ "ಬಹಳ ಕಡಿಮೆ ವಸ್ತುಗಳು, ಸರ್ಕಾರ್, ಪೀರಾಲಿಯು ಸಾಕ್ಷಿಯಿದ್ದಾನೆ. ಅವನು ನನ್ನೊಡನೆಯೇ ಇದ್ದನು. ನವಾಬ್ ಸಾಹೇಬರ ಮನೆಗೆ ಬೆಂಕಿಯಿಡುತ್ತಿದ್ದವರಲ್ಲಿಲ್ಲಾ ಈತನು ಮುಂದಾಳಾಗಿದ್ದನು" ಎಂದು ಹೇಳಿದನು.

ಪೀರಾಲಿಯು ಮುಂದೆ ಬಂದು "ಶ್ರೀಮಂತ್ ಸರ್ಕಾರ್, ನಾನು ಬಹಳ ದಿನಗಳಿಂದ ನವಾಬ್ ಸಾಹೇಬರ ಉಪ್ಪು ತಿಂದಿದ್ದೇನೆ. ಆದರೆ ಯಾವಾಗ ಅವರು ತಮಗೆ ವಿರುದ್ಧನಾಗಿರುವರೆಂದು ಕಂಡುಕೊಂಡೆನೋ ಅಂದಿನಿಂದ ನಾನು ಅವರಿಂದ ಬೇರೆಯಾದೆನು. ಎಷ್ಟೋ ಬಾರಿ ಅವರೊಡನೆ ಜಗಳವಾಡಬೇಕಾಯಿತು. ನಾನು ಮನೆಗೆ ಮೊದಲು ಬೆಂಕಿಯಿಡಲಿಲ್ಲ. ಬೆಂಕಿಯಿಟ್ಟಾಗಿದ್ದಿತು. ಸಿಪಾಯಿಗಳಿಗೆ ಅಲ್ಲಿದ್ದ ವಸ್ತುಗಳೆಲ್ಲವನ್ನೂ ತಿಳಿಸಿದೆನು: ಏತಕ್ಕೆಂದರೆ ಅದು ಉಚಿತವೆಂದು ತೋರಿತು. ನವಾಬ್ ಸಾಹೇಬನು ಮೊದಲೇ ಅನೇಕ ವಸ್ತುಗಳನ್ನು ಸಾಗಿಸಿಕೊಂಡು ಹೋಗಿಬಿಟ್ಟಿದ್ದ ಕಾರಣ ಅಲ್ಪಸ್ವಲ್ಪ ದೊರೆಯಿತು." ಎಂದು ಹೇಳಿದನು.

ರಾಣಿಗೆ ಈ ವರ್ತನೆಯು ಸರಿದೋರಲಿಲ್ಲ. ಆದರೆ ಆಕೆಯು ಏನನ್ನೂ ಹೇಳಲಿಲ್ಲ.

ರಾತ್ರಿ ನಾಟಕ ಪ್ರದರ್ಶನವಾಯಿತು. ಪುರುಷ ಮತ್ತು ಸ್ತ್ರೀ—ಇಬ್ಬರ ಭೂಮಿಕೆಗಳನ್ನೂ ಸ್ತ್ರೀಯರೇ ಮಾಡಿದರು. ನಾಟಕಶಾಲೆಯಲ್ಲಿ ಸ್ತ್ರೀಯರು ಹೊರತಾಗಿ ಒಬ್ಬ ಪುರುಷನೂ ಇರಲಿಲ್ಲ. ಶಾಕುಂತಲಾ ನಾಟಕವನ್ನು ಜೂಹಿಯು ಶಕುಂತಳೆಯಾಗಿಯೂ, ಮೋತೀಬಾಯಿಯು ಅವಳ ಸಖಿಯಾಗಿಯೂ ಕಾಶೀಬಾಯಿಯು ದುಷ್ಯಂತನಾಗಿಯೂ ಅಭಿನಯಿಸಿದರು.

ನಾಟಕವು ಸಮಾಪ್ತವಾದನಂತರ ರಾಣಿಯು ಮೋತೀಬಾಯಿಯನ್ನು ಕುರಿತು ಹಿಂದೆಯೂ ಇದೇ ರೀತಿ ಅಭಿನಯಮಾಡುತ್ತಿದ್ದೆಯಾ?" ಎಂದು ಕೇಳಿದಳು.

ಮೋತೀ—ಸರ್ಕಾರ್, ಇಂದು ನಾವು ಅತ್ಯಂತ ಶ್ರದ್ಧೆವಹಿಸಿ ನಟಿಸಿದ್ದೇವೆ.

ರಾಣಿ—ಜೂಹಿಯೇನೋ ಶಕುಂತಲೆ ಎಂತಿದ್ದಳೋ ಅಂತೆಯೇ ನಟಿಸಿದಳು. ಆದರೆ ದುಷ್ಯಂತನು ಚೆನ್ನಾಗಿರಲಿಲ್ಲ.

ಜೂಹಿ—ಇಲ್ಲಾ ಸರ್ಕಾರ್.

ರಾಣಿಗೆ ಏನೋ ನೆನಪಿಗೆ ಬಂದು "ಸರಿಯಾಗಿಹೇಳಿದೆ ಜೂಹಿ. ನಿನ್ನ ಮತ್ತು ನಿನ್ನ ದುಷ್ಯಂತನ ವೈಶಿಷ್ಟ್ಯವನ್ನು ಯುದ್ಧದಲ್ಲಿ ನೋಡುವೆನು" ಎಂದಳು.

ಜೂಹಿಯು ನಿಸ್ಸಂಕೋಚಳಾಗಿ "ನನ್ನ ಮತ್ತು ನನ್ನ ದುಷ್ಯಂತನ ವೈಶಿಷ್ಟ್ಯ ನೋಡಿ ನೀವು ಪುರಸ್ಕಾರ ಮಾಡುವಿರಿ" ಎಂದಳು.

ರಾಣಿಯು ಕೈ ತಟ್ಟಿ "ಹಾಗಾದರೆ ದುಷ್ಯಂತನ ಪಾತ್ರವನ್ನಾರು ವಹಿಸುತ್ತಾರೆ?" ಎಂದು ಹೇಳಿ ಮೋತೀಬಾಯಿ ಮತ್ತೆ ಓರೆನೋಟ ನೋಡಿದಳು. ಮೋತೀಬಾಯಿಯು ತಲೆ ತಗ್ಗಿಸಿದಳು. ಜೂಹಿಯು ನಾಚಿಕೆಯಿಂದ ಸ್ವಲ್ಪ ಹಿಂದೆ ಸರಿದಳು.

ಸಖಿಯರೆಲ್ಲರೂ ವಿನೋದಿತರಾದರು.

ನಾಟಕ ಶಾಲೆಯಿಂದ ನಡೆದುಬರುತ್ತಾ ರಾಣಿಯು ಮೋತೀಬಾಯಿಯನ್ನು ಸ್ವಲ್ಪ ಪಕ್ಕಕ್ಕೆ ಸೆಳೆದುಕೊಂಡು "ಮದ್ದು ಗುಂಡುಗಳ ಕಾರ್ಖಾನೆಯ ಮೇಲೆ ಸ್ವಲ್ಪ ಗಮನ ಹೆಚ್ಚಾಗಿರಬೇಕೆಂದೂ, ತಿಂಗಳಾರುಗಟ್ಟಲೆ ಕೋಟೆಯಲ್ಲಿ ಕುಳಿತು ಯುದ್ಧ ಮಾಡುವಷ್ಟು ಮದ್ದು ಗುಂಡುಗಳು ಬೇಕೆಂದೂ ಖುದಾಬಕ್ಷನಲ್ಲಿ ಹೇಳು" ಎಂದು ಮೆಲ್ಲನೆ ಹೇಳಿದಳು.

ಮೋತೀಬಾಯಿಯು ತಲೆ ತಗ್ಗಿಸಿ "ಸರ್ಕಾರ್, ತಮ್ಮ ಈ ಆಜ್ಞೆಯನ್ನು ನಾನೇ ಸ್ವತಃ ಅವರಿಗೆ ತಿಳಿಸಬೇಕೆ? ಎಂದಳು.

"ಮತ್ತೆ ಯಾರಿಂದ ಸಾಧ್ಯ?" ರಾಣಿಯು ನಸುನಗುತ್ತಾ ಕೇಳಿದಳು.

"ತಾತ್ಯಾಟೋಪೆಯ ಸಮಾಚಾರವೇನೆಂಬುದು ತಿಳಿದು ಹೇಳು. ಅವನೇನು ಇನ್ನು ಕಾಲ್ಪಿಯಲ್ಲೇ ಇರುವನೆ? ಅವನೊಡನೆ ತಕ್ಕ ಸಂಪರ್ಕವಿಟ್ಟುಕೊಳ್ಳಬೇಕು. ಆಂಗ್ಲೇಯರು ಎಂದು ಬರುವರೋ ನಮಗೆ ಚೆನ್ನಾಗಿ ತಿಳಿಯದು. ಝಾನ್ಸಿಯಲ್ಲಿದ್ದು ಕೊಂಡು ಬಹಳ ಕಾಲ ಯುದ್ಧ ನಡೆಸಲು ಸಾಧ್ಯವಿಲ್ಲ. ಒಂದು ವೇಳೆ ನಮಗೆ ಆಪತ್ತು ಸಂಭವಿಸಿದರೆ ಆತನು ಶೀಘ್ರದಲ್ಲಿಯೇ ತಕ್ಕ ಸಹಾಯವನ್ನು ಒಟ್ಟುಗೂಡಿಸಿಕೊಂಡು ಬರುವಷ್ಟು ಸಮೀಪದಲ್ಲಿರಬೇಕು." ಎಂದು ಮುಂದುವರೆದಳು.

ಮಾರನೆಯ ದಿನ ರಾಣಿಯು ರಘುನಾಥಸಿಂಹ ಮತ್ತು ಜವಹರಸಿಂಹರನ್ನು ತನ್ನ ದಿವಾನಖಾನೆಗೆ ಬರಮಾಡಿಕೊಂಡಳು. ಅವಳ ಕಾರ್ಯಗಳನ್ನು ಇನ್ನೂ ಹೆಚ್ಚು ಭರದಿಂದ ಮಾಡಿಸಲಿಚ್ಛಿಸಿದಳು.

ರಾಣಿ—ಹೆಚ್ಚಾಗಿ ಹಿಂದೊದೆಯದೇ ಅತಿ ಜಾಗ್ರತೆಯಾಗಿ ಕಾವೇರದಂತಹ ತೋಪುಗಳನ್ನು ತಾನೆ ಎರಕ ಹೊಯ್ಯಿಸುತ್ತಿರುವಿರಿ?

ಜವಹರ—ಹೌದು, ಸರ್ಕಾರ್. ಬಕ್ಷಿಯವರೂ ಮತ್ತು ಅವರ ಕೈಕೆಳಗಿನ ಕೆಲಸಗಾರರೂ ಆ ವಿದ್ಯೆಯಲ್ಲಿ ಬಹಳ ನಿಪುಣರು.

ರಾಣಿ—ತುಪಾಕಿಯ ಮದ್ದು?

ರಘುನಾಥ—ಮೂರು ತಿಂಗಳು ಯುದ್ಧ ನಡೆಸುವಷ್ಟಿವೆ. ಇಂದಿನಿಂದ ಕುವರ ಖುದಾಬಕ್ಷನು ತಯಾರಿಕೆಯನ್ನು ಇನ್ನೂ ವರ್ಧಿಸಲು ತೊಡಗಿರುವನು.

ರಾಣಿ—ಒಳ್ಳೆಯ ಕತ್ತಿ ಮತ್ತು ಬಂದೂಕಗಳು ಹೆಚ್ಚಾಗಿ ಬೇಕಾಗಿವೆ.

ಜವಹರ—ತಯಾರಾಗಿವೆ, ತಯಾರಾಗುತ್ತಲೂ ಇವೆ.

ರಾಣಿ—ಗುಂಡುಗಳ ಸ್ಥಿತಿಯೇನು?

ಜವಹರ—ಭಾವುಬಕ್ಷಿಯು ಅರ್ಧ ಸೇರಿನಿಂದ ಹಿಡಿದು ಅರವತ್ತೈದು ಸೇರಿನಷ್ಟು ತೂಗುವಂತಹ ಗೋಲಿ ಗುಂಡುಗಳನ್ನು ತಯಾರಿಸುತ್ತಿರುವನು. ಅಲ್ಲದೆ ಅವುಗಳಲ್ಲಿ ಗಟ್ಟಿ ಗುಂಡುಗಳೂ, ಸಿಡಿಯುವ ಗುಂಡುಗಳೂ ತಯಾರಾಗಿವೆ .

ರಾಣಿ—ಈ ಆಯುಧಗಳನ್ನು ಚಲಾಯಿಸುವ ಯೋಧರನ್ನೂ ಹೆಚ್ಚು ಸಂಖ್ಯೆಯಲ್ಲಿ ತಯಾರು ಮಾಡಬೇಕು.

ಜವಹರ್—ಜನರಲ್ಲಿ ಬಹಳ ಉತ್ಸಾಹವು ಮೂಡಿದೆ. ಉಚ್ಚ ನೀಚ ಜಾತಿಗಳೆನ್ನದೆ ಎಲ್ಲರೂ ಯುದ್ಧದ ಹುರುಪಿನಿಂದ ಆವೇಶ ಭರಿತರಾಗಿದ್ದಾರೆ.

ರಾಣಿ—ಇವರಲ್ಲಿ ಅಧಿಕ ಉತ್ಸಾಹವು ಯಾವ ಜನರಲ್ಲಿ ಕಂಡುಬರುವುದು.

ಜವಹರ್—ಸರ್ಕಾರ್, ಇದನ್ನು ನಿರ್ದಿಷ್ಟವಾಗಿ ಹೇಳುವುದು ಕಠಿಣ. ಠಾಕೂರರು ಮತ್ತು ಪಠಾಣರಲ್ಲಿ ಈ ಉತ್ಸಾಹವು ಸ್ವಭಾವಸಿದ್ಧವಾಗಿದೆ. ನೇಯ್ಗೆಯವರು, ಗಾಣಿಗರು ಆವೇಶದಿಂದ ಕೂಡಿರುವರು. ಆದರೆ ವಣಿಕ ಬ್ರಾಹ್ಮಣರೇನೂ ಹಿಂದುಳಿದಿಲ್ಲ.

ರಾಣಿ—ಏನು ವೈದೀಕ ಬ್ರಾಹ್ಮಣರೂ ಕೂಡ ?

ಜವಹರ—ಅವರೂ ಝಾನ್ಸಿಯ ಪ್ರಜೆಗಳೆ. ಅವರಿಗೆ ಪುರಾಣ, ಪೂಜೆ ಮುಂತಾದುವುಗಳಿಂದ ಬಿಡುವು ದೊರೆತಾಗ ಅವರೂ ದೇಶಾಭಿಮಾನಿಗಳಾಗುತ್ತಾರೆ.

ರಾಣಿ—ನಮ್ಮ ದೇಶದಲ್ಲಿಯೂ ಜಾತಿಮತಗಳ ವ್ಯತ್ಯಾಸವಿಲ್ಲದಿದ್ದರೆ ಎಷ್ಟು ಉತ್ತಮವಾಗಿರುತ್ತಿದ್ದಿತು.

ಜವಹರ—ಭೇದಗಳನ್ನು ಭಗವಂತನೇ ಕಲ್ಪಿಸಿರುವನು, ಸರ್ಕಾರ್.

ರಾಣಿಯು ಸ್ವಲ್ಪಕಾಲ ಮೌನವಾಗಿದ್ದು ಪುನಃ ಹೇಳಿದಳು. "ಎಲ್ಲಾ ಜಾತಿಗಳಿಂದಲೂ ಜನರನ್ನು ಆರಿಸಿ ಅವರಿಗೆ ತೋಪು ಮತ್ತು ಬಂದೂಕಗಳ ಪ್ರಯೋಗವನ್ನು ಕಲಿಸಿಕೊಡಬೇಕೆಂದು ಆಶಿಸುತ್ತೇನೆ."

ಜವಹರಸಿಂಹನು ಉತ್ಸಾಹವೇನನ್ನೂ ತೋರ್ಪಡಿಸದೆ "ಈ ಕಾರ್ಯವನ್ನು ಆಗಲೇ ಪ್ರಾರಂಭಿಸಿಯಾಗಿದೆ ಸರ್ಕಾರ್" ಎಂದನು.

ರಾಣಿ—ನಾನು ನನ್ನ ಸಖಿಯರನ್ನೂ ಮತ್ತು ಇತರ ಕೆಲವು ಸ್ತ್ರೀಯರನ್ನೂ, ಒಳ್ಳೆಯ ಗೋಲಂದಾಜಿಗಳನ್ನಾಗಿ ತರಪೇತು ಮಾಡಬೇಕೆಂದಿರುವೆನು.

ರಘುನಾಥಸಿಂಹ—ಆಜ್ಞೆಯು ದೊರಕಿತು. ಆದಕ್ಕನುಸಾರವಾಗಿ ಕೆಲಸವನ್ನು ಮುಂದುವರಿಸುವೆವು.

ರಾಣಿ—ಕಿಲ್ಲೆಯಲ್ಲಿ ಆಹಾರ ಸಾಮಗ್ರಿಗಳನ್ನು ಕೂಡಿಡಬೇಕು. ಯಾವಾ ಮುತ್ತಿಗೆ ಬೀಳಬಹುದೆಂದು ಹೇಳಲಾಗುವುದಿಲ್ಲ.

ಜವಹರ—ಹೇರಳವಾದ ಆಹಾರ ಸಾಮಗ್ರಿಗಳನ್ನು ಒಟ್ಟುಗೂಡಿಸಲಾಗುತ್ತಿದೆ ಮತ್ತು ಶೀಘ್ರದಲ್ಲಿಯೇ ಕಿಲ್ಲೆಯ ಕಣಜದಲ್ಲಿ ದಾಸ್ತಾನು ಮಾಡಲಾಗುವುದು.

ರಾಣಿ—ಸುಣ್ಣ, ಇಟ್ಟಿಗೆ, ಕಲ್ಲುಗಾರೆ ಮುಂತಾದುವನ್ನೂ ಶೇಖರಿಸಿಡಬೇಕು ಮತ್ತು ಕೆಲವು ಕೆಲಸಗಾರರನ್ನೂ ಕೈಯ್ಯಲ್ಲಿಟ್ಟುಕೊಂಡಿರಬೇಕು.

ಜವಹರ—ಅಪ್ಪಣೆ.

ರಾಣಿ—ಸೇನೆಯಲ್ಲಿ ಮತ್ತು ರಕ್ಷಣೆಯಲ್ಲಿ ಯಾವ ಲೋಪವೂ ಇಲ್ಲದಂತೆ ಎಚ್ಚರಿಕೆ ವಹಿಸಬೇಕು.

## ೬೦

ಉತ್ತರ ಮತ್ತು ಪೂರ್ವ ಹಿಂದೂಸ್ಥಾನದಲ್ಲಿ ಆಂಗ್ಲೇಯರ ವಿಜಯ ಪರಾಜಯಗಳು ಒಂದು ರೀತಿಯಿಂದ ಮುಂದೆ ಸಾಗುತ್ತಲೇ ಇದ್ದಿತು. ಲಕ್ನೋವಿನ ಪತನದ ನಂತರ ಪುನಃ ಅದು ಉನ್ನತಿಗೆ ಬಂದಿತು. ನಗರದಲ್ಲಿ, ತೋಟಗಳಲ್ಲಿ, ಹುಲ್ಲುಗಾವಲುಗಳಲ್ಲಿ, ಮಹಲ್ಲುಗಳಲ್ಲಿ ಯುದ್ಧವು ನಡೆಯುತ್ತಲೇ ಇದ್ದವು. ತಾತ್ಯಾಟೋಪೆಯು ಕಾರ್ಪುರವನ್ನು ಪುನಃ ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು. ಅತ್ತ ಗ್ವಾಲಿಯರ್ ರಾಜ್ಯವು ಕೈ ಬಿಟ್ಟುಹೋಗಿ ಅಲ್ಲಿದ್ದ ಆಂಗ್ಲೇಯರ ಹಿಂದೂಸ್ಥಾನಿ ಸೈನ್ಯವನ್ನು ಫೋಡ್ಕರನು ತನ್ನೊಡನೆ ಕರೆತಂದು ಆಂಗ್ಲೇಯ ಜನರಲ್ ವಿಂಡಮ್‌ನನ್ನು ಸೋಲಿಸಿದನು. ಆದರೆ ಆಂಗ್ಲೇಯರು ಎಪ್ಪತ್ತು ಸಾವಿರ ಆಂಗ್ಲೇಯ ಸೇನೆ, ಒಂಭತ್ತು ಸಾವಿರ ಘೂರ್ಕಾದಳ ಮತ್ತು ಅನೇಕ ಸಂಖ್ಯಾತರಾದ ಸಿಕ್ಖ ಸೈನಿಕರೊಂದಿಗೆ ಲಕ್ನೋವನ್ನು ಸೇರಿದರು. ಕ್ರಾಂತಿಕಾರರು ಘೋರವಾದ ಯುದ್ಧ ನಡೆಸಿದರು. ಉತ್ತರ ಮತ್ತು ಪೂರ್ವದಿಕ್ಕುಗಳಲ್ಲಿ ನಡೆದ ಯುದ್ಧಗಳಲ್ಲಿ ತಾತ್ಯಾಟೋಪೆಯು ಮುಖ್ಯಪಾತ್ರ ವಹಿಸಿದ್ದನು. ಅಂತ್ಯದಲ್ಲಿ ಬಿಟ್ಟೂರು ಕೈ ಬಿಟ್ಟುಹೋಗಿ ಕಾರ್ಪುರವು ಶತ್ರುಗಳ ಪಾಲಾದಾಗ ಆತನು ಕಾಲ್ಪಿಯ ಅಕ್ಕ ಪಕ್ಕಗಳಿಂದ ಯುದ್ಧ ನಡೆಸಲು ಪ್ರಾರಂಭಿಸಿದನು.

ಚಳಿಗಾಲವು ಆರಂಭವಾಗಿ ಬಿಹಾರ್ ಮತ್ತು ಔಧಿನಲ್ಲಿ ಯುದ್ಧವು ಬಹು ಬಿರುಸಿನಿಂದ ನಡೆಯುತ್ತಿದ್ದಿತು. ಆದರೆ ಕ್ರಾಂತಿಕಾರರಲ್ಲಿ ಸರಿಯಾದ ವ್ಯವಸ್ಥೆಯಿರಲಿಲ್ಲ. ರಾಜನಾಗಲಿ ದೊಡ್ಡ ಸರದಾರನಾಗಲಿ ಮಡಿದನೆಂದರೆ ಉಳಿದ ಚಿಕ್ಕ ಪುಟ್ಟ ನಾಯಕರ ನೇತೃತ್ವವನ್ನು ಗಣನೆಗೆ ತರಲಾಗುತ್ತಿರಲಿಲ್ಲ. ಈ ಕಾರಣದಿಂದ ಆಂಗ್ಲೇಯರು ಮೆಲ್ಲ ಮೆಲ್ಲನೆ ಒಂದು ಪ್ರದೇಶವಾದ ನಂತರ ಮತ್ತೊಂದು ಪ್ರದೇಶವನ್ನೂ, ಒಂದು ಸ್ಥಾನ

ವಾದ ಮೇಲೆ ಮತ್ತೊಂದು ಸ್ಥಾನವನ್ನೂ ಆಕ್ರಮಿಸಿ ದೇಶವನ್ನೇ ಸ್ವಾಧೀನ ಪಡಿಸಿಕೊಳ್ಳುತ್ತಿದ್ದರು. ಆಂಗ್ಲೇಯರ ಕ್ರೂರತೆಯಾಗಲಿ, ಘೂರ್ಕ ಅಥವಾ ಸಿಖ್ಖ ಸಿಪಾಯಿಗಳ ಸಹಾಯತೆಯಾಗಲೀ ವಿಪ್ಲವವನ್ನು ಕೊನೆಗಾಣಿಸಿ ಈ ದೇಶವನ್ನು ಅವರಿಗೆ ಪುನಃ ದಕ್ಕಿಸಿ ಕೊಡಲಾಗುತ್ತಿರಲಿಲ್ಲ. ಕ್ರಾಂತಿಕಾರರಲ್ಲಿ ಸಾಮಂತ ರಾಜರ ಮರಣದನಂತರ ಅವರಿಗೆ ಸರಿಯಾದ ನಾಯಕತ್ವವು ದೊರಕುವುದು. ದುರ್ಲಭವಾದುದರಿಂದ ಸೋಲಿನ ಮೇಲೆ ಸೋಲನ್ನು ಅನುಭವಿಸ ಬೇಕಾಯಿತು. ತಾತ್ಯಾಟೋಪೆಯಂತಹ ಉನ್ನತ ದರ್ಜೆಯ ಸೇನಾಪತಿಗಳು ದೊರಕಿದ್ದರೆ ಆಂಗ್ಲೇಯರ ದೊಡ್ಡದೊಡ್ಡ ಜನರಲ್ಲುಗಳು ಕೂಡ ಮಣ್ಣು ಮುಕ್ಕ ಬೇಕಾಗುತ್ತಿದ್ದಿತು.

ದಕ್ಷಿಣದಲ್ಲಿಯೂ ಇದೇ ರೀತಿ ಇದ್ದಿತು. ಜನರಲ್ ರೋಜನು ತನ್ನ ಸೈನ್ಯವನ್ನು ಇಬ್ಭಾಗಮಾಡಿ ಒಂದನ್ನು ಮಹುವಿನ ಛಾವನಿಯತ್ತ ಕಳುಹಿಸಿ ಮತ್ತೊಂದನ್ನು ತನ್ನ ಅಧೀನದಲ್ಲಿಟ್ಟುಕೊಂಡು ಸಾಗರದ ಕಡೆಗೆ ಮುನ್ನುಗ್ಗಿ ಬಂದನು. ರಾಹತಗಡವು ಸಾಗರದಿಂದ ನಲವತ್ತೆರಡು ಮೈಲಿ ದೂರವಿದ್ದಿರಬಹುದು. ಅಲ್ಲಿಂದ ಪಠಾಣರು ಜನರಲ್ ರೋಜನನ್ನು ಸಂಧಿಸಿ ಯುದ್ಧಮಾಡಲಾರಂಭಿಸಿದರು. ನಾಲ್ಕು ದಿನಗಳ ಘೋರ ಯುದ್ಧದ ನಂತರ ಪಠಾಣರು ರಾಹತಗಡವನ್ನು ತ್ಯಜಿಸಬೇಕಾಯಿತು. ರಾಹತ ಗಡದಿಂದ ೨೪ ಮೈಲಿ ದೂರದಲ್ಲಿ ಬರೋದಿಯಾ ಎಂಬ ಕಿಲ್ಲೆಯೊಂದಿದ್ದಿತು. ಅಲ್ಲಿ ಬಾನ್ಪುರದ ರಾಜ ಮರ್ದನಸಿಂಹನ ಆಶ್ರಯದಲ್ಲಿ ಆಂಗ್ಲೇಯ ಸೇನೆಯ ವಿದ್ರೋಹಿಗಳೂ ಕೆಲವರಿದ್ದರು. ರೋಜನು ಇವರನ್ನು ಸೋಲಿಸಿ ಪುನಃ ಸಾಗರದ ಕಡೆ ಮುಂದುವರೆದನು. ಪೂರ್ವಕ್ಕೆ ಗಡಾಕೋಟ್ ಎಂಬ ಕಿಲ್ಲೆಯಿದ್ದಿತು. ಇದು ವಿಪ್ಲವಕಾರರ ವಶದಲ್ಲಿದ್ದಿತು. ಅದನ್ನು ವಶಪಡಿಸಿಕೊಳ್ಳುವ ಮುನ್ನ ರೋಜನು ಸಾಗರದ ಮೇಲೆ ದಂಡೆತ್ತಿ ಹೋದನು.

ನರ್ಮದಾ ನದಿಯ ಉತ್ತರ ದಡದಲ್ಲಿದ್ದ ಪ್ರದೇಶದಲ್ಲಿ ಅಧಿಕಾಂಶ ಕ್ರಾಂತಿಕಾರರ ವಶದಲ್ಲಿದ್ದಿತು. ಇವನ್ನು ವಶಪಡಿಸಿಕೊಳ್ಳದೆ ಜನರಲ್ ರೋಜನು ಝಾನ್ಸಿಯ ಕಡೆ ಮುನ್ನುಗ್ಗುವುದು ಸಾಧ್ಯವಿರಲಿಲ್ಲ. ಸಾಗರ ಮತ್ತು ಝಾನ್ಸಿಗಳ ನಡುವೆ ಬಾನ್ಪುರದ ರಾಜ ಮರ್ದನಸಿಂಹ ಮತ್ತು ರೌಹಗಡದ ರಾಜ ಬಖತ್‌ಆಲಿಯರು ಯುದ್ಧಮಾಡಲು ಸಿದ್ಧರಾಗಿದ್ದರು.

ಸರ್ ಕಾಲಿ೯ ಕ್ಯಾಂಬೆಲ್ ಎಂಬುವನು ಆಂಗ್ಲೇಯರ ಪ್ರಧಾನ ಸೇನಾಪತಿಯಾಗಿದ್ದನು. ಉತ್ತರ ಹಿಂದೂಸ್ಥಾನದ ಕ್ರಾಂತಿಯನ್ನಡಗಿಸುವುದರಲ್ಲಿ ಇವನ ಕೈವಾಡವಿದ್ದಿತು. ಝಾನ್ಸಿಯ ಪತನವಾಗುವವರೆಗೂ ಉತ್ತರ ಹಿಂದೂಸ್ಥಾನವು ತಮ್ಮ ಕೈಸೇರದೆಂಬುದು ಈತನ ಮತವಾಗಿದ್ದಿತು.. ಆದುದರಿಂದಲೇ ರೋಜನು ಝಾನ್ಸಿಯ ಕಡೆ ಗಮನವಿಟ್ಟು ಧಾವಿಸುತ್ತಿದ್ದನು. ಮಾರ್ಗದಲ್ಲಿ ಹಳ್ಳತಿಟ್ಟುಗಳೂ, ಗುಡ್ಡಗಾಡಿನ

ಶೂರರೂ, ಯುದ್ಧೋತ್ಸಾಹಿಗಳೂ ಇವನ ಪ್ರಗತಿಗೆ ಅಡಚಣೆಯಾಗಿದ್ದರು. ಆದರೆ ಕ್ರಾಂತಿಕಾರರ ಮುಖಂಡರಾದ, ರಾಜರೂ, ನವಾಬರೂ, ಜಹಗೀರುದಾರರೂ ಮಡಿದರೆ ಕ್ರಾಂತಿಯು ಕೊನೆಗಾಣುವುದೆಂದು ಜನರಲ್ ರೋಜನೇ ಮುಂತಾದವರು ದೃಢವಾಗಿ ನಂಬಿದ್ದರು.

## ೬೧

ಸಹಿಸಲಾರದಷ್ಟು ಚಳಿ; ಮೇಲೆ ಎಲುಬನ್ನು ಕೊರೆಯುವಂತಹ ಶೀತಮಾರುತ ಕೆಲವು ದಿನಗಳ ಹಿಂದೆ ಸ್ವಲ್ಪ ಮಳೆಯೂ ಬಿದ್ದಿದ್ದಿತು. ಚಳಿಯಿಂದ ನಡುಗುತ್ತಿರುವ ಹುಲ್ಲಿನ ಮೇಲೆ ದಪ್ಪ ದಪ್ಪವಾದ ಮಂಜಿನ ಹನಿಗಳು; ಪ್ರಾತಃಕಾಲದ ಎಳೆಬಿಸಿಲು ಅದರ ಮೇಲೆ ಬಿದ್ದು ಪ್ರಕಾಶಿಸುತ್ತಿದ್ದಿತು. ಝಲಕಾರಿಯು ಹೆಗಲ ಮೇಲೆ ಬಂದೂಕವನ್ನು ಹೊತ್ತು ಹಗಲಿನಲ್ಲಿ ಮದ್ದುಗುಂಡುಗಳ ಚೀಲವನ್ನು ನೇತುಹಾಕಿಕೊಂಡು ಉನಾವ್ ದ್ವಾರದಿಂದ ಹೊರಬಿದ್ದಳು. ಚಳಿಯಿಂದ ಕೈ ನಡುಗಲಾರಂಭಿಸಿದರೆ ಬಂದೂಕವನ್ನು ಬಗಲಿನಲ್ಲಿ ಅದುಮಿಟ್ಟುಕೊಂಡು ಎರಡು ಕೈಗಳನ್ನೂ ಹೊದೆದಿದ್ದ ಧಾವಣಿಯಿಂದ ಮುಚ್ಚಿಕೊಳ್ಳುತ್ತಿದ್ದಳು. ಉನಾವ್ ದ್ವಾರದಿಂದಾಚೆ, ಉತ್ತರಕ್ಕೆ ಒಂದು ಉನ್ನತ ಪ್ರದೇಶವುಂಟು. ಇದಕ್ಕೆ ಅಂಜನೀಗುಡ್ಡವೆಂದು ಹೆಸರು. ಅದರ ದಕ್ಷಿಣ ಭಾಗದಲ್ಲಿ ತುಟ್ಟತುದಿಯಲ್ಲಿ ಅಂಜನಾದೇವಿಯ ಮತ್ತು ಆಂಜನೇಯನ ಸಣ್ಣ ಮಂಟಪವೊಂದಿರುವುದು. ಝಲಕಾರಿಯು ಸ್ವಲ್ಪ ಹೊತ್ತಿನೊಳಗಾಗಿ ಈ ಮಂಟಪದ ಬಳಿ ಬಂದು ಸೇರಿ ಬಿಸಿಲು ಕಾಯಿಸುತ್ತಾ ಕುಳಿತಳು. ಬೀಸುತ್ತಿರುವ ತಂಗಾಳಿ ಮತ್ತು ಹೊರ ಸೂಸುತ್ತಿರುವ ಬಾಲ ರವಿಯ ಕಿರಣಗಳು ಅವಳ ವಿಶಾಲ ನೇತ್ರಗಳಿಗೆ ಕಾಡಿಗೆಯಂತೆ ವಿರಾಜಿಸಿದುವು.

ಸ್ವಲ್ಪ ಬಿಸಿಲೇರಿದ ಮೇಲೆ ಅವಳು ಅಲ್ಲಿಂದೆದ್ದು ಗುರಿಯಿಡುವುದನ್ನು ಅಭ್ಯಾಸಿಸಲಾರಂಭಿಸಿದಳು. ಬಹಳ ಹೊತ್ತಿನವರೆಗೆ ಅಭ್ಯಾಸ ಮಾಡುತ್ತಲೇ ಇದ್ದಳು.

ಅಂಜನೀಗುಡ್ಡದ ಸುತ್ತುಮುತ್ತು ಪ್ರದೇಶವು ಬಹು ಭಯಂಕರವಾದುದಾಗಿದ್ದಿತು. ಆ ವೇಳೆಯಲ್ಲಿ ಅಲ್ಲಿಗೆ ಯಾರೂ ಹೋಗಿ ಬರುತ್ತಿರಲಿಲ್ಲ. ಆದರೆ ಕುರಿ, ಮೇಕೆ, ದನಕರುಗಳು ಅಲ್ಲಿ ಹುಲ್ಲು ಮೇಯುತ್ತಿರುತ್ತಿದ್ದುವು. ಅಕಸ್ಮಾತ್ತಾಗಿ ಝಲಕಾರಿಯು ಬಂದೂಕಿನಿಂದ ಹೊಡೆದ ಗೋಲಿಯೊಂದು ಬಂದು ಕರುವಿಗೆ ತಗುಲಿತು. ಗೋಲಿಯು ಮೇಕೆಗೆ ತಗುಲಿತೋ ಅಥವಾ ಒಂದು ಕರುವಿಗ್ಯೆತಗುಲಿತೊ ಎಂಬುದು ಅವಳಿಗೆ ಸರಿಯಾಗಿ ಗೋಚರವಾಗಲಿಲ್ಲ. ಕರುವಿಗೆ ತಗುಲಿರಬಹುದೆಂದು ಅವಳು ಸಂದೇಹಪಟ್ಟಳು. ಆದರೆ ಅವಳ ಮನವು ಮೇಕೆಗೆ ತಗುಲಿತೆಂದು ನುಡಿಯುತ್ತಿದ್ದಿತು.

ಅವಳು ಅತ್ಯಂತ ಗಾಬರಿಗೊಂಡು ಮನೆಗೆ ಓಡಿ ಬಂದಳು. ಪೂರಣನು ಮನೆ ಗೆಲಸಮಾಡುತ್ತಿದ್ದನು. ಝುಲಕಾರಿಯು ಅವನ ಮುಂದೆ ತನ್ನ ಗಾಬರಿಗೆ ಕಾರಣ ವನ್ನೆಲ್ಲಾ ತೋಡಿಕೊಂಡಳು. ಇದರಿಂದ ಅವನಿಗೆ ಮಿತಿಮೀರಿದ ಕೋಪವುಂಟಾಯಿತು. ಅವನು "ಕರು ಸಾಯಿತೋ ಇಲ್ಲ ಮೇಕೆ ಸಾಯಿತೋ ಎಂಬುದನ್ನು ನೀನ್ಯಾಕೆ ಹೋಗಿ ನೋಡಲೂ ಇಲ್ಲ ಅಥವಾ ಮೇಕೆ ಯಾರದೆಂದು ವಿಚಾರಿಸಲೂ ಇಲ್ಲ" ಎಂದು ಸಿಟ್ಟಿಗೆದ್ದನು.

ಝುಲಕಾರಿಯು ಮುಖ ಸಿಂಡರಿಸಿಕೊಂಡು "ಅಲ್ಲಿ ನಾನ್ಯಾರನ್ನು ಕೇಳಲಿ? ದನ ಮೇಯಿಸುವರ್‍ಯಾರೂ ಅಲ್ಲಿರಲಿಲ್ಲ. ಅವರಿದ್ದಿದ್ದರೆ ದನ ಯಾಕೆ ಆ ಕಡೆ ಬರುತ್ತಿತ್ತು?" ಎಂದಳು.

ಪೂರಣನಿಗೆ ಈ ವಿಷಯವು ಚಿಂತೆಗೆಡೆ ಕೊಟ್ಟಿತು. ಆತನು ಪತ್ತೆ ಮಾಡಲು ಹೊರಟನು. ಮೇಕೆ ಅಥವಾ ಕುರಿಗೆ ಏಟು ಬಿದ್ದಿದ್ದರೆ ಅದರ ಬೆಲೆಯನ್ನು ಕೊಡಬಹುದಿದ್ದಿತು; ಜಾತಿಯವರಿಂದ ದಂಡ ಜುಲ್ಮಾನೆ ವಿಧಿಸಲಾಗಿದ್ದರೆ ಅದನ್ನೂ ತೆತ್ತು ಬಿಡಬಹುದಾಗಿದ್ದಿತು. ಆದರೆ ದನ ಅಥವಾ ಕರುವಿಗೆ ಏಟು ಬಿದ್ದು ಅದು ಮೃತಪಟ್ಟಿದ್ದರೆ ದೊಡ್ಡ ವಿಪತ್ತು ಕಾದಿರುವುದಲ್ಲಾ ಎಂದು ಪೂರಣನು ವ್ಯಾಕುಲಿತನಾದನು.

ಗುರಿ ತಪ್ಪಿ ಹಾರಿದ್ದ ಗೋಲಿಯು ಬಂದು ಕರುವಿನ ಕಾಲಿಗೆ ತಾಕಿದ್ದಿತು. ಆ ಕರುವು ಬ್ರಾಹ್ಮಣನದಾಗಿದ್ದಿತು. ಕರುವು ಮೃತಪಟ್ಟಿತೆಂದೂ, ಝುಲಕಾರಿಯು ಅದನ್ನು ಕೊಂದಳೆಂದೂ ವದಂತಿಯು ಹಬ್ಬಿತು. ದನಕಾಯುವವನು ತಾನು ಆ ವೇಳೆಯಲ್ಲಿ ಅಲ್ಲಿ ಇರಲಿಲ್ಲವೆಂಬ ಅಂಶವನ್ನು ಒಪ್ಪಿಕೊಳ್ಳುತ್ತಿರಲಿಲ್ಲ. "ನಾನು ಝುಲಕಾರಿಯು ಬಂದೂಕವನ್ನು ಹಾರಿಸುತ್ತಿದ್ದುದನ್ನು ಕಣ್ಣಾರೆ ಕಂಡೆ" ಎಂದು ವಾದಿಸಿದನು.

ನಗರದಲ್ಲಿ ದೊಡ್ಡ ಗಲಭೆಯೆದ್ದಿತು. ಝುಲಕಾರಿಯು ಆಗಿಂದಾಗ್ಗೆ ರಾಣಿಯ ಬಳಿಗೆ ಹೋಗಿಬರುತ್ತಿದ್ದಳು. ರಾಣಿಯ ಸ್ತ್ರೀ ಸೈನ್ಯದಲ್ಲಿ ಝುಲಕಾರಿಯೂ ಒಬ್ಬ ಸಿಪಾಯಿಯಾಗಿದ್ದಳು. ಸಂಜೆಯ ಸಮಯದಲ್ಲಿ ಶುಭ್ರವಾದ ಬಣ್ಣಬಣ್ಣದ ವಸ್ತ್ರಗಳನ್ನು ಧರಿಸಿ, ತಟ್ಟೆಯಲ್ಲಿ ಹೂವು, ವೀಳ್ಯೆಯದೆಲೆ, ದೀಪಗಳನ್ನಿರಿಸಿಕೊಂಡು ಮಂದಿರಕ್ಕೆ ಬರುತ್ತಿದ್ದಳು. ಒಂದೊಂದು ಬಾರಿ ಕಂಠದಲ್ಲಿ ಹುವ್ವಿನ ಹಾರದೊಂದಿಗೆ ಶೋಭಿಸುತ್ತಿದ್ದಳು. ಅನ್ಯಜಾತಿಯ ಸ್ತ್ರೀಯರೂ ಅದೇ ರೀತಿಯಾಗಿ ತಮ್ಮ ಸ್ವಾತಂತ್ರ್ಯವನ್ನು ಪ್ರದರ್ಶಿಸುತ್ತಿದ್ದರು. ಆದರೆ ಝುಲಕಾರಿಯ ಪ್ರದರ್ಶನದಲ್ಲಿ ಒಂದು ವೈಶಿಷ್ಟ್ಯವು ಕಂಡುಬರುತ್ತಿದ್ದಿತು. ಅಲ್ಲದೆ ಅವಳು ಉಚ್ಚ ಜಾತಿಯವರನೇಕರಿಗೆ ಅಪ್ರಿಯಳಾಗಿದ್ದಳು.

"ಝುಲಕಾರಿಯು ಒಬ್ಬ ಬಡ ಬ್ರಾಹ್ಮಣನ ಕರುವನ್ನು ಕೊಂದಿರುವಳು

"ಅವಳಿಗೆ ಅವಳ ಗಂಡನನ್ನೇ ಹೊಡೆಯುವಷ್ಟು ಕೊಬ್ಬೇರಿದೆ."

"ಅವಳಿಗೆ ಉಚ್ಚ ನೀಚರೆಂಬ ಲೆಕ್ಕವೇ ಇಲ್ಲ."

"ಇಂತಹ ಸ್ತ್ರೀಯರೇ ರಾಣೀ ಸಾಹೇಬರಿಗೆ ಅಪಖ್ಯಾತಿ ತರುತ್ತಿರುವರು" ಎಂದು ಮುಂತಾಗಿ ಅಂಗಡಿ ಬೀದಿಯಲ್ಲಿ ಮಾತುಕಥೆ ನಡೆಯುತ್ತಿದ್ದಿತು.

"ಪ್ರಾಯಶ್ಚಿತ್ತ ಮಾಡಿಸಿರಿ."

"ಮುಖಕ್ಕೆ ಮಸಿಬಳಿದು ಕತ್ತೆಯ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಿಸಿರಿ."

"ಪ್ರಾಯಶ್ಚಿತ್ತವಾಗುವವರೆಗೆ, ನೀರು, ಭಾವಿ, ಅಂಗಡಿ ಮುಂತಾದುವುಗಳಿಗೆಲ್ಲಾ ಬಹಿಷ್ಕಾರ ಹಾಕಿ."

"ಪೂರಣನಿಗೆ ಅಡಿಗೆ ಮಾಡುವುದಕ್ಕೂ ಬೆಂಕಿ ಕೊಡಬಾರದು."

"ಅವರನ್ನು ಯಾರೂ ಮುಟ್ಟಬಾರದು" ಎಂಬುದಾಗಿ ನಿಷೇಧಗಳನ್ನು ಹಾಕಿದರು.

ಪೂರಣನು ಪತ್ತೆಮಾಡಿ ಕರುವು ಸಾಯಲಿಲ್ಲವೆಂದು ಕಂಡುಕೊಂಡನು. ಆದರೆ ಜನರಿಗೆ ತಾವು ಹಾಕಿದ ಬಹಿಷ್ಕಾರ ನಿಷೇಧಗಳನ್ನು ಹಿಂದೆಗೆದುಕೊಳ್ಳಲು ಇಷ್ಟವಿರಲಿಲ್ಲ. ಆದುದರಿಂದ ಅವರು ಬ್ರಾಹ್ಮಣನಿಗೆ ಹೇಳಿಕೊಟ್ಟು ಅವನು ತನ್ನ ಗಾಯಗೊಂಡ ಕರುವನ್ನು ಬಿಚ್ಚುವಂತೆ ಮಾಡಿದರು. ಆತನು "ಕರುವೆಲ್ಲೋ ನನಗೆ ತಿಳಿಯದು—ಸತ್ತುಹೋಯಿತು" ಎಂದು ಹೇಳಲುಪಕ್ರಮಿಸಿದನು.

ನೇಯ್ಗೆಯವರು ಪಂಚಾಯ್ತಿಯನ್ನು ಏರ್ಪಡಿಸಿ ಬಹಿಷ್ಕಾರ ದಂಡನೆಗಳನ್ನು ವಿಧಿಸಿದರು. ಅದು ಆ ಕಾಲದ ಹಿಂದೂಗಳಿಂದ ರೌರವ ನರಕಕ್ಕಿಂತಲೂ ಮಿಗಿಲಾದಂತೆ ಪರಿಗಣಿಸಲ್ಪಡುತ್ತಿದ್ದಿತು.

ಮುಖಕ್ಕೆ ಮಸಿಬಳಿದು ಕತ್ತೆಯ ಮೇಲೆ ಕೂರಿಸಿ ಮೆರವಣಿಗೆ ಮಾಡಬೇಕೆಂದು ನಿಶ್ಚಯಿಸಲಾಯಿತು. ಪೂರಣನು ಬಹು ದೈನ್ಯದಿಂದ ಮನ್ನಿಸಬೇಕೆಂದು ವಿನಂತಿ ಮಾಡಿದುದರಿಂದಲೂ ಮತ್ತು ಕೆಲವು ಸ್ತ್ರೀಯರ ಬೆಂಬಲದಿಂದಲೂ ಮುಖಕ್ಕೆ ಮಸಿ ಬಳಿಯುವ ಶಿಕ್ಷೆಯು ಕಡಿಮೆಯಾಗಿ ಉಳಿದ ನಿರ್ಣಯಗಳು ಹಾಗೆಯೇ ಉಳಿದವು.

ಶುಕ್ರವಾರ ಸಂಧ್ಯಾಕಾಲದಲ್ಲಿ ಈ ಪ್ರಾಯಶ್ಚಿತ್ತವನ್ನು ಕಾರ್ಯರೂಪಕ್ಕೆ ತರಬೇಕೆಂದು ನಿಷ್ಕರ್ಷೆಯಾಗಿದ್ದಿತು.

ಅದೇ ದಿನ ರಾಣಿಯು ಪೂಜೆಗಾಗಿ ಮಹಾಲಕ್ಷ್ಮಿಯ ಮಂದಿರಕ್ಕೆ ಹೋಗಬೇಕಾಗಿದ್ದಿತು. ಅವಳು ಒಬ್ಬಂಟಿಗಳಾಗಿ ಕುದುರೆಯ ಮೇಲೆ ಕುಳಿತು ಪಶ್ಚಿಮದ ಕಡೆಯಿಂದ ಹಲ್ವಾಯಿ ಪುರಿಯ ಮಾರ್ಗವಾಗಿ ಬರುತ್ತಿದ್ದಳು. ದೂರದಲ್ಲಿ ಅಂಗರಕ್ಷಕನೊಬ್ಬನು ಅವಳನ್ನು ಹಿಂಬಾಲಿಸುತ್ತಿದ್ದನು.

ಕೆಲವು ಜನ ಅರ್ಧ ನಗ್ನ ಭಿಕಾರಿಗಳು ಅವಳನ್ನು ಸುತ್ತುವರಿದರು.

ರಾಣಿಯು "ನಿಮಗೇನು ಬೇಕು ?" ಎಂದು ಕೇಳಿದಳು.

"ಚಳಿಯಿಂದ ನಡುಗಿ ಸಾಯುತ್ತಿದ್ದೇವೆ. ಬಟ್ಟೆಬರೆಗಳನ್ನು ದಯಪಾಲಿಸಬೇಕು."

ರಾಣಿಯು ಅಂಗರಕ್ಷಕನನ್ನು ಕರೆದು "ನಗರದಲ್ಲಿ ಎಷ್ಟು ಜನ ಬಡವರೂ, ಭಿಕಾರಿಗಳೂ, ಭಿಕ್ಷುಕರೂ, ಸಾಧುಗಳೂ ಇರುವರೋ ಅವರೆಲ್ಲರಿಗೂ ಒಂದೊಂದು ಅಂಗಿಯನ್ನೂ ಒಂದೊಂದು ಕಂಬಳಿಯನ್ನೂ ಕೊಡಿಸಬೇಕೆಂದು ದಿವಾನರಿಗೆ ತಿಳಿಸು" ಎಂದು ಆಜ್ಞೆಯಿತ್ತಳು.

ಭಿಕ್ಷುಕರು ತಮ್ಮ ಅಭೀಷ್ಟವು ಸಿದ್ಧಿಸಿತೆಂದು ಸಂತೋಷಪಟ್ಟರು.

ರಾಣಿಯು ಹಲ್ವಾಯಿ ಪುರದ ಮಧ್ಯಕ್ಕೆ ಬರುತ್ತಲೇ ಪೂರಣನು ಓಡಿ ಬಂದು ಅಡ್ಡ ಬಿದ್ದನು.

ರಾಣಿಯು ವಿಷಯವೇನೆಂದು ಕೇಳಿದ ಮೇಲೆ ಆತನು ತನಗೊದಗಿದ ವಿಪತ್ತನ್ನೆಲ್ಲಾ ಹೇಳಿಕೊಂಡನು. ಅದನ್ನು ಕೇಳಿ ಅವಳು ಯೋಚನಾಮಗ್ನಳಾದಳು.

ಪಂಚಾಯ್ತಿಯ ನಿರ್ಣಯವನ್ನು ಹೇಗೆ ಉಲ್ಲಂಘಿಸುವುದು ಸಾಧ್ಯ?"

"ಸರ್ಕಾರ್ ಕರುವು ಸತ್ತಿಲ್ಲ."

"ಕರುವಿನ ಮಾಲೀಕನಾದ ಬ್ರಾಹ್ಮಣನನ್ನು ಕರೆ."

ಬ್ರಾಹ್ಮಣನು ಬರುತ್ತಲೇ ತನ್ನ ಮೇಲೆ ಆಣೆಯಿಟ್ಟು ನಿಜಸ್ಥಿತಿಯನ್ನು ಹೇಳುವಂತೆ ಆಜ್ಞೆಮಾಡಿದಳು. ಆಗ ಸುಳ್ಳು ಹೇಳುವುದಕ್ಕೆ ಅವಕಾಶವಿರಲಿಲ್ಲ.

ಬ್ರಾಹ್ಮಣನು "ಮಹಾರಾಜ್, ನೀವು ನನ್ನನ್ನು ಶಿಕ್ಷಿಸಿದರೂ ಸರಿ, ರಕ್ಷಿಸಿದರೂ ಸರಿ ನಿಜಸ್ಥಿತಿಯಲ್ಲಿ ಕರುವು ಸಾಯಲಿಲ್ಲ. ಅದು ದತಿಯಾ ರಾಜ್ಯದಲ್ಲಿರುವ ನನ್ನ ಸಂಬಂಧೀಕರಲ್ಲಿದೆ" ಎಂದು ಉತ್ತರವಿತ್ತನು.

ರಾಣಿಯು ಬ್ರಾಹ್ಮಣನ ಧೂರ್ತತೆಗೆ ತಕ್ಕ ದಂಡನೆಯನ್ನು ವಿಧಿಸಬೇಕೆಂದಿದ್ದಳು. ಆದರೆ ಪೇಟೆಯಲ್ಲಿದ್ದ ಮುಖ್ಯಸ್ಥನಾದ ಚೌಧುರಿಯು ಬ್ರಾಹ್ಮಣನಿಗಾಗಿ ವಾದಿಸಿದನು. ಅದರಿಂದಾಗಿ ಬ್ರಾಹ್ಮಣನನ್ನು ಬಿಟ್ಟುಬಿಡಲಾಯಿತು.

ಪೇಟೆಯ ಜನರು ನಾಚಿಕೆಯಿಂದ ಸುಮ್ಮನಿರ ಬೇಕಾಯಿತು. ಝುಲಕಾರಿಯ ಕತ್ತೆ ಸವಾರಿಯ ತಮಾಷೆಯನ್ನು ನೋಡಬೇಕೆಂದು ಆಶಿಸುತ್ತಿದ್ದವರು ನಿರಾಶರಾದರು. ಪಂಚಾಯ್ತಿದಾರರಿಗೆ ತಮ್ಮ ನಿರ್ಣಯವನ್ನು ಹಿಂದೆಗೆದುಕೊಳ್ಳುವುದು ಅಷ್ಟು ಪ್ರಿಯವಾಗಲಿಲ್ಲ. ಆದರೂ ಹಿಂದೆಗೆದುಕೊಳ್ಳಲೇಬೇಕಾಯಿತು. ಕರುವಿಗೆ ಗಾಯಗೊಳಿಸಿದ್ದಕ್ಕಾಗಿ ಪೂರಣನು ಒಂದು ಊಟವನ್ನು ಕೊಡಬೇಕಾಯಿತು. ಆ ಊಟಕ್ಕೆ ಪ್ರಾಯಶ್ಚಿತ್ತ ನಿಯಮದಂತೆ ಕೆಲವು ಬ್ರಾಹ್ಮಣರನ್ನೂ ಮತ್ತು ಕೆಲವು ಅನ್ಯಜಾತಿಯ ಮುಖ್ಯಸ್ಥರನ್ನೂ ಆಮಂತ್ರಿಸಬೇಕಾಗಿದ್ದಿತು. ಪೂರಣನು ಕೆಲವು ಬ್ರಾಹ್ಮಣರನ್ನು ಆಮಂತ್ರಿಸಿದನು. ಆದರೆ ಪೇಟೆಯ ಮುಖ್ಯಸ್ಥರಾದ ಶ್ಯಾಮಾ ಚೌಧುರಿ ಮತ್ತು

ಮರ್ಗ ಗಂಧಿಯರನ್ನು ಕರೆಯಲಿಲ್ಲ. ಅವರಿಬ್ಬರೂ ಕರೆಯಿಲ್ಲದೆಯೇ ಔತಣಕ್ಕೆ ಬಂದರು. ಪೂರಣನಿಗೆ ಇದನ್ನು ಕಂಡು ಆಶ್ಚರ್ಯವೂ ಮತ್ತು ಪರಿತಾಪವೂ ಉಂಟಾಯಿತು.

"ನೀನು ಕರೆಯಲು ಮರೆತುಬಿಟ್ಟೆ. ಆದರೆ ನಾವು ಪಂಕ್ತಿಗೆ ಬರವೇ ಇರುವುದಿಲ್ಲ" ಎಂದು ಶ್ಯಾಮಾ ಚೌಧುರಿಯು ಹೇಳಿದನು.

ಇಂತಹವರಿಗೆ ಬ್ರಾಹ್ಮಣರು ಭೋಜನವನ್ನು ತಯಾರಿಸುತ್ತಿದ್ದರು. ಆ ಭೂರಿ ಭೋಜನಗಳನ್ನುಂಡು ಇವರು ಶರೀರವನ್ನು ಬೆಳಸುತ್ತಿದ್ದರು. ಆ ಕಾಲದ ಸಮಾಜದ ಕಿರುಕುಳವನ್ನೀಯುವ ಆವೇಶಗಳು ಇಂತಹ ಸಹಕಾರಗಳಿಂದ ತಮ್ಮ ಸೇಡನ್ನು ತೀರಿಸಿಕೊಳ್ಳುತ್ತಿದ್ದುವು.

## ೬೨

ಜನರಲ್ ರೋಜನು ಸಾಗರದ ಮೇಲೆ ಆಕ್ರಮಣ ಮಾಡಿ ಅಲ್ಲಿದ್ದ ಆಂಗ್ಲೇಯ ಕೈದಿಗಳನ್ನು ಬಿಡುಗಡೆ ಮಾಡಿದ ನಂತರ ಅವರಿಗೆ ಅತ್ಯಂತ ಹರ್ಷವಾಗಿ ಅವರು ಆತನಿಗೆ ತೋಪಿನ ಸಲಾಮನ್ನು ಹಾರಿಸಿ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ಸಾಗರದ ಆಕ್ರಮಣವಾದ ಮೇಲೆ ರೋಜನು ಗಡಾ ಕೋಟೆಯನ್ನು ಸ್ವಾಧೀನ ಪಡಿಸಿಕೊಂಡನು. ಆದರೆ ಕ್ರಾಂತಿಕಾರರ ಸಶಸ್ತ್ರದಳವು ಎಲ್ಲೆಲ್ಲಿಯೂ ಹರಡಿಕೊಂಡಿದ್ದಿತು. ಅದನ್ನು ಅಡಗಿಸಲು ರೋಜನು ತನ್ನ ಸೇನೆಯನ್ನು ಅನೇಕ ಭಾಗಗಳಾಗಿ ವಿಂಗಡಿಸಿ ಅವುಗಳನ್ನು ನಾನಾ ದಿಕ್ಕುಗಳಿಗೆ ಕಳುಹಿಸಿದನು. ತಾನು ಒಂದು ದೊಡ್ಡಶಾಖೆಯನ್ನು ತೆಗೆದುಕೊಂಡು ಝಾನ್ಸಿಯ ಕಡೆ ತಿರುಗಿ ನಾರ್ಹಟ್ ಘಾಟಿ ಎಂಬಲ್ಲಿಗೆ ಹೋದನು. ಅವನ ಸೈನ್ಯದ ಒಂದು ಭಾಗವು ಶಹಗಡದ ರಾಜ ಭಕ್ತಬಲಿಯನ್ನು ಎದುರಿಸಲು ಹೋಗಿದ್ದಿತು. ಅಲ್ಲಿ ನೋಡಿದರೆ ಭಕ್ತಬಲಿಯು ಆ ಸೈನ್ಯವನ್ನು ಎದುರಿಸಲು ಒಂದು ದೊಡ್ಡ ಸೈನ್ಯವೊಂದಿಗೆ ಸಿದ್ಧನಾಗಿದ್ದನು. ನಾರ್ಹಟ್ ಘಾಟಿಯ ಬಳಿ ಮರ್ದನ ಸಿಂಹನೂ ಅಸಂಖ್ಯಾತ ಸೈನ್ಯವಿಟ್ಟಿದ್ದನು. ರೋಜನು ಇದನ್ನು ಕಂಡುಕೊಂಡು ತನ್ನ ಸೈನ್ಯವನ್ನು ಮದನ್‌ಪೂರ್ ಘಾಟಿಯ ಕಡೆಗೆ ತಿರುಗಿಸಿದನು. ಮರ್ದನ ಸಿಂಹನೂ ತನ್ನ ಸೈನ್ಯವನ್ನೂ ಅದೇ ಕಡೆಗೆ ತಿರುಗಿಸಿದನು. ರೋಜನು ಮರ್ದನ ಸಿಂಹನ ಸೈನ್ಯವೂ ಮತ್ತು (ಭಕ್ತ) ಬಖತ್ ಬಲಿಯ ಸೈನ್ಯವೂ ಒಂದುಗೂಡದೆ ಇರಬೇಕೆಂಬ ಅಭಿಪ್ರಾಯದಿಂದ ತನ್ನ ಸೈನ್ಯದ ಒಂದು ಶಾಖೆಯನ್ನು ಮರ್ದನ ಸಿಂಹನೊಡನೆ ಯುದ್ಧ ಹೂಡಲು ನಾರ್ಹಟ್ ಘಾಟಿಯ ಕಡೆಗೆ ಕಳುಹಿಸಿ ತಾನು ಮದನ್‌ಪೂರ್ ಘಾಟಿಯತ್ತ ಹೊರಟನು. ಮದನ್ ಪುರವು ಅಲ್ಲಿಂದ ನೈರುತ್ಯಕ್ಕೆ ಸುಮಾರು ೨೦

ಮೈಲಿ ದೂರದಲ್ಲಿದ್ದಿತು.

ಭಕ್ತಬಲಿಗೂ ರೋಜನಿಗೂ ಘೋರವಾದ ಸಂಗ್ರಾಮವು ನಡೆಯಿತು. ಎರಡು ಬೆಟ್ಟಗಳ ನಡುವೆ ಮದನಪುರವೂ ಮತ್ತು ಅದರ ತಟಾಕವೂ ನೆಲೆಸಿದ್ದುವು. ಆ ಮನೋಹರವಾದ ಕೆರೆಯ ಬಳಿಯೇ ಈ ಘೋರಯುದ್ಧವು ನಡೆಯಿತು. ಆಂಗ್ಲೇಯ ಸೈನಿಕರನೇಕರು ಮಡಿದರು. ರೋಜನೂ ಗಾಯಗೊಂಡನು. ಆದರೆ ಯುದ್ಧದಲ್ಲಿ ವಿಜಯವು ಅವನಿಗೇ ಲಭಿಸಿತು. ಒಂದು ವೇಳೆ ಮರ್ದನಸಿಂಹ ಮತ್ತು ಭಕ್ತಬಲಿಯ ಸೈನ್ಯಗಳು ಒಟ್ಟುಗೂಡಿ ರೋಜನನ್ನು ಎದುರಿಸಿದ್ದರೆ ಅವನ ಪರಾಜಯವು ಶತಸ್ಸಿದ್ಧವಾಗಿದ್ದು ಆತನ ಸೇನಾಪತಿತ್ವದ ಇತಿಹಾಸವು ಮದನಪುರದ ತಟಾಕದ ತಡಿಯಲ್ಲಿ ಅಂದೇ ಕೊನೆಗಾಣುತ್ತಿದ್ದಿತು.

ಭಕ್ತಬಲಿಯ ಅನೇಕ ಸರದಾರರು ಕೈಸೆರೆ ಸಿಕ್ಕಿದರು. ಮತ್ತು ಮೃತಿ ಹೊಂದಿದರು. ಆತನ ಪರಾಜಯದ ಸುದ್ದಿಯನ್ನು ಕೇಳಿ ಮರ್ದನಸಿಂಹನು ನಾರ್ಹಟಿ ಘಾಟಿಯನ್ನು ತ್ಯಜಿಸಿ ಓಡಿಹೋದನು. ರೋಜನು ತನ್ನ ವಿವಿಧ ಸೈನ್ಯದ ದಳಗಳಿಗೆ ಕ್ರಾಂತಿಕಾರರನ್ನು ಓಡಿಸಿಕೊಂಡು ಝಾನ್ಸಿಯ ಬಳಿ ಬಂದು ಸೇರಬೇಕೆಂದು ಆದೇಶವಿತ್ತನು.

ಖಾನ್ಪುರದ ರಾಜಮರ್ದನಸಿಂಹನು ಮದನಪುರದ ಪರಾಜಯ ಮತ್ತು ನರಹತ್ಯೆಯ ಸಮಾಚಾರವನ್ನು ಝಾನ್ಸಿಗೆ ತಲಪಿಸಿದನು. ಝಾನ್ಸಿಯಲ್ಲಿಯೂ ಮತ್ತು ಇತರ ಕೋಟೆಕೊತ್ತಲುಗಳಲ್ಲಿಯೂ ದೊಡ್ಡ ದುರ್ಗಗಳಲ್ಲಿಯೂ ನಗರ ಮತ್ತು ಗ್ರಾಮಗಳಲ್ಲಿಯೂ ಸಂರಕ್ಷಣೆಯ ಕಾರ್ಯಗಳಲ್ಲಿ ನೆರವಾದರು.

ಆ ಸಮಯದಲ್ಲಿ ಗ್ವಾಲಿಯರಿನಿಂದ ಒಂದು ನಾಟಕ ಮಂಡಲಿಯು ಝಾನ್ಸಿಗೆ ಬಂದಿತು.

ಮುಂದರಿಯು "ಸರ್ಕಾರ್ ಯುದ್ಧವು ತೊಡಗುವ ಮುನ್ನ ಒಂದೆರಡು ಪ್ರದರ್ಶನಗಳನ್ನು ಏರ್ಪಡಿಸಲು ಅನುಮತಿ ಕೊಡಬೇಕು" ಎಂದು ರಾಣಿಯಲ್ಲಿ ಅರಿಕೆ ಮಾಡಿಕೊಂಡಳು.

"ಈಗ ನಾಟಕ ಮುಂತಾದ ಮನರಂಜನೆಗಳಿಗೆ ಸಮಯವಿಲ್ಲ" ಎಂದು ರಾಣಿಯು ಖಡಾ ಖಂಡಿತವಾಗಿ ಉತ್ತರವಿತ್ತಳು.

ಮುಂದರಿಯು "ನಾನು ಯುದ್ಧದಲ್ಲಿ ಮಡಿದರೆ ಮುಂದೆಂದು ನಾಟಕ ನೋಡಬಲ್ಲೆನು?" ಎಂದು ಅನುರೋಧಿಸಿದಳು.

ರಾಣಿಯು ನಗುತ್ತಾ ಹೇಳಿದಳು. "ಮುಂದಿನ ಜನ್ಮದಲ್ಲಿ ಆ ವೇಳೆಗೆ ಸ್ವರಾಜ್ಯ ಸ್ಥಾಪನೆಯಾಗಿರುವುದು, ಸ್ವರಾಜ್ಯದಲ್ಲಿ ನಾಟಕವನ್ನು ನೋಡುವೆ." ಕಾಶೀಬಾಯಿಯು "ಒಂದೇ ಒಂದು ನಾಟಕ ಸರ್ಕಾರ್, ನಂತರ ನಾವಾಡುವ ಆಟವನ್ನು ಸ್ವರಾಜ್ಯಾ

ಕಾಂಕ್ಷಿಗಳು ಎಂದೆಂದಿಗೂ ಸ್ಮರಿಸಿಕೊಳ್ಳುವರು" ಎಂದಳು.

ರಾಣಿಯು ಮುಗುಳ್ನಗೆಯಿಂದ "ಯುದ್ಧಗಳಾಗುವುದು ಮತ್ತೆ ಯಾವ ಕಾರಣಕ್ಕಾಗಿ? ನಮ್ಮ ಜೀವನ ಮತ್ತು ಧರ್ಮಗಳ ರಕ್ಷಣೆಗಾಗಿ, ನಮ್ಮ ಸಂಸ್ಕೃತಿ ಮತ್ತು ಕಲೆಗಳನ್ನು ಉದ್ಧಾರ ಮಾಡುವುದಕ್ಕಾಗಿ. ಹಾಗಿಲ್ಲದಿದ್ದರೆ ಯುದ್ಧವು ಒಂದು ವ್ಯರ್ಥವಾದ ರಕ್ತಪಾತವಾಗುವುದು. ಈ ನಾಟಕವು ಬೇಗ ನಡೆದು ಹೋಗಲಿ. ನಂತರ ಆ ನಾಟಕವನ್ನು ಆಂಗ್ಲೇಯರ ಚೈತನ್ಯವು ಮುರಿದು ದೇಶವು ಅವರ ಹಿಡಿತದಿಂದ ಮುಕ್ತವಾಗುವಂತೆ ವೀರಾವೇಶದಿಂದ ಆಡಿ" ಎಂದು ಹೇಳಿದಳು.

ಮುಂದರಿಯು ಹರ್ಷದಿಂದ "ನಾಟಕವು ಮರಾಠಿ ಭಾಷೆಯಲ್ಲಿ ಅಭಿನಯಿಸಲಾಗುವುದು" ಎಂದಳು.

ರಾಣಿಯು "ಝಾನ್ಸಿಯಲ್ಲಿ ಮರಾಠಿ! ಇಲ್ಲಿ ಮಹಾರಾಷ್ಟ್ರರು ಅಧಿಕ ಸಂಖ್ಯೆಯಲ್ಲಿರುವುದರಿಂದ ಅವರು ತಮ್ಮ ಮನೋರಂಜನೆಗಾಗಿ ಮರಾಠಿಯಲ್ಲಿ ನಾಟಕವನ್ನು ಆಡಿಸಿ ನೋಡಲಪೇಕ್ಷಿಸುವುದು ಸರಿಯೇ. ಆದರೆ ಹಿಂದೀ ಭಾಷೆಯಲ್ಲಿ ನಾಟಕವನ್ನಾಡಿದರೆ ಮಾತ್ರ ಆ ಮಂಡಲಿಗೆ ರಾಜಾಶ್ರಯವು ದೊರಕುವುದು. ನಾನೇನೋ ಮಹಾರಾಷ್ಟ್ರ ಕುಲದಲ್ಲೇ ಜನ್ಮವೆತ್ತಿರುವೆನು. ಆದರೆ ನನ್ನನ್ನು ನಾನು ಮಹಾರಾಷ್ಟ್ರಳೆಂದು ಭಾವಿಸದೆ ವಿಂಧ್ಯಾಖಂಡಿಯೆಂದು ಭಾವಿಸಿಕೊಂಡಿರುವೆನು. ನನ್ನ ಝಾನ್ಸಿಯ ಭಾಷೆ ಹಿಂದಿ. ನಾಟಕವು ಹಿಂದೀ ಭಾಷೆಯಲ್ಲಿ ನಡೆಯುವುದಾದರೆ ನಡೆಯಲಿ, ಇಲ್ಲದಿದ್ದರೆ ನನಗೂ ಅದಕ್ಕೂ ಯಾವ ಸಂಬಂಧವೂ ಇರುವುದಿಲ್ಲ. ಇದು ನನ್ನ ಖಂಡಿತವಾದ ನಿಶ್ಚಯ" ಎಂದಳು.

ಅಲ್ಲಿದ್ದ ಸಖಿಯರೆಲ್ಲರೂ ಆ ಮಾತಿಗೆ ಸಮ್ಮತಿಸಿದರು.

ನಾಟಕ ಮಂಡಲಿಯವರಿಗೆ ರಾಣಿಯ ಇಚ್ಛೆಯನ್ನು ತಿಳಿಸಲಾಯಿತು. ಅವರಲ್ಲಿದ್ದ ಕೇವಲ ಕೆಲವು ಮಂದಿ ಅಭಿನೇತ್ರಿಗಳಿಗೆ ಮಾತ್ರ ಹಿಂದೀ ಭಾಷೆಯ ಪರಿಚಯವಿದ್ದಿತು. ಅವರ ಕಷ್ಟವನ್ನು ಪರಿಹರಿಸಲು ಝಾನ್ಸಿಯ ಕೆಲವು ನಟರನ್ನು ಅವರೊಡನೆ ಸೇರಿಸಲಾಯಿತು. ನಾಟಕ ಮಂಡಲಿಯವರು "ಹರಿಶ್ಚಂದ್ರ" ನಾಟಕವನ್ನು ಉತ್ಕೃಷ್ಟವಾಗಿ ಆಡಿ ಪ್ರದರ್ಶಿಸಿದರು. ಮೋತೀಬಾಯಿ ಮುಂತಾದ ಗಣ್ಯರನ್ನು ಮುಕ್ತಕಂಠರಾಗಿ ಪ್ರಶಂಸಿಸಲಾಯಿತು. ರಾಣಿಯು ನಾಟಕ ಮಂಡಲಿಗೆ ನಾಲ್ಕು ಸಹಸ್ರ ರೂಪಾಯಿಗಳನ್ನು ಪುರಸ್ಕಾರವಾಗಿ ಕೊಟ್ಟಳು. ಮಂಡಲಿಯು ಗ್ವಾಲಿಯರಿಗೆ ಮರಳಿತು. *

ರಾಣಿಯು ಲಲಿತಕಲೆಗಳ ಪೋಷಕಳು. ಅಂತಹ ಕಠಿಣ ಮತ್ತು ಚಿಂತಾಕುಲ

---

* ಪರಿಶಿಷ್ಟವನ್ನು ನೋಡಿ.

ಸಮಯದಲ್ಲಿಯೂ ಕೂಡ ರಾಣಿಯು ಪ್ರತ್ಯೇಕವಾಗಿ ಆಗುಂತಕ, ಗಾಯಕ, ವೈಣಿಕ, ಸಿತಾರು ಬಾರಿಸುವ ವಿದ್ವಾಂಸ ಮುಂತಾದವರಿಗೆ ಸ್ವಲ್ಪ ಸಮಯವನ್ನಾದರೂ ಮಿಾಸಲಾಗಿಡುತ್ತಿದ್ದಳು. ಅಲ್ಲದೆ ಅವರಿಗೆ ತಕ್ಕ ಪುರಸ್ಕಾರಗಳನ್ನು ಕೊಡುತ್ತಿದ್ದಳು. ಕವಿ, ಚಿತ್ರಕಾರ, ಶಿಲ್ಪಿ ಯಾರೇ ಆಗಲಿ ವಿಫಲರಾಗಿ ಹಿಂದಿರುಗಿ ಹೋಗುತ್ತಿದ್ದುದೇ ಇಲ್ಲ. ಶಾಸ್ತ್ರಜ್ಞ, ಜ್ಯೋತಿಷ, ಯಾಜ್ಞಿಕ, ವೈದ್ಯ, ಹಕೀಮ ಎಲ್ಲರಿಗೂ ಪೋಷಣೆಯು ದೊರಕುತ್ತಿದ್ದಿತು. ತನ್ನ ಈ ಧಾರ್ಮಿಕ ವೃತ್ತಿಯನ್ನು ಸ್ವರಾಜ್ಯದಲ್ಲಿ ವಿಕಸಿತವಾಗಿಸಿ ಪ್ರಚುರಪಡಿಸಬೇಕೆಂದು ಆಶಿಸುತ್ತಿದ್ದಳು.

ಪೀರಾಲಿಯು ಸ್ವಲ್ಪವೂ ವಿಳಂಬಮಾಡದೇ ಮಹತ್ವಪೂರ್ಣವಾದ ಸಮಾಚಾರವನ್ನು ಬಹಳ ಎಚ್ಚರಿಕೆಯಿಂದ ನವಾಬ್ ಆಲೀಬಹದ್ದೂರನಿಗೆ ಕಳುಹಿಸುತ್ತಿದ್ದನು. ಝಾನ್ಸಿಯನ್ನು ಬಿಟ್ಟಮೇಲೆ ಅಲ್ಲಲ್ಲಿ ತಿರುಗುತ್ತಾ ಕೆಲವು ದಿನಗಳನಂತರ ನವಾಬನು ದತಿಯಾವನ್ನು ಸೇರಿದನು. ಅಲ್ಲಿ ಸ್ವಲ್ಪ ದಿನಗಳಿದ್ದು ಭಾಂಡೇರ್ ಎಂಬ ಸ್ಥಳಕೆ ಹೋದನು. ಝಾನ್ಸಿಯಿಂದ ದತಿಯಾ ೧೭ ಮೈಲಿಗಳ ದೂರದಲ್ಲಿದೆ. ಮತ್ತು ಭಾಂಡೇರಾವು ೨೪ ಮೈಲಿಗಳ ದೂರದಲ್ಲಿದೆ.

ನವಾಬ್ ಆಲೀಬಹದ್ದೂರನು ಅಲ್ಲಿಂದ ಆಂಗ್ಲೇಯರಿಗೆ ಬೇಕಾದ ಸಮಾಚಾರಗಳನ್ನು ಕಳುಹಿಸುತ್ತಿದ್ದನು. ರೋಜ್ ಮುಂತಾದ ಆಂಗ್ಲೇಯ ಜನರಲ್ಲುಗಳು ಝಾನ್ಸಿಯನ್ನು ಆಕ್ರಮಿಸಬೇಕೆಂದಿರುವುದನ್ನು ಆತನು ಅರಿತಿದ್ದನು. ಅವರುಗಳಿಗೆ ಉಪಯೋಗವಾದ ಮತ್ತು ನಿರುಪಯೋಗವಾದ ಎಲ್ಲಾ ವಿವಿಧ ಸುದ್ದಿಗಳನ್ನು ಅವನಿಂದ ಆಗಾಗ್ಗೆ ದೊರಕುತ್ತಲೇ ಇದ್ದವು. ಮದನಪುರದ ಯುದ್ಧದ ನಂತರ ಝಾನ್ಸಿಯು ರೋಜನ ಲಕ್ಷ್ಯಕ್ಕೆ ಬಂದು ಅದರ ಆಕ್ರಮಣವು ಎಲ್ಲಕ್ಕೂ ಮುಖ್ಯ ಕರ್ತವ್ಯವೆನಿಸಿತು.

# ೮ ನ್ತ

## ಎಂತಹ ಸತ್ಯ

### ೬೩

ಮದನಪುರದ ಸಂಗ್ರಾಮದನಂತರ ರೋಜನ ಸೈನ್ಯವು ಶಹಗಡವನ್ನು ಆಳಲು ಆರಂಭಿಸಿತು. ನಂತರ ಮಂಡವಾರಾ ಗಡಿಯನ್ನು ಆಕ್ರಮಿಸಿಕೊಂಡು ಬಾನ್ಪುರದ ರಾಜ್ಯವನ್ನು ಆಂಗ್ಲೇಯ ರಾಜ್ಯದಲ್ಲಿ ವಿಲೀನ ಮಾಡಲಾಯಿತು. ಬಾನ್ಪುರದ ಮಹಲಿನ ಕೆಲವು ಭಾಗಗಳನ್ನು ತೋಪುಗಳಿಂದ ಹೊಡೆದು ನಾಶಪಡಿಸಿ ಉಳಿದುದಕ್ಕೆ ಅಗ್ನಿ ಸ್ಪರ್ಶಮಾಡಿದ್ದರು. ಈ ಎರಡು ರಾಜ್ಯಗಳ ಮುಖ್ಯಾಧಿಕಾರಿಗಳನ್ನು ಗಲ್ಲಿಗೇರಿಸಿದರು. ಆ ಮಹಲ್ಲಿನಲ್ಲಿ ಪುಸ್ತಕ ಭಂಡಾರವೂ ಮತ್ತು ಚಿತ್ರಶಾಲೆಯೂ ಇದ್ದವು. ಆದರೆ ಇವು ಕ್ರಾಂತಿಕಾರರಿಗೆ ಸೇರಿದವೆಂದು ಗಣಿಸಿ ತಾತ್ಸಾರಕ್ಕೆ ಒಳಗಾಗಿ ನಾಶವಾದವು.

ವಧೆ ಮತ್ತು ಅಗ್ನಿಗಳ ಸುರಿಮಳೆಯಾಯಿತು. ಜನರಲ್ ರೋಜನ ಸೈನ್ಯವು ೧೨ ನೇ ಮಾರ್ಚ್ ಸ್ ೧೮೫೮ ರಲ್ಲಿ ತಾಲ್ಬೆಹಬ್ ಎಂಬ ಸ್ಥಳವನ್ನು ಸೇರಿತು. ತಾಲ್ಬೆಹಬ್ ಬಹು ಪ್ರಾಚೀನ ಮತ್ತು ಬಲವಾದ ಕೋಟೆ. ಯುದ್ಧ ಮಾಡುವುದಕ್ಕೆ ಬಹಳ ಯೋಗ್ಯವಾದುದು. ಆದರೆ ಅದರಲ್ಲಿ ಕ್ರಾಂತಿಕಾರರು ಅಲ್ಪ ಸಂಖ್ಯೆಯಲ್ಲಿದ್ದು ಅವರ ಮುಖಂಡನು ಅಂತಹ ದಕ್ಷನಾಗಿರಲಿಲ್ಲ. ಯುದ್ಧ ವಿಶಾರದನೂ, ಚತುರನೂ, ವಿಜಯಶಾಲಿಯೂ ಆದ ಸೇನಾಪತಿ ರೋಜನಿಗೂ ಮತ್ತು ಅವನ ವಿಶಾಲ ಸೇನೆ ಮತ್ತು ತೋಪುಗಳಿಗೂ ಸರಿಗಟ್ಟಲಾರದೇ ಕ್ರಾಂತಿಕಾರರು ಓಡಿಹೋದರು. ರೋಜನು ತಾಲ್ಬೆಹಬ್ ಕಿಲ್ಲೆಯನ್ನು ವಶಪಡಿಸಿಕೊಂಡನು. ಚಂದೇರಿ ಎಂಬಲ್ಲಿ ಬಾನ್ಪುರದ ರಾಜನ ಒಂದು ತುಕ್ಕಡಿಯಿದ್ದಿತು. ಇಂತಹ ಮುಳ್ಳನ್ನು ತನ್ನ ಬಗಲಿನಲ್ಲಿಟ್ಟುಕೊಂಡು ಮುಂಬರಿಯುವುದು ಅಯೋಗ್ಯವೆಂದೆಣಿಸಿ ರೋಜನು ಚಂದೇರಿಯನ್ನು ವಶಮಾಡಿಕೊಳ್ಳಲು ತನ್ನ ಅಧಿಕಾರಿ ಬ್ರಿಗೆಡಿಯರ್ ಸ್ಟುವರ್ಟ ಎಂಬುವವನನ್ನು ಕಳುಹಿಸಿದನು. ಆತನು ಸುಲಭದಲ್ಲಿಯೇ ಚಂದೇರಿಯನ್ನು ಕರಗತ ಮಾಡಿಕೊಂಡನು.

ಝಾನ್ಸಿಯ ತಹಸೀಲಾದ ಮಹುವಿನಲ್ಲಿ ಒಂದು ಚಿಕ್ಕ ಕೋಟೆಯಿದ್ದಿತು. ಅಲ್ಲಿ ರಾಣಿಯ ಪರವಾಗಿ ಕಾಶೀನಾಥ ಭೈಯ್ಯಾ, ಆನಂದರಾವ್ ಇತ್ಯಾದಿ ಚಿಕ್ಕಪುಟ್ಟ ಜಹಗೀರುದಾರರು ಸಿದ್ಧತೆಗಳನ್ನು ಮಾಡುತ್ತಿದ್ದರು. ರೋಜನು ಖಾನ್ಪುರವನ್ನು ಧ್ವಂಸ ಮಾಡಿದನಂತರ ಮಹುವನ್ನು ದಮನಮಾಡಲು ತನ್ನ ಒಂದು ದಳವನ್ನು ನೇರವಾಗಿ

ಅಲ್ಲಿಗೆ ನಿಯುಕ್ತಮಾಡಿದನು. ರೋಜನು ಝಾನ್ಸಿಯ ಮೇಲೆ ಆಕ್ರಮಣ ಮಾಡುವ ಮುನ್ನ ರಾಣಿ ಲಕ್ಷ್ಮಿಬಾಯಿಗೆ ಒಂದು ಸಂದೇಶವನ್ನು ಕಳುಹಿಸಿದನು.

"ನೀವು, ನಿಮ್ಮ ದಿವಾನ್ ಲಕ್ಷ್ಮಣರಾವ್, ಲಾಲಾಭಾವು ಬಕ್ಷಿ, ಮೋರೋಪಂತ್ ತಾಂಬೆ (ನಿಮ್ಮ ತಂದೆ), ನಾನಾ ಬೋಪಟ್‌ಕರ್, ದಿವಾನ್ ರಘುನಾಥಸಿಂಹ, ದಿವಾನ್ ಜವಹರ್‌ಸಿಂಹ, ಕುಮಾರ್ ಖುದಾಬಕ್ಷ ಮತ್ತು ಮೋತೀಬಾಯಿಯರೊಡನೆ ನಿಶ್ಯಸ್ತ್ರರಾಗಿ ನಮ್ಮಲ್ಲಿಗೆ ಬರುವುದು; ಇಲ್ಲದಿದ್ದರೆ ಭಯಂಕರವೂ, ಕಠೋರವೂ ಆದ ಫಲಕ್ಕೆ ಸಿದ್ಧರಾಗಿರಿ."

ರಾಣಿಯು ಈ ಪ್ರಕಾರವಾದ ಸಂದೇಶವು ಬರಬಹುದೆಂದು ನಿರೀಕ್ಷಿಸಿ ಸಿದ್ಧಳಿದ್ದಳು. ಆದರೆ ಜನರಲ್ ರೋಜನು ಇಚ್ಛಿಸಿದ 'ಮೋತೀಬಾಯಿಯನ್ನು' ಸ್ಮರಿಸಿಕೊಂಡು ಗಟ್ಟಿಯಾಗಿ ನಗಲಾರಂಭಿಸಿದಳು. ಅವಳ ಆ ನಗುವು ದಿವಾನ್‌ಖಾನೆಯಲ್ಲಿ ಒಂದು ದೊಡ್ಡ ನಗೆಗಡಲನ್ನೇ ಹರಿಸಿತು.

ರಾಣಿಯು ತನ್ನ ನಗುವನ್ನು ತಡೆಹಿಡಿದು "ನಾನಾಸಾಹೇಬ್, ಈ ಮೋತಿಬಾಯಿಯನ್ನು ನಾನೆಲ್ಲಿಂದ ಕರೆತರಲಿ ?" ಎಂದು ಹೇಳಿದಳು.

ನಾನಾ ಬೋಪಟ್‌ಕರನು "ಸರ್ಕಾರ್, ನಿಮ್ಮಲ್ಲಿ ಒಂದು ವ್ಯಕ್ತಿನಿರ್ಮಾಣದ ಕಾರ್ಖಾನೆ ಇದ್ದಿದ್ದರೆ ಬೇಕಾದ ವ್ಯಕ್ತಿಯ ಛಾಪೆಯೊತ್ತಿ, ನಿಲುವಂಗಿ ತೊಡಿಸಿ ಸನ್ಯಾಸಿಯ ವೇಷದಲ್ಲಿ ಕಳುಹಿಸ ಬಹುದಾಗಿದ್ದಿತು" ಎಂದು ಉತ್ತರವಿತ್ತನು.

ಮೋತೀಬಾಯಿಯು ಆಗ ದಿವಾನ್‌ಖಾನೆಯಲ್ಲಿದ್ದು, ಸಿಟ್ಟಿಗೆದ್ದು "ಸರ್ಕಾರ್, ದೂತನನ್ನು ಕರೆಸಿ ಈ ಮೋತೀಬಾಯಿಯ ಚಹರೆಪಟ್ಟಿಯೆಂತಹುದು, ಅವನು ಯಾವ ತರಹದ ವ್ಯಕ್ತಿಯೆಂಬುದನ್ನು ತಿಳಿದುಕೊಳ್ಳಲಾಗಲಿ" ಎಂದು ಹೇಳಿದಳು.

ಮೋರೋಪಂತನು "ಅವನಿಗೆ ನಿಡಿದಾದ ಗಡ್ಡವೂ. ಉದ್ದವಾದ ಕೇಶಧಾಮವೂ ರಕ್ತಸಿಕ್ತವಾದ ಕಣ್ಣುಗಳೂ ಇರಬಹುದು. ಈ ಸಾಧು ಸನ್ಯಾಸಿಗಳು ಆಂಗ್ಲೇಯ ಸೈನ್ಯವನ್ನು ಉತ್ತೇಜನಗೊಳಿಸುವುದರಲ್ಲಿ ಪ್ರಮುಖ ಪಾತ್ರವಹಿಸಿರುವರು. ಆದುದರಿಂದ ರೋಜನಿಗೂ ಇಂತಹ ಒಬ್ಬ ಸನ್ಯಾಸಿಯ ಆವಶ್ಯಕತೆಯಿರಬಹುದು" ಎಂದು ಉತ್ತರಿಸಿದನು.

ದಿವಾನ್ ಲಕ್ಷ್ಮಣರಾಯನು ಗಂಭೀರವಾಣಿಯಿಂದ "ಸರ್ಕಾರ್, ದೂತನಿಗೆ ಇಲ್ಲಿ ಯಾರಲ್ಲಿಯೂ ಆಶ್ರಯ ದೊರೆಯದ ಕಾರಣ ಆತನು ಒಡನೆಯೇ ಹಿಂದಿರುಗ ಬೇಕಾಗಿರುವುದು. ಆದುದರಿಂದ ದಯವಿಟ್ಟು ಉತ್ತರವನ್ನು ಜಾಗ್ರತೆಯಾಗಿ ದಯಪಾಲಿಸಬೇಕು" ಎಂದು ಪ್ರಾರ್ಥಿಸಿದನು.

ಭಾವು ಬಕ್ಷಿಯು "ರೋಜನು ಇಲ್ಲಿಂದ ಬಹಳ ದೂರದಲ್ಲಿಲ್ಲ. ಬಹುಶಃ ದೂತನನ್ನು ಹಿಂಬಾಲಿಸಿಕೊಂಡೇ ಬರುತ್ತಿರಬಹುದು" ಎಂದನು.

ಮೋತೀಬಾಯಿಯು "ಮೋತೀಸಾಯಿಯು ಯಾರೆಂದು ತಿಳಿಯಲಿಲ್ಲವಲ್ಲ, ಇದಕ್ಕೇನು ಉತ್ತರ ಕೊಡಲಾದೀತು?" ಎಂದು ಹೇಳಿದಳು.

ರಾಣಿಯು ನಗುವನ್ನು ತಡೆದುಕೊಂಡು. "ನಾನು ತಿಳಿಸುತ್ತೇನೆ" ಎಂದಳು. ಲಕ್ಷ್ಮಣರಾಯನು ಮತ್ತೆ "ಉತ್ತರವೇನೆಂದು ಕಳುಹಿಸುವಿರಿ?" ಎಂದು ಕೇಳಿದನು.

ರಾಣಿಯು ಗಂಭೀರಳಾಗಿ "ನಾನೊಬ್ಬಳೇ ಉತ್ತರ ಕೊಡಲು ಯಾರು? ಝಾನ್ಸಿಯ ಎಲ್ಲಾ ಮುಖ್ಯಸ್ಥರನ್ನೂ, ಎಲ್ಲಾ ಜಾತಿಯ ಪಂಚಾಯಿತರನ್ನೂ ಒಟ್ಟು ಗೂಡಿಸಿ, ನಮ್ಮ ಎಲ್ಲಾ ಮುಖಂಡರೂ ಝಾನ್ಸಿಯಲ್ಲಿಯೇ ಇದ್ದಾರೆ. ಅವರು ಎಲ್ಲರೂ ಒಮ್ಮತದಿಂದ ನಿಶ್ಚಯಿಸಿದರೆ ನಾನೊಬ್ಬಳೇ ನಿಶ್ಶಸ್ತ್ರಳಾಗಿ ಹೊರಟು ಹೋಗುತ್ತೇನೆ" ಎಂದಳು.

ಈ ವಾಕ್ಯವನ್ನು ಕೊನೆಗಾಣಿಸುತ್ತಾ ರಾಣಿಯು ದೀರ್ಘ ಶ್ವಾಸವನ್ನೆಳೆದು ಹೊರ ಹೊಮ್ಮುತ್ತಿದ್ದ ಯಾವುದೋ ಒಂದು ಭಾವವನ್ನು ಕಠಿಣತೆಯಿಂದಲೂ, ಕಠೋರತೆಯಿಂದಲೂ ಅಡಗಿಸಿದಳು.

ಒಡನೆಯೇ ಝಾನ್ಸಿಯ ಮುಖ್ಯಸ್ಥರು, ಪಂಚಾಯಿತದಾರರು, ಸರದಾರರು, ಮುಂತಾದವರನ್ನೆಲ್ಲಾ ಒಂದುಗೂಡಿಸಿ ವಿಷಯವನ್ನು ಚರ್ಚಿಸಲಾಯಿತು.

'ಯುದ್ಧ ಮಾಡುವೆವು. ನಮ್ಮ ಝಾನ್ಸಿಗಾಗಿ, ನಮ್ಮ ರಾಣಿಗಾಗಿ ಪ್ರಾಣ ತ್ಯಾಗಕ್ಕೂ ಸಿದ್ಧರಿರುವೆವು.'

'ನಮ್ಮಲ್ಲಿರುವ ಧನ, ಕನಕ ಸಂಪತ್ತೆಲ್ಲವನ್ನೂ ಸ್ವರಾಜ್ಯಸ್ಥಾಪನೆಗಾಗಿ ರಾಣಿಯ ಅಧೀನ ಮಾಡುವೆವು.'

'ಝಾನ್ಸಿಯ ಜನರ ದೇಶಭಕ್ತಿಯು ಎಷ್ಟು ನಿರ್ಮಲವೂ, ಎಷ್ಟು ಮಹೋನ್ನತವೂ, ಎಷ್ಟು ಅಗಾಧವೂ ಎಂಬುದನ್ನು ವ್ಯಕ್ತಪಡಿಸೋಣ.'

"ಝಾನ್ಸಿಯ ಪ್ರಜೆಗಳಿಗೆ ಝಾನ್ಸಿಯು ತಾಯಿಯ ಸ್ತನದಷ್ಟು ಪ್ರಿಯಕರ ಎಂದು ಆಂಗ್ಲೇಯರಿಗೆ ತಿಳಿಸಿಬಿಡಿ."

ಮೊದಲಿನಿಂದಲೂ ರಾಣಿಯ ಮತವನ್ನೇ ಅನುಮೋದಿಸುತ್ತಿದ್ದ ಜನಾಭಿಪ್ರಾಯವು ಅಂದು ಮತ್ತೂ ಪ್ರಾಬಲ್ಯದೊಡನೆ ವ್ಯಕ್ತವಾಯಿತು. ಆದರೆ ರಾಣಿಯು ಝಾನ್ಸಿಯ ಸಿಂಹಘರ್ಜನೆಯನ್ನು ವೀಣೆಯ ಝೇಂಕಾರವನ್ನಾಗಿ ಪರಿವರ್ತಿಸಿ ಉತ್ತರ ಬರೆದು ಕಳುಹಿಸಿದಳು.

"ನಿಮ್ಮಲ್ಲಿಗೆ ಬಂದು ಭೇಟಿ ಮಾಡಬೇಕೆಂದು ಬರೆದಿರುವಿರಿ. ಆದರೆ ಅದರ ಉದ್ದಿಶ್ಯವನ್ನು ವಿವರಿಸಿಲ್ಲ. ಈ ಸಮಾಗಮದಲ್ಲಿ ಕೃತ್ರಿಮವಿರುವಂತೆ ನನಗೆ ತೋರುತ್ತಿದೆ. ಅಲ್ಲದೆ ನಾನು ಸ್ತ್ರೀ, ನಿಶ್ಶಸ್ತ್ರಳಾಗಿ ಬರುವುದಾದರೂ ಹೇಗೆ? ದಿವಾನರೂ ಬಕ್ಷಿಯವರೂ ಸಸೈನ್ಯರಾಗಿ ಬರಲು ಸಾಧ್ಯ." ರಾಣಿಯು ಈ ಪತ್ರಕ್ಕೆ ತನ್ನ ಸಹಿಯನ್ನು

ಹಾಕಿದಳು.

ಅನಂತರ ಬೋಪಟ್ಕರನನ್ನು ಕುರಿತು "ನಿಮ್ಮ ರಾಜನೀತಿಯ ಫಲವೇನಾಯಿತು ?" ಎಂದು ಕೇಳಿದಳು.

ಆತನು "ಅದರಿಂದ ಆಂಗ್ಲೆಯರು ಸೂಚನೆ ಕೊಡದೆ ಝಾನ್ಸಿಯ ಮೇಲೆ ಬೀಳಲಾರರು ಎಂದು ಭಾವಿಸುತ್ತೇನೆ." ಎಂದು ಉತ್ತರವಿತ್ತನು.

"ಮಾರ್ಟಿನ್ನನಿಗೆ ಪತ್ರ ಬರೆದಿದ್ದಿರಲ್ಲವೆ ?"

"ಹೌದು ಸರ್ಕಾರ್, ಆತನು ಬಹುಶಃ ಜಬ್ಬಲ್ಪುರದ ಕಮಿಷನರಿಗೂ ಮತ್ತು ಈ ಜನರಲ್ ರೋಜನಿಗೂ ಪತ್ರ ಬರೆದೇ ಇರಬೇಕು."

"ಅದರ ಪರಿಣಾಮ ?"

"ನಮಗೆ ಸ್ವಲ್ಪ ಕಾಲಾವಕಾಶ ದೊರಕಿದಂತಾಯಿತು. ಅದೇ ಬೇಕಾದಷ್ಟಾಯಿತಲ್ಲವೇ ?"

ದೂತನಿಗೆ ರಾಣಿಯು ಪತ್ರವನ್ನು ಕೊಟ್ಟನಂತರ ಆತನು ಹೊರಟು ಹೋದನು. ಆತನು ಪಯಣ ಬೆಳಸುವ ಮುನ್ನವೇ ಪೀರಾಲಿಯು ರಾಣಿಯ ಬಳಿಗೆ "ಮಹಾರಾಣಿಯವರ ಅಪ್ಪಣೆಯಾದರೆ ನಾನು ಆಂಗ್ಲೇಯರ ಶಿಬಿರದಲ್ಲಿ ಎಷ್ಟು ಸೈನ್ಯವಿದೆ, ಎಂತಹ ಸೈನ್ಯವಿದೆ, ಎಷ್ಟು ತೋಪುಗಳಿವೆ, ಅವರು ಯಾವ ರೀತಿಯಿಂದ ಝಾನ್ಸಿಯನ್ನು ಆಕ್ರಮಣ ಮಾಡುವರು, ಮುಂತಾದ ಎಲ್ಲಾ ಸಮಾಚಾರಗಳನ್ನೂ ತಿಳಿದುಕೊಂಡು ಬರುವೆನು." ಎಂದು ಸಂದೇಶವನ್ನು ಕಳುಹಿಸಿದನು.

ಮೋತೀಬಾಯಿಯು ಈ ಸಮಾಚಾರವನ್ನು ಪತ್ತೇ ಹಚ್ಚಲು ತನ್ನ ಸಾಮರ್ಥ್ಯವನ್ನು ಪ್ರಕಟಿಸಿದಳೇ ವಿನಾ ಪೀರಾಲಿಯನ್ನು ಕಳುಹಿಸುವ ವಿಷಯದಲ್ಲಿ ಆಕ್ಷೇಪಿಸಲಿಲ್ಲ. ಪೀರಾಲಿಗೆ ಅನುಮತಿ ದೊರಕಿತು.

ರಾಣಿಯು ಮೋತೀಬಾಯಿಯನ್ನು ಕುರಿತು "ನಿನ್ನ ಹೆಸರು ಎಂತಹ ಸುಂದರ ರೂಪದಲ್ಲಿ ಆಂಗ್ಲೇಯರ ಬಳಿಗೆ ಹೋಗಿ ಸೇರಿದೆ! ನಮ್ಮ ಗೂಢಚಾರ ವಿಭಾಗದ ಸರದಾರರು ಸಂನ್ಯಾಸಿಯ ವೇಷವನ್ನು ಧಾರಣೆ ಮಾಡಿರುವುದರಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ" ಎಂದು ಹೇಳಿದಳು.

ಮೋತಿಬಾಯಿಯು "ಸರ್ಕಾರ್, ನಿಮ್ಮೆದುರಿಗೆ ಜಂಭ ಕೊಚ್ಚಿಕೊಳ್ಳುವುದಿಲ್ಲ. ಆದರೆ ಅದೇ ವೇಷದಲ್ಲಿ ರೋಜನನ್ನು ತೋಪಿನಿಂದಾಗಲೀ, ಬಂದೂಕಿನಿಂದಾಗಲೀ ಅಥವಾ ಕತ್ತಿಯಿಂದಾಗಲೀ ಸಾಯುಬಡಿಯದಿದ್ದರೆ ನನ್ನ ನಿಜವಾದ ಹೆಸರು ಮೋತೀಬಾಯಿಯಲ್ಲ" ಎಂದು ಹೇಳಿದಳು.

"ನಾನು ದರ್ಬಾರಿನಲ್ಲಿ ಬಹಳ ಕಷ್ಟದಿಂದ ನನ್ನ ನಗುವನ್ನು ತಡೆದುಕೊಳ್ಳಬೇಕಾಯಿತು. ಮೋತೀಸಾಯಿಯಂತೆ, ಮೋತೀಸಾಯಿ, ಆಹಾ! ಎಂತಹ ಸುಂದರ

ಾದ ಹೆಸರು!" ಎಂದು ರಾಣಿಯು ಕಿಲ ಕಿಲನೆ ನಗಲಾರಂಭಿಸಿದಳು.

ಮೋತೀಬಾಯಿಯು ನಸುನಗುತ್ತಾ "ಸರ್ಕಾರ್ ನನ್ನ ಮಾತು ನಡೆಯುವಂತಿದ್ದರೆ ಆ ಪತ್ರದ ಶಿರೋನಾಮದಲ್ಲಿ 'ಮೇಮ್‌ಸಾಹೇಬ್ ರೋಜನಿಗೆ ಮೋತೀಸಾಯಿಯ ವಂದನೆಗಳು. ನೀನು ಹೆಚ್ಚು ಗೊಂದಲವಿಲ್ಲದೆ ಹಿಂದೂಸ್ಥಾನಕ್ಕೆ ಬೆನ್ನು ತಿರುಗಿಸಿ ಓಡಿ ಹೋಗಿ ವಿಲಾಯಿತ್ತಿಯಲ್ಲಿ ಶಾಂತಿಯಿಂದ ಮರಣ ಹೊಂದು' ಎಂದು ಬರೆದುಕಳುಹಿಸುತ್ತಿದ್ದೆ. ಅವನ ಸೈನ್ಯದಲ್ಲಿ ಈ ಪತ್ರದ ವಿಚಾರವು ಚರ್ಚೆಯಾಗುತ್ತಿದ್ದಾಗ ಆ ಸುಟ್ಟ ಮೋರೆಯವನಿಗೆ ತನ್ನ ಮುಖ ತೋರಿಸಲು ಲಜ್ಜೆಯಾಗುತ್ತಿದ್ದಿತು" ಎಂದಳು.

ರಾಣಿಯು ಗಂಭೀರತೆಯಿಂದ "ಪೀರಾಲಿಯು ನಾಳೆ ಹಿಂದಿರುಗುವನಲ್ಲವೆ?" ಎಂದಳು.

"ಮಾರ್ಗದಲ್ಲಿ ಅವನನ್ನು ಯಾರೂ ಸಾಯಬಡಿಯದಿದ್ದರೆ ಹಿಂದಿರುಗುವನು."

"ಒಳ್ಳೆ ಬುದ್ಧಿಶಾಲಿ."

"ಬಹಳ ಕಿಲಾಡಿ. ಅವನ ಮೇಲೆ ನನಗೆ ಆಗಾಗ್ಗೆ ಸಂಶಯ ಉಂಟಾಗುತ್ತಿದ್ದಿತು. ಆದರೆ ಈಗ ಕೆಲವು ದಿನಗಳಿಂದ ತನ್ನ ಸಾಹಸವನ್ನು ಮೀರಿ ಕೆಲಸ ಮಾಡುತ್ತಿರುವುದರಿಂದ ಆ ಶಂಕೆಯು ದೂರವಾಯಿತು."

"ಆಂಗ್ಲೇಯರೊಡನೆ ಹಿಂದೂಸ್ಥಾನಿ ಸಿಪಾಯಿಗಳೂ ಇರುವರು."

"ನಾನೂ ಹಾಗೆಂದು ಕೇಳಿದ್ದೇನೆ. ಭೋಪಾಲ್ ಮತ್ತು ಹೈದಾರಾಬಾದಿನ ಪಡೆಗಳಿರುವವಂತೆ. ಕೆಲವು ತೇಲಂಗಾಣದ ಪಡೆಗಳಿವೆ. ಬಾಕಿ ಎಲ್ಲಾ ಪರಂಗಿಯವರೆ."

"ಎಲ್ಲಾ ಒಟ್ಟು ಎಷ್ಟು ಜನರಿರಬಹುದು?"

"ಸರ್ಕಾರ್, ಸರಿಯಾಗಿ ಗೊತ್ತಿಲ್ಲ. ಕೆಲವು ಸಹಸ್ರ ಸೈನ್ಯಗಳಿವೆ. ಸರಿಯಾದ ವರ್ತಮಾನವು ಪೀರಾಲಿಯು ಹಿಂದಿರುಗಿದ ಮೇಲೆ ತಿಳಿಯುವುದು."

## ೭೪

ಪೀರಾಲಿಯು ಅತಿ ವೇಗದಿಂದ ಹೊರಟು ದಾರಿಯಲ್ಲಿಯೇ ರೋಜನ ದೂತನನ್ನು ಸಂಧಿಸಿದನು. ಅವನು ಜನರಲ್ ರೋಜನ ಬಳಿ ಕರೆದುಕೊಂಡು ಹೋದನು. ರೋಜನಿಗೆ ಆಲೀಬಹದ್ದೂರನ ಸಂದೇಶಗಳು ಸೇರಿ ಪೀರಾಲಿಯ ಹೆಸರನ್ನು ಅವುಗಳ ಮೂಲಕ ಕೇಳಿದ್ದನು. ಪೀರಾಲಿಯು ಆತನಿಗೆ ಝಾನ್ಸಿಯ ವಿಷಯವಾಗಿ ತನಗೆ ತಿಳಿದ ಸತ್ಯ ಅಸತ್ಯಾಂಶಗಳನ್ನೆಲ್ಲಾ ಸೇರಿಸಿ ಹೇಳಿದನು. ಸ್ತ್ರೀಯರ ಸೈನ್ಯದ ವಿಚಾರವನ್ನು ಕೇಳಿ ರೋಜನು ಆಶ್ಚರ್ಯ ಚಕಿತನಾದನು. ಹಿಂದೂಸ್ಥಾನೀ ಸ್ತ್ರೀಯರು ಸಿಪಾಯಿಗಳ ಕೆಲಸಮಾಡುವರೆ! ಆತನಿಗೆ ಈ ಸುದ್ದಿಯಲ್ಲಿ ವಿಶ್ವಾಸವಿರುತ್ತಿರಲಿಲ್ಲ.

ಆದರೆ ಆಲೀಬಹದ್ದೂರನ ಪತ್ರಗಳಲ್ಲಿಯೂ ತಾನು ಮುಂಬಯಿಯಲ್ಲಿ ಇಳಿದಾಗ ಕ್ರಾಂತಿಕಾರರ ವರ್ಣನೆಗಳಲ್ಲಿಯೂ ರಾಣಿಯ ಮುಖಂಡತ್ವವನ್ನು ಕೇಳಿದ್ದನಾದುದರಿಂದ ಈ ವಾರ್ತೆಯನ್ನು ನಂಬಿದನು.

ರೋಜನು "ರಾಣಿಯು ಆಂಗ್ಲೇಯ ಸ್ತ್ರೀಯರನ್ನೂ ಮಕ್ಕಳು ಮರಿಗಳನ್ನೂ ಕೊಲ್ಲಿಸಬಲ್ಲಳೆ ?" ಎಂದು ಕೇಳಿದನು.

"ಇಲ್ಲ ಅದು ಶುದ್ಧ ಸುಳ್ಳು" ಎಂದು ಪೀರಾಲಿಯು ಸತ್ಯವಾದ ಮಾತನ್ನಾಡಿದನು.

ಜಬ್ಬಲ್ಪುರದ ಕಮಿಾಷರನು ರೋಜನಿಗೆ ಮಾರ್ಟಿನ್ನನು ಬರೆದ ಪತ್ರದ ವಿಷಯವಾಗಿ ಹೇಳಿದ್ದನು. ಅಲ್ಲದೇ ಆ ಪತ್ರದ ಮೇಲೆ ತನಗಿದ್ದ ಅವಿಶ್ವಾಸವನ್ನೂ ತಿಳಿಸಿದ್ದನು. ಆದರೆ ರೋಜನಾಗಲೀ ಆತನ ಸಂಗಡಿಗರಾಗಲೀ ರಾಣಿಯು ನಿರ್ದೋಷಿಯೆಂದು ಒಪ್ಪಲು ಸಿದ್ಧರಾಗಿರಲಿಲ್ಲ.

ಝಾನ್ಸಿಯ ಹಲವು ಜನರು ಅವರ ಮಕ್ಕಳು ಮರಿಗಳನ್ನೇನೋ ಕೊಲೆಮಾಡಿದರು. ಆದುದರಿಂದ ಅವರು ಝಾನ್ಸಿಯ ಮೇಲೆ ಸೇಡು ತೀರಿಸಿಕೊಳ್ಳಲು ಕಾತರರಾಗಿದ್ದರು. ಅವರಿಗೆ ರಾಣಿಯು ಝಾನ್ಸಿಯ ಜಾಗೃತಿಯ ಚಿಹ್ನೆಯಾಗಿದ್ದಳು. ಆದುದರಿಂದ ಅವರು ಹೇಗೆತಾನೆ ಅವಳನ್ನು ದೋಷರಹಿತಳನ್ನಾಗಿ ಪರಿಗಣಿಸಲಾಗುತ್ತಿದ್ದಿತು ? ದೂತನ ಮೂಲಕ ರಾಣಿಯು ಕಳುಹಿಸಿದ ಉತ್ತರವು ಎಷ್ಟೇ ಶಿಷ್ಟವಾದುದೂ ಮಧುರವಾದುದೂ ಆಗಿದ್ದರೂ ಅವಳ ಮನೋಗತವನ್ನು ಸ್ಪಷ್ಟಪಡಿಸುತ್ತಿದ್ದಿತು.

ರೋಜನು ಮಾರ್ಚಿ ೧೭ ನೇ ತಾರೀಖು ತಾಲ್ಬೆಹಟ್ಟಿನಿಂದ ಹೊರಟು ಬೇತ್ವಾ ನದಿಯನ್ನು ದಾಟಿದನು. ಪೀರಾಲಿಯು ಮುಂದೆ ಯಾವ ರೀತಿಯಲ್ಲಿ ಜನರಲ್ ರೋಜನಿಗೆ ಸಹಾಯವೆಸಗ ಬೇಕೆಂಬುದನ್ನು ಖಚಿತಪಡಿಸಿಕೊಂಡು ಶೀಘ್ರವಾಗಿ ಝಾನ್ಸಿಯ ಕಡೆಗೆ ಸಾಗಿದನು. ಸುತ್ತು ಮುತ್ತಲಿನ ಪ್ರದೇಶವನ್ನು ತನ್ನ ಸ್ವಾಧೀನಪಡಿಸಿಕೊಳ್ಳುವುದರಲ್ಲಿ ಅವನಿಗೆ ಸುಮಾರು ಎರಡು ಮೂರು ದಿನಗಳು ಬೇಕಾದುವು.

ಆ ಸಮಯಕ್ಕೆ ಸರಿಯಾಗಿ ಪ್ರಧಾನ ಸೇನಾಪತಿ ಕ್ಯಾಂಬೆಲ್ಲನು ರೋಜನಿಗೆ "ತಾತಾಟೋಪೆಯು ಚಿರಕಾರಿ ರಾಜ್ಯಕ್ಕೆ ಮುತ್ತಿಗೆ ಹಾಕಿರುವನು. ಆದುದರಿಂದ ಮೊದಲು ಆ ರಾಜನಿಗೆ ಸಹಾಯಮಾಡು" ಎಂದು ಸುದ್ದಿಯನ್ನು ಕಳುಹಿಸಿದನು.

ಆತನು ಝಾನ್ಸಿಯ ಮಹತ್ವವನ್ನು ಅರಿತಿದ್ದನಾದುದರಿಂದ ಈ ಆಜ್ಞೆಯನ್ನು ಉಲ್ಲಂಘಿಸಿದನು.

"ನಿಮ್ಮ ಆಜ್ಞೆಯನ್ನು ಉಲ್ಲಂಘಿಸಿದುದಕ್ಕಾಗಿ ನಾನು ಕ್ಷಮೆ ಬೇಡುತ್ತೇನೆ. ಚರಕಾರೀ ರಾಜ್ಯವು ಶತ್ರುಗತವಾಗುವುದು ಅಷ್ಟು ಮುಖ್ಯವಲ್ಲ. ಆದರೆ ಮೊದಲು ನನಗೆ ಈ ಝಾನ್ಸಿಯನ್ನು ಅವರ ಕೈಯ್ಯಿಂದ ಬಿಡಿಸಿಕೊಳ್ಳಬೇಕಾಗಿದೆ." ವೆಂದು

ಉತ್ತರ ಕಳುಹಿಸಿದನು.

ಚರಕಾರೀ ರಾಜನಿಗೆ ತನ್ನ ರಾಜ ಭಕ್ತಿಗಾಗಿ ತಕ್ಕ ಪುರಸ್ಕಾರವು ದೊರಕಿತು. ತಾತ್ಯಾಟೋಪೆಯು ಆತನಿಂದ ಇಪ್ಪತ್ತುನಾಲ್ಕು ತೋಪುಗಳನ್ನೂ, ಮೂರು ಲಕ್ಷ ರೂಪಾಯಿಗಳನ್ನೂ ಕಸಿದುಕೊಂಡು ಕಾಲ್ಪಿಗೆ ಹಿಂದಿರುಗಿದನು.

ಪೀರಾಲಿಯು ರಾಣಿಯ ಬಳಿಗೆ ಕಳುಹಿಸಿದ ಸುದ್ದಿಯು ಅಂತಹ ಮಹತ್ವ ಪೂರ್ಣವಾದುದಾಗಿರಲಿಲ್ಲ. ಆದರೆ ಅದಕ್ಕೆ ಅತ್ಯಂತ ಪ್ರಾಮುಖ್ಯತೆ ಕೊಡಲಾಯಿತು.

ಆತನು ಪಡೆಗಳ ನಂಬರುಗಳನ್ನೂ ಅವುಗಳಲ್ಲಿರುವ ಸಿಪಾಯಿಗಳ ಸಂಖ್ಯೆಗಳನ್ನೂ ತೋಪುಗಳ ಸಂಖ್ಯೆಗಳನ್ನೂ ಮತ್ತು ಅವರ ವಿವಿಧ ಏರ್ಪಾಟುಗಳನ್ನೆಲ್ಲಾ ಚೆನ್ನಾಗಿ ವಿವರಿಸಿದನು. ರೋಜನ ಸೇನೆಯೆಲ್ಲವೂ ಏಳು ಸಹಸ್ರಕ್ಕೆ ಮೀರಿದ್ದಿತು.

ಇದರಿಂದ ನಾನಾ ಬೋಪಟ್ಕರ್ ಮುಂತಾದವರಿಗೂ ಆತನಲ್ಲಿ ವಿಶ್ವಾಸ ವೇರ್ಪಟ್ಟು ಆತನನ್ನು ರಹಸ್ಯ ಕಾರ್ಯಾಚರಣೆಯಲ್ಲಿಯೂ ಭಾಗವಹಿಸಲು ಸೇರಿಸಿ ಕೊಂಡರು. ಯಾವಾಗ ಮೋತೀಬಾಯಿಗೂ ಪೀರಾಲಿಯ ವಿಷಯದಲ್ಲಿ ಸಂದೇಹ ವೇರ್ಪಡಲಿಲ್ಲವೋ ಆಗ ರಾಣಿಗೆ ಶಂಕೆಯು ಹೇಗೆ ತಾನೆ ಉದ್ಭವಿಸೀತು. ?

ಪೀರಾಲಿಯು ನವಾಬ್ ಆಲೀಬಹದ್ದೂರನ ಬಳಿಗೆ ಭಾಂಡೇರಾದ ಸಮಾಚಾರ ವನ್ನು ಕಳುಹಿಸಿ ಇನ್ನು ಬಹಳ ಕಾಲದವರೆಗೆ ಯಾವ ಸಮಾಚಾರವೂ ದೊರಕಲಾರದು ಎಂದು ಹೇಳಿ ಕಳುಹಿಸಿದನು. ಪೀರಾಲಿಯು ಭಯಂಕರವಾದ ಸಂಚು ಹೂಡು ತ್ತಿದ್ದನು.

ಪೀರಾಲಿಯು ಹಿಂದಿರುಗಿದ ದಿನವೇ ರಾಹತಗಡದ ಸುತ್ತಮುತ್ತಲಿನ ಪ್ರದೇಶ ದಲ್ಲಿದ್ದ ೫೦೦ ಮಂದಿ ಪಠಾಣರು ರಾಣಿಯಲ್ಲಿ ಶರಣಾರ್ಥಿಯನ್ನು ಬೇಡಿದರು. ಅವಳು ಅವರನ್ನು ತನ್ನ ಸೈನ್ಯದಲ್ಲಿ ಸೇರಿಸಿಕೊಂಡಳು. ಗುಲ್‌ಮಹಮ್ಮದ್ ಎಂಬುವವನು ಇವರ ಸರದಾರನಾಗಿದ್ದನು. ಈ ವಿಷಯವನ್ನು ರೋಜನಿಗೆ ತಿಳಿಯಪಡಿಸಲು ಪೀರಾಲಿಗೆ ಆಗಲಿಲ್ಲ.ಮತ್ತು ಅದಕ್ಕಾಗಿ ಅವನು ವಿಷಾದಿಸಿದನು.

ರಾಣಿಯ ಬಳಿಗೆ ಬಂದ ಪಠಾಣರು ಬಹಳ ಹೀನಾವಸ್ಥೆಯಲ್ಲಿದ್ದರು. ಅವರ ಬಟ್ಟೆಬರೆಗಳು ಚಿಂದಿಯಾಗಿ ಅವರು ಸರಿಯಾದ ಊಟವನ್ನು ಕಂಡು ಬಹು ದಿನಗಳಾ ಗಿದ್ದವು. ಅವರ ಹತ್ತಿರ ತಕ್ಕ ಶಸ್ತ್ರಾಸ್ತ್ರಗಳೂ ಇರಲಿಲ್ಲ. ಕೆಲವರಲ್ಲಿ ಲಾಠಿ ಮತ್ತು ಚೂರಿಗಳ ವಿನಹ ಮತ್ತೆ ಯಾವ ವಿಧವಾದ ಆಯುಧಗಳೂ ಇರಲಿಲ್ಲ. ರಾಣಿಯು ಒಡನೆಯೇ ಅವರಿಗೆ ಎಲ್ಲಾ ವಿಧವಾದ ಅನುಕೂಲಗಳನ್ನೂ ಕಲ್ಪಿಸಿಕೊಟ್ಟಳು. ಅವರು ಸ್ವರಾಜ್ಯಕ್ಕಾಗಿ ರಾಣಿಯ ಪದತಲದಲ್ಲಿ ಪ್ರಾಣ ಒಪ್ಪಿಸುವೆವು ಎಂದು ಪಣತೊಟ್ಟರು. ಈ ಪಠಾಣರು ಹೇಗೆ ಈ ಪ್ರತಿಜ್ಞೆಯನ್ನು ಪಾಲನೆ ಮಾಡಿದರೆಂಬುದು ಚರಿತ್ರೆಯಲ್ಲಿ ಪ್ರಸಿದ್ಧವಾಗಿದೆ. ಝಾನ್ಸಿಯ ಜನರು ಅದನ್ನು ಜನ್ಮಜನ್ಮಕ್ಕೂ ಮರೆಯುವಂತಿಲ್ಲ.

ಮರೆಯುವುದೂ ಇಲ್ಲ.

ಪೀರಾಲಿಗೆ ಈ ಪಠಾಣರಲ್ಲಿ ಕೆಲವರು ಸಿಕ್ಕಿ ಆತನು ಅವರೊಡನೆ ಮಾತನಾಡ ತೊಡಗಿದನು.

"ಖಾ಼ಁ, ನಿಮ್ಮದು ಯಾವೂರು ?"

"ಝಾನ್ಸಿಯೇ ನಮ್ಮೂರು." "ಬಾಬಾ, ನಿಮ್ಮವೂರಾವುದು ?"

"ನಾನೂ ಝಾನ್ಸಿಯಲ್ಲಿಯೇ ವಾಸವಾಗಿರುವೆನು."

"ಹಾಗಿದ್ದಮೇಲೆ ನಾವಿಬ್ಬರೂ ಸಹೋದರರು."

"ಇದು ಬಾಯಿಸಾಹೇಬರ ರಾಜ್ಯ, ಖಾ಼ಁ."

"ಭೇಷಾಗಿ, ಅಲ್ಲದೆ ನಮ್ಮದೂ ನಿಮ್ಮದೂ ರಾಜ್ಯವೂ ಇದೆ."

ಝಾನ್ಸಿಯ ಕೋಟೆಯ ಎಲ್ಲಾ ಮಹಾದ್ವಾರಗಳ ಮೇಲೂ ದೊಡ್ಡ ಚಿಕ್ಕ ತೋಪುಗಳನ್ನು ಇರಿಸಿ ಉಚಿತ ಪ್ರಬಂಧ ಮಾಡಲಾಯಿತು. ಹೆಬ್ಬಾಗಿಲಿನ ಮೇಲಿನ ಬುರುಜುಗಳಲ್ಲಿ ಮದ್ದುಗುಂಡುಗಳನ್ನು ಶೇಖರಿಸಲಾಯಿತು. ಎಲ್ಲಾ ಯುದ್ಧ ಸಾಮಗ್ರಿಗಳೂ ಅಣಿಯಾದವು. ಆಹಾರ ಪದಾರ್ಥಗಳ ಸರಬರಾಜಿಗೂ ತಕ್ಕ ವ್ಯವಸ್ಥೆ ಮಾಡಲಾಯಿತು. ಕೋಟೆ ಗೋಡೆಯ ಕಿಂಡಿಗಳಿಂದ ಬಂದೂಕನ್ನು ಹಾರಿಸಲು ಸಿಪಾಯಿಗಳನ್ನು ನಿಯುಕ್ತಮಾಡಿ ಅವರ ಮೇಲ್ವಿಚಾರಣೆಗೆ ತಕ್ಕ ಹುದ್ದೇದಾರರನ್ನು ಗೊತ್ತುಮಾಡಲಾಯಿತು. ಒಂದು ಕಡೆಯಿಂದ ಮತ್ತೊಂದು ಕಡೆಗೆ ಮತ್ತು ಎಲ್ಲಾ ಸ್ಥಾನಗಳಿಂದ ರಾಣಿಯಿರುವೆಡೆಗೆ, ಆವಳಿರುವಲ್ಲಿಂದ ಮತ್ತೆ ಎಲ್ಲಾ ಕಡೆಗೂ ಎಲ್ಲಾ ಕಂದಕಗಳಿಗೂ ಸಮಾಚಾರಗಳನ್ನು ಮುಟ್ಟಿಸುವ ವ್ಯವಸ್ಥೆಯು ಬಹಳ ಮಿಗಿಲಾದು ದಾಗಿದ್ದಿತು. ಮತ್ತು ಆದಕ್ಕೆ ತಕ್ಕ ಗಮನಕೊಟ್ಟು ಸಮರ್ಪಕವಾದ ಏರ್ಪಾಡು ಮಾಡಲಾಗಿದ್ದಿತು.

ರೋಜನು ದಕ್ಷಿಣದ ಕಡೆಯಿಂದ ಆಕ್ರಮಣ ಮಾಡುವನೆಂದು ತೋರಿದುದ ರಿಂದ ಸಾಗರ್ ಕಿಡಕಿ, ಓರ್ಛಾದ್ವಾರ. ಸೈರ್ ಹೆಬ್ಬಾಗಿಲುಗಳಲ್ಲಿ ವಿಶೇಷ ರಕ್ಷಣಾ ವ್ಯವಸ್ಥೆಯನ್ನು ಮಾಡಿದರು.

ದಿವಾ಼ಁ ದುಲ್ಹಾಜುವನ್ನು ಓರ್ಛಾದ್ವಾರದ ಮೇಲೆಯೂ, ಪೀರಾಲಿಯನ್ನು ಸಾಗರದ ಕಿಡಕಿಯ ಬಳಿಯೂ, ಸೈರ್ ಹೆಬ್ಬಾಗಿಲಿನ ರಕ್ಷಣೆಗೆ ಕುಮಾರ ಖುದಾಬಕ್ಷ ನನ್ನೂ, ಖಂಡೇರಾಯನ ಮಹಾದ್ವಾರಕ್ಕೆ ಕುಮಾರ ಸಾಗರಸಿಂಹನನ್ನು, ಉನಾವ್ ಬಾಗಿಲಿಗೆ ನೇಯ್ಗೆಯ ಪೂರಣನನ್ನೂ ನಿಯುಕ್ತಮಾಡಿ ರಕ್ಷಣಾ ವ್ಯವಸ್ಥೆ ಮಾಡಲಾಯಿತು. ನಗರದ ಮತ್ತು ಕೋಟೆಯ ಸಂರಕ್ಷಣೆಯ ಭಾರವು ದಿವಾ಼ಁ ಜವಹರ ಸಿಂಹನ ಪಾಲಿಗೆ ಬಿದ್ದಿತು. ಕೋಟೆಯ ಎಲ್ಲಾ ಬುರುಜಿಗಳ ಮೇಲೆಯೂ ಸೇರಿ ಒಟ್ಟು ಐವತ್ತೊಂದು ತೋಪುಗಳನ್ನು ನಿಲ್ಲಿಸಲಾಯಿತು. ದಕ್ಷಿಣದ ಬುರುಜಿನ ಮೇಲಿದ್ದ

ತೋಪುಗಳು ಗುಲಾಂ ಗೌಸ್ ಖಾನನ ಉಸ್ತುವಾರಿಯಲ್ಲಿಯೂ ಪೂರ್ವ ಮತ್ತು ಉತ್ತರ ದಿಕ್ಕುಗಳಲ್ಲಿದ್ದ ತೋಪುಗಳು ಭಾವು ಬಕ್ಷಿಯ ಸಂಚಾಲನೆಯಲ್ಲಿಯೂ, ಪಶ್ಚಿಮ ದಿಕ್ಕಿನ ತೋಪುಗಳು ದಿವಾನ್ ರಘುನಾಥಸಿಂಹನ ಅಧಿಕಾರದಲ್ಲಿಯೂ ಇದ್ದವು. ಕಿಲ್ಲೆಯಲ್ಲಿ ಪಠಾಣರೂ. ಬುಂದೇಲು ಖಂಡದ ಸಿಪಾಯಿಗಳೂ ಮತ್ತು ರಾಣಿಯ ಸ್ತ್ರೀ ಸೇನೆಯ ಸೈನಿಕರೂ ಸಿದ್ಧರಾಗಿ ನಿಂತರು. ಒಟ್ಟು ನಾಲ್ಕು ಸಹಸ್ರ ಮಂದಿ ಸೈನಿಕರಿದ್ದಿರಬಹುದು. ನೀರಿನ ಪ್ರಬಂಧವು ಅಷ್ಟೇನು ಸಮರ್ಪಕವಾಗಿಲ್ಲದಿದ್ದರೂ ಸಂತೋಷಪ್ರದವಾಗಿದ್ದಿತು—ಕಿಲ್ಲೆಯ ಪಶ್ಚಿಮ ಭಾಗದಲ್ಲಿರುವ ಶಂಕರಗಡದ ಮಹದೇವ ಮಂದಿರದ ಬಳಿ ಒಂದು ಭಾವಿಯಿದ್ದಿತು. ಅದರಿಂದ ಸೈನ್ಯಕ್ಕೆಲ್ಲ ನೀರು ಸರಬರಾಜು ಮಾಡಲು ಬ್ರಾಹ್ಮಣರನ್ನು ಗೊತ್ತುಮಾಡಲಾಗಿದ್ದಿತು.

ಚೈತ್ರ ಅಮಾವಾಸ್ಯೆಯು ಕಳೆದು ನವರಾತ್ರಿಯು ಪ್ರಾರಂಭವಾಯಿತು. ಕಿಲ್ಲೆಯಲ್ಲಿ ಗೌರಿದೇವಿಯನ್ನು ಕುರಿಸಿ ರಾಣಿಯು ವಿಜೃಂಭಣೆಯಿಂದ ಸಿಂಧೂರೋತ್ಸವವನ್ನು ಆಚರಿಸಿದಳು. ಗೌರಿಯ ಮುಂದೆ ಸ್ವರ್ಣಪಾತ್ರೆಗಳು ಪೂಜಾ ಸಾಮುಗ್ರಿಗಳೊಂದಿಗೆ ಬೆಳಗುತ್ತಿದ್ದವು. ಎಲ್ಲರಿಗೂ ನೆನಸಿದ ಕಡಲೆ ಮತ್ತು ಬತ್ತಾಸುಗಳ ಪ್ರಸಾದ ಹಂಚಲಾಯಿತು. ನಗರದಲ್ಲಿನ ಸ್ತ್ರೀಯರೆಲ್ಲರೂ ಉತ್ಸವದಲ್ಲಿ ತಲ್ಲೀನರಾದರು.

ಮಹದೇವನ ಮಂದಿರವು ಪುಷ್ಪಾಲಂಕಾರ ಮತ್ತು ಅವುಗಳ ಪರಿಮಳದಿಂದ ತುಂಬಿಹೋಗಿದ್ದಿತು. ಸ್ತ್ರೀಯರು ಸ್ವಲ್ಪಕಾಲ ಮುಂದೆ ಪ್ರಾಪ್ತವಾಗಲಿದ್ದ ವಿಪತ್ತನ್ನು ಮರೆತರು. ಅವರು ತಮ್ಮ ಮಂದಹಾಸ ಬೀರುತ್ತಿರುವ ರಾಣಿಯ ಸಾನ್ನಿಧ್ಯದಲ್ಲಿ ತಮ್ಮ ಕಿಲ್ಲೆಯಲ್ಲೇ ಇದ್ದರು. ಅವರ ತೋಪುಗಳೂ, ಗೋಲಂದಾಜಿಗಳೂ, ಸಿಪಾಯಿಗಳೂ ಅಕ್ಕ ಪಕ್ಕದಲ್ಲಿದ್ದುಕೊಂಡು ರಕ್ಷಣಾ ವ್ಯವಸ್ಥೆಗಳು ಸಮರ್ಪಕವಾಗಿರಬಹುದಾದರೆ ಮತ್ತ್ಯಾವುದಕ್ಕಾಗಿ ಚಿಂತೆ ?

ಮಹದೇವನ ಮಂದಿರದ ಬಳಿ ಒಂದು ಮುತ್ತುಗದ ಮರವಿದ್ದು ಅದು ಆ ದಿನಗಳಲ್ಲಿ ದೊಡ್ಡದೊಡ್ಡ ಕೆಂಪುಬಣ್ಣದ ಪುಷ್ಪಗಳಿಂದ ಭರಿತವಾಗುತ್ತಿದ್ದಿತು. ಅದೇ ವೃಕ್ಷವು ತೀಕ್ಷ್ಣವಾದ ಗ್ರೀಷ್ಮಋತುವಿನಲ್ಲಿ ಅಗಲವಾದ ಹಸುರೆಲೆಗಳಿಂದ ಕೂಡಿ ತಂಪಾದ ನೆರಳನ್ನು ಕೊಡುತ್ತಿದ್ದಿತು. ಆರಣ್ಯದ ಅವಶೇಷವೂ, ಸ್ಮಾರಕವೂ ಆಗಿ ಮಹದೇವ ಮಂದಿರದ ಆ ಜೀ ವ ಮಿ ತ್ರ ನೆಂ ಬಂ ತೆ ಆ ವೃಕ್ಷವು ಕಡಿಯದೇ ಹಾಗೆಯೇ ಉಳಿದಿದ್ದಿತು. ನವರಾತ್ರಿಯ ದಿನಗಳಲ್ಲಿ ಆ ಪಲಾಶ ವೃಕ್ಷವು ಹೂವಿನಿಂದ ಜಗ ಜಗಿತವಾಗುತ್ತಿದ್ದಿತು. ಸ್ತ್ರೀಯರೆಲ್ಲರೂ ವಿವಿಧ ಪುಷ್ಪಗಳ ಮಾಲೆಗಳನ್ನು ಸೌಂದರ್ಯಕ್ಕೆ ಸುಗಂಧವನ್ನು ಲೇಪಿಸಿದಂತೆ ಆ ಮರದ ಕೊಂಬೆಗಳಿಗೆ ತೊಡಿಸುತ್ತಿದ್ದರು. ಆ ರಕ್ತ ವರ್ಣದ ಹೂವುಗಳ ಮೇಲೆ ಮಲ್ಲೆ, ಮಲ್ಲಿಗೆ, ಕೇದಗಿ ಮುಂತಾದ ಬಣ್ಣಬಣ್ಣದ ಹಾರಗಳು ಇರುವುದು ಉಷಃಕಾಲದಲ್ಲಿ ಸೂರ್ಯನ ಕಿರಣಗಳು ಎಳೆಗೆಂಪನ್ನು ಚೆಲ್ಲಿದಂತೆ

ಭಾಸವಾಗುತ್ತಿದ್ದಿತು. ಈ ಮರದ ಕೆಳಗೆ ಒಂದು ಭಾವಿಯಿದ್ದಿತು. ಆ ಭಾವಿಯಮೇಲೆ ವಾಯು ಸೇವನೆಗಾಗಿ ಕುಳಿತುಕೊಳ್ಳುವ ಮಂಟಪವೊಂದಿದ್ದಿತು. ಈ ಸ್ಥಳವನ್ನು ರಕ್ಷಿಸು ವುದಕ್ಕೆ ಒಂದು ಎತ್ತರವಾದ ಪ್ರಾಕಾರವಿದ್ದಿತು. ಇದಕ್ಕೆ ಪೂರ್ವದಿಕ್ಕಿನಲ್ಲಿ ಒಳ್ಳೆಯ ಉನ್ನತವಾದ ಸ್ಥಳದಲ್ಲಿ ಕೋಟೆಯ ಪಶ್ಚಿಮದ ಬುರುಜು, ಆದರ ಹಿಂದೆ ಸ್ವಲ್ಪ ದೂರ ದಲ್ಲಿ ಮಹಲಿದ್ದಿತು.

ಪೂಜೆಯನಂತರ ಸ್ತ್ರೀಯರು ಪಲಾಶ ವೃಕ್ಷದ ಬಳಿಯಿದ್ದ ಮೆಟ್ಟಲುಗಳ ಮೂಲಕ ರಾಣಿಯು ಕುಳಿತಿದ್ದ ಆ ವಾಯು ಸೇವಾ ಮಂಟಪಕ್ಕೆ ಹತ್ತಿಹೋದರು. ಅಲ್ಲಿ ಸಿಂಧೂರೋತ್ಸವವು ನಡೆಯುತ್ತಿದ್ದು ವಿಧವೆಯಾದ ರಾಣಿಯು ಹೊರತಾಗಿ ಭಾವು ಬಕ್ಷಿಯ ಹೆಂಡತಿ ಮುಂತಾದ ವಿಧವೆ ಸ್ತ್ರೀಯರು ತಮ್ಮ ತಮ್ಮಲ್ಲಿ ಮಂಗಳ ದ್ರವ್ಯಗಳನ್ನು ಕೊಡುತ್ತಾ ಸ್ವೀಕರಿಸುತ್ತಾ ಯಾವುದಾದರೊಂದು ನೆಪದಲ್ಲಿ ಅವರವರ ಪತಿಯ ಹೆಸರನ್ನು ಹೇಳಿಸಲು ಪ್ರಯತ್ನಿಸುತ್ತಾ ವಿನೋದದಿಂದ ನಗುತ್ತಿದ್ದರು.

ಮೋತೀಬಾಯಿಯು ಭಾವುಬಕ್ಷಿಯ ಪತ್ನಿಯನ್ನು ಕುರಿತು "ನೀನು ನಿನ್ನ ಮೈದುನನನ್ನು ಏನೆಂದು ಕರೆಯುತ್ತೀಯಾ ?" ಎಂದು ಕೇಳಿದಳು.

ಬಕ್ಷಿಣಿ— ನನಗೆ ಮೈದುನನೇ ಇಲ್ಲ.

ಮೋತಿ—ಬಕ್ಷಿಣಜೂ, ಒಂದು ವೇಳೆ ಇದ್ದಿದ್ದರೆ ಏನೆಂದು ಕರೆಯುತ್ತಿದ್ದೆ?

ಬಕ್ಷಿಣಿ—ಲಾಲಾ ಎಂದು.

ರಾಣಿ—ಬುಂದೇಲು ಖಂಡದವರ ಭಾಷೆಯಲ್ಲಿ ಲಾಲಾ ಎಂಬುವುದಕ್ಕೆ ಮತ್ತೇನು ಹೇಳುವರು?

ಬಕ್ಷಿಣಿ—ಸರ್ಕಾರ್, ಭವುವಾ.

ಎಲ್ಲರೂ ನಗಲಾರಂಭಿಸಿದರು.

ಬಕ್ಷಿಣಿಯು ಕೃದ್ಧಳಾಗಿ "ಮಹಾರಾಣಿಯವರ ಸಹಾಯದಿಂದ ಸೋಲಿಸಿದಿರಿ. ಇಲ್ಲದಿದ್ದರ ನಾನೆಷ್ಟು ಸತಾಯಿಸುತ್ತಿದ್ದೆನೆಂಬುದು ಎಲ್ಲರಿಗೂ ಜ್ಞಾಪಕವಿರುವಂತೆ ಮಾಡುತ್ತಿದ್ದೆ" ಎಂದಳು.

ರಾಣಿಯು "ಇಷ್ಟು ಜನ ಪ್ರತಿ ಕಕ್ಷಿಗಳಿಗೆ ನೀನೊಬ್ಬಳೇ ಬೇಕಾದಷ್ಟಾಯಿತು" ಎಂದಳು.

ಬಕ್ಷಿಣಿಯು ಮೋತೀಬಾಯಿಯ ಮೇಲೆ ಮುಯ್ಯಿ ತೀರಿಸಿಕೊಳ್ಳಲು ದಂಬಾಲು ಬಿದ್ದು ಅವಳನ್ನು ಪ್ರತ್ಯೇಕವಾಗಿ ಒಂದೆಡೆ ಕರೆದುಕೊಂಡು ಹೋಗಿ "ಭಗವಂತನ ವಿವಿಧ ನಾಮಗಳನ್ನು ಹೇಳು" ಎಂದಳು.

ಮೋತೀ—ರಾಮ, ಕೃಷ್ಣ, ಮುರಾರಿ, ಪರಮಾತ್ಮಾ, ಅಲ್ಲಾ.

ಬಕ್ಷಿಣಿ—ಇನ್ನೂ, ಇನ್ನೂ ?

ಮೋತೀ—ದಯಾಸಾಗರ, ಪರವರದಿಗಾರ್, ರಹೀಮ್....

ಬಕ್ಷಿಣಿ—ಸರಿಯಾದುದನ್ನು ಹೇಳು ಇಲ್ಲದಿದ್ದರೆ ನಿನ್ನ ಮುಸುಡಿಯನ್ನು ತಿಕ್ಕುತ್ತೇನೆ. ಮುಸಲ್ಮಾನರು ದಿನವೂ ಯಾವ ನಾಮವನ್ನು ಹೇಳಿ ಜಪಮಾಡುತ್ತಾರೆಯೋ ಅದನ್ನು ಹೇಳು, ಇಲ್ಲದಿದ್ದರೆ ನಿನ್ನನ್ನು ಜೀವಮೊರಸೆ ಬಿಡುವುದಿಲ್ಲ.

ಮೋತೀಬಾಯಿಯು ಮೆಲ್ಲನೆ 'ಖುದಾ' ಎಂದಳು.

ಬಕ್ಷಿಣಿಯು ಅವಳ ತಲೆಯನ್ನು ತನ್ನ ಭುಜದ ಮೇಲೆ ವಾಲಿಸಿಕೊಂಡು "ಖುದಾವಿನ ಬಳಿಯೇ ಇರುತ್ತೀಯೋ ಅಥವಾ ದೂರದಲ್ಲಿರುತ್ತೀಯೊ?" ಎಂದು ಕೇಳಿದಳು.

ಮೋತೀಬಾಯಿಯು ಉತ್ತರ ಕೊಡುತ್ತಾ "ದೂರದಲ್ಲೇ ಇದ್ದೇನೆ ಅಕ್ಕಾ, ಸುದಿನವು ಪ್ರಾಪ್ತವಾದರೆ ಅವನನ್ನು ಮದುವೆಯಾಗುವೆನು" ಎಂದಳು.

ಅವರು ಮಾತನಾಡುತ್ತಾ ರಾಣಿ ಇದ್ದೆಡೆಗೆ ಬರುತ್ತಿದ್ದಂತೆಯೇ ಮೋತಿಯು "ಜೂಹಿಯನ್ನು ಮಾತ್ರ ಏನೂ ಕೇಳಬೇಡಿ. ಅವಳು ಸರದಾರ್ ತಾತ್ಯಾಟೋಪೆಗಾಗಿ ಪ್ರಾಣ ಬಿಡುತ್ತಿರುವಳು. ಆದರೆ ಆತನು ಅವಳೊಂದಿಗೆ ಈ ವರೆಗೆ ಒಂದೆರಡು ಪ್ರಣಯದ ಮಾತನ್ನೂ ಆಡದೆ ಮೌನಿಯಾಗಿರುತ್ತಾನೆ" ಎಂದಳು. ಕೇಳುವುದಿಲ್ಲ ಎಂದು ಬಕ್ಷಿಣಿಯು ಆಶ್ವಾಸನವಿತ್ತಳು.

ರಾಣಿಯು ಇದನ್ನು ತಿಳಿದುಕೊಂಡು ಜೂಹಿಯನ್ನು ಪರಿಹಾಸ್ಯ ಮಾಡಲಿಲ್ಲ. ಝಲಕಾರಿಯು ಬಂದಿರಲಿಲ್ಲವಾದುದರಿಂದ ರಾಣಿಯು ಆಕೆಯನ್ನು ಬರಮಾಡಿದಳು. ಆಕೆಯು ಬಂದೊಡನೆಯೆ ರಾಣಿಯ ಪಾದಸ್ಪರ್ಶಮಾಡಿ ನಮಸ್ಕರಿಸಿದಳು.

ರಾಣಿಯು "ಇದಕ್ಕಾಗಿ ನಿನ್ನನ್ನು ಕರಸಲಿಲ್ಲ. ಪ್ರತಿ ವರ್ಷವೂ ಬರುತ್ತಿದ್ದವಳು ಈ ವರ್ಷವೇತಕ್ಕೆ ಬರಲಿಲ್ಲ?" ಎಂದಳು.

'ಸರ್ಕಾರ್, ನಾನು ಮಹಾಪರಾಧವನ್ನು ಮಾಡಿದ್ದೇನೆ.' ಎಂದು ಝಲಕಾರಿಯು ಉತ್ತರವಿತ್ತಳು.

ರಾಣಿಯು "ಅಂತಹ ಅಪರಾಧವೇನೂ ಆಗಲಿಲ್ಲ" ಎಂದಳು.

ಝಲಕಾರಿ—ಕರುವು ಗಾಯಗೊಂಡಿತಲ್ಲ?

ರಾಣಿ—ಆದದ್ದು ಆಗಿಹೋಯಿತು, ಸಾಯದೇ ಬದುಕಿಕೊಂಡಿತಲ್ಲಾ.

ಝಲಕಾರಿ—ಸರ್ಕಾರ್, ತಾವು ನನ್ನ ಗಂಡನನ್ನೂ ಮತ್ತು ನನ್ನನ್ನೂ ಬದುಕಿಸಿದಿರಿ. ಇಲ್ಲದಿದ್ದರೆ ಇಲ್ಲಿ ನಿಲ್ಲುವುದಕ್ಕೂ ಆಗುತ್ತಿರಲಿಲ್ಲ

ರಾಣಿ—ನಿನ್ನ ಗಂಡನ ಹೆಸರು ಮರೆತು ಹೋಯಿತು. ಅವನ ಹೆಸರೇನು ಹೇಳು.

ಝಲಕಾರಿ—ಊಂ....ಊಂ....

ರಾಣಿ—ಊಂ....ಊಂ ಎಂಬ ಹೆಸರೂ ಇದೆಯೇನು?

ಬಕ್ಷಿಣಿಯು "ಸರ್ಕಾರ್, ಇವಳೊಂದಿಗೆ ಬುಂದೇಲು ಖಂಡದ ಭಾಷೆಯನ್ನಾಡಿ" ಎಂದಳು.

ಮೋತೀಬಾಯಿಯು ಸಿರೋಧಿಸುತ್ತಾ "ಸರ್ಕಾರ್, ತಮ್ಮ ಬಾಯಿಯಿಂದ ಇಲ್ಲಿನ ಭಾಷೆ ಕೇಳುವುದೇ ಸವಿಯಾಗಿ ತೋರುತ್ತದೆ" ಎಂದು ಹೇಳಿದಳು. ಜೂಹಿಯು ಅದನ್ನೇ ಅನುಮೋದಿಸಿದಳು.

ಸುಂದರಿ, ಮುಂದರಿ ಮತ್ತು ಕಾಶೀಬಾಯಿಯರೂ ಹಾಸ್ಯಮಾಡಲಾರಂಭಿಸಿದರು.

ಮುಂದರಿಯು "ಸರ್ಕಾರ್, ಬುಂದೇಲುಖಂಡದ ಭಾಷೆಯಲ್ಲಿ ಕೇಳಿದರೆ ಅವಳು ಖಂಡಿತವಾಗಿ ತನ್ನ ಪತಿಯ ಹೆಸರನ್ನು ಹೇಳುವಳು. ಹೇಳುತ್ತಿರುವೆಯಲ್ಲವೆ, ಝಲಕಾರಿ? ಹೇಳಬೇಕು. ಇಲ್ಲದಿದ್ದರೆ ನಮ್ಮ ಮಾತು ಸುಳ್ಳಾಗುವುದು" ಎಂದಳು.

ಅಲ್ಲಿನ ಪರಿಹಾಸ್ಯ ವಾತಾವರಣಕ್ಕೆ, ಸೌಂದರ್ಯ, ಸೌಗಂಧಕ್ಕೆ ಸೆರೆಬಿದ್ದು ಝಲಕಾರಿಯು ಒಪ್ಪಿದಂತೆ ತಲೆ ಬಾಗಿಸಿದಳು.

ರಾಣಿಯು ಬುಂದೇಲು ಖಂಡದ ಭಾಷೆಯಲ್ಲಿ ಅವಳೊಡನೆ ಸಂಭಾಷಣೆಗೆ ಆರಂಭಿಸಿದಳು.

ರಾಣಿ—ನಿನ್ನ ಗಂಡನ ಹೆಸರೇನು ಝಲಕಾರಿ?

ಝಲಕಾರಿ—ಹೀಗೆ ಕೇಳಿದರೆ ನಾನು ಹೇಳುತ್ತೇನೆಯೆ?

ರಾಣಿ—ಮತ್ತೆ ಹೇಗೆ ಕೇಳಬೇಕು?

ಝಲಕಾರಿ—ಒಂದು ನರಿ ಬಾಲವನ್ನು ಕತ್ತರಿಸಿಕೊಂಡು ಇತರ ನರಿಗಳಿಗೂ ಬಾಲವನ್ನು ಕತ್ತರಿಸಿಕೊಳ್ಳುವಂತೆ ಹೇಳಿದಂತೆ, ನಾನು ಮೋಸಹೋಗುವುದಿಲ್ಲ.

ರಾಣಿ—ಇಂದೇನು ತಿಥಿ?

ಝಲಕಾರಿ—ಪಂಚಮೀ ಮಹರಾಜ್.

ರಾಣಿ—ಪಂಚಮಿಯಾದ ಹತ್ತು ದಿನದಮೇಲೆ.

ಝಲಕಾರಿ—ಪೂರ್ಣಿಮಾ.

ರಾಣಿಯು ಸಂತೋಷಪಟ್ಟು, ಝಲಕಾರಿಯ ಕೊರಳಿಗೆ ಪುಷ್ಪಮಾಲೆಯನ್ನು ಹಾಕಿ ಅವಳ ತಲೆಯನ್ನು ನೇವರಿಸಿದಳು.

ಈ ವಿನೋದೋತ್ಸವವು ಸಮಾಪ್ತವಾದಮೇಲೆ ಸ್ತ್ರೀಯರೆಲ್ಲರೂ ಮಹದೇವನ ಮಂದಿರದ ಬಳಿಗೆ ಇಳಿದು ಬರುತ್ತಾ ಆ ಮುತ್ತುಗದ ಮರವನ್ನು ಹಿಡಿದು ಜಗ್ಗಿಸುತ್ತಿದ್ದರು. ಆ ಮರದ ಕೆಂಪು ಪುಷ್ಪರಾಶಿಗಳು, ಹೂವ್ವಿನ ಮಾಲಿಕೆಗಳೊಂದಿಗೆ ಜೋಕಾಲೆಯಾಡುತ್ತಿದ್ದವು.

ಮಹದೇವ ಮಂದಿರವು ಬಹು ಚಿಕ್ಕದಾಗಿದ್ದು ಅದರ ಪ್ರಾಕಾರವು ಅತ್ಯಂತ ಕಿಷ್ಕಿಂಧವಾಗಿದ್ದಿತು. ಆದರೂ ಅನೇಕ ಸ್ತ್ರೀಯರು ಅಲ್ಲಿ ನೆರೆದಿದ್ದರು.

ರಾಣಿಯು ಅವರ ಕಲಕಲರವವನ್ನು ನಿಲ್ಲಿಸಿ ಹೇಳತೊಡಗಿದಳು.

"ಇನ್ನೆರಡು ಮೂರು ದಿವಸಗಳೊಳಗಾಗಿ ನಿಮ್ಮ ಝಾನ್ಸಿಯ ಮೇಲೆ ಆಕ್ರಮಣ ಮಾಡಲಿರುವರು. ನಿಮ್ಮಲ್ಲಿ ಅನೇಕರು ರಣವಿದ್ಯೆಯನ್ನು ಕಲಿತಿರುವಿರಿ. ಯಾರು ಯಾರು, ಯಾವ ಯಾವ ಕಾರ್ಯವನ್ನು ಮಾಡಬಲ್ಲಿರೋ ಅವರು ಆ ಕಾರ್ಯವನ್ನು ನೆರವೇರಿಸಿರಿ. ಯುದ್ಧ ಮಾಡುವವರ ಬಳಿಗೆ ತಕ್ಕ ಸಮಯಕ್ಕೆ ಮದ್ದು ಗುಂಡು ಅನ್ನ ಆಹಾರಾದಿಗಳನ್ನು ಸರಿಯಾಗಿ ಸಲ್ಲಿಸುತ್ತಿರಬೇಕು. ಅವಶ್ಯ ಬಿದ್ದರೆ ಶಸ್ತ್ರಗಳನ್ನು ಹಿಡಿಯಬೇಕಾದೀತು. ನಿಮ್ಮಲ್ಲಿ ಕೆಲವರು ನನ್ನ ಅಕ್ಕ ತಂಗಿಯವರಂತಿರುವಿರಿ, ಕೆಲವರು ನನ್ನ ತಾಯಿಯ ಸಮಾನರಿರುವಿರಿ. ನಿಮ್ಮ ತಂದೆ ಮಾವಂದಿರ, ನಿಮ್ಮ ಗಂಡಂದಿರ, ನಿಮ್ಮ ಅಣ್ಣ ತಮ್ಮಂದಿರ ಜೀವವು ನಿಮ್ಮ ಕೈಯ್ಯಲ್ಲಿದೆ. ನೀವು ಮಾಡ ಬೇಕಾಗಿರುವ ಕಾರ್ಯವು ನಿಮ್ಮ ಪೂರ್ವಜರಿಗೆ ಕೀರ್ತಿ ತರುವಂತಿರಬೇಕು. ನಾನು ನಗರದ ಸಂರಕ್ಷಣೆಯ ಏರ್ಪಾಡೆಲ್ಲವನ್ನೂ ಮಾಡಿರುತ್ತೇನೆ. ನನಗೆ ನಿಮ್ಮ ಅವಶ್ಯ ಕತೆಯು ಈ ಕಿಲ್ಲೆಯಲ್ಲಿದೆ. ನೀವು ನನ್ನ ಬಳಿಯಿರಬೇಕು. ನಿಮಗೆ ಆಗಾಗ್ಗೆ ವಿರಾಮ ದೊರಕುವುದು, ಆಗ ನೀವು ಮನೆಗಳಿಗೆ ಹೋಗಿಬರಬಹುದು."

ಝಲಕಾರಿಯು "ಸರ್ಕಾರ್ ನೀವು ನನ್ನ ಗಂಡನನ್ನು ಉನಾವ್ ದ್ವಾರದ ಬಳಿ ತೋಪು ಚಲಾಯಿಸುವುದಕ್ಕೆ ನಿಯಮಿಸಿರುವಿರಿ. ನಾನೂ ಅವನೊಡನೆ ಇರ ಬಹುದೆ?" ಎಂದು ಕೇಳಿದಳು.

ರಾಣಿಯು ನಸು ನಗುತ್ತಾ "ಹಾಗೆಯೇ ಆಗಲಿ ಝಲಕಾರಿ. ನಿನ್ನ ಗಂಡನ ಬಳಿಯೇ ಇರು. ಅವನ ಹೆಸರನ್ನಾದರೂ ಸ್ವಲ್ಪ ಹೇಳಬಾರದೆ?" ಎಂದಳು.

ಝಲಕಾರಿಯು ಅವಕುಂಠನವನ್ನು ತೆಗೆದು "ಈಗ ತಾನೆ ಹೇಳಿದೆನೆಲ್ಲಾ" ಎಂದಳು.

ಅಲ್ಲಿದ್ದ ಸ್ತ್ರೀಯರೆಲ್ಲರೂ ನಕ್ಕರು.

ರಾಣಿಯು "ಈಗ ಎಲ್ಲರೂ ಸೇರಿ ಒಂದು ಬಾರಿ ಭಗವಂತನನ್ನು ಸ್ಮರಿಸೋಣ— ಹರಹರ ಮಹಾದೇವ್ !" ಎಂದು ಹೇಳಿದಳು.

ಎಲ್ಲಾ ಸ್ತ್ರೀಯರೂ ಏಕ ಕಂಠದಿಂದ "ಹರಹರ ಮಹದೇವ್" ಎಂದು ಧ್ವನಿಗೈದರು.

ಆ ಸಪ್ತಷ ಕೋಮಲ ಕಂಠಗಳ ನಿನಾದವು ಕಿಲ್ಲೆಯ ಒರಟು ಕಲ್ಲಿನಗೋಡೆ ಗಳಿಂದ ಮರುಧ್ವನಿಯಾಯಿತು. ಆ ಪ್ರತಿಧ್ವನಿಯು ಮಹದೇವ ಮಂದಿರವನ್ನು ಆವರಿಸಿ ಅಲ್ಲಿಂದ ಹರ ಹರ ಮಹದೇವ್ ಎಂಬ ಘೋಷವನ್ನು ಹೊರಡಿಸಿತು. ದಿಕ್ಕು ದಿಕ್ಕುಗಳಿಗೂ ಅನಂತಕಾಲದವರೆಗೆ ಆ ಅಮರ ನಿನಾದವು ಹರಡಿ ಸೇರಿಹೋಯಿತು.

ಮಹಲಿನ ಬಳಿ ಸಿಪಾಯಿಗಳ ವಸತಿಗಳಿದ್ದವು. ಅವುಗಳಲ್ಲಿ ಹೊಸದಾಗಿ

ಬಂದು ಸೇರಿದ್ದ ಪಠಾಣರಿದ್ದರು. ಅವರು ಆ ಘೋಷವನ್ನು ಕೇಳಿ ಆಯುಧ ಸಮೇತ ರಾಗಿ ಹೊರಗೆ ಬಂದರು. ಬುಂದೇಲು ಖಂಡದ ಸಿಪಾಯಿಗಳು ಆ ಘೋಷಣೆಯ ಅರ್ಥವನ್ನು ಅವರಿಗೆ ವಿವರಿಸಿ ಹೇಳಿದರು.

ಅವರ ಮುಖಂಡನಾದ ಗುಲ್‌ಮಹಮ್ಮದ್ದನು "ಯಾವ ದೇಶದ ಸ್ತ್ರೀಯರು ಈ ರೀತಿ ಯುದ್ಧಮಾಡಲು ಸಿದ್ಧರಿರುವರೋ ಅಲ್ಲಿಯ ಪುರುಷರು ಆಕಾಶವನ್ನೇ ಸುತ್ತಿಸಿ-ಬಿಡುವಂತಹ ಪರಾಕ್ರಮಿಗಳಾಗಿರುವರು. ಮತ್ತು ನಾವು—ನಾವು ದೇವರಾಣೆಗೂ ಈ ದೇಶಕ್ಕಾಗಿ ಜೀವವನ್ನು ಮಿಾಸಲಾಗಿಡಲು ಸಿದ್ಧರಿದ್ದೇವೆ. ಸಮಯ ಬರಲಯ್ಯಾ, ಸಮಯ" ಎಂದು ಹೇಳಿದನು. ಎಲ್ಲಾ ಪಠಾಣರೂ ಹಲ್ಲುಮುಡಿ ಕಚ್ಚಿ ಮನಃ ಪೂರ್ವಕವಾಗಿ ಪ್ರಮಾಣ ಮಾಡಿದರು.

## ೭೫

ಮಾರ್ಚಿ ತಿಂಗಳು ೨೦ ನೇ ತಾರೀಖು ಪ್ರಾತಃಕಾಲ ಜನರಲ್ ರೋಜನು ಸಸೈನ್ಯನಾಗಿ ಝೂನ್ಸಿಯ ನೈರುತ್ಯ ದಿಕ್ಕಿನಲ್ಲಿರುವ ಕಾರ್ಮಾದೇವಿ ಗುಡ್ಡದ ಹಿಂಭಾಗ ದಲ್ಲಿ ಝೂನ್ಸಿಯಿಂದ ಸುಮಾರು ೩ ಮೈಲಿ ದೂರದಲ್ಲಿ ಬಂದಿಳಿದುಕೊಂಡನು. ಸ್ವಲ್ಪ ಹೊತ್ತಿನೊಳಗಾಗಿ ಗುಡಾರಗಳನ್ನು ನೆಡಲಾಯಿತು. ಇದನ್ನು ರಾಣಿಯು ತನ್ನ ಮಹಲಿನ ಮೇಲುಪ್ಪರಿಗೆಯಿಂದ ದುರ್ಬೀನಿನ ಮೂಲಕ ನೋಡಿದಳು. ತಕ್ಷಣವೆ ಸಮಾಚಾರವು ಊರಿನಲ್ಲೆಲ್ಲಾ ಕಾಡುಕಿಚ್ಚಿನಂತೆ ವ್ಯಾಪಿಸಿ ಹಾಹಾಕಾರವುಂಟಾಯಿತು. ಆದರೆ ಅದು ಉತ್ಸಾಹದಿಂದ ಉದ್ಭವಿಸಿತೇ ಹೊರತು ಭಯದಿಂದಲ್ಲ.

ಕಿಲ್ಲೆಯಲ್ಲಿದ ಗೋಲಂದಾಜಿಗಳು ದುರ್ಬೀನಿನ ಮೂಲಕ ನೋಡಲಾರಂಭಿಸಿದರು. ತೋಪುಗಳಿಗೆ ಕಿಚ್ಚಿಡುವುದಕ್ಕಾಗಿ ಅವರ ಕೈ ಕಚ್ಚುತ್ತಿದ್ದಿತು. ಆದರೆ ಆ ಕಾಲದ ತೋಪುಗಳಿಗೆ ಸರಿಯಾದ ಗುರಿಯಿಟ್ಟು ಹೊಡೆಯುವುದಕ್ಕೆ ಮೂರುಮೈಲಿಗಳ ಅಂತರವು ಅತ್ಯಧಿಕವಾಗಿದ್ದಿತು. ಸ್ತ್ರೀ ಗೋಲಂದಾಜಿಗಳೂ ಕೂಡ ದುರ್ಬೀನನ್ನು ಹಿಡಿದು ನೋಡಲಾರಂಭಿಸಿದರು.

ಮೋತೀಬಾಯಿಯು ಹುರುಪಿನಿಂದ ರಾಣಿಯೊಡನೆ "ನಮ್ಮ ಅಶ್ವಾರೋಹಿಗಳು ಧಾಳಿಮಾಡಿದರೆ ಎಲ್ಲಾ ಗುಡಾರಗಳೂ ಉರುಳಿ ಕನಾತು ಮುಂತಾದುವು ಚಿಂದಿಚಿಂದಿಯಾಗುವುವು" ಎಂದಳು.

ರಾಣಿಯು ಸ್ವಲ್ಪ ಯೋಚಿಸಿ ಕೆಲಸ ಮಾಡಬೇಕು. ಆ ಗುಡಾರಗಳ ಮಧ್ಯೆ ಮಧ್ಯೆ, ಅಕ್ಕಪಕ್ಕಗಳಲ್ಲಿ, ಹಿಂಭಾಗ ಮುಂಭಾಗಗಳಲ್ಲಿ ತೋಪುಗಳನ್ನು ಇಟ್ಟಿರಬಹುದು. ಒಬ್ಬ ಸವಾರನೂ ಕೂಡ ಜೀವದೊರಸೆ ಹಿಂದಿರುಗಿ ಬರಲಾರನು. ಯುದ್ಧವನ್ನು ಕಿಲ್ಲೆ

ಯಲ್ಲೂ ನಗರದ ಪ್ರಾಕಾರದ ಗೋಡೆಯೊಳಗೂ ನಿಂತು ಮಾಡಬೇಕಾಗುವುದು. ಅವರೇನೋ ಮುತ್ತಿಗೆ ಹಾಕುವರು, ಆದರೆ ಒಂದಿಲ್ಲೊಂದು ದಿನ ತಾತ್ಯಾಟೋಪಿ ಮತ್ತು ರಾವ್ ಸಾಹೇಬರು ಸೈನ್ಯ ಸಮೇತರಾಗಿ ಬರುವರು. ಆಗ ರೋಜನ ಸೈನ್ಯದ ಮೇಲೆ ಅವರು ಧಾಳಿಮಾಡುವರು" ಎಂದಳು.

"ರಾವ್ ಸಾಹೇಬರಿಗೆ ಸಂದೇಶವನ್ನು ಕಳುಹಿಸಲಾಗಿದೆಯೆ?"

"ಇಂದು ಕಳುಹಿಸಲಿರುವೆನು."

"ಪೀರಾಲಿಯ ಮೂಲಕ ಮಾತ್ರ ಕಳುಹಿಸಕೂಡದೆಂದು ನನ್ನ ಮನವೇಕೋ ನುಡಿಯುತ್ತಿದೆ."

"ಯಾರನ್ನು ಕಳುಹಿಸಲೀ ಎಂದು ಯೋಚಿಸುತ್ತಿದ್ದೇನೆ." ರಾಣಿಯು ಸ್ವಲ್ಪ ಹೊತ್ತು ಯೋಚಿಸಿ ಹೇಳಿದಳು." ಮೋತೀ ನೀನೇ ಹೇಳು. ಯಾರನ್ನು ಕಳುಹಿಸಲಿ."

ಮೋತೀಬಾಯಿಯು ಹೇಳಿದಳು "ನನ್ನ ಮನಸ್ಸಿಗೆ ತೋರುವವರೆಲ್ಲರೂ ಒಂದಲ್ಲೊಂದು ಕೆಲಸದಲ್ಲಿ ನಿರತರಾಗಿದ್ದಾರೆ. ಜೂಹಿಯನ್ನು ಒಬ್ಬ ಸವಾರನೊಂದಿಗೆ ಕಳುಹಿಸುವುದು ಯುಕ್ತವೆಂದು ತೋರುವುದು."

"ಅವಳು ಸುಕುಮಾರಿ ಮತ್ತು ಕೋಮಲಾಂಗಿ" ಎಂದು ರಾಣಿಯು ಹೇಳಿದಳು.

ಮೋತೀಬಾಯಿಯು ಸತೃಷ್ಣನಯನಳಾಗಿ ರಾಣಿಯನ್ನು ನೋಡಿ ಹೇಳಿದಳು "ಸರ್ಕಾರ್, ಪ್ರಪಂಚದಲ್ಲಿರುವ ಮಂಜುಳತೆಯೆಲ್ಲವೂ ನಮ್ಮ ಸ್ವಾಮಿನಿಯಲ್ಲಿ ಅಡಕವಾಗಿದೆ. ಅವಳಿಗಿಂತ ಮಿಗಿಲಾದವರು ಇನ್ಯಾರೂ ಇಲ್ಲ. ಅಷ್ಟು ಕೋಮಲ ಹೃದಯಳಾದರೂ ಉಕ್ಕಿಗಿಂತ ಕಠೋರಳು. ಹಾಗಿರುವಲ್ಲಿ ಅವಳ ಕರ್ಮಚಾರಿಯೊಬ್ಬಳು ಕೇವಲ ಒಂದು ಸಂದೇಶವಾಹಕಳ ಕಾರ್ಯವನ್ನು ಮಾಡಲು ಅಶಕ್ತಳೆ? ಅವಳು ದೃಢಕಾಯಳೂ ಆಗಿರುವಳು. ಈ ಕಾರ್ಯವನ್ನು ಅವಳು ಶ್ರದ್ಧೆಯಿಂದ ಮಾಡುವಳು. ಅವಳನ್ನು ಕಳುಹಿಸಲು ಅನುಮತಿ ಕೊಡಿ. ಒಡನೆಯೇ ಅವಳು ನಗರವನ್ನು ಬಿಟ್ಟು ಹೊರಡಬೇಕು. ಆಂಗ್ಲೇಯರು ಶೀಘ್ರದಲ್ಲಿಯೇ ನಗರಕ್ಕೆ ಮುತ್ತಿಗೆ ಹಾಕಿ ಎಲ್ಲಾ ದ್ವಾರಗಳನ್ನು ಭದ್ರಪಡಿಸುವರು. ಅನಂತರ ಯಾರೂ ಹೋಗಿಬರಲು ಸಾಧ್ಯವಿಲ್ಲ."

ರಾಣಿಯು ಸಮ್ಮತಿಸಿದಳು. ಆಕೆಯು "ನಾನು ಜೂಹಿಯನ್ನು ಕಳುಹಿಸಲು ಅನುಮತಿ ಕೊಡುತ್ತೇನೆ. ಅವಳೊಂದಿಗೆ ಕಾಶಿಯನ್ನು ಕಳುಹಿಸಲು ಇಚ್ಛಿಸುತ್ತೇನೆ. ನಿನ್ನನ್ನೇ ಅವಳೊಂದಿಗೆ ಕಳುಹಿಸಬೇಕೆಂದಿದ್ದೆ; ಆದರೆ ನಿನ್ನ ಅವಶ್ಯಕತೆಯು ನನಗೆ ಇಲ್ಲಿ ಹೆಚ್ಚಾಗಿರುವುದು" ಎಂದಳು.

ರಾಣಿಯು ಒಡನೆಯೇ ಕಾಶೀಬಾಯಿ ಮತ್ತು ಜೂಹಿಯರನ್ನು [illegible]ಗೆ ರವಾನಿಸಿದಳು. ಅವರಿಬ್ಬರೂ ಶಸ್ತ್ರಧಾರಿಗಳಾಗಿ ಪುರುಷವೇಷದಲ್ಲಿ ಉತ್ತಮಾಶ್ವಗಳ

ನ್ನೇರಿ ಹೊರಟರು. ಅವರಿಗೆ ಬೇಕಾದ ಸಾಮಾನುಗಳು ಅವರೊಂದಿಗಿದ್ದವು. ಜೂಹಿ ಮತ್ತು ಕಾಶೀಬಾಯಿಯರು ಹೊರಟು ಹೋದನಂತರ ನಗರದ ಎಲ್ಲಾ ದ್ವಾರಗಳನ್ನೂ ಭದ್ರಪಡಿಸಿದರು.

ಝಾನ್ಸಿಯ ಅನೇಕ ಸ್ತ್ರೀಯರು ಅದೇ ರಾತ್ರಿ ಯೋಧ ವೇಷಧಾರಿಗಳಾಗಿ ರಾಣಿ ಯೊಡನೆ ವಾಸಿಸಲಾರಂಭಿಸಿದರು. ಮನೆಯಲ್ಲಿ ಕೆಲಸಮಾಡುತ್ತಾ, ಹರಟೆ ಕೊಚ್ಚುತ್ತಾ, ಮನಸ್ತಾಪಗಳುಂಟಾದಾಗ ತಮ್ಮ ತಮ್ಮಲ್ಲಿ ಜಗಳವಾಡುತ್ತಾ, ಸಂಧ್ಯಾ ಕಾಲದಲ್ಲಿ ಸರ್ವಾಲಂಕಾರ ಭೂಷಿತರಾಗಿ ಕೈಯ್ಯಲ್ಲಿ ಪುಷ್ಪದ ತಟ್ಟೆಗಳನ್ನೂ, ದೀಪಾರ್ತಿಗಳನ್ನೂ ಹಿಡಿದು ಪೂಜೆಗಾಗಿ ಮಂದಿರಕ್ಕೆ ಹೋಗಿ ಬರುತ್ತಿದ್ದ ಆ ಗೃಹಿಣಿಯರೇ ಇಂದು ಸೈನಿಕರ ವೇಷವನ್ನು ಧರಿಸಿ, ಸೊಂಟದಲ್ಲಿ ಕತ್ತಿಗಳನ್ನು ಕಟ್ಟಿ ಹೆಗಲ ಮೇಲೆ ಬಂದೂಕಗಳನ್ನೇರಿಸಿಕೊಂಡು ನಿಶ್ಶಬ್ಧರಾಗಿ ತಮ್ಮ ನಿಯುಕ್ತ ಕಾರ್ಯಗಳಲ್ಲಿ ತೊಡಗಿ ದರು! ಅವರ ಶೃಂಗಾರ, ವಾಗ್ಯುದ್ಧಗಳೆಲ್ಲವೂ ಅವರ ಕತ್ತಿಯ ಒರೆಗಳಲ್ಲಿ ಹೋಗಿ ಅಡಗಿಕೊಂಡವು. ಆಂಗ್ಲೇಯರು ಝಾನ್ಸಿಯ ಮೇಲೆ ರಾತ್ರಿಯ ವೇಳೆಯಲ್ಲಿ ಧಾಳಿ ಮಾಡುವರೆಂದು ಜನರು ಊಹಿಸಿದರು. ಇದಕ್ಕಾಗಿ ಝಾನ್ಸಿಯು ಸಿದ್ಧವಾಗಿದ್ದಿತು. ಆದರೆ ಅಂದು ರಾತ್ರೆ ಧಾಳಿಯು ನಡೆಯಲಿಲ್ಲ.

ಮಾರ್ಚಿ ೨೧ರಲ್ಲಿ ಜನರಲ್ ರೋಜನು ತನ್ನ ದಳಪತಿಗಳೊಡನೆ ದೂರ ದಿಂದಲೇ ಝಾನ್ಸಿ ನಗರವನ್ನು ಬಳಸಿ ಬಂದು ಅದರ ಸುತ್ತ ಮುತ್ತಲಿನ ಪ್ರದೇಶಗಳ ಸೂಕ್ಷ್ಮ ಪರಿಚಯ ಮಾಡಿಕೊಂಡನು. ಆಕ್ರಮಣ ಮಾಡಬೇಕಾದ ಮತ್ತು ಶಿಕ್ಷಣ ಹೊಂದಬೇಕಾದ ಸ್ಥಾನಗಳಲ್ಲಿ ತನ್ನ ಸೈನ್ಯದ ತುಕ್ಕಡಿಗಳನ್ನೂ ಮತ್ತು ತೋಪುಗಳನ್ನೂ ಇರಿಸಿದನು. ನಗರದಲ್ಲಿರುವ ಮತ್ತು ಕಿಲ್ಲೆಯಲ್ಲಿರುವ ಜನರಿಗೆ ಯಾವ ಯಾವ ಮಾರ್ಗ ಗಳಿಂದ ಸಹಾಯ ಮತ್ತು ಆಹಾರ ಪದಾರ್ಥಗಳ ಸರಬರಾಜು ದೊರಕುತ್ತಿದ್ದಿತೋ ಆ ಮಾರ್ಗಗಳನ್ನೆಲ್ಲವನ್ನೂ ವಶಪಡಿಸಿಕೊಂಡನು. ನಗರದ ಎಲ್ಲಾ ದ್ವಾರಗಳನ್ನೂ ಕಾಯಲು ತನ್ನ ಸೈನಿಕರನ್ನು ನಿಯುಕ್ತಮಾಡಿದನು. ಅದೇ ದಿನ ಚಂದೇರಿಯಿಂದ ಬ್ರಿಗೆಡಿಯರ್ ಸ್ಟುವರ್ಟನು ತನ್ನ ಪಡೆಯೊಂದಿಗೆ ಬಂದು ಸೇರಿದನು. ಈ ಸಹಾಯ ದಿಂದ ರೋಜನ ಪ್ರಾಬಲ್ಯವು ಮತ್ತೂ ಹೆಚ್ಚಿತು.

ಯಾವ ಯಾವ ಸ್ಥಳಗಳಲ್ಲಿ ಆಂಗ್ಲೇಯ ಪಡೆಗಳು ಇದ್ದವೋ ಅಲ್ಲಲ್ಲಿ ಅವರ ರಕ್ಷಣೆಗಾಗಿ ಭೂಮಿಯನ್ನು ಅಗೆದು ತಕ್ಕ ಕಂದಕಗಳು ತಯಾರಾದವು. ಒಂದು ಸ್ಥಾನದಿಂದ ಮತ್ತೊಂದು ಸ್ಥಾನಕ್ಕೆ ತಂತಿಗಳನ್ನು ಎಳೆಯಲಾಗಿ ಇವುಗಳ ಮೂಲಕ ಸಮಾಚಾರಗಳನ್ನು ಕಳುಹಿಸುವ ವ್ಯವಸ್ಥೆಮಾಡಲಾಯಿತು. ಕಮಾಸೀ಼ ಗುಡ್ಡದ ಮೇಲೆ ಒಂದು ತಂತಿ ಕೇಂದ್ರವನ್ನು ಮತ್ತು ಒಂದು ದುರ್ಬೀನನ್ನೂ ಸ್ಥಾಪಿಸಲಾಯಿತು. ಇದರಿಂದ ರಣಕ್ಷೇತ್ರದ ಒಂದು ಸ್ಥಳಕ್ಕೆ ಬೇಕಾದ ಸಂದೇಶಗಳನ್ನು ಕಳುಹಿಸಲು

ನುತ್ತು ದುರ್ಬೀನಿನ ಮೂಲಕ ಕಿಲ್ಲೆಯಲ್ಲಿನ ಸ್ಥಿತಿಗಳನ್ನು ಅರಿತುಕೊಳ್ಳಲು ಅನುಕೂಲ ನಾಯಿತು.

ಝಾನ್ಸಿಯ ಸುತ್ತುಮುತ್ತಲೂ ಇದ್ದ ಎಲ್ಲಾ ಗುಡ್ಡಗಳ ಹಿಂಬದಿಯಲ್ಲಿ ಆಶ್ರಯ ಹೊಂದಿ ಆಂಗ್ಲೇಯರು ತಮ್ಮ ಮೃತ್ಯುಕಾರಕ ತೋಪುಗಳನ್ನು ವೈಜ್ಞಾನಿಕ ರೀತಿ ಯಿಂದ ಸಜ್ಜುಗೊಳಿಸಿ ಸ್ಥಾಪಿಸಿದರು. ಈ ಗುಡ್ಡಗಳ ಮಧ್ಯದಲ್ಲಿ ಇದ್ದ ಮೈದಾನ ಪ್ರದೇಶಗಳಲ್ಲಿ ಮತ್ತು ತಗ್ಗಾದ ಪ್ರದೇಶಗಳಲ್ಲಿ ಕಂದಕಗಳನ್ನು ನಿರ್ಮಿಸಿಕೊಂಡು ಅವುಗಳಲ್ಲಿ ತುಪಾಕಿಯನ್ನು ಹಾರಿಸಲು ಸಿದ್ಧರಾಗಿ ಸೈನಿಕರು ಕುಳಿತು ತಮ್ಮ ಜನರಲ್ಲಿನ ಆಜ್ಞೆಯನ್ನು ಪ್ರತೀಕ್ಷೆ ಮಾಡುತ್ತಿದ್ದರು. ರೋಜನು ಎಷ್ಟು ಯೋಗ್ಯನಾದ ಸೇನಾಪತಿ ಯಾಗಿದ್ದನೋ ಅವನ ಸೇನೆಯೂ ಅಷ್ಟೇ ಅನುಭವಶಾಲಿಯಾಗಿದ್ದು ಹಿಂಸಾತ್ಮಕ ಕಾರ್ಯಗತಿಗೆ ಸಿದ್ಧವಾಗಿದ್ದಿತು.

ಮಾರನೆಯ ದಿನ (ಮಾರ್ಚಿ ೨೨ ನೇ ತಾರೀಖು) ರೋಜನ ಕೆಲವು ಸವಾರರು ಹತ್ತಿರದಿಂದ ಈಕ್ಷಿಸಲು ಕೋಟೆಯ ಅತ್ಯಂತ ಸಾಮಿಪ್ಯವನ್ನೈದಿದರು. ಸೈಯರ್ ಹೆಬ್ಬಾಗಿಲಿನ ಬಳಿ ಕೋಟೆಯ ಒಳಗಡೆಗೂ ಮತ್ತು ಹೊರಗಡೆಗೂ ಚಾಚಿದ್ದ ಸುಡುಗಾಡು ಮತ್ತು ಮಣ್ಣಿನ ಗುಡ್ಡಗಳಿಂದ ಒಡನೆಯೇ ದಡಬಡನೆ ಗುಂಡುಗಳ ಸುರಿಮಳೆಯಾಯಿತು. ಸವಾರರಾರೂ ಸಾಯದಿದ್ದರೂ ಅನೇಕರು ಗಾಯಗೊಂಡರು. ರೋಜನಿಗೆ ಈ ಸಮಾಚಾರವು ಒಡನೆಯೇ ಮುಟ್ಟಿತು. ಝಾನ್ಸಿಯು ಯುದ್ಧ ಮಾಡಲು ಸರ್ವಸಿದ್ಧವಿದೆಯೆಂದು ಅವನು ತಿಳಿದುಕೊಂಡನು. ಆದರೆ ಆತನು ಅದೇ ದಿನ ಧಾಳಿಯನ್ನು ಏರ್ಪಡಿಸದೇ ತನ್ನ ಸಂಪೂರ್ಣ ಸಾಧನ ಮತ್ತು ಉಪಕರಣ ಗಳ ಪುನರ್ ನಿರೀಕ್ಷಣೆಮಾಡಿ ಎಲ್ಲೆಲ್ಲಿ ದೋಷಗಳಿದ್ದವೋ ಅವುಗಳನ್ನು ಸರಿಪಡಿಸಿ ಕೊಂಡನು.

೨೩ ನೇ ಮಾರ್ಚಿ, ಮಂಗಳವಾರ, ರೋಜನು ಝಾನ್ಸಿಯ ಮೇಲೆ ಆಕ್ರಮಣ ಮಾಡಲು ಆಜ್ಞೆಯಿತ್ತನು. ಯುದ್ಧವು ಆರಂಭವಾಯಿತು.

ಸೈಯರ್ ಹೆಬ್ಬಾಗಿಲಿನ ಎಡಕ್ಕೆ ಒಂದು ಗುಡ್ಡದ ಮೇಲೆ ಆಂಗ್ಲೇಯರ ತೋಪು ಗಳಿದ್ದವು. ಅಲ್ಲಿಂದ ಸೈಯರ್ ದ್ವಾರ ಮತ್ತು ಓರ್ಛಾ ದ್ವಾರಗಳ ಮೇಲೂ ಮತ್ತು ಅವುಗಳ ನಡುವೆಯಿದ್ದ ಕೋಟೆಯ ಗೋಡೆಯ ಮೇಲೂ ಗುಂಡುಗಳ ಸುರಿಮಳೆ ಯಾಯಿತು. ಈ ಹಾರುತ್ತಿದ್ದ ಗೋಲಿಗಳ ಕೆಳಗೆ ಪರಂಗಿ ಪಡೆಯೊಂದು ಗುರುತರದ ಬಂದೂಕಗಳನ್ನು ಹಿಡಿದು ವಲ್ಮೀಕದಂತೆ ಮುಂದೆ ಬಂದಿತು. ಖುದಾಬಕ್ಷ ಮತ್ತು ದುಲ್ಹಾಜುವು, ಅವರುಗಳು ತಮ್ಮ ತೋಪುಗಳ ಮೃತ್ಯು ಪಥದವರೆಗೆ ಸಮಿಾಪಿಸಲು ಎಡೆಗೊಟ್ಟು ನಂತರ ತಮ್ಮ ತೋಪುಗಳನ್ನು ಹಾರಿಸಲಾರಂಭಿಸಿದರು. ಪರಂಗಿಯವರ ಸೈನ್ಯವು ಭೂಗತವಾದನಂತರ ಖುದಾಬಕ್ಷನು ತನ್ನ ಗಮನವನ್ನು ತೋಪುಗಳಿದ್ದ

ಗುಡ್ಡದೆಡೆಗೆ ತಿರುಗಿಸಿದನು. ಆಂಗ್ಲೇಯ ತೋಪ್ಚಿಗಳು ಮಡಿದು ತೋಪುಗಳು ಶಾಂತವಾದವು. ಆ ತೋಪುಗಳ ರಕ್ಷಣೆಯಲ್ಲಿದ್ದ ಸೈನ್ಯವು ದಿಕ್ಕೆಟ್ಟು ಪರಾರಿಯಾಯಿತು. ಅದರ ಮೇಲೆ ಗುಲಾಂ ಗೌಸ್‌ಖಾನನು 'ಘನಗರಜ್'' ಎಂಬ ತೋಪನ್ನು ಹಾರಿಸಿದನು. ಅತ್ಯಂತ ಪ್ರಯಾಸದಿಂದ ಎಲ್ಲೊ ಹಲವು ಕೆಲವರು ಜೀವದೊರಸೆ ರೋಜನ ಬಳಿ ಹೋಗಿ ಸೇರಿದರು. ಪೂರ್ವದಿಂದ ಸಾಗರ್ ಕಿಡಕಿ ಮತ್ತು ಲಕ್ಷ್ಮೀದ್ವಾರಗಳ ಬಳಿ ಆಕ್ರಮಣವು ನಡೆದಿದ್ದರೂ ಅದು ತೀವ್ರವಾಗಿರಲಿಲ್ಲ. ಅವರು ಲಕ್ಷ್ಮೀಕೊಳದ ದಕ್ಷಿಣ ಭಾಗವನ್ನು ಬಳಸಿಕೊಂಡು ಹೋಗಬೇಕಾಗಿದ್ದಿತು. ಆದರೆ ಭಾವುಬಕ್ಷಿಯ "ಕಡಕ್‌ಬಿಜಲಿ"ಯು ಪೂರ್ವ ದಿಕ್ಕಿನಲ್ಲಿದ್ದ ಕಂದಕಗಳ ಮೇಲೆ ಮಾಡಿದ ಹಾವಳಿಯಿಂದ ಆ ದಿಕ್ಕಿನಿಂದ ಆಕ್ರಮಣಮಾಡಬೇಕೆಂದಿದ್ದ ರೋಜನ ಅಭಿಲಾಷೆಯು ಅವನ ಮನದಲ್ಲಿಯೇ ಉಳಿಯಿತು.

ರೋಜನು ದಕ್ಷಿಣದಲ್ಲಿದ್ದ ಜೀವನಶಹಾ ಗುಡ್ಡದ ಪಕ್ಕದಲ್ಲಿ ಪೂರ್ವದಿಕ್ಕಿಗೆ ಕಿಲ್ಲೆಯಿಂದ ೩೦೦ ಗಜಗಳ ಅಂತರದಲ್ಲಿ ಕಂದಕಗಳನ್ನು ನಿರ್ಮಿಸಿದನು. ಆದರೆ ಅವುಗಳ ನಿರ್ಮಾಣದಲ್ಲಿ ಬಹಳ ಹೊತ್ತು ಹಿಡಿದು ಅನೇಕ ಸೈನಿಕರನ್ನು ಅದಕ್ಕಾಗಿ ನಿಯಮಿಸಬೇಕಾಯಿತು. ಆದರೂ ಸಾಯಂಕಾಲದ ವೇಳೆಗೆ ಹೆಚ್ಚು ಕೆಲಸವೇನೂ ನಡೆದಿರಲಿಲ್ಲ. ರಾತ್ರಿಯ ವೇಳೆಗೆ ಕಂದಕವು ಸಿದ್ಧವಾಗಿ ಇದಕ್ಕೆ ಸಹಾಯ ಒದಗುವಂತೆ ಮತ್ತೆ ಮೂರು ಕಂದಕಗಳನ್ನು ಮಾಡಿಸಿದನು.

## ೬೬

ಝಾನ್ಸಿಯ ಸೈನಿಕರೂ, ತೋಪ್ಚಿಗಳೂ, ನಿದ್ರೆಯನ್ನು ತೊರೆದು ರಾತ್ರಿಯೆಲ್ಲಾ ಎಚ್ಚತ್ತಿದ್ದರು. ರಾಣಿಯು ಇವರಿಗೆ ವಿರಾಮ ದೊರಕಿಸಲು ಸಹಾಯವನ್ನೇರ್ಪಡಿಸಿದಳು. ಹಗಲು ಹೊತ್ತು ಗುಲಾಂ ಗೌಸ್‌ಖಾ ಖುದಾಬಕ್ಷ, ರಘುನಾಥಸಿಂಹ, ಭಾವು ಬಕ್ಷಿ, ದುಲ್ಹಾಜು, ಪೂರಣ್ ಮತ್ತು ಸಾಗರಸಿಂಹ ಇವರುಗಳು ತಮ್ಮ ತಮ್ಮ ನಿಯುಕ್ತ ಸ್ಥಾನಗಳಲ್ಲಿರಬೇಕೆಂದೂ ಮತ್ತು ರಾತ್ರಿಯಲ್ಲಿ ಅವರ ಬದಲು ಸ್ತ್ರೀ ಗೋಲಂದಾಜಿಗಳು ಕೆಲಸಮಾಡಬೇಕೆಂದೂ ನಿರ್ದೇಶ ಮಾಡಿದಳು.

ಆದರೆ ಈ ಬದಲಾವಣೆಯು ಪ್ರಾತಃಕಾಲದಲ್ಲೇ ನಡೆಯುತ್ತಿರಲಿಲ್ಲ. ಸ್ತ್ರೀಯರು ಈ ಗೋಲಂದಾಜಿಗಳಿಗೆ ಸಹಾಯವೆಸಗುತ್ತಲೇ ಇದ್ದು ಮಧ್ಯಾಹ್ನದ ನಂತರ ಬದಲಾವಣೆಯಾಗಬೇಕಾಗಿದ್ದಿತು.

ಗುಲಾಂ ಗೌಸ್‌ಖಾನನು ರಾತ್ರಿಯೆಲ್ಲಾ ಜಾಗರಣೆ ಮಾಡುತ್ತಿದ್ದನು. ಆತನ ಬಳಿಯೇ ಕೆಲಸ ಮಾಡುತ್ತಿದ್ದ ಸ್ತ್ರೀಯ ಮೇಲೆ ಅವನಿಗೆ ಪೂರ್ಣ ಭರವಸೆ ಇಲ್ಲದುದ

ರಿಂದ ಆತನು ಅವಳಿಗೆ ಪ್ರತಿಯಾಗಿ ಲಾಲತ ಬ್ರಾಹ್ಮಣನನ್ನು ತನ್ನ ಸಹಾಯಕ್ಕೆ ಕೊಡಬೇಕೆಂದು ರಾಣಿಯನ್ನು ಪ್ರಾರ್ಥಿಸಿದನು. ರಾಣಿಯು ಅವನ ಅಭೀಷ್ಟಕ್ಕೆ ಒಪ್ಪಿ ಲಾಲತನನ್ನು ಕಳುಹಿಸಿದಳು. ಆತನು ಬರುತ್ತಲೇ ಗೌಸ್ ಖಾನನ ತೂಕಡಿಕೆಯು ನಾಶವಾಯಿತು.

ಗೌಸ್ ಖಾನನು "ರಾಣೀ ಸಾಹೇಬರ ಸ್ತ್ರೀ ಗೋಲಂದಾಜಿಗಳು ಅತಿ ಚಪಲೆ ಯರು. ನನಗೆ ತಾಮಸ ಸ್ವಭಾವದವರು ಬೇಕೇ ವಿನಹ ಕೆಲಸದ ವೇಳೆಯಲ್ಲಿ ಸಂಕೇತ ಹಾಡುವವರ ಅವಶ್ಯಕತೆಯಿಲ್ಲ" ಎಂದನು.

ಲಾಲತನು "ನಾನೂ ಆಗಾಗ್ಗೆ ಛಂದಗಳನ್ನು ಹಾಡುತ್ತಾ ಕೆಲಸ ಮಾಡುತ್ತೇನೆ. ಖಾಸಾಹೇಬ್" ಎಂದನು.

"ಹಾಗಿದ್ದ ಮೇಲೆ" ಜನನಿ ಜನ್ಮಂದಿಯೋ ಹೈ ತೋಖೋಂ ಬಸ್ ಆಜ್ಹಿ ಕೆ ಲಾನೆ" **(जननी जनम दीयो है तोखे बस आजहि के लाने.)** ಎಂಬ ಗೀತವನ್ನು ಮಾತ್ರ ಹಾಡಲು ಮರೆಯಬೇಡಿ ಪಂಡಿತ್‌ಜೀ" ಎಂದು ಗೌಸ್ ಖಾನನು ಹೇಳಿದನು.

ಲಾಲತನು ಕೋಟೆಯ ಗೋಡೆಯ ಸಂದಿನಲ್ಲಿ ಹೋಗಿ ಇಣಿಕಿ ನೋಡಿದನು. ಜೀವನ್‌ಶಹ ಗುಡ್ಡದ ರಕ್ಷಣೆಯಲ್ಲಿ ಆದರ ಅಕ್ಕಪಕ್ಕದ ಗುಡ್ಡಗಳ ಹಿಂದಿನಿಂದ ಕೆಲವು ತೋಪುಗಳನ್ನು ಕೊಂಡು ಹೋಗುತ್ತಿದ್ದುದು ಗೋಚರವಾಯಿತು. ಗುಲಾಂ ಗೌಸ್ ಖಾನನೂ ಅದನ್ನು ನೋಡಿದನು. ಗುಲಾಂ ಗೌಸ್ ಖಾನನ ಕಣ್ಣುಗಳು ಕ್ಷಣ ಮಾತ್ರ ಗಿಡುಗನ ಕಣ್ಣಿನಷ್ಟು ಸೂಕ್ಷ್ಮವಾಯಿತು. ಆತನು "ಪಂಡಿತ್‌ಜೀ, ನನಗೆ ಕುಡಿಯು ವುದಕ್ಕೆ ಒಂದು ಲೋಟ ನೀರನ್ನು ಕೊಟ್ಟ ನಂತರ ನನ್ನ ಘನಗರಜ್ ಮತ್ತು ಅದರ ಸಹೋದರಿಯ ಪೌರುಷವನ್ನು ನೋಡು. ನಾನು ೧೨ ಗಂಟೆಗೆ ವಿಶ್ರಾಂತಿಗಾಗಿ ಹೋಗುವೆನು. ದೈವೇಚ್ಛೆಯಿದ್ದರೆ ಊಟ ಉಪಚಾರದನಂತರ ಸಂಜೆಗೆ ಮತ್ತೆ ನೋಡುತ್ತೇನೆ. ಆಮೇಲೆ ನಿದ್ದೆ. ಎಲ್ಲಿ ಒಂದು ಬಾರಿ ಆ ಗೀತವನ್ನು ಮನಸಿಟ್ಟು ಹಾಡು. ಒಂದು ಅಷ್ಟಪದಿಗಿಂತ ಜಾಸ್ತಿ ಬೇಡ" ಎಂದನು.

ಲಾಲತನು ಗೀತವನ್ನು ಸುಸ್ವರದಿಂದ ಹಾಡಿದನು. **जननी जनम दियो है तोखें बस आजहि के लाने.** ಗೀತೆಯು ಸಮಾಪ್ತವಾದನಂತರ ಗೌಸ್ ಖಾನನು ತೋಪುಗಳಿಗೆ ಮದ್ದಿರಿಸಿ ಹೊತ್ತಿಸಿದನು. 'ಘನಗರಜ್' ಮತ್ತು ಅದರ ಸಹೋದರಿ ಎನ್ನಿಸಿಕೊಳ್ಳುವ ತೋಪುಗಳು ಭೂಮಿ ಅದುರುವಷ್ಟು ಜೋರಾಗಿ ಘರ್ಜಿಸಿದವು. ದಕ್ಷಿಣದಕಡೆ ಇದ್ದ ಪ್ರತಿಯೊಂದು ಬುರುಜಿಯ ಮೇಲಿನಿಂದಲೂ ತೋಪುಗಳು ಒಂದಾದ ಮೇಲೆ ಒಂದು ದಡಬಡನೆ ಸಿಡಿಯಲಾರಂಭಿಸಿದವು. ತೋಪುಗಳಿಗೆ ಮೇಲಿಂದ ಮೇಲೆ ಮದ್ದು ತುಂಬಲು ಸಮರ್ಪಕವಾದ ಏರ್ಪಾಡಾಗಿದ್ದಿತು. ಒಂದು ತೋಪು ಹತ್ತಿಸಿ ಅದು ಸಿಡಿಯುವುದರೊಳಗಾಗಿ ಮತ್ತೊಂದು ಸಿದ್ಧವಿರುತ್ತಿದ್ದಿತು.

ರೋಜನ ತೋಪುಗಳು ಪ್ರತಿಧ್ವಾಳಿ ಮಾಡಿದವು. ಆದರೆ ಅದು ಇಷ್ಟು ತೀವ್ರವಾಗಿರ ಲಿಲ್ಲ. ಗೌಸ್‌ಖಾನನ ಗುಂಡಿನ ಸುರಿಮಳೆಯಿಂದ ರೋಜನ ಹೃದಯಕಂಪನವಾಗಿ ಅವನು ಉಚ್ಚಶ್ವಾಸವೆಳೆದನು. ಅವನ ದಕ್ಷಿಣದ ಕಡೆಗಿದ್ದ ಸೈನ್ಯವು ಭಿನ್ನಭಿನ್ನವಾಯಿತು. ಅನೇಕ ತೋಪುಗಳು ಶಾಂತವಾದವು. ಆದರೆ ಒಂದು ಮಾತ್ರ ಕೋಲಾಹಲಮಾಡು ತ್ತಲೇ ಇದ್ದಿತು. ಆ ವೇಳೆಗೆ ಮಧ್ಯಾಹ್ನವಾಯಿತು.

ಗುಲಾಂ ಗೌಸ್ ಖಾನನು "ನನಗೆ ಬಹಳ ಹಸಿವಾಗುತ್ತಿದೆ. ಪರಂಗಿಯವರ ಈ ತೋಪು ಇನ್ನೂ ಘರ್ಜಿಸುತ್ತಲೇ ಇವೆ. ಆಗಲಿ, ಅದನ್ನೂ ಒಂದು ಕೈ ನೋಡು ತ್ತೇನೆ ಎಂದು ಹೇಳಿ ಘನಗರಜವನ್ನು ಒಂದು ಅಂಗುಲ ಅತ್ತಿತ್ತ ತಿರುಗಿಸಿ, ಗುರಿಯಿಟ್ಟು, ಸಿಡಿಯುವ ಗುಂಡನ್ನು ತೋಪಿಗೇರಿಸಿ ಹೊಡೆದನು. ಈ ತೋಪುಗಳ ಮದ್ದು ಅಷ್ಟು ಹೊಗೆಯನ್ನು ಕಾರುತ್ತಿರಲಿಲ್ಲ. ಅದರಿಂದಾಗಿ ತೋಪ್ಚಿಯು ಗುಂಡು ಎಲ್ಲಿಗೆ ಬಿದ್ದು ಯಾವ ಹಾನಿಯನ್ನುಂಟು ಮಾಡಿದೆ ಎಂಬುದನ್ನು ಸುಲಭವಾಗಿ ಕಂಡುಕೊಳ್ಳ ಬಹುದಾಗಿದ್ದಿತು. ಗೌಸ್ ಖಾನನು ತನ್ನ ಹೊಡೆತದ ಸಫಲತೆಯನ್ನು ಕಂಡು ಸಂತೋಷದಿಂದ "ಅಗೋ! ನೋಡು! ಸತ್ತ" ಎಂದನು. ಅವನ ಸಂಗಡ ಇದ್ದ ಲಾಲತನು ತೋಪ್ಚಿಯು ಮಡಿದು ವೈರಿಯ ತೋಪು ತಿರುಗುಮುರುಗಾಗಿ ನಿಷ್ಪ್ರಯೋ ಜನವಾದುದನ್ನು ಕಂಡನು.

ದಕ್ಷಿಣದಲ್ಲಿದ್ದ ಆಂಗ್ಲೇಯರ ಕಂದುಕಗಳೆಲ್ಲವೂ ಮೌನವಾದವು. ಗೌಸ್ ಖಾನನು ಊಟ ಉಪಚಾರಗಳಿಗಾಗಿ ಹೊರಟು ಹೋದನಂತರ ಲಾಲತನು ಅವನ ಸ್ಥಾನದಲ್ಲಿ ಬಂದು ಕುಳಿತನು.

ಪೂರ್ವ ದಿಕ್ಕಿನಿಂದ ಆಂಗ್ಲೇಯರ ಗುಂಡುಗಳು ಬಂದು ಬೀಳಲಾರಂಭಿಸಿದುವು. ಕೆಲವು ಕಿಲ್ಲೆಯ ಮೇಲೂ, ಕೆಲವು ನಗರದಲ್ಲಿನ ಮನೆಗಳ ಮೇಲೂ ಬಿದ್ದು ಜನರಿಗೆ ನಷ್ಟವನ್ನುಂಟುಮಾಡಿದುವು. ಭಾವು ಬಕ್ಷಿಯು ಇದನ್ನು ಕಂಡು ತನ್ನ ಕಡಕ್ ಬಿಜಲಿಯ ಸ್ಥಾನವನ್ನು ಸ್ವಲ್ಪ ಪರಿವರ್ತನೆ ಮಾಡಿ ಗುರಿಯಿಟ್ಟು ಹೊಡೆಯಲಾರಂಭಿ ಸಿದನು. ಸ್ವಲ್ಪ ಹೊತ್ತಿನೊಳಗಾಗಿ ಆ ಪೂರ್ವದಲ್ಲಿದ್ದ ಆಂಗ್ಲೇಯರ ಕಂದಕವು ಸುಮ್ಮನಾಯಿತು. ತೋಪ್ಚಿಗಳೆಲ್ಲರೂ ಮಡಿದು ತೋಪುಗಳು ನಷ್ಟವಾದವು. ಬಕ್ಷಿಯು ತನ್ನ ತೋಪುಗಳನ್ನೂ, ತನ್ನ ಪತ್ನಿಯ ವಶಕ್ಕೆ ಒಪ್ಪಿಸಿ ಭೋಜನಕ್ಕಾಗಿ ಹೊರಟುಹೋದನು.

ಮುಂದರಿಯು ರಘುನಾಥಸಿಂಹನ ಸ್ಥಾನವನ್ನು ವಹಿಸಿಕೊಂಡಳು. ಸುಂದರಿಯು ದುಲ್ಹಾಜುವಿನ ತೋಪುಗಳನ್ನೂ, ಮೋತೀಬಾಯಿಯು ಖುದಾಬಕ್ಷನ ತೋಪುಗಳನ್ನೂ ವಹಿಸಿಕೊಂಡರು. ದಿವಾನ್ ಜವಹರ್‌ಸಿಂಹನನ್ನು ಸ್ವಲ್ಪ ಹೊತ್ತು ವಿಶ್ರಾಂತಿಗಾಗಿ ಕಳುಹಿಸಲಾಯಿತು. ರಾಣಿಯು ಕುದುರೆಯನ್ನು ಹತ್ತಿ ಕೋಟೆಯ ಎಲ್ಲಾ ಕಂದಕ

ಗಳನ್ನೂ ಈಕ್ಷಿಸಿ ತಕ್ಕ ವ್ಯವಸ್ಥೆಮಾಡಲು ಹೊರಟು ಮೂರನೆಯ ಜಾವದ ಹೊತ್ತಿಗೆ ಹಿಂದಿರುಗಿದಳು. ಜವಹರಸಿಂಹನು ಪುನಃ ತನ್ನ ಕಾರ್ಯವನ್ನು ಒಪ್ಪಿಸಿಕೊಂಡನು.

ನಾಲ್ಕನೆಯ ಜಾವದಿಂದ ಹಿಡಿದು ರಾತ್ರಿಯವರೆಗೆ ಸ್ತ್ರೀ ತೋಪ್ಚಿಯರು ಒಂದೇ ಸಮನೆ ಶ್ರದ್ಧೆಯಿಂದ ಕೆಲಸಮಾಡುತ್ತಲೇ ಇದ್ದರು. ರಾತ್ರಿಯೂ ಅವರು ಕೆಲಸ ಮಾಡಬೇಕಾಗಿದ್ದಿತು. ಕೇವಲ ಖಂಡೇರಾಯ ದ್ವಾರ ಮತ್ತು ಸಾಗರಕಿಡಕಿಯ ಬಳಿ ಸ್ತ್ರೀಯರು ಕೆಲಸಮಾಡುತ್ತಿರಲಿಲ್ಲ. ಸಾಗರಸಿಂಹನು ಖಂಡೇರಾಯ ಹೆಬ್ಬಾಗಿಲಿನ ಬಳಿ ಕೆಲಸಮಾಡುತ್ತಿದ್ದು ತನ್ನ ಕೈಕೆಳಗಿನ ಹುದ್ದೇದಾರನನ್ನು ಸ್ವತಃ ಚುನಾಯಿಸಿ ಕೊಂಡಿದ್ದನು. ಮತ್ತು ಸಾಗರ ಕಿಡಕಿಯ ಬಳಿ ಬರಹಾಮುದ್ದೀನ್ ಎಂಬ ಬುಂದೇಲು ಖಂಡೀ ಪಠಾಣನು ಕೆಲಸಮಾಡುತ್ತಿದ್ದನು.

ಈತನು ಅಲ್ಲಿ ಕೆಲಸಮಾಡುತ್ತಿದ್ದುದು ಪೀರಾಲಿಯ ಮನಸ್ಸಿಗೆ ಬರಲಿಲ್ಲ. ಪೀರಾಲಿಯು "ಖಾನ್‌ಸಾಹೇಬ್, ನಿಮಗೆ ವೃಥಾ ಈ ಕಷ್ಟವನ್ನು ಕೊಡಲಾಯಿತು. ನಾನು ಹಗಲಿರುಳು ಈ ಚಿಕ್ಕ ಕಿಡಕಿಯ ಮೇಲುಸ್ತುವಾರಿ ನೋಡಿಕೊಳ್ಳಲು ತಯಾ ರಾಗಿದ್ದೇನೆ" ಎಂದನು.

ಬರಹಾಮುದ್ದೀನನು "ಪೀರ್‌ಸಾಹೇಬರೇ, ನೀವು ರಾತ್ರಿಯೆಲ್ಲಾ ಎಚ್ಚೆತ್ತು ಕೆಲಸಮಾಡಿರುವಿರಿ. ಆದುದರಿಂದ ಈಗ ಸ್ವಲ್ಪ ವಿಶ್ರಮಿಸಿಕೊಳ್ಳಿ" ಎಂದನು.

ಕಳೆದ ರಾತ್ರೆಯಂತೂ ಎಲ್ಲರೂ ಎಚ್ಚೆತ್ತಿದ್ದರು. ನೀವೂ ರಾತ್ರಿಯೆಲ್ಲಾ ಜಾಗರಣೆಮಾಡಿರಬಹುದಲ್ಲವೆ ?"

"ಆಪ್ಪಣೆಯಾದ ಮೇಲೆ ಅದನ್ನು ಪಾಲಿಸಲೇಬೇಕು."

"ಅರೆ! ಅಂತಹುದೇನು? ಮಲಗಿಕೊಳ್ಳಿರಿ ಸಾಹೇಬರೇ ಬೇಕಿದ್ದರೆ ನಾಳೆ ನನಗೆ ಸಹಾಯ ಮಾಡುವಿರಂತೆ."

"ಬೇಡ, ಜನರಲ್ ಸಾಹೇಬರಿಗೆ ತಿಳಿದರೆ ಅವರು ಕೋಪಗೊಳ್ಳುವರು ಮತ್ತು ಮಹಾರಾಣಿಯರಿಗೆ ತಿಳಿದರೆ ಅವರಿಗೆ ಮುಖವನ್ನು ತೋರಿಸುವಂತಿಲ್ಲ."

"ಹಾಗಿದ್ದರೆ ಸರಿ. ಆದರೆ ಒಂದು ಮಾತು—ಯಾರಿಗೂ ತಿಳಿಯಬಾರದು".

"ನನಗೆ ಅವರಿವರೊಡನೆ ಮಾತುಕತೆಯಾಡುವ ಅವಶ್ಯಕತೆಯಾದರೂ ಏನು?"

"ಮಾತು ಎಂತಹದೆಂದರೆ, ಅಕಸ್ಮಾತ್ತಾಗಿ ಅದೇನಾದರೂ ಬಹಿರಂಗವಾದರೆ ತನ್ನ ತಲೆಯುರುಳುವುದು."

"ಚಿಂತೆಯಿಲ್ಲ, ನನ್ನಲ್ಲಿ ವಿಶ್ವಾಸವಿಟ್ಟು ಹೇಳಿ."

"ಆಂಗ್ಲೇಯರ ಶಿಬಿರದಲ್ಲಿ ಏನೇನಾಗುತ್ತಿದೆ, ಏನೇನು ಆಗುವುದಿದೆ, ಎಲ್ಲೆಲ್ಲಿ ಹೊಸ ಹೊಸ ಕಂದುಕಗಳನ್ನು ತಯಾರಿಸಿರುವರು, ಯಾವಕಡೆಯಿಂದ ತೀವ್ರ ಧಾಳಿ ಯಾಗಬಹುದು, ಎಂಬ ವಿಷಯಗಳನ್ನೆಲ್ಲಾ ಗುಪ್ತಚಾರನಂತೆ ತಿಳಿದುಕೊಂಡು

ಬರುವ ಭಾರವು ನನ್ನ ಮೇಲೆ ಬಿದ್ದಿದೆ. ಆಂಗ್ಲೇಯರ ಶಿಬಿರದಲ್ಲಿ ಭೋಪಾಲ ಸಂಸ್ಥಾನದ ಸಿಪಾಯಿಗಳೂ ಇದ್ದಾರೆ. ಅವರಲ್ಲಿ ನನ್ನ ಸಂಬಂಧೀಕನೊಬ್ಬ ನಿರುತ್ತಾನೆ. ಈಗ ಕೆಲವು ದಿನಗಳ ಹಿಂದೆ ನಾನು ತಾಲ್ ಬೆಹಟ್ ಕಡೆಗೆ ಹೋಗಿದ್ದಾಗ ಅವನನ್ನು ಕಂಡಿದ್ದೆ. ಅವನು ಹಲವರೊಡನೆ ಸ್ನೇಹ ಬೆಳಸಿದ್ದು ಸರಿಯಾದ ಸಂಗತಿಗಳನ್ನು ತಿಳಿದುಕೊಂಡಿರುತ್ತಾನೆ. ಆ ವರ್ತಮಾನಗಳು ನಮಗೆ ಬಹಳ ಉಪಕಾರಿಯಾಗಿರುವುವು. ಆದುದರಿಂದ ಆ ಸಂಗತಿಗಳನ್ನು ತಿಳಿದುಕೊಂಡುಬರಲು ನಾನು ರಾತ್ರೆಯಲ್ಲಿ ಗುಪ್ತವಾಗಿ ನಗರದಿಂದಾಚೆಗೆ ಹೋಗಿ ಪ್ರಾತಃಕಾಲಕ್ಕೆ ಮುಂಚೆಯೇ ಹಿಂತಿರುಗುವೆನು. ಈ ವಿಷಯವು ಆಂಗ್ಲೇಯರಿಗೆ ತಿಳಿದರೆ ನನ್ನನ್ನು ತುಂಡರಿಸುವರು, ಅಲ್ಲದೆ ಆಂಗ್ಲೇಯರ ಪಡೆಯಲ್ಲಿರುವ ನನ್ನ ಬಂಧು ಅವನ ಸಂಗಡಿಗರೂ ನಾಶವಾಗುವರು. ಮತ್ತು ರಾಣೀ ಸಾಹೇಬರಿಗೆ ಅತ್ಯಂತ ನಷ್ಟವುಂಟಾಗುವುದು."

"ನಾನು ಯಾರಲ್ಲಿಯೂ ಹೇಳುವುದಿಲ್ಲ. ಆದರೆ ನಾನು ವಿಶ್ರಾಂತಿಗಾಗಿ ಹೊರಟು ಹೋದರೆ, ಅಥವಾ ನಿದ್ರೆಮಾಡಿಬಿಟ್ಟರೆ ನಿಮ್ಮ ಸ್ಥಾನವು ಖಾಲಿಯಾಗಿ ಬಿಡುವುದು. ಆಗ ಶತ್ರುಗಳೇನಾದರೂ ರಾತ್ರಿಯಲ್ಲಿ ಧಾಳಿಮಾಡಿದರೆ ನಮಗೆ ಬಹಳ ನಷ್ಟವಾಗುವುದಿಲ್ಲವೇ ?"

"ಇದು ಬಹಳ ಚಿಕ್ಕ ಕಿಡಕಿ, ಈ ಕಿಡಕಿಯಿರುವುದೇ ಬಹುಶಃ ಆಂಗ್ಲೇಯರಿಗೆ ತಿಳಿದಿರಲಾರದು."

"ನೀವು ಯಾವುದು ಉಚಿತವೆಂದು ಭಾವಿಸುವಿರೋ ಅಂತೆಯೇ ಆಗಲಿ. ಆದರೆ ಎಲ್ಲಾ ವಿಚಾರದಲ್ಲೂ ಈ ಸ್ಥಾನದಲ್ಲೇ ಇರುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ."

"ಹೌದು, ನೀವಿಲ್ಲಿಯೇ ಇರಿ. ನಾನು ಎಲ್ಲರೂ ನಿದ್ರಿಸಿದ ಮೇಲೆ ಹೊರ ಹೊರಡುವೆನು."

"ಆದರೆ ಬಾಗಿಲುಗಳನ್ನು ಮಾತ್ರ ತೆರೆಯಬಾರದು."

"ಬಾಗಿಲುಗಳಿಗೆ ಬೀಗ ಮುದ್ರೆಹಾಕಿ ಭದ್ರಮಾಡಲಾಗಿದೆ. ನಾನು ಮೋರಿಯಲ್ಲಿ ಇಳಿದು ಹೋಗುವೆನು."

"ಮೋರಿ ! ಯಾವ ಮೋರಿ ?"

"ಅದೇ, ಕಿಡಕಿಯ ಬಗಲಿನಲ್ಲಿಲ್ಲವೆ ಅದರಲ್ಲಿ."

ರಾತ್ರೆ ಎಲ್ಲರೂ ನಿದ್ರಿಸಿದನಂತರ ಪೀರಾಲಿಯು ಬರಹಾಮುದ್ದೀನನಿಗೆ ಮೋರಿಯನ್ನು ತೋರಿಸಿ ಅದರ ಮೂಲಕ ಹೊರಬಿದ್ದನು.

ಸುಮಾರು ಅರ್ಧಮೈಲಿ ದೂರ ನಡೆದನಂತರ ಪೀರಾಲಿಯು ಆಂಗ್ಲೇಯರ

ಶಿಬಿರವನ್ನು ಸೇರಿ, ಮೊದಲೇ ನಿಶ್ಚಯಪಡಿಸಿಕೊಂಡಿದ್ದಂತೆ ಸಂಕೇತ ವಚನವನ್ನು ಹೇಳಿದನು. ಅಲ್ಲಿದ್ದ ಕಾವಲುಗಾರನು ಅವನನ್ನು ಮುಂದೆ ಹೋಗಲು ಬಿಟ್ಟನು. ಅನೇಕ ಕಡೆಗಳಲ್ಲಿ ತಡೆಯಲ್ಪಟ್ಟರೂ ಸಂಕೇತದ ದ್ವಾರಾ ಅನುಮತಿಹೊಂದಿ ಪೀರಾಲಿಯು ರೋಜ್ ಮತ್ತು ಆತನ ಸಹೋದ್ಯೋಗಿ ದಳಪತಿಗಳ ಮುಂದೆ ಬಂದು ನಿಂತನು. ದ್ವಿಭಾಷಿಯ ಮೂಲಕ ಒಡನೆಯೇ ಸಂಭಾಷಣೆಗೆ ಆರಂಭವಾಯಿತು.

ರೋಜ್—ಕಿಲ್ಲೆಯಿಂದ ಗುಂಡುಗಳ ಸುರಿಮಳೆಯಾಯಿತಲ್ಲಾ ಅದರ ಪ್ರಬಂಧ ಮಾಡಿದ ನಾಯಕನಾರು ?

ಪೀರಾಲಿ—ಗುಲಾಂ ಗೌಸ್ ಖಾ಼ ಮತ್ತು ಭಾವು ಬಕ್ಷಿ.

ರೋಜನು ಕ್ರಾಂತಿಕಾರರ ಹೆಸರಿನ ಪಟ್ಟಿಯನ್ನು ತರಿಸಿ ತಿರುಗುಮುರುಗ ಮಾಡಿದನು. ಅದರಲ್ಲಿ ಇವರ ಹೆಸರಿರಲಿಲ್ಲ.

ರೋಜ್—ಈ ಹೊಸ ವ್ಯಕ್ತಿಗಳಾರು ?

ಪೀರಾಲಿ—ರಾಣೀ ಸಾಹೇಬರ ನೌಕರರು.

ರೋಜ್—ಓರ್ಛಾ ಮತ್ತು ಸೈಯರ್ ದ್ವಾರಗಳ ಬಳಿ ಯಾರ್ಯಾರಿರುವರು ?

ಪೀರಾಲಿ—ಓರ್ಛಾ ದ್ವಾರದ ಮೇಲೆ ದಿವಾ಼ ದುಲ್ಹಾಜು. ಮತ್ತು ಸೈಯರ್ ಬಾಗಿಲಿನ ಬಳಿ ಖುದಾಬಕ್ಷನೂ ಇರುವರು.

ರೋಜನು ಮತ್ತೆ ಪಟ್ಟಿಯನ್ನು ಪರಿಶೀಲಿಸಿದನು. ಅದರಲ್ಲಿ ಈ ಹೆಸರುಗಳು ಕಂಡುಬರಲಿಲ್ಲ.

ರೋಜ್—ಯಾರಾದರೂ ಲಾಲತ ಬ್ರಾಹ್ಮಣನೆಂಬುವವನಿರುವನೆ ?

ಪೀರಾಲಿ—ಹೌದು, ಕಿಲ್ಲೆಯಲ್ಲಿದ್ದಾನೆ

ರೋಜನು ಹಲ್ಲು ಕಚ್ಚಿದನು—"ಜನರಲ್ಲನು ಯಾರು ?"

ಪೀರಾಲಿ—ಸ್ವಯಂ ಮಹಾರಾಣಿ ಸಾಹೇಬರು. ಅವರ ಅಧೀನದಲ್ಲಿ ಜಹಗೀರ್‌ದಾರ್ ದಿವಾ಼ ಜವಹರಸಿಂಹ ಕೆಲಸಮಾಡುತ್ತಿರುವನು.

ರೋಜ್—ಒಟ್ಟು ತೋಪು ಹಾರಿಸುವವರು ಎಷ್ಟು ಮಂದಿ ಇರುವರು?

ಪೀರಾಲಿ—ಲೆಖ್ಖವಿಲ್ಲದಷ್ಟು, ನೂರಾರು ಮಂದಿ. ಅನೇಕ ಸ್ತ್ರೀ ಗೋಲಂದಾಜಿಗಳೂ ಇರುವರು.

ರೋಜ್—ಬೈ ಜೋವ್! ಸ್ಟುವರ್ಟ ಈ ಝಾನ್ಸಿಯು ಮಹತ್ತರವಾದ ನರಕ (Hell). ಸ್ತ್ರೀ ಗೋಲಂದಾಜಿಗಳಂತೆ ! ನಾಳೆ ದುರ್ಬೀನಿನ ಮೂಲಕ ಚೆನ್ನಾಗಿ ನೋಡುತ್ತೇನೆ.

ಸ್ಟುವರ್ಟ್—ತುಪಾಕಿಯ ಮದ್ದನ್ನು ತಯಾರಿಸುವ ಕಾರ್ಖಾನೆ ಯಾವುದಾದರೂ ಇದೆಯೆ ? ಅಥವಾ ಹಿಂದೆ ತಯಾರು ಮಾಡಿದ್ದ ಮದ್ದನ್ನೇ ಶೇಖರಿಸಿಟ್ಟಿರುವರೆ ?

ರೋಜ್—It is smokeless powder, Stuart (ಹೊಗೆಯನ್ನು ಕಾರದಂತಹ ಮದ್ದು, ಸ್ಟುವರ್ಟ್) ಉತ್ತರದ ಹೆಬ್ಬಾಗಿಲು ಯಾರ ಉಸ್ತುವಾರಿಕೆಯಲ್ಲಿದೆ?

ಪೀರಾಲಿ—ಠಾಕೂರರ ನೇಯ್ಗೆಯವರ ಮತ್ತು ರೈತಾಪಿ ಜನರ ವಶದಲ್ಲಿದೆ. ದಾತಿಯಾ ದ್ವಾರವು ಗಾಣಿಗರ ವಶದಲ್ಲಿದೆ.

ರೋಜ್—The whole People against us! (ಜನತೆಯೆಲ್ಲವೂ ನಮ್ಮನ್ನು ಎದುರಿಸಲು ಕಾದಿದೆ). ಆಗಲಿ ನೀನು ಯಾವ ಸ್ಥಳದಲ್ಲಿ ಕೆಲಸಮಾಡುತ್ತಿರುವೆ?

ಪೀರಾಲಿ—ಸಾಗರ್ ಕಿಡಕಿಯ ಬಳಿ.

ರೋಜ್—ಅದನ್ನು ನಮ್ಮ ವಶ ಮಾಡಬಲ್ಲೆಯಾ?

ಪೀರಾಲಿ—ಓಹೊ! ಸಂತೋಷದಿಂದ. ಆದರೆ ಅದರಿಂದ ನಿಮಗೆ ಯಾವ ಪ್ರಯೋಜನವೂ ಆಗಲಾರದು. ಸಾಗರ್ ಕಿಡಕಿಯ ಹಿಂಭಾಗದಲ್ಲಿ ಖಜಾಂಚಿಯ ಮನೆಯಿದೆ. ಅದರ ಮೇಲೆ ತೋಪನ್ನಿರಿಸಿರುವರು. ಅದು ನನ್ನ ವಶದಲ್ಲಿಲ್ಲ. ಅಲ್ಲಿ ಪಠಾಣರೂ ಠಾಕೂರರೂ ಕೆಲಸ ಮಾಡುತ್ತಿರುವರು.

ರೋಜ್—ಹೆಂಗಸರಾರಾದರೂ ನಮಗೆ ನೆರವಾಗುವರೆ?

ಪೀರಾಲಿ—ತೋಬಾ! ತೋಬಾ! ಝಾನ್ಸಿಯ ಹೆಂಗಸರು ಸೈತಾನರು. ನರ್ತಕಿಯೊಬ್ಬಳು ನನಗೆ ಮೊದಲಿನಿಂದಲೂ ಪರಿಚಿತಳಿರುವಳು. ಆದರೆ ಅವಳು ಗೂಢಚಾರ ದಳದ ಮುಖ್ಯಾಧಿಕಾರಿಯಾಗಿರುವಳು. ಅಲ್ಲದೆ ಈಗ ತೋಪ್ಚಿಯೂ ಆಗಿರುವಳು.

ರೋಜ್—Dancing girl a gunner! (ನರ್ತಕಿಯು ತೋಪ್ಚಿಯೆ!) What else have I to hear in this damned accursed place! (ಈ ಸೈತಾನ ನರಕದಲ್ಲಿ ನಾನಿನ್ನೇನು ಆಶ್ಚರ್ಯದ ಮಾತುಗಳನ್ನು ಕೇಳಬೇಕಾಗಿದೆಯೋ).

ಸ್ಟುವರ್ಟ್—ಗೂಢಚಾರ ವಿಭಾಗದ ಮುಖ್ಯಾಧಿಕಾರಿಯು ಒಬ್ಬ ಮೋತೀಸಾಯಿ ಎಂದು ಕೇಳಿದ್ದೇವಲ್ಲಾ?

ಪೀರಾಲಿ—ಅಲ್ಲ. ಆ ಮುಖ್ಯಾಧಿಕಾರಿಯು ಇದೇ ನರ್ತಕಿ. ಅವಳ ಹೆಸರು ಮೋತೀಬಾಯಿಯೆಂದು.

ಅವರೆಲ್ಲರೂ ನಗಲಾರಂಭಿಸಿದರು.

ರೋಜನು "We have made fools of us (ನಾವೆಲ್ಲರೂ ಬೇಖೂಫರಾದೆವು) ಯಾವುದಾದರೂ ಒಂದು ಹೆಬ್ಬಾಗಿಲಿನ ಉಸ್ತುವಾರಿಯಲ್ಲಿರುವ ಜನರನ್ನು

ನಮಗೆ ಪರಿಚಯಮಾಡಿಕೊಡು. ಅವರಿಗೂ ಮತ್ತು ನಿನಗೂ ಹೇರಳವಾದ ಪುರಸ್ಕಾರ ವನ್ನು ಕೊಡುವೆವು.

ಪೀರಾಲಿ—ಪ್ರಯತ್ನಿಸುತ್ತೇನೆ.

ರೋಜ್—ನಾವು ಎಲ್ಲಿಂದ ತೋಪುಗಳನ್ನು ಹಾರಿಸಿದರೆ ನಗರದಲ್ಲಿಯೂ ಮತ್ತು ಕಿಲ್ಲೆಯ ಮೇಲೂ ಸರಿಯಾಗಿ ಬೀಳುವುದೆಂಬುದನ್ನು ಹೇಳಬಲ್ಲೆಯಾ?

ಪೀರಾಲಿ—ಜಾರ್ ಗುಡ್ಡದಿಂದ.

ರೋಜ್—Oh! Silly. (ಮೂರ್ಖ) ಜಾರ್ ಗುಡ್ಡದಿಂದ ಹಾರಿಸಿದರೆ ಕಿಲ್ಲೆಗೇನೇನೂ ಅಪಾಯವಾಗುವುದಿಲ್ಲ.

ಪೀರಾಲಿ—ಇಲ್ಲರಿ, ಇಲ್ಲ. ಮಠೀಲಿ ಗುಡ್ಡದ ಮೇಲಿರುವ ಕಿಲ್ಲೆಯ ಪಶ್ಚಿಮದ ಗೋಡೆಯು ಅಷ್ಟು ಎತ್ತರವಿಲ್ಲ. ಅದರ ಬಲಗಡೆಗೆ ಶಂಕರಗಡ ಕಿಲ್ಲೆಯ ಉತ್ತರ ಪಶ್ಚಿಮ ಭಾಗಗಳಿವೆ. ಇದರಲ್ಲಿ ಕುಡಿಯುವ ಸೀನೀರಿನ ಭಾವಿಯೂ ಮತ್ತು ರಾಣೀ ಸಾಹೇಬರು ಪೂಜೆಮಾಡುವ ಮಂದಿರವೂ ಇವೆ. ಸಿಪಾಯಿಗಿರಿ ಕೆಲಸಮಾಡುತ್ತಿರುವ ಸ್ತ್ರೀಯರೆಲ್ಲರೂ ಮಧ್ಯಾಹ್ನ ಅಥವಾ ಸಂಜೆಯವೇಳೆಗೆ ಅಲ್ಲಿ ಒಟ್ಟುಗೂಡುತ್ತಾರೆ. ಈ ಜಾಗವನ್ನು ಒಡೆದರೆ ಕಿಲ್ಲೆಯು ಕೈವಶವಾಗುವುದಲ್ಲದೇ ಪಟ್ಟಣದ ಒಂದು ಕಟ್ಟಡವು ಉಳಿಯುವಂತಿಲ್ಲ.

ರೋಜ್—ಉತ್ತರ ದಿಕ್ಕಿನಿಂದ ಹೇಗೆ?

ಪೀರಾಲಿ—ಉನಾವ್ ದ್ವಾರ ಮತ್ತು ಭಾಂಡೇರಿ ದ್ವಾರಗಳ ಎದುರಿಗೆ ಸರಿಯಾಗಿ ಮಠೀಲಿ ಗುಡ್ಡವಿರುವುದು. ಅದರಿಂದಾಗಿ ನಿಮ್ಮ ತೋಪುಗಳ ಕಾರ್ಯಾಚರಣೆಯು ಫಲಕಾರಿಯಾಗುವುದಿಲ್ಲ.

ರೋಜ್—ಅಚ್ಛಾ! ನೀನು ನನಗೆ ದಕ್ಷಿಣದ ಹೆಬ್ಬಾಗಿಲಿನವನೊಬ್ಬನನ್ನು ಪರಿಚಯು ಮಾಡಿಕೊಡು.

ಪೀರಾಲಿ—ನಾನು ಆಗಲೆ ಬಿನ್ನವಿಸಿಕೊಳ್ಳಲಿಲ್ಲವೇ—ಪ್ರಯತ್ನಿಸುವೆನೆಂದು. ರೋಜನು ಪೀರಾಲಿಗೆ ಧನ್ಯವಾದಗಳನ್ನರ್ಪಿಸಿ ಕಳುಹಿಸಿಕೊಟ್ಟನು.

ಪೀರಾಲಿಯು ಸಾಗರ್ ಕಿಡಕಿಯ ಬಳಿ ಹಿಂತಿರುಗಿ ಬಂದ ಮೇಲೆ ಬರಹಾ ಮುದ್ದೀನನನ್ನು ಎಚ್ಚರಗೊಳಿಸಿ "ಖುದಾ, ಖುದಾ ಎನ್ನುತ್ತಲೇ ಓಡಿ ಬಂದೆ. ಇಂದು ಸ್ವಲ್ಪ ಸಮಾಚಾರ ದೊರಕಿತು. ನಾಳೆ ಸಮಯ ದೊರೆತರೆ ಮತ್ತೆ ಹೋಗಿ ಬರುತ್ತೇನೆ." ಎಂದು ಹೇಳಿದನು.

"ಇಂದು ಸ್ವಲ್ಪವೂ ಸಮಾಚಾರ ದೊರಕದೇ ಇದ್ದಿದ್ದರೆ ನೀನು ಪಟ್ಟ ಶ್ರಮವೆಲ್ಲವೂ ನಿರರ್ಥಕವಾಗುತ್ತಿದ್ದಿತಲ್ಲವೆ?" ಎಂದು ಬರಹಾಮುದ್ದೀನನು ಕೇಳಿದನು.

"ವ್ಯರ್ಥವೇನೂ ಆಗಲಿಲ್ಲ. ಆಂಗ್ಲೇಯರ ಒಂಧು ತೋಪಾದರೂ ಹಿಂದೂ

ಸ್ಥಾನಿ ಸಿಪಾಯಿಗಳ ವಶದಲ್ಲಿಲ್ಲ. ಎಲ್ಲವನ್ನೂ ಅವರ ಹತೋಟಿಯಲ್ಲಿಟ್ಟುಕೊಂಡಿರುವ ರೆಂಬುದಾದರೂ ತಿಳಿಯಿತಲ್ಲಾ" ಎಂದು ಪೀರಾಲಿಯು ಉತ್ತರವಿತ್ತನು.

"ಆಂಗ್ಲೇಯರು ಹಿಂದೂಸ್ಥಾನೀ ಸಿಪಾಯಿಗಳಲ್ಲಿ ಭರವಸೆಯನ್ನಿಡುತ್ತಿಲ್ಲ ವೆಂಬುದು ನನಗೆ ಮೊದಲಿನಿಂದಲೂ ತಿಳಿದ ವಿಷಯವೇ."

"ಹಾಗಿದ್ದಾಗ್ಯೂ ಆಂಗ್ಲೇಯರೊಡನೆ ಭೋಪಾಲ್, ಹೈದರಾಬಾದು, ಮತ್ತು ಓರ್ಛಾ ಸಂಸ್ಥಾನಗಳ ದಳಗಳೂ ಮತ್ತು ಮದರಾಸಿನ ಕಾಲೀ ಪಲ್ಟಣ ಒಂದೂ ಇವೆ."

"ಓರ್ಛಾ ಸಂಸ್ಥಾನದ ತುಕ್ಕಡಿಯನ್ನು ಉತ್ತರಕ್ಕೆ ಅಂಜನೀಗುಡ್ಡದ ಮೇಲೆ ಸ್ಥಾಪಿಸಿದ್ದಾರೆ."

"ಇವೆಲ್ಲಾ ನಿನಗೆ ಹೇಗೆ ಗೊತ್ತು ?"

"ಕಿಲ್ಲೆಯಲ್ಲಿ ಚರ್ಚೆ ನಡೆಯುತ್ತಿದ್ದಿತು. ರಾಣೀ ಸಾಹೇಬರ ಗೂಢಚಾರರು ಆ ಸಮಾಚಾರವನ್ನು ತಂದಿರಬಹುದು."

"ಬರಹಾಮುದ್ದೀನನು ಚತುರನಂತೆ ಗೋಚರವಾಗುವುದು. ಸ್ವಲ್ಪ ಸಾವಧಾನ ದಿಂದ ಕೆಲಸ ಜರುಗಿಸಬೇಕು" ಎಂದು ಪೀರಾಲಿಯು ಮನಸ್ಸಿನಲ್ಲಿಯೇ ಅಂದು ಕೊಂಡನು.

## ೬೭

ಅದೇ ದಿನ ರಾತ್ರಿ ರೋಜನು ವಿವೇಚನೆಮಾಡಿ ಜಾರ್‌ಗುಡ್ಡದ ಮೇಲೆ ತೋಪು ಗಳನ್ನೇರಿಸಿ ಅವುಗಳಿಗೆ ತಕ್ಕ ಕಂದುಕಗಳನ್ನು ತಯಾರಿಸಿದನು. ಪ್ರಾತಃಕಾಲವಾಗು ತ್ತಲೇ ತೋಪುಗಳ ಬಾಯಿಗಳನ್ನು ಬೇಕಾದ ದಿಕ್ಕುಗಳಿಗೆ ತಿರುಗಿಸಿ ಗುರಿಯಿಟ್ಟು ಸಿದ್ಧ ಪಡಿಸಲಾಯಿತು. ತೋಪುಗಳಿಗೆ ಅಗ್ನಿಸ್ಪರ್ಶ ಮಾಡಿಸುತ್ತಲೇ ನಗರದ ವಿಧ್ವಂಸವು ಆರಂಭವಾಯಿತು. ಜನರು ಅಸಂಖ್ಯಾತರಾಗಿ ಗಾಯಹೊಂದಿದರು. ಅನೇಕರು ಮಡಿದರು. ನಗರದಲ್ಲೆಲ್ಲಾ ಹಾಹಾಕಾರವೆದ್ದಿತು. ಝಾನ್ಸಿಯ ಇಕ್ಕಟ್ಟಾದ ರಸ್ತೆ ಗಳೆಲ್ಲಾ ಜನಶೂನ್ಯವಾದವು. ಅನೇಕರು ಕ್ಷುತ್ಪಿಪಾಸೆಯಿಂದ ಅಸುವನ್ನು ನೀಗಿದರು. ಕಿಲ್ಲೆಯ ಪಶ್ಚಿಮದ ಗೋಡೆಯಲ್ಲಿ ಒಂದು ದೊಡ್ಡ ರಂಧ್ರವೇರ್ಪಟ್ಟಿತು.

ನಗರದ ಸ್ಥಿತಿಯನ್ನು ಕಂಡು ರಾಣಿಗೆ ಅತ್ಯಂತ ದುಃಖವಾಯಿತು. ತಕ್ಷಣವೇ ರಾಣಿಯು ಕುದುರೆಯ ಮೇಲೆ ಕುಳಿತು, ಗುಂಡುಗಳ ಸುರಿಮಳೆಯನ್ನೂ ಲೆಕ್ಕಿಸದೆ ಮನೆಮನೆಗೂ ಹೋಗಿ ಉತ್ಸಾಹ ಪ್ರದಾನ ಮಾಡಿ ಹುರಿದುಂಬಿಸಿದಳು. ಮನೆಮಠ ಗಳಿಗೆ ಹತ್ತಿದ ಅಗ್ನಿ ಜ್ವಾಲೆಯನ್ನು ಆರಿಸಲು ತಕ್ಕ ಏರ್ಪಾಡುಮಾಡಿ ಜನರಿಗೆ ಅನ್ನಾ ಹಾರಗಳು ಸಮರ್ಪಕವಾಗಿ ದೊರಕುವಂತೆ ಅನ್ನ ಕ್ಷೇತ್ರಗಳನ್ನು ನಿರ್ಮಿಸಿ ಕಿಲ್ಲೆಗೆ

ಹಿಂದಿರುಗಿದಳು.

ಒಡನೆಯೇ ಗುಲಾಂ ಗೌಸ್ ಖಾನನನ್ನು ಕಾಣಲು ಹೋದಳು. ಆಕೆಯನ್ನು ಕಂಡು ಗೌಸ್ ಖಾನನು ಭಕ್ತಿಪೂರ್ವಕವಾಗಿ ಪ್ರಣಾಮಮಾಡಿದನು.

"ಖಾಸಾಹೇಬ್, ಇಂದು ಪಶ್ಚಿಮದೆಡೆ ಹೊಸ ವೈರಿ ಸ್ಥಾನಗಳೇರ್ಪಟ್ಟಿಂತಿವೆ. ಅವುಗಳನ್ನು ಎದುರಿಸಿ ತಡೆಗಟ್ಟಲೇಬೇಕು. ನಗರದ ಕಾಲುಭಾಗವು ಇಂದು ನಾಶ ವಾಯಿತು. ನಾಳೆ ಇನ್ನೇನು ವಿಪರೀತವಾಗುವುದೋ ತಿಳಿಯದು" ಎಂದು ರಾಣಿಯು ಹೇಳಿದಳು.

"ಸರ್ಕಾರ್, ನೀವು ದಕ್ಷಿಣ ದಿಕ್ಕಿನಲ್ಲಿರುವ ಕಂದುಕಗಳನ್ನು ನೋಡಿಕೊಳ್ಳಿ; ನಾನು ಆ ಆಂಗ್ಲೇಯರ ಹೊಸಸ್ಥಾನಗಳ ವಿಚಾರವನ್ನು ನೋಡಿಕೊಳ್ಳುತ್ತೇನೆ" ಎಂದು ಖಾಸಾಹೇಬನು ನಿವೇದಿಸಿಕೊಂಡನು.

ರಾಣಿಯು "ನಾನು ಮೋತೀಬಾಯಿಯನ್ನು ಕಳುಹಿಸುತ್ತೇನೆ" ಎಂದಳು.

ಗೌಸ್ ಖಾನನು "ಆಕೆಯು ಅತ್ಯಂತ ಚತುರಳಾದ ತೋಪ್ಚಿಯೇನೋ ಸರಿಯೆ. ಆದರೆ ಅವಳು ಈ ಕಂದುಕವನ್ನು ಸಂರಕ್ಷಿಸಲಾರಳು. ಆಂಗ್ಲೇಯರು ದಕ್ಷಿಣದಲ್ಲಲ್ಲದೇ ಮತ್ಯಾವ ಕಡೆಯಿಂದಲೂ ಮುಂದುವರಿಯಲಾರರು" ಎಂದನು.

ರಾಣಿಯು "ನೀನಾರೀತಿ ಭಾವಿಸುವ ಕಾರಣವೇನು ?" ಎಂದಳು.

ಗೌಸ್ ಖಾನನು ಉತ್ತರಕೊಡುತ್ತಾ "ಹುಜೂರ್, ಈ ದಿಕ್ಕಿದಿಂದ ಅವರಿಗೆ ಕಿಲ್ಲೆಯು ಅತ್ಯಂತ ಸಮೀಪವಾಗುವುದು" ಎಂದು ಹೇಳಿದನು.

"ಬಕ್ಷಿಣಿಯನ್ನು ಇಲ್ಲಿಗೆ ಕಳುಹಿಸಲೆ ?"

ಗೌಸ್ ಖಾನನು ಹರ್ಷದಿಂದ "ಕಳುಹಿಸಿ ಕೊಡಿ, ಸರ್ಕಾರ್. ಆಕೆಯು ಸತ್ಕುಲ ಪ್ರಸೂತಳು" ಎಂದನು.

ರಾಣಿಯ ನೋಟವು ಕ್ಷಣಕಾಲ ಬದಲಿಸಿತು. ಆದರೆ ಆಕೆಯು ಅದನ್ನು ಒಡನೆಯೇ ತಹಬಂದಿಗೆ ತಂದು "ಆತ್ಮತ್ಯಾಗದಲ್ಲಿ ಆ ವೇಶ್ಯಾಕನ್ಯೆಯು ಯಾವ ಸತ್ಕುಲಪ್ರಸೂತಳಿಗೆ ಕಡಿಮೆಯಾಗಿರುವಳು. ಹೇ ಭಗವಂತ! ತ್ಯಾಗದಲ್ಲಿಯೂ ಉತ್ತಮ ಅಧಮ ಎಂಬ ಭೇದ!" ಎಂದು ಯೋಚಿಸುತ್ತಾ ಹೊರಟು ಹೋದಳು.

ಬಕ್ಷಿಣಿಯು ದಕ್ಷಿಣದ ಬುರ್ಜಿಯ ಮೇಲಿದ್ದ 'ಘನಗರ್ಜ' ಮತ್ತು ಅದರ ಸಹೋದರಿಯರೆಂದು ಕರೆಯಲಾಗುತ್ತಿದ್ದ ತೋಪುಗಳನ್ನು ಚಲಾಯಿಸುವ ಕಾರ್ಯ ವನ್ನು ವಹಿಸಿಕೊಂಡು ಗೌಸ್ ಖಾನನು ಹೇಳಿದ ರೀತಿಯಲ್ಲಿ ಕೆಲಸವನ್ನು ಮುಂದು ವರಿಸಿಕೊಂಡಿದ್ದಳು.

ನಂತರ ಗುಲಾಂ ಗೌಸ್ ಖಾನನು ಪಶ್ಚಿಮದ ಬುರುಜಿಗೆ ಹೋದನು. ಅಲ್ಲಿ ಲಾಲತ ಬ್ರಾಹ್ಮಣನು ಕೆಲಸಮಾಡುತ್ತಿದ್ದನು. ದುರ್ಬೀನಿನ ಮೂಲಕ ಗೌಸ್ ಖಾನನು

ಎಲ್ಲವನ್ನೂ ಸವಿಸ್ತಾರವಾಗಿ ನೋಡಿ "ಪಂಡಿತ್‌ಜೀ ಆಂಗ್ಲೇಯರ ತೋಪುಗಳೆಲ್ಲಿವೆ ಯೆಂದು ಗುರ್ತಿಸಿದರಾ ?" ಎಂದು ಕೇಳಿದನು.

"ಅಗೋ! ಅಲ್ಲಿ ನೋಡಿ ಕರಿಯ ದಿಣ್ಣೆಯ ಹಿಂಬದಿಯಲ್ಲಿವೆ" ಎಂದು ಬ್ರಾಹ್ಮಣನು ಉತ್ತರವಿತ್ತನು.

"ಇಲ್ಲ ಪಂಡಿತ್‌ಜೀ ಆ ಕರಿಯ ದಿಣ್ಣೆಯ ಹಿಂದೆ ಅಮಿಶ್ರಿತವಾದ ಶುದ್ಧ ಮದ್ದನ್ನು ಸುಟ್ಟು ಹೊಗೆಯಾಡಿಸುತ್ತಿರುವರು. ಅದರಿಂದಲೇ ನಾವು ಮೋಸಹೋಗುತ್ತಿರಬೇಕೆಂದು ಅವರ ಅಭಿಪ್ರಾಯ. ಅಲ್ಲಿ ಹೊಸದಾಗಿ ಅಗೆದ ಕೆಂಪು ಮಣ್ಣಿನ ಗುಡ್ಡೆಗಳು ಕಾಣುತ್ತಿರುವುದಲ್ಲಾ ಅಲ್ಲಿ ತೋಪುಗಳನ್ನಿರಿಸಿರುವರು" ಲಾಲತನು ದುರ್ಬೀನು ಹಿಡಿದು ನೋಡಿ ಅಸಮ್ಮತಿಯಿಂದ ನುಡಿದನು. "ನುಚ್ಚುಗಲ್ಲು ಮತ್ತು ಮಣ್ಣು ರಾಶಿಗಳ ಮೇಲೆ ತೋಪುಗಳನ್ನಿರಿಸಲು ಸಾಧ್ಯವಿಲ್ಲ ಖಾನ್‌ಸಾಹೇಬರೆ."

"ಗೌಸ್ ಖಾನನು ಹೇಳಿದನು" ಕ್ಷಮಿಸಿ ಪಂಡಿತ್‌ಜೀ, ತೋಪುಗಳನ್ನು ಬೇಕೆಂದೇ ಅರ್ಥಪೂರ್ವಕವಾಗಿ ಆ ದಿಣ್ಣೆಯ ಮೇಲಿರಿಸಿರುವರು; ಸ್ವಲ್ಪ ತಡೆದು ನೋಡಿ".

ಗೌಸ್ ಖಾನನು ದುರ್ಬೀನನ್ನು ತೋಪಿಗೆ ತಗುಲಿಸಿ ತೋಪನ್ನು ಅತ್ತ ಇತ್ತ ಸರಿಸಿ ಸರಿಯಾದೆಡೆಗೆ ನಿಲ್ಲಿಸಿದನು. ಗುರಿ ಸರಿಪಡಿಸಿ ಮದ್ದು ಗುಂಡುಗಳನ್ನು ತುಂಬಿಸಿದನು. ಇದನ್ನೆಲ್ಲಾ ಕ್ಷಣಮಾತ್ರದಲ್ಲಿ ಮಾಡಿ ಮುಗಿಸಿದನು.

ನಂತರ ಆತನು ಇಲ್ಲಿ ತೋಪಿಗೆ ಅಗ್ನಿ ಸ್ಪರ್ಶಮಾಡಿಸುತ್ತಲೇ ಅತ್ತ ಮಣ್ಣಿನ ದಿಬ್ಬವು ಒಡೆದು ತೋಪ್ಗಿಯು ಮಡಿದುರುಳಿದುದು ಕಂಡು ಬಂದಿತು. ತೋಪು ತಲೆ ಕೆಳಗಾಗಿ ಮುರಿದು ಬಿದ್ದಿತು. ಮತ್ತೆ ಗೌಸ್‌ಖಾನನು ತೋಪು ಚಲಾಯಿಸಿದನು.

ಪಶ್ಚಿಮದಲ್ಲಿದ್ದ ಆಂಗ್ಲೇಯರ ಕಂದುಕಗಳು ಮೌನವಾದುವು. ಅವರ ತೋಪುಗಳು ನಾಶವಾಗಿ ಎಲ್ಲವೂ ಶಾಂತವಾಯಿತು. ನಗರದಲ್ಲಿ ನವ ಚೈತನ್ಯಉಂಟಾಯಿತು. ಗೌಸ್‌ಖಾನನು ಹೋಗಿ ರಾಣಿಗೆ ಪ್ರಣಾಮ ಮಾಡಿದನು. ಆಕೆಯು ಚಿನ್ನದ ತೋಡೆಗಳನ್ನು ತರಿಸಿ ಸ್ವಹಸ್ತದಿಂದ ಅವುಗಳನ್ನು ಗೌಸ್‌ಖಾನನಿಗೆ ತೊಡಿಸಿದಳು. ರಾಣಿಯು ಹರ್ಷೋನ್ಮತ್ತಳಾಗಿದ್ದಳು. ಗೌಸ್‌ಖಾನನ ಪ್ರಫುಲ್ಲ ವದನವು ಅಶ್ರುಪೂರಿತವಾಯಿತು. ಮೂರನೆಯ ಜಾವದನಂತರ ಸರದಿಗಳು ಬದಲಾಯಿಸಿದವು. ಸ್ತ್ರೀಯರು ತೋಪುಗಳ ಜವಾಬ್ದಾರಿಯನ್ನು ವಹಿಸಿಕೊಂಡು ಭೀಷಣವಾದ ಗುಂಡಿನ ಮಳೆಗರೆದರು.

ಕಾಮಾಸೀಕ ಗುಡ್ಡದಿಂದ ರೋಜನು ದುರ್ಬೀನಿನ ಮೂಲಕ ನೋಡಿದನು. ಪಕ್ಕದಲ್ಲಿ ಅವನ ಸೈನ್ಯದ ವೈದ್ಯ ಲೋ ಎಂಬುವವನಿದ್ದನು. ಮತ್ತು ಹತ್ತಿರದಲ್ಲೇ ಜನರಲ್ ಸ್ಟುವರ್ಟನೂ ನಿಂತಿದ್ದನು.

ರೋಜನು "ಓಹೋ! ಸ್ತ್ರೀಯರು ತೋಪುಗಳನ್ನು ಹಾರಿಸುತ್ತಿರುವರು.

ಸ್ತ್ರೀಯರೇ ಮದ್ದು ಗುಂಡುಗಳನ್ನು ತುಂಬುತ್ತಿರುವರು. ಕೆಲವರು ಅನ್ನ, ನೀರುಗಳನ್ನು ಸರಬರಾಜು ಮಾಡುತ್ತಿರುವರು. ಬಿದ್ದು ಹೋಗಿರುವ ಕೋಟೆ ಗೋಡೆಯನ್ನು ಕಟ್ಟುತ್ತಿರುವವರಿಗೆ ಕೆಲವರು ಸಹಾಯ ನೀಡುತ್ತಿರುವರು. ಇಷ್ಟು ದಕ್ಷತೆಯಿಂದ ಮತ್ತು ಚುರುಕಿನಿಂದ ಹಿಂದೂಸ್ಥಾನೀಯರು ಕೆಲಸ ಮಾಡುತ್ತಿರುವುದನ್ನು ನಾನು ಇಂದೇ ನೋಡಿದುದು, ಆಶ್ಚರ್ಯವಾಗುತ್ತಿದೆ" ಎಂದನು.

ಡಾಕ್ಟರ್ ಲೋ ಆತನಿಂದ ದುರ್ಬೀನನ್ನು ತೆಗೆದುಕೊಂಡು ನೋಡುತ್ತಾ "ಜನರಲ್, ಮರಗಳ ಛಾಯೆಯಲ್ಲಿ ಕೆಲವು ಸ್ತ್ರೀ ಪುರುಷರು ಕೆಲಸಮಾಡುತ್ತಿದ್ದರು. ಅವರ ಮಧ್ಯೆ ನಮ್ಮ ಗುಂಡೊಂದು ಹೋಗಬಿದ್ದು ಧೂಳೆಬ್ಬಿಸಿತು. ಆದರೂ ಅವರು ಅಲ್ಲೇ ಕೆಲಸದಲ್ಲಿ ನಿರತರಾಗಿರುವರು" ಎಂದನು.

ರೋಜ್ ಮತ್ತು ಸ್ಟುವರ್ಟ್, ಇಬ್ಬರೂ ಪರಿಶೀಲಿಸಿ ನೋಡಿದರು. ಸ್ಟುವರ್ಟನು "ಇವರೆಲ್ಲರೂ ನೆಪೋಲಿಯನ್ನರಾಗಿ ಬಿಟ್ಟಿರುವರೇನು?" ಎಂದು ಕೇಳಿದನು.

ಡಾ|| ಲೋ "ಆಗ ಝಾನ್ಸಿಯೇ ನಮ್ಮ ವಾಟರ್ಲೂ ಆಗುವುದು" ಎಂದು ಉತ್ತರಿಸಿದನು.

ರೋಜನು ನಸುನಗುತ್ತಾ ಹಂಗಿಸಿದನು. "ಹುಷ್, ಈಗ ಬಹು ಘೋರ ಯುದ್ಧ ಮಾಡಬೇಕಾಗುವುದು. ಈ ರಾಣಿಯು ನೆಪೋಲಿಯನ್ ಅಲ್ಲ, ಜೋನ್ ಆಫ್ ಆರ್ಕಳಂತೆ ತೋರಿ ಬರುತ್ತಿರುವಳು."

ಸ್ಟುವರ್ಟನು "ಇವಳನ್ನು ಜೀವಸಹಿತ ಹಿಡಿದರೆ ಅದು ಅತ್ಯಂತ ಚಾತುರ್ಯದ ಮಹತ್ಕಾರ್ಯವೆನಿಸುವುದು" ಎಂದನು.

ಅವೇ ವೇಳೆಗೆ ಟೆಲಿಫೋನ್ ಗಂಟೆಯು ಬಾರಿಸಿತು.

ಪಶ್ಚಿಮದಲ್ಲಿದ್ದ ಆಂಗ್ಲೇಯರ ಕಂದಕಗಳೆಲ್ಲವೂ ಸರ್ವನಾಶವಾದುವೆಂದು ತಂತಿಯ ವರ್ತಮಾನದ ಮೂಲಕ ತಿಳಿಯಿತು. ಪುನಃ ಅದನ್ನು ಸುವ್ಯವಸ್ಥೆಗೊಳಿಸಬೇಕೆಂದು ಸ್ಟುವರ್ಟನಿಗೆ ರೋಜನು ಆಜ್ಞೆಯಿತ್ತನು. ಅದಕ್ಕಾಗಿ ಆತನು ಹೊರಟು ಹೋದನು. ಆತನ ಪಡೆಯ ಅಧಿಕಾಂಶ ಸೇನೆಯು ದಕ್ಷಿಣದ ಕಂದಕಗಳಲ್ಲಿದ್ದಿತು. ಅದರ ದಳನಾಯಕನಿಗೆ ರೋಜನು ತಂತಿಯ ಮೂಲಕ "ಅತ್ಯಂತ ತೀವ್ರತೆಯಿಂದ ಕಿಲ್ಲೆಯ ದಕ್ಷಿಣದ ಬುರುಜಿನ ಮೇಲೆ ಗುಂಡಿನ ಮಳೆಗರೆಯಿರಿ." ಹೇಗಾದರೂ ಮಾಡಿ ಆ "Whistling Dick"ನ ಬಾಯಿ ಮುಚ್ಚಿಸಿರಿ." ಎಂದು ಆಜ್ಞೆಯಿತ್ತರು.

ಗೌಸ್‌ಖಾನನ "ಘನಗರ್ಜ"ವು ಅತ್ಯಂತ ಜೋರಾಗಿ ಘರ್ಜಿಸಿ ಮೃತ್ಯುಕಾರಕ ಗೋಲಿಗಳನ್ನು ಉಗುಳುತ್ತಿದ್ದುದರಿಂದ ಅದಕ್ಕೆ "Whistling Dick" ಎಂದು ಆಂಗ್ಲೇಯರು ನಾಮಕರಣ ಮಾಡಿದ್ದರು.

ಆಜ್ಞೆ ದೊರೆತ ಒಡನೆಯೇ ಆಂಗ್ಲೇಯರ ದಕ್ಷಿಣೀ ಬ್ರಿಗೇಡು ಅತಿ ಬಿರುಸಿನಿಂದ ಕಾರ್ಯಾಚರಣೆಗಾರಂಭಿಸಿತು. ಅವರ ತೋಪುಗಳು ಭಯಂಕರವಾದ ಅಗ್ನಿಜ್ವಾಲೆಯನ್ನೂ, ಗುಂಡುಗಳನ್ನೂ ಉಗುಳಲಾರಂಭಿಸಿದುವು. ಬಕ್ಷಿಣಿಯು ಅದಕ್ಕೆ ತಕ್ಕಂತೆ ತನ್ನ ತೋಪುಗಳಿಂದ ಪ್ರತ್ಯುತ್ತರ ಕೊಡಲುಪಕ್ರಮಿಸಿದಳು. ಮದ್ದು ಹೊಗೆ ಮುಂತಾದುವುಗಳಿಂದ ಅವಳ ಸುಂದರ ವದನವು ಕಪ್ಪಾಗಿ ಅದರ ಮೇಲೆ ಅಲ್ಲಲ್ಲಿ ಬೆವರಿನ ಧಾರೆಗಳಿಳಿದು ಅವಳ ಮುಖದ ನೈಜವಾದ ಸ್ವರ್ಣವರ್ಣವು ಪ್ರಕಟವಾಗುತ್ತಿದ್ದಿತು. ಆಂಗ್ಲೇಯ ಬ್ರಿಗೇಡು ತೋಪುಗಳ ಗುಂಡಿನ ವರ್ಷದ ಆಶ್ರಯದಲ್ಲಿ ಕಿಲ್ಲೆಯಮೇಲೆ ಆಕ್ರಮಣ ಮಾಡಿತು. 'ಘನಗರ್ಜ'ವು ಅನೇಕರನ್ನು ಸಂಹರಿಸಿತು. ಉಳಿದವರು ಹಿಮ್ಮೆಟ್ಟಿದ್ದರು. ಆದರೆ ಆಂಗ್ಲೇಯರ ತೋಪುಗಳು ಒಂದು ದುರಂತ ಕಾರ್ಯವನ್ನೆಸಗಿದವು.

ಒಂದು ಗುಂಡು ಬುರುಜಿಯ ಶಿಖರವನ್ನು ಭೇದಿಸಿಕೊಂಡು ಬಕ್ಷಿಣಿಯ ಹೆಗಲಿನ ಮೇಲೆ ಬಿದ್ದು ಹೆಗಲು ಮುರಿದು ಮೇಲಕ್ಕೆ ಹಾರಿತು. ಅವಳು ಅಚೇತನಳಾಗಿ ಕೆಳಗುರುಳಿದಳು.

ಈ ಸಮಾಚಾರವು ಪೂರ್ವದ ಬುರುಜಿಯ ಮೇಲಿದ್ದ ಬಕ್ಷಿಗೆ ಮುಟ್ಟಿತು. ನಿರ್ಮಲ ಚಿತ್ತನಾಗಿ ಆತನು "ಅವಳಿಗಿಂತ ಮಿಗಿಲಾದ ಝಾನ್ಸಿ ಮತ್ತು ಝಾನ್ಸಿಯ ರಾಣಿಯುರಿರುವರು, ಸಾಯಂಕಾಲ ಬಂದು ನೋಡುವೆನು. ಅದರವರೆಗೆ ದಹನ ಮಾಡಬೇಡಿ" ಎಂದು ನುಡಿದನು.

ಬಕ್ಷಿಯು ತನ್ನ ಕೆಲಸದಲ್ಲಿ ನಿರತನಾದನು. ಒಂದು ಬಾರಿ ಆಕಾಶದ ಕಡೆಗೆ ನೋಡಿ ಗೀತೆಯ ಶ್ರೀಕೃಷ್ಣನನ್ನು ನೆನೆಸಿಕೊಂಡನು. ನಂತರ ತಮ್ಮನ್ನು ಅತ್ಯಂತ ಸಂಕಟದಲ್ಲಿ ಮುಳುಗಿಸುತ್ತಿದ ಶತ್ರುಗಳ ಮೇಲೆ ಇಮ್ಮಡಿ ಹುರುಪಿನಿಂದ ತೋಪು ಚಲಾಯಿಸಿದನು. ರೋಜನ ಪೂರ್ವದಿಕ್ಕಿನ ಕಂದಕವೂ ನಿರುಪಾಯವಾಗಿ ಮೌನ ಧರಿಸಿತು.

ಆದರೂ ಬಕ್ಷಿಯ ಕೈಯ್ಯಲ್ಲಿದ್ದ ಮದ್ದು ಹೊತ್ತಿಸುವ ಪಂಜು ಉರಿಯುತ್ತಲೇ ಇದ್ದಿತು.

ಬಕ್ಷಿಣಿಯು ಕಾಲಗತಿಯನ್ನೈದಿದಳು. ರಾಣಿಯು ಅದನ್ನು ಕೇಳಿ ಅಲ್ಲಿಗೆ ಓಡಿ ಬಂದು ಆಕೆಯ ರಕ್ತಮಯವಾದ ಶವವನ್ನು ತನ್ನ ತೊಡೆಯ ಮೇಲಿರಿಸಿಕೊಂಡಳು. ಅವಳ ಕಂಠವು ರುದ್ಧಿತವಾಗಿ ಶಬ್ದವೇ ಹೊರಡದಂತಾಯಿತು. ಕಣ್ಣಿನಿಂದ ಒಂದು ಅಶ್ರು ಬಿಂದುವೂ ಹೊರಬೀಳಲಿಲ್ಲ. ಘನಗರ್ಜವು ಬಂದಾಗಿ ಮೌನಿಯಾಗಿದ್ದಿತು. ಅತ್ತ ಆಂಗ್ಲೇಯರ ಪಿರಂಗಿಗಳಿಂದ ಗುಂಡುಗಳು ಹಾರಿಬಂದು ಕೋಟೆಯ ಬುರುಜು ಮತ್ತು ಪ್ರಾಕಾರದ ಗೋಡೆಗಳ ಮೇಲೆ ಧಡಧಡನೆ ಬಿದ್ದು ಅವುಗಳನ್ನು ಕೆಡಹುತ್ತಿ

ಸ್ದವು. ಮುಂದರಿಯು ತಾನಿದ್ದ ಬುರುಜಿನಿಂದ ದುರ್ಬೀನಿನ ಮೂಲಕ ನೋಡಿ ಓಡಿ ಬಂದು ಗಾಬರಿಯಿಂದ "ಬಾಯಿ ಸಾಹೇಬ್!" ಎಂದಳು.

ರಾಣಿಯ ಬಾಯಿಯಿಂದ ಕೇವಲ ಒಂದೇ ಒಂದು ಶಬ್ದವು ಹೊರಬಿದ್ದಿತು. "ಗೌಸ್."

ಮುಂದರಿಯು ಒಡನೆಯೇ ರಾಣಿಯ ಅಭಿಪ್ರಾಯವನ್ನು ಗ್ರಹಣಮಾಡಿ ಓಡಿ ಹೋಗಿ ಪಶ್ಚಿಮ ಬುರುಜಿಯಲ್ಲಿದ್ದ ಗುಲಾಂ ಗೌಸ್‌ಖಾನನನ್ನು ಕರೆತಂದಳು.

ಗೌಸ್‌ಖಾನನು ಧೂಳಿನ ಮೇಲೆ ಬಕ್ಷಿಣಿಯ ಮೃತದೇಹವನ್ನು ಆಲಂಗಿಸಿ ಕೊಂಡು ಕುಳಿತಿರುವ ಝಾನ್ಸಿಯ ಮಹಾರಾಣಿಯನ್ನು ಕಂಡನು.

ಆತನು "ಸರ್ಕಾರ್, ಇದೇನಿದು? ಇನ್ನೂ ಎಷ್ಟು ಜನ ಸರದಾರರು ಬಲಿಯಾಗ ಬೇಕೋ ತಿಳಿಯದು. ಹುಜೂರ್, ಸ್ವರಾಜ್ಯಕ್ಕಾಗಿ ಹೋರಾಡುವ ಯುದ್ಧವು ಯಾರ ಜೀವಮರಣಗಳ ಮೇಲೂ ಅವಲಂಬಿಸಿರುವುದಿಲ್ಲ ಎಂದು ನೀವೇ ನಮಗೆ ಹೇಳುತ್ತಿದ್ದಿರಿ. ಈಗ ಬಕ್ಷಿಣಿಜೂ ಸ್ವಾತಂತ್ರ್ಯ ಯುದ್ಧದಲ್ಲಿ ಅಮರರಾಗಿ ಹೋದರು. ಏಳಿ, ಅದೊ! ಆ ವೀರಾಗ್ರಣಿ ಬಕ್ಷಿಯನ್ನು ನೋಡಿ, ಅವನು ತನ್ನ ಧ್ಯೇಯಸಾಧನೆಗಾಗಿ ಅಚಲನಾಗಿ ನಿಂತಿರುವನು. ನೀವು ಹೀಗೆ ಮೋಹಪರವಶರಾಗಿ ಕುಳಿತರೆ ನಾವು ಆಂಗ್ಲೇಯರೊಡನೆ ಎಷ್ಟು ದಿನ ತಾನೆ ಕಾದಾಡಲಾದೀತು? ತಾವು ತಮ್ಮ ದಿವಾಣ ಖಾನೆಗೆ ತೆರಳಿ ಅಲ್ಲಿಂದ ಉಚಿತವಾದ ಆಜ್ಞೆಗಳನ್ನು ದಯಪಾಲಿಸುತ್ತಿರಿ! ನಾನು ಆಂಗ್ಲೇಯರಿಗೆ ತಕ್ಕ ಬುದ್ಧಿ ಕಲಿಸುವೆನು" ಎಂದು ಹೇಳಿದನು.

ರಾಣಿಯು ಬಕ್ಷಿಣಿಯ ಶವಸಂಸ್ಕಾರಕ್ಕೆ ತಕ್ಕ ಪ್ರಬಂಧಮಾಡಿ ತನ್ನ ದಿವಾಣ ಖಾನೆಗೆ ತೆರಳಿದಳು.

ಗೌಸ್‌ಖಾನನು ಬಿಸಿಮಿಲ್ಲಾ ಮಾಡಿ 'ಘನಗರ್ಜ್'ನ್ನು ಗುರಿಯಿಟ್ಟು ಮೂರು ಬಾರಿ ಹಾರಿಸಿದನು. ಆಂಗ್ಲೇಯರ ತೋಪುಗಳೂ, ತೋಪ್ಚಿಗಳೂ ಮತ್ತು ಅಲ್ಲಿ ಕೆಲಸ ಮಾಡುತ್ತಿದ್ದ ಇತರರೂ ಎಲ್ಲರೂ ನಿರ್ನಾಮವಾದರು.

ಗೌಸ್‌ಖಾನನು "ಇದು ನನ್ನ ಸಂಗಡಿಗಳಾದ ಸರದಾರಿಣಿಯನ್ನು ಹತಮಾಡಿದು ದಕ್ಕಾಗಿ ಪ್ರತೀಕಾರವಾಯಿತು. ಇದರ ಜೊತೆಗೆ ಸ್ವಲ್ಪ ಪ್ರಸಾದವನ್ನು ಕೊಡುತ್ತೇನೆ. ನೋಡಿ ಝೋಖಾನಾ ಬಾಗಿನ ಪೂರ್ವಕ್ಕಿರುವ ಗೋಸಾಯಿಗಳ ಮಂದಿರದ ಮರೆಯಿಂದ ಸೈಯರ್ ದ್ವಾರದ ಮೇಲೆ ಆಂಗ್ಲೇಯರು ತೋಪು ಹಾರಿಸುತ್ತಿರುವರು. ಪಾಪ; ಖುದಾಬಕ್ಷನು ಮಂದಿರಕ್ಕೆ ಅಪಾಯವಾಗಬಹುದೆಂಬ ಕಾರಣದಿಂದ ಪ್ರತಿಧಾಳಿ ಮಾಡದೆ ಕುಳಿತಿರುವಂತಿದೆ. ಆದರೆ ಮಧ್ಯದಲ್ಲಿ ಒಂದು ಸಂದಿಯಿದೆ. ಅಲ್ಲಿಂದ ಪಿರಂಗಿ ಗಳು ಕಾರ್ಯಾಚರಣೆ ಮಾಡುತ್ತಿವೆ. ಆ ಸಂದಿಯು ಖುದಾಬಕ್ಷನ ಗುರಿ ಪಥದಲ್ಲಿಲ್ಲ. ಆದರೆ ಘನಗರ್ಜದ ಗುರಿ ಪಥದಲ್ಲಿದೆ." ಎಂದು ತನ್ನ ಸಂಗಡಿಗರೊಂದಿಗೆ ಹೇಳಿದನು.

ಆತನ ಸಂಗಡಿಗರು ಅನುರೋಧಿಸುತ್ತಾ ಹೇಳಿದರು "ಮಂದಿರದ ಮೇಲೆ ಗುಂಡು ಬೀಳಬಾರದು, ಖಾನ್ ಸಾಹೇಬರೇ. ಬಿದ್ದರೆ ಬಹಳ ಅನರ್ಥವಾಗುವುದು.."

ನಾನು ಹಾರಿಸುವ ಗುಂಡಿನಿಂದ ಮಂದಿರದ ಒಂದು ಚಿಕ್ಕ ಇಟ್ಟಿಗೆ ಬಿದ್ದರೂಕೂಡ ಕತ್ತಿಯಿಂದ ನನ್ನ ತಲೆಯನ್ನು ತುಂಡರಿಸಿರಿ."

ಗೌಸ್‌ಖಾನನು ತನ್ನ ಘನಗರ್ಜನ ಮೂರ್ತಿಯನ್ನು ಅತ್ತಿತ್ತ ಸರಿಸಿ ನೋಡಿದನು. ಆದರೆ ಅಲ್ಲಿಂದ ಗುರಿಯಿಡಲು ಸಾಧ್ಯವಿಲ್ಲವೆ, ಆ ಫಿರಂಗಿಯನ್ನು ಎಲ್ಲಿದ್ದಿತೋ ಅಲ್ಲೇ ಇರಿಸಿ ರಘುನಾಥಸಿಂಹನಿದ್ದ ಬುರುಜಿಗೆ ಹೋದನು.

ಆತನನ್ನು ಕುರಿತು ವಿನಯದಿಂದ "ದಿವಾನರೇ ನಿಮ್ಮ ತೋಪನ್ನು ಸ್ವಲ್ಪಕಾಲ ನನಗೆ ಕೈಗೆ ಕೊಡಿ. ಸೈಯರ್ ಹೆಬ್ಬಾಗಿಲಿನ ಮುಂದಿರುವ ಆಂಗ್ಲೇಯರ ತೋಪುಗಳನ್ನು ನಾಶಮಾಡಬೇಕಾಗಿದೆ." ಎಂದು ನುಡಿದನು.

"ಅಗತ್ಯವಾಗಿ ತೆಗೆದುಕೊಳ್ಳಿ" ದಿವಾನ್ ರಘುನಾಥಸಿಂಹನು ಉತ್ತರವಿತ್ತನು.

"ಆದರೆ ಮೊದಲು ಮಂದಿರವು ಆಹುತಿಯಾಗಿ ನಂತರ ಆಂಗ್ಲೇಯರ ತೋಪುಗಳು ನಾಶವಾಗುವುವು."

ಗೌಸ್‌ಖಾನನು ವಿಶ್ವಾಸ ಪೂರ್ವಕ ಹೇಳಿದನು "ದುರ್ಬೀನನ್ನು ಕೊಡಿ. ನನಗೆ ಕೇವಲ ಮಂದಿರದ ಸಂದಿನಿಂದ ಆಂಗ್ಲೇಯರ ತೋಪುಗಳನ್ನು ನೋಡಬೇಕಾಗಿದೆ. ನಾನು ಮಂದಿರವನ್ನು ನೋಡುವುದೇ ಇಲ್ಲ.

ರಘುನಾಥಸಿಂಹನಿಗೆ ಗೌಸ್‌ಖಾನನ ಗೋಲಂದಾಜಿಯಲ್ಲಿ ಪೂರ್ಣ ವಿಶ್ವಾಸ ವಿದ್ದುದರಿಂದ ಆತನು ಗೌಸ್‌ಖಾನನಿಗೆ ದುರ್ಬೀನನ್ನೂ ತೋಪನ್ನು ಒಪ್ಪಿಸಿದನು.

ಗೌಸ್‌ಖಾನನು ತೋಪನ್ನು ಸರಿಯಾಗಿ ಸ್ಥಾಪಿಸಿ ದುರ್ಬೀನಿನ ಮೂಲಕ ನೋಡಿ ಗುರಿಯಿಟ್ಟು ನಿಶ್ಚಿಂತೆಯಿಂದ ಅಗ್ನಿ ಸ್ಪರ್ಶಮಾಡಿಸಿದನು. ಅದರ ಫಲವನ್ನು ದುರ್ಬೀನಿನ ಮೂಲಕ ರಘುನಾಥಸಿಂಹನೂ ನೋಡಿದನು.

ಆಂಗ್ಲೇಯ ತೋಪ್ಚಿಯು ಉರುಳಿ ಬಿದ್ದನು. ತೋಪು ಶತಃಛಿದ್ರವಾಯಿತು, ಮಂದಿರವು ಯಾವ ನಷ್ಟವನ್ನೂ ಹೊಂದದೆ ಉಳಿದುಕೊಂಡಿತು.

ಆ ಕ್ಷಣವೇ ರಾಣಿಯು ಗೌಸ್‌ಖಾನನಿಗೆ ತನ್ನ ತುಲಾಭಾರದಷ್ಟು ಬೆಳ್ಳಿಯನ್ನು ಪುರಸ್ಕಾರವಾಗಿ ಕೊಟ್ಟಳು. ಅದನ್ನು ಕೇಳಿ ಲಾಲತನು ಆಶ್ಚರ್ಯದಿಂದ ಮೂಕನಾದನು.

ಆ ಸಂಜೆ ಬಕ್ಷಿಣಿಯ ಶವದಹನ ಮಾಡಲಾಯಿತು.

ಬಕ್ಷಿಯು ಹರ್ಷೋನ್ಮತ್ತನಾಗಿದ್ದರೂ ಕೂಡ ಅವನ ಕಣ್ಣುಗಳಲ್ಲಿ ಒಂದು ವಿಧವಾದ ಉನ್ಮಾದವು ಗೋಚರಿಸುತ್ತಿದ್ದಿತು. ಆಗಾಗ್ಗೆ ಆತನು ಅಸಂಬದ್ಧವಾದ ಮಾತುಗಳನ್ನಾಡುತ್ತಿದ್ದನು "ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ"

ಈ ಮಹಾವಾಕ್ಯವನ್ನು ಇತರರು ಅರ್ಥಮಾಡಿಕೊಂಡಿದ್ದಾರೋ ಇಲ್ಲವೋ ತಿಳಿಯದು. ಆದರೆ ರಾಣಿಯು ಮಾತ್ರ ಅದನ್ನು ಚೆನ್ನಾಗಿ ಮನನ ಮಾಡಿದ್ದಳು.

ರಾತ್ರಿಯಾಯಿತು. ಯುದ್ಧದ ಭರವು ಸ್ವಲ್ಪ ಇಳಿಮುಖವಾಯಿತು. ಬರಹಾಮುದ್ದೀನನು ಪೀರಾಲಿಯ ಬಳಿಗೆ ಹೋದನು.

ಆತನನ್ನು ಕಂಡೊಡನೆಯೇ ಪೀರಾಲಿಯು "ನೋಡಿದೆಯಾ! ನಾನು ಪತ್ತೆಹಚ್ಚಿ ತಿಳಿದುಕೊಂಡು ಬಂದ ವರ್ತಮಾನದಿಂದ ಗೋಲಂದಾಜಿಗಳಿಗೆ ಎಷ್ಟು ಲಾಭವಾಯಿತು" ಎಂದನು.

ಬರಹಾಮುದ್ದೀನನಿಗೆ ಸ್ವಲ್ಪ ಶಂಕೆಯುಂಟಾದರೂ ಅದನ್ನು ತೋರ್ಪಡಿಸದೆ "ಓಹೊ! ಭೇಷಾಗಿ ಆಗಿರಬಹುದು. ಆದರೆ ನಾನು ಕಿಲ್ಲೆಯಿಂದ ಗೋಲಂದಾಜಿ ಕೆಲಸವನ್ನು ಮಾಡುತ್ತಿರಲಿಲ್ಲವಾಗಿ ಆ ವಿಚಾರವಾಗಿ ಏನನ್ನೂ ಹೇಳಲಸಮರ್ಥನಾಗಿರುವೆನು" ಎಂದು ಹೇಳಿದನು.

ಪೀರಾಲಿಯು ಹೆಮ್ಮೆಕೊಚ್ಚಿಕೊಳ್ಳುತ್ತಾ ಹೇಳಿದನು "ನಮ್ಮ ಕಿಡಕಿಯ ಮುಂದೆ ಆಂಗ್ಲೇಯರ ಕಂದಕಗಳಾವುವೂ ಇಲ್ಲ. ಇಲ್ಲದಿದ್ದರೆ ಅವರ ಹಲ್ಲು ಮುರಿಯುತ್ತಿದ್ದೆ."

ಬರಹಾಮುದ್ದೀನನು ಅವನನ್ನು ಖುಷಾಮತಿ ಮಾಡುತ್ತಾ "ಹಲ್ಲುಗಳನ್ನು ಪುಡಿಮಾಡುವುದೇನು, ತಲೆಯನ್ನೂ ಚಂಡಾಡುತ್ತಿದ್ದೆ ಎಂದು ಹೇಳಿ, ಮಿರ್ ಸಾಹೇಬರೆ!" ಎಂದು ನುಡಿದನು.

ಪೀರಾಲಿಗೆ ಆ ಮಾತನ್ನು ಕೇಳಿ ಅತ್ಯಂತ ಸಂತೋಷವಾಗಿ "ಎರಡೂ ಒಂದೇ ಅನ್ನಿ" ಎಂದನು.

ಚೆನ್ನಾಗಿ ಕತ್ತಲು ಕವಿದ ಮೇಲೆ ಪೀರಾಲಿಯು "ನಾನು ಈಗ ಗೂಢಚಾರರ ಕೆಲಸದ ಮೇಲೆ ಹೊರಗೆ ಹೊರಡುತ್ತೇನೆ. ನೀವು ಇಲ್ಲಿ ಎಚ್ಚರದಿಂದಿರಿ" ಎಂದು ಬರಹಾಮುದ್ದೀನನೊಡನೆ ಮೆಲ್ಲನೆ ಹೇಳಿದನು.

ಬರಹಾಮುದ್ದೀನನು ಸಮ್ಮತಿಸಿದನು.

ಪೀರಾಲಿಯು ಪುನಃ ಮೋರಿಯ ಮೂಲಕ ನಗರದಿಂದ ಹೊರಬಿದ್ದನು. ಅವನ ಹಿಂದೆ ಗೋಪ್ಯವಾಗಿ ಬರಹಾಮುದ್ದೀನನೂ ಅನುಸರಿಸಿ ಹೋದನು. ಸುಮಾರು ಅರ್ಧಮೈಲಿ ದೂರ ಹೋದಮೇಲೆ ಆಂಗ್ಲ ಶಿಬಿರದ ಕಾವಲುಗಾರನು ಅವನನ್ನು ತಡೆದಾಗ ಪೀರಾಲಿಯು ಸಂಕೇತ ಶಬ್ದವನ್ನುಚ್ಚರಿಸಿದನು. ಆದರ ನಂತರ ಆತನು ಯಾವ ತಡೆಯೂ ಇಲ್ಲದೆ ಆಂಗ್ಲೇಯರ ಶಿಬಿರದೊಳಹೊಕ್ಕು ಹೊರಟುಹೋದನು. ಬರಹಾಮುದ್ದೀನನು ಆಶಾ ಭಂಗುರನಾಗಿ ಸಾಗರ್ ಕಿಡಕಿ ಎಡೆಗೆ ಹಿಂದಿರುಗಿದನು.

ಪೀರಾಲಿಯು ಹಿಂದಿರುಗಿದಮೇಲೆ ಆತನು "ಇಂದೇನು ಸಮಾಚಾರ ತಂದಿರುವಿರಿ ಮಿರ್‌ಸಾಹೇಬರೆ?" ಎಂದು ಕೇಳಿದನು.

"ಹೆಚ್ಚೇನೂ ಇಲ್ಲ. ನಾಳೆ ನಗರದ ಮೇಲೆ ಪಶ್ಚಿಮದಿಂದ ಗೋಲಾಬಾರಿಯಾಗುವುದೆಂದು ಮಾತ್ರ ತಿಳಿಯಿತು" ಎಂದು ಪೀರಾಲಿಯು ಉತ್ತರಿಸಿದನು.

"ಇಂದಂತೂ ನಮ್ಮ ಗುಲಾಂ ಗೌಸ್ ಖಾನರು ಒಳ್ಳೆ ಚಮತ್ಕಾರ ಮಾಡಿಬಿಟ್ಟರು. ಆಂಗ್ಲೇಯರು ಎಲ್ಲೆಲ್ಲಿ ಫಿರಂಗಿಗಳನ್ನು ಸ್ಥಾಪಿಸಿದರೆ ಅಲ್ಲಲ್ಲೆ ಅವರನೂ ಅವರ ತೋಪುಗಳನ್ನೂ ಸದೆಬಡಿದು ಹಾವಳಿ ಮಾಡಿಬಿಟ್ಟರು."

"ನಮ್ಮ ಮದ್ದು ಬಹಳ ಉತ್ತಮ ತರಹದ್ದು. ಸ್ವಲ್ಪವೂ ಹೊಗೆಯಾಗುವುದಿಲ್ಲ. ಆದುದರಿಂದ ನಮ್ಮ ತೋಪುಗಳು ಎಲ್ಲಿರುವುವೆಂಬುದು ಆಂಗ್ಲೇಯರಿಗೆ ಸುಲಭವಾಗಿ ಗೊತ್ತಾಗುವುದಿಲ್ಲ."

ಆದರೂ ಅವರು ನಮ್ಮ ಧಾಳಿಗೆ ಚೆನ್ನಾಗಿ ಪ್ರತಿಧಾಳಿ ಮಾಡಿರುವರು. ಅಲ್ಲದೆ ನಮ್ಮ ಗೋಲಂದಾಜಿಗಳೂ ಯಾರಿಗೇನೂ ಕಡಿಮೆಯಿಲ್ಲ. ಹಾಗಿಲ್ಲದಿದ್ದರೆ ಝಾನ್ಸಿಯನ್ನು ಒಂದು ಗಂಟೆಯಷ್ಟು ಹೊತ್ತೂ ರಕ್ಷಿಸುವುದು ಕಷ್ಟವಾಗುತ್ತಿದ್ದಿತು."

"ಮದ್ದನ್ನು ಎಲ್ಲಿ ತಯಾರಿಸುತ್ತಿರುವರು, ಖಾಸಾಹೇಬರೆ?"

"ಮಹಲ್ಲಿಗೆ ಉತ್ತರದಲ್ಲಿರುವ ಹುಣಿಸೆಮರದಡಿಯಲ್ಲಿ. ಏನು, ನೀವೆಂದೂ ನೋಡಿಲ್ಲವೆ?"

"ಇಲ್ಲ ಖಾಸಾಹೇಬರೆ, ನಾನತ್ತ ಕಡೆ ಹೋದುದೇ ಇಲ್ಲ."

"ನೀವು ಆಂಗ್ಲೇಯರ ಶಿಬಿರದಲ್ಲಿ ಹೇಗೆ ಹೋಗಿಬರುತ್ತೀರೆಂಬುದನ್ನು ನನಗೂ ಸ್ವಲ್ಪ ತಿಳಿಸಬಾರದೇ ಮೀರ್‌ಸಾಹೇಬ್?"

"ಕೇಳಲೇ ಬೇಡಿ, ಖಾಸಾಹೇಬರೇ. ಹಳ್ಳ, ಕೊಳ್ಳ, ಕೋಟೆ, ಕೊತ್ತಲ, ಮರಗಿಡಗಳ ಮರೆಯಲ್ಲಿ ಎದ್ದು ಬಿದ್ದು ಬಹು ಪ್ರಯಾಸದಿಂದ ಹೋಗಬೇಕಾಗುತ್ತದೆ. ಸ್ವಲ್ಪ ಎಚ್ಚರ ತಪ್ಪಿದರೂ ಸರಿಯೇ ಗೋಲಿಯು ತಲೆಯನ್ನುರುಳಿಸುವುದು. ಬಹಳ ಹುಷಾರಿಯಿಂದ ಮಾಡಬೇಕಾದ ಕೆಲಸ ಖಾಸಾಹೇಬರೇ. ಅಲ್ಲಿ ಮುಂಚೆಯೇ ಗೊತ್ತು ಮಾಡಿಕೊಂಡಿರುವ ಸಿಳ್ಳಿನ ಸಂಕೇತ ಮಾಡುತ್ತೇನೆ. ಅದನ್ನು ಕೇಳಿ ನನ ಬಂಧುವು ಬಂದು ತಿಳಿಸಬೇಕಾದ ವೃತ್ತಾಂತವನ್ನು ತಿಳಿಸುತ್ತಾನೆ. ನಂತರ ಅದೇ ಮೋರಿಯ ದಾರಿ ಹಿಡಿದು ಬರುತ್ತೇನೆ. ಹಾಳು ಕೊಚ್ಚೆ ದುರ್ವಾಸನೆಯಿಂದ ಕೂಡಿದ ಕೆಸರು, ತೋಬಾ! ತೋಬಾ!"

ಬರಹಾಮುದ್ದೀನನ ಕಾಲುಗಳೂ ಕೆಸರಿನಿಂದ ಕೂಡಿದ್ದವು. ಅದು ಪೀರಾಲಿಗೆ ಗೋಚರವಾಗಿ "ಖಾಸಾಹೇಬರೇ, ನಿಮ್ಮ ಕಾಲೇಕೆ ಕೆಸರಾಯಿತು?" ಎಂದು ಕೇಳಿದನು.

ಬರಹಾಮುದ್ದೀನನು ಮಾತನ್ನು ಹಾರಿಸುತ್ತಾ "ನಾನೂ ಮೋರಿಯ ಮೂಲಕ ರಸ್ತೆ ಹೇಗಿದೆಯೆಂದು ನೋಡಲು ಸ್ವಲ್ಪ ದೂರ ಹೋಗಿದ್ದೆ. ನೀವು ಹೋದ ಬಹಳ

ಹೊತ್ತಿನ ಮೇಲೆ ಹೋಗಿದ್ದು ಒಡನೆಯೇ ಹಿಂದಿರುಗಿ ಬಂದು ಬಿಟ್ಟೆ." ಎಂದನು.

ಪೀರಾಲಿಗೆ ಬರಹಾಮುದ್ದೀನನ ವಿಷಯವಾಗಿ ಸಂದೇಹ ಉಂಟಾಗಿ ಆತನೊಂದು ನಿಶ್ಚಯಕ್ಕೆ ಬಂದನು. ಅದರೊಡನೆ ಬರಹಾಮನ ಶಂಕೆಯೂ ಹೆಚ್ಚಿ ಆತನೂ ಒಂದು ಸಂಕಲ್ಪ ಮಾಡಿಕೊಂಡನು.

## ೭೮

ಆ ರಾತ್ರಿ ಸುಂದರಿಯು ದುಲ್ಹಾಜುವಿನ ಸರದಿಯನ್ನು ವಹಿಸಿಕೊಳ್ಳಬೇಕಾಗಿದ್ದಿತು. ಅವಳು ದುಲ್ಹಾಜುವಿನಿಂದ ತೋಪು ಹಾರಿಸುವುದನ್ನು ಕಲಿತಿದ್ದಳು. ಆದುದರಿಂದ ಅವಳು ಅವನನ್ನು ಆದರದಿಂದ ಕಾಣುತ್ತಿದ್ದಳು. ಸಾಯಂಕಾಲವಾಗುತ್ತಲೇ ಅವಳು ಓರ್ಬಾ ಹೆಬ್ಬಾಗಿಲಿನ ಮೇಲೆ ಅವನು ಕಾರ್ಯಾಚರಣೆ ಮಾಡುತ್ತಿದ್ದಲ್ಲಿಗೆ ಬಂದಳು.

ದುಲ್ಹಾಜುವು ಬೆಳಗ್ಗಿನಿಂದ ಫಲಕಾರಿಯಾಗಿ ತೋಪು ಚಲಾಯಿಸುತ್ತಿದ್ದು ಪ್ರಸನ್ನನಾಗಿದ್ದನು. ಮತ್ತು ಸುಂದರಿಯು ಆ ದಿನದ ಗೆಲುವಿನಿಂದ ಸಂತುಷ್ಟಳಾಗಿದ್ದಳು. ಕೇವಲ ಬಕ್ಷಿಣಿಯ ಮರಣವನ್ನು ಸ್ಮರಿಸಿಕೊಂಡು ಆಗಾಗ್ಗೆ ದುಗುಡ ಉತ್ಪನ್ನವಾಗುತ್ತಿದ್ದಿತು.

ದುಲ್ಹಾಜುವು ಸುಂದರಿಯನ್ನು ಕುರಿತು "ಬಾಯಿ, ಇಂದು ನನಗೆ ಬಹಳ ಆಯಾಸವಾಗಿಬಿಟ್ಟಿದೆ. ಮೈ ಕೈ ಕಾಲೆಲ್ಲಾ ನೋವುತ್ತಿದೆ" ಎಂದನು.

"ನೀವು ಸ್ವಲ್ಪ ವಿಶ್ರಮಿಸಿ ಕೊಳ್ಳಿ. ನಾನು ರಾತ್ರೆಯೆಲ್ಲಾ ಎಚ್ಚೆತ್ತು ಕುಳಿತಿರುತ್ತೇನೆ."

"ಮತ್ತೆ ಬೆಳಿಗ್ಗೆ ಪುನಃ ಅದೇ ಕೆಲಸ ಮಾಡಬೇಕಾಗುವುದಲ್ಲ."

"ನಾನು ಬೆಳಿಗ್ಗೆಯೂ ನಿಮ್ಮ ಸ್ಥಾನದಲ್ಲಿ ಕೆಲಸಮಾಡುವೆನು."

"ನಂತರ ನಾಳೆ ರಾತ್ರಿ?"

"ನಾಳೆ ರಾತ್ರಿಯೂ ಕೆಲಸಮಾಡುವೆನು. ಅಲ್ಲಿಯವರೆಗೆ ನೀವು ವಿಶ್ರಾಂತಿ ಹೊಂದಿ; ನಾಳಿದ್ದು ಬೆಳಿಗ್ಗೆ ನೀವು ಈ ತೋಪುಗಳನ್ನು ನೋಡಿ ಕೊಳ್ಳಿ, ನಾನು ಮಲಗಿ ನಿದ್ರೆ ಮಾಡುವೆನು. ಪುನಃ ರಾತ್ರಿಯ ಕೆಲಸಕ್ಕೆ ಹಾಜುರಾಗುವೆನು."

"ಸುಂದರಿ, ನೀನು ಬಹಳ ಶಕ್ತಿವಂತೆ."

"ನಿಮ್ಮ ಕೃಪೆ."

"ಅಲ್ಲದೆ ನಿರುಪಮ ಸುಂದರಳು."

"ಇದಕ್ಕೆ ನಾನು ಉತ್ತರಕೊಡಲಾರೆನು. ದೇವರು ಹೇಗೆ ಮಾಡಿದನೋ

ಹಾಗಿರುವೆನು."

"ನಿನ್ನನ್ನು ನೋಡುತ್ತಲೇ ನಿನ್ನ ದರ್ಶನವಾಗುತ್ತಲೇ ನನ್ನ ಮನದಲ್ಲಾಗುವ ಪರಿಣಾಮವನ್ನು ವರ್ಣಿಸಲಾರೆ. ನೀನು ಅರಮನೆಯ ರಾಣಿಯಾಗಲು ಯೋಗ್ಯಳು."

ರಾಣಿಯು ಒಬ್ಬಳಿರುವಳು—ಮತ್ತು ಒಬ್ಬಳೇ ರಾಣಿಯಾಗಲು ಸಾಧ್ಯ."

"ಸುಂದರಿ, ನಾನು ನಿನ್ನನ್ನು ನನ್ನ ಹೃದಯ ಮಂದಿರದಲ್ಲಿಟ್ಟು ಪೂಜಿಸಲಪೇಕ್ಷಿಸುವೆನು. ನೀನೇನನ್ನುವೆ ?"

"ನೀವು ಅತ್ಯಂತ ನೀಚರೆನ್ನುತ್ತೇನೆ."

ದುಲ್ಹಾಜುವು ಇಂತಹ ಉತ್ತರವನ್ನು ನಿರೀಕ್ಷಿಸಿರಲಿಲ್ಲ. ಅವನು ತನ್ನ ಕೋಪವನ್ನು ಕಷ್ಟದಿಂದ ನುಂಗಿಕೊಂಡು ಉತ್ತೇಜಿತನಾಗಿ "ನಾನು ಠಾಕೂರನೆಂಬುದು ನಿನಗೆ ಗೊತ್ತೆ ?" ಎಂದು ಕೇಳಿದನು.

ಸುಂದರಿಯು ದೃಢ ಮತ್ತು ಮನ ಸೆಳೆಯುವ ಸ್ವರದಿಂದ ಹೇಳಿದಳು "ಛತ್ರಪತಿ ಶಿವಾಜಿಯು ಏಕ ಚಕ್ರಾಧಿಪತ್ಯವನ್ನು ಸ್ಥಾಪಿಸಲು ಸಹಾಯವೆಸಗಿದ ಕುಣಭಿಯ ಜಾತಿಗೆ ಸೇರಿದವಳು ನಾನೆಂದು ನಿಮಗೆ ತಿಳಿಯದೊ ?"

ದುಲ್ಹಾಜುವು ಫಕ್ಕನೆ ನಕ್ಕನು. ನಂತರ "ಸುಂದರಿಬಾಯಿ, ನಾನು ನಿನ್ನನ್ನು ಪರೀಕ್ಷಿಸುವುದಕ್ಕಾಗಿ ಆ ರೀತಿ ಹೇಳಿದೆನು. ನಿನ್ನ ಉತ್ತರವನ್ನು ಕೇಳಿ ಪ್ರಸನ್ನನಾದೆನು" ಎಂದು ಹೇಳಿದನು.

ಸುಂದರಿಯು ಸ್ವಲ್ಪವೂ ಅಪ್ರತಿಭಳಾಗದೆ "ನಿಮ್ಮ ಪರೀಕ್ಷೆಯು ಇಷ್ಟು ಶೀಘ್ರದಲ್ಲಿಯೇ ಕೊನೆಗೊಂಡುದನ್ನು ನೋಡಿ ನನಗೆ ಬಹಳ ಸಂತೋಷವಾಯಿತು" ಎಂದು ಹೇಳಿದಳು.

ದುಲ್ಹಾಜುವಿನ ಚಕ್ಷುಗಳಲ್ಲಿ ಪ್ರೇಮಾಂಕುರವು ಪ್ರಕಾಶವಾಯಿತು. ಆದರೆ ಆತನನ್ನು ಸುಂದರಿಯು ನೋಡಲಿಲ್ಲ. ದುಲ್ಹಾಜುವು "ತೋಪುಗಳನ್ನು ಎಚ್ಚರಿಕೆಯಿಂದ ಸಂಬಾಳಿಸಿಕೊ, ನಾನು ಬೆಳಿಗ್ಗೆ ಕೆಲಸಕ್ಕೆ ಬರುತ್ತೇನೆ" ಎಂದು ಹೇಳಿ ಹೊರಟು ಹೋದನು. ಆತನಿಗೆ ಇನ್ನು ಹೆಚ್ಚು ಹೇಳಲಾಗಲಿಲ್ಲ.

ಸುಂದರಿಗೆ ಈಗ ಕೋಪವು ಉಕ್ಕಿ ಬಂದಿತು. ಪ್ರತೀಕಾರದ ಇಚ್ಛೆಯು ಮೂಡಿ ಮನದಲ್ಲಿಯೇ 'ಮುಖದಮೇಲೆ ಎಕ್ಕಡದಿಂದ ಎರಡು ಬಾರಿಸ ಬೇಕಾಗಿದ್ದಿತು, ದೊಡ್ಡ ಸರದಾರನೆಂದು ಭಾವಿಸಿಕೊಂಡಿದ್ದಾನೆ. ನನ್ನ ಶೀಲವು ಅಷ್ಟು ದುರ್ಬಲವಾದುದೆಂದು ಭಾವಿಸಿದನು !' ಎಂದು ಕೊಂಡಳು.

ಬೆಳಗಾಗುತ್ತಲೇ ದುಲ್ಹಾಜುವು ಯಥಾ ಪ್ರಕಾರ ತನ್ನ ಕೆಲಸಕ್ಕೆ ಬಂದನು. ಆದರೆ ಸುಂದರಿಯೊಡನೆ ಮಾತುಕತೆಯೇನೂ ನಡೆಯಲಿಲ್ಲ. ಅವಳನ್ನು ಅಪಮಾನಗೊಳಿಸಿದ್ದರೂ ಗರ್ವದಿಂದ ಅವಳ ಕ್ಷಮೆ ಬೇಡಲಿಲ್ಲ. ಸುಂದರಿಯು ಇದೆಲ್ಲವನ್ನೂ

ರಾತ್ರಿ ರಾಣಿಗೆ ತಿಳಿಸಿದಳು.

ರಾಣಿಯು ಸುಂದರಿಯನ್ನು ಸಂತೈಸುತ್ತಾ "ಇದನ್ನು ಮತ್ತಾರಿಗೂ ಹೇಳಬೇಡ. ಈಗಾಗಲೇ ಅನೇಕ ಗೋಲಂದಾಜಿಗಳು ಮೃತಪಟ್ಟಿರುವರು. ಒಂದು ವೇಳೆ ನನ್ನ ಬಳಿ ಬಹು ಜನ ಕರ್ಮಚಾರಿಗಳಿದ್ದಿದ್ದರೆ ನನ್ನ ಕೈಯ್ಯಿಂದಲೇ ದುಲ್ಹಾಜುವನ್ನು ಕೊರಡೆಯಿಂದ ಹೊಡೆದು ಝಾನ್ಸಿಯಿಂದ ಹೊರಗೋಡಿಸುತ್ತಿದ್ದೆ. ಆದರೆ ಈಗ ಸ್ವಲ್ಪ ಸಹನೆಯಿಂದ ವರ್ತಿಸಬೇಕಾಗಿದೆ. ಒಂದು ವೇಳೆ ಪುನಃ ಅವನು ನಿನ್ನೊಂದಿಗೆ ಅಸಭ್ಯತೆಯಿಂದ ವರ್ತಿಸಿದುದಾರೆ ಅವನಿಗೆ ಜೋಡಿನೇಟು ಕೊಡಲು ನಿನಗೆ ಅನುಮತಿ ಕೊಡುತ್ತೇನೆ. ನಿನಗೆ ಅವನನ್ನು ಮಲ್ಲಯುದ್ಧದಲ್ಲಿ ಪರಾಜಿತನನ್ನಾಗಿ ಮಾಡಬಲ್ಲ ಯೋಗ್ಯತೆ ಇದೆ" ಎಂದು ಹೇಳಿದಳು.

ಇದರಿಂದ ಸುಂದರಿಯ ಮನಕ್ಷೋಭೆಯು ತೊಲಗಿ ಆಕೆ ಸುಮ್ಮನಾದಳು. ಆದರೆ ರಾಣಿಯು ಅವಳಿಗೆ ಇನ್ನೂ ಮನಸ್ಸಂತೋಷವಾಗಲಿಲ್ಲವೆಂದು ಭಾವಿಸಿ ಏಕಾಂತದಲ್ಲಿ ದುಲ್ಹಾಜುವನ್ನು ಕರೆಸಿ ಅವನನ್ನು ಚೆನ್ನಾಗಿ ನಿಂದಿಸಿ "ಈ ಬಾರಿಗೆ ನಿನ್ನನ್ನು ಕ್ಷಮಿಸಿರುವೆನು. ಪುನಃ ಇಂತಹ ಕೆಲಸಮಾಡಬೇಡ ನಿನ್ನ ಕೆಲಸವನ್ನು ನೋಡಿಕೋ ಹೋಗು" ಎಂದು ಹೇಳಿ ಕಳುಹಿಸಿದಳು.

ದುಲ್ಹಾಜುವು ತ್ವರೆಯಿಂದ ಕೆಲಸಕ್ಕೆ ಹಿಂದಿರುಗಿ ಯೋಚಿಸಲಾರಂಭಿಸಿದನು: "ಒಬ್ಬಳು ನನ್ನನ್ನು ನೀಚಳೆಂದಳು, ಮತ್ತೊಬ್ಬಳು ನನ್ನನ್ನು ದುಷ್ಕೃತನೆಂದಳು. ಒಬ್ಬರೂ ನನ್ನ ನೈಜ ಪ್ರೇಮವನ್ನು ಅರಿಯದಾದರು. ಸುಂದರಿಯು ಒಬ್ಬ ಕೀಳು ಜಾತಿಯ ಸ್ತ್ರೀ. ಅವಳನ್ನು ನಾನು ರಾಜಾರೋಷವಾಗಿ ಇಟ್ಟುಕೊಳ್ಳಬಹುದು. ಇದರಿಂದ ಅವಳು ಠಾಕೂರಾಣಿಯಾಗುವಳು. ಆದರೆ ಎಂತಹ ನೀಚ ಸ್ತ್ರೀ? ರಾಣಿಯೂ ಈ ನಾರಿಯರ ಪಕ್ಷಪಾತಿ. ನಾನು ಅಂತಹ ಪ್ರಮಾದವಾದುದನ್ನಾದರೂ ಏನು ಹೇಳಿದೆ? ಅವಳನ್ನು ಪರೀಕ್ಷೆಮಾಡಲು ಆ ರೀತಿ ಹೇಳಿದೆನೆಂದು ವಿಶ್ವಾಸ ಹುಟ್ಟಿಸಿದೆ. ಆದರೆ ರಾಣಿಯು ನಂಬಲಿಲ್ಲ. ದೊಡ್ಡ ದೊಡ್ಡ ರಾಜ ಮಹಾರಾಜರೂ ಕೂಡ ನನ್ನೊಡನೆ ಈ ರೀತಿ ವರ್ತಿಸಲಾರರು."

ದುಲ್ಹಾಜುವು ರಾಣಿಯ ವರ್ತನೆಯು ತನ್ನನ್ನು ಅಪಮಾನ ಗೊಳಿಸಿದಂತಾಯಿತೆಂದು ಭಾವಿಸಿದನು. ಅಂದು ಅವನು ತನ್ನ ಕರ್ತವ್ಯವನ್ನು ಅನ್ಯಮನಸ್ಕನಾಗಿ ಬಹು ಶಿಥಿಲತೆಯಿಂದ ನಿಭಾಯಿಸುತ್ತಿದ್ದನು. ಹಿಂದಿನ ದಿನ ಗೋಸಾಯಿ ಮಂದಿರದ ಬಳಿಯಿದ್ದ ಆಂಗ್ಲೇಯ ಫಿರಂಗಿಗಳನ್ನೂ, ರೋಜನ ಪಶ್ಚಿಮದಿಕ್ಕಿನಲ್ಲಿದ್ದ ಕಂದುಕಗಳನ್ನೂ ಅಧಿಕಧಾಳಿಯಿಂದ ನಾಶಗೊಳಿಸಿದ್ದುದರ ಕಾರಣ ಓರ್ಛಾದ್ವಾರದ ಮೇಲೆ ಅಂದು ಅಸ್ಫೋಟನೆಗಳಾಗಲಿಲ್ಲ. ಇದೇ ಒಂದು ಸಂತಸದ ಸುದ್ದಿಯಾಗಿದ್ದಿತು.

ಮಧ್ಯಾಹ್ನದ ವೇಳೆಗೆ ಬಿಸಿಲೇರಿ ಬಿಸಿ ಗಾಳಿಯೂ ಬೀಸಲಾರಂಭಿಸಿತು. ಎರಡು

ಕಡೆಯಲ್ಲೂ ಗೋಲಂದಾಜಿಗಳೂ ಸಿಪಾಯಿಗಳೂ ವಿಶ್ರಾಂತಿ ಹೊಂದತೊಡಗಿದರು.

ಪೀರಾಲಿಯು ದುಲ್ಹಾಜುವಿನ ಬಳಿಗೆ ಬಂದನು. ಪರಸ್ಪರ ವಂದನೆಗಳಾಗಿ ಸಂಭಾಷಣೆಗೆ ಕುಳಿತರು. ಪೀರಾಲಿಯು ಕಡೇ ಪಕ್ಷ ಒಬ್ಬ ಸರದಾರನನ್ನಾದರೂ ತನ್ನ ಪಕ್ಷಕ್ಕೆ ಸೆಳೆದುಕೊಳ್ಳಬೇಕೆಂದು ಆಶಿಸುತ್ತಿದ್ದನು.

ಪೀರಾಲಿ—ದಿವಾನ್ ಸಾಹೇಬರೆ, ನೀವು ಬಹಳ ಪರಿಶ್ರಮ ಪಡಬೇಕಾಗಿದೆ. ನಿಮ್ಮಿಂದಾಗಿ ನನ್ನ ಕಿಡಕಿಯ ಬಳಿ ಯಾವ ಶತ್ರುಗಳೂ ಕಂಡು ಬರುತ್ತಿಲ್ಲ.

ದುಲ್ಹಾಜು—ಪರಿಶ್ರಮವೇನೋ ಬಹಳವಾಗುತ್ತಿದೆ ಮೀರ್‌ಸಾಹೇಬ್. ನಾನು ಮಡಿದನಂತರ ಯಾರಾದರೂ ನನ್ನ ಪರಿಶ್ರಮವನ್ನು ಗಣಿಸುವರೋ ಇಲ್ಲವೊ ಎಂಬುದೇ ಸಂದೇಹಾಸ್ಪದವಾಗಿದೆ.

ಪೀರಾಲಿ—ರಾಣಿಸಾಹೇಬರೇನೋ ಧಾರಾಳವಾಗಿ ಪುರಸ್ಕಾರ ಕೊಡುವರು. ಗುಲಾಂ ಗೌಸ್‌ಖಾನನಿಗೆ ಭಂಗಾರದ ಕಡಗ, ಆಕೆಯ ತುಲಾಭಾರದಷ್ಟು ಬೆಳ್ಳಿ ಮತ್ತು ಕುಮಾರನೆಂಬ ಬಿರುದು ಎಲ್ಲವನ್ನು ದಯಪಾಲಿಸಲಾಗಿದೆ.

ದುಲ್ಹಾಜು—ಇರಬಹುದು. ರಾಣಿಯು ಕೇವಲ ಪಠಾಣ ಪರದೇಶಿಗಳ ಉದ್ದಂಡತನದಿಂದ ಮಾತ್ರ ಪ್ರಸನ್ನಳಾಗುವಳು. ಖಜಾನೆಯು ಅವಳ ಕೈಯ್ಯಲ್ಲಿದೆ. ಯಾರಿಗೆ ಬೇಕಾದರೂ ಪುರಸ್ಕಾರಗಳನ್ನು ಕೊಡುತ್ತಿರಬಹುದು. ನಾನು ಎಷ್ಟೋ ಬಾರಿ ಆಂಗ್ಲೇಯರನ್ನು ಓರ್ಛಾದ್ವಾರದ ಮುಂದಿನಿಂದ ಹಿಮ್ಮೆಟ್ಟಿಸಿರುವೆನು. ಎಷ್ಟೋ ಸಲ ಅವರ ಫಿರಂಗಿಗಳನ್ನು ನಷ್ಟಪಡಿಸಿರುವೆನು. ಆದರೇನು? ಒಂದು ಕುರುಡು ಕವಡೆಯಷ್ಟು ಪುರಸ್ಕಾರವೂ ನನಗೆ ದೊರತಿಲ್ಲ. ಈ ಹಾಳು ಯುದ್ಧವು ಸಮಾಪ್ತಗೊಂಡರೆ ಅಥವಾ ಅವಕಾಶ ದೊರಕಿದರೆ ಮನೆಗಾದರೂ ಹೋಗೋಣ ಎನ್ನಿಸಿಬಿಟ್ಟಿದೆ. ಸಾಕಾಗಿ ಹೋಯಿತು.

ಪೀರಾಲಿ— ನನಗೆ ನೋಡಿ ದಿವಾನ್‌ಸಾಹೇಬರೇ, ಗೂಢಚಾರ ವೃತ್ತಿಯಲ್ಲಿ ಎಷ್ಟು ಪ್ರಾಣಾಪಾಯವಿದೆ. ಸಮಾಚಾರ ಸಂಗ್ರಹಣಕ್ಕಾಗಿ ರಾತ್ರಿಯ ವೇಳೆಯಲ್ಲಿ ಒಬ್ಬೊಂಟಿಗನಾಗಿ ಅಲ್ಲಿ ಇಲ್ಲಿ ಅಲೆದಾಡುವೆನು. ತುಪಾಕಿಯ ಗೋಲಿಯೋ ಅಥವಾ ಕತ್ತಿಯ ಒಂದು ಸೆಳೆತವೋ ಬಿದ್ದರೆ ನನ್ನ ಕಥೆಮುಗಿಯಿತು. ಆದರೆ 'ಅಯ್ಯಾ ನೀನ್ಹೇಗಿದ್ದೀಯೆ?' ಎಂದು ಒಂದು ಮಾತು ಕೇಳುವವರಿಲ್ಲ. ನನ್ನೊಡನೆ ಕೆಲಸಕ್ಕೆ ಒಬ್ಬ ಹಳ್ಳಿ ಗಮಾರ ಪಠಾಣನನ್ನು ನಿಯಮಿಸಿದ್ದಾರೆ. ಆದರಿಂದ ನನಗೆ ವಿಪರೀತ ತೊಂದರೆಯಾಗುತ್ತಿದೆ.

ದುಲ್ಹಾಜು—ಇಲ್ಲೂ ನನಗದೇ ತೊಂದರೆಯಾಗಿದೆ. ಸುಂದರಿಬಾಯಿಯು ನನ್ನ ಅಧೀನ ತೋಪ್ಚಿಯಾಗಿದ್ದಾಳೆ. ಅವಳನ್ನು ಪರೀಕ್ಷಿಸಲೆಂದು ಒಂದು ಮಾತು ಹೇಳಿದೆ. ಆದರೆ ಆಕೆ ಕೋಪಗೊಂಡು ನೀಚಳಂತೆ ವರ್ತಿಸಿದಳು. ಅಲ್ಲದೆ ರಾಣಿಯೊಡನೆ ನನ್ನ ಮೇಲೆ ದೂರು ಹೇಳಿ ಆಕೆಯು ನನ್ನನ್ನು ಮನನೋಯುವಂತೆ

ಮಾತನಾಡಿ ದೂಷಿಸಿದಳು.

ಪೀರಾಲಿಯು ತಾನು ರಾಣಿಯ ಗೂಢಚಾರನೆಂದು ತೋರ್ಪಡಿಸಿಕೆ ಯತ್ನಿಸಿದನು. ದುಲ್ಹಾಜುವು ತನ್ನ ದುಗುಡ ನಿರ್ದೋಷತೆಗಳನ್ನು ಸ್ಥಾಪಿಸಲು ಪ್ರಯಾಸಪಟ್ಟನು. ಇದರಿಂದಾಗಿ ಇಬ್ಬರ ಮನಸ್ಸುಗಳೂ ಹೊಂದಿಕೊಂಡವು. ಆದರೆ ಅವರೀರ್ವರೂ ಒಬ್ಬರ ಮಾತನ್ನೊಬ್ಬರು ಅರ್ಥಮಾಡಿಕೊಳ್ಳಲಿಲ್ಲ.

ದುಲ್ಹಾಜುವು "ನಾವು ಆಂಗ್ಲೇಯರನ್ನು ಸೋಲಿಸಲಾರೆವೆಂದು ನನಗೆ ತೋರುತ್ತದೆ" ಎಂದನು.

ಪೀರಾಲಿ—ಅವರು ಸುಲಭವಾಗಿ ಲಕ್ನೋ ಮತ್ತು ದೆಹಲಿಗಳನ್ನು ವಶಪಡಿಸಿಕೊಂಡರು. ಕಾನ್‌ಪುರವನ್ನೂ ಸೋಲಿಸಿದರು. ದಿವಾನ್ ಸಾಹೇಬರೆ ನಿಜವಾಗಿ ಹೇಳಿದರೆ ಝಾನ್ಸಿಗೆ ಯಾವುದರಲ್ಲಿಯೂ ಹೆಚ್ಚು ಬಲವಿಲ್ಲ.

ದುಲ್ಹಾಜು—ಇಂದೇ ರಾಜೀನಾಮೆಯಿತ್ತು ನಿನ್ನ ಮೋರಿಯ ಮೂಲಕ ಪಾರಾಗಿ ಮನೆ ಸೇರಿಕೊಳ್ಳೋಣವೆಂದು ಮನವು ಹಾತೊರೆಯುತ್ತಿದೆ.

ಪೀರಾಲಿ—ರಾಜೀನಾಮೆ ಕೊಡುವ ಅವಶ್ಯಕತೆಯಾದರೂ ಏನು? ಹಾಗೆಯೇ ಬಿಡಿ. ಆದರೆ ನಾಲ್ಕು ಕಡೆಯೂ ಮುಳ್ಳಿನ ತಂತಿಗಳನ್ನು ಹರಡಿ ಕಾಮುಗಾರರು ಪಹರೆ ಕೊಡುತ್ತಿರುವರು. ಅದರಲ್ಲಿ ಹೊಕ್ಕು ಗೋಪ್ಯವಾಗಿ ಹೊರ ಬೀಳುವುದು ಅತ್ಯಂತ ಕಠಿಣ.

ದುಲ್ಹಾಜು—ಮಿರ್‌ಸಾಹೇಬರೆ, ನೀವು ಆಂಗ್ಲೇಯರ ಛಾವನಿಯಿಂದ ಹೇಗೆ ಸಮಾಚಾರವನ್ನು ತರುವಿರಿ?

ಪೀರಾಲಿ—ಆಂಗ್ಲೇಯರ ಶಿಬಿರದಲ್ಲಿರುವ ಭೂಪಾಲಿನ ದಳದಲ್ಲಿ ನನ್ನ ಬಂಧು ಒಬ್ಬನಿರುವನು. ಆತನ ಸಹಾಯದಿಂದ ಅಲ್ಲಿಗೆ ಹೋಗಿ ಅಲ್ಲಿನ ಸಮಾಚಾರ ಸಂಗ್ರಹಣ ಮಾಡಿಕೊಂಡು ಬರುತ್ತೇನೆ. ಅಲ್ಲದೆ–ಅಲ್ಲದೆ ದಿವಾನ್ ಸಾಹೇಬರೇ ನಾನು ಜನರಲ್ ರೋಜನನ್ನೂ ಕಂಡು ಬಂದಿದ್ದೇನೆ.

ದುಲ್ಹಾಜು—ನೀವು ಯುದ್ಧಾರಂಭಕ್ಕೆ ಮೊದಲೇ ಹೋಗಿದ್ದಿರಾ?

ಪೀರಾಲಿ—ಇಲ್ಲ ನಿನ್ನೆ ರಾತ್ರಿ ಹೋಗಿ ಬಂದೆ.

ದುಲ್ಹಾಜು—ಮತ್ತೆ ಹೇಗೆ ತಪ್ಪಿಸಿಕೊಂಡು ಬಂದಿರಿ?

ಪೀರಾಲಿ—ಅದೇನು ದೊಡ್ಡ ಮಾತು. ನಾನು ನಿಮ್ಮ ಪರ ಗೂಢಚಾರನೆಂದು ಅವರಿಗೆ ಹೇಳಿದೆ.

ದುಲ್ಹಾಜು—ಜನರಲ್ಲನು ಅದನ್ನು ನಂಬಿದನೆ?

ಪೀರಾಲಿ—ಏತಕ್ಕೆ ನಂಬುವುದಿಲ್ಲ? ಒಂದೆರಡು ವಿಚಾರ ಹೇಳಿದೆ, ಅವನಿಗೆ ಭರವಸೆಯುಂಟಾಯಿತು.

ದುಲ್ಹಾಜು—ನಾನೂ ಜನರಲ್ಲನ ಬಳಿ ಹೋಗಬೇಕೆಂದು ಆಶಿಸುತ್ತೇನೆ.

ಪೀರಾಲಿ—ರಾಣೀ ಸಾಹೇಬರಿಗೇನಾದರೂ ತಿಳಿದು ಹೋದರೆ?

ದುಲ್ಹಾಜು—ಆಗ ನಿಮಗೇನಾಗುವುದೋ ಅದೇ ನನಗೂ ಆಗುವುದು.

ಪೀರಾಲಿ—ನಾನು ಗೂಢಚಾರ.

ದುಲ್ಹಾಜು—ನನ್ನನ್ನೂ ಅದೇ ನೆವದಲ್ಲಿ ಕರೆದುಕೊಂಡು ಹೋಗಿ.

ಪೀರಾಲಿ—ಆದರೆ ಜನರಲ್ಲನ ಮುಂದೆ ನೀವು ಅವರ ಗೂಢಚಾರನೆಂದು ಹೇಳಲಾಗದು.

ದುಲ್ಹಾಜು—ಮತ್ತೇನೆಂದು ಹೇಳಲಿ? ಅವರನ್ನು ನೋಡಲು ಬಹಳವಾಗಿ ಆಶಿಸುತ್ತೇನೆ. ಆದರೆ ಪ್ರಾಣದಿಂದ ಹಿಂದಿರುಗಬೇಕು ಮತ್ತು ಇಲ್ಲಿಯೂ ಯಾವ ಗಡಿಬಿಡಿಗೂ ಆಸ್ಪದವಿರಬಾರದು. ಆ ಶರತ್ತಿನ ಮೇಲೆ ಕೆಲಸವಾಗಬೇಕು.

ಪೀರಾಲಿ—ಜನರಲ್ ಸಾಹೇಬರು ನಿಮ್ಮನ್ನು ಯಾವುದಾದರೂ ಒಂದು ಕೆಲಸ ಮಾಡಬೇಕೆಂದು ನಿರ್ಬಂಧ ಪಡಿಸಿದರೆ?

ದುಲ್ಹಾಜು—ಅದಕ್ಕೆ ಸಮ್ಮತಿಸಲೇ ಬೇಕಾಗುವುದು.

ಪೀರಾಲಿ—ಹಾಗಾದರೆ ಮೊದಲು ನಾವಿಬ್ಬರೂ ನಂಬಿಕೆಗಾಗಿ ಪ್ರಮಾಣ ಸ್ವೀಕರಿಸೋಣ ಮತ್ತು ಎಲ್ಲೂ, ಯಾವ ರೀತಿಯಲ್ಲೂ ಈ ಮಾತು ಬಹಿರಂಗವಾಗಬಾರದು.

ಪೀರಾಲಿಯು 'ದೀನ್' ನನ್ನು ಸ್ಮರಿಸಿಯೂ ಮತ್ತು ದುಲ್ಹಾಜುವು ಆತನ ಧರ್ಮದ ಮೇಲೆಯೂ ಆಣೆಯಿಟ್ಟು ಪ್ರಮಾಣಮಾಡಿದರು.

ಪೀರಾಲಿಯು "ಅವಕಾಶ ದೊರಕಿದರೆ ಇಂದು ರಾತ್ರಿಯೋ ಇಲ್ಲದಿದ್ದರೆ ನಾಳೆ ರಾತ್ರಿಯೋ ಹೋಗೋಣ" ಎಂದನು.

ಆ ದಿನವೆಲ್ಲವೂ ಝಾನ್ಸಿಯ ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಘೋರ ಯುದ್ಧವು ನಡೆಯುತ್ತಲೇ ಇದ್ದಿತು. ಉತ್ತರ ದಿಕ್ಕಿನಲ್ಲಿ ಉನಾವ್ ದ್ವಾರ ಭಾಂಡೇರಿ ಸೂಜೀಖಾಂ ಹೆಬ್ಬಾಗಿಲುಗಳ ಮೇಲೆ ಗುಂಡುಗಳು ಬಿದ್ದುವು. ಈ ದಿಕ್ಕಿನಲ್ಲಿ ಓರ್ಛಾ ದಳವು ರೋಜನ ಸೇನೆಯೊಂದಿಗೆ ಸೇರಿ ಯುದ್ಧಮಾಡುತ್ತಿದ್ದಿತು. ಆದರೆ ಆ ದಿಕ್ಕಿನಲ್ಲಿ ಕಾರ್ಯಾಚರಣೆ ಮಾಡುತ್ತಿದ್ದ ಝಾನ್ಸಿಯ ಸೈನಿಕರು ಅತ್ಯಂತ ದಕ್ಷತೆಯಿಂದ ತಮ್ಮ ಕರ್ತವ್ಯಪಾಲನೆ ಮಾಡುತ್ತಿದ್ದುದರಿಂದ ರಾಣಿಗೆ ಆ ದಿಕ್ಕಿನಿಂದ ಆಂಗ್ಲೇಯರ ಭಯವೇನಿರಲಿಲ್ಲ. ದಾತಿಯಾ ರಾಜ್ಯದಿಂದ ಆಂಗ್ಲೇಯರ ಸಹಾಯಕ್ಕಾಗಿ ಯಾವ ಸೈನ್ಯವೂ ಬಂದಿರಲಿಲ್ಲ. ಅವರಿಗೆ ಚರಕಾರಿ ಸಂಸ್ಥಾನದ ಪರಾಜಯದ ಸುದ್ದಿಯು ಮುಟ್ಟಿದ್ದಿತು. ರಾಜಾ ವಿಜಯ ಬಹದ್ದೂರನ ದೇಹಾಂತವಾಗಿ ಆತನ ಉತ್ತರಾಧಿಕಾರಿ ಅಪ್ರಾಪ್ತ ವಯಸ್ಕನಾಗಿದ್ದನು. ರೋಜನು ಝಾನ್ಸಿಯನ್ನು ಮುತ್ತಿಗೆಹಾಕುವ

ಮುನ್ನ ದತಿಯಾ ರಾಜ್ಯಕ್ಕೆ ರಾಣಿಯ ಭಯವಿದ್ದಿತು. ಆದರೆ ಈಗ ತಾತ್ಯಾಟೋಪೆ ಯಿಂದ ಮತ್ತೂ ಹೆಚ್ಚಾಗಿ ಭಯಪಟ್ಟು ತಟಸ್ಥವಾಗಿದ್ದಿತು.

ಝಾನ್ಸಿಗೆ ದತಿಯಾ ದ್ವಾರದ ಕಡೆಯಿಂದ ಹೆಚ್ಚು ಅಪಾಯವಿರದೆ ನಿರ್ಭಯ ವಾಗಿದ್ದಿತು. ಕಿಲ್ಲೆಯ ಪಶ್ಚಿಮ ಬುರುಜಿಯ ಮೇಲಿದ್ದ ತೋಪುಗಳು ಇದನ್ನು ಚೆನ್ನಾಗಿ ಸಂರಕ್ಷಿಸುತ್ತಿದ್ದುವು. ಇದೇ ಪ್ರಕಾರ ಖಂಡೇರಾಯ ದ್ವಾರವೂ ಸುರಕ್ಷಿತ ವಾಗಿದ್ದಿತು. ಆದರೂ ಈ ಹೆಬ್ಬಾಗಿಲುಗಳ ಮೇಲಿದ್ದ ತೋಚ್ಚಿಗಳು ನಿರ್ಯೋಚನೆ ಯಿಂದ ಆರಾಮವಾಗಿ ಕುಳಿತಿರಲಿಲ್ಲ.

ಕತ್ತಲೆ ಕವಿಯಿತು. ಆದರೂ ಗುಂಡು ಹಾರಿಸುವುದು ಮಾತ್ರ ನಿಲ್ಲಲಿಲ್ಲ. ಇರುಳಿನಲ್ಲಿ ಗುಂಡುಗಳು ಒಂದರ ಹಿಂದೊಂದು ಚಿಕ್ಕ ಚಿಕ್ಕ ಕೆಂಪು ಚೆಂಡುಗಳಂತೆ ಹಾರಿ ಹೋಗುತ್ತಿದ್ದುವು. ಈ ಗುಂಡಿನ ವರ್ಷದಿಂದ ನಗರಕ್ಕೆ ಸ್ವಲ್ಪ ನಷ್ಟವಾಯಿತೇ ಹೊರತು ಕೋಟೆಗೇನೂ ಆಗಲಿಲ್ಲ. ಆ ರಾತ್ರೆ ಪೀರಾಲಿಗೆ ಹೊರ ಹೊರಡಲು ಅವ ಕಾಶ ದೊರೆಯಲಿಲ್ಲ. ದುಲ್ಹಾಜುವು ನಿದ್ರೆ ಮಾಡದೆ ಆತನ ಹಾದಿ ಕಾಯುತ್ತಿದ್ದನು.

ಬೆಳಕು ಹರಿದೊಡನೆಯೇ ಪುನಃ ಪ್ರಬಲ ಯುದ್ಧವು ಪ್ರಾರಂಭವಾಯಿತು. ಇದುವರೆಗೂ ಆಂಗ್ಲೇಯ ಸೈನಿಕರೇ ಮುಂದ ನುಗ್ಗಿ ನುಗ್ಗಿ ಮಾರಣ ಹೋಮಕ್ಕೆ ಆಹುತಿಯಾಗುತ್ತಿದ್ದರು. ಆದರೆ ಈಗ ಹಿಂದೂಸ್ಥಾನೀ ಸೈನಿಕರೇ ಅಧಿಕಾಂಶ ಮುಂಬರುತ್ತಿರುವುದು ಕಂಡು ಬಂದಿತು. ಆದರೆ ತೋಪುಗಳನ್ನು ಮಾತ್ರ ಆಂಗ್ಲೇ ಯರೇ ಚಲಾಯಿಸುತ್ತಿದ್ದರು.

ಎರಡು ಪಕ್ಷಗಳಲ್ಲೂ ತೋಪ್ಚಿಗಳು ಮಡಿದುರುಳುತ್ತಿದ್ದರು ಮತ್ತು ಹೊಸ ತೋಪ್ಚಿಗಳು ಅವರ ಸ್ಥಾನಗಳಿಗೆ ಬರುತ್ತಿದ್ದರು. ಸಾಯಂಕಾಲದ ವೇಳೆಗೆ ಕಿಲ್ಲೆಯ ಪಶ್ಚಿಮದಲ್ಲಿದ್ದ ಕಂದಕಗಳ ತೋಪುಗಳು ಆ ಕಡೆಯ ಕೋಟೆ ಗೋಡೆಯು ಕುಸಿದು ಬೀಳುವಂತಿದ್ದುದರಿಂದತಟಸ್ಥವಾದವು.

ಕೋಟೆಯ ಗೋಡೆಯು ಭಗ್ನವಾಗಿ ಅದರ ಹಿಂಬದಿಯಲ್ಲಿದ್ದ ತೋಪುಗಳು ಕಂಡು ಬಂದುವು. ಒಡನೆಯೇ ಅತ್ಯಂತ ಪ್ರಯಾಸದಿಂದ ಅವುಗಳನ್ನು ಮರೆಗೆ ತಂದು ನಿಲ್ಲಿಸಲಾಯಿತು. ಝಾರ್ ಗುಡ್ಡದ ಕಡೆಯಿಂದ ಒಂದು ದಳವು ಮುನ್ನುಗ್ಗಿತು. ಇದನ್ನು ಖಂಡೇರಾಯ ದ್ವಾರದ ಮೇಲಿದ್ದ ಸಾಗರಸಿಂಹನು ಕಂಡನು. ದ್ವಾರಕ್ಕೆ ಈಗ ಮುದ್ರೆಮಾಡಲಾಗಿದ್ದಿತು. ಅಲ್ಲದೆ ಅದನ್ನು ತೆರೆಯಲು ಆಣತಿಯಿರಲಿಲ್ಲ. ಸಾಗರಸಿಂಹನು ತೋಪನ್ನು ಚಲಾಯಿಸಿದನು. ಆದರೆ ಅದು ಆತುರದಲ್ಲಿ ಹಾರಿಸಿದು ದರಿಂದ ಗುರಿ ಸರಿಯಾಗದೆ ವಿಫಲವಾಯಿತು. ಆತನು ಉದ್ರೇಕಗೊಂಡು ಸಂಗಡಿಗ ರೊಂದಿಗೆ ಹೇಳಿದನು "ಇಂದು ಬಂದೇಲುಖಂಡದವರ ಮೂಗು ಮುರಿಯುವುದು. ಕುಮಾರ್ ಸಾಗರಸಿಂಹನ ಮೀಸೆಯು ಮಣ್ಣುಮುಕ್ಕುವುದು. ಯಾರು ನನ್ನೊಡನೆ

ಈ ಪರಂಗಿಯವರನ್ನು ಎದುರಿಸಲು ಸಮರ್ಥರಿರುವಿರೋ ಅವರು ಒಡನೆಯೇ ಕೆಳಗಿಳಿದು ಬನ್ನಿ." ಒಬ್ಬನು "ರಾಣೀ ಸಾಹೇಬರ ಅಥವಾ ದಿವಾನ್ ಜವಹರಸಿಂಹರ ಆಜ್ಞೆಯನ್ನು ಮೊದಲು ಪಡೆದುಕೋ" ಎಂದನು.

ಸಾಗರಸಿಂಹನು "ವಹವ್ವಾ: ನೀನೇನು ಮಿಂಚಿನ ಮರಿಯೆಂದುಕೊಂಡಿರುವೆಯಾ? ಅನುಮತಿ ಪಡೆದು ಬರುವ ವೇಳೆಗೆ ಇವರು ಕಿಲ್ಲೆಯನ್ನು ಪ್ರವೇಶಿಸಿ ಬಿಟ್ಟಿರುವರು. ಆಗ ಅನುಮತಿಯನ್ನಿಟ್ಟುಕೊಂಡು ನೆಕ್ಕಬೇಕೆ?" ಎಂದು ಉತ್ತರವಿತ್ತನು.

ನೂಲೇಣಿಯ ಸಹಾಯದಿಂದ ನೂರುಮಂದಿ ಧಡಬಡನೆ ಕೆಳಗಿಳಿದರು. ಅವರ ಮುಂದಾಳು ಸಾಗರಸಿಂಹ. ಅಲ್ಲಿಂದ ಅವರು ಅತಿ ವೇಗದಿಂದ ಹತ್ತಿರದಲ್ಲಿದ್ದ ಗುಡ್ಡದ ಶಿಖರವನ್ನು ಮುಟ್ಟಿದರು. ಆಂಗ್ಲೇಯರ ಪಡೆಯು ಮುಂದುವರಿದು ಬಂದಂತೆ ಇವರು ಬಂದೂಕಗಳನ್ನು ಹಾರಿಸಿದರು. ಶತ್ರುಗಳೂ ಅದಕ್ಕೆ ಪ್ರತಿಯಾಗಿ ಉತ್ತರವಿತ್ತರು. ಸಾಗರಸಿಂಹನ ತುಕ್ಕಡಿಗೆ ಯಾವ ನಷ್ಟವೂ ಉಂಟಾಗಲಿಲ್ಲ. ಆದರೆ ಆಂಗ್ಲೇಯರ ಪಡೆಯು ಛಿನ್ನ-ಭಿನ್ನವಾಯಿತು. ಪುನಃ ಅವರು ಒಂದುಗೂಡಲು ಪ್ರಯತ್ನಿಸಿದಾಗ ಸಾಗರಸಿಂಹನು ತನ್ನ ಗುಂಪಿನೊಂದಿಗೆ ಕೈಯ್ಯಲ್ಲಿ ಕತ್ತಿಗಳನ್ನು ಹಿಡಿದು ಶತ್ರುಗಳ ಮೇಲೆ ಬಿದ್ದನು. ಆಂಗ್ಲೇಯರ ಪಡೆಯು ಪೂರ್ಣವಾಗಿ ನಷ್ಟವಾಯಿತು. ಕುವರ ಸಾಗರಸಿಂಹನೂ ಖಂಡೇರಾಯ ದ್ವಾರದ ಬಳಿ ಮಡಿದು ಬಿದ್ದನು. ಅವನ ಸಂಗಡಿಗರಲ್ಲಿ ಜೀವಂತ ಉಳಿದವರು ಕಿಲ್ಲೆಗೆ ಹಿಂದಿರುಗಿದರು. ಅವರ ಪರಾಕ್ರಮದಿಂದ ಅಂದು ಝಾನ್ಸಿಯ ಕೋಟೆಯು ಉಳಿದುಕೊಂಡಿತು.

ರಾತ್ರಿಯಾಯಿತು. ರಾಣಿಗೆ ಸಾಗರ ಸಿಂಹನು ತೋರ್ಪಡಿಸಿದ ಪರಾಕ್ರಮದ ಸುದ್ದಿಯು ಮುಟ್ಟಿತು. ಅವಳ ಕಣ್ಣಿನ ಮುಂದೆ ಬರವಾ ಸಾಗರದಲ್ಲಿ ನಡೆದ ಘಟನೆಗಳೆಲ್ಲವೂ ಸುಳಿದುಹೋದವು. ಆಕೆಯು ಮನಸ್ಸಿನಲ್ಲಿಯೇ "ಯಾವ ದೇಶದಲ್ಲಿ ಸಾಗರಸಿಂಹನಂತ ಶೂರಾಗ್ರಣಿಗಳು ಉದ್ಭವಿಸುವರೋ ಆ ದೇಶವು ಸ್ವರಾಜ್ಯ ಗಳಿಸುವುದಕ್ಕೆ ಬಹು ದಿನ ಬೇಕಾಗುವುದಿಲ್ಲ" ಎಂದುಕೊಂಡಳು.

ರಾಣಿಯು ಸ್ವಯಂ ನಿಂತು ಬಿದ್ದುಹೋಗಿದ್ದ ಕೋಟೆಯ ಗೋಡೆಯನ್ನು ಸರಿಪಡಿಸುವ ಕಾರ್ಯದ ಮೇಲ್ವಿಚಾರಣೆಯನ್ನು ನೋಡಿಕೊಂಡಳು. ಕೆಲಸಗಾರರು ಕಂಬಳಿಗಳನ್ನು ಹೊದ್ದುಕೊಂಡು ರಾತ್ರಿಯೆಲ್ಲಾ ಶ್ರದ್ಧೆಯಿಂದ ಕೆಲಸ ಮಾಡಿ ಮುಂಜಾನೆಯ ವೇಳೆಗೆ ಗೋಡೆಯು ಮೊದಲು ಹೇಗಿದ್ದಿತೋ ಹಾಗೆಯೇ ಮಾಡಿ ನಿಲ್ಲಿಸಿದರು.

ಬೆಳಿಗ್ಗೆ ಪಶ್ಚಿಮ ದಿಕ್ಕಿನಲ್ಲಿದ್ದ ಆಂಗ್ಲೇಯ ಪಡೆಯವರು ದುರ್ಬೀನಿನ ಮೂಲಕ ನೋಡಿದರು—ಗೋಡೆಯು ಯಾವಾಗಲೂ ಅಪಾಯಕ್ಕೊಳಗಾಗಿದ್ದಂತೆಯೇ ಇರಲಿಲ್ಲ!

ಆ ದಿನ ಅತ್ಯಂತ ಭೀಷಣವಾದ ಯುದ್ಧವು ಜರುಗಿತು. ಎರಡು ಪಕ್ಷಗಳಲ್ಲೂ

ಎಡೆಬಿಡದ ಗುಂಡಿನ ಮಳೆಗರೆಯಿತು. ಇತ್ತ ಕೋಟೆಯ ಗೋಡೆಯು ಕುಸಿದು ಬೀಳುತ್ತಿದ್ದವು. ಅತ್ತ ಆಂಗ್ಲೇಯ ಕಂದುಕಗಳು ನಾಶವಾಗುತ್ತಿದ್ದವು. ಇತ್ತ ತೋಪ್ಚಿಯ ನಂತರ ತೋಪ್ಚಿಗಳು ಮಡಿದುರುಳುತ್ತಿದ್ದರು. ಅತ್ತ ತೋಪುಗಳು ನಿಶ್ಶಬ್ದವಾಗುತ್ತಿದ್ದುವು. ದುರ್ಗಾದೇವಿಯೇ ಅನೇಕ ರೂಪಗಳನ್ನು ತಾಳಿ ಅನೇಕ ಶರೀರಗಳನ್ನು ಹೊಂದಿ ಬಂದಿರುವಂತೆ ರಾಣಿಯ ಸ್ತ್ರೀ ಸೈನ್ಯವು ರೌದ್ರಾವೇಶದಿಂದಲೂ ದಕ್ಷತೆಯಿಂದಲೂ ಕಾರ್ಯನಡೆಸುತ್ತಿದ್ದಿತು.

ಗೋಡೆಯು ಮುರಿದು ಬಿದ್ದೊಡನೆಯೇ ಅದನ್ನು ಸರಿಪಡಿಸಲಾಗುತ್ತಿದ್ದಿತು. ಅದೂ ಮಧ್ಯಾಹ್ನದ ಹೊತ್ತಿನಲ್ಲಿ. ಪುರುಷರು ಸರಿಪಡಿಸಿಕಟ್ಟುವ ಕೆಲಸವನ್ನೂ, ಸ್ತ್ರೀಯರು ಗಾರೆ ಮಣ್ಣು ಮುಂತಾದುವನ್ನು ಸರಬರಾಯಿ ಮಾಡುವ ಕೆಲಸವನ್ನೂ ನಡೆಸುತ್ತಿದ್ದರು. ಗುಂಡುಗಳ ಸುರಿಮಳೆಯಾಗುತ್ತಿತ್ತು. ಸಿಡಿದೊಡನೆಯೇ ತಮ್ಮ ಗರ್ಭದಲ್ಲಿ ಅಡಗಿಕೊಂಡಿರತಕ್ಕ ಮೊಳೆ, ಮುಳ್ಳುಗಳನ್ನು ನಾಲ್ಕು ಕಡೆಯೂ ಚದುರಿಸುವಂತಹ ಗುಂಡುಗಳು ಬಂದು ಬೀಳುತ್ತಿದ್ದವು. ಆದರೆ ಝಾನ್ಸಿಯ ಪರಾಕ್ರಮವಾಗಲೀ ಅಥವಾ ಝಾನ್ಸಿಯ ರಾಣಿಯ ಧೈರ್ಯವಾಗಲೀ ಎಳ್ಳಷ್ಟೂ ಕುಂದಲಿಲ್ಲ. ಕಷ್ಟಗಳು ವೃದ್ಧಿಯಾದಂತೆಲ್ಲಾ ಅವರ ಅಚಲ ಸಾಹಸವೂ ವರ್ಧಿಸುತ್ತಲೇ ಇದ್ದಿತು.

ಇದ್ದಕ್ಕಿದ್ದಂತೆ ಗುಂಡೊಂದು ಬಂದು ಕಿಲ್ಲೆಯ ಒಳಭಾಗದಲ್ಲಿದ್ದ ಗಣಪತಿಯ ಮಂದಿರದ ಮೇಲೆ ಬಿದ್ದು ನಷ್ಟವನ್ನುಂಟುಮಾಡಿ ಕೇವಲ ಮೂರ್ತಿಯೊಂದು ಮಾತ್ರ ಉಳಿಯಿತು. ಮತ್ತೊಂದು ಶಂಕರ ಗಡದ ಮೇಲೆ ಸಿಡಿಯಿತು. ಆ ಸಮಯದಲ್ಲಿ ಎಂಟು ಹತ್ತು ಬ್ರಾಹ್ಮಣರು ಅಲ್ಲಿ ನೀರು ಸೇದುತ್ತಿದ್ದರು. ಅವರಲ್ಲಿ ಅರ್ಧಮಂದಿ ಮಡಿದು ಮಿಕ್ಕ ಅರ್ಧಮಂದಿ ಓಡಿ ಹೋದರು. ಆ ಗೋಲಿಯು ಪಶ್ಚಿಮದ ಕಡೆಯಿದ್ದ ಕಂದುಕಗಳಿಂದ ಬಂದಿದ್ದಿತು.

ನೀರಿನ ಸರಬರಾಯಿಗೆ ಧಕ್ಕೆತಗುಲಿ ೩-೪ ಗಂಟೆಗಳ ಕಾಲ ಜನರು ದಾಹಪೀಡಿತರಾಗಿರಬೇಕಾಯಿತು. ಕಿಲ್ಲೆಯ ಪಶ್ಚಿಮದ ಸೇನೆಗಳನ್ನು ಸರಿಪಡಿಸಿ ಆಂಗ್ಲೇಯರ ಕಂದುಕಗಳವರೂ ಬಹಳ ದಣಿದಿದ್ದುದರಿಂದ ರಾತ್ರಿಯಾಗುತ್ತಲೇ ಸ್ವಲ್ಪ ಶಾಂತಿಯೇರ್ಪಟ್ಟಿತು.

ಆ ರಾತ್ರಿ ಪೀರಾಲಿ ಮತ್ತು ದುಲ್ಹಾಜುವಿಗೆ ತಕ್ಕ ಅವಕಾಶ ದೊರೆಯಿತು.

## ೭೯

ಬರಹಾಮುದ್ದೀನನು ಸಾಗರ್ ಕಿಡಕಿಯ ಮೇಲೆ ಪೀರಾಲಿಯೊಂದಿಗೆ ಸರದಿ ಬದಲಾಯಿಸಲು ಬಂದನು. ಪೀರಾಲಿಯು 'ಅ[illegible]'ನ್ನು ಕುರಿತು "ಈ ದಿನ ಮುಖ್ಯ

ವಿಷಯಗಳನ್ನು ತಿಳಿದುಕೊಂಡು ಬರಲು ಆಂಗ್ಲೇಯರ ಶಿಬಿರಕ್ಕೆ ಹೋಗಿ ಬರ ಬೇಕಾಗಿದೆ" ಎಂದನು.

"ಭೇಷಾಗಿ ಹೋಗಿ ಬನ್ನಿ. ಒಬ್ಬೊಂಟಿಗರಾಗಿ ಹೋಗುವಿರೇನು? ಬಹಳ ಅಪಾಯಕರವಾದ ಕೆಲಸ" ಎಂದು ಬರಹಾಮನು ಉತ್ತರವಿತ್ತನು.

ಪೀರಾಲಿಯು "ಒಬ್ಬನೇ ಹೋಗುತ್ತೇನೆ. ಹೆಚ್ಚು ಮಂದಿ ಇದ್ದರೆ ಅಪಾಯವು ಇನ್ನೂ ಅಧಿಕವಾಗುವುದು" ಎಂದನು.

ಪೀರಾಲಿಯು ಕಿಡಕಿಯಿಂದ ಕೆಳಗಿಳಿದ ಸ್ವಲ್ಪ ಹೊತ್ತಿನಲ್ಲಿಯೇ ದುಲ್ಹಾಜುವೂ ಬಂದನು. ಅವನೊಂದಿಗೆ ಸುಂದರಿಯು ಓರ್ಛಾ ದ್ವಾರದ ಮೇಲೆ ಸರದಿ ಬದಲಾಯಿಸಿದಳು.

ಬರಹಾಮುದ್ದೀನನಿಗೆ ದುಲ್ಹಾಜುವು ಬಂದು ಪೀರಾಲಿಯನ್ನು ಸೇರಿಕೊಂಡುದು ಕಾಣಲಿಲ್ಲ.

ಪೀರಾಲಿ ಮತ್ತು ದುಲ್ಹಾಜು ಇಬ್ಬರೂ ಮೋರಿಯಲ್ಲಿಳಿದರು. ಇಳಿಯುತ್ತಲೇ ದುಲ್ಹಾಜುವು ಮೂಗು ಮುಚ್ಚಿಕೊಂಡು ಪೀರಾಲಿಯನ್ನು ಕುರಿತು "ಮಿರ್‌ಸಾಹೇಬ್, ಆದರೆ ಇದು ಅಸಹ್ಯವಾದ ದುರ್ಗಂಧದಿಂದ ಕೂಡಿದ ರಸ್ತೆ" ಎಂದು ಹೇಳಿದನು.

ಪೀರಾಲಿಯು ಮೆಲ್ಲನೆ "ದಿವಾನ್‌ಸಾಹೇಬರೇ, ಅಲ್ಲಿಗೆ ಹೋಗಿ ಸೇರಲು ಇದೊಂದೇ ದಾರಿ ಇರುವುದು" ಎಂದು ಹೇಳಿದನು.

ಅವರಿಬ್ಬರೂ ಹೊರಟುಹೋದನಂತರ ಮೆಲ್ಲನೆ ಬರಹಾಮುದ್ದೀನನೂ ಮೋರಿಯೊಳಗೆ ಇಳಿದು ಅಲ್ಲಲ್ಲಿ ಮರೆ ಆಸರೆಗಳನ್ನು ತೆಗೆದುಕೊಳ್ಳುತ್ತಾ ಆಂಗ್ಲ ಶಿಬಿರದ ಮೊದಲನೇ ಕಾವಲುಗಾರನಿದ್ದ ಸ್ಥಳದವರೆಗೂ ಹೋಗಿ ಸೇರಿದನು.

ಪಹರೆಯವನು ತಡೆದ ಒಡನೆಯೇ ಪೀರಾಲಿಯು ಸಂಕೇತದಂತೆ ಅವನಿಗೆ ಉತ್ತರವಿತ್ತು ತನ್ನ ಸಂಗಡಿಗನೊಂದಿಗೆ ಶಿಬಿರದೊಳಗೆ ಪ್ರವೇಶಿಸಿ ಮರೆಯಾದನು.

ಬರಹಾಮುದ್ದೀನನು "ಪೀರಾಲಿಯು ಅವಶ್ಯವಾಗಿ ಯಾವುದೋ ವಿಶ್ವಾಸಘಾತಕವಾದ ತಂತ್ರವನ್ನು ಹೂಡುತ್ತಿರುವನು. ಇದರಲ್ಲಿ ಸಂದೇಹವಿಲ್ಲ, ಅಲ್ಲದೆ ಅದು ಝಾನ್ಸಿಯ ರಾಜ್ಯಕ್ಕೆ ಶುಭವೆಸಗುವಂತಹುದೆಂದು ತೋರುವುದಿಲ್ಲ. ಇಂದು ಇವನೊಂದಿಗಿರುವ ಮತ್ತೊಬ್ಬ ವ್ಯಕ್ತಿಯು ಯಾರಿರಬಹುದು?" ಎಂದು ಯೋಚಿಸತೊಡಗಿದನು.

ಬಹಳ ಎಚ್ಚರಿಕೆಯಿಂದ ಬರಹಾಮುದ್ದೀನನು ಹಿಂತಿರುಗಿ ಕೈಕಾಲುಗಳನ್ನು ತೊಳೆದುಕೊಂಡು ಬಂದು ಚರಂಡಿಯ ಪಕ್ಕದಲ್ಲಿ ಕುಳಿತು ಪೀರಾಲಿಯು ಹಿಂತಿರುಗುವುದನ್ನೇ ನಿರೀಕ್ಷಿಸುತ್ತಿದ್ದನು.

ಜನರಲ್ ರೋಜನ ಮುಂದೆ ಪೀರಾಲಿ ಮತ್ತು ದುಲ್ಹಾಜುರವರನ್ನು ಹಾಜರ್

ಪಡಿಸಲಾಯಿತು. ಸ್ಟುವರ್ಟನೂ ಅಲ್ಲೇ ಇದ್ದನು. ಪ್ರಶ್ನಾವಳಿಗಳು ಪ್ರಾರಂಭ ವಾದುವು.

ರೋಜ್—ನಿನ್ನೊಂದಿಗೆ ಬಂದಿರುವ ಈ ವ್ಯಕ್ತಿ ಯಾರು?

ಪೀರಾಲಿ—ದಿವಾನ್ ದುಲ್ಹಾಜು, ಠಾಕೂರ್ ಸಾಹೇಬ್. ಓರ್ಛಾ ದ್ವಾರದ ತೋಪುಗಳು ಇವರ ಅಧೀನದಲ್ಲಿವೆ.

ರೋಜ್—ಬಹಳ ಸಂತೋಷ. ಇವರು ರಾಜ ಪರಿವಾರಕ್ಕೆ ಸೇರಿದವರೇನು ?

ಪೀರಾಲಿ—ಹೌದು.

ರೋಜ್—ನೀವೇನು ಮಾಡಬಲ್ಲಿರಿ ದಿವಾನ್ ಸಾಹೇಬರೆ?

ದುಲ್ಹಾಜು—ನೀವೇನು ಹೇಳುವಿರೋ ಅದನ್ನು ಮಾಡುತ್ತೇನೆ.

ಪೀರಾಲಿ—ಇವರು ಬಹಳ ಸತ್ಯವಂತರು ಸಾಹೇಬ್. ಗಂಗಾಜಲವನ್ನು ಮುಟ್ಟಿ ಪ್ರಮಾಣ ಮಾಡಿಕೊಡುವರು.

ರೋಜನಿಗೆ ಪೀರಾಲಿಯು ಹೇಳಿದ ಮಾತು ಅರ್ಥವಾಯಿತು.

ದುಲ್ಹಾಜುವಿಗೆ ಬೆವರಿಡಲಾರಂಭಿಸಿತು. ಅಲ್ಲಿಂದ ಓಡಿ ಹೋಗಬೇಕೆಂದು ಅವನ ಮನ ನುಡಿಯಿತು. ಆದರೆ ಅಲ್ಲಿಂದ ಹೊರಬೀಳಲು ಎಳ್ಳಷ್ಟೂ ಸಾಧ್ಯವಿರಲಿಲ್ಲ. ಅಷ್ಟೇಕೆ, ನಿರಾಳವಾಗಿ ಶ್ವಾಸವಾಡುವುದೂ ಸಾಧ್ಯವಿರಲಿಲ್ಲ.

ರೋಜನು ಒಬ್ಬ ಹಿಂದೂ ಸಿಪಾಯಿಯ ಮೂಲಕ ಒಂದು ಲೋಟ ಗಂಗಾಜಲ ವನ್ನು ತರಿಸಿ "ನೀವು ಈ ಗಂಗಾಜಲವನ್ನು ಮುಟ್ಟಿ ಪ್ರಮಾಣ ಮಾಡಲೇ ಬೇಕು" ಎಂದನು.

ದುಲ್ಹಾಜುವು ಆ ಜಲಪಾತ್ರೆಯನ್ನು ಎರಡು ಕೈಗಳಿಂದಲೂ ಸ್ವೀಕರಿಸಿ ಕಣ್ಣು ಮುಚ್ಚಿದನು. ರಾಣಿಯ ಕುಪಿತವದನವು ಅವನ ಕಣ್ಣು ಮುಂದೆ ಸುಳಿದು ಹೋಯಿತು. ಅವನು ಕಣ್ಣು ತೆರೆದನು. ಅವನು ಮತ್ತೆ ಕಣ್ಣು ತೆರೆದನು.

ರೋಜನು ದುಲ್ಹಾಜುವು ಗಂಭೀರವಾಗಿ ಪ್ರಮಾಣ ಸ್ವೀಕರಿಸುತ್ತಿರುವನೆಂದು ಭಾವಿಸಿದನು.

ಪೀರಾಲಿಯು ಬಲಾತ್ಕರಿಸುತ್ತಾ "ಪ್ರಮಾಣ ಮಾಡಿ ದಿವಾ೯ಸಾಹೇಬರೆ" ಎಂದನು.

ದುಲ್ಹಾಜುವು "ನಾನು ನಂಬಿಕೆ ದ್ರೋಹ ಮಾಡಿದರೆ ಗಂಗಾಮಾತೆಯು ನನ್ನನ್ನು ಸಂಹರಿಸಲಿ" ಎಂದು ಶಪಥ ಮಾಡಿದನು.

ರೋಜ್—ಯಾರಿಗೆ ನಂಬಿಕೆ ದ್ರೋಹ? ಆಂಗ್ಲೇಯರಿಗೆ, ಕಂಪೆನಿ ಸರ್ಕಾರಕ್ಕೆ ನಂಬಿಕೆ ದ್ರೋಹ ಮಾಡುವುದಿಲ್ಲವೆಂದು ಶಪಥಮಾಡು.

ಪೀರಾಲಿ—ಶಪಥಮಾಡಿ ದಿವಾ೯ ಸಾಹೇಬ್.

ದುಲ್ಹಾಜುವು ಶಪಥಮಾಡಿದನು. "ಕಂಪೆನಿ ಸರ್ಕಾರಕ್ಕೂ, ಆಂಗ್ಲೇಯರಿಗೂ ನಂಬಿಕೆ ದ್ರೋಹವೆಸಗುವುದಿಲ್ಲ" ಎಂದು ಹೇಳಿ ನೀರಿನ ಪಾತ್ರೆಯನ್ನು ಕೆಳಗಿಟ್ಟನು.

ರೋಜನು "ಈಗಲೇ ಇಲ್ಲ. ಪುನಃ ಜಲಪಾತ್ರೆಯನ್ನು ಕೈಗೆ ತೆಗೆದುಕೊಂಡು ಓರ್ಛಾ ದ್ವಾರದ ಮೇಲಿನ ತೋಪುಗಳನ್ನು ನಿರುಪಯೋಗ ಪಡಿಸುತ್ತೇನೆ ಅಥವಾ ತೋಪುಗಳನ್ನು ಹಾರಿಸದೇ ಇದ್ದು ಓರ್ಛಾದ್ವಾರವನ್ನು ನಿಮ್ಮ ವಶಪಡಿಸುತ್ತೇನೆ ಎಂದು ಹೇಳಿ ಪ್ರಮಾಣ ಮಾಡು" ಎಂದನು.

ದುಲ್ಹಾಜುವು ಅದೇ ರೀತಿ ಶಪಥಮಾಡಿದನು.

ಪೀರಾಲಿಯು "ಹುಜೂರ್, ಇದಕ್ಕಾಗಿ ದೊರೆಯುವ ಪುರಸ್ಕಾರವೇನೆಂಬುದನ್ನು ಈಗಲೇ ತಿಳಿಸಬೇಕು." ಎಂದು ವಿನಯದಿಂದ ಕೇಳಿಕೊಂಡನು.

ರೋಜನು ಒಡನೆಯೇ ವರಪ್ರದಾನ ಮಾಡಿದನು "ದಿವಾನ್ ಸಾಹೇಬ್, ನಿರಂತರಕ್ಕೂ ಇರುವಂತೆ ಜೋಡಿಗ್ರಾಮವನ್ನು ಜಹಗೀರಾಗಿ ಕೊಡುತ್ತೇನೆ."

ದುಲ್ಹಾಜುವು ಕ್ಷೀಣ ನಗುವೊಂದನ್ನು ಪ್ರಕಟಿಸಿ ಪುರಸ್ಕಾರವನ್ನು ಸ್ವೀಕರಿಸಿದನು. ನಂತರ "ಯಾವಾಗ?" ಎಂದು ಪ್ರಶ್ನಿಸಿದನು.

ರೋಜನು "ನಾವು ಝಾನ್ಸಿಯನ್ನು ವಶಪಡಿಸಿಕೊಂಡು ಶಾಂತಿ ಸ್ಥಾಪಿಸಿದ ನಂತರ" ಎಂದು ಉತ್ತರವಿತ್ತನು.

"ಅದನ್ನು ನಾನು ಕೇಳಲಿಲ್ಲ. ನೀವು ತಿಳಿಸಿದ ಕಾರ್ಯವನ್ನಾವಾಗ ಮಾಡಬೇಕು?" ಎಂದು ದುಲ್ಹಾಜು ಕೇಳಿದನು.

ರೋಜ್ ಮತ್ತು ಸ್ಟುವರ್ಟರು ಸಲಹೆ ಮಾಡಿಕೊಂಡರು. ನಂತರ ಆತನು "ನಮ್ಮ ಕಂದುಕದ ಹಿಂದೆ ಕೆಂಪು ಬಾವುಟವು ಕಾಣಿಸುವುದನ್ನು ಇದಿರು ನೋಡುತ್ತಿರು. ಅದು ಕಾಣಿಸುವವರೆಗೂ ನಿನ್ನ ತೋಪುಗಳನ್ನು ಗುಡ್ಡದ ಕೆಳ ಭಾಗಕ್ಕೆ ಗುರಿಯಿಟ್ಟು ಚಲಾಯಿಸುತ್ತಿರು. ನಮ್ಮ ತೋಪುಗಳ ಮೇಲಾಗಲೀ ನಮ್ಮ ಪಡೆಯ ಮೇಲಾಗಲೀ ಗುಂಡು ಬೀಳದಂತೆ ಎಚ್ಚರಿಕೆ ವಹಿಸು. ನಮ್ಮ ತೋಪುಗಳಿಂದ ನಿನಗೂ ಯಾವ ಅಪಾಯವೂ ಆಗುವುದಿಲ್ಲ. ನಮ್ಮ ಗುಂಡುಗಳು ಕೋಟೆಯ ಗೋಡೆಯ ಬುಡದಲ್ಲಾಗಲೀ ಅಥವಾ ನಿನ್ನ ಬಗಲಿನಲ್ಲಿ ಎತ್ತರದಲ್ಲಿರುವ ಬುರುಜಿಯ ಮೇಲಾಗಲೀ ಬೀಳುವುವು. ನೀನು ಯಾವಾಗಲಾದರೂ ನಮಗೆ ದ್ರೋಹ ಮಾಡಿದರೆ ನಿನ್ನನ್ನು ಗಲ್ಲಿಗೇರಿಸುವೆವು." ಎಂದು ದುಲ್ಹಾಜುವಿಗೆ ತಿಳಿಸಿದನು.

ಅದನ್ನು ಕೇಳಿ ದುಲ್ಹಾಜುವಿನ ಮುಖಚರ್ಯೆಯು ಸಿಟ್ಟಿನಿಂದ ವಿವರ್ಣವಾಯಿತು.

"ನಾನು ಮಹತ್ತರವಾದ ಪ್ರಮಾಣವನ್ನು ಕೈಗೊಂಡಿರುವೆನು. ರಾಣೀ ಸಾಹೇಬರ ವಿಷಯದಲ್ಲಿ ನನ್ನ ಮನಸ್ಸೊಂದು ಬೇರ್ಪಟ್ಟಿದೆ ಎಂಬಂಶವು ಮಿರ್ ಸಾಹೇಬರಿಗೆ

ಚೆನ್ನಾಗಿ ಗೊತ್ತು."

ಪೀರಾಲಿಯು ಈ ಮಾತನ್ನು ಸಮರ್ಥಿಸಿದನು. ನಂತರ ಅವರಿಬ್ಬರೂ ಹೊರಟು ಹೋದರು.

ರೋಜನು ಸ್ಟುವರ್ಟನನ್ನು ಕುರಿತು "ರಾಜಪರಿವಾರದವರನ್ನು ನಮ್ಮ ಕೈಯ್ಯಲ್ಲಿಟ್ಟುಕೊಳ್ಳುವುದು ಅತ್ಯಾವಶ್ಯಕ. ಡಲ್‌ಹೌಸಿಯು ಇವರನ್ನು ಅಪಮಾನಗೊಳಿಸಿ ಪೂರಾ ಹಿಂದೂಸ್ಥಾನವನ್ನೇ ಕಳೆದು ಕೊಳ್ಳುವುದರಲ್ಲಿದ್ದನು.

ಸ್ಟುವರ್ಟ—ಆದರೆ ಮೇಲೆ ಬಿದ್ದು ಹೋಗಿ ಅವರನ್ನು ನಮ್ಮ ತಲೆಯ ಮೇಲೆ ಕುಳ್ಳಿರಿಸಿಕೊಳ್ಳಬಾರದು.

ರೋಜ್—ಇಲ್ಲ, ಅವರು ತಲೆಯಮೇಲೆ ಕುಳಿತುಕೊಳ್ಳಲು ಆಶಿಸುವುದಿಲ್ಲ. ತಮ್ಮ ತಮ್ಮ ಮುಖವುಲ್ಲಿನ ಗಾದಿಗಳ ಮೇಲೆ ಕುಳಿತಿರಬೇಕೆಂಬುದು ಅವರ ಆಸೆ. ಅಲ್ಲಿಯೇ ಅವರು ಸ್ಥಿರವಾಗಿರುವರು.

ಪೀರಾಲಿ ಮತ್ತು ದುಲ್ಹಾಜುವು ಚರಂಡಿಯ ಬಳಿಗೆ ಬಂದರು. ದುಲ್ಹಾಜುವು ಮತ್ತೆ ಮೂಗು ಮುಚ್ಚಿಕೊಂಡನು.

ಪೀರಾಲಿಯು ಮೋರಿಯಿಂದ ನಿರ್ಗಮಿಸಿದ ಕೂಡಲೆ "ದಿವಾನ್ ಸಾಹೇಬರೇ ಕೆಂಪು ಧ್ವಜದ ವಿಷಯವನ್ನು ಮಾತ್ರ ಮರೆಯಬೇಡಿ" ಎಂದನು.

ದುಲ್ಹಾಜುವು ಮೆಲ್ಲನೆ "ಹೂಂ" ಎಂದು ಹೇಳಿ ಓರ್ಛಾ ಹೆಬ್ಬಾಗಿಲಿನ ಕಡೆಗೆ ಸಾಗಿದನು. ಆತನು ಹೊರಟುಹೋದ ಮೇಲೆ ಪೀರಾಲಿಯು ಗೋಡೆಗೆ ಒತ್ತರಿಸಿ ಕೊಂಡು ನಿಂತಿರುವ ಒಂದು ವ್ಯಕ್ತಿಯನ್ನು ಕಂಡು ನಡುಗಿದನು.

"ಯಾರದು ?"

ಬರಹಾಮುದ್ದೀನನು ಮುಂದೆ ಬಂದು "ನಾನು, ಮಿರ್ ಸಾಹೇಬರೇ" ಎಂದು ಉತ್ತರವಿತ್ತನು.

ಡವಡವನೆ ಹೊಡೆದುಕೊಳ್ಳುತ್ತಿದ್ದ ಹೃದಯವನ್ನು ಅದುಮಿಕೊಂಡು "ಹಾಂ! ಇಲ್ಲೇನು ಮಾಡುತ್ತಿರುವಿರಿ ಖಾನ್ ಸಾಹೇಬರೇ ?" ಎಂದು ಕೇಳಿದನು.

"ಮೋರಿಯಿಂದ ಬರುತ್ತಿದ್ದ ನಡೆಯುವ ಹೆಜ್ಜೆಯ ಸಪ್ಪಳವನ್ನು ಕೇಳಿ ಅನುಮಾನ ಬಂದಿತು. ಆದುದರಿಂದ ಬಂದು ನೋಡಿದೆ. ನಿಮ್ಮ ಜೊತೆಯಲ್ಲಿದ್ದ ಮತ್ತೊಬ್ಬ ವ್ಯಕ್ತಿ ಯಾರು ?"

"ಯಾರೋ ಇರಬಹುದು. ಅದರಿಂದ ನಿಮಗೇನಾಗಬೇಕಾಗಿದೆ ?"

ಪೀರಾಲಿಯು ತನ್ನ ಗಾಬರಿಯನ್ನು ತೋರ್ಪಡಿಸಿಕೊಳ್ಳದೇ "ಗೂಢಚಾರ ವಿಭಾಗದ ಕಾರ್ಯಾಚರಣೆಯಲ್ಲಿ ಅನಾವಶ್ಯಕವಾಗಿ ಪ್ರವೇಶಿಸಬಾರದು" ಎಂದು ಹೇಳಿದನು.

ಬರಹಾಮುದ್ದೀನ್—ನೀವು, ಇಬ್ಬರಿದ್ದರೆ ಅಪಾಯ ಸಂಭವಿಸುವ ಆವಕಾಶ ಗಳು ಹೆಚ್ಚು, ಆದುದರಿಂದ ಒಬ್ಬನೇ ಹೋಗುವೆನೆಂದು ಹೇಳಿದ್ದಿರಲ್ಲಾ.

ಪೀರಾಲಿ—ನಿಮ್ಮನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿದ್ದರೆ ಅಪಾಯವು ಖಂಡಿತವಾಗಿಯೂ ದ್ವಿಗುಣವಾಗುತ್ತಿದ್ದಿತು.

ಬರಹಾಮ್—ಈ ದಿವಾನ್ ಸಾಹೇಬರಾರು?

ಪೀರಾಲಿ—ದಿವಾನ್ ಸಾಹೇಬರುಗಳಿಗೂ, ಖಾಸಾಹೇಬರುಗಳಿಗೂ ಝಾನ್ಸಿ ಯಲ್ಲೇನು ಕಡಿಮೆ? ಹೇರಳವಾಗಿದ್ದಾರೆ.

ಬರಹಾಮ್—ಹೌದು ಮೀರ್‌ಸಾಹೇಬರೇ, ಸಂದೇಹವೇ ಇಲ್ಲ.

ಪೀರಾಲಿ—ನಿಮ್ಮ ಕೆಲಸವನ್ನು ನೀವು ನೋಡಿಕೊಂಡು ಹೋಗಿ. ನಾನು ಹೋಗಿ ಮಲಗಿಕೊಳ್ಳುವೆನು. ಇನ್ನೊಬ್ಬರ ಮಾತಿನಲ್ಲಿ ತಲೆಹಾಕುವುದು ಸೂಕ್ತವಲ್ಲ ವೆಂಬುದನ್ನು ನೆನಪಿನಲ್ಲಿಡಿ.

ಬರಹಾಮ್—ಒಪ್ಪಿದೆ ಮೀರ್‌ಸಾಹೇಬರೇ. ಆದರೆ ಇಂದು ಹೇಗೆ ಹೋಗಿ ಆಂಗ್ಲ ಶಿಬಿರವನ್ನು ಸೇರಿದಿರಿ ಮತ್ತು ಅಲ್ಲೇನೇನು ಮಾಡಿ ಬಂದಿರಿ ಎಂಬುದನ್ನಾದರೂ ಸ್ವಲ್ಪ ಹೇಳಿ ಹೋಗಿ.

ಪೀರಾಲಿ—ನೀವೇಕೆ ನನ್ನ ಹಿಂದೆ ಬರಲಿಲ್ಲ?

ಬರಹಾಮ್—ಅನುಸರಿಸಿಯೇನೋ ಬಂದಿದ್ದೆ. ಆದರೆ ಆ ಕೆಂಪು ಬಾವುಟದ ವಿಚಾರಮಾತ್ರ ಅರ್ಥವಾಗಲಿಲ್ಲ.

ಆ ಮಾತನ್ನು ಕೇಳಿ ಪೀರಾಲಿಯ ತಲೆಯು ಗಿರ್ರನೆ ತಿರುಗಿತು. ಆದರೆ ಆತನು ಮನೋನಿಗ್ರಹಣವನ್ನು ಚೆನ್ನಾಗಿ ಅಭ್ಯಾಸಿಸಿದ್ದುದನಾದುದರಿಂದ "ಕೆಂಪು ಧ್ವಜದ ವಿಷಯವನ್ನು ರಾಣೀ ಸಾಹೇಬರಿಗೆ ತಿಳಿಸಲಾಗುವುದೇ ವಿನಃ ನಿಮ್ಮೊಂದಿಗೆ ಹೇಳ ಲಾಗುವುದಿಲ್ಲ" ಎಂದು ಉತ್ತರವಿತ್ತನು.

ಬರಹಾಮನು "ರಾಣೀ ಸಾಹೇಬರಲ್ಲಿ ನಾನೂ ಸ್ವಲ್ಪ ಅರ್ಜಿಮಾಡಿಕೊಳ್ಳು ವೆನು" ಎಂದನು.

ಪೀರಾಲಿಯು ಅಲ್ಲಿಂದ ತನ್ನ ಶಯನ ಗೃಹಕ್ಕೆ ಬಂದನು. ಅವನಿಗೆ ನಿದ್ರೆ ಹತ್ತ ಲಿಲ್ಲ. ಎರಡು ದಿನಗಳ ಹಿಂದೆಯೇ ಆತನು ಒಂದು ನಿರ್ಧಾರಕ್ಕೆ ಬಂದಿದ್ದನು. ಮುಂಜಾನೆಯೇ ಎದ್ದು ರಾಣಿಯ ಬಳಿಗೆ ಹೋದನು.

ಹಿಂದಿನ ದಿನ ಅನೇಕ ತೋಪ್ಚಿಗಳೂ ಮತ್ತು ಸೈನಿಕರೂ ಸತ್ತು ಹೋಗಿದ್ದರು. ರಾತ್ರೆಯಲ್ಲಿ ರಾಣಿಯು ಅವರ ಸ್ಥಳಗಳಿಗೆ ಬೇರೆ ತೋಪ್ಚಿಗಳನ್ನು ನಿಯಮಿಸಿದ್ದಳು. ಇದಕ್ಕೆ ಮೊದಲೇ ಅವಳು ಹೊಸ ಸೈನಿಕರನ್ನು ಭರ್ತಿಮಾಡುವ ಯೋಜನೆಯಲ್ಲಿ ಮಗ್ನಳಾಗಿದ್ದಳು. ಜವಹರಸಿಂಹ ರಘುನಾಥಸಿಂಹರೂ ಅದೇ ಚಿಂತೆಯಲ್ಲಿ ಅವಳ

ಬಳಿಯೇ ಇದ್ದರು.

ಪೀರಾಲಿಯು ಒಡನೆಯೇ ಹೋಗಿ ನಿವೇದಿಸಿಕೊಂಡನು "ಶ್ರೀಮಂತ್ ಸರ್ಕಾರ್, ಇಂದು ಪಶ್ಚಿಮ ದಿಕ್ಕಿನಿಂದ ಉಗ್ರವಾದ ಧಾಳಿ ನಡೆಯುವಂತಿದೆ. ನಿಮ್ಮ ಗಮನ ವೆಲ್ಲವೂ ಆ ದಿಕ್ಕಿನಲ್ಲಿ ನೆಟ್ಟಿರುವಾಗ ದಕ್ಷಿಣ ದಿಕ್ಕಿನಲ್ಲಿರುವ ಜೀವನಶಹ ಗುಡ್ಡದ ಪಕ್ಕ ದಿಂದ ಆಕ್ರಮಣ ನಡೆಯುತ್ತದೆ. ಇದು ಗೂಢಚಾರ ವೃತ್ತಿಯಿಂದ ಶೇಖರಿಸಿದ ವೃತ್ತಾಂತ."

ರಾಣಿಯು ವಿರಕ್ತಿಯಿಂದ "ನೋಡೋಣ, ತಕ್ಕ ಪ್ರಬಂಧ ಮಾಡಲಾಗಿದೆ" ಎಂದಳು.

ಅವಳು ಯಾವುದೋ ಕೆಲಸಕ್ಕಾಗಿ ನಗರದೊಳಗೆ ಹೋಗುವವಳಿದ್ದಳು. ಪೀರಾಲಿಯು ಕೈಮುಗಿದು "ಶ್ರೀಮಂತ್ ಸರ್ಕಾರ್, ಆ ಬರಹಾಮುದ್ದೀನನನ್ನು ನನ್ನ ಸ್ಥಾನದಿಂದ ತೆಗೆದು ಹಾಕಬೇಕು. ಆತನು ನನ್ನ ಕೆಲಸಕ್ಕೆ ಬಹಳ ಅಡ್ಡಿಪಡಿಸು ತ್ತಾನೆ." ಎಂದನು.

"ನೋಡೋಣ. ಮತ್ತೇನಾದರೂ ಹೇಳುವುದಿದೆಯೆ?"

ಪೀರಾಲಿಯು ಸ್ವಲ್ಪ ತಗ್ಗಿದ ಧ್ವನಿಯಲ್ಲಿ ನಿಧಾನಿಸುತ್ತಾ ಹೇಳಿದನು. "ಹುಜೂರ್, ಒಂದು ಕೆಂಪು ಧ್ವಜದ ವಿಷಯವಾಗಿ ಬಿನ್ನವಿಸಿಕೊಳ್ಳಬೇಕೆಂದಿರು ವೆನು."

ರಾಣಿ—ಕೆಂಪು, ಹಳದಿ ಬಾವುಟಗಳ ವಿಚಾರವೇನಿದ್ದರೂ ಬೇಗನೆ ಹೇಳಿ ಮುಗಿಸು.

ಪೀರಾಲಿ—ಆಂಗ್ಲೇಯರು ನಮ್ಮನ್ನು ಮೋಸಗೊಳಿಸಲು ಕೆಂಪು ಧ್ವಜ ಒಂದನ್ನು ಯಾವ ಗುಡ್ಡದ ಮೇಲಿನಿಂದಾದರೂ ಎತ್ತಿಹಿಡಿದು ಗುಂಡಿನ ಮಳೆಗರಿಸಿ ಅತ್ಯಾರ್ಭಟಮಾಡಬಹುದು. ಆದರೆ ಆಕ್ರಮಣವನ್ನು ಬೇರೆ ಯಾವುದಾದರೂ ದಿಕ್ಕಿನಿಂದ ಮಾಡುವರು.

ರಾಣಿ—ಅರ್ಥವಾಯಿತು. ಮತ್ತೇನಾದರೂ ಇದೆಯೆ?

ಪೀರಾಲಿ—ಇನ್ನೇನೂ ಇಲ್ಲ. ಹುಜೂರ್, ದಯವಿಟ್ಟು ಬರಹಾಮನು ನನ್ನ ಜೊತೆಯಲ್ಲಿ ಕೆಲಸ ಮಾಡುವುದನ್ನು ತಪ್ಪಿಸಬೇಕು.

ರಾಣಿಯು ಸಮ್ಮತಿ ಸೂಚಿಸಿದಂತೆ ತಲೆಯಾಡಿಸಿ ಜವಹರ್‌ಸಿಂಹನೊಡನೆ ನಗರದ ಕಡೆಗೆ ಸಾಗಿದಳು. ಪೀರಾಲಿಯು ಅಲ್ಲಿಂದ ಹೊರಟು ಹೋದನು.

ಮಾರ್ಗದಲ್ಲಿ ರಾಣಿಗೆ ಬರಹಾಮುದ್ದೀನನು ಸಿಕ್ಕಿ ಅವಳನ್ನು ತಡೆದು ಅತಿ ವಿನಯದಿಂದ ಪ್ರಾರ್ಥಿಸಿದನು: "ಹುಜೂರ್, ಪೀರಾಲಿಯ ವಿಷಯದಲ್ಲಿ ಜಾಗ್ರತೆ ಯಿಂದಿರಿ. ಆತನು ರಾತ್ರಿಯ ವೇಳೆಯಲ್ಲಿ ಆಂಗ್ಲೇಯರ ಶಿಬಿರಕ್ಕೆ ಹೋಗಿ ಬರುತ್ತಿ

ರುವನು."

ರಾಣಿಯು ರಾತ್ರಿಯೆಲ್ಲಾ ಜಾಗರಣೆ ಮಾಡಿದ್ದಳು. ಅತಿ ತ್ವರೆಯಾಗಿ ಸೈನಿಕರ ಬಂದೋಬಸ್ತು ಮಾಡುವುದು ಅವಶ್ಯಕವಾಗಿದ್ದಿತು. ಮಾರ್ಗದಲ್ಲಿ ಹೆಜ್ಜೆಹೆಜ್ಜೆಗೂ ಒದಗುತ್ತಿದ್ದ ಈ ತಡೆಗಳನ್ನು ಸಹಿಸದಾದಳು.

ಆಕೆಯು "ಇದು ನಿನಗೆ ಹೇಗೆ ಗೊತ್ತು ?" ಎಂದು ಕೇಳಿದಳು.

ಬರಹಾಮುದ್ದೀನನು "ನಾನು ಅವನನ್ನು ಅನುಸರಿಸಿ ಹೋದೆ. ಆಂಗ್ಲೇಯರ ಶಿಬಿರದ ಕಾವಲುಗಾರನು ಅವನನ್ನು ಶಿಬಿರದೊಳಗೆ ಪ್ರವೇಶಿಸಲು ಅನುಮತಿಯಿತ್ತನು. ಇದು ಮೊದಲನೆಯ ದಿನ ನಡೆದ ಸಂಗತಿ ಪ್ರಭು. ನೆನ್ನೆಯ ರಾತ್ರಿ ಇವನು ಯಾರೋ ಒಬ್ಬ ದಿವಾನ್ ಸಾಹೇಬರನ್ನು ತನ್ನೊಡನೆ ಕರೆದುಕೊಂಡು ಹೋದನು. ಮತ್ತೆ ನಾನು ಇವನನ್ನು ಮೊದಲಿನಂತೆಯೇ ಹಿಂಬಾಲಿಸಿ ಹೋದೆ. ಕಾವಲುಗಾರನು ಹಿಂದಿನಂತೆಯೇ ಬೊಬ್ಬಿಡುತ್ತಾ ಇವರನ್ನು ತಡೆದನು. ಈತನೂ ಎತ್ತಿದ ಧ್ವನಿಯಲ್ಲಿ ಸಂಕೇತ ರೀತಿಯಿಂದ ಉತ್ತರವಿತ್ತನು. ಒಡನೆಯೇ ಇಬ್ಬರಿಗೂ ಶಿಬಿರ ಪ್ರವೇಶಕ್ಕೆ ಅವಕಾಶ ದೊರಕಿತು. ನಂತರ ಬಹಳ ಹೊತ್ತಿನ ಮೇಲೆ ಅವರು ಹಿಂದಿರುಗಿದರು. ಅವರಿಬ್ಬರೂ ಬೇರೆ ಬೇರೆಯಾಗುವ ಮೊದಲು ಪೀರಾಲಿಯು ತನ್ನ ಸಂಗಡಿಗನನ್ನು ಕುರಿತು 'ದಿವಾನ್ ಸಾಹೇಬ್, ಕೆಂಪು ಧ್ವಜದ ವಿಷಯವನ್ನು ನೆನಪಿನಲ್ಲಿಡಿ' ಎಂದನು. ನಾನು ಆ ದಿವಾನ್ ಸಾಹೇಬರನ್ನು ಗುರುತಿಸಲಾಗಲಿಲ್ಲ. ಹುಜೂರ್, ಇದರಲ್ಲೇನೋ ಕೃತ್ರಿಮವಿದೆ, ದ್ರೋಹವಿದೆ, ಮೋಸವಿದೆ" ಎಂದು ಹೇಳಿದನು.

ಕುದುರೆಯು ಮುಂದೋಡುವುದಕ್ಕಾಗಿ ಗೊರಸಿನ ಧ್ವನಿಮಾಡುತ್ತಾ ಲಗಾಮನ್ನು ಎಳೆಯುತ್ತಿದ್ದಿತು.

ರಾಣಿಯು ಕುದುರೆಯ ಕಡಿವಾಣವನ್ನು ಎಳೆದು ನಿಲ್ಲಿಸುತ್ತಾ ಹೇಳಿದಳು. "ನೀನು ಶುದ್ಧ ಮೂರ್ಖನೆಂದು ಕಂಡುಬರುತ್ತದೆ. ನಿನ್ನ ಕರ್ತವ್ಯವನ್ನು ಬಿಟ್ಟು ಮತ್ತೊಬ್ಬನ ಹಿಂದೆ ತಿರುಗುತ್ತಿರುವೆ. ನಿನ್ನ ಕೆಲಸವನ್ನು ನೋಡು ಹೋಗು."

ರಾಣಿಯು ಮುಂದೆ ಸಾಗಿದಳು. ಹಿಂದಿದ್ದ ಜವಹರಸಿಂಹನು ವಿನಯದಿಂದ "ಸರ್ಕಾರ್, ಪಠಾಣನು ಮೂರ್ಖನಂತೆ ತೋರುವುದಿಲ್ಲ. ಪೀರಾಲಿಯ ಪರೀಕ್ಷೆ ನಡೆಯಲೇಬೇಕು" ಎಂದು ಹೇಳಿದನು.

ರಾಣಿಯು "ಮೊದಲು ಮುಂದಿರುವ ಕಾರ್ಯವನ್ನು ಮುಗಿಸಿ ನಂತರ ಪರೀಕ್ಷೆಯನ್ನು ಮಾಡಿ. ಪೀರಾಲಿಯ ಜೊತೆಯಲ್ಲಿ ಹೋದ ದಿವಾನ್ ಸಾಹೇಬನಾರೆಂದು ಮೊದಲು ಪತ್ತೆ ಹಚ್ಚಬೇಕು" ಎಂದಳು.

ರಾಣಿಯು ಹೊಸ ಸೈನಿಕರ ಪ್ರಬಂಧಮಾಡಿ ಕಿಲ್ಲೆಗೆ ಹಿಂದಿರುಗಿದಳು.

ಜವಹರಸಿಂಹನು ನಗರದ ರಕ್ಷಣೆಯ ಕಾರ್ಯದಲ್ಲಿ ತೊಡಗಿದನು.

ರಾಣಿಗೆ ಸ್ವಲ್ಪ ಅವಕಾಶ ದೊರಕಿದಾಗ ಮೋತೀಬಾಯಿಯೊಂದಿಗೆ ಬರಹಾಮುದ್ದೀನನು ಹೇಳಿದ ಮಾತನ್ನು ಚರ್ಚಿಸಿದಳು.

ಮೋತೀಬಾಯಿಯು "ಪೀರಾಲಿಯು ದ್ರೋಹ ಮಾಡಲು ಸಮರ್ಥನು. ಅವನೊಡನೆ ದಿವಾನ್ ದುಲ್ಹಾಜುವು ಹೋಗಿರಬಹುದು. ನೀವು ಆತನ ವಿಚಾರದಲ್ಲಿ ಕುಪಿತರಾಗಿದ್ದಿರಿ" ಎಂದಳು.

ರಾಣಿಯು "ಇವರೀರ್ವರ ಪರೀಕ್ಷೆಯಾಗುವವರೆಗೆ ಇವರ ಮೇಲೆ ಕಣ್ಣಿಟ್ಟಿರಬೇಕು. ಆದರೆ ನಂತರದಲ್ಲಿ ಪಶ್ಚಾತಾಪ ಪಡಬೇಕಾಗುವಂತಹ ದುಡುಕಿನ ಸಾಹಸ ಮಾಡ ಬಾರದು. ಪೀರಾಲಿಯು ಹಿಂದೆ ಉತ್ತಮ ಸಾಹಸ ತೋರಿಸಿದ್ದನು. ಮತ್ತು ದಿವಾನ್ ದುಲ್ಹಾಜುವು ಓರ್ಛಾ ದ್ವಾರವನ್ನು ರಕ್ಷಿಸಿದ್ದಾನೆ. ಈಗ ಸದ್ಯದಲ್ಲಿ ದುಲ್ಹಾಜುವಿಗೆ ಬದಲಾಗಿ ಕಳುಹಿಸಲು ಉತ್ತಮ ಗೋಲಂದಾಜಿಗಳಾರೂ ನಮ್ಮಲ್ಲಿಲ್ಲ" ಎಂದಳು.

ಮೋತೀಬಾಯಿಯು ಉತ್ತರ ಕೊಡುತ್ತಾ "ನನ್ನ ಮನೋಭಿಪ್ರಾಯದಲ್ಲಿ ಹಗಲಿನಲ್ಲಿ ಸುಂದರಿಯನ್ನು ದಿವಾನ್ ದುಲ್ಹಾಜುವಿನ ಜೊತೆಯಲ್ಲಿ ಕೆಲಸ ಮಾಡಲು ಕಳುಹಿಸಿ. ರಾತ್ರಿಯಲ್ಲಿ ಮತ್ತಾರನ್ನಾದರೂ ನಿಯುಕ್ತ ಮಾಡುವುದುತ್ತಮವೆಂದು ತೋರುತ್ತದೆ" ಎಂದು ಹೇಳಿದಳು.

ರಾಣಿಯು ಸಮ್ಮತಿಸಿದಳು.

ಸುಂದರಿಯು ರಾತ್ರಿಯೆಲ್ಲಾ ಎಚ್ಚೆತ್ತಿದ್ದು ಆಗ ತಾನೆ ನಿದ್ರೆಮಾಡುವುದಕ್ಕೆ ತಯಾರಾಗುತ್ತಿದ್ದಳು. ಅವಳಿಗೆ ಈ ವಿಚಾರವನ್ನು ತಿಳಿಸಿದ ಕೂಡಲೇ ಅವಳ ನಿದ್ರೆಯು ಮಾಯವಾಯಿತು. ಅವಳು ಸ್ನಾನಮಾಡಿ ಸ್ವಲ್ಪ ಆಹಾರ ಸೇವಿಸಿ ಓರ್ಛಾ ದ್ವಾರಕ್ಕೆ ಹೋಗಿ ಸೇರಿದಳು.

ಆ ದಿನ ಘೋರ ಯುದ್ಧವು ನಡೆದು ಎರಡು ಕಡೆಯೂ ವಿಶೇಷವಾದ ನರಸಂಹಾರವಾಯಿತು. ಅಂದಿನ ವಿಶೇಷ ಸುದ್ದಿಯೇನೆಂದರೆ ಕೇವಲ ಓರ್ಛಾ ದ್ವಾರದ ತೋಪುಗಳು ಸರಿಯಾಗಿ ಕೆಲಸ ಮಾಡಲಿಲ್ಲ. ಅಲ್ಲದೆ ಒಂದು ಗುಂಡು ಶತ್ರುವಿನೆಡೆಯಿಂದ ಬಂದು ಮಹಲ್ಲಿನ ಮುಂಭಾಗದಲ್ಲಿ ಮದ್ದು ತಯಾರು ಮಾಡುತ್ತಿದ್ದ ಸ್ಥಳದಲ್ಲಿ ಬಿದ್ದು ಸಿಡಿಯಿತು. ಅದರ ಪರಿಣಾಮವಾಗಿ ಮದ್ದು ಹೊತ್ತಿಕೊಂಡು ಸಿಡಿದು ಸುಮಾರು ೨೦–೩೦ ಮಂದಿ ಸ್ತ್ರೀ ಪುರುಷರು ಭಸ್ಮವಾದರು. ಅವರ ಒಂದು ಅಂಗವೂ ಸಿಕ್ಕದಂತಾಯಿತು.

ತೋಪು ತುಪಾಕಿಗಳಿಗೆ ತುಂಬುವ ಮದ್ದಿಗೆ ಬೆಂಕಿ ಬಿದ್ದ ಪ್ರಯುಕ್ತ ಕಿಲ್ಲೆಯಲ್ಲಿ ಗಲಿಬಿಲಿಯುಂಟಾಯಿತು. ಕಿಲ್ಲೆಯ ಕೋಟೆ ಗೋಡೆಯಲ್ಲಿ ಅಲ್ಲಲ್ಲಿ ಬಿರುಕು ಬಿಟ್ಟು ಅನೇಕ ರಂಧ್ರಗಳಾಗಿದ್ದುವು. ಸಂಜೆಯಾದನಂತರ ರಾಣಿಯು ನಗರದಲ್ಲಿ ಪ್ರವೇಶಿಸಿ

ಕೋಟೆ ಗೋಡೆಯನ್ನು ಸರಿಪಡಿಸಲು ತಕ್ಕ ಏರ್ಪಾಡುಗಳನ್ನು ಮಾಡಿದ್ದಳು. ಆ ಸಮಯದಲ್ಲಿ ಹಿಂದಿನ ಎಲ್ಲಾ ರಾತ್ರಿಗಳಿಗಿಂತ ಹೆಚ್ಚಾಗಿ ಆ ರಾತ್ರಿ ತೋಪಿನ ಕಾರ್ಯಾಚರಣೆಯಾಗಿ ಗುಂಡುಗಳು ಒಂದರ ಮೇಲೊಂದು ಬೀಳುತ್ತಲೇ ಇದ್ದುವು. ಕೋಟೆಯ ಪ್ರಾಕಾರವನ್ನು ಇಷ್ಟು ಆತಂಕದಲ್ಲಿಯೂ ಸರಿಪಡಿಸಲಾಯಿತು. ರಾಣಿಯು ಬಹಳ ಹೊತ್ತಿನ ಮೇಲೆ ಹಿಂದಿರುಗಿದಳು. ಆಕೆಯು ನೇರವಾಗಿ ಮಹದೇವನ ಮಂದಿರಕ್ಕೆ ಹೋಗಿ ಧ್ಯಾನಮಾಡಿ ನಂತರ ವಾಯುಸೇವನೆಗಾಗಿ ಕಟ್ಟಿಸಿದ ಬಾರಾದರಿಯಲ್ಲಿ (ವಾಯು ಸೇವನಾಮಂಟಪ) ಹೋಗಿ ಮಲಗಿಕೊಂಡಳು. ಆಗ ಅವಳೊಂದು ಕನಸು ಕಂಡಳು.

ಒಬ್ಬ ಗೌರವರ್ಣದ ಸ್ತ್ರೀ, ಸುಂದರವಾದ ಆಕೃತಿ, ವಿಶಾಲವಾದ ಕರಾಳನೇತ್ರಗಳು, ಕೆಂಪುವರ್ಣದ ಸೀರೆಯನ್ನುಟ್ಟು ಸೆರಗನ್ನು ಸೊಂಟಕ್ಕೆ ಸುತ್ತಿ ಸರ್ವಾಭರಣ ಭೂಷಿತಳಾಗಿ ಕಿಲ್ಲೆಯ ಬುರುಜಿಯ ಮೇಲೆ ನಿಂತು ಆಂಗ್ಲೇಯರು ಬರುತ್ತಿದ್ದ ಕೆಂಪಾದ ಗುಂಡುಗಳನ್ನು ತನ್ನ ಕೋಮಲಹಸ್ತಗಳಿಂದ ತಡೆಯುತ್ತಿರುವಳು. "ಲಕ್ಷ್ಮೀಬಾಯಿ ನೋಡು, ಈ ಗುಂಡುಗಳನ್ನು ತಡೆದು ತಡೆದು ಕೈಗಳು ಕಪ್ಪುಗಟ್ಟಿವೆ. ಚಿಂತೆ ಮಾಡಬೇಡ ಸ್ವರಾಜ್ಯ ದೇವಿಯು ಅಮರಳು" ಎಂದು ಆಕೆಯು ಹೇಳಿದಳು. ಅಷ್ಟರಲ್ಲಿ ಸ್ವಪ್ನ ಭಂಗವಾಗಿ ರಾಣಿಯು ಎದ್ದು ಕುಳಿತಳು. ಆಗ ಭಯಂಕರವಾದ ಗುಂಡಿನ ಸುರಿಮಳೆಯಾಗುತ್ತಿದ್ದಿತು ಆದರೆ ಅವಳಿಗೆ ಯಾವ ಚಿಂತೆಯಾಗಲಿ ಆಯಾಸವಾಗಲಿ ತೋರಿಬರಲಿಲ್ಲ. ಮಲಗಿದ್ದ ಸ್ಥಳದಿಂದ ತಟ್ಟನೆದ್ದು ತಾನು ಕಂಡ ಸ್ವಪ್ನವನ್ನು ಸೇನಾಪತಿ ಮತ್ತು ಮುಖ್ಯಸ್ಥರಾದ ದಳನಾಯಕರಿಗೆ ಹೋಗಿ ತಿಳಿಸಿದಳು. ಮುಂಜಾನೆಯ ವೇಳೆಗೆ ಈ ಸಮಾಚಾರವು ನಗರದಲ್ಲೆಲ್ಲಾ ಮಿಂಚಿನಂತೆ ಹಬ್ಬಿ ಪ್ರತಿಯೊಬ್ಬ ಸ್ತ್ರೀ ಪುರುಷರ ನಾಡಿಗಳಲ್ಲಿ ವಿದ್ಯುತ್ಪ್ರವಾಹ ಹರಿದಂತಾಯಿತು. ಬಿರುಸಿನಿಂದ ಯುದ್ಧವು ಮುಂದುವರಿಯಿತು. ಮೊದಲನೆಯ ದಿನಕ್ಕಿಂತ ನೂರ್ಮಡಿ ಬಿರುಸಾಗಿದ್ದಿತು. ಆ ದಿನ ಪೀರಾಲಿ ಮತ್ತು ಬರಹಾಮುದ್ದೀನರ ಮಾಸುಳೆಯ ಪರೀಕ್ಷೆ ನಡೆಸಲಾಗಲಿಲ್ಲ. ಆದರೆ ಸಂಜೆಯ ವೇಳೆಗೆ ದುಲ್ಹಾಜುವು ಉದಾಸೀನನಾಗಿ ಕೆಲಸ ಮಾಡಿದನೆಂದು ರಾಣಿಗೆ ತಿಳಿದು ಬಂದಿತು.

## ೭೦

ಅಂದು ರಘುನಾಥಸಿಂಹ ಮತ್ತು ಮುಂದರಿ ಇಬ್ಬರೂ ಸೇರಿ ತೋಪನ್ನು ಚಲಾಯಿಸುತ್ತಿದ್ದರು. ಹೊಗೆ ಮತ್ತು ಮದ್ದುಗಳಿಂದ ಇಬ್ಬರ ಮುಖಗಳೂ ಕೈಗಳೂ ಕಪ್ಪಾಗಿ ಹೋಗಿದ್ದವು. ಇದು ನಿತ್ಯದ ದಿನಚರಿಯಾಗಿದ್ದಿತು. ಆದರೆ ಅಂದು ಸ್ವಲ್ಪ

ಅಧಿಕವಾಗಿ ಕಪ್ಪುಗಟ್ಟಿದ್ದಿತು. ಇಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡು ನಸು ನಗುತ್ತಿದ್ದರು.

ಮಧ್ಯಾಹ್ನವಾಯಿತು. ರಘುನಾಥಸಿಂಹನು "ಇಂದು ಇಷ್ಟು ಹೊತ್ತಾದರೂ ಊಟವೇ ಬಂದಿಲ್ಲ. ನಿಮಗೆ ಹಸಿವಾಗುವುದಲ್ಲವೆ ಮುಂದರಿಬಾಯಿ?" ಎಂದು ಕೇಳಿದಳು.

"ನಾನು ಹೋಗಿ ತೆಗೆದುಕೊಂಡು ಬರುತ್ತೇನೆ" ಎಂದಳು ಮುಂದರಿ.

"ಇಲ್ಲಿರುವ ಬಿಂದಿಗೆಯ ನೀರು ಕುಡಿಯಲು ಯೋಗ್ಯವಾಗಿಲ್ಲ, ಹಾಗೆಯೇ ಒಂದು ಬಿಂದಿಗೆ ನೀರೂ ಬೇಕು" ಎಂದು ರಘುನಾಥಸಿಂಹನು ಹೇಳಿದನು.

ಮುಂದರಿಯು ಬಹಳ ಬಳಲಿದ್ದಳು. ಸುಳಿಗಾಳಿಯಿಂದ ಅವಳ ಕೇಶಧಾಮದಿಂದ ಒಂದೆರಡು ಮುಂಗುರುಳು ಮಸಿಯಿಂದ ಕಪ್ಪಾಗಿದ್ದ ಆಕೆಯ ಮುಖದ ಮೇಲೆ ನಲಿದಾಡಿದುವು. ಇದರಿಂದ ಅವಳು ಇನ್ನೂ ಹೆಚ್ಚಾಗಿ ಆಯಾಸಗೊಂಡಿದ್ದಂತೆ ಕಂಡು ಬಂದಳು.

ರಘುನಾಥಸಿಂಹನು "ನೀವೇ ನೀರನ್ನು ತೆಗೆದುಕೊಂಡು ಬರಬೇಡಿ. ಯಾರ ಕೈಯ್ಯಲ್ಲಾದರೂ ಹೊರಿಸಿಕೊಂಡು ಬನ್ನಿ. ಯಾರೂ ಸಿಕ್ಕದಿದ್ದರೆ ನಾನು ಊಟ ಮಾಡಿ ಕೆಳಗಿಳಿದು ನೀರು ಕುಡಿದು ಬರುವೆನು. ಅದುವರೆಗೆ ನೀವು ಸ್ವಲ್ಪ ತೋಪಿನ ಕೆಲಸವನ್ನು ನಿಭಾಯಿಸಿಕೊಳ್ಳಿ. ನಿಧಾನವಾಗಿ ಊಟಮಾಡಿ ಬನ್ನಿ ಅವಸರವೇನಿಲ್ಲ" ಎಂದನು.

ದಣಿದಿದ್ದ ಮುಂದರಿಯು ಅದನ್ನು ಕೇಳಿ ನಕ್ಕಳು. ಆ ನಗುವು ರಾತ್ರೆಯ ಕಾಲದ ನಕ್ಷತ್ರವೊಂದು ಕ್ಷಣ ಮಾತ್ರ ಮಿನುಗಿ ಮಾಯವಾದಂತಿದ್ದಿತು.

ಆಕೆಯು "ನಾನೇನು ಒಂದು ಬಿಂದಿಗೆ ನೀರನ್ನು ತರಲಾರೆನೇ?" ಎಂದಳು.

ರಘುನಾಥಸಿಂಹ—ನೀವು ಬಹಳ ದಣಿದಿರುವಿರಿ.

ಮುಂದರಿ—ನೀವಾದರೋ?

ರಘುನಾಥಸಿಂಹ—ನಾನು ಕುಳಿತಲ್ಲಿಯೇ ಕುಳಿತು ಸೋತು ಹೋಗಿರುವೆನು.

ಮುಂದರಿ—ಇದೇ ನನ್ನ ಪ್ರಶ್ನೆಗೆ ಉತ್ತರ?

ರಘುನಾಥಸಿಂಹ—ಹಾಗೋ, ಸರಿ ನಾನು ದಣಿದಿಲ್ಲ, ಮುಂದರಿಬಾಯಿ.

ಮುಂದರಿ—ಹಾಗಾದರೆ ದಿವಾನ್ ಸಾಹೇಬರೇ ನಾನೂ ಎರಡು ಬಿಂದಿಗೆ ನೀರು ತರಲು ಶಕ್ತಳು.

ರಘುನಾಥಸಿಂಹ—ಸದ್ಯ, ಹಾಗೆ ಮಾತ್ರ ಮಾಡಕೂಡದು.

ಮುಂದರಿ—ಊಟಕ್ಕೇನು ತರಲಿ? ಲಡ್ಡೂ ಬೇಕೆ?

ರಘುನಾಥಸಿಂಹನಿಗೆ ಆ ರಾತ್ರೆಯ ಲಡ್ಡುವು ನೆನಪಿಗೆ ಬಂದಿತು. ಆತನು

"ಮುಂದರಿಬಾಯಿ, ಲಡ್ಡುವನ್ನು ತಿನ್ನುವೆನು ಮತ್ತು ಅಂದು ತಿನ್ನಿಸಿದ ಕೈಗಳಿಂದಲೇ ತಿನ್ನುವೆನು" ಎಂದನು.

ಮುಂದರಿ—ಮಸಿಹಿಡಿದು ಕಪ್ಪಾದ ಕೈಗಳಿಂದಲೆ ?

ರಘುನಾಥಸಿಂಹ—ಇಲ್ಲ ಇಲ್ಲ. ಗಂಗಾಜಲದಿಂದ ಶುಭ್ರವಾದ ಹಸ್ತಗಳಿಂದ. ಊಟ ಮಾಡಿಕೊಂಡು ಬರಬೇಕು.

ಮುಂದರಿ—ಇಲ್ಲ. ಇಲ್ಲೇ ಬಂದು ಊಟ ಮಾಡುವೆನು, ಇಲ್ಲದಿದ್ದರೆ ನಿಮ್ಮ ಊಟವು ವೃಥಾ ತಡವಾಗುವುದು.

ಅಷ್ಟರಲ್ಲಿ ಗುಂಡೊಂದು ಬಂದು ಬುರುಜಿಯ ಮುಂಭಾಗದಲ್ಲಿ ಬಿದ್ದಿತು.

ಮುಂದರಿಯು "ಆ ಗುಂಡು ನನಗೆ ತಾಕಿದ್ದರೆ ನಾನು ಉಳಿಯುತ್ತಿರಲಿಲ್ಲ. ಆಗ ನೀವು ನನ್ನ ಶವಕ್ಕೆ ಅಗ್ನಿ ಸ್ಪರ್ಶಮಾಡಿಸುತ್ತಿದ್ದಿರಲ್ಲವೆ ?" ಎಂದು ಕೇಳಿದಳು.

ರಘುನಾಥಸಿಂಹನು ಸ್ವಲ್ಪ ತೀವ್ರಸ್ವರದಿಂದ "ನನಗೆ ತಗುಲಿದ್ದರೆ ನನ್ನ ಶವಕ್ಕೆ ಒಂದೆರಡು ಪುಳ್ಳೆಗಳನ್ನಿಟ್ಟು ದಹಿಸುತ್ತಿದ್ದಿರೋ ಇಲ್ಲವೋ ?" ಎಂದು ಪ್ರಶ್ನಿಸಿದನು.

ಮುಂದರಿಯ ಕಣ್ಣುಗಳಲ್ಲಿ ಕಂಬನಿದುಂಬಿತು. ಕಂಠವು ರುದ್ಧಿತವಾಗುತ್ತಿರಲು ಕಂಪಿಸುವ ಸ್ವರದಲ್ಲಿ ಹೇಳಿದಳು: "ನಾನು ಮೊದಲು ಆಹುತಿಯಾಗುತ್ತೇನೆ. ಇದನ್ನು ಬರೆದಿಟ್ಟುಕೊಳ್ಳಿ. ಮುಂದೆ ಎಂದಾದರೂ ಈ ತರಹದ ಮಾತುಗಳನ್ನಾಡಿದರೆ ನಾನು ಲಡ್ಡುಗಿಡ್ಡು ಏನನ್ನೂ ತಿನ್ನಿಸುವುದಿಲ್ಲ."

ಆ ಕಣ್ಣೀರಿನ ದರ್ಪಣದಲ್ಲಿ ರಘುನಾಥಸಿಂಹನು ಅವರೀರ್ವರ ಪರಸ್ಪರ ಸ್ನೇಹದ ಮನೋಭಾವಗಳನ್ನು ಕಂಡನು.

ರಘುನಾಥಸಿಂಹನು ಗದ್ಗದಿತನಾಗಿ "ಮುಂದರಿಬಾಯಿ, ನಾನು ಮುಂದೆ ಎಂದಿಗೂ ಆ ವಿಧವಾದ ಮಾತುಗಳನ್ನಾಡುವುದಿಲ್ಲ ಮತ್ತು ನಿಮ್ಮ ಮುಖದಿಂದಲೂ ಅಂತಹ ಮಾತುಗಳು ಹೊರಬೀಳಬಾರದು." ಎಂದು ಹೇಳಿದನು.

ಮುಂದರಿಯು ಕಣ್ಣೀರನ್ನು ಒರಸಿಕೊಂಡು ಅಲ್ಲಿಂದ ಹೊರಟು ಹೋದಳು. ರಘುನಾಥಸಿಂಹನಿಗೆ ಎಲ್ಲಾ ವಾತಾವರಣವೂ ನವಕುಸುಮಗಳಿಂದ ತುಂಬಿದ್ದಂತೆ ಕಾಣಲಾರಂಭಿಸಿತು—ತೋಪು ಚಲಾಯಿಸುವುದು ಒಂದು ಆಟದಂತೆಯೂ ಮತ್ತು ಮದ್ದುಗುಂಡುಗಳು ಆಟದ ಸಾಮಾನುಗಳಂತೆಯೂ ಕಂಡವು.

"ಮುಂದರಿಯು ತನ್ನ ಅಖಂಡ ರೂಪದಿಂದ ನನ್ನ ಹೃದಯವನ್ನು ಸೂರೆಗೊಂಡು ಸನ್ಮಾನಿಸುವ ಕಾಲವೂ ಬರುವುದು" ಎಂದು ಆತನು ದೃಢಸಂಕಲ್ಪ ಮಾಡಿಕೊಂಡನು.

ಮುಂದರಿಯು ನೀರಿನ ಬಿಂದಿಗೆ ಮತ್ತು ಲಡ್ಡುಗಳನ್ನು ತೆಗೆದುಕೊಂಡು ಜಾಗ್ರತೆಯಾಗಿ ಹಿಂದಿರುಗಿದಳು.

ರಘುನಾಥಸಿಂಹನು ಅದನ್ನು ಕಂಡು ರೋಷಭರಿತ ಸ್ವರದಲ್ಲಿ ಈ ಬುರುಜಿಗೆ

ನಾನು ಪ್ರಧಾನ ಅಧಿಕಾರಿ ಯೆಂಬುದು ನಿನಗೆ ಗೊತ್ತೆ, ಮುಂದರಿಬಾಯಿ?" ಎಂದು ಕೇಳಿದನು.

ಮುಂದರಿಯು ಸ್ವಲ್ಪ ಆಶ್ಚರ್ಯ, ಕುತೂಹಲ ಮತ್ತು ಕುಚೋದ್ಯಗಳಿಂದ ಕೂಡಿ ನೋಡಲಾರಂಭಿಸಿದಳು.

ಒಡನೆಯೇ ರಘುನಾಥಸಿಂಹನ ಕೋಪವು ಇಳಿಮುಖವಾಗಿ ಹೋಯಿತು. ಆತನು "ನಾನು ಊಟ ಮಾಡಿ ಬರಬೇಕೆಂದಲ್ಲವೆ ಹೇಳಿದ್ದು, ಏತಕ್ಕೆ ಹಾಗೆಯೇ ಬಂದಿರಿ? ನನ್ನ ಮಾತನ್ನೇಕೆ ಅಲಕ್ಷ್ಯಮಾಡಿದಿರಿ?" ಎಂದು ಕೇಳಿದನು.

ಮುಂದರಿಯು ಮುಗುಳ್ನಗೆ ನಗುತ್ತಾ ಹೇಳಿದಳು "ನಾನು ಇಲ್ಲಿಯೇ ಬಂದು ಊಟ ಮಾಡುವೆನೆಂದು ಹೇಳಿ ಹೋಗಿರಲಿಲ್ಲವೆ?"

ರಘುನಾಥಸಿಂಹನ ಬಳಲಿದ ಮುಖದಲ್ಲಿ ಮುಗುಳ್ನಗೆಯೊಂದು ಹಾದು ಹೋಯಿತು. ಆತನು "ಈಗ ಜ್ಞಾಪಕಕ್ಕೆ ಬಂದಿತು. ಆಗಲಿ ಕೈಕಾಲು ತೊಳೆದು ಭೋಜನಮಾಡಿ" ಎಂದನು.

ಮುಂದರಿಯು "ಮೊದಲು ನೀವು ಊಟ ಮಾಡಿ ಎಂದಳು".

ರಘುನಾಥಸಿಂಹನು ಹಠಮಾಡಿದನು "ಇಲ್ಲ ಮೊದಲು ನೀನು" 'ನೀನು' ಎಂಬ ಶಬ್ದವನ್ನು ಕೇಳುತ್ತಲೇ ಮುಂದರಿಯು ಪುಳಕಿತಳಾದಳು.

"ನನ್ನ ಕೈಯ್ಯಿಂದ ಊಟಮಾಡಬೇಕಾದರೆ ನೀವು ಮೊದಲು ಪ್ರಾರಂಭಿಸಿ" ಎಂದಳು.

"ಇಲ್ಲದಿದ್ದರೆ?" ಎಂದು ರಘುನಾಥಸಿಂಹನು ಕೇಳಿದನು.

"ಇಲ್ಲದಿದ್ದರೆ ಏನು. ಲಡ್ಡುವನ್ನು ನಿಮ್ಮ ಕೈಯ್ಯಿಂದಲೇ ತಿನ್ನಬೇಕಾಗುವುದು."

ರಘುನಾಥಸಿಂಹನು ಆ ಮಾತಿಗೆ ಸಮ್ಮತಿಸಿ ಕೈಕಾಲು ಮುಖ ತೊಳೆದುಕೊಂಡು ಬಂದು ಒಂದೆಡೆ ಕುಳಿತನು. ಮುಂದರಿಯು ಅವನಿಗೆ ಲಡ್ಡುಗಳನ್ನಿಟ್ಟು ತಿನ್ನಿಸಿದಳು.

ರಘುನಾಥಸಿಂಹನು ಪ್ರಸ್ತಾಪಿಸುತ್ತಾ "ಈಗ ನಾನು ನಿನಗೆ ತಿನ್ನಿಸುತ್ತೇನೆ" ಎಂದನು.

ಮುಂದರಿಯು ಬಿದ್ದು ಬಿದ್ದು ನಕ್ಕಳು. ಆಕೆಯು "ಅರೆ! ಹೀಗೆಲ್ಲಾದರೂ ಉಂಟೆ. ನಾನು ಒಬ್ಬಳೇ ಕುಳಿತು ತಿನ್ನುತ್ತೇನೆ" ಎಂದಳು.

ರಘುನಾಥಸಿಂಹನು ಒಪ್ಪಿಕೊಂಡನು. ಅವನಿಗೆ ಎಲ್ಲವೂ ಅರ್ಥವಾಯಿತು. ಅವನಿಗೆ ಮೃತ್ಯುವಿನ ಭಯವೇನಿರಲಿಲ್ಲ.

ಮುಂದರಿಗಾದರೊ?

ಲಕ್ಷ್ಮೀಬಾಯಿಯ ಸಖಿಗೆ ಮೃತ್ಯುವಿನ ಭಯವೆ?

## ೭೧

ತಾತ್ಯಾಟೋಪೆಯು ಚರಕಾರಿ ರಾಜ್ಯವನ್ನು ಗೆದ್ದು ಕಾಲ್ಪಿಗೆ ಹಿಂದಿರುಗಿದನು. ಅವನ ಸೇನೆಯಲ್ಲಿ ಕಾನ್‌ಪುರದಲ್ಲಿ ಜನರಲ್ ವಿಂಡಮನನ್ನು ಸೋಲಿಸಲು ಸಹಾಯ ನೀಡಿದ ಗ್ವಾಲಿಯರಿನ ಪಡೆಯೂ ಸೇರಿದ್ದಿತು. ಸಿಪಾಯಿಗಳು ತಮ್ಮ ನೂತನ ವಿಜಯೋತ್ಸವವನ್ನು ನೆರವೇರಿಸುತ್ತಿದ್ದರು. ತಾತ್ಯಾಟೋಪೆಯು ಕಾಲ್ಪಿಯ ವಿಶಾಲವಾದ ಆಯುಧಶಾಲೆಯನ್ನು ಪರಿಶೀಲಿಸುತ್ತಿದ್ದನು. ವಿವಿಧವಾದ ಗುಂಡುಗಳನ್ನು ಎರಕ ಹೊಯ್ಯುತ್ತಿದ್ದರು. ಒಂದು ಸಾವಿರ ಮಣ ಮದ್ದು ತಯಾರಾಗಿದ್ದಾಗ್ಯೂ ಇನ್ನೂ ಹೆಚ್ಚು ಹೆಚ್ಚಾಗಿ ತಯಾರುಮಾಡುತ್ತಲೇ ಇದ್ದರು. ಇತರ ವಿಧವಾದ ಆಯುಧಗಳನ್ನೂ ಮತ್ತು ಅವುಗಳ ಅಂಗಾಂಗಗಳನ್ನೂ ತಯಾರುಮಾಡಿ ಯಂತ್ರಗಳ ಮೂಲಕ ಅವುಗಳನ್ನು ಜೋಡಿಸುತ್ತಿದ್ದರು. ಯಂತ್ರಗಳಲ್ಲಿ ಅನೇಕವು ಹೊಸದಾಗಿ ವಿಲಾಯಿತಿಯಿಂದ ಬಂದಿದ್ದುವು.

ಆ ವೇಳೆಗೆ ಇಬ್ಬರು ಅಶ್ವಾರೋಹಿಗಳು ಪಹರೆಯವನಿರುವಲ್ಲಿಗೆ ಬಂದಿಳಿದರು. ಇಬ್ಬರೂ ಸುಂದರ ಯುವಕರು. ಉದ್ದವಾದ ಕೇಶಧಾಮದ ಮೇಲೆ ರುಮಾಲನ್ನು ಧರಿಸಿದ್ದರು.

ಅವರು ಪಹರೆಯವರನ್ನು ಕುರಿತು "ನಾವು ಸರದಾರ್ ಸಾಹೇಬರನ್ನು ಒಡನೆಯೇ ನೋಡಬೇಕಾಗಿದೆ. ಝಾನ್ಸಿಯ ರಾಣೀ ಸಾಹೇಬರಿಂದ ತಂದಿರುವ ಪತ್ರವನ್ನು ತಲಪಿಸಬೇಕಾಗಿದೆ" ಎಂದರು.

ಆತನು ಅವರಿಂದ ಝಾನ್ಸಿಯಲ್ಲಿ ನಡೆಯುತ್ತಿರುವ ಯುದ್ಧದ ವಿಷಯವನ್ನು ಸಂಕ್ಷೇಪವಾಗಿ ತಿಳಿದು ಅವರನ್ನು ತಾತ್ಯಾಟೋಪೆಯ ಮುಂದೆ ಕರೆದೊಯ್ದನು.

ತಾತ್ಯಾಟೋಪೆಯು ಅವರನ್ನು ಏಕಾಂತವಾದ ಸ್ಥಳಕ್ಕೆ ಕರೆದುಕೊಂಡು ಹೋಗಿ "ಒಬ್ಬ ಸರದಾರ ಸಾಹೇಬನನ್ನೇನೋ ನಾನು ಗುರುತು ಹಿಡಿದೆ ಮತ್ತೊಬ್ಬರಾರು ?" ಎಂದು ಕೇಳಿದನು.

ಜೂಹಿಯು "ಇವರು ಕಾಶೀಬಾಯಿಯವರು" ಎಂದು ಉತ್ತರವಿತ್ತಳು.

ತಾತ್ಯಾಟೋಪೆಯು ಅಭಿವಾದನೆ ಮಾಡಿ ಅವರಿಬ್ಬರಿಂದ ಝಾನ್ಸಿಯನ್ನು ಅವರು ಬಿಡುವವರೆಗೂ ನಡೆದ ಯುದ್ಧದ ವಿಷಯವನ್ನೂ ಅವರ ಮಾರ್ಗದಲ್ಲಿ ಪಥಿಕರಿಂದ ಕೇಳಿಕಂಡ ಸುದ್ದಿ ಮುಂತಾದುವುಗಳನ್ನೂ ಅರಿತುಕೊಂಡನು. ರಾಣಿಯು ಬರೆದು ಕಳುಹಿಸಿದ್ದ ಪತ್ರವನ್ನು ಓದಿ ನೋಡಿದನು.

ನಂತರ ಅವನು "ಇಂದೇ ಝಾನ್ಸಿಯ ಕಡೆಗೆ ಸೈನ್ಯವನ್ನು ಕೊಂಡುಹೋಗುವೆನು. ಚರಕಾರಿಯಿಂದ ಹಿಂದಿರುಗಿದ ಮೇಲೆ ಸಾಕಾದಷ್ಟು ವಿಶ್ರಾಮ್ಯ ದೊರಕಿದ್ದಾಯಿತು

ನೀವೂ ನಮ್ಮೊಡನೆಯೇ ಹೊರಡಿರಿ, ತಕ್ಕ ರಕ್ಷಣೆಯಿಲ್ಲದೆ ನೀವುಗಳು ಈಗ ಹೋಗುವುದು ಸರಿಯಲ್ಲ" ಎಂದು ಹೇಳಿದನು.

ಕಾಶೀಬಾಯಿಯು "ಹೆಬ್ಬಾಗಿಲುಗಳನ್ನೆಲ್ಲಾ ಮುಚ್ಚಿ ಬಿಡಿಸಿದ್ದಾರೆ. ನಾಲ್ಕು ಕಡೆಯೂ ಆಂಗ್ಲೇಯರ ಸೈನ್ಯವು ಸುತ್ತುಗಟ್ಟಿ ನಿಂತಿದೆ" ಎಂದು ವಿನಯದಿಂದ ನುಡಿದಳು.

ತಾತ್ಯಾ—ನೀವುಗಳು ನಮ್ಮೊಂದಿಗೆ ಸುರಕ್ಷಿತವಾಗಿರುವಿರಿ.

ಕಾಶೀ—ನಾವೂ ಯುದ್ಧ ಮಾಡಬಲ್ಲೆವು.

ಜ್ಯೂಹಿಯು "ಮಾಡಬಲ್ಲಳು" ಎಂದು ಹೇಳಿ ನಕ್ಕಳು.

ತಾತ್ಯಾಟೋಪೆಯೂ ನಸುನಗುತ್ತಾ "ಪುಲ್ಲಿಂಗದಲ್ಲಿಯೇ ಮಾತನಾಡಿ ಸೈನಿಕರಿಗೆ ಸಂದೇಹಕ್ಕೆ ಆಸ್ಪದ ಕೊಡಲು ನಾನು ಇಚ್ಛಿಸುವುದಿಲ್ಲ" ಎಂದನು.

ಅಂದೇ ತಾತ್ಯಾಟೋಪೆಯು ೨೦ ಸಹಸ್ರ ಸೇನೆಯೊಂದಿಗೆ ಝಾನ್ಸಿಯ ಕಡೆಗೆ ಪಯಣ ಬೆಳಸಿದನು. ಮಿಕ್ಕ ಸೈನ್ಯವನ್ನು ಕಾಲ್ಪಿಯ ರಕ್ಷಣೆಗಾಗಿ ರಾವ್ ಸಾಹೇಬನ ಅಧೀನದಲ್ಲಿಟ್ಟನು.

ತಾತ್ಯಾಟೋಪೆಯು ಝಾನ್ಸಿಯನ್ನು ಸಮೀಪಿಸಲು ಸ್ವಲ್ಪಕಾಲ ಹಿಡಿಯಿತು. ಆತನು ಅಲ್ಲಿಗೆ ಸೇರುವ ಮೊದಲೇ ತಾತ್ಯಾಟೋಪೆಯು ಒಂದು ದೊಡ್ಡ ಸೇನೆ ಮತ್ತು ಅನೇಕ ತೋಪುಗಳ ಸಮೇತ ಝಾನ್ಸಿಯ ನೆರವಿಗಾಗಿ ಬರುತ್ತಿರುವನೆಂಬ ಸಂಗತಿಯು ಜನರಲ್ ರೋಜನಿಗೆ ತಿಳಿಯಿತು. ಇದರಿಂದ ಆತನಿಗೆ ಬಹಳ ಯೋಚನೆಗಿಟ್ಟುಕೊಂಡಿತು. ಅವನು ತನ್ನ ಸೈನ್ಯಾಧಿಪತಿಗಳನ್ನೂ ದಳನಾಯಕರನ್ನೂ ಒಟ್ಟುಗೂಡಿಸಿ ಸಮಾಲೋಚನೆ ಮಾಡಿ ಒಂದು ಇತ್ಯರ್ಥಕ್ಕೆ ಬಂದನು. ಪ್ರತಿಯೊಂದು ತೋಪುಖಾನೆಯಿಂದಲೂ ಒಂದೊಂದು ತೋಪನ್ನು ತೆಗೆದುಕೊಂಡು ಅತ್ಯವಶ್ಯಕವಾದ ಸೇನೆಯನ್ನು ಝಾನ್ಸಿಯ ಸುತ್ತಮುತ್ತಲೂ ಬಿಟ್ಟು ಮಿಕ್ಕ ಸೈನ್ಯವನ್ನು ಹಲವು ಭಾಗಗಳಾಗಿ ವಿಂಗಡಿಸಿದನು. ಅವುಗಳಲ್ಲಿ ಕೆಲವನ್ನು ಝಾನ್ಸಿ—ಕಾಲ್ಪಿ ಮಾರ್ಗವನ್ನು ಅಡ್ಡಗಟ್ಟಲು ಝಾನ್ಸಿಗೆ ಏಳು ಮೈಲಿ ದೂರದಲ್ಲಿದ್ದ ದಿಗಾರಾ ಗುಡ್ಡದ ಹಿಂದೆ ಬಚ್ಚಿಟ್ಟನು. ಕೆಲವನ್ನು ಉತ್ತರ ದಿಕ್ಕಿನಲ್ಲಿ ಹತ್ತು ಮೈಲಿ ದೂರದಲ್ಲಿದ್ದ ಗಡಮುವೂ ಕೆರೆಯ ಅಕ್ಕಪಕ್ಕದ ಬೆಟ್ಟಗುಡ್ಡಗಳ ಮೇಲೆ ಸ್ಥಾಪನೆ ಮಾಡಿದನು. ಇನ್ನು ಕೆಲವನ್ನು ಕಾಮಾಸೀನ್ ಗುಡ್ಡದ ಮೇಲೆಯೂ ಓರ್ಛಾವಿಗೆ ಹೋಗುವ ಮಾರ್ಗದ ಎರಡು ಪಕ್ಕಗಳಲ್ಲಿಯೂ ಶೇಖರಿಸಿದನು.

ತಾತ್ಯಾಟೋಪೆಯು ತನ್ನ ಸೈನ್ಯದ ಹೆಚ್ಚು ಭಾಗವನ್ನು ತನ್ನ ಬಳಿ ಇಟ್ಟುಕೊಂಡು ಅದನ್ನು ಬೇತ್ವಾ ನದಿಯ ದಡದ ಮೇಲೆ ನೋಹಟ್ ಘಾಟ್ ಮತ್ತು ತಿಲೋಥಾಘಾಟ್‌ಗಳ ನಡುವೆ ಝಾನ್ಸಿ ನಗರದ ಕಡೆಗೆ ಸುಮಾರು ೨ ಮೈಲಿ ದೂರ

ದಲ್ಲಿ ಸ್ಥಾಪಿಸಿದನು. ಮಿಕ್ಕ ಸೈನ್ಯವನ್ನು ಮೂರು ಭಾಗಗಳಾಗಿ ವಿಂಗಡಿಸಿ ಗಡಮವೂ ಮತ್ತು ದಿಗಾರಾ ಗುಡ್ಡಗಳ ನಡುವೆ ಝಾನ್ಸಿಯ ಕಡೆಗೆ ಕಳುಹಿಸಿದನು. ಇವುಗಳೊಡನೆ ಚಿಕ್ಕ ಚಿಕ್ಕ ತೋಪುಗಳೂ ಮತ್ತು ಜೂಹಿ ಕಾಶಿಯರೂ ಇದ್ದರು.

ಏಪ್ರಿಲ್ ಒಂದನೇ ತಾರೀಖು ಪ್ರಾತಃಕಾಲ ಉದಯಿಸಿತು. ಝಾನ್ಸಿಯ ಬಳಿ ಬಂದೂಕನ್ನು ಹೊತ್ತು ಸಿಪಾಯಿಗಳ ಕದನವು ನಡೆಯಲಿಲ್ಲ. ಆದರೆ ಭಯಾನಕವಾದ ತೋಪುಗಳ ಹೋರಾಟವಾಯಿತು. ಗುಂಡುಗಳು ಗುರಿಯಿಟ್ಟೆಡೆಗೆ ಬೀಳುತ್ತಿರಲಿಲ್ಲ. ಆಂಗ್ಲೇಯ ತೋಪುಗಳು ಝಾನ್ಸಿಯ ಜನರನ್ನು ವ್ಯಾಕುಲಗೊಳಿಸಿ ತಮ್ಮ ಕರ್ತವ್ಯ ಮಾಡುತ್ತಿದ್ದುವೆಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತಿದ್ದಿತು. ಆದರೆ ಜವಹರಸಿಂಹನು ಅದನ್ನು ಪರಿಗಣಿಸದೆ ನಿಪುಣ ಆಂಗ್ಲೇಯರು ತೋಪು ಚಲಾಯಿಸುತ್ತಿರುವರೆಂದು ಅರ್ಥಮಾಡಿಕೊಂಡನು. ರಾಣಿಯು ಅದನ್ನು ಅನುಮೋದಿಸಲಿಲ್ಲ. ಆತನು "ಆಂಗ್ಲೇಯರಿಗೆ ಯಾವುದೋ ಒಂದು ಸಂದೇಹ ಅಥವಾ ಚಿಂತೆಯುಂಟಾಗಿ ಸೈನ್ಯವನ್ನೂ ತೋಪುಖಾನೆಗಳನ್ನೂ ಭಾಗಮಾಡಿ ಹಂಚಿದ್ದಾರೆಯೇ ಹೊರತು ಮತ್ತೇನೂ ವಿಶೇಷವಿಲ್ಲ." ಎಂದನು.

ರಾಣಿಯು ದೊಡ್ಡ ದುರ್ಬೀನನ್ನು ಎತ್ತಿ ಹಿಡಿದು ದೂರದಲ್ಲಿ ಝಾನ್ಸಿಯ ಕಡೆಗೆ ಬರುತ್ತಿರುವ ತಾತ್ಯಾಟೋಪೆಯ ಪಡೆಯನ್ನು ಗುರ್ತಿಸಿದಳು. ನಂತರ ನಸುನಗುತ್ತಾ ದುರ್ಬೀನನ್ನು ಜವರಸಿಂಹನ ಕೈಗೆ ಕೊಟ್ಟು "ಈಗಲೀಗ ಝಾನ್ಸಿಯ ಉದ್ಧಾರವು ಸಮೀಪಿಸುತ್ತಿದೆ" ಎಂದಳು.

ಜವಹರಸಿಂಹನಿಗೆ ದುರ್ಬೀನಿನಿಂದ ಅದನ್ನು ನೋಡುತ್ತಲೇ ಬಹಳ ಸಂತೋಷವಾಯಿತು. ನಗರದಲ್ಲೆಲ್ಲಾ ಝಾನ್ಸಿಯ ರಕ್ಷಣೆಗಾಗಿ ಪೇಶ್ವೆಯ ಸೈನ್ಯವು ಬರುತ್ತಿದೆಯೆಂಬ ಸಮಾಚಾರವು ಒಮ್ಮೆಲೆ ಹರಡಿತು.

ಝಾನ್ಸಿಯಿಂದ ನಡೆಸಿದ ತೋಪು ಚಲಾವಣೆಯು ಅಷ್ಟು ಬಿರುಸಾಗಿರಲಿಲ್ಲ.

ಲಾಲತ ಬ್ರಾಹ್ಮಣನು "ನಮ್ಮ ಗುಂಡುಗಳೆಲ್ಲಾದರೂ ಪೇಶ್ವೆಯ ಸೈನ್ಯದ ಮೇಲೆ ಬೀಳಬಹುದು" ಎಂದನು.

ಅಲ್ಲದೆ ಮಿಕ್ಕ ಗೋಲಂದಾಜಿಗಳೂ ಇದೇ ಮತದಿಂದಿದ್ದರು. ಪೂರ್ವ ಮತ್ತು ಉತ್ತರದ ತೋಪುಗಳು ಹೆಚ್ಚು ಕಡಿಮೆ ಬಂದಾಗಿದ್ದವು, ಕೇವಲ ಪಶ್ಚಿಮ ಮತ್ತು ದಕ್ಷಿಣದ ಕಡೆಯ ತೋಪುಗಳು ಸ್ವಲ್ಪ ಕೆಲಸ ಮಾಡುತ್ತಿದ್ದುವು.

ಝಾನ್ಸಿಯು ಬೆಳಗ್ಗಿನಿಂದ ಪಾಲಿಸಿಕೊಂಡು ಬಂದಿದ್ದ ಆಶೆಯು ಸಾಯಂಕಾಲದ ವೇಳೆಗೆ ನಿರಾಶೆಯಾಗಿ ಪರಿವರ್ತಿತವಾಗುವುದರಲ್ಲಿದ್ದಿತು.

ತಾತ್ಯಾಟೋಪೆಯ ದಳಗಳು ಗುಡ್ಡಗಳ ಮಧ್ಯೆ ಹಾಸಿ ಬರುತ್ತಲೇ ಆಂಗ್ಲೇಯರು ಅವುಗಳ ಮೇಲೆ ಗುಂಡಿನ ಮಳೆಗರೆದರು. ಸಿಡಿಯುವ ಸಿಡಿಯದೇ ಇದ್ದ ಎಲ್ಲಾ

ಗುಂಡುಗಳೂ ತಾತ್ಯಾಟೋಪೆಯ ಅಶ್ವಾರೋಹಿ ಸೈನ್ಯವನ್ನು ನಾಶಮಾಡುತ್ತಿದ್ದುವು. ದಳಗಳು ದಿಕ್ಕೆಟ್ಟು ಚದುರಿ ಓಡಿ ಹೋಗಲಾರಂಭಿಸಿದುವು. ಒಂದು ಕಡೆ ಕಾಶೀಬಾಯಿಯು ಸಿಕ್ಕಿಬಿದ್ದು ಜೂಹಿಯು ಮತ್ತೊಂದು ಕಡೆ ಹೋಗಬೇಕಾಯಿತು.

ಕಾಶೀಬಾಯಿಯು ಅಳಿದುಳಿದ ಅಶ್ವಾರೋಹಿ ಸೈನಿಕರೊಂದಿಗೆ ಆಂಗ್ಲೇಯ ಸವಾರರ ಮಧ್ಯೆ ಸಿಕ್ಕಿಬಿದ್ದು ಮೊದಲು ಪಿಸ್ತೂಲನ್ನು ಪ್ರಯೋಗಿಸಿದಳು. ನಂತರ ಕತ್ತಿಯನ್ನು ಸೆಳೆದಳು.

ಕಾಶೀಬಾಯಿಯು "ಹರಹರ ಮಹಾದೇವ್" ಎಂದು ಕೂಗುತ್ತಾ ಮುನ್ನುಗ್ಗಿದಳು. ಅವಳ ಧ್ವನಿಯು ಕೋಗಿಲೆಯ ಸ್ವರದಂತೆ ಮಧುರವಾಗಿದ್ದಿತು. ಆದುದರಿಂದ ಆಂಗ್ಲೇಯ ಸವಾರರು ಅವಳನ್ನು ಪುರುಷವೇಶದಲ್ಲಿರುವ ಸ್ತ್ರೀಯೆಂದು ಅರಿತುಕೊಂಡರು.

ಇದರಿಂದ ಅವರಿಗೆ ಭ್ರಮೆಯುಂಟಾಯಿತು.

ಒಬ್ಬನು "ಈಕೆಯು ರಾಣಿ" ಎಂದನು.

ಮತ್ತೊಬ್ಬನು "ಝಾನ್ಸಿಯ ರಾಣಿ, ಅವಳನ್ನು ಜೀವಸಹಿತ ಹಿಡಿಯಿರಿ" ಎಂದು ಹೇಳಿದನು.

ಕಾಶೀಬಾಯಿಯ ಖಡ್ಗವು ಈ ಆಶೆಯನ್ನು ಮಣ್ಣುಗೂಡಿಸಿತು. ಅವಳ ಖಡ್ಗ ಪ್ರಯೋಗದ ಕಲಾಕೌಶಲ್ಯದಿಂದಾಗಿ ಇಬ್ಬರು ಸವಾರರು ಕುದುರೆಯ ಸಮೇತ ಕಡಿದು ಬಿದ್ದರು. ಅನೇಕರು ಗಾಯಗೊಂಡರು. ಆದರೆ ಒಬ್ಬ ಸವಾರನ ಖಡ್ಗದ ದೆಸೆಯಿಂದ ಅವಳ ಕುದುರೆಯು ಮಡಿದು ಬಿದ್ದಿತು. ಕಾಶೀಬಾಯಿಯು ಅಲ್ಲಿಗೂ ಹಿಮ್ಮೆಟ್ಟದೆ ನಿಂತು ಯುದ್ಧ ಮಾಡಲಾರಂಭಿಸಿ ಮತ್ತೆ ಕೆಲವರನ್ನು ಗಾಯ ಗೊಳಿಸಿದಳು. ಅಂತ್ಯದಲ್ಲಿ ಒಬ್ಬ ಸವಾರನ ಖಡ್ಗವು ಅವಳ ತಲೆಯ ಮೇಲೆ ಬಂದು ಬಿದ್ದಿತು. ಲೋಹದ ಟೋಪಿಯನ್ನು ಧರಿಸಿದ್ದ ಕಾರಣ ಅವಳ ತಲೆಗೆ ಪೆಟ್ಟು ತಾಕಲಿಲ್ಲ. ಆದರೆ ಅವಳ ಹೆಗಲು ಕತ್ತರಿಸಿ ಹೋಯಿತು. ಆದರೂ ಅವಳು ಎದೆಗುಂದಲಿಲ್ಲ. ಪುನಃ ಮತ್ತೊಂದು ಕತ್ತಿಯ ಪೆಟ್ಟು ಬಿದ್ದಿತು. ಅದರೊಂದಿಗೆ ಅವಳ ಅಂತ್ಯ ಸಮಾಪ್ತವಾಯಿತು. ಆಕೆಯ ಮುಖದಿಂದ ಕೇವಲ "ಹರ ಹರ ಮಹಾ........" ಎಂಬ ಶಬ್ದ ಹೊರಟಿತು.

ಪರಂಗಿಯವರು ಸಂತುಷ್ಟರಾದರು. ಆಕೆಯ ಶವವನ್ನು ಜನರಲ್ ರೋಜನ ಬಳಿಗೆ ಕೊಂಡುಹೋದರು "ಹುಜೂರ್, ಈಕೆಯು ಬಹಳವಾಗಿ ಹೋರಾಡಿದಳು. ಈ ಸ್ತ್ರೀಯ ಶರೀರದಲ್ಲಿ ಸೈತಾನನು ವಾಸವಾಗಿರುವನು."

ರೋಜನು ಶರೀರವನ್ನು ಪರೀಕ್ಷೆಮಾಡಿಸಿದನು. ಗುರುತುಹಿಡಿದು ಪತ್ತೆ ಮಾಡುವವನು ತಲೆಯಲ್ಲಾಡಿಸಿ "ಇದು ರಾಣಿಯಲ್ಲ, ಆಕೆಯ ತಂಗಿಯೋ, ಸಖಿಯೋ, ಅಥವಾ ತಾತ್ಯಾನ ಬಂಧುವೋ ಇರಬಹುದು" ಎಂದು ಹೇಳಿದನು.

ರೋಜನು ಕಾಶೀಬಾಯಿಯ ಶವವನ್ನು ಸುರಕ್ಷಿತವಾಗಿರಿಸಿ ತಾತ್ಯಾನ ಸೇನೆಯ ಕಡೆಗೆ ಗಮನವನ್ನೋಡಿಸಿದನು. ಪೇಶ್ವೆಯ ಸೈನ್ಯವು ಕಂಗೆಟ್ಟು ಓಡಿಹೋಯಿತು ಮತ್ತು ಜೂಹಿಯೂ ಓಡಿ ಹೋಗಿ ತಾತ್ಯಾಟೋಪೆಯನ್ನು ಸೇರಿದಳು. ಆಕೆಯು "ಕಾಶಿಯು ಎಲ್ಲೋ ಸಿಕ್ಕಿಬಿದ್ದಿರುವಳು. ಬಹುಶಃ ಹತವಾಗಿ ಬಿಟ್ಟಿರಬಹುದು" ಎಂದಳು.

ಆ ವೇಳೆಗೆ ರೋಜನ ಕಡೆಯಿಂದ ಗುಂಡೊಂದು ಹಾರಿ ಬಂದು ಬೇತ್ವಾ ನದಿಯ ತಟದಲ್ಲಿ ತಂಗಿದ್ದ ತಾತ್ಯಾಟೋಪೆಯ ಸೈನ್ಯದ ಮೇಲೆ ಬಂದು ಬಿದ್ದಿತು. ತಕ್ಷಣವೇ ತಾತ್ಯಾ ತನ್ನ ತೋಪುಗಳನ್ನು ಹಾರಿಸಿದನು. ಆದರೆ ರೋಜನ ಇತರ ಅನೇಕ ಚಿಕ್ಕ ಪಡೆಗಳು ಆ ಸೈನ್ಯದ ಮೇಲೆ ಚಿಕ್ಕ ಪುಟ್ಟ ತೋಪುಗಳನ್ನು ತೆಗೆದುಕೊಂಡು ಅನೇಕ ದಿಕ್ಕುಗಳಿಂದ ಆಕ್ರಮಣ ಮಾಡಿದುವು. ಇದರಿಂದ ತಾತ್ಯಾಟೋಪೆಗೆ ತನ್ನ ಸೈನ್ಯವನ್ನು ಬೇತ್ವಾ ನದಿಯ ಆಚೆ ದಡಕ್ಕೆ ತೆಗೆದುಕೊಂಡು ಹೋಗಬೇಕಾಯಿತು. ರೋಜನು ಅವನನ್ನು ಅನುಸರಿಸಿದನು. ತಾತ್ಯಾಟೋಪೆಯ ದೊಡ್ಡ ದೊಡ್ಡ ಫಿರಂಗಿಗಳು ಬಹು ಭಾರವಾಗಿದ್ದುದರಿಂದ ಬೇತ್ವಾ ನದಿಯ ದಡದ ಮೇಲಿನ ಮರಳಿನಲ್ಲಿ ಹೂತು ಹೋಗಿ ಎಳೆದು ಕೊಂಡುಹೋಗಲು ಅಸಾಧ್ಯವಾಯಿತು. ಆತನು ಅವುಗಳನ್ನು ಅಲ್ಲಿಯೇ ತ್ಯಜಿಸಿ ಸೋತು ಓಡಿಹೋಗಬೇಕಾಯಿತು. ರೋಜನ ಸೈನ್ಯಗಳು ಸುಮಾರು ೧೭ ಮೈಲಿ ದೂರದವರೆಗೂ ಅವನನ್ನು ಅಟ್ಟಿಸಿಕೊಂಡು ಹೋದುವು. ಅನೇಕ ತೋಪುಗಳೂ ಮತ್ತು ಹೇರಳವಾದ ಸಾಮಾನುಗಳೂ ಆಂಗ್ಲೇಯರ ಕೈವಶವಾದವು. ಸಂಜೆಯ ವೇಳೆಗೆ ರಣರಂಗವು ಜನ ಶೂನ್ಯವಾಯಿತು. ತಾತ್ಯಾಟೋಪೆಯ ೧೫೦೦ ಜನ ಸೈನಿಕರು ನಾಶವಾದರು. ಆತನು ಪ್ರಯಾಸದಿಂದ ಎರಚ್‌ಘಾಟಿಯ ಮೂಲಕ ಕೊಂಚ್ ಎಂಬಲ್ಲಿಗೆ ಹೋಗಿ ಅನೇಕ ದಿನಗಳನಂತರ ಕಾಲ್ಪಿಯನ್ನೂ ಮುಟ್ಟಿದನು. ಜೂಹಿಯೂ ಝಾನ್ಸಿಗೆ ಹಿಂದಿರುಗಲಾಗಲಿಲ್ಲ. ಅವಳೂ ತಾತ್ಯಾನ ಭಗ್ನಾವಶೇಷ ಸೈನ್ಯದೊಂದಿಗೆ ಕಾಲ್ಪಿಯನ್ನು ಸೇರಿಕೊಂಡಳು.

ದುರ್ಬೀನಿನ ಮೂಲಕವೂ ಮತ್ತು ಕ್ಷಣಕ್ಷಣಕ್ಕೂ ದೂರವಾಗುತ್ತಿದ್ದ ತೋಪುಗಳ ಶಬ್ದದಿಂದಲೂ ತಾತ್ಯಾಟೋಪೆಯ ಸೈನ್ಯವು ಅಪಜಯ ಹೊಂದಿತೆಂದು ಝಾನ್ಸಿಯ ಜನರು ಅರಿತುಕೊಂಡರು. ನಗರದಲ್ಲಿ ಮಹತ್ತರವಾದ ನಿರಾಶೆಯ ಮೋಡವು ಮೂಡಿತು.

ರೋಜನ ಸೈನ್ಯದ ಹರ್ಷಕ್ಕೆ ಮಿತಿಯೇ ಇಲ್ಲದಂತಾಯಿತು. ಇದಕ್ಕೆ ಒಂದು ದಿನದ ಹಿಂದೆ ಬಾಯಲ್ಲಿ ಅಕ್ಕಿ ಕಾಳು ಹಾಕಿಕೊಂಡು ಕುಳಿತಿದ್ದಿತು. ಆ ರಾತ್ರೆ ವಿಜಯಲಕ್ಷ್ಮಿಯು ಅವರಿಗೆ ಒಲಿದುದು ನಿಸ್ಸಂಶಯವಾಗಿ ಕಂಡುಬಂದಿತು. ದಣಿದು ನಿದ್ರೆಗಾಣದೇ ಹೋರಾಡುತ್ತಿದ್ದ ಸಿಪಾಯಿಗಳಿಗೆ ವಿಶ್ರಾಮವನ್ನು ಕೊಡಲಾಯಿತು.

ಸಂಜೆಯ ವೇಳೆಗೆ ಮತ್ತೆ ಕಾಶಿಬಾಯಿಯ ಶವವನ್ನು ಗುರುತುಹಚ್ಚಲು ಪ್ರಯತ್ನಿಸಿದರು. ಓರ್ಛಾ ಸಂಸ್ಥಾನದ ಸೇನೆಯಲ್ಲಿ ರಾಣೀ ಲಕ್ಷ್ಮೀಬಾಯಿಯನ್ನು ಚೆನ್ನಾಗಿ ಅರಿತಿದ್ದವರು ಆ ಶವವು ರಾಣಿಯದಲ್ಲವೆಂದು ಆಶ್ವಾಸವಿತ್ತರು.

ನಂತರ ಆ ಶವವನ್ನು ದಹನಮಾಡಲಾಯಿತು.

ಅಂದು ರಾತ್ರಿ ಬಹು ಕಡಿಮೆ ತೋಪುಗಳ ಕಾರ್ಯಾಚರಣೆಯಾಯಿತು. ಬಹಳ ಹೊತ್ತು ತೋಪುಗಳನ್ನು ಸರಿಯಾದ ಸ್ಥಳಗಳಲ್ಲಿ ನಿಲ್ಲಿಸುವುದರಲ್ಲಿ ಕಳೆದುಹೋಯಿತು.

ಜವಹರಸಿಂಹನು ರಾಣಿಗೆ ನಗರದ ಪರಿಸ್ಥಿತಿಯನ್ನೆಲ್ಲಾ ವಿವರಿಸಿದನು. ರಾಣಿಯು ತನ್ನ ಮುಖಂಡರುಗಳನ್ನೆಲ್ಲಾ ಕರೆಕಳುಹಿಸಿದಳು. ಆಕೆಯು ಮಂದಹಾಸದೊಂದಿಗೆ ಹೇಳಿದಳು "ಪೇಶ್ವೆಯ ಸೈನ್ಯವು ಇಂದು ಪರಾಜಯವನ್ನು ಹೊಂದಿ ಹಿಮ್ಮೆಟ್ಟಿದರೂ ನಾಳೆ ಪುನಃ ಹಿಂದಿರುಗಿ ಯುದ್ಧಭೂಮಿಗೆ ಬರಬಹುದು. ತಾತ್ಯಾಟೋಪೆಯು ಅಸಾಧಾರಣನಾದ ಸೇನಾಪತಿ. ಅಲ್ಲದೆ ಆತನ ಅಧೀನದಲ್ಲಿ ಹೇರಳವಾದ ಸೈನ್ಯ ಮತ್ತು ತೋಪುಗಳಿವೆ. ನೀವು ಗಾಬರಿಗೊಳ್ಳುವ ಅವಶ್ಯಕವೇನಿಲ್ಲ. ಒಂದು ವೇಳೆ ಪೇಶ್ವೆಯ ಸೈನ್ಯವು ನೆರವಿಗೆ ಬರದೇ ಹೋಗಿದ್ದರೆ ನಾವೇನು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ಶರಣಾಗತರಾಗಿ ರಘೂನ್ನಿಯ ಮುಖಕ್ಕೆ ಮಸಿ ಬಳಿಯುತ್ತಿದ್ದೆವೆ? ನಮ್ಮ ಪೂರ್ವಿಕರನ್ನು ಸ್ಮರಿಸಿಕೊಳ್ಳೋಣ. ಸ್ವರಾಜ್ಯ ಸ್ವಪ್ನಗಳನ್ನು ಕಾಣುತ್ತಾ ಅವರೆಷ್ಟು ಮಹತ್ತರವಾದ ಕಷ್ಟಗಳನ್ನು ಭರಿಸಿ ಮಡಿದಿದ್ದಾರೆ! ನಮ್ಮ ಜೀವಿತ ಕಾಲದಲ್ಲಿಯೇ ಈ ಸ್ವರಾಜ್ಯದ ಕನಸು ನನಸಾಗಬೇಕೆಂಬ ಅವಶ್ಯಕತೆಯೇನಿಲ್ಲ. ಏಣಿಯ ಮೊದಲ ಹಂತವನ್ನು ತುಳಿಯುತ್ತಲೇ ನಾವು ಮಾಳಿಗೆಯನ್ನು ಮುಟ್ಟುವುದು ಸಾಧ್ಯವಿಲ್ಲ. ಒಂದು ತ್ಯಾಗ, ಒಂದು ಮರಣ, ಮತ್ತು ಒಂದೇ ಜನ್ಮದಲ್ಲಿ ಸ್ವರಾಜ್ಯವು ಲಭಿಸುವುದಿಲ್ಲ. ನಮಗೆ ಕರ್ಮ ಮಾಡುವುದಕ್ಕೆ ಅಧಿಕಾರವಿದೆಯೇ ಹೊರತು ಅದರ ಫಲದ ಹೊಣೆಯು ಇಲ್ಲವೆಂಬುದನ್ನು ನೆನಪಿನಲ್ಲಿಡಿ. ದೃಢವಾದ ಉದ್ದೇಶವೂ ಮತ್ತು ಅಖಂಡ ಕರ್ಮವೂ ನಮ್ಮ ಧ್ಯೇಯವಾಗಿರಬೇಕು. ಜೀವನವೆಂದು ನಾವು ಕರೆಯುವುದು ಕರ್ತವ್ಯಪಾಲನೆಯನ್ನು. ಆ ಕರ್ತವ್ಯಪಾಲನೆಯನ್ನು ಮಾಡಿ ಮರಣಹೊಂದುವುದು ಆ ಜೀವನಕ್ಕೆ ಮತ್ತೊಂದು ಹೆಸರು. ನಿಮ್ಮಲ್ಲಿ ಆಂಗ್ಲೇಯರಿಗೆ ಯಾರು ಹೆದರುತ್ತೀರೋ, ಯಾರು ಮರಣಕ್ಕೆ ಭಯಪಡುತ್ತೀರೋ ಅವರು ಶಸ್ತ್ರಾಸ್ತ್ರಗಳನ್ನಿಟ್ಟು ನಿರಾಲೋಚನೆಯಿಂದ ಅವರವರ ಮನೆಗಳಿಗೆ ಹೊರಟುಹೋಗಿ; ಯಾರು ಸ್ವರಾಜ್ಯ ಸ್ಥಾಪನೆಗೆ ತಮ್ಮ ಪ್ರಾಣ ವಿಸರ್ಜನೆ ಮಾಡಲು ಸಿದ್ಧರಿರುವಿರೋ ಅವರು ನನ್ನೊಡನೆ ಇರಿ."

ರಾಣಿಯು ಹೀಗೆ ಹೇಳಿ-ಮತ್ತೆ ನಸುನಕ್ಕು ಎಲ್ಲರ ಮುಖವನ್ನೂ ದಿಟ್ಟಿಸಿ ನೋಡಿದಳು. ಯಾರೂ ತಮ್ಮ ಶಸ್ತ್ರಾಸ್ತ್ರಗಳನ್ನು ಸಮರ್ಪಿಸಿ ತಮ್ಮ ಮನೆಗೆ ಹೋಗುವ

ಸೂಚನೆಯನ್ನು ಕೊಡಲಿಲ್ಲ. ಅಲ್ಲಿದ್ದವರೆಲ್ಲಾ ಯುದ್ಧ ಮಾಡಿ ತಮ್ಮ ಪ್ರಾಣತ್ಯಾಗ ಮಾಡಲು ಸಿದ್ಧರಿರುವರೆಂದು ರಾಣಿಗೆ ಭರವಸೆಯಿತ್ತರು.

ಗುಲಾಂ ಗೌಸ್‌ಖಾನನು "ಶ್ರೀಮಂತ್ ಸರ್ಕಾರ್, ಇಂದಿನ ರಾತ್ರಿಯಿಂದ, ಈಗಿನಿಂದ ನಮ್ಮ 'ಘನಗರಜ್' ತೋಪಿನ ಪ್ರಭಾವವನ್ನು ನೋಡಿ" ಎಂದನು.

ಭಾವು ಬಕ್ಷಿಯು "ಸರ್ಕಾರ್, ನಿಮಗೆ ಕಾಣಿಸಿದ ದೇವಿಯು ತೋಪಿನ ಮೇಲೆ ಪ್ರಭಾವವನ್ನು ಬೀರುವಳು. ಕಡಕ್ ಬಜಲಿಯ ಬಲದಿಂದ ಕಾಮಾಸಿರ್ೕ ಗುಡ್ಡದವರೆಗೆ ಯಾವ ವಸ್ತುವಿದ್ದರೂ ಅದನ್ನು ಶತಃ ಛಿದ್ರಮಾಡಿ ಧ್ವಂಸ ಮಾಡದಿದ್ದರೆ ನನ್ನ ಹೆಸರು ಭಾವು ಬಕ್ಷಿಯಲ್ಲ" ಎಂದು ಹೇಳಿದನು.

ಖುದಾಬಕ್ಷನು "ಸರ್ಕಾರ್, ಸೈಯ್ಯರ್ ಹೆಬ್ಬಾಗಿಲಿನ ಬಳಿ ಮುಂದೇನು ಕಾರ್ಯಾಚರಣೆಯಾದರೂ ಅದರಿಂದ ನಿಮಗೆ ಸಂತೋಷವಾಗುವುದು" ಎಂದು ನುಡಿದನು.

ಮೋತೀಬಾಯಿಯು "ಸರ್ಕಾರ್, ನನ್ನನ್ನು ನನ್ನ ಸಂಗಾತಿಯರಿಂದ ಬೇರ್ಪಡಿಸಿ ಬೇರೊಂದು ಸ್ಥಾನಕ್ಕೆ ನಾಯಕಿಯನ್ನಾಗಿ ನೇಮಿಸಿ ನೋಡಿ. ಆಗ ಝಾನ್ಸಿಯ ಒಬ್ಬ ಸ್ತ್ರೀಯ ರಣಶೌರ್ಯವು ಎಷ್ಟು ಗುರುತರವಾದುದೆಂಬುದು ವೇದ್ಯವಾಗುವುದು" ಎಂದಳು.

ಹೊರಗಿನಿಂದ ಬಂದು ಝಾನ್ಸಿಯ ಸೈನ್ಯವನ್ನು ಸ್ವೇಚ್ಛೆಯಿಂದ ಸೇರಿದ ಪಠಾಣರ ಮುಖಂಡನಾದ ಸರದಾರ್ ಗುಲ್‌ಮಹಮ್ಮದ್ದನು "ಅಲಹಮದುಲ್ಲಿಲ್ಲಾಹ್, ಹುಜೂರ್, ನಮಗೆ ಹೆಚ್ಚು ಗೊತ್ತಿಲ್ಲ, ನಾವು ಹೆಚ್ಚು ಹೇಳುವುದೂ ಇಲ್ಲ. ಸ್ವರಾಜ್ಯಕ್ಕಾಗಿ ಝಾನ್ಸಿಯ ಮಣ್ಣಿನಲ್ಲಿ ಬೆರೆತು ಸ್ವರ್ಗವನ್ನು ಸೇರುವೆನೆಂದು ಮಾತ್ರ ನಿಮ್ಮಲ್ಲಿ ಅರ್ಜಿಮಾಡುತ್ತೇವೆ" ಎಂದನು.

ರಾಣಿಯು ಪರಮ ಸಂತುಷ್ಟಳಾಗಿ ಅವರಿಗೂ ಅವರ ಸಿಪಾಯಿಗಳಿಗೂ ಮನದಣಿಯುವಷ್ಟು ಪುರಸ್ಕಾರ ಮತ್ತು ಇನಾಮುಗಳನ್ನು ದಯಪಾಲಿಸಿದಳು. ಮುಖ್ಯಸ್ಥರಾದವರಿಗೆ ತಾನೇ ತನ್ನ ಹಸ್ತಗಳಿಂದ ರಣಕಂಕಣಗಳನ್ನು ಕಟ್ಟಿ ಭುಜ ತಟ್ಟಿದಳು. ಮೂರು ಜನ ಮುಖ್ಯಸ್ಥರುಗಳಿಗೆ ಮಾತ್ರ ಪುರಸ್ಕಾರ ದೊರೆಯಲಿಲ್ಲ—ದುಲ್ಹಾಜು, ಪೀರಾಲಿ ಮತ್ತು ಬರಹಾಮುದ್ದೀನ್ ಅವರು ಆ ಸಮಯದಲ್ಲಿ ಕೆಲ್ಲೆಯಲ್ಲಿರಲಿಲ್ಲ.

ನಿರಾಶೆಯ ವಾತಾವರಣದ ಮಬ್ಬು ಕಡಿಮೆಯಾಗಿ ಉತ್ಸಾಹದ ಕಿರಣವು ತಲೆದೋರಿತು. ರಾತ್ರಿಯೆಲ್ಲಾ ಅತಿ ಕಠೋರ, ತೀಕ್ಷ್ಣ ಮತ್ತು ಭೀಷಣವಾಗಿ ತೋಪುಗಳು ಕಿಲ್ಲೆ ಮತ್ತು ಹೊರಗಿನ ಪ್ರಾಕಾರದ ಬುರುಜಿಯ ಮೇಲಿಂದ ಗುಂಡುಗಳನ್ನು ಹಾರಿಸಿದವು. ರೋಜನ ಸೈನ್ಯವು ಅದಕ್ಕೆ ತಕ್ಕ ಉತ್ತರವೀಯಲಿಲ್ಲ. ಸೈನಿಕರು ಸುರಕ್ಷಿತ ಮಾಡಲ್ಪಟ್ಟ ಸ್ಥಳಗಳಲ್ಲಿ ವಿಶ್ರಾಂತಿ ಹೊಂದುತ್ತಿದ್ದರು. ಅಂದು

ಝೂನ್ಸಿಯ ಸೈನ್ಯವೇನಾದರೂ ಕೋಟೆಯ ಬಾಗಿಲುಗಳನ್ನು ತೆರೆದು ಹೊರಗೆ ಬಂದು ಆ ಸೈನಿಕರ ಮೇಲೆ ಧಾಳಿಮಾಡಿದ್ದರೆ ರೋಜನ ಸೇನೆಯೆಲ್ಲವೂ ನಾಶವಾಗುತ್ತಿದ್ದಿತು. ಝೂನ್ಸಿಯ ತೋಪುಗಳು ಅತ್ಯಂತ ಘರ್ಜನೆಮಾಡಿ ಗಲಭೆ ಎಬ್ಬಿಸಿದುವು. ಆದರೂ ಅದರಿಂದ ಆಂಗ್ಲೇಯ ಸೇನೆಗೇನೂ ಹಾನಿಯುಂಟಾಗಲಿಲ್ಲ. ರೋಜನಿಗೆ ಝೂನ್ಸಿಯಲ್ಲಿ ಇಷ್ಟು ಯುದ್ಧ ಸಾಮುಗ್ರಿಗಳು ಎಲ್ಲಿಂದ ಬಂದು ಸೇರುತ್ತಿವೆಯೆಂಬುದು ತಿಳಿಯ ಲಾರದೇ ಆಶ್ಚರ್ಯವಾಯಿತು.

ರಾಣಿಯು ಯಥಾಪ್ರಕಾರ ಒಂದು ಕಂದುಕದಿಂದ ಮತ್ತೊಂದು ಕಂದುಕಕ್ಕೆ, ಒಂದು ಸ್ಥಾನದಿಂದ ಮತ್ತೊಂದು ಸ್ಥಾನಕ್ಕೆ ಹೋಗಿ ಮೇಲ್ವಿಚಾರಣೆ ಮಾಡಿ ಅವರಿಗೆ ಬೇಕಾದ ಉತ್ಸಾಹವನ್ನು ಕೊಟ್ಟು ಹುರಿದುಂಬಿಸುತ್ತಿದ್ದಳು. ಆಗ ಒಂದು ಜಾಗದಲ್ಲಿ ದಿವಾನ್ ಜವರಸಿಂಹನು ಅವಳನ್ನು ಭೇಟಿಮಾಡಿದನು

ರಾಣಿಯು "ಆ ಮಾಮುಲೆಯು ಪರೀಕ್ಷೆಯಾಯಿತೆ?" ಎಂದು ಅವನನ್ನು ಕುರಿತು ಕೇಳಿದಳು.

ಜವಹರಸಿಂಹನು ಉತ್ತರಕೊಡುತ್ತಾ "ಹೌದು, ಸರ್ಕಾರ್ ಸ್ವಲ್ಪ ಮಟ್ಟಿಗೆ ತಿಳಿಯಿತು. ದುಲ್ಹಾಜುವನ್ನು ಕೇವಲ ತನ್ನ ರಕ್ಷಣೆಗಾಗಿ ಕರೆದುಕೊಂಡು ಹೋಗಿದ್ದನೆಂದು ಪೀರಾಲಿಯು ಪ್ರಮಾಣಮಾಡಿ ಹೇಳುತ್ತಾನೆ. ಆತನು ಕಳೆದ ರಾತ್ರೆ ನಡೆಸಿದ ಗುಪ್ತಾಚಾರ ಅನ್ವೇಷಣದಿಂದ ಹೆಚ್ಚೇನೂ ತಿಳಿಯಲಿಲ್ಲ. ಏಕೆಂದರೆ ರೋಜನು ತನ್ನ ಯೋಜನೆಯನ್ನು ಕೆಲವು ಆಪ್ತರಾದ ಜನರಲ್ಲುಗಳಿಗೆ ಮಾತ್ರ ತಿಳಿಸಿರುವನು. ಆಂಗ್ಲೇಯರಿಗೆ ಈವರೆಗೆ ಸುಮಾರು ೨ ಲಕ್ಷ ರೂಪಾಯಿಗಳು ತೋಪು ತುಪಾಕಿಗಳ ಮದ್ದಿಗೆ ಖರ್ಚಾಗಿದೆಯೆಂದೂ, ಗುಂಡುಗಳ ಸಂಖ್ಯೆಯು ಅಷ್ಟು ಹೆಚ್ಚಿಲ್ಲವೆಂದೂ, ಬಹುಶಃ ಕಲ್ಕತ್ತೆಯಿಂದ ತುರಿತವಾಗಿ ಅವುಗಳನ್ನು ಬರ ಮಾಡಿ ಕೊಳ್ಳುವ ನಿರೀಕ್ಷಣೆಯಿದೆಯೆಂದೂ ಆತನು ತಂದಿರುವ ಮುಖ್ಯ ಸಮಾಚಾರ" ಎಂದು ಹೇಳಿದನು.

ರಾಣಿಯು "ನಾಳೆ ಆಂಗ್ಲೇಯರು ಅತ್ಯಂತ ಕಠೋರವಾದ ಯುದ್ಧವನ್ನು ನಡೆಸುವರೆಂದು ನನಗೆ ಭಾಸವಾಗುತ್ತದೆ. ತಾತ್ಯಾಟೋಪೆಯಿಂದ ಅವರಿಗ ದೊರಕಿರುವ ಸಾಮುಗ್ರಿಯು ಅವರಿಗೆ ನೆರವಾಗುವುದು. ಪಾಪ! ಕಾಶಿ ಮತ್ತು ಜೂಹಿಯರು ಏನಾದರೋ ತಿಳಿಯದು" ಎಂದು ಶೋಕಭರಿತಳಾಗಿ ಹೇಳಿದಳು.

ಆದಕ್ಕೆ ಜವಹರಸಿಂಹನಾಗಲೀ ಏನು ಉತ್ತರ ಕೊಡಬಲ್ಲವನಾಗಿದ್ದನು? ರಾಣಿಯು ಒಂದು ಕ್ಷಣ ಯೋಚನೆಮಾಡಿ "ದಿವಾನ್ ದುಲ್ಹಾಜುವನ್ನು ನೀವು ಕಂಡಿ ದ್ದಿರಾ? ಆತನೇನು ಹೇಳಿದನು?" ಎಂದು ಕೇಳಿದಳು.

"ಇಲ್ಲ, ಸರದಿಯು ಬದಲಾಗಿ ಮುಂದರಿಬಾಯಿಯು ಓರ್ಛಾದ್ವಾರದ ಮೇಲಿ

ದ್ದಳು. ದಿವಾನ್‌ಸಾಹೇಬರು ಎಲ್ಲಿಯೋ ಹೋಗಿದ್ದರು.” ಎಂದು ಜವಹರಸಿಂಹನು ಉತ್ತರವಿತ್ತನು.

“ಬರಹಾಮುದ್ದೀನನೋ ?”

“ಸಾಗರ್ ಕಿಡಕಿಯ ಬಳಿ ಇದ್ದನು. ಅವನಿಗೆ ಎಚ್ಚರದಿಂದಿರುವಂತೆ ಹೇಳಿ ಬಂದೆ.”

ಆ ಸಮಯಕ್ಕೆ ಸರಿಯಾಗಿ ಕಿಲ್ಲೆಯ ಮಹಲ್ಲಿನ ಬಳಿ ಅತಿ ಭಯಂಕರವಾದ ಸ್ಫೋಟನೆಯುಂಟಾಯಿತು. ರಾಣಿಯು ಕಿಲ್ಲೆಯ ಕಡೆಗೆ ಹೋದಳು. ಹೊರಡುವ ಮುನ್ನ ಜವಹರಸಿಂಹನನ್ನು ಕುರಿತು “ನೀವು ಒಂದು ಬಾರಿ ನಗರದ ಕಂದುಕಗಳ ಸ್ಥಾನವನ್ನು ಪರೀಕ್ಷೆಮಾಡಿ ಸ್ವಲ್ಪ ವಿಶ್ರಾಂತಿಯನ್ನು ಹೊಂದಿ. ನಾನು ಆ ಶಬ್ದ ವೇನೆಂದು ಹೋಗಿ ನೋಡುತ್ತೇನೆ” ಎಂದು ಹೇಳಿದಳು.

ರಾಣಿಯು ಕಿಲ್ಲೆಗೆ ಹೋಗಿ ನೋಡಿದಳು. ಗುಂಡು ಮಹಲ್ಲಿನ ಮೇಲೆ ಬಿದ್ದು ಸಿಡಿದು ಮಹಲ್ಲಿನ ಎರಡು ಭಾಗಗಳು ನಷ್ಟಕ್ಕೀಡಾಗಿದ್ದುವು. ನೀರು ಸರಬರಾಯಿ ಮಾಡುವ ಬ್ರಾಹ್ಮಣರು, ಮಂದಿರದ ಪೂಜಾರಿಗಳು ಮಹಲ್ಲಿನ ಕೆಳಗಿನ ಕೊಠಡಿಗಳಲ್ಲಿ ಅಡಗಿಕೊಂಡಿದ್ದರು. ಅವರನ್ನು ಕರೆದು ಧೈರ್ಯ ಹೇಳಿದನಂತರ ತಾನೇ ಮಹಲ್ಲಿನ ಸುತ್ತಲೂ ತಿರುಗಲಾರಂಭಿಸಿದಳು. ಸುಮಾರು ೨ ಗಂಟೆಯ ಸಮಯವಿರಬಹುದು. ಗುಲಾಂ ಗೌಸ್‌ಖಾನನು ಮಿಕ್ಕ ತೋಪ್ಚಿಗಳೊಂದಿಗೆ ಪಶ್ಚಿಮದ ಬುರುಜಿಯಲ್ಲಿದ್ದನು. ಲಾಲತ ಬ್ರಾಹ್ಮಣನು ತೋಪು ಚಲಾಯಿಸುತ್ತಿದ್ದನು. ದಕ್ಷಿಣದಲ್ಲಿದ್ದ ತೋಪುಗಳ ಬಳಿ ಮೋತೀಬಾಯಿಯೂ ಪೂರ್ವದಲ್ಲಿ ಭಾವು ಬಕ್ಷಿಯೂ ಮಧ್ಯದಲ್ಲಿ ಮುಂದರಿಯೂ ಕೆಲಸ ಮಾಡುತ್ತಿದ್ದರು. ಇವರುಗಳಿಗೆ ಮಹಲ್ಲಿನ ಪರಿಸ್ಥಿತಿಯನ್ನು ತಿಳಿಸಿದಳು. ಅವರು ಸರಿಯಾದ ಗುರಿಯಿಟ್ಟು ತಮ್ಮ ತೋಪುಗಳನ್ನು ಹಾರಿಸಿದರು. ಆದರಿಂದ ಆಂಗ್ಲೇಯರ ತೋಪುಗಳು ತಣ್ಣಗಾದವು. ಮಹಲ್ಲಿನಲ್ಲಿ ಅಡಗಿದ್ದ ಬ್ರಾಹ್ಮಣರು ಮುಂತಾದವರು ಬೆವರಿನಿಂದ ತೋಯ್ದುಹೋಗಿ ಹೊರಗೆ ಬಂದು ಸುಖವಾಗಿ ಮಲಗಿದರು.

ಬೆಳಿಗ್ಗೆ ರಾಣಿಯ ಕೈಗೆ ಬರಹಾಮುದ್ದೀನನೊಂದು ಪತ್ರವನ್ನು ತಲಪಿಸಿದನು. ಅದು ಅವನ ರಾಜೀನಾಮೆಯ ಪತ್ರವಾಗಿದ್ದು ಅದರಲ್ಲಿ “ನನ್ನ ಮೇಲೆ ವಿಶ್ವಾಸವಿಡಲಿಲ್ಲ. ಅದಕ್ಕೆ ವ್ಯತಿರಿಕ್ತವಾಗಿ ತಿರಸ್ಕಾರವೇ ದೊರೆಯಿತು. ನಾನು ಕೆಲಸವನ್ನು ತ್ಯಜಿಸುತ್ತೇನೆ. ಶಸ್ತ್ರಾಸ್ತ್ರಗಳನ್ನು ಪೀರಾಲಿಗೆ ಒಪ್ಪಿಸಿದ್ದೇನೆ. ಪೀರಾಲಿ ಮತ್ತು ದುಲ್ಹಾಜುರವರ ವಿಷಯದಲ್ಲಿ ಹುಷಾರಾಗಿರಿ” ಎಂದು ಬರೆದಿದ್ದಿತು.

ರಾಣಿಗೆ ಕೋಪೋದ್ರೇಕವಾಗುವುದರಲ್ಲಿದ್ದಿತು. ಆದರೆ ಅದನ್ನು ತಡೆದುಕೊಂಡಳು. “ಇಂತಹ ಸಮಯದಲ್ಲಿ ನಿನ್ನಂತಹವರೇ ಕೆಲಸವನ್ನು ತೊರೆಯುವರು.

ಹೊರಟು ತೊಲಗು” ಎಂದು ಹೇಳಿ ಆ ಕಾಗದವನ್ನು ತನ್ನ ಜೇಬಿನಲ್ಲಿರಿಸಿಕೊಂಡಳು.

## ೭೨

ಮೂರನೆಯದಿನ ನಡೆದ ಯುದ್ಧವು ಬಹು ಭಯಂಕರವಾಗಿದ್ದು ರೋಜನ ಸೈನ್ಯದ ಚೈತನ್ಯವು ಮುರಿಯಿತು. ಆತನು ಚತುರೋಪಾಯ ಮಾಡಿದರೂ ಒಂದು ಕವಡೆಯಷ್ಟೂ ಅವನಿಗೆ ಲಾಭವಾಗಲಿಲ್ಲ. ಮತ್ತೆ ಅದೇ ಹಳೇ ಕಥೆ—ಪ್ರಾಕಾರದ ಗೋಡೆಯಲ್ಲಿ ರಂಧ್ರ ಉಂಟಾಯಿತು. ಬುರುಜಿಗಳಿಗೆ ಅಲ್ಲಲ್ಲಿ ಘಾತವಾಗಿ ಮುರಿದು ಬಿದ್ದುವು. ನಗರದಲ್ಲಿ ಮನೆಗಳು ಧ್ವಂಸವಾದುವು. ಬೆಂಕಿ ಬಿದ್ದು ಜ್ವಾಲೆಯು ಹರಡಿತು, ಹಲವರು ಮಡಿದರು. ಪ್ರಾಕಾರದ ಗೋಡೆಗಳನ್ನು ಪುನಃ ಸರಿಪಡಿಸಲಾಯಿತು. ಮಡಿದವರ ಬದಲು ಬೇರೆ ಸಿಪಾಯಿಗಳನ್ನು ನಿಯುಕ್ತಮಾಡಿ ಧೈರ್ಯ ತುಂಬಿಸ ಲಾಯಿತು. ರಾತ್ರಿಯೂ ಅದೇ ರೀತಿ ಮುಂದುವರೆಯಿತು. ಯುದ್ಧದ ಭೀಕರ ಸ್ಥಿತಿಯು ಸ್ಥಿರವಾಗಿ ನಿಂತಿತು. ಝಾನ್ಸಿಯ ಜನರಿಗೆ ಇದು ದಿನಚರಿಯಾಗಿ ಬಿಟ್ಟಿತು.

ರಾಣಿಯು ಓರ್ಛಾದ್ವಾರವನ್ನು ಸೇರಿದಳು. ದುಲ್ಹಾಜುವು ಇನ್ನೂ ಅವನ ಸ್ಥಾನದಲ್ಲಿಯೇ ಇದ್ದನು. ಮುಂದರಿಯೂ ಅಲ್ಲಿ ಹಾಜರಿದ್ದಳು.

ರಾಣಿಯು ಹಠಾತ್ತಾಗಿ ದುಲ್ಹಾಜುವನ್ನು ಕುರಿತು “ದುಲ್ಹಾಜು, ನೀನು ಪೀರಾಲಿಯೊಂದಿಗೆ ಆಂಗ್ಲೇಯರ ಶಿಬಿರದಲ್ಲಿ ಯಾವಾಗಲಾದರೂ ಹೋಗಿದ್ದೆಯಾ?” ಎಂದು ಕೇಳಿದಳು.

“ಆಂಗ್ಲೇಯರ ಶಿಬಿರದಲ್ಲಿ........ನಾನು .......ನಾನು” ದುಲ್ಹಾಜುವು ತಡವರಿಸುತ್ತಾ “ನಾನು ಸರ್ಕಾರ್, ಯಾವಾಗ?” ಎಂದನು.

ರಾಣಿ—ಯಾವಾಗಲಾದರೂ ಸರಿಯೆ, ಹೋಗಿದ್ದೆಯೋ ಇಲ್ಲವೊ?

ದುಲ್ಹಾಜು—ಇಲ್ಲ ಸರ್ಕಾರ್.

ರಾಣಿ—ಪೀರಾಲಿಯು ನೀನು ಅವನೊಡನೆ ಹೋಗಿದ್ದೆಯೆಂದು ಹೇಳುತ್ತಾನಲ್ಲಾ?

ದುಲ್ಹಾಜು—ಶುದ್ಧ ಸುಳ್ಳು. ಆತನು ಬರೀ ಸುಳ್ಳು ಹೇಳುತ್ತಾನೆ, ಸರ್ಕಾರ್.

ರಾಣಿ—ಇರಬಹುದು. ಈ ಕೆಂಪುಧ್ವಜದ ವಿಷಯವೇನು?

ದುಲ್ಹಾಜು—ಕೆಂಪು ಧ್ವಜ! ಎಂಥಾ ಕೆಂಪು ಧ್ವಜ, ? ಯಾವ ಧ್ವಜ, ಸರ್ಕಾರ್?

ರಾಣಿ—ಗಾಬರಿಯಾಗಬೇಡ. ನನಗೆ ಈ ಕೆಂಪು ಧ್ವಜದ ವಿಷಯವೆಲ್ಲವೂ ತಿಳಿದಿದೆ.

ದುಲ್ಹಾಜು—ಸರ್ಕಾರ್, ಬಹಳವಾಗಿ ದಣಿದಿದ್ದೇನೆ. ನನ್ನ ಬುದ್ಧಿಗೆ ಏನೂ ತೋಚುವುದಿಲ್ಲ. ಬುದ್ಧಿ ಮಂದವಾಗಿದೆ. ಕೆಂಪು ಧ್ವಜ! ಪೀರಾಲಿಯು ದೊಡ್ಡ

ವಿಶ್ವಾಸ ಘಾತುಕ. ಶುದ್ಧ ಸುಳ್ಳು ಹೇಳುತ್ತಾನೆ.

ಮುಂದರಿ—ಇಂದು ಈತನಿಂದ ತೋಪುಗಳನ್ನು ಸರಿಯಾಗಿ ಚಲಾಯಿಸಲಾಗ ಲಿಲ್ಲ. ಈತನು ನನ್ನ ಮೇಲೆ ವೃಥಾ ಕೋಪಗೊಂಡಿದ್ದಾನೆ. ಈತನನ್ನು ಪ್ರಸನ್ನ ನಾಗಿಡಲು ಪ್ರಯತ್ನಿಸುತ್ತಿದ್ದೇನೆ.

ರಾಣಿ—ಚಿಂತೆಯಿಲ್ಲ. ನಾಳೆ ಸರಿಯಾಗಿ ಕೆಲಸ ಮಾಡು. ಮುಂದರಿಯು ಜೊತೆಯಲ್ಲಿದ್ದ ನಿನಗೆ ಬೇಕಾದ ಸಹಾಯವನ್ನು ನೀಡುವಳು.

ರಾಣಿಗೆ ಬರಹಾಮುದ್ದೀನನ ರಾಜೀನಾಮೆ ಪತ್ರವು ನೆನಪಿಗೆ ಬಂದಿತು. ಅವಳಿಗೆ ಇನ್ನೂ ಹೆಚ್ಚಾಗಿ ಆ ವಿಧವಾದ ಪತ್ರಗಳನ್ನು ಸ್ವೀಕರಿಸಲು ಇಚ್ಛೆಯಿರಲಿಲ್ಲ.

ಮುಂದರಿ—ಇವರನ್ನು ಕಿಲ್ಲೆಯಲ್ಲಿರಿಸಿಕೊಳ್ಳಿ. ನಾನು ಈ ರಾತ್ರಿ ಮತ್ತು ನಾಳೆಯ ದಿನ ಪೂರ್ತಿಯಾಗಿ ತೋಪುಗಳನ್ನು ನೋಡಿಕೊಳ್ಳುತ್ತೇನೆ.

ರಾಣಿಯು "ಈ ರಾತ್ರಿ ಸ್ವಲ್ಪ ವಿಶ್ರಾಮ ಹೊಂದುತ್ತಾ ಆತನ ಜೊತೆಯಲ್ಲೇ ಕೆಲಸಮಾಡುತ್ತಿರು. ನಾಳೆ ಬೆಳಿಗ್ಗೆ ವಿಶ್ರಾಂತಿಗೆ ಅವಕಾಶ ದೊರೆಯುವುದಿಲ್ಲ. ನಾಳೆ ರಾತ್ರೆ ನಿಮ್ಮಿಬ್ಬರಿಗೂ ಬೇಕಾದಷ್ಟು ವಿಶ್ರಾಂತಿ ದೊರಕುವಂತೆ ತಕ್ಕ ಪ್ರಬಂಧ ಮಾಡುತ್ತೇನೆ" ಎಂದು ಹೇಳಿದಳು.

ನಂತರ ರಾಣಿಯು ಸಾಗರ್ ಕಿಡಕಿಯ ಬಳಿ ನಡೆದಳು. ಆಗ ಪೀರಾಲಿಯು ತನ್ನ ಕೆಲಸವನ್ನು ಮುಗಿಸಿ ತನ್ನ ಸ್ಥಾನವನ್ನು ತನ್ನನ್ನು ಬದಲಿಮಾಡುವವನಿಗೆ ಒಪ್ಪಿಸುತ್ತಿದ್ದನು.

ರಾಣಿಯನ್ನು ಕಂಡು ಆತನು ಬಹಳ ಗಾಬರಿಗೊಂಡನು.

ರಾಣಿಯು "ದುಲ್ಹಾಜುವು ನಿನ್ನೊಡನೆ ನಿನ್ನೆಯದಿನ ನಗರದ ಹೊರಗಡೆ ಹೋಗ ಲಿಲ್ಲವೆಂದು ಹೇಳುತ್ತಾನೆ. ನೀನು ದಿವಾನ್ ಜವಹರಸಿಂಹರೊಡನೆ ಆತನು ನಿನ್ನೊಡನೆ ಹೋದನೆಂದು ಹೇಳಿರುವೆಯಲ್ಲವೆ ?" ಎಂದು ಪೀರಾಲಿಯನ್ನು ಕುರಿತು ಕೇಳಿದಳು.

ಪೀರಾಲಿಯು ಧೈರ್ಯತಾಳಿ "ಆತನು ಖಂಡಿತವಾಗಿ ನನ್ನೊಡನೆ ಹೋಗಿದ್ದನು, ಸರ್ಕಾರ್. ಹೆದರಿಕೆಯಿಂದ ಆತನು ಆ ರೀತಿ ಹೇಳಿರುವನು. ನಾನು ಬೇಕಾದರೆ ಅವನ ಸಮ್ಮುಖದಲ್ಲಿ ಈ ಮಾತನ್ನು ಹೇಳ ಬಲ್ಲೆನು. ಸ್ವಲ್ಪ ಬಹಿರ್ದೇಶಕ್ಕೆ ಹೋಗಿ ಬಂದ ನಂತರ ಹಾಜರಾಗುವೆನು" ಎಂದು ಹೇಳಿದನು.

ರಾಣಿಯು "ಅಷ್ಟೇನು ಆತುರವಿಲ್ಲ. ಸ್ವಲ್ಪ ಹೊತ್ತಾದನಂತರ ಕಿಲ್ಲೆಗೆ ಬಾ" ಎಂದಳು.

"ಹಾಗೆಯೇ ಆಗಲಿ, ಹುಜೂರ್" ಎಂದು ವಿಮೋಚನೆಯನ್ನು ಸೂಚಿಸುವ ನಿಟ್ಟುಸಿರು ಬಿಟ್ಟನು.

ರಾಣಿಯು ಪೂರ್ವ ಮತ್ತು ಉತ್ತರದ ಹೆಬ್ಬಾಗಿಲುಗಳ ಬಳಿಗೆ ಹೋಗಿ ನಂತರ ಉನಾವ್ ದ್ವಾರದ ಬಳಿ ಬಂದಳು. ಅಲ್ಲಿ ನೇಯ್ಗೆಯವರ ಪೂರಣನು ಇತರ ನೇಯ್ಗೆಯವರೊಂದಿಗ ತೋಪು ಚಲಾಯಿಸುತ್ತಿದ್ದನು. ಅದನ್ನು ಕಂಡು ಅವಳು ಅವರನ್ನು ಪ್ರಶಂಸಿಸಿದಳು.

ಆಕೆಯು ಪೂರಣನನ್ನು ಕುರಿತು "ಝುಲಕಾರಿ ಎಲ್ಲಿ? ಅವಳು ಚೆನ್ನಾಗಿರುವಳಷ್ಟೇ?" ಎಂದು ಕೇಳಿದಳು.

"ಸರ್ಕಾರ್, ಮನೆಯಲ್ಲಿರುವಳು. ಅಪ್ಪಣೆಯಾದರೆ ಕರೆತರುವೆನು. ಮುಂಜಾನೆಯಿಂದ ಕೆಲಸಮಾಡುತ್ತಿದ್ದವಳು ಈಗ ತಾನೆ ಮನೆಗೆ ಹೋಗಿರುವಳು. ಹೋಗಿ ಸ್ವಲ್ಪ ಹೊತ್ತಾಯಿತು." ಎಂದು ಪೂರಣನು ಉತ್ತರವಿತ್ತನು.

"ಬೇಡ, ಬೇಡ, ಕರೆಯ ಬೇಡ. ಸುಮ್ಮನೆ ವಿಚಾರಿಸಿದೆ" ಎಂದು ಹೇಳಿ ರಾಣಿಯು ಮುಂದೆ ಹೊರಟಳು.

ಹಾಗೆಯೇ ಒಂದೊಂದು ದ್ವಾರದ ಬಳಿಗೂ ಹೋಗಿ ಅಲ್ಲಿಯ ಕಾರ್ಯಕ್ರಮಗಳನ್ನು ಪರಿಶೀಲಿಸಿ ಹಲ್ವಾಯಿ ಪೇಟೆಗೆ ಬಂದಳು. ಅಲ್ಲಿ ಪೇಟೆಯ ಚೌಧುರಿಯನ್ನು ಕಂಡಳು. ಆತನೊಬ್ಬ ಶ್ರೀಮಂತ. ಆತನು ಬೆಳಿಗ್ಗೆ ಮುಖ ಕೈಕಾಲು ತೊಳೆದುಕೊಂಡ ನೀರು ನೂರು ನೂರೈವತ್ತು ಗಜದವರೆಗೆ ಹರಿದು ಹೋಗುತ್ತಿದ್ದಿತು.

ರಾಣಿಯು ಅವನನ್ನು ಸಂಭೋದಿಸಿ "ಈಗಲೂ ಅಷ್ಟೊಂದು ನೀರಿನಿಂದ ಮುಖ ಕೈಕಾಲು ತೊಳೆದುಕೊಳ್ಳುತ್ತೀಯಾ?" ಎಂದು ಕೇಳಿದಳು.

"ಸರ್ಕಾರ್, ಈಚೆಗೆ ವ್ಯಾಪಾರವೆಲ್ಲಾ ನಿಂತುಹೋಗಿದೆ. ಮುಖ ಕೈಕಾಲು ತೊಳೆಯುತ್ತಲೇ ಬಹುಜನ ವ್ಯಾಪಾರಿಗಳೊಂದಿಗೆ ಮಾತುಕತೆ ನಡೆಸುತ್ತಿದ್ದೆನಾದುದರಿಂದ ನೀರು ಹರಿದು ಹೋಗುತ್ತಿರುವುದು ಗಣನೆಗೆ ಬರಲಿಲ್ಲ" ಎಂದು ಚೌಧುರಿಯು ಉತ್ತರವಿತ್ತನು.

ರಾಣಿಯು "ಈಗ ವ್ಯಾಪಾರದೊಂದಿಗೆ ನೀರೂ ಒಂದಾಗಿದೆಯೇ?" ಎಂದು ಪರಿಹಾಸ್ಯ ಮಾಡಿದಳು.

ಅಂತಹ ಮಹಾಕಠಿಣ ಪರಿಸ್ಥಿತಿಯಲ್ಲಿಯೂ ಪೇಟೆಯ ಜನರು ರಾಣಿಯ ಮಾತುಗಳನ್ನು ಲಾಲಿಸಿ ನಸುನಗುತ್ತಿದ್ದು ವಿಪತ್ತಿನಲ್ಲಿ ಧೈರ್ಯ ಮತ್ತು ಸಾಹಸಗಳನ್ನು ಬೆಳಸಿಕೊಂಡು ಹೋಗುತ್ತಿದ್ದರು.

ಇದೇ ರೀತಿ ದಾರಿಯಲ್ಲಿ ಸಿಕ್ಕವರೊಡನೆ ಮಧುರಾಲಾಪ ಮಾಡುತ್ತಾ ಸಾಹಸ ಧೈರ್ಯಗಳನ್ನು ಹರಡುತ್ತಾ ರಾಣಿಯು ಕಿಲ್ಲೆಗೆ ಹಿಂದಿರುಗಿದಳು. ಅಲ್ಲಿ ಪೂರ್ವದಂತೆಯೇ ಗುಂಡಿನ ಸುರಿಮಳೆಯಾಗುತ್ತಿದ್ದಿತು.

ರಾತ್ರಿಯು ಕಳೆಯಿತು.

ಬೆಳಗಾಗುತ್ತಲೇ ರಾಣಿಯು "ನಾನೇ ಸ್ವತಃ ಇಂದು ಮುಂಜಾನೆಯ ಊಟ ವನ್ನು ತಯಾರಿಸುತ್ತೇನೆ. ಮನಸ್ಸಂತುಷ್ಟರಾಗಿ ಉಂಡು ಅಚಲರಾಗಿ ಆ ಯುದ್ಧ ಮಾಡಿ" ಎಂದು ತನ್ನ ಹುದ್ದೆದಾರರಿಗೂ ಸಿಪಾಯಿಗಳಿಗೂ ಸಂದೇಶ ಕಳುಹಿಸಿದಳು.

ಈ ವಾರ್ತೆಯನ್ನು ಕೇಳುತ್ತಲೇ ಬಳಲಿ ಆಗಲೇ ಅರ್ಧ ಮೃತರಾದಂತಿದ್ದ ಸಿಪಾಯಿಗಳೆಲ್ಲರಿಗೂ ಎದೆಯುಬ್ಬಿತು.

ಬ್ರಾಹ್ಮಣರು ಹಿಟ್ಟು ಕಲಸಿ ನಾದಿದರು. ರಾಣಿಯು ಅವರೊಂದಿಗೆ ಕಲೆತು ಸಹಾಯ ಮಾಡಿದಳು. ರೊಟ್ಟಿ ಊಟಗಳು ತಯಾರಾದ ಕೂಡಲೇ ಕಿಲ್ಲೆಯಲ್ಲಿದ್ದ ಹುದ್ದೇದಾರರಿಗೆ ತಾನೇ ಸ್ವತಃ ಊಟವನ್ನು ಕೊಂಡೊಯ್ದು ಕೊಟ್ಟಳು.

ಸಂತೋಷಾಭಿಮಾನಗಳಿಂದ ಅವರು ಉನ್ಮತ್ತರಾದರು. ರಾಣಿಯು ಸ್ಪರ್ಶ ಮಾಡಿಕೊಟ್ಟ ರೊಟ್ಟಿಯ ಚೂರೊಂದನ್ನು ರುಮಾಲಿನ ತುದಿಯಲ್ಲೊ ಅಥವಾ ಅಂಗ ರೇಖಿನ ತುದಿಯಲ್ಲೊ ಬಣಿದು ಕಟ್ಟಿಕೊಂಡರು. ಅದರೊಂದಿಗೆ ತಮ್ಮ ಪ್ರಾಣವನ್ನು ಒಪ್ಪಿಸುವುದಾಗಿ ಶಪಥಮಾಡಿ ಬಿಗಿದು ಕಟ್ಟಿದರು.

ರಾಣಿಗೆ ಪೀರಾಲಿಯ ಸ್ಮರಣವಾಯಿತು. ಆಕೆಯು ಎಂದಿಗೂ ಯಾವುದನ್ನೂ ಸುಲಭವಾಗಿ ಮರೆಯುತ್ತಿರಲಿಲ್ಲ. ಆತನನ್ನು ಕರೆತರಲು ಹೇಳಿ ಕಳುಹಿಸಿದಳು. ಆದರ ಬಹಿರ್‌ಪ್ರದೇಶಕ್ಕೆ ಹೋದವನು ತಿರುಗಿ ಪತ್ತೆಯಿಲ್ಲವೆಂದು ತಿಳಿಯಿತು. ಅಲ್ಲದೆ ಮೋರಿಯ ಮೂಲಕ ಪಾರಾದನೆಂಬುದೂ ತಿಳಿದುಬಂದಿತು.

ರಾಣಿಯು ಒಂದು ಕ್ಷಣ ದಿಕ್ಕು ತೋಚದಾದಳು.

ಪೀರಾಲಿಯು ಸುಳ್ಳು ಹೇಳುತ್ತಿರುವನೆಂದೂ, ದುಲ್ಹಾಜುವು ಯಾವಾಗಲೂ ಸುಳ್ಳಾಡುವವನಲ್ಲವೆಂದೂ ಅವಳಿಗೆ ಭರವಸೆಯುಂಟಾಯಿತು. ಆದರ ಬರಹಾಮುದ್ದೀ ನನು ತನ್ನ ರಾಜೀನಾಮೆ ಪತ್ರದಲ್ಲಿ ಪೀರಾಲಿ ಮತ್ತು ದುಲ್ಹಾಜುರವರಿಂದ ಹುಷಾ ರಾಗಿರಿ ಎಂದು ಬರೆದಿದ್ದನು. ರಾಣಿಯು ಯಾವುದೋ ನಿಶ್ಚಯಕ್ಕೆ ಬರುವಂತಿದ್ದಳು. ಅಷ್ಟರಲ್ಲಿ ನಾಲ್ಕು ಕಡೆಯಿಂದಲೂ ಆಂಗ್ಲೇಯರು ಗುಂಡಿನ ಮಳೆಯನ್ನು ಕರೆದರು.

## ೭೩

ರಾಣಿಯು ಒಡನೆಯೇ ತನ್ನ ದಳನಾಯಕರುಗಳಿಗೂ ಮತ್ತು ತೋಪಿನ ಪಡೆಯ ವರಿಗೂ ಯಥೋಚಿತವಾದ ಆಜ್ಞೆಯನ್ನಿತ್ತಳು.

ಯಾವ ವಿಧದಿಂದಲಾದರೂ ಪ್ರಾಕಾರದ ಗೋಡೆಯನ್ನು ಒಡೆದು ಝಾನ್ಸಿಯನ್ನು ಪ್ರವೇಶಿಸಬೇಕೆಂಬುದು ಆಂಗ್ಲೇಯರ ಮನೋಗತವಾಗಿದ್ದಿತು. ಅಂತೆಯೇ ಝಾನ್ಸಿಯ ಜನರು ತಮ್ಮ ಶರೀರದ ರಕ್ತನಾಳಗಳಲ್ಲಿ ನೆತ್ತರು ಹರಿಯುತ್ತಿರುವವರೆಗೂ ಶತ್ರುಗಳ

ಒಂದು ಹೆಜ್ಜೆಯನ್ನೂ ಪವಿತ್ರವಾದ ನಗರದಲ್ಲಿಡಲು ಅವಕಾಶಕೊಡುವುದಿಲ್ಲವೆಂಬುದೂ ನಿಶ್ಚಿತವಾಗಿದ್ದಿತು.

ಝಾನ್ಸಿಯಲ್ಲಿ ಏರ್ಪಟ್ಟ ಗುಂಡಿನ ವರ್ಷವು ಆಕಾಶದಲ್ಲಿ ಅಗ್ನಿಯ ಅಂಬರವನ್ನು ಹಾಸಿದಂತೆ ಭಾಸವಾಗುತ್ತಿದ್ದಿತು. ಈ ಅಗ್ನಿಜ್ವಾಲೆಯಲ್ಲಿ ಆಂಗ್ಲೇಯರ ಶಿರಗಳ ಮೇಲೆ ಬಿದ್ದು ಸ್ಫೋಟನೆಯಾಗಿ ಚೂರು ಚೂರಾಗಿ ಹೋಗುತ್ತಿದ್ದ ಗುಂಡಿನ ಚೂರುಗಳು ಮಳೆಹನಿಗಳಂತೆ ವ್ಯಕ್ತವಾಗುತ್ತಿದ್ದುವು. ಹುರಿದು ಮುಕ್ಕುವಂತಹ ಹವೆಯು ವಿಸ್ಫೋಟಿಸುತ್ತಿದ್ದಿತು. ದಕ್ಷಿಣ ದಿಕ್ಕಿನಲ್ಲಿ ಜೀವನಶಹಾ ಗುಡ್ಡದಿಂದ ಓರ್ಛಾ ದ್ವಾರದ ಮುಂದಿರುವ ಗುಡ್ಡದವರೆಗೂ ಹರಡಿದ್ದ ಆಂಗ್ಲೇಯರ ತೋಪುಖಾನೆಗಳು ಅತ್ಯಂತ ವೇಗದಿಂದ ಪ್ರತ್ಯುತ್ತರವನ್ನೀಯುತ್ತಿದ್ದುವು. *

ತಮ್ಮ ತೋಪುಗಳ ರಕ್ಷಣೆಯಲ್ಲಿ ಆಂಗ್ಲೇಯ ಸೈನ್ಯವು ಜೀವನಶಹಾ ಗುಡ್ಡ ಮತ್ತು ಓರ್ಛಾ ಹೆಬ್ಬಾಗಿಲಿನ ಮುಂದಿರುವ ಗುಡ್ಡಗಳ ನಡುವೆ ಹಾದು ಓರ್ಛಾ ದ್ವಾರ ಮತ್ತು ಸೈಯರ್ ದ್ವಾರಗಳ ಕಡೆ ನುಗ್ಗಿತು. ಕೋಟೆಯ ಪ್ರಾಕಾರದಲ್ಲಿದ್ದ ಸಂದುಗಳಿಂದ ಬಂದೂಕು ಮತ್ತು ಚಿಕ್ಕತೋಪುಗಳು ಇವರನ್ನು ಶೀಘ್ರದಲ್ಲಿಯೇ ಬಲಿಗೊಂಡವು. ಅಳಿದುಳಿದ ಸಿಪಾಯಿಗಳು ಕಂಬೀಕಿತ್ತು ಓಡಲಾರಂಭಿಸಿದರು. ಆದರೆ ಅದರಲ್ಲಿಯೂ ಅವರು ಯಶಸ್ವಿಗಳಾಗದೆ ಬಂಡೆಯ ಸಂದುಗಳಲ್ಲಿ ಆಶ್ರಯ ಹೊಂದಬೇಕಾಯಿತು. ನಂತರ ಒಂದು ದಳವು ಓರ್ಛಾಹೆಬ್ಬಾಗಿಲಿನ ಬಳಿಗೂ ಮುಂಬರಿದು ಬಂದುವು. ಆಂಗ್ಲೇಯರ ತೋಪುಖಾನೆಗಳು ಭೀಷಣವಾದ ಧಾಳಿಯನ್ನು ಪ್ರಾರಂಭಿಸಿದುವು.

ಓರ್ಛಾದ್ವಾರದ ಮುಂದಿದ್ದ ಗುಡ್ಡದ ಹಿಂಭಾಗದಲ್ಲಿ ಕೆಂಪು ಧ್ವಜವೊಂದು ಎದ್ದು ಹಾರಾಡುತ್ತಿರುವುದನ್ನು ರಾಣಿಯೂ ಮತ್ತು ಮೋತೀಬಾಯಿಯೂ ದೂರದರ್ಶಕ ಯಂತ್ರದ ಮೂಲಕ ಕಂಡರು. ಅದರೊಂದಿಗೆ ಓರ್ಛಾದ್ವಾರದ ಮೇಲಿದ್ದ ತೋಪುಗಳೂ ನಿರ್ಬಲವಾದುವು.

"ಸರ್ಕಾರ್, ನಾನು ಅಲ್ಲಿಗೆ ಹೋಗಲು ಅನುಮತಿಯನ್ನು ಕೊಡಿ. ಸುಂದರಿಯು ಒಬ್ಬಳೇ ಕೆಲಸಮಾಡುತ್ತಿರುವಳು. ದುಲ್ಹಾಜುವಿನ ಕೈಬಲವು ಶಿಥಿಲವಾದಂತಿದೆ" ಎಂದು ಮೋತೀಬಾಯಿಯು ಸಲಹೆಮಾಡಿದಳು.

"ಹೊರಡು ಮೋತಿ, ಅಂಬಿನಂತೆ ಅಲ್ಲಿಗೆ ಹೋಗಿ ಸೇರು" ಎಂದು ರಾಣಿಯು ತ್ವರೆಗೊಳಿಸಿದಳು.

---

* ಈ ಗುಡ್ಡದ ಮೇಲೆ ಈಗ ಮೆಗ್ಡೊನಾಲ್ಡ್ ಹೈಸ್ಕೂಲು ಮತ್ತು ಬೋರ್ಡಿಂಗ್ ಹೌಸ್ ಕಟ್ಟಲಾಗಿದೆ.

ಮೋತೀಬಾಯಿಯು ಅಲ್ಲಿಂದ ಹೊರಟಳು. ಆದರೆ ಸೈಯ್ಯರ್ ದ್ವಾರದ ಬಳಿ ಖುದಾಬಕ್ಷನು ಅವಳನ್ನು ತಡೆದು ನಿಲ್ಲಿಸಿದನು. ಆತನು ಓರ್ಛಾದ್ವಾರದ ಬಳಿ ಹೋಗ ಬೇಡ. ನನ್ನ ಬಳಿ ಇಲ್ಲಿಯೇ ಇರು. ರಾಣಿಯ ಉಪ್ಪನ್ನು ತಿಂದುದಕ್ಕಾಗಿ ಸಾರ್ಥಕ ಗೊಳಿಸುವೆನು. ನಾನು ಯುದ್ಧ ಮಾಡಿ ಪ್ರಾಣತ್ಯಾಗ ಮಾಡುವೆನು. ನೀನು ಇಲ್ಲಿಯೇ ಇದ್ದು ನನ್ನ ಶವ ಸಂಸ್ಕಾರ ಮಾಡು" ಎಂದನು.

ಮೋತೀಬಾಯಿಯ ಮುಖವು ಬಾಡಿ ಕಳೆಗುಂದಿಹೋಯಿತು. ಆದರೂ ಅವಳ ಸೌಂದರ್ಯದ ಕಿರಣವು ಮುಖದಿಂದ ಮಿಣುಗುಟ್ಟುತ್ತಿದ್ದು ಅವಳ ಕಣ್ಣುಗಳು ಹನಿ ಗೂಡಿದುವು.

ತೋಪಿಗೆ ಬತ್ತಿಯನ್ನಿಡುತ್ತಿದ್ದಂತೆಯೇ ಖುದಾಬಕ್ಷನು ಚೀತ್ಕಾರ ಸ್ವರದಿಂದ "ಕಂಬನಿಗರೆಯಲು ಇದು ವೇಳೆಯೇ ?" ಎಂದು ಕೇಳಿದನು.

ಮೋತೀಬಾಯಿಯು ತನ್ನ ಮುಸಿಗಟ್ಟಿದ ಹಸ್ತಗಳಿದ ಕಣ್ಣೀರನ್ನು ಒರೆಸಿ ಕೊಳ್ಳುತ್ತಾ "ಇಲ್ಲ, ಇನ್ನು ಕಣ್ಣೀರಿಡುವುದಿಲ್ಲ" ಎಂದು ಉತ್ತರವಿತ್ತಳು.

ಖುದಾಬಕ್ಷನು ಅತ್ಯುತ್ಸಾಹದಿಂದ "ಇಂದು ನಾನು ನಿರಂತರಕ್ಕೂ ನಿನ್ನ ಕೈದಿಯಾದೆ" ಎಂದು ಹೇಳಿದನು.

ಮೋತೀಬಾಯಿಯೂ ಅವನ ದೃಷ್ಟಿಯೊಡನೆ ತನ್ನ ದೃಷ್ಟಿಯನ್ನು ಬೆರಸಿ ಮೋಹದಿಂದ "ನಾನೂ ಸದಾ ಸರ್ವಕಾಲಕ್ಕೂ ನಿಮ್ಮ ಕೈದಿಯಾದೆ" ಎಂದು ನುಡಿದಳು.

ಖುದಾಬಕ್ಷನು ರಸ್ತೆಯಲ್ಲಿ ಆಂಗ್ಲೇಯ ಸೈನ್ಯವು ನಗರದ ಕಡೆಗೆ ಸರಿಯುತ್ತಿರು ವುದನ್ನು ಕಂಡನು. ಅವರ ತೋಪು, ಬಂದೂಕಗಳು ಒಂದು ದೊಡ್ಡ ಹೊಳೆಯಂತೆ ಭಾಸವಾಗುತ್ತಿದ್ದಿತು.

ಖುದಾಬಕ್ಷನು ಮೋತಿಬಾಯಿಯನ್ನು ಕುರಿತು "ನಮ್ಮ ಬಲಭಾಗದಲ್ಲಿರುವ ತುಪಾಕಿಗಳನ್ನೂ ಶೇಖರಿಸಿರುವ ಕಲ್ಲುಗುಂಡುಗಳನ್ನೂ ಕತ್ತರಿಸಿಟ್ಟು ಮರದ ದಿಮ್ಮಿ ಗಳನ್ನು ಇವರ ಮೇಲೆ ಬೀಳುವಂತೆ ಹಾಯಿಸು. ಅಗೋ! ನೋಡು! ಅಲ್ಲಿ ಆಂಗ್ಲೇಯರು ಏಣಿಗಳನ್ನು ಹಾಕಿ ಕೋಟೆಯ ಗೋಡೆಯನ್ನು ಹತ್ತಲುಪಕ್ರಮಿಸಿರು ವರು" ಎಂದು ಅವಳಿಗೆ ಆಜ್ಞೆಯಿತ್ತನು.

ಮೋತೀಬಾಯಿಯು ಅಲ್ಲಿಂದ ಧಾವಿಸಿ ಹೋದಳು. ಏಣಿಯನ್ನು ಹತ್ತಿ ಮೇಲೇರಲು ಯತ್ನಿಸುತ್ತಿದ್ದವರೆಲ್ಲರೂ ಮಡಿದರು—ಅವರ ಮೇಲೆ ತುಪಾಕಿಯ ಗೋಲಿಗಳೂ, ಕಲ್ಲುಬಂಡೆಗಳೂ, ಮೊದಲೇ ಕತ್ತರಿಸಿ ಶೇಖರವಮಾಡಿಟ್ಟಿದ್ದ ಮರದ ದಿಮ್ಮಿಗಳೂ ಸುರಿಮಳೆಯಂತೆ ಬಿದ್ದುವು. ನಗರದಲ್ಲಿನ ಢೋಲು, ಕೊಂಬು, ನಗಾರಿ, ಶಂಕು, ಕಹಳೆಗಳು ಮೊದಲಾದ ರಣವಾದ್ಯಗಳು ಘೋರ್ಗರೆದವು. ಆಂಗ್ಲೇಯರು

ಇವೆಲ್ಲವನ್ನೂ ನೋಡಿ ತಮ್ಮ ಪದಾತಿ ಸೈನ್ಯವನ್ನು ಹಿಂದಿರುಗಿ ಕರೆಸಿಕೊಳ್ಳಲು ತುತ್ತೂರಿಯನ್ನು ಊದಿದರು. ಅದನ್ನು ಕೇಳಿ ಅವರ ಸೈನ್ಯವು ಎದ್ದುಬಿದ್ದು ಓಡಿ ಹೋಯಿತು.

ಆ ವೇಳೆಯಲ್ಲಿ ಜನರಲ್ ರೋಜನು ಜೀವನಶಾಹ ಗುಡ್ಡದ ಮೇಲಿದ್ದನು. ಆತನ ಬಳಿಯಲ್ಲಿ ಆತನ ಹುದ್ದೇದಾರರೂ ನಿಂತಿದ್ದರು.

ಆತನು "Now or never (ಈಗ, ಇಲ್ಲದಿದ್ದರೆ ಮುಂದೆಂದಿಗೂ ಇಲ್ಲ) ಎಂಬ ಆದೇಶವನ್ನು ತಂತಿಯ ಮೂಲಕ ಓರ್ಛಾ ಹೆಬ್ಬಾಗಿಲಿನ ಮುಂದಿದ್ದ ಗುಡ್ಡ ಮತ್ತು ಜಾರಗುಡ್ಡದ ಬಳಿಯಿದ್ದ ತೋಪುಖಾನೆಗಳಿಗೆ ಕಳುಹಿಸಿದನು. ಓರ್ಛಾ ಹೆಬ್ಬಾಗಿಲಿಗೆದುರಿಗಿದ್ದ ಗುಡ್ಡದಲ್ಲಿದ್ದವರಿಗೆ ಈ ಸಂಕೇತವು ತಿಳಿದಿದ್ದು ಕೆಂಪುಧ್ವಜವನ್ನು ಎತ್ತರವಾಗಿ ಎತ್ತಿ ಹಿಡಿದರು.

ಇತ್ತ ರೋಜನ ನಾಲ್ವರು ಅಧಿಕಾರಿಗಳು—ನಾಲ್ವರೂ ಲೆಫ್ಟಿನೆಂಟ್ ದರ್ಜೆಯವರು—ನಾಲ್ವರೂ ಯೌವ್ವನಸ್ಥರು—ಬಂಡೆ, ಗುಡ್ಡ ಮತ್ತು ತಮ್ಮ ತೋಪುಗಳ ಆಸರೆಯಲ್ಲಿ ಸೈಯ್ಯರ್ ಹೆಬ್ಬಾಗಿಲಿನ ಬಲಭಾಗಕ್ಕಿದ್ದ ಗುಡ್ಡದ ಕಡೆಯಿಂದ ನುಗ್ಗಿ ಬಂದು ಕೋಟೆಯ ತಪ್ಪಲನ್ನು ಸೇರಿದರು. ಆ ಸ್ಥಳದಲ್ಲಿ ಪ್ರಾಕಾರದ ಗೋಡೆಯು ಆಗ ತಾನೆ ಸ್ವಲ್ಪ ಕುಸಿದು ಬಿದ್ದಿದ್ದು ಅಲ್ಲಿದ್ದ ಝಾನ್ಸಿಯ ಸೈನಿಕರು ಹತರಾಗಿದ್ದರು. ಆ ಅಧಿಕಾರಿಗಳಲ್ಲಿ ಇಬ್ಬರು ತಮ್ಮ ಶರೀರಗಳನ್ನು ಬಗ್ಗಿಸಿ ಕೋಟೆಯ ಗೋಡೆಯನ್ನು ಆತುಕೊಂಡು ಹಂತದೋಪಾದಿಯಲ್ಲಿ ನಿಂತರು. ತಕ್ಷಣವೆ ಉಳಿದಿಬ್ಬರು ಅವರ ಮೇಲೆ ಹತ್ತಿ ನಿಂತು ತಮ್ಮದಳದ ಒಂದು ಶಾಖೆಗೆ ಸಂಕೇತ ಮಾಡಿದರು. ಆ ತುಕ್ಕಡಿಯು ಆ ಸಂಕೇತವನ್ನು ಕಂಡು ಮುಂದೆ ಬಂದಿತು. ಇಷ್ಟರಲ್ಲಿ ಮೋತೀಬಾಯಿಯು ತನ್ನ ಕತ್ತಿಯನ್ನು ಸೆಳೆದು ಇವರ ಮೇಲೆ ಬಿದ್ದಳು. ಮೇಲಿದ್ದ ಲೆಫ್ಟಿನೆಂಟನು ತನ್ನ ಪಿಸ್ತೂಲನ್ನು ಹಾರಿಸಿದನು. ಆದರೆ ಅದು ಮೋತೀಬಾಯಿಗೆ ತಾಗಲಿಲ್ಲ. ಅದರ ಬದಲು ಅವಳ ಕತ್ತಿಯು ಅವನ ರುಂಡವನ್ನು ಛೇದಿಸಿತು. ಇದನ್ನು ಕಂಡ ಮತ್ತೊಬ್ಬ ಲೆಫ್ಟಿನೆಂಟನು ಮೋತೀಬಾಯಿಯ ಖಡ್ಗವನ್ನು ಕಸಿದುಕೊಳ್ಳಲು ಪ್ರಯತ್ನಿಸಿದನು. ಅದು ವಿಫಲವಾಗಿ ಆತನೂ ಮಡಿದು ಬಿದ್ದನು. ಉಳಿದ ಇಬ್ಬರು ಅಧಿಕಾರಿಗಳು ಬಂಡೆಯ ಮರೆಹೊಕ್ಕರು. ಇವೆಲ್ಲವೂ ನಡೆಯುವಷ್ಟರಲ್ಲಿ ಝಾನ್ಸಿಯ ದಳದ ಇತರ ಸೈನಿಕರು ಅಲ್ಲಿಗೆ ಬಂದರು. ಖುದಾಬಕ್ಷನ ತೋಪುಗಳು ಮುಂಬರಿದು ಬರುತ್ತಿದ್ದ ಸೈನಿಕರ ತುಕ್ಕಡಿಯನ್ನು ನಾಶ ಮಾಡಿದುವು. ಮೋತೀಬಾಯಿಯ ಸಮೀಪದಲ್ಲಿದ್ದ ಸಿಪಾಯಿಗಳು ತಮ್ಮ ಬಂದೂಕಿನಿಂದ ಉಳಿದ ಆ ಇಬ್ಬರು ಲೆಫ್ಟಿನೆಂಟರನ್ನು ಕೊಂದರು. ಇದು ಆಂಗ್ಲೇಯರ ದ್ವಿತೀಯ ಪರಾಜಯವಾಯಿತು.

ಉತ್ತರದ ಹೆಬ್ಬಾಗಿಲಿನ ಬಳಿಯೂ ಕದನವು ನಡೆದು ಅಲ್ಲಿಯ ನೆಯ್ಗೆಯವರು,

ಗಾಣಿಗರು, ಬೆಸ್ತರು ಇವರ ಚತುರತೆಯಿಂದ ಅಲ್ಲಿಯೂ ಆಂಗ್ಲೇಯರ ಬೇಳೆಯು ಬೇಯದೇ ವಿಫಲವಾಯಿತು.

ಇತ್ತ, ದಕ್ಷಿಣದ ಕಡೆ, ಆಂಗ್ಲೇಯರು ನೂರನೆಯ ಬಾರಿ ಆಕ್ರಮಣ ಮಾಡಲು ಯತ್ನಿಸಿದರು.

ರಾಣಿಯು ಕೋಟೆಯ ಮೇಲೆ ನಿಂತು ಓರ್ಛಾ ಹೆಬ್ಬಾಗಿಲಿನ ತೋಪುಗಳು ಹೆಚ್ಚು ಚಟುವಟಿಕೆಯಿಂದ ಕೆಲಸಮಾಡುತ್ತಿಲ್ಲವೆಂದು ಗಮನಿಸಿ ಒಡನೆಯೇ ರಾಮ ಚಂದ್ರ ದೇಶಮುಖನನ್ನು ಅಲ್ಲಿಗೆ ಕಳುಹಿಸಿದಳು. ಆದರೆ ಅವನಿಗೂ ಅಲ್ಲಿಗೆ ಹೋಗಿ ಸೇರಲು ಕಾಲಾವಕಾಶ ಬೇಕಾಗಿದ್ದಿತು.

ಮೋತೀಬಾಯಿಯು ಖುದಾಬಕ್ಷನಿದ್ದಲ್ಲಿಗೆ ಹೋದಳು. ಓರ್ಛಾ ಹೆಬ್ಬಾಗಿಲಿನ ಮುಂದಿದ್ದ ಗುಡ್ಡದ ಹಿಂಬದಿಯಲ್ಲಿ ಕೆಂಪು ಧ್ವಜವು ಇನ್ನೂ ಎತ್ತರದಲ್ಲಿ ಹಾರಾಡಿ ಅದೃಶ್ಯವಾಯಿತು. ದುಲ್ಹಾಜುವು ಬರೀ ಮದ್ದನ್ನು ಮಾತ್ರ ತುಂಬಿಸಿ ತೋಪನ್ನು ಹಾರಿಸಿದನು—ಆದರಿಂದ ಗುಂಡು ಹೇಗೆ ತಾನೇ ಹಾರಲು ಸಾಧ್ಯ ?

ಸುಂದರಿಯು ಆ ಹೆಬ್ಬಾಗಿಲಿಗೆ ಪಶ್ಚಿಮಕ್ಕಿದ್ದ ಒಂದು ಎತ್ತರವಾದ ಬುರುಜಿಯ ಮೇಲಿನಿಂದ ತೋಪು ಹಾರಿಸುತ್ತಿದ್ದಳು. ಅವಳೊಡನಿದ್ದ ಗೋಲಂದಾಜಿಗಳೆಲ್ಲರೂ ಮೃತಪಟ್ಟು ಅವಳ ತೋಪೊಂದು ಮಾತ್ರ ಕೆಲಸ ನಡೆಸುತ್ತಿದ್ದಿತು. ಆಕೆಯು ದುಲ್ಹಾಜುವಿನ ಕಾರ್ಯಕ್ರಮವನ್ನು ಗಮನಿಸಿದಳು.

ಎದುರಿಗಿದ್ದ ಗುಡ್ಡದ ಹಿಂಬದಿಯಿಂದ ಆಂಗ್ಲೇಯ ಸೈನ್ಯವು, ಪತಂಗಗಳಂತೆ, "ಹುರಾ !" ಎಂದು ಕೂಗುತ್ತಾ ಭರವಸೆಯಿಂದ ಓರ್ಛಾ ದ್ವಾರದ ಮೇಲೆ ಮುನ್ನುಗ್ಗಿತು. ದುಲ್ಹಾಜುವು ಒಂದು ಕಬ್ಬಿಣದ ಸಲಾಕೆಯನ್ನು ಹಿಡಿದು ತ್ವರಿತವಾಗಿ ಬುರುಜಿಯಿಂದ ಕೆಳಗಿಳಿದು ಬಂದನು. ಸುಂದರಿಗೆ ಆತನ ವಿದ್ಯಮಾನಗಳು ಅರ್ಥ ವಾಗಲು ಕ್ಷಣಕಾಲವೂ ಬೇಕಾಗಲಿಲ್ಲ. ಅವಳೂ ತನ್ನ ತೋಪನ್ನು ತ್ಯಜಿಸಿದಳು. ಕೇವಲ ಖಡ್ಗವೊಂದು ಮಾತ್ರ ಬಳಿಯಿದ್ದಿತು. ಅದನ್ನು ಹಿಡಿದು ತನ್ನ ಬುರುಜಿ ಯಿಂದ ಕೆಳಗಿಳಿದು ಬಂದಳು. ಅಲ್ಲಿಂದ ಓರ್ಛಾ ದ್ವಾರವು ಅನತಿದೂರದಲ್ಲಿಯೇ ಇದ್ದಿತು.

ಸುಂದರಿಯು ಕೆಳಗಿಳಿಯುವುದಕ್ಕೆ ಮೊದಲೇ ದುಲ್ಹಾಜುವು ಹೆಬ್ಬಾಗಿಲನ್ನು ಮುಟ್ಟಿದ್ದನು. ಬಾಗಿಲಿಗೆ ದಪ್ಪದಪ್ಪ ಸಂಕೋಲೆಗಳೂ, ಕೊಂಡಿಗಳೂ ಹಾಕಿ, ಬೀಗ ಮುದ್ರೆಮಾಡಿ ಭದ್ರಪಡಿಸಿದ್ದರು. ಬೀಗದಕೈಗಳು ಕೋಟೆಯಲ್ಲಿದ್ದವು. ಆದರೆ ದುಲ್ಹಾಜುವಿನ ಕೈಯಲ್ಲಿ ದಪ್ಪವಾದ ಸಲಾಕೆಯಿದ್ದು ಆತನು ಸ್ವಲ್ಪವೂ ಕಾಲವಿಳಂಬ ಮಾಡಲಿಲ್ಲ.

ಸಲಾಕೆಯನ್ನು ಬೀಗದಲ್ಲಿ ಹಾಕಿ ಬಲದಿಂದ ಅದುಮಿದನು. ಬೀಗವು

ಮುರಿದುಬಿದ್ದಿತು. ಸಂಕೋಲೆಗಳನ್ನು ಛೇದಿಸಿದನು. ಬಾಗಿಲು ನಿರ್ಬಲವಾಯಿತು. ಆದರೆ ಆತನು ಅದನ್ನು ತೆರೆಯಲು ಸಾಧ್ಯವಾಗಲಿಲ್ಲ. ಅಷ್ಟರಲ್ಲಿರಯೇ ಸುಂದರಿಯು ಬಿಚ್ಚುಗತ್ತಿಯನ್ನು ಹಿಡಿದು ಅವನೆದುರಿಗೆ ನಿಂತಿದ್ದಳು.

"ದೇಶದ್ರೋಹಿ! ಚಂಡಾಲ! ನೀನು ಆಂಗ್ಲೇಯರಿಂದ ಯಾವ ಲಾಭವನ್ನೂ ಪಡೆಯುವುದಿಲ್ಲ" ಎಂದು ಸುಂದರಿಯು ಎದುರುಬಿದ್ದಳು.

ಅವಳ ಖಡ್ಗವು ದುಲ್ಹಾಜುವಿನ ಕೈಯಲ್ಲಿದ್ದ ಸಲಾಕೆಗೆ ತಗುಲಿ ತುಂಡಾಯಿತು. ಆದರೂ ಕೈಯಲ್ಲಿ ಉಳಿದಿದ್ದ ತುಂಡಿನಿಂದಲೆ ಆತನನ್ನು ಎದುರಿಸಿದಳು. ಆತನು ಮಿಂಚಿನಂತೆ ಹಾದು ಸಲಾಕೆಯಿಂದ ಆಕೆಯ ವಕ್ಷಸ್ಥಳದ ಎಡಭಾಗವನ್ನು ಇರಿದನು. ಆ ಸಮಯಕ್ಕೆ ಸರಿಯಾಗಿ "ಹುರೇ!" ಎಂಬ ಘೋಷವು ಕೇಳಿಬಂದಿತು.

ಸುಂದರಿಯು ತನ್ನ ಗಾಯವನ್ನು ಲಕ್ಷಿಸದೇ ಪುನಃ ಮುನ್ನುಗ್ಗಿದಳು. ದುಲ್ಹಾಜುವು ಅದನ್ನು ಕಂಡು ಸ್ವಲ್ಪ ಹಿಂದೆ ಸರಿದು ಸಲಾಕೆಯಿಂದ ಅಡ್ಡಗಟ್ಟಿದನು. ಆ ವೇಳೆಗೆ ಆಂಗ್ಲೇಯರು ಬಾಗಿಲನ್ನು ತಳ್ಳಿ ತೆರೆದುಬಿಟ್ಟಿದ್ದರು. ಒಬ್ಬ ಆಂಗ್ಲೇಯನ ಬಂದೂಕಿನ ಗೋಲಿಯು ಸೌಂದರ್ಯಮಯಿ ಸುಂದರಿಯನ್ನು ಅಮರಳನ್ನಾಗಿ ಮಾಡಿದಾಗ ಅವಳ ಮುಖದಿಂದ "ಹರಹರ ಮಹದೇವ" ಎಂಬ ಸ್ವರವು ಹೊರಟಿತು. ಗೋಲಿಯು ಅವಳ ತಲೆಗೆ ತಗುಲಿದ್ದಿತು.

ದುಲ್ಹಾಜುವು ಅವಳನ್ನು ಮಣ್ಣಿನ ಮೇಲೆ ತಳ್ಳಿದನು. ಆತನ ಮೇಲೆಯೂ ಆಂಗ್ಲೇಯರು ಆಕ್ರಮಣ ಮಾಡುವುದರಲ್ಲಿದ್ದರು. ಆದರೆ ಅವರ ಬ್ರಿಗೆಡಿಯರ್ ಸಾಹೇಬನು ಒಡನೆಯೆ ತಡೆದು "Our man" (ಇವನು ನಮ್ಮವನು) ಎಂದನು.

ಆಂಗ್ಲೇಯರು ಬಂದೂಕಗಳನ್ನು ಕೆಳಗಿಳಿಸಿ ಒಳಗೆ ನುಗ್ಗಿದರು. ಬ್ರಿಗೆಡಿಯರ್ ಸಾಹೇಬನು "ಇವಳೇ ಏನು ರಾಣಿ?" ಎಂದು ಕೇಳಿದನು.

ದುಲ್ಹಾಜುವು "ಇಲ್ಲ ಸಾಹೇಬ್, ಇವಳು ರಾಣಿಯ ಆಪ್ತ ಸೇವಕರಲ್ಲೊಬ್ಬಳು" ಎಂದನು.

ಆ ಅಧಿಕಾರಿಯು ತನ್ನ ಸಹೋದ್ಯೋಗಿಗಳೊಂದಿಗೆ "But a soldier. She will have a soldier's honour" (ಇವಳೊಬ್ಬ ಯೋಧಳು. ಆದುದರಿಂದ ಯೋಧರಿಗೆ ಸಲ್ಲುವ ಮರ್ಯಾದೆ ಅವಳಿಗೆ ಸಲ್ಲಬೇಕು) ಎಂದನು.

ಸ್ವರ್ಗವಾಸಿಯಾದ ಸುಂದರಿಯ ದೃಢಮುಷ್ಟಿಯಲ್ಲಿ ಇನ್ನೂ ಮುರಿದಿದ್ದ ಕತ್ತಿಯ ಚೂರಿದ್ದಿತು. ಇಬ್ಬರು ಯೋಧರು ಅವಳ ಮೃತ ದೇಹವನ್ನು ಹೊರಗೆ ತೆಗೆದುಕೊಂಡು ಹೋಗಿ ಮಣ್ಣುಮಾಡಿ ಶಿಲೆಗಳಿಂದ ಮುಚ್ಚಿದರು. ಆಂಗ್ಲೇಯರು ನಗರದ ಎಲ್ಲಾ ಭಾಗಗಳಲ್ಲೂ ಸಂಚರಿಸ ತೊಡಗಿದರು.

ಜನರಲ್ ರೋಜನಿಗೆ ಆಂಗ್ಲೇಯರು ನಗರ ಪ್ರವೇಶಮಾಡಿದ ಸುದ್ದಿಯು

ತಂತಿಯ ಮೂಲಕ ತಲಪಿತು.

ಆತನು ದುಲ್ಹಾಜುವಿಗೆ ಜೋಡಿ ಗ್ರಾಮದ ಪುರಸ್ಕಾರವು ದೊರಕಬೇಕೆಂದು ತನ್ನ ಸಹೋದ್ಯೋಗಿಗಳಿಗೆ ಆಜ್ಞೆಯಿತ್ತನು.

ದುಲ್ಹಾಜುವಿನ ಈ ದುಷ್ಕೃತ್ಯವು ನಗರದಲ್ಲೆಲ್ಲಾ ಬಹು ಜಾಗ್ರತೆಯಾಗಿ ಹರಡಿತು. ಜನರಲ್ ರೋಜನು ಸೈಯ್ಯರ್ ದ್ವಾರವನ್ನು ಒಡೆದು ನಗರವನ್ನು ಆಕ್ರಮಿಸಿ ಕೊಂಡು ಕೊಳ್ಳೆ ಹೊಡೆಯಿರಿ ಎಂದು ಆಜ್ಞೆಮಾಡಿದನು.

ಖುದಾಬಕ್ಷನು ನಿಂತಿದ್ದ ಹೆಬ್ಬಾಗಿಲಿನ ಬಳಿ ಆಪತ್ತಿನ ಮೇಲೆ ಆಪತ್ತು ಬಂದೊದಗಲಾರಂಭಿಸಿತು. ಆ ಸಮಯಕ್ಕೆ ಸರಿಯಾಗಿ ರಾಮಚಂದ್ರ ದೇಶಮುಖನು ಕುದುರೆಯ ಮೇಲೆ ಅಲ್ಲಿಗೆ ಬಂದನು. ಆ ವೇಳೆಗೆ ಸರಿಯಾಗಿ ಒಂದು ಗೋಲಿಯು ಖುದಾಬಕ್ಷನಿಗೆ ತಗುಲಿತು. ಅದರಿಂದಾಗಿ ಆ ದ್ವಾರದ ಮೇಲಿನ ತೋಪು ಬಂದಾಯಿತು. ಒಬ್ಬ ಆಂಗ್ಲೇಯನು ಗೋಡೆಯನ್ನು ಹತ್ತಿ ಬಂದನು. ಮೋತೀಬಾಯಿಯ ಖಡ್ಗವು ಅವನ ಶಿರವನ್ನು ಛೇದಿಸಿತು. ಅವಳು ಬುದಾಬಕ್ಷನ ಮೃತದೇಹವನ್ನು ಎತ್ತಿಕೊಂಡು ಕೆಳಗಿಳಿದು ಬಂದಳು. ರಾಮಚಂದ್ರ ದೇಶಮುಖನು ತನ್ನ ಮುಂದುಗಡೆ ಆತುಕೊಂಡು ಕಿಲ್ಲೆಗೆ ಹತ್ತಿ ಬಂದನು. ಅವನು ಕಿಲ್ಲೆಯನ್ನು ಸೇರುವ ಸಮಯಕ್ಕೆ ಸರಿಯಾಗಿ ಅದರ ಹೆಬ್ಬಾಗಿಲನ್ನು ಮುಚ್ಚಲಾಯಿತು. ಶವವನ್ನು ಮಹಲಿನ ಬಳಿಯಿಟ್ಟು ಬಟ್ಟೆಯಿಂದ ಮುಚ್ಚಿದರು. ಮೋತೀಬಾಯಿಯ ಕಣ್ಣುಗಳಿಂದ ಒಂದು ಬಿಂದು ಅಶ್ರುವೂ ಉದರಲಿಲ್ಲ.

ರಾಣಿಯು ಆಗಮಿಸಿದಳು.

ಆಕೆಯು "ಮೋತೀಬಾಯಿ ನಿಮ್ಮ ಎಲ್ಲಾ ಕಾರ್ಯಕ್ರಮಗಳನ್ನು ನಾನೇ ಕಣ್ಣಾರ ಕಂಡಿದ್ದೇನೆ" ಎಂದಳು.

ಮೋತೀಬಾಯಿಯು ಗದ್ಗದ ಸ್ವರದಿಂದ "ಸರ್ಕಾರ್, ಮುಂದಿನ ಕಾರ್ಯಕ್ರಮಗಳನ್ನು ಗಮನಿಸಿ. ಇನ್ನೂ ಕಿಲ್ಲೆಯು ನಮ್ಮ ವಶದಲ್ಲಿಯೇ ಇದೆ. ನೀವೂ ಇದ್ದೀರಿ. ನಾನು ಇವರುಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತೇನೆ" ಎಂದು ಹೇಳಿದಳು.

ರಾಣಿಯು ರುದ್ಧಿತಕಂಠವನ್ನು ಸರಿಪಡಿಸಿಕೊಳ್ಳುತ್ತಾ "ಮಹಲ್ಲಿನ ಸಮೀಪದಲ್ಲಿಯೇ ಕುಮಾರ ಖುದಾಬಕ್ಷನ ಶವಸಂಸ್ಕಾರವಾಗಬೇಕು" ಎಂದು ಹೇಳಿದಳು.

ದೇಶಮುಖನು "ಸುಂದರಿಯೆಲ್ಲಿ ?" ಎಂದು ಕೇಳಿದನು.

"ಓರ್ಛಾ ಬಾಗಿಲಿನ ಬಳಿ ಮಡಿದು ಬಿದ್ದಳು. ದುಲ್ಹಾಜುವು ದೇಶದ್ರೋಹ ಮಾಡಿ ಹೆಬ್ಬಾಗಿಲನ್ನು ತೆರೆದನು" ಎಂದು ಮೋತೀಬಾಯಿಯು ಉತ್ತರವಿತ್ತಳು,

ರಾಣಿಯು ಆ ಮಾತನ್ನು ಕೇಳಿ ತುಟಿಕಚ್ಚಿ ನಿಧಾನದಿಂದ "ನನ್ನ ಜೀವನದಲ್ಲಿ

ಇದಕ್ಕಿಂತ ಹೆಚ್ಚಾದ ಮೋಸವನ್ನು ಕಂಡಿರಲಿಲ್ಲ" ಎಂದು ಹೇಳಿ ನಂತರ ಸ್ವಲ್ಪ ಗಟ್ಟಿಯಾಗಿ "ಬರಹಾಮುದ್ದೀನನು ಸರಿಯಾದ ಎಚ್ಚರಿಕೆಯನ್ನಿತ್ತಿದ್ದನು. ಆದರೆ ಆತನನ್ನು ಅಲಕ್ಷ್ಯಮಾಡಿದೆ. ಆತನು ಎಲ್ಲಿರುವನು ನಿನಗೆ ತಿಳಿದಿರುವುದೆ, ದೇಶ್‌ಮುಖ್?" ಎಂದಳು ರಾಣಿ.

"ಸರ್ಕಾರ್, ಇಲ್ಲ" ಎಂದು ಸಂಕ್ಷಿಪ್ತವಾಗಿ ದೇಶ್‌ಮುಖನು ಉತ್ತರವಿತ್ತನು.

ರಾಣಿಯು ತನ್ನ ಅಂಗಿಯ ಜೇಬಿಗೆ ಕೈಹಾಕಿದಳು. ಬರಹಾಮುದ್ದೀನನು ಕೊಟ್ಟ ರಾಜೀನಾಮೆ ಪತ್ರವು ಜೇಬಿನಲ್ಲಿದ್ದಿತು. ಅದನ್ನು ಅವಳು ಅಲ್ಲಿಯೇ ಇಟ್ಟಳು.

ಮೋತೀಬಾಯಿಯು ಖುದಾಬಕ್ಷನ ಶವಸಂಸ್ಕಾರಕ್ಕಾಗಿ ಒಂದು ದೊಡ್ಡ ಹಳ್ಳವನ್ನು ಮಹಲಿನ ಬಳಿ ಜಾಗ್ರತೆಯಾಗಿ ತಯಾರು ಮಾಡಿಸಿದಳು.

ರಾಣಿಯು ತನ್ನ ದುರ್ಬೀನನ್ನು ತೆಗೆದುಕೊಂಡು ಬುರುಜಿನ ಮೇಲೆ ಹತ್ತಿ ಹೋದಳು.

ರೋಜನು ನಗರದ ಬುರುಜಿಗಳನ್ನು ಒಂದೊಂದನ್ನಾಗಿ ತನ್ನ ವಶಪಡಿಸಿಕೊಳ್ಳುತ್ತಿದ್ದನು. ಆಂಗ್ಲೇಯರ ಸಂಖ್ಯೆಯು ನಗರದಲ್ಲಿ ಹೆಚ್ಚುತ್ತಾ ಹೋಯಿತು. ಝೂನ್ಸಿಯ ಸೇನೆಯಾದರೋ ಕ್ಷಯಿಸುತ್ತಾ ಬಂದಿತು. ಅಗ್ನಿ ಜ್ವಾಲೆಯು ಹರಡುತ್ತಿದ್ದು ಝೂನ್ಸಿಯಲ್ಲಿ ಹಾಹಾಕಾರವೆದ್ದಿತು ಅದರೊಂದಿಗೇ "ಹರಾ!" ಎಂಬ ಘೋಷವೂ ಕೇಳಿ ಬರುತ್ತಿದ್ದಿತು. ನಗರದ ಮಹಲ್ಲು, ನಾಟಕಶಾಲೆ, ಪುಸ್ತಕಾಲಯ ಮುಂತಾದುವನ್ನು ಆಂಗ್ಲೇಯರು ಆಕ್ರಮಿಸಿಕೊಳ್ಳಲು ಪ್ರಯತ್ನಿಸುತ್ತಿದ್ದು ಅವುಗಳಲ್ಲಿ ಬಂಧಿತರಾಗಿ ಝೂನ್ಸಿಯ ಸೈನಿಕರು ಯುದ್ಧ ಮಾಡುತ್ತಿದ್ದುದನ್ನು ನೋಡಿ ರಾಣಿಯು ಬುರುಜಿಯಿಂದ ಕೆಳಗಿಳಿದು ಬಂದಳು.

ಒಂದು ಮರದ ಕೆಳಗೆ ಕುಳಿತು ರಾಣಿಯು ಆಲೋಚಿಸಲಾರಂಭಿಸಿದಳು. "ಝೂನ್ಸಿಯ ಸರ್ವನಾಶವಾಗಲಿದೆ. ಸ್ವರಾಜ್ಯ ಸ್ಥಾಪನೆಯು ಇನ್ನೂ ಬಹಳ ದೂರದಲ್ಲಿದೆ. ಆದರೆ ಕರ್ಮವಾಡುವುದು ನಮ್ಮ ಕರ್ತವ್ಯ. ಫಲಾಫಲಗಳ ಯೋಚನೆಯೇಕೆ ?"

ಎದ್ದು ನಿಂತಳು.

ಜವಹರಸಿಂಹ, ರಘುನಾಥಸಿಂಹ, ಗುಲಾಂ ಗೌಸ್‌ಖಾನ್, ಭಾವುಬಕ್ಷಿ ಗುಲ್ ಮಹಮ್ಮದ್ ಮತ್ತು ಬೋಪಟ್‌ಕರ್ ಮುಂತಾದ ಸರದಾರರನ್ನು ಕರೆಸಿ ತನ್ನ ನಿಶ್ಚಯವನ್ನು ವ್ಯಕ್ತಪಡಿಸಿದಳು.

"ಹೊರಗೆ ಹೋಗಿ ಯುದ್ಧಮಾಡಿ. ಆಂಗ್ಲೇಯರನ್ನು ನಗರದಿಂದ ಹೊಡೆದೋಡಿಸಿ, ಝೂನ್ಸಿಯನ್ನು ಸಂರಕ್ಷಿಸಿ."

ಸಲಹೆ ಸಮ್ಮತಿಗಳಿಗೆ ವಿರಾಮವಾಗಲೀ ವೇಳೆಯಾಗಲೀ ಇರಲಿಲ್ಲ.

ಗುಲಾಂಮುಹಮ್ಮದ್ದನು “ಹುಜೂರ್ ವಂದನೆಗಳು, ಶೀಘ್ರವಾಗಿ ಹೊರಟು ಆಂಗ್ಲೇಯರನ್ನು ನಗರದಿಂದಾಚೆಗೆ ಹಾಕಿರಿ” ಎಂದು ಹೇಳಿದನು.

ರಾಣಿಯು “ಗೋಲಂದಾಜಿಗಳು ತಮ್ಮ ತಮ್ಮ ನಿಯುಕ್ತ ಸ್ಥಾನಗಳಲ್ಲಿ ಕೆಲಸ ಮಾಡುತ್ತಿರಲಿ” ಎಂದು ಆಜ್ಞೆಯಿತ್ತಳು.

ಭಾವುಬಕ್ಷಿಯು ಮುಂದೆ ಬಂದು ರಾಣಿಯ ಪಾದಗಳನ್ನು ಮುಟ್ಟಿ ಪ್ರಾರ್ಥಿಸಿ ಕೊಂಡನು “ಸರ್ಕಾರ್, ನನಗೆ ಹೊರಗೆ ಹೋಗಿ ಯುದ್ಧಮಾಡಲು ಆಜ್ಞೆಕೊಡಿ. ನನ್ನ ತೋಪಿರುವೆಡೆ ಮತ್ತಾರನ್ನಾದರೂ ನೇಮಿಸಿ.”

ರಾಣೀ—ಹಾಗೆಯೇ ಆಗಲಿ. ಗೋಲಂದಾಜಿಗಳಲ್ಲಿ ನೀನೊಬ್ಬನು ಮಾತ್ರ ಹೋಗ ಬಹುದು. ತ್ವರೆಮಾಡು. ಕಾಲವಿಳಂಬಮಾಡುವ ಕೆಲಸವಲ್ಲ.

ಬಕ್ಷಿಯು ಗುಲಾಂಮುಹಮ್ಮದ್ದನೊಡನೆ ಹೊರಟು ಹೋದನು.

ಬೋಪಟ್‌ಕರನಿಗೆ ರಾಣಿಯು ಹೊರಗೆ ಹೋಗಿ ಯುದ್ಧಮಾಡುವುದು ಇಷ್ಟವಿರ ಲಿಲ್ಲ. ಆದರೆ ಆತನು ತನ್ನ ಮತವನ್ನು ಸೂಚಿಸಲಿಲ್ಲ. ರಾಣಿಯು ಜಾಗ್ರತೆಯಾಗಿ ಸಿದ್ಧವಾಗಿ ಕಿಲ್ಲೆಯಿಂದ ಹೊರಗೆ ಬಂದಳು. ಅವಳ ಜೊತೆಯಲ್ಲಿ ಪಠಾಣರೂ, ಬುಂದೇಲು ಖಂಡದವರೂ ಇತ್ಯಾದಿಯಾಗಿ ೧೫೦೦ ಸೈನಿಕರಿದ್ದರು. ಬೋಪಟ್ ಕರನು ಅವರನ್ನು ಹಿಂಬಾಲಿಸಿದನು. ಆಂಗ್ಲೇಯರು ದಕ್ಷಿಣದಿಕ್ಕಿನಿಂದ ಬಂದು ಮಹಲಿನ ಪಶ್ಚಿಮದಕಡೆ ಸೇರುತ್ತಿದ್ದರು.

ರಾಣಿಯು ಚಂಡಮಾರುತದಂತೆ ಆಂಗ್ಲೇಯರು ಮುನ್ನುಗ್ಗುತ್ತಿದ್ದ ದಕ್ಷಿಣದ ಕಡೆಗೆ ಹೋದಳು. ಅವಳ ಆಕ್ರಮಣವು ಬಿರುಸಾಗಿ ಆಂಗ್ಲೇಯರ ಸೈನ್ಯವು ಓಡಿ ಪೂರ್ವದಿಕ್ಕಿನಲ್ಲಿದ್ದ ಮನೆಗಳ ಹಿಂಬದಿಯಿಂದ ಗುಂಡು ಹಾರಿಸಲಾರಂಭಿಸಿತು. ಅವರು ಝಾನ್ಸಿಯ ಸೈನ್ಯದ ಖಡ್ಗ ಪ್ರಹಾರವನ್ನು ತಡೆಯಲಾರದೇ ಹೋದರು.

“ಹಿಂದೂಸ್ಥಾನಿ ಸಿಪಾಯಿಯ ಖಡ್ಗದ ಮುಂದೆ ಪ್ರಪಂಚದ ಯಾವ ಯೋಧನೂ ನಿಲ್ಲಲಾರನು ಎಂಬುದನ್ನು ಪ್ರಮಾಣ ಪೂರ್ವಕವಾಗಿ ತೋರಿಸಿಕೊಡಿ” ಎಂದು ರಾಣಿಯು ಕೂಗಿ ಹೇಳಿದಳು.

ಅವಳ ಸೈನಿಕರು ಆಂಗ್ಲೇಯರು ಹೆದರಿ ಹಿಮ್ಮೆಟ್ಟುವಂತೆ ಖಡ್ಗ ಪ್ರಯೋಗ ಮಾಡಿದರು. ಆದರೆ ಶತ್ರುಗಳು ಮನೆಗಳ ಹಿಂಬದಿಯಿಂದ ಗುಂಡುಹಾರಿಸಲಾರಂಭಿ ಸಿದರು. ಸುಮಾರು ೫೦೦ ಮಂದಿ ಪಠಾಣರು ಪೂರ್ವ ಮತ್ತು ದಕ್ಷಿಣದಿಕ್ಕುಗಳಲ್ಲಿ ವ್ಯಾಪಿಸಿ ಪುನಃ ಆಂಗ್ಲೇಯರನ್ನು ಹಿಮ್ಮೆಟ್ಟಿಸುತ್ತಾ ಹೋರಾಡಿ ವೀರಸ್ವರ್ಗವನ್ನು ಸೇರುತ್ತಿದ್ದರು ರಾಣಿಯ ಮಹಲ್ಲು, ಅನೇಕರೋಟಿ ಇವುಗಳ ಅಕ್ಕಪಕ್ಕದಿಂದ * ಠಂಕ

* ಈಗ ಅಲ್ಲಿ ಸದರ್ ಆಸ್ಪತ್ರೆ ಇದೆ. ಆಸ್ಪತ್ರೆಗೆ ಉತ್ತರಕ್ಕೆ ಠಂಕಸಾಲೆ ಮೊಹಲ್ಲ.

ಸಾಲೆಯುವರೆಗೆ ಆಂಗ್ಲೇಯ ಸೈನ್ಯವು ಹರಡಿದ್ದಿತು. ಅಲ್ಲದೆ ಅವರಿಗೆ ಮನೆಗಳ ಹಿಂಬದಿಯು ಆಶ್ರಯವನ್ನೀಯುತ್ತಿದ್ದಿತು. ಅವರನ್ನು ಎದುರಿಸುವುದಕ್ಕಾಗಿ ರಾಣಿಯ ಸೈನ್ಯವೂ ಅದೇ ರೀತಿ ಅದೇ ದಿಕ್ಕುಗಳಲ್ಲಿ ಹರಡಿದ್ದಿತು. ಒತ್ತಾಯಕ್ಕೆ ಒಳಪಟ್ಟು ಕೆಲವು ಆಂಗ್ಲೇಯ ಸೈನಿಕರು ಪಶ್ಚಿಮ ದಿಕ್ಕಿನಲ್ಲಿ ಖಂಡೇರಾವ್ ಹೆಬ್ಬಾಗಿಲಿನ ಕಡೆ ನುಗ್ಗಿದ್ದರು. ಅಲ್ಲಿ ಅವರು ಸಿಕ್ಕುಬೀಳಬೇಕಾಯಿತು.

ಅಲ್ಲಿದ್ದ ಮನೆಗಳಿಂದ ಒಬ್ಬ ಯೋಧನು ಹೊರಟು ಏಕಾಂಗಿಯಾಗಿ ಆಂಗ್ಲೇಯರ ಮೇಲೆ ಬಿದ್ದನು. ಅತ್ತ ಬರುತ್ತಿದ್ದ ರಾಣಿಯು ಇದನ್ನು ಕಂಡಳು. ಆ ಯೋಧನ ಖಡ್ಗಪ್ರಯೋಗದಿಂದ ಅನೇಕ ಆಂಗ್ಲೇಯ ಸಿಪಾಯಿಗಳು ಹತಾ ಹತಿಯಾದರು. ಮತ್ತೂ ಕೆಲವು ಆಂಗ್ಲೇಯ ಸಿಪಾಯಿಗಳು ಬಂದು ಸೇರಿ ಆ ಯೋಧನನ್ನು ಎದುರಿಸಲು ಉಪಕ್ರಮಿಸಿದರು. ಏಕಾಂಗಿಯಾಗಿ ಆತನು ಅವರೊಡನೆ ಹೋರಾಡಿದನು. ರಾಣಿಯು ತನ್ನ ಕುದುರೆಯನ್ನು ಅವನೆಡೆಗೆ ಓಡಿಸಿದಳು. ಅವಳನ್ನು ಅನುಸರಿಸಿ ಅವಳ ಸಿಪಾಯಿಗಳೂ ಬಂದರು. ರಾಣಿಯು ಅಲ್ಲಿಗೆ ಸೇರುವ ವೇಳೆಗೆ ಅವರು ಕಾದಾಡುತ್ತಾ ಐದು ಭಾವಿಗಳಿದ್ದೆಡೆಗೆ ಬಂದು ಸೇರಿದರು. ಆ ಏಕಾಂಗಿ ವೀರನು ಪುನಃ ಆಂಗ್ಲೇಯರೊಡನೆ ಹೋರಾಡುತ್ತಿರುವಾಗ ಇದ್ದಕ್ಕಿದ್ದಂತೆಯೇ ಕತ್ತಿಗಳ ಪೆಟ್ಟಿಗೆ ತುತ್ತಾಗಿ ಕೆಳಗುರುಳಿದನು. ಆತನು ಮರಣಹೊಂದುವ ವೇಳೆಗೆ ರಾಣಿಯು ಅಲ್ಲಿಗೆ ಬಂದಳು. ಅದನ್ನು ಕಂಡ ಆಂಗ್ಲೇಯರು ಅಲ್ಲಿಂದ ಕಾಲುಕಿತ್ತರು.

ರಾಣಿಯು ಆ ವೀರನು ಯಾರೆಂದು ಸಮೀಪಕ್ಕೆ ಹೋಗಿ ನೋಡಿದಳು. ಆತನು ಬರಹಾಮುದ್ದೀನನಾಗಿದ್ದನು. ಆತನು ಮರಣಹೊಂದಲು ಇನ್ನೂ ಸ್ವಲ್ಪ ಕಾಲಾವಕಾಶವಿದ್ದಿತು. ಜ್ಞಾನವೂ ಅಲ್ಪ ಸ್ವಲ್ಪ ಇದ್ದಿತು. ರಾಣಿಯು ಕುದುರೆಯಿಂದ ಇಳಿದು ಆತನ ತಲೆಯಮೇಲೆ ಕೈಯ್ಯಾಡಿಸಿದಳು. ಬರಹಾಮುದ್ದೀನನು ಅವಳನ್ನು ಗುರುತಿಸಿ ಕಣ್ಣುಬಿಟ್ಟು ಇದ್ದ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ ಕ್ಷೀಣ ಸ್ವರದಲ್ಲಿ "ಹುಜೂರ್, ಕ್ಷಮಿಸಿ" ಎಂದನು

"ನೀನು ಪರಮವೀರ"—ರಾಣಿಯು ಅತಿ ಸಂಕಟದಿಂದ ಹೇಳಿದಳು.

ಪುನಃ ಪ್ರಯಾಸದಿಂದ ಬರಹಾಮುದ್ದೀನನು "ಸರ್ಕಾರ್ ನನ್ನ ಪ್ರಾಣವು ಹೋಗುವುದಿಲ್ಲ. ನನ್ನ....ಪ...ತ್ರ." ಎಂದು ಹೇಳಿದನು. ರಾಣಿಯು ತನ್ನ ಜೇಬಿನಿಂದ ಆತನು ಕೊಟ್ಟಿದ್ದ ರಾಜೀನಾಮೆ ಪತ್ರವನ್ನು ತೆಗೆದು "ಇದೋ ತೆಗೆದುಕೊ" ಎಂದಳು.

ಬರಹಾಮುದ್ದೀನನು ಮತ್ತೆ ವೇದನೆಯಿಂದ "ಇಲ್ಲ....ಪ್ರ....ಭು....ಹ....ರಿ....ದು....ಬಿ....ಡಿ.... ಆಗ....ನನ್ನ.... ಪ್ರಾಣವು.... ಹೋ....ಗು....ವು....ದು...." ಎಂದನು.

ರಾಣಿಯು ತಕ್ಷಣವೇ ಆ ಪತ್ರವನ್ನು ಛಿದ್ರ ಮಾಡಿದಳು. ಬರಹಾಮುದ್ದೀನನ ಮುಖಮಂಡಲದಲ್ಲಿದ್ದ ಘೋರತೆಯು ಕಳೆದು ನಿರ್ಮಲಾನಂದ ಉಂಟಾಯಿತು.

"ಜ....ಲ ... ವ....ಅಲ್ಲಾ....ಹ" ಎನುತ್ತಾ ಆತನು ಪ್ರಾಣತ್ಯಾಗ ಮಾಡಿದನು.

ಭಾವು ಬಕ್ಷಿಯು ಅಂತರಿಕ್ಷದ ಕಡೆಗೆ ನೋಡಿ "ಇದು ಎಂತಹ ವೀರಮರಣ! ದೇವರೆ, ನನಗೂ ಇಂತಹ ಸದ್ಗತಿಯನ್ನು ದಯಪಾಲಿಸು" ಎಂದು ಹೇಳಿದನು.

ರಾಣಿಯು ಬರಹಾಮುದ್ದೀನನ ದೇಹಾಂತವಾದಮೇಲೆ ಆತನ ಗೋರಿಯು ಅದೇ ಸ್ಥಳದಲ್ಲಿಯೇ ನಿರ್ಮಿತವಾಗಬೇಕೆಂದು ಆಜ್ಞೆಯಿತ್ತಳು.*

ತರುವಾಯ ಅವಳೂ ಮತ್ತು ಅವಳ ಸೈನಿಕರೂ ಆಂಗ್ಲೇಯರನ್ನು ಹಿಂಬಾಲಿಸಿದರು. ಪಶ್ಚಿಮದಿಂದ ಪೂರ್ವ ಮತ್ತು ದಕ್ಷಿಣದವರೆಗೂ ರಾಣಿಯ ಸೈನಿಕರು ವ್ಯಾಪಿಸಿದ್ದರು. ಅವರ ಹಿಂಭಾಗದಲ್ಲಿ ಕಿಲ್ಲೆಯಿದ್ದಿತು.

ಇದ್ದಕ್ಕಿದ್ದಂತೆಯೇ ವೃದ್ಧನಾದ ನಾನಾಬೋಪಟ್ಕರನು ಬಂದು "ಮೊದಲು ಈ ವೃದ್ಧ ಬ್ರಾಹ್ಮಣನನ್ನು ಹತಮಾಡಿ ನಂತರ ನೀವು ಬಂದೂಕಿಗೆ ಎದುರಾಗಿ" ಎಂದು ಹೇಳಿದನು.

ರಾಣಿ—ನಾನಾಸಾಹೇಬ್, ಇದೇನಿದು?

ನಾನಾ—ಮನೆಗಳ ಹಿಂಬದಿಯಿಂದ ಗುಂಡುಹಾರಿಸುತ್ತಾ ನಿಮ್ಮ ಸೈನ್ಯವನ್ನೆಲ್ಲಾ ಆಂಗ್ಲೇಯರು ಮರ್ದನಮಾಡುತ್ತಿರುವುದು ಕಾಣುವುದಿಲ್ಲವೆ. ನಿಮಗೇನಾದರೂ ಒಂದು ತಗುಲಿದರೆ ಸಮಗ್ರ ಝಾನ್ಸಿಯು ರಸಾತಲಕ್ಕಿಳಿಯುವುದು. ದುರ್ಗವು ಇನ್ನೂ ನಿಮ್ಮ ಕೈಯಲ್ಲೇ ಇದೆ. ಯುದ್ಧವನ್ನು ಇನ್ನೂ ಮುಂದರಿಸಬಹುದು. ಆದುದರಿಂದ ಕಿಲ್ಲೆಗೆ ಹಿಂದಿರುಗಿ ಅಥವಾ ನನ್ನ ವಧೆಮಾಡಿ.

ರಾಣಿಗೆ ಎಲ್ಲವೂ ವೇದ್ಯವಾಯಿತು. ಗುಲ್‌ಮುಹಮ್ಮದ್ದನು ಆಕೆಯ ಬಳಿ ಬಂದು "ಸರ್ಕಾರ್, ವೃದ್ಧರು ಹೇಳುವುದು ಸರಿ. ಹಿಂದಿರುಗಿ ಹೋಗಿ" ಎಂದು ಹೇಳಿದನು.

ಉತ್ತರದ ಹೆಬ್ಬಾಗಿಲಿನ ಮೂಲಕ ಭಾವು ಬಕ್ಷಿ ಮತ್ತು ನಾನಾ ಭೋಪಟ್ಕರ ನೊಡನೆ ರಾಣಿಯು ಕಿಲ್ಲೆಗೆ ಹಿಂದಿರುಗಿದಳು. ಗುಲ್ ಮುಹಮ್ಮದ್ದನೊಡನೆ ಮುನ್ನೂರು ಪಠಾಣರು ಮಾತ್ರ ಒಳಗೆ ಹೋದರು. ಉಳಿದವರೆಲ್ಲರೂ ಹೊರಗಡೆಯೇ ಯುದ್ಧಮಾಡಿದರು. ಬುಂದೇಲು ಖಂಡದ ಸೈನಿಕರು ಹೆಚ್ಚು ಕಡಿಮೆ ಎಲ್ಲರೂ ಮೃತರಾದರು. ಕಿಲ್ಲೆಯ ಹೆಬ್ಬಾಗಿಲನ್ನು ಮುಚ್ಚಿದರು.

---

* ಬರಹಾಮುದ್ದೀನನ ಗೋರಿಯು ಬಾಬೂ ಜಾದೋನಾಥ್ ಚೌಧುರಿಯ ತೋಟದಲ್ಲಿ ಇತರ ಗೋರಿಗಳ ಬಳಿಯೇ ಇದೆ.

# ೭೪

ಆಂಗ್ಲೇಯರು ನಗರದ ಎಲ್ಲಾ ದ್ವಾರಗಳ ಉಸ್ತುವಾರಿಕೆಯ ಪ್ರಬಂಧಮಾಡಿದರು. ನಿಶ್ಶಸ್ತ್ರರಾದ ತಮ್ಮ ಸ್ತ್ರೀ ಪುರುಷ ಬಾಲಕರನ್ನು ಬಕ್ಷೀಷ್ ಆಲಿ ಮುಂತಾದ ಹಲವು ಹಿಂದೂಸ್ಥಾನೀಯರು ಹತ್ಯಮಾಡಿದ್ದಕ್ಕೆ ಪ್ರತೀಕಾರ ಮಾಡಬೇಕಾಗಿದ್ದಿತು. ಅದಕ್ಕಾಗಿ ಐದು ವರ್ಷದ ಬಾಲಕರಿಂದ ಹಿಡಿದು ಎಂಬತ್ತು ವರ್ಷದ ಮುದುಕರ ವರೆಗೆ ಎಷ್ಟು ಪುರುಷರಿದ್ದರೋ ಅವರೆಲ್ಲರನ್ನೂ ಕೊಲ್ಲಲುಪಕ್ರಮಿಸಿದರು. ಹಲ್ವಾಯ್ ಪುರಕ್ಕೆ ಬೆಂಕಿಯಿಟ್ಟರು. ಎಷ್ಟೋ ಮಂದಿ ಸ್ತ್ರೀಯರು ತಮ್ಮ ಸತೀತ್ವವನ್ನು ಕಾಪಾಡಿಕೊಳ್ಳುವುದಕ್ಕಾಗಿ ಭಾವಿಯಲ್ಲಿ ಬಿದ್ದು ಆತ್ಮಹತ್ಯಮಾಡಿಕೊಂಡರು. ರೋಜನು ಸ್ತ್ರೀಯರನ್ನು ಕೊಲ್ಲಬಾರದೆಂದು ಆಜ್ಞೆಯಿತ್ತಿದ್ದನು. ಅದರಂತೆಯೇ ಅವರು ಸ್ತ್ರೀಹತ್ಯೆ ಮಾಡುತ್ತಿರಲಿಲ್ಲ. ಆದರೆ ತಮ್ಮ ಪತಿಯರನ್ನು ರಕ್ಷಿಸಲು ಅಡ್ಡಗಟ್ಟಿ ಬರುತ್ತಿದ್ದ ಸ್ತ್ರೀಯರು ಶತ್ರುಗಳ ಗುಂಡಿನೇಟಿನಿಂದ ಮಡಿದರು. ಝಾನ್ಸಿಯ ಕವಿಗಳೂ ಗಾಯಕರೂ ಕೂಡ ಯುದ್ಧದಲ್ಲಿ ಭಾಗವಹಿಸಿ ಮೃತಪಟ್ಟರು ಮತ್ತು ಗಾಯ ಹೊಂದಿದರು. ಗಾಯಕರಲ್ಲಿ ಕೇವಲ ಮೃಗಲ್ ಖಾನನು ಮತ್ತು ನರ್ತಕಿಯರಲ್ಲಿ ದುರ್ಗಿಯು ಉಳಿದುಕೊಂಡರು.

ಆಂಗ್ಲೇಯರು ಮನೆ ಮನೆಗೂ ನುಗ್ಗಿ ಬೆಳ್ಳಿ ಭಂಗಾರ, ಒಡವೆ ವಸ್ತುಗಳನ್ನು ಲೂಟಿಮಾಡಲಾರಂಭಿಸಿದರು.

ನಗರದ ರಾಜಮಹಲ್ಲಿನ ಸುತ್ತು ಮುತ್ತುಲೂ ಅವರ ಉಪಟಳವು ಹೆಚ್ಚಿತು. ನಾಟಕಶಾಲೆಯ ಮುಂದುಗಡೆ ದಕ್ಷಿಣದಿಕ್ಕಿಗೆ ರಾಣಿಯ ಅಶ್ವಶಾಲೆಯಿದ್ದಿತು. ಅದನ್ನು ಬುಂದೇಲುಖಂಡದ ಸೈನಿಕರು ಕಿಲ್ಲೆಯ ಕದನದಲ್ಲಿ ಪರಿವರ್ತನೆಮಾಡಿದ್ದರು. ಅದರಲ್ಲಿ ಸಮಾರು ಐವತ್ತು ಜನ ಸಿಪಾಯಿಗಳು ಇದ್ದಿರಬಹುದು. ಆದರೆ ಅದರಲ್ಲಿ ಒಬ್ಬನು ಜೀವಂತನಾಗಿರುವವರೆಗೂ ಆಂಗ್ಲೇಯರು ಆ ಅಶ್ವಶಾಲೆಯನ್ನು ಆಕ್ರಮಿಸಿಕೊಳ್ಳಲಾಗಲಿಲ್ಲ. ಒಂದೊಂದು ಗೋಡೆಯ ಒಂದೊಂದು ಇಟ್ಟಿಗೆಯನ್ನೂ, ಒಂದೊಂದು ಬಾಗಿಲನ್ನೂ ವಶಪಡಿಸಿಕೊಳ್ಳುವುದರಲ್ಲಿ ಅದೆಷ್ಟು ಜನ ಆಂಗ್ಲೇಯರು ತಮ್ಮ ಅಸುವನ್ನು ನೀಗಿದರೋ ಪರಮಾತ್ಮನೇ ಬಲ್ಲ. ಇದರ ನಂತರ ಮಹಲ್ಲಿನ ಒಂದೊಂದು ಅಡಿಗೂ ಯುದ್ಧವು ನಡೆಯಿತು. ಅಲ್ಲಿನ ಸಿಪಾಯಿಗಳೆಲ್ಲಾ ಮಡಿದ ನಂತರ ಅದನ್ನು ವಶಪಡಿಸಿಕೊಂಡರು. ಎಲ್ಲವನ್ನೂ ಕೊಳ್ಳೆ ಹೊಡೆದರು. ಆಗ ಒಂದು ಪೆಟ್ಟಿಗೆಯಲ್ಲಿ ವಿಲಿಯಂ ಬೆಂಟಿಂಕನು ರಾಮಚಂದ್ರರಾಯನಿಗೆ ಕೊಟ್ಟಿದ್ದ ಯೂನಿಯನ್ ಜಾಕ್ ಧ್ವಜವು ದೊರಕಿತು. ಅದನ್ನು ಮಹಲ್ಲಿನ ಮೇಲೆ ಹಾರಿಸಿದರು. ಧ್ವಜವು ಹಾರುತ್ತಿದ್ದ ಪಾರ್ಶ್ವವನ್ನುಳಿದು ಮಹಲ್ಲಿನ ಮಿಕ್ಕ ಭಾಗಗಳಿಗೆ

ಬೆಂಕಿಯನ್ನಿಟ್ಟರು. ನಾಟಕಶಾಲೆಯೂ ಉಳಿಯಲಿಲ್ಲ. ರತ್ನಾವಳಿ, ಶಾಕುಂತಲ, ಹರಿಶ್ಚಂದ್ರ ಮುಂತಾದ ನಾಟಕಗಳಲ್ಲಿ ಉಪಯೋಗಿಸಲ್ಪಡುತ್ತಿದ್ದ ಚಿತ್ರಿತ ಪರದೆಗಳೆಲ್ಲವೂ ಭಸ್ಮವಾಗಿ ನಾಶವಾದವು.

ಇದಾದನಂತರ ನಡೆದ ಪೈಶಾಚಿಕ ಕೃತ್ಯವು ಇತಿಹಾಸದಲ್ಲಿ ರಕ್ತಾಕ್ಷರಗಳಲ್ಲಿ ಬರೆಯಲ್ಪಟ್ಟದೆ. ಮಹಲಿನ ಮುಂದಿದ್ದ ಪುಸ್ತಕಾಲಯಕ್ಕೆ ಬೆಂಕಿಯನ್ನಿಟ್ಟರು. ಸ್ವಲ್ಪಹೊತ್ತಿನಲ್ಲಿಯೇ ಅನಾದಿಕಾಲದಿಂದ ಶೇಖರಿಸಿದ್ದ ಆ ಭಾಂಡಾರಕ್ಕೆ ಉರಿ ತಗಲಿ ಅಗ್ನಿಜ್ವಾಲೆಯು ಗಗನಕ್ಕೇರಿತು. ರೋಮ್, ಸಿಕಂದರಿಯೂ ಮತ್ತು ರಾಜ ಗೃಹಗಳಲ್ಲಿ ಈ ರೀತಿಯಾದ ಕೃತ್ಯವು ನಡೆದಿದ್ದಿತು. ಆದರೆ ಅದು ಅನಾಗರಿಕಕಾಲ. ಇದಾದರೋ ವಿಜ್ಞಾನದ ನಾಗರಿಕ ಯುಗ.

ರಾಣಿಯ ಕೈಯ್ಯಲ್ಲಿ ದುರ್ಬೀನಿಲ್ಲದೆಯೇ ಎಲ್ಲವೂ ಕಿಲ್ಲೆಯಿಂದ ಗೋಚರವಾಗುತ್ತಿತ್ತು. ಆದರೆ ದೂರದರ್ಶಕ ಯಂತ್ರವೂ ಎಲ್ಲವನ್ನು ಸ್ಪಷ್ಟ ಪಡಿಸಿತು.

ಕುದುರೆಯ ಲಾಯವು ಭಸ್ಮವಾಯಿತು—ಪುನಃ ಅದನ್ನು ನಿರ್ಮಿಸಬಹುದು. ರಾಜ ಗೃಹವು ಸುಟ್ಟುಹೋಯಿತು—ಅದನ್ನು ಕಟ್ಟುವವರೂ ಉತ್ಪನ್ನವಾಗುತ್ತಾರೆ. ಆದರೆ ಪುಸ್ತಕಾಲಯ?—ವೇದ, ಶಾಸ್ತ್ರ, ಪುರಾಣ, ಕಾವ್ಯ, ಇತಿಹಾಸ ಮುಂತಾದವೂ, ಸಂಸ್ಕೃತ, ಅರಬ್ಬಿ, ಫಾರಸಿ ಮೊದಲಾದ ಭಾಷೆಗಳ ಹಸ್ತ ಲಿಖಿತ ಗ್ರಂಥಗಳನ್ನು ಪುನರ್ಲಿಪಿ ಮಾಡಲು ದೂರದೂರ ದೇಶದಿಂದ ವಿದ್ವಾಂಸರು ಬರುತ್ತಿದ್ದರು. ಪುನಃ ಅದನ್ನು ಯಾರು ನಿರ್ಮಿಸಲು ಸಾಧ್ಯ? ಯಾವ ಕಷ್ಟ, ಯಾವ ಸಮಸ್ಯೆ, ಯಾವ ವಿಪತ್ತೂ ಕೂಡ ಜಗ್ಗಿಸಲಾಗದ ಸುಡುತ್ತಿರುವ ಪುಸ್ತಕಾಲಯವನ್ನು ನೋಡಿ ರಾಣಿಯು ತಲೆತಿರುಗಿ ಮೂರ್ಛಿತಳಾಗುವುದರಲ್ಲಿದ್ದಳು. ಜೊತೆಯಲ್ಲಿದ್ದ ಮುಂದರಿಯು ಅವಳನ್ನು ಸಮಜಾಯಿಸಿದಳು. ರಾಣಿಯು ಅತಿ ಪ್ರಯಾಸದಿಂದ ಮೂರ್ಛೆಯನ್ನು ನಿವಾರಿಸಿಕೊಂಡು ನೀರು ತರಿಸಿ ಕುಡಿದಳು. ಇಷ್ಟರಲ್ಲಿ ಹಲ್ವಾಯಿಪುರ ಮತ್ತು ನೇಯ್ಗೆಯವರ ಮೊಹಲ್ಲೆಗಳ ಅಗ್ನಿಜ್ವಾಲೆಯು ಕಾಣಿಸಿತು. ಆಕ್ರಂದನ, ಚೀತ್ಕಾರಗಳು ಕೇಳಿಬಂದವು. ಜನವಧೆ, ಕೊಲೆ, ಲೋಕ ಸಂಹಾರಗಳ ಪ್ರತ್ಯಕ್ಷ ಪ್ರಮಾಣ. ರಾಣಿಯ ಹೃದಯವು ಕುದಿಯಲಾರಂಭಿಸಿತು.

"ಮುಂದರಿ, ಮುಂದರಿ, ನನ್ನ ಪ್ರಿಯ ಝಾನ್ಸಿಗೆ ಈ ದುರ್ಗತಿಯೆ? ಅದೂ ನಾನು ಬದುಕಿರುವಾಗಲೇ, ನನ್ನ ಕಣ್ಣುಗಳ ಮುಂದೆ?" ಎಂದು ರಾಣಿಯು ಗದ್ಗದ ಪೂರಿತಳಾಗಿ ಹೇಳಿದಳು. ಕಂಠವು ರುದ್ಧವಾಯಿತು. ಮುಂದರಿಯು ಅವಳನ್ನು ಬಲಾತ್ಕಾರವಾಗಿ ಕೆಳಗೆ ಕರೆದುಕೊಂಡು ಹೋದಳು.

ಮಹಲ್ಲಿನ ಚೌಕಟ್ಟಿನ ಮೇಲೆ ಕುಳಿತು ಕಂಬನಿಗರೆದಳು. ಯಾರ ಕಣ್ಣಿಗೆ ಕಣ್ಣೀರಿನ ಪರಿಚಯವೇ ಇರಲಿಲ್ಲವೋ, ಯಾರ ಹೃದಯವು ವಜ್ರದಂತೆಯೂ ಹಸ್ತವು

ಲೋಹದಂತೆಯೂ ಇದ್ದಿತೋ, ಯಾರ ಶಬ್ದಕೋಶದಲ್ಲಿ ನಿರಾಶೆಯೆಂಬ ಶಬ್ದವಿರಲಿಲ್ಲವೋ, ಯಾರು ಭಾರತದ ಸ್ತ್ರೀಯರ ಗೌರವದ ನಿಶಾನೆಯಾಗಿದ್ದಳೋ ಅಂತಹ ಮಹಾರಾಣಿ ಲಕ್ಷ್ಮೀಬಾಯಿಯು ಕಣ್ಣೀರು ಸುರಿಸಿದಳು. ಸಾಕ್ಷಾತ್ ದುರ್ಗಾದೇವಿಯೇ ಕಂಬನಿಗರದಂತಿದ್ದಿತು.

ಅವಳ ಕಂಬನಿಯ ಧಾರೆಯು ಕಷ್ಟದಿಂದ ನಿವಾರಣೆಯಾಗಿದ್ದಿತು. ಆಗ ರಾಮಚಂದ್ರ ದೇಶಮುಖನು ಕರ್ತವ್ಯ ವಶದಿಂದ ಕುಮಾರ ಗುಲಾಂ ಗೌಸ್‌ಖಾನನು ಶತ್ರುಗಳ ಗುಂಡಿನೇಟಿನಿಂದ ಮರಣ ಹೊಂದಿದನು ಎಂಬ ಸಮಾಚಾರವನ್ನು ತಿಳಿಸಿದನು. ರಾಣಿಯು ಆ ವಾರ್ತೆಯನ್ನು ಕೇಳಿ ಕೆರಳಿದ ಸಿಂಹಿಣಿಯಂತೆ ಎದ್ದು ನಿಂತು ತನ್ನ ಅಂಗರಖೆಯ ಕೊನೆಯಿಂದ ಕಣ್ಣೀರನ್ನು ಒರಸಿಕೊಂಡು ಶುದ್ಧ ಕಂಠವನ್ನು ಸರಿಪಡಿಸಿಕೊಂಡಳು.

"ಭಾವು ಭಕ್ಷಿಯನ್ನು ಅವನ ಸ್ಥಳದಲ್ಲಿ ಕಳುಹಿಸು. ಶವವನ್ನು ಮಹಲಿನ ಬಳಿ ರವಾನಿಸು" ಎಂದು ರಾಣಿಯು ಆಜ್ಞಾಪಿಸಿದಳು.

ಆಜ್ಞೆಯನ್ನು ಪರಿಪಾಲಿಸುವುದಕ್ಕಾಗಿ ದೇಶಮುಖನು ಹೊರಟು ಹೋದನು. ರಾಣಿಯು ಮುಂದರಿಯೊಡನೆ ಖುದಾಭಕ್ಷನ ಗೋರಿಗಾಗಿ ತಯಾರಾಗುತ್ತಿದ್ದ ದಕ್ಷಿಣ ಬುರುಜಿನ ಕೆಳಗಿದ್ದ ಸ್ಥಳಕ್ಕೆ ಬಂದಳು. ಮೋತೀಬಾಯಿಯು ಅಲ್ಲಿಯೇ ಇದ್ದಳು.

ಪಶ್ಚಿಮದ ಬುರುಜಿನಿಂದ ಭಾವು ಬಕ್ಷಿಯು ಆಂಗ್ಲೇಯ ಶಿಬಿರದ ಮೇಲೆ ತೋಪು ಹಾರಿಸುತ್ತಿದ್ದನು. ಮಧ್ಯದ ಬುರುಜಿನಿಂದ ರಘುನಾಥಸಿಂಹನು ಗುಂಡು ಹೊಡೆಯುತ್ತಿದ್ದನು. ದಕ್ಷಿಣ ಬುರುಜಿಯಾದರೋ ಶಾಂತವಾಗಿದ್ದಿತು.

ರಾಣಿ—ಮೋತಿಬಾಯಿ, ನಾನು ಅಂತ್ಯಕರ್ಮಗಳ ಪ್ರಬಂಧವನ್ನು ನೋಡಿಕೊಳ್ಳುತ್ತೇನೆ. ನೀನು ಅದುವರೆಗೂ ಈ ಬುರುಜಿನ ತೋಪನ್ನು ಹಾರಿಸುತ್ತಿರು. ಖುದಾಬಕ್ಷನ ಶವವನ್ನು ನೋಡಿ ಮೋತೀಬಾಯಿಯ ಅಂತಃಕರಣವು ತಳಮಳಗೊಂಡಿತು.

ರಾಣಿಯು "ಇನ್ನೂ ಸ್ವಲ್ಪ ಕಾಲಾವಕಾಶವಿದೆ. ಕುಮಾರ್ ಗೌಸ್‌ಖಾನನ ಮೃತ ದೇಹವೂ ಇಲ್ಲಿಗೆ ಬರುವುದಿದೆ" ಎಂದಳು.

ವಿಸ್ಫಾರಿತ ಲೋಚನಳಾದ ಮೋತೀಬಾಯಿಯು ಆಶ್ಚರ್ಯದಿಂದ "ಏನು ಉಸ್ತಾದರೂ ಮರಣ ಹೊಂದಿದರೆ?" ಎಂದು ಕೇಳಿದಳು.

"ಅಹುದು ಮೋತೀಬಾಯಿ" ಎಂದು ರಾಣಿಯು ಉತ್ತರವಿತ್ತಳು.

ಮೋತೀಬಾಯಿಯು ತೋಪನ್ನು ಚಲಾಯಿಸಲು ಅಲ್ಲಿಂದ ಎದ್ದು ಹೊರಟಳು. ಅವಳೊಂದು ಬಾರಿ ತೋಪುಹಾರಿಸಿದಳು. ಅಷ್ಟರಲ್ಲೇ ಹತ್ತಿರದಿಂದ ಶತ್ರುಗಳ ಗುಂಡಿನ ಶಬ್ದವು ಕೇಳಿಸಿತು. ಆಂಗ್ಲೇಯರು ಕಿಲ್ಲೆಯ ಸದರ್ ಬಜಾರ್ ಬಾಗಿಲಿನ ಬಳಿಗೆ ಬಂದಿದ್ದರು. ಅವರನ್ನು ಹತ್ತಿರದಿಂದ ಸರಿಯಾಗಿ ನೋಡಿ ಗುರಿಯಿಡುವುದಕ್ಕೆ

ಅದು ತಕ್ಕ ಸಮಯವಾಗಿದ್ದಿತು. ಅಂದಿನ ಯುದ್ಧದ ಪ್ರಯುಕ್ತ ಬುರುಜಿಯು ಮುರಿದು ಬಿದ್ದು ಇನ್ನೂ ಸರಿಪಡಿಸಿರಲಿಲ್ಲ. ಶತ್ರುಗಳ ಗುಂಡುಗಳು ಅವಳ ನಾಲ್ಕು ಕಡೆಯೂ ಹಾರಿ ಹೋದವು. ಆದರೆ ಒಂದು ಗೋಲಿ ಮಾತ್ರ ಆಕೆಯ ಭುಜದ ಕೆಳಗೆ ತಗುಲಿ ಹಾದುಹೋಯಿತು. ಹೃದಯಕ್ಕೇನೂ ಏಟು ತಾಗದಿದ್ದರೂ ಮೃತ್ಯುವು ಅನಿವಾರ್ಯವಾಗಿದ್ದಿತು.

ಅತ್ತಕಡೆ ಗುಲಾಂ ಗೌಸ್ ಖಾನನ ಮೃತ ದೇಹವನ್ನು ತರಲಾಯಿತು, ಇತ್ತ, ಒಬ್ಬ ಸಿಪಾಯಿಯು ಮೋತೀಬಾಯಿಯನ್ನು ಎತ್ತಿಕೊಂಡು ಬಂದು ಸ್ವಲ್ಪ ನೀರನ್ನು ಕುಡಿಸಿದನು. ರಕ್ತಸ್ರಾವವು ಹೆಚ್ಚಾಗಿದ್ದರೂ ಆಕೆಗೆ ಪ್ರಜ್ಞೆ ತಪ್ಪಿರಲಿಲ್ಲ.

ಮುಂದರಿಯು ದಕ್ಷಿಣ ಬುರುಜಿಯ ವ್ಯವಸ್ಥೆಯನ್ನು ನೋಡಿಕೊಳ್ಳಲು ರಾಣಿಯ ಅನುಮತಿಯನ್ನು ಬೇಡಿದಳು.

ರಾಣಿಯು ದೃಢವಾಗಿ “ಬೇಡ, ಖಂಡಿತ ಬೇಡ. ಇಲ್ಲಿಯೇ ಇರು. ಈಗ ನಿನ್ನನ್ನೂ ಕಳೆದುಕೊಳ್ಳಲಾರೆ” ಎಂದು ಉತ್ತರಿಸಿದಳು.

ಮೋತೀಬಾಯಿಯ ತಲೆಯನ್ನು ರಾಣಿಯು ತನ್ನ ತೊಡೆಯ ಮೇಲಿರಿಸಿ ಕೊಂಡಳು. ಮೋತೀಬಾಯಿಯು ಅಶ್ರುಪೂರಿತಳಾಗಿ “ಈ ತೊಡೆಯ ಮೇಲೆ ತಲೆ ಯನ್ನಿಟ್ಟುಕೊಂಡು ಅಸುವನ್ನು ನೀಗುವ ಭಾಗ್ಯವು ಮತ್ತಾರಿಗೂ ಇಲ್ಲ, ಬಾಯಿ ಸಾಹೇಬ್” ಎಂದಳು.

ರಾಣಿಯು ಆಕೆಯ ತಲೆಯನ್ನು ನೇವರಿಸುತ್ತಾ “ಇಂದು ನೀನು ಅಮರಳಾದೆ, ಮೋತೀ” ಎಂದಳು.

ಮೋತೀಬಾಯಿಯು ವ್ಯಾಕುಲಸ್ವರದಿಂದ “ಸರ್ಕಾರ್, ನಾನು ಏನೇ ಆಗಲಿ ಪರಿಶುದ್ಧಳು” ಎಂದಳು.

“ನೀನು ಪರಿಶುದ್ಧಳು ಮಾತ್ರವಲ್ಲ, ಪವಿತ್ರಳೂ ಆಗಿದ್ದೆ. ನೋಡು ಮೋತಿ, ಒಂದಲ್ಲ ಒಂದು ದಿನ ಎಲ್ಲರೂ ಸಾಯಬೇಕು. ಆದರೆ ಸತ್ಕಾರ್ಯದಲ್ಲಿ ದೇಹತ್ಯಾಗ ಮಾಡುವುದೂ, ಭಗವನ್ನಾಮಸ್ಮರಣಮಾಡುತ್ತಾ ಅಸುವನ್ನು ನೀಗುವುದೂ ಜನ್ಮಾಂತ ರದ ಪುಣ್ಯದಿಂದ ಪ್ರಾಪ್ತವಾಗುವುದು.

ಮೋತೀಬಾಯಿಯು ಕಣ್ಣುಮುಚ್ಚಿದಳು. ಆಕೆಯ ಮುಖವು ಕಾಂತಿಹೀನ ವಾಯಿತು.

“ಆತ್ಮವು ಅಮರವಾದುದು. ಶರೀರವು ನಾಶವಾದರೂ ಒಂದು ಜ್ಯೋತಿಯು ಮಾತ್ರ ಉಳಿದಿರುವುದು” ಎಂದು ರಾಣಿಯು ಹೇಳಿದಳು.

ಮೋತೀಬಾಯಿಯು ಅಚೇತನಳಾದಳು.

ರಾಣಿಯು ಮತ್ತೆರಡು ಗೋಲಿಗಳನ್ನು ಸಿದ್ಧಪಡಿಸುವಂತೆ ಆಜ್ಞೆಯಿತ್ತಳು ಮತ್ತು

ಅದರಂತೆಯೆ ಅವೂ ಜಾಗ್ರತೆಯಾಗಿ ತಯಾರಾದವು.

ರಾಣಿಯ ಮಡಿಲು ಮೋತೀಬಾಯಿಯ ರಕ್ತದಿಂದ ತುಂಬಿಹೋಯಿತು. ಮೋತೀಬಾಯಿಯ ಕಳೆಗುಂದಿದ ಮುಖವು ಒಂದು ಬಾರಿ ಪ್ರಕಾಶಮಾನವಾಯಿತು, ಕಣ್ಣುಗಳು ನಿಮಿರಿದುವು. ತುಟಿಗಳು ಅದುರಿದುವು. ಅವಳ ಬಾಯಿಯಿಂದ 'ರಾಣಿ.... ಬೆಳಕು....' ಎಂಬ ಮಾತುಗಳು ಹೊರಟವು. ನಂತರ ಅವಳು ಪ್ರಜ್ಞೆ ತಪ್ಪಿದಳು. ಹೂವು ಅರಳಿ ತನ್ನ ಪರಿಮಳವನ್ನು ಎಲ್ಲೆಡೆಗೂ ಹರಡಿ ಬಾಡಿತು.

ಸುಂದರಿಯು "ಸರ್ಕಾರ್, ಇವಳ ಮತ್ತು ಕುವರ ಖುದಾಬಕ್ಷನ ದೇಹಗಳೆರಡನ್ನೂ ಒಂದೇ ಗೋರಿಯಲ್ಲಿಡಬೇಕು" ಎಂದಳು.

ರಾಣಿಯು "ಹಾಗಾಗಲಾರದು, ಈಕೆಯು ಕನ್ಯೆಯಾಗಿಯೇ ಇದ್ದಳು" ಎಂದಳು.

ಮೂವ್ವರನ್ನು ಸಮೀಪದಲ್ಲಿಯೇ ಮೂರು ಬೇರೆ ಬೇರೆ ಗೋರಿಗಳಲ್ಲಿ ಇಟ್ಟು ಮುಚ್ಚಲಾಯಿತು. ಅಂತ್ಯ ಕ್ರಿಯೆಗಳನ್ನು ಗುಲ್ ಮಹಮ್ಮದ್ದನು ಮಾಡಿದನು. ರಘುನಾಥಸಿಂಹನು ಆ ಮೂವರು ವೀರರಿಗೂ ತೋಪಿನ ಸಲಾಮು ಹಾರಿಸಿದನು.

ಸಾಯಂಕಾಲವಾಗುತ್ತಾ ಬಂದಿತು. ಆದುದರಿಂದ ಮೂರು ಗೋರಿಗಳನ್ನೂ ಸೇರಿಸಿ ಒಂದೇ ಕಟ್ಟೆಯನ್ನು ಕಟ್ಟಲಾಯಿತು. *

ಇದರನಂತರ ರಾಣಿಯು ಸ್ನಾನಮಾಡಿ ಶುಭ್ರ ವಸ್ತ್ರಧಾರಣೆಮಾಡಿದಳು, ಆದರೆ ವೇಷವು ಪುರುಷ ಸೈನಿಕನದೇ ಆಗಿದ್ದಿತು.

ರಾಣಿಯು ಮಹಲ್ಲಿನ ತಳಭಾಗದಲ್ಲಿ ಮುಖ್ಯ ಮುಖ್ಯರಾದವರನ್ನೆಲ್ಲಾ ಒಟ್ಟುಗೂಡಿಸಿ "ಈವತ್ತಿನವರೆಗೂ ನೀವು ಅಪ್ರತಿಮ ಸಾಹಸವನ್ನು ತೋರಿ ಝಾನ್ಸಿಯನ್ನು ರಕ್ಷಿಸಿದಿರಿ. ಪ್ರಾಣವನ್ನು ಪಣವಾಗಿಟ್ಟಿರಿ. ಆದರೆ ಈಗ ಶುಭ ಸೂಚನೆಗಳು ಕಾಣುತ್ತಿಲ್ಲ. ಹೆಚ್ಚು ಕಡಿಮೆ ನಮ್ಮ ಎಲ್ಲಾ ಯೋಧರೂ, ದಳಪತಿಗಳೂ, ಗೋಲಂದಾಜದವರೂ ಸಾಹಸದಿಂದ ಹೋರಾಡಿದರು. ಕೋಟೆಯ ಗೋಡೆಗಳನ್ನು ಮತ್ತು ಹೆಬ್ಬಾಗಿಲುಗಳನ್ನು ರಕ್ಷಿಸಿದ ವೀರರೂ ಮಡಿದರು. ಕೋಟೆಯ ನಾಲ್ಕು ಸಹಸ್ರ ಸೈನ್ಯದಲ್ಲಿ ನಾನ್ನೂರು ಮಂದಿ ಕೂಡ ಉಳಿದಿಲ್ಲ. ಆಂಗ್ಲೇಯರು ಕೋಟೆಯನ್ನು ಮುತ್ತಿದ್ದಾರೆ. ಒಂದೆರಡು ದಿನಗಳಲ್ಲಿ ಒಳಗೆಯೂ ನುಗ್ಗುವರು. ನಿಮ್ಮಲ್ಲಿ ಯುದ್ಧ ಮಾಡುತ್ತಾ ಯಾರು ಯಾರು ಉಳಿದಕೊಳ್ಳುತ್ತೀರೊ ಅವರು ಸೆರೆ ಸಿಕ್ಕಿ ಗಲ್ಲಿಗೆ ಹಾಕಲ್ಪಡುತ್ತಾರೆ. ನಾನೇನೋ ಸೆರೆ ಸಿಗುವುದಿಲ್ಲ. ಆದರೆ ನನ್ನ ಶವಕ್ಕೆ ಅವರು ಫಿರಂಗಿ ಸ್ಪರ್ಶನ

* ಈ ಕಟ್ಟೆಯು ಈಗಲೂ ಮಹಲಿನ ದಕ್ಷಿಣ ಭಾಗದಲ್ಲಿದೆ. ಮತ್ತು ವರ್ಷದಲ್ಲಿ ಶಿವರಾತ್ರಿಯಂದು ಮಾತ್ರ ಹಿಂದೂಸ್ಥಾನಿಗಳು ಕಿಲ್ಲೆಗೆ ಹೋದಾಗ ಗೋರಿಯ ಮೇಲೆ ಬಟ್ಟೆಯನ್ನು ಹಾಸಿ ಪ್ರಾರ್ಥನೆ ನಡೆಸುವರು.

ಮಾಡುತ್ತಾರೆ. ಇದರಿಂದ ನನ್ನ ಪೂರ್ವಿಕರೂ, ವಿಖ್ಯಾತರೂ ಆದ ಅತ್ತೆಮಾವಂದಿರಿಗೆ ಅಪಮಾನವಾಗುವುದು. ಈಗ ಶಿವರಾವ್ ಭಾವುವಿನ ಸೊಸೆಗೆ ಒಂದೇ ಒಂದು ಮಾರ್ಗ ಉಳಿದಿದೆ. ಮದ್ದಿನ ಮನೆಯಲ್ಲಿ ನೂರಾರು ಮಣ ತೋಪಿನ ಮದ್ದಿದೆ. ನಾನಲ್ಲಿಗೆ ಹೋಗಿ ಪಿಸ್ತೂಲಿನಿಂದ ಹೊಡೆದುಕೊಂಡು ನನ್ನ ಹಿರಿಯರನ್ನು ಸೇರುವೆನು. ಕಿಲ್ಲೆಯಿಂದ ಹೊರಗೆ ಹೋಗಲು ಅನೇಕ ಗುಪ್ತ ಮಾರ್ಗಗಳಿವೆ. ನೀವು ಅವುಗಳ ಮೂಲಕ ಪಾರಾಗಿರಿ. ಇನ್ನೂ ಸಾಯಂಕಾಲವಾಗಲು ಸಮಯವಿದೆ. ರಾತ್ರಿಯ ಕತ್ತಲು ನಿಮಗೆ ಸಹಕಾರಿಯಾಗುವುದು" ಎಂದು ನುಡಿದಳು.

ಭಾವು ಬಕ್ಷಿಯು ವ್ಯಸನ ಪೂರಿತನಾಗಿ ದೀನ ಸ್ವರದಿಂದ "ನಾನೂ ಅದೇ ಮದ್ದಿನಿಂದಲೇ ತಮ್ಮ ಸೇವೆಗಾಗಿ ಪರಲೋಕ ಯಾತ್ರೆಯನ್ನು ಕೈಗೊಳ್ಳುವೆನು" ಎಂದನು.

ನಾನಾ ಬೋಪಟ್ಕರನು ಒಡನೆಯೇ "ನೀವು ಆತ್ಮಘಾತಮಾಡಿಕೊಳ್ಳಲು ಯೋಚಿಸುತ್ತಿದ್ದೀರಿ ಅಲ್ಲವೆ? ಯಾರಿಗೆ ಭಗವದ್ಗೀತೆಯು ಕಂಠಪಾಠವಾಗಿದೆಯೋ, ಯಾರು ಗೀತೆಯ ೧೮ ಅಧ್ಯಾಯಗಳನ್ನೂ ತಮ್ಮ ಜೀವನದಲ್ಲಿ ಅನುಸರಿಸಿಕೊಂಡು ಬರುತ್ತಿರುವರೋ, ಯಾರು ಪ್ರತ್ಯೇಕ ಪರಿಸ್ಥಿತಿಯಲ್ಲಿ ಸ್ವರಾಜ್ಯ ಸ್ಥಾಪನೆಮಾಡಲು ಸಂಕಲ್ಪಮಾಡಿರುವರೋ ಅವರು ಆತ್ಮಹತ್ಯೆಮಾಡಿಕೊಳ್ಳುವರೆ? ಆಂಗ್ಲೇಯರು ಪುಸ್ತಕಾಲಯವನ್ನು ಭಸ್ಮಮಾಡಿದರೂ ನಮ್ಮ ಕೃಷ್ಣನಿಗೆ ಯಾವ ಅಪಘಾತವೂ ಉಂಟಾಗಲಿಲ್ಲ. ಹೀಗಿರುವಲ್ಲಿ ಅವರು ನಿಮ್ಮಿಂದ ಆತ್ಮಹತ್ಯಮಾಡಿಸಬಲ್ಲರೆ? ಮಾಡಿ ಕೃಷ್ಣನಿಗೂ ಗೀತೆಗೂ ಅಪಮಾನ ಮಾಡಿ. ನೀವೇ ಮಹಾರಾಣಿ, ನಿಮ್ಮ ಆಜ್ಞೆಯನ್ನು ಎಲ್ಲರೂ ಪಾಲಿಸಬೇಕಾಗಿದೆ. ಆದರೆ ನೀವು ಯಾರ ರಕ್ಷಣೆಗೋಸ್ಕರ ಇಷ್ಟು ಶ್ರಮ ವಹಿಸಿದಿರೋ ಆ ಜನತೆಯು ನಿಮ್ಮ ತರುವಾಯ ನಿಮ್ಮ ವಿಚಾರವಾಗಿ ಏನೆಂದುಕೊಂಡಾರು ಯೋಚಿಸಿ" ಎಂದನು.

ರಾಣಿಯು ತಲೆ ಬಾಗಿಸಿದ್ದಳು.

ವೃದ್ಧನಾದ ಬೋಪಟ್ಕರನು ಮುಂದುವರಿಸುತ್ತಾ "ನೀವು ರಾಜಮಾತೆ. ದಾಮೋದರರಾಯನು ನಿಮ್ಮ ಪ್ರಿಯ ಪುತ್ರ. ಅವನು ನಿಮ್ಮ ಹಿರಿಯರ ಪ್ರತಿನಿಧಿ, ಝಾನ್ಸಿಯ ಜನರ ಹೆಮ್ಮೆ. ಕಾಲ್ಪಿಯಲ್ಲಿ ಇನ್ನೂ ಪೇಶ್ವೆಯ ಸೈನ್ಯವು ಸಿದ್ಧವಾಗಿದೆ. ದಿಲ್ಲಿ, ಲಕ್ನೋ, ಕಾನ್ಪುರ ಇತ್ಯಾದಿ ನಗರಗಳ ಪತನವಾಗಿದ್ದರೂ ಜನತೆಯು ಪತನವಾಗಿಲ್ಲ. ವಿಂಧ್ಯಪ್ರದೇಶ, ಮಹಾರಾಷ್ಟ್ರ ಮತ್ತು ಔಧ್ ಇನ್ನೂ ಅಕ್ಷಯವಾಗಿವೆ. ಕಿಲ್ಲೆಯ ಒಳಗೂ ಕಿಲ್ಲೆಯ ಹೊರಗಡೆ ದೂರದೂರ ಪ್ರದೇಶಗಳಲ್ಲಿಯೂ ಪಠಾಣರು ದೇಶಕ್ಕಾಗಿ ಹೊಡೆದಾಡಿ ಸಾಯಲು ಸೊಂಟಕಟ್ಟಿ ನಿಂತಿದ್ದಾರೆ. ನೀವು ಕಿಲ್ಲೆಯಿಂದ ಹೊರಬಿದ್ದು ಆಂಗ್ಲೇಯ ಸೈನ್ಯವನ್ನು ಭೇದಿಸುತ್ತಾ ಪಾರಾಗಿ ಹೋಗಿ ಕಾಲ್ಪಿಯನ್ನು ಸೇರಿ ಪುನಃ ಯುದ್ಧಕ್ಕೆ ಸಜ್ಜುಮಾಡಿಕೊಳ್ಳಿ" ಎಂದು ಹೇಳಿದನು.

ರಾಣಿಯು ಆಲೋಚಿಸಲಾರಂಭಿಸಿದಳು. ಬೋಪಟ್ಕರನು. ಮುಂದರಿಗೆ ದಾಮೋದರರಾಯನನ್ನು ಕರೆತರಲು ಹೇಳಿದನು. ಅವಳು ಅವನನ್ನು ಕರೆತರಲು ಹೊರಟುಹೋದಳು.

ರಾಣಿಯ ಕಣ್ಣಿನ ಮುಂದೆ ಒಂದು ಚಿತ್ರವು ಗೋಚರವಾಯಿತು.—"ಕುರು ಕ್ಷೇತ್ರದ ಮೈದಾನ. ಕೌರವ ಪಾಂಡವ ಸೈನ್ಯಗಳು ಒಂದಕ್ಕೊಂದು ಎದುರಾಗಿ ನಿಂತಿವೆ. ಅರ್ಜುನನು ಕೃಷ್ಣನನ್ನು ಕುರಿತು 'ಭಗವಾನ್, ನನ್ನ ಸಾಹಸವು ಕುಸಿದು ಬೀಳುತ್ತಿದೆ. ನನ್ನ ಸಾಮರ್ಥ್ಯವು ಕಂಪಿಸಿಹೋಯಿತು. ನಾನು ಅಸಮರ್ಥನಾದೆ. ಹೋರಾಡಲು ನನಗೆ ಇಷ್ಟವಿಲ್ಲ! ಭಗವಾನ್ ಶ್ರೀಕೃಷ್ಣನು ಅವನಿಗೆ ಬೋಧನೆಮಾಡಿದನು. ಅರ್ಜುನನು ಪುನಃ ತನ್ನ ಗಾಂಡೀವ ಧನುಸ್ಸನ್ನು ಹೆದೆ ಏರಿಸಿದನು."

ರಾಣಿಯ ಕಣ್ಣಿನಲ್ಲಿ ಒಂದು ಚಮತ್ಕಾರವಾದ ಹೊಳಪು ವ್ಯಕ್ತವಾಯಿತು. ಆ ವೇಳೆಗೆ ದಾಮೋದರರಾಯನು ಓಡಿಬಂದು ರಾಣಿಯ ತೊಡೆಯ ಮೇಲೆ ಕುಳಿತುಕೊಂಡನು.

ಗುಲ್‌ಮುಹಮ್ಮದ್ದನು "ಸರ್ಕಾರ್, ನಮ್ಮ ಎಲ್ಲಾ ಕೋಮಿನವರೂ ದೇಶಕ್ಕಾಗಿ ಸಾಯಲು ಸಿದ್ಧರಾಗಿದ್ದಾರೆ" ಎಂದು ಹೇಳಿದನು.

ರಾಣಿಯ ಎದ್ದು ನಾನಾ ಬೋಪಟ್ಕರನ ಪಾದಗಳನ್ನು ಮುಟ್ಟಿ "ಹಿಂದೆ ನಾನೊಂದು ದಿನ ನಿಮ್ಮ ರಾಜನೀತಿಯನ್ನು ಆಕ್ಷೇಪಿಸಿದ್ದೆ. ನನ್ನನ್ನು ಕ್ಷಮಿಸಿ, ನಾನಾಸಾಹೇಬ್." ಪುನಃ ಒಂದು ಕ್ಷಣದನಂತರ "ಸಹೋದರರೇ, ನನ್ನ ಈ ಕ್ಷಣಿಕವಾದ ದುರ್ಬಲತೆಯನ್ನು ಮರೆತು ಬಿಡಿ. ನಾನು ಯುದ್ಧ ಮಾಡುತ್ತೇನೆ. ಒಂದು ವೇಳೆ ನಾನೊಬ್ಬಳೇ, ಏಕಾಂಗಿಯಾಗಿ ಸಮಸ್ತ, ಆಂಗ್ಲೇಯರನ್ನು ಎದುರಿಸ ಬೇಕಾದರೂ ಎದುರಿಸುತ್ತೇನೆ." ಎಂದು ನುಡಿದಳು.

ಅಂತಹ ಹೀನ ಪರಿಸ್ಥಿತಿಯಲ್ಲಿಯೂ ಕೂಡ, ರಾಣಿಯ ಈ ಮಾತುಗಳನ್ನು ಕೇಳಿ ಕೋಟೆಯಲ್ಲಿದ್ದ ಸ್ತ್ರೀ ಪುರುಷರಲ್ಲಿ ಉತ್ಸಾಹವು ತುಂಬಿ ಬಂದಿತು.

ರಾಣಿಯು "ನೀವೆಲ್ಲರೂ ಏನಾದರೂ ಸ್ವಲ್ಪ ಉಪಹಾರವನ್ನು ಸ್ವೀಕರಿಸಿ. ಶಸ್ತ್ರಾಸ್ತ್ರಗಳನ್ನು ಹಿಡಿಯಲಾಗದಿದ್ದವರು ಗುಪ್ತಮಾರ್ಗದಿಂದ ಪಾರಾಗಿರಿ; ಉಳಿದವರು ನನ್ನೊಡನೆ ಉತ್ತರ ದ್ವಾರದ ಮೂಲಕ ಭಾಂಡೇರಿ ಹೆಬ್ಬಾಗಿಲಿನ ಬಳಿಯಾಗಿ ಕಾಲ್ಪಿಯ ಕಡೆಗೆ ನಡೆಯಿರಿ. ಆದರೆ ಭಾಂಡೇರಿ ಹೆಬ್ಬಾಗಿಲಿನ ಪ್ರಬಂಧವನ್ನು ಯಾರು ವಹಿಸಿಕೊಳ್ಳುವಿರಿ?" ಎಂದಳು.

ಭಾವು ಬಕ್ಷಿಯು ಆ ಕೆಲಸವನ್ನು ನಿರ್ವಹಿಸುವುದಾಗಿ ಒಪ್ಪಿಕೊಂಡನು. ಆತನ ಮನೆಯು ನೇಯ್ಗೆಯವರ ಮೊಹಲ್ಲೆ ಬಳಿಯೇ ಇದ್ದಿತು. ಆತನು ಅವರನ್ನು ಚೆನ್ನಾಗಿ

ಅರಿತಿದ್ದನು. * ಬಕ್ಷಿಯು ಗುಪ್ತ ಮಾರ್ಗದಿಂದ ಕೋಟೆಯ ಹೊರಗಡೆ ಬಂದನು. ರಾಣಿಯು ತನ್ನ ಸೇವಕ ಸೇವಕಿಯರಿಗೆಲ್ಲಾ ಪುರಸ್ಕಾರವನ್ನು ಕೊಟ್ಟು ಬೀಳ್ಕೊಂಡಳು. ಅವರು ಅವಳ ಪಾದಗಳಿಗೆ ಮಣಿಯುತ್ತಾ, ಗೋಳಾಡುತ್ತಾ ಹೊರಟುಹೋದರು. ನಾನಾ ಬೋಪಟ್ಕರನೂ ಹೊರಟುಹೋದನು.

"ನೀವು ನಿಮ್ಮ ಸ್ಥಳಕ್ಕೆ ಹೋಗಿ ಸೈನ್ಯ ಶೇಖರಣೆಮಾಡಿಕೊಂಡು ಕಾಲ್ಪಿಗೆ ಬಂದು ಸೇರಿ" ಎಂದು ಜವಹರಸಿಂಹನಿಗೆ ಆಜ್ಞೆಯಿತ್ತಳು.

"ನಾನು ನಿಮ್ಮನ್ನು ಸುರಕ್ಷಿತವಾದ ಸ್ಥಳಕ್ಕೆ ಸೇರಿಸಿದಲ್ಲದೆ ಹಿಂತಿರುಗೆನು. ಜೀವಮಾನದಲ್ಲಿ ಇದೊಂದು ಆಜ್ಞೆಯನ್ನು ಮಾತ್ರ ಉಲ್ಲಂಘಿಸಿರುವೆನು. ಆದುದರಿಂದ ಈ ಅಪರಾಧಕ್ಕಾಗಿ ಕ್ಷಮೆಯನ್ನೂ ಬೇಡುವೆನು" ಎಂದು ಜವಹರಸಿಂಹನು ವಿನಯದಿಂದ ಪ್ರಾರ್ಥಿಸಿದನು.

ರಾಣಿಯು ಸಮ್ಮತಿಸಿದಳು.

ಸ್ವಲ್ಪಕಾಲದನಂತರ ರಾಣಿಯೂ ಮತ್ತು ಮುಂದರಿಯೂ ಮಹದೇವನ ಮಂದಿರಕ್ಕೆ ಹೋಗಿ ವಂದಿಸಿ ಧ್ಯಾನಮಾಡಿದರು.

ಧ್ಯಾನ ಸಮಾಪ್ತಿಯಾದನಂತರ ಮುಂದರಿಯೊಡನೆ "ಆ ಮುತ್ತುಗದ ಮರವು ಈಗಲೂ ಪುಷ್ಪಭರಿತವಾಗಿದೆ. ಸಿಂಧೂರೋತ್ಸವದ ಮಾಲೆಗಳು ಈಗಲೂ ಅದರ ಮೇಲೆ ಹರಡಿರಬಹದು" ಎಂದು ರಾಣಿಯು ಹೇಳಿದಳು.

ಮುಂದರಿ—ಬಾಯಿಸಾಹೇಬ್, ಒಂದು ಸಲ ಅದನ್ನು ನೋಡಿಕೊಂಡು ಬರೋಣ.

ರಾಣಿ—ಅವಶ್ಯವಾಗಿ, ಅದು ಪ್ರತಿ ವರ್ಷವೂ ಪುಷ್ಪದಿಂದ ವಿಕಸಿತವಾಗುವುದು. ಝಾನ್ಸಿಯಲ್ಲಿ ಸಿಂಧೂರೋತ್ಸವವೂ ನಡೆಯುವುದು. ಝಾನ್ಸಿಯ ಸಿಂಧುರವು ಅಮರವಾಗಲಿ.

ಮುಂದರಿ—ಪುಷ್ಪಮಾಲೆಗಳು ಬಾಡಿಹೋಗಿವೆ.

ರಾಣಿ—ಅದರ ಆತ್ಮವಾದರೋ ಇನ್ನೂ ಚೈತನ್ಯಮಯವಾಗಿದೆ. ಇದು ಅದಕ್ಕೆ ಮುಡಿಸಿದ ಪುಷ್ಪ. ಅದು ಈ ಯುದ್ಧದಲ್ಲಿ ಬಲಿದಾನವಾಗಿದೆ.

ಇವರ ನಂತರ ಅವರಿಬ್ಬರೂ ಮಹಲ್ಲಿಗೆ ಹಿಂತಿರುಗಿದರು.

ಮೋರೋಪಂತ್ ತಾಂಬೆಯು ವಿಫುಲ ದ್ರವ್ಯ ಮತ್ತು ಒಡವೆ ವಸ್ತುಗಳನ್ನು

---

* ಬಕ್ಷಿಯ ಹವೇಲಿಯೆಂದು ಇಂದಿಗೂ ಆ ಮನೆಯು ಪ್ರಸಿದ್ಧವಾಗಿದೆ. ಅದು ಈಗ ಸೇಟ್‌ಚಿನದಾಸ್ ಕೋಜರವರ ಅಧೀನದಲ್ಲಿದೆ. ಅಮೇರಿಕ ಮಿಷನ್ನಿನ ಹಲವು ಸ್ತ್ರೀಯರು ಆ ಮನೆಯಲ್ಲಿ ಬಾಡಿಗೆಕೊಟ್ಟು ವಾಸಿಸುತ್ತಿದ್ದರು.

ಶೇಖರಿಸಿದ್ದನು; ಕಿಲ್ಲೆಯ ಉತ್ತರ ಭಾಗದ ಗಳಬದಿಯ ದ್ವಾರದ ಪಕ್ಕದಲ್ಲಿ ಒಂದು ಮನೆ, ಆನೆ ಕಠೋಠಿ ಮತ್ತು ಅಶ್ವಶಾಲೆಗಳಿದ್ದುವು. ಯುದ್ಧದ ಸಮಯದಲ್ಲಿ ದಿವಾಣ ಜವಹರಸಿಂಹ ಮತ್ತು ರಘುನಾಥಸಿಂಹರು ಆ ಮನೆಯಲ್ಲಿಯೇ ವಾಸಿಸುತ್ತಿದ್ದರು. ಮೋರೋಪಂತನು ಒಂದು ಆನೆಯ ಮೇಲೆ ನಗದು ನಾಣ್ಯ ಒಡವೆವಸ್ತುಗಳನ್ನು ಕಟ್ಟಿ ಹೇರಿಸಿದನು. ಅಲ್ಲದೆ ಜನರು ತಮ್ಮ ಸೊಂಟದಲ್ಲಿ ಹಿಡಿ ಹಿಡಿ ಭಂಗಾರದ ಮೊಹರುಗಳನ್ನು ಕಟ್ಟಿಕೊಂಡರು. ರಾಣಿಯು ಮತ್ತು ಮುಂದರಿ ಪುರುಷವೇಷವನ್ನು ಧರಿಸಿ ಕುದುರೆಯನ್ನು ಹತ್ತಿದರು.

ಆಗ ಕತ್ತಲು ಹೆಚ್ಚಾಗಿ ಆವರಿಸಿರಲಿಲ್ಲ. ಪೂರ್ವ ದಿಕ್ಕಿನಲ್ಲಿ ತಾರೆಯೊಂದು ಮೇಲಕ್ಕೆದ್ದು ವಿರಾಜಿಸುತ್ತಿದ್ದಿತು. ನಗರದ ಅಗ್ನಿಜ್ವಾಲೆಯಿಂದ ಅಂಧಕಾರವು ಅಷ್ಟು ಹೆಚ್ಚಾಗಿ ತೋರುತ್ತಿರಲಿಲ್ಲ. ಅಲ್ಲಲ್ಲಿ ತಾರೆಗಳು ಮಿನುಗುಟ್ಟುತ್ತಿದ್ದುವು. ನಗರವು ಜ್ವಾಲೆಯಿಂದ ಆಕ್ರಮಿತವಾಗಿದ್ದುದರಿಂದ ಫಟಫಟವೆಂಬ ಸಿಡಿಯುವ ಶಬ್ದವು ಕೇಳಿ ಬರುತ್ತಿದ್ದಿತು.

ರಾಣಿಯು ದಾಮೋದರರಾಯನನ್ನು ತನ್ನ ಸೊಂಟಕ್ಕೆ ಕಟ್ಟಿಕೊಂಡು, ತನ್ನ ತೇಜಸ್ವಿಯಾದ ಶ್ವೇತಾಶ್ವದ ಮೇಲೆ ಕುಳಿತು ಕಿಲ್ಲೆಯ ಉತ್ತರ ಭಾಗದಿಂದ ಹೊರ ಬಿದ್ದಳು. ಅವಳನ್ನು ಅನುಸರಿಸಿ ಪಠಾಣರೂ, ಮುಂದರಿಬಾಯಿ, ದಿವಾಣ ಜವಹರ ಸಿಂಹ, ರಘುನಾಥಸಿಂಹ ಇತ್ಯಾದಿ ಜನರೆಲ್ಲರೂ ಹೊರಟರು. ಹೆಬ್ಬಾಗಿಲಿನಿಂದ ಹೊರಬಿದ್ದೊಡನೆಯೇ ಅವಳು ಕಿಲ್ಲೆಗೂ ಝಾನ್ಸಿಯ ನಗರಕ್ಕೂ ತನ್ನ ವಂದನೆಗಳನ್ನ ರ್ಪಿಸಿದಳು. ವ್ಯಸನದಿಂದ ಅವಳ ಕಂಠ ರುದ್ಧಿತವಾಯಿತು. ಕಣ್ಣೀರು ಎಲ್ಲಿ ಉದುರುವುದೋ ಎಂಬ ಶಂಕೆಯಿಂದ ಮುಖವನ್ನು ಉತ್ತರ ದಿಕ್ಕಿಗೆ ತಿರುಗಿಸಿ ಕಿಲ್ಲೆಯಿಂದ ಕೆಳಗಿಳಿದು ಬಂದಳು.

ಮೋರೋಪಂತನ ಆನೆಯನ್ನು ಮಧ್ಯದಲ್ಲಿಟ್ಟುಕೊಂಡು ಸವಾರರು ಅದನ್ನು ಸುತ್ತುಗಟ್ಟಿದರು. ಸವಾರರ ಸಂಖ್ಯೆಯು ಹೆಚ್ಚಾಗಿರಲಿಲ್ಲ. ಇವರ ಬೆಂಬಲವಾಗಿ ಪದಾತಿ ಸೈನ್ಯವು ಬಿಚ್ಚುಗತ್ತಿಗಳೊಂದಿಗೆ ಹೊರಟಿತು.

ಈ ಠೋಲಿಯು ಠಂಕಸಾಲೆಯ ಪಶ್ಚಿಮಕ್ಕಿದ್ದ ಮಾರ್ಗವಾಗಿ ಭಾಂಡೇರಿ ಹೆಬ್ಬಾಗಿಲಿನ ಕಡೆಗೆ ಸರಿಯಿತು. ಕೊತ್ವಾಲಿಯನ್ನು ಸೇರುತ್ತಲೇ ಆಂಗ್ಲೇಯ ಸೈನ್ಯ ಮೊಖಾಬಿಲೆಯಾಯಿತು. ರಾಣಿಯು "ಹರ ಹರ ಮಹಾದೇವ್" ಎಂದು ಚೀತ್ಕಾರ ಮಾಡುತ್ತಾ ಮುಂದರಿಯೊಡನೆ ಆಂಗ್ಲೇಯ ಸೈನ್ಯವನ್ನು ಭೇದಿಸಿಕೊಂಡು ಹೊರ ಬಂದಳು. ಪಠಾಣರು ಶತ್ರುಗಳೊಡನೆ ವೀರಾವೇಶದಿಂದ ಕದನಮಾಡಿದರು. ಅನೇಕರು ಮಡಿದರು, ಉಳಿದವರು ಮುಂದರಿದರು.

ಅಲ್ಲಲ್ಲಿ ಉರಿಯುತ್ತಿದ್ದ ಮನೆಗಳಿಂದ ಅಗ್ನಿಜ್ವಾಲೆಯು ಉಜ್ವಲವಾಗಿ ಹೋಗು

ತ್ತಿದ್ದಿತು. ರಾಣಿಯೂ ಮತ್ತು ಅವಳ ಪರಿವಾರವೂ ದೃಢಗತಿಯಿಂದ ಭಾಂಡೇರಿ ಹೆಬ್ಬಾಗಿಲಿನ ಸಮೀಪಕ್ಕೆ ಬಂದರು. ಅಲ್ಲಿ ಬಕ್ಷಿಯು ನೆಯ್ಗಿಯವರನ್ನು ಆಕ್ರಮಣ ಮಾಡಿದ್ದ ಆಂಗ್ಲೇಯ ಸೈನ್ಯದ ತುಕುಡಿಯೊಂದರ ಜೊತೆಗೆ ಕತ್ತಿವರಸೆ ಯುದ್ಧದಲ್ಲಿ ಮಗ್ನನಾಗಿದ್ದನು. ಈ ಕಡೆಯಿಂದ ರಾಣಿಯೂ ಅವಳ ಪರಿವಾರವೂ ಬಂದು ಸೇರಿದರು. ಉರಿಯುತ್ತಿದ್ದ ಮನೆಗಳ ಬೆಳಕಿನಲ್ಲಿ ಕೆಲಕಾಲ ಘೋರಯುದ್ಧವು ನಡೆಯಿತು. ಬಕ್ಷಿಯು ಹೆಬ್ಬಾಗಿಲನ್ನು ತೆರೆದು ತನ್ನ ನೆಯ್ಗಿಯ ಕೋಮಿನ ಸೈನಿಕರೊಡನೆ ಆಂಗ್ಲೇಯರ ಮೇಲೆ ಬಿದ್ದನು. ಅವನಿಗೆ ಜೀವದ ಮೇಲೆ ಆಸೆಯಿದ್ದಂತೆ ತೋರಲಿಲ್ಲ. ಅವನಂತೆಯೇ ಪಠಾಣರೂ ನಿರ್ಮೋಹಿಗಳಾಗಿದ್ದರು. ಬಕ್ಷಿಯು ಹೆಬ್ಬಾಗಿಲಿನ ಬಳಿಯೇ ಮಡಿದು ಬಿದ್ದನು. ಆತನು ಸಾಯುವ ಮುನ್ನ ರಾಣಿಯನ್ನು ಒಂದು ಬಾರಿ ನೋಡಿ ಹರ ಹರ ಮಹದೇವ್! ಝಾನ್ಸಿಯ ರಾಣಿಗೆ ಜಯವಾಗಲಿ!" ಎಂದು ಘೋಷಣೆ ಮಾಡಿದನು. ಆತನ ಶರೀರ ಪತನವಾಗುವುದನ್ನು ನೋಡಿಯೂ ಕೂಡ ಅವನಿಗೆ ಧನ್ಯವಾದ ವನ್ನರ್ಪಿಸಲೂ ಅವಳಿಗೆ ಸಮಯ ದೊರೆಯಲಿಲ್ಲ.

ಕೆಲವು ಮಂದಿಯೊಡನೆ ರಾಣಿಯು ನಗರದಿಂದ ಪಾರಾದಳು. ಸಾಯದೇ ಉಳಿದ ಆಂಗ್ಲೇಯ ಸೈನ್ಯವು ಓಡಿಹೋಯಿತು. ನೆಯ್ಗಿಯವರು ಮತ್ತೆ ಭಾಂಡೇರಿ ಹೆಬ್ಬಾಗಿಲನ್ನು ಮುಚ್ಚಿ * ಭಾವು ಬಕ್ಷಿಯನ್ನು ಒಂದು ಉರಿಯುತ್ತಿದ್ದ ಮನೆಯ ಬೆಂಕಿ ಯಲ್ಲಿರಿಸಿ ಆತನ ಅಂತ್ಯ ಇಚ್ಛೆಯನ್ನು ಪೂರಯಿಸಿದರು.

ರಾಣಿಗೂ ಅವಳ ಅನುಚರರಿಗೂ ಕೋಟೆಯ ಹೊರಗಣ ಪ್ರದೇಶದ ಒಂದೊಂದು ಅಂಗುಲವೂ ಚಿರಪರಿಚಿತವಾಗಿದ್ದಿತು. ಆದುದರಿಂದ ಕತ್ತಲೆಯಲ್ಲಿಯೂ ಕೂಡ ಅವರು ಸುಲಭವಾಗಿ ಮುಂದರಿದು ಹೊರಟುಹೋದರು. ಮಾರ್ಗದಲ್ಲಿ ಅವರು ಮಾತುಕತೆಗಳನ್ನು ಅಡಿಧ್ವನಿಯಲ್ಲಿ ನಿಶ್ಯಬ್ದವಾಗಿ ನಡೆಸುತ್ತಿದ್ದರು. ಅಂಜನೀಗುಡ್ಡದ ಬಳಿ ಓರ್ಛಾ ಸೈನ್ಯದ ಪಹರೆ ಮತ್ತು ಆಂಗ್ಲೇಯರ ಛಾವಣಿಯ ಪಹರೆಯಿದ್ದಿತು. ಅಲ್ಲಿ ಅವರು ತಡೆಯಲ್ಪಟ್ಟು ಯುದ್ಧವು ನಡೆಯಿತು. ಅಲ್ಲಿಂದ ಮುಂದೆ ರಾಣಿಯ ಜೊತೆಯಲ್ಲಿ ಮುಂದರಿಯೂ ಮತ್ತು ಜೀವದಿಂದುಳಿದ ಹತ್ತುಹನ್ನೆರಡು ಮಂದಿ ಅನುಚರರೂ ಹೊರಟರು.

ಮುಂದೆ ನಿಬಿಡವಾದ ಮಾರ್ಗ, ಘೋರಾಂಧಕಾರ, ಕ್ರಿಮಿಕೀಟಗಳ ಝೇಂಕಾರ ಮತ್ತು ಇವೆಲ್ಲದರ ಮೇಲೆ ಕುದುರೆಗಳ ಖುರ ಪುಟಧ್ವನಿ. ಎಲ್ಲೆಲ್ಲೂ ನಿಸ್ತಬ್ಧತೆಯು ಕವಿದಿದ್ದಿತು. ಹಿಂದೆ ಝಾನ್ಸಿಯಲ್ಲಿ ಅಗ್ನಿಯು ದಹಿಸುತ್ತಿದ್ದು ರೌರವರವವು ಕೇಳಿ

---

* ಈ ಹೆಬ್ಬಾಗಿಲು ೮೫ ವರ್ಷಗಳು ಮುಚ್ಚಿದ್ದು ಸನ್ ೧೮೪೩ ನೇ ಇಸವಿ ಚಳಿಗಾಲದಲ್ಲಿ ತೆರೆಯಿತು.

ಬರುತ್ತಿದ್ದಿತು. ಮುಂದೆ ಕಗ್ಗತ್ತಲಿನಿಂದ ಅರಣ್ಯ ಮತ್ತು ಗಡಮುವುವಿನ ಬೆಟ್ಟಗಳು ಆವರಿಸಲ್ಪಟ್ಟು ಮುಚ್ಚಿಹೋದಂತೆ ಕಾಣಿಸುತ್ತಿದ್ದವು. ಪಕ್ಷಿಗಳು ಮರಗಳ ಮೇಲೆ ಪಟಪಟನೆ ರೆಕ್ಕೆಗಳನ್ನು ಬಡಿದು ಹಾರಿ ಕುದುರೆಗಳ ಕಡೆ ಆಶ್ಚರ್ಯದಿಂದ ನೋಡಲಾರಂಭಿಸಿದುವು. ಕುದುರೆಗಳನ್ನು ವೇಗದಿಂದ ಓಡಿಸುತ್ತಿದ್ದುದರಿಂದ ಅವು ಆಗಾಗ ಮುಗ್ಗರಿಸುತ್ತಿದ್ದವು. ಮುಂದಿನ ಮಾರ್ಗವು ಅಂಧಕಾರಮಯವಾಗಿಯೂ ಇದ್ದಿತು. ಹಾಗೂ ಹೀಗೂ ಅವರು ಆರಿ ಎಂಬ ಹೆಸರಿನ ಗ್ರಾಮವನ್ನು ದಾಟಿ ಮುಂದೆ ಹೋದರು. ಮುಂದೆ ಪಹುಜ್ ನದಿಯು ಕಾಣಿಸಿತು. ಅವರೆಲ್ಲರೂ ಅಲ್ಲಿ ನೀರಡಿಕೆಯನ್ನು ತೀರಿಸಿಕೊಂಡು ಮುಂದೆ ಹಲವು ಸಲ ವೇಗವಾಗಿಯೂ ಕೆಲವು ಬಾರಿ ಮಂದಗತಿಯಿಂದಲೂ ಮುಂದುವರಿಯುತ್ತಾ ಹತ್ತು ಹನ್ನೆರಡು ಮೈಲಿ ಪ್ರಯಾಣ ಮಾಡಿದನಂತರ ಕೆಲವು ಕ್ಷಣ ದಣಿವಾರಿಸಿಕೊಂಡರು.

ರಾಣಿಯು ರಘುನಾಥಸಿಂಹ ಮತ್ತು ಜವಹರಸಿಂಹರೊಂದಿಗೆ “ಈಗ ನೀವು ಹಿಂದಿರುಗಿ ಹೋಗಿ ಸೈನ್ಯವನ್ನು ಶೇಖರಿಸಿ ಕಾಲ್ಪಿಯಲ್ಲಿ ನನ್ನ ಬಳಿ ಬಂದು ಸೇರಿ” ಎಂದು ಹೇಳಿದಳು.

ರಘುನಾಥಸಿಂಹನು ಒಡನೆಯೇ “ಈ ಕಾರ್ಯವನ್ನು ದಿವಾನ್ ಜವಹರಸಿಂಹರು ಚೆನ್ನಾಗಿ ಮಾಡಬಲ್ಲರು. ನಾನಾದರೊ ನಿಮ್ಮೊಂದಿಗೆ ಬರುವೆನು” ಎಂದನು.

ರಾಣಿಯು ಸಮ್ಮತಿಸಿದಳು.

ಜವಹರಸಿಂಹನು ಅವಳ ಪಾದಗಳಿಗೆರಗಿ ಕಟೇಲಿಯ ಕಡೆಗೆ ಹೊರಟು ಹೋದನು.

ರಾಣಿ ಮತ್ತು ಅವಳ ಅನುಚರರು ಮುಂದುವರೆದರು. ಇವರಲ್ಲಿ ಗುಲ್‌ಮಹಮ್ಮದ್ದನು ಮತ್ತು ಅವನ ಕೆಲವು ಪಠಾಣರೂ ಇದ್ದರು.

ಜನರಲ್ ರೋಜನಿಗೆ ರಾಣಿಯು ಕೋಟೆಯಿಂದ ಹೊರಗೆ ಹೋದ ಸಮಾಚಾರವು ಬಹಳ ಜಾಗ್ರತೆಯಾಗಿ ತಿಳಿದುಹೋಯಿತು. ಆತನು ಒಡನೆಯೆ ಲೆಫ್ಟಿನೆಂಟ್ ಬೇಕರ್ ಎಂಬ ಅಧಿಕಾರಿಯ ವಶಕ್ಕೆ ಕೆಲವು ಆಂಗ್ಲೇಯ ಮತ್ತು ಹೈದರಾಬಾದು ನಿಜಾಮನ ಸೈನ್ಯದ ಒಂದು ತುಕ್ಕಡಿಯನ್ನು ಕೊಟ್ಟು ರಾಣಿಯನ್ನು ಹಿಂಬಾಲಿಸುವಂತೆ ಕಳುಹಿದನು.

ಮೋರೋಪಂತನು ಭಾಂಡೇರಿ ಹೆಬ್ಬಾಗಿಲನ್ನು ದಾಟಿ ಅಂಜನೀಗುಡ್ಡದವರೆಗೆ ಬಂದನು. ಆದರೆ ಇಲ್ಲಿ ಯುದ್ಧವು ಕೈಹತ್ತಿತು. ಆತನಿಗೆ ಆನೆಯು ಬಹಳ ಕಷ್ಟಕ್ಕೆ ಗುರಿಯಾಗುವುದೆಂದು ತಿಳಿದುಹೋಯಿತು. ಆತನು ಆನೆಯನ್ನು ದಾತಿಯಾ ಕಡೆಗೆ ತಿರುಗಿಸಿದನು. ಮತ್ತು ಎಷ್ಟು ಜಾಗ್ರತೆಯಾಗಿ ಹೋಗಬಹುದೋ ಅಷ್ಟು ತ್ವರೆಯಿಂದ ಓಡಿಸಿದನು. ಕೆಲವು ಆಂಗ್ಲೇಯ ಸವಾರರು ಅವನನ್ನು ಹಿಂಬಾಲಿಸಿದರು.

ಆನೆಯ ತೊಡೆಗೆ ಒಬ್ಬ ಸವಾರನ ಕತ್ತಿಯು ತಗುಲಿ ಗಾಯವಾಯಿತು. ಆದರೂ ಅದನ್ನು ಮುಂದುವರಿಸಿ ಮುಂಜಾನೆಯ ಹೊತ್ತಿಗೆ ದಾತಿಯಾವನ್ನು ಸೇರಿ ಒಂದು ಗುಡಾರದಲ್ಲಿ ನಿಂತನು. ಆದರೆ ಆನೆಯನ್ನು ಮುಚ್ಚಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ರಾಜ್ಯಾಧಿಕಾರಿಗಳಿಗೆ ತಿಳಿದು ಹೋಗಿ ಜವಾಹಿರಿಯನ್ನು ವಶಪಡಿಸಿಕೊಂಡು ಮೋರೋ ಪಂತನನ್ನು ಬಂಧಿಸಿ ಝಾನ್ಸಿಗೆ ಕಳುಹಿಸಿದರು.

ಜನರಲ್ ರೋಜನು ಮಧ್ಯಾಹ್ನ ಎರಡು ಘಂಟೆಯ ಸಮಯದಲ್ಲಿ ಉರಿಯುತ್ತಿದ್ದ ಮಹಲ್ಲು ಮತ್ತು ಭಸ್ಮೀಭೂತವಾದ ಪುಸ್ತಕಾಲಯಗಳ ನಡುವೆ ಮೋರೋ ಪಂತನನ್ನು ಗಲ್ಲಿಗೇರಿಸಿದನು.

## ೭೫

ಝಲಕಾರಿಯು ರಾಣಿಯು ಭಾ ಂ ಡೇ ೯ ರಿ ಹೆಬ್ಬಾಗಿಲಿನಿಂದ ತಪ್ಪಿಸಿಕೊಂಡು ಹೋದಳೆಂದು ತಿಳಿದು, ನೆಮ್ಮದಿಯಿಂದ ಮನೆಯ ಒಂದು ಮೂಲೆಯಲ್ಲಿ ಕೆಲಹೊತ್ತು ಮಲಗಿದಳು. ಪೂರಣನು ಹೊರಗಡೆಯಿಂದ ಬಂದು "ಇಲ್ಲಿಂದ ಓಡಿ ಹೋಗಬೇಕು" ಎಂದನು.

ಝಲಕಾರಿ—ನೀನು ಹೋಗು ನಾನು ಇಲ್ಲಿಯೇ ಇರುತ್ತೇನೆ. ಆಂಗ್ಲೇಯರು....

ಪೂರಣ್—ಇಲ್ಲಿಂದ ಹೊರಡು ಎಂದು ನಾನು ಹೇಳುತ್ತಿದ್ದೇನೆ. ಇಲ್ಲದಿದ್ದರೆ ನೀನೂ ಸಾಯುತ್ತೀಯೇ ನಾನೂ ಸಾಯುತ್ತೇನೆ.

ಝಲಕಾರಿ—ನೋಡು, ನೀನು ನನ್ನೊಂದಿಗೆ ಹಠಮಾಡಬೇಡ. ನೀನು ಬೇಕಾದರೆ ಹೋಗು. ನಾನು ಬಾಲಾಜಿಯಾಣೆಗೂ ಮನೆ ಬಿಡುವುದಿಲ್ಲ.

ಪೂರಣನಿಗೆ ಅವಳ ಹಠಸ್ವಭಾವವು ತಿಳಿದಿದ್ದಿತು. ಅವನೊಂದು ಲೋಟ ನೀರನ್ನು ತೆಗೆದುಕೊಂಡು ಮುರಿದು ಬಿದ್ದಿದ್ದ ಭಗ್ನಾವಶೇಷದಲ್ಲಿ ಹೋಗಿ ಬೈತಿಟ್ಟು ಕೊಂಡನು.

ಸ್ವಲ್ಪಹೊತ್ತಿನಲ್ಲಿಯೇ ಝಲಕಾರಿಗೆ ತನ್ನ ಮನೆಯ ಬಾಗಿಲಲ್ಲಿ ಕುದುರೆಯ ಗೊರಸಿನ ಶಬ್ದವು ಕೇಳಿಬಂದಿತು. ಬೆಚ್ಚಿಬಿದ್ದು ನೋಡಿದಳು. ಸವಾರನಿಲ್ಲದ ಉತ್ತಮಾಶ್ವವೊಂದು ಜೀನು ಲಗಾಮುಗಳ ಸಹಿತ ಬಂದಿದ್ದಿತು. ಅದರ ಜೀನಿನಿಂದ ಅದು ಝಾನ್ಸಿಯ ಸೈನ್ಯಕ್ಕೆ ಸೇರಿದ್ದೆಂದು ತಿಳಿದು ಬಂದಿತು. ಝಲಕಾರಿಗೆ ಕುದುರೆಯ ಸವಾರನು ಮೃತನಾಗಿ ಅದು ಓಡಿ ಅಲ್ಲಿಗೆ ಬಂದಿದೆಯೆಂದು ತಿಳಿಯಿತು.

ಝಲಕಾರಿಯು ಬಾಗಿಲು ತೆರೆದು ಕುದುರೆಯನ್ನು ಹಿಡಿದುಕೊಂಡು ಮನೆಯ ಬಳಿಯಿದ್ದ ಒಂದು ಮರಕ್ಕೆ ಕಟ್ಟಿಹಾಕಿ ಒಳಗೆ ಹೋದಳು.

ಝುಲಕಾರಿಯು ತನ್ನ ಶೃಂಗಾರವನ್ನು ಪ್ರಾರಂಭಿಸಿ ಸರ್ವೋತ್ತಮವಾದ ಬಟ್ಟೆಗಳನ್ನು ರಾಣಿ ಲಕ್ಷ್ಮೀಬಾಯಿಯು ಧರಿಸುವ ರೀತಿಯಲ್ಲೇ ಧರಿಸಿದಳು. ಕುತ್ತಿಗೆಯಲ್ಲಿ ಧರಿಸಲು ಸರಿಯಾದ ಹಾರವಿರಲಿಲ್ಲ, ಆದರೆ ಮಣಿಯ ಮಾಲೆಯೊಂದಿದ್ದು ಅದನ್ನು ಧರಿಸಿ ಉದಯಕಾಲವನ್ನು ನಿರೀಕ್ಷಿಸುತ್ತಾ ಕುಳಿತಳು.

ಬೆಳಗಾಗುವ ಮುನ್ನವೇ ಮುಖತೊಳೆದುಕೊಂಡು ಸಿದ್ಧಳಾದಳು. ಮಬ್ಬು ತಿಳಿದನಂತರ ಕುದುರೆಯ ಮೇಲೆ ಕುಳಿತು ಠೀವಿಯಿಂದ ಆಂಗ್ಲೇಯರ ಛಾವನಿಯ ಕಡೆಗೆ ಹೋದಳು. ಕೈಯಲ್ಲಿ ಯಾವ ವಿಧವಾದ ಆಯುಧವಿರಲಿಲ್ಲ. ಆದರೆ ಕುಪ್ಪುಸದಲ್ಲಿ ಚೂರಿಯೊಂದನ್ನು ಮಾತ್ರವಿಟ್ಟಿದ್ದಳು.

ಸ್ವಲ್ಪ ದೂರದಲ್ಲಿಯೇ ಆಂಗ್ಲೇಯ ಪಹರೆಯವರು ಅವಳನ್ನು ತಡೆದು ನಿಲ್ಲಿಸಿದರು. ಝುಲಕಾರಿಯು ತನ್ನ ಭಾಷೆಯು ಗ್ರಾಮ್ಯವೆಂದು ಅರಿತಿದ್ದಳು. ಆದರೆ ಆಂಗ್ಲೇಯರ ಮುಂದೆ ಹೇಗೆ ಮಾತನಾಡಿದರೂ ಅದರಲ್ಲಿ ಹಾನಿಯಿಲ್ಲವೆಂಬುದೂ ಅವಳಿಗೆ ತಿಳಿದಿದ್ದಿತು.

ಪಹರೆಯವರು ತಡೆದು ನಿಲ್ಲಿಸಿದಾಗ ಝುಲಕಾರಿಯು ಅವರಿಗೆ "ನಾನು ನಿಮ್ಮ ಜಂಡೇಲನ ಬಳಿಗೆ ಹೋಗುತ್ತಿದ್ದೇನೆ" ಎಂದಳು.

ಹಿಂದೂಸ್ಥಾನೀಯರಾದರೂ ಅವಳ ಈ ಭಾಷೆಯನ್ನು ಕೇಳಿದ್ದರೆ ನಗದೇ ಇರುತ್ತಿರಲಿಲ್ಲ.

ಸ್ವಲ್ಪ ಹಿಂದೀ ಭಾಷೆಯನ್ನು ತಿಳಿದಿದ್ದ ಆಂಗ್ಲೇಯನೊಬ್ಬನು "ನೀನು ಯಾರು ?" ಎಂದು ಪ್ರಶ್ನಿಸಿದನು.

ಝುಲಕಾರಿಯು ಗಂಭೀರವಾಣಿಯಿಂದ "ಝಾನ್ಸಿಯ ರಾಣಿ ಲಕ್ಷ್ಮೀಬಾಯಿ" ಎಂದು ಉತ್ತರವಿತ್ತಳು.

ಆಂಗ್ಲೇಯರು ಅವಳನ್ನು ಸುತ್ತುವರೆದು ಒಡನೆಯೇ ತಮ್ಮ ತಮ್ಮಲ್ಲಿಯೇ ಚರ್ಚೆ ಮಾಡಿಕೊಂಡರು.

"ಜನರಲ್ ರೋಜನ ಬಳಿಗೆ ತಡಮಾಡದೆ ಕರೆದೊಯ್ಯಬೇಕು" ಎಂದು ನಿರ್ಧರಿಸಿ ಅವಳನ್ನು ಸುತ್ತುವರಿದು ಕೊಂಡೇ ಆಂಗ್ಲೇಯರು ಅವಳನ್ನು ಛಾವನಿಯ ಕಡೆಗೆ ಕರೆದುಕೊಂಡು ಹೋದರು.

ನಗರದಲ್ಲಿದ್ದ ಆಂಗ್ಲೇಯರಿಗೆಲ್ಲಾ ರಾಣಿಯು ಸೆರೆಸಿಕ್ಕಿದಳೆಂಬ ವರ್ತಮಾನವು ಹರಡಿತು. ಆಂಗ್ಲೇಯ ಸಿಪಾಯಿಗಳು ಸಂತೋಷದಿಂದ ಮತಿಗೆಟ್ಟರು. ಅವರಿಗಿಂತ ಹೆಚ್ಚಾಗಿ ಹುಚ್ಚಿಯಾದವಳು ಝುಲಕಾರಿ.

ಅವಳಿಗೆ ತನ್ನ ಬಂಧನ, ವಿಚಾರಣೆ, ಹತ್ಯೆ ಮುಂತಾದವುಗಳಲ್ಲಿ ಆಂಗ್ಲೇಯರು ಎಷ್ಟು ಕಾಲವಿಳಂಬ ಮಾಡುವರೋ ರಾಣಿಗೆ ಅಷ್ಟು ಕಾಲಾವಕಾಶ ದೊರಕಿ ಬಹಳ

ದೂರ ಪಾರಾಗಿ ಹೋಗುವಳು ಎಂಬ ವಿಶ್ವಾಸವಿದ್ದಿತು.

ಝುಲಕಾರಿಯನ್ನು ಜನರಲ್ ರೋಜನ ಮುಂದೆ ಕರೆದುಕೊಂಡು ಹೋದರು. ಆದರೆ ಅವಳು ಕುದುರೆಯಿಂದ ಇಳಿಯದೇ ರಾಣಿಯಂತೆ ವರ್ತಿಸಿದಳು; ಅದೇ ದರ್ಪ. ಜನರಲ್ ರೋಜನೂ ಸ್ವಲ್ಪಕಾಲ ಮೋಸಕ್ಕೆ ಗುರಿಯಾದನು.

ಮುಖವೇನೋ ಅಷ್ಟೇ ಸೌಂದರ್ಯವಾಗಿದ್ದಿತು; ಆದರೆ ವರ್ಣಮಾತ್ರ ಅಷ್ಟು ಗೌರವವಾಗಿರಲಿಲ್ಲ.

ರೋಜನು "How handsome though dark and terrible." (ಬಲಿಷ್ಠಳೂ ಮತ್ತು ಕಪ್ಪು ವರ್ಣದವಳಾಗಿದ್ದರೂ ಎಂತಹ ಸೌಂದರ್ಯವತಿ) ಎಂದು ಸ್ಟುವರ್ಟನನ್ನು ಕುರಿತು ಹೇಳಿದನು.

ಸ್ಟುವರ್ಟನು "ಲೆಫ್ಟಿನೆಂಟ್ ಬೋಕರನನ್ನು ವೃಥಾ ಕಳುಹಿಸಿದಂತೆ ಆಯಿತಲ್ಲಾ" ಎಂದನು.

ಆದರೆ ಛಾವನಿಯಲ್ಲಿ ದುಲ್ಹಾಜುವಿದ್ದು ರಾಣಿಯು ಬಂದಿರುವಳೆಂಬ ಸುದ್ದಿಯನ್ನು ಕೇಳಿ ಅಲ್ಲಿಗೆ ಓಡಿಬಂದು ಅವಳನ್ನು ಸೂಕ್ಷ್ಮರೀತಿಯಿಂದ ನೋಡಿದನು.

ನಂತರ ಅವನು ರೋಜನ ಬಳಿಗೆ ಹೋಗಿ "ಇದು ಮಹಾರಾಣಿಯಲ್ಲ ಜನರಲ್ ಸಾಹೇಬರೇ, ರಾಣಿಯು ಈ ಪ್ರಕಾರ ಎಲ್ಲರ ಮುಂದೆಯೂ ಬರುವುದಿಲ್ಲ. ಇವಳು ನೇಯ್ಗೆಯವರ ಝುಲಕಾರಿ" ಎಂದು ಹೇಳಿದನು.

ಝುಲಕಾರಿಯು ದುಲ್ಹಾಜುವನ್ನು ಗುರುತಿಸಿದಳು. ಅವಳ ಕ್ರೋಧವು ಉಕ್ಕಿ ಬಂದು ಅವಳ ಅಭಿನಯವನ್ನು ಮರೆತು ಕೃದ್ಧಸ್ವರದಿಂದ "ಪಾಪಿ! ಠಾಕೂರನೆಂದು ಹೇಗೆ ಎನ್ನಿಸಿಕೊಂಡೆ? ಗುಲಾಮ! ದ್ರೋಹಿ! ಎಂದು ಕರೆಸಿಕೊಳ್ಳಬೇಕಾಗಿದ್ದಿತು" ಎಂದು ಹೇಳಿದಳು.

ದುಲ್ಹಾಜುವು ಆ ಮಾತನ್ನು ಕೇಳಿ ದೊಪ್ಪನೆ ಕೆಳಗೆ ಬಿದ್ದನು.

ರೋಜನಿಗೆ ಝುಲಕಾರಿಯ ವಾಸ್ತವವು ತಿಳಿದುಹೋಯಿತು.

"ಇವಳಿಗೆ ಹುಚ್ಚು ಹಿಡಿದಿದೆ" ಎಂದು ಹೇಳಿ ಝುಲಕಾರಿಯನ್ನು ಕುದುರೆಯಿಂದ ಕೆಳಗಿಳಿಸಿದನು.

ರೋಜ್—ನೀನು ರಾಣಿಯಲ್ಲ, ನೇಯ್ಗೆಯವರ ಝುಲಕಾರಿ. ನಿನ್ನನ್ನು ಬಂದೂಕಿನಿಂದ ಸುಡಲಾಗುವುದು.

ಝುಲಕಾರಿಯು ನಿರ್ಭಯಳಾಗಿ "ಹೊಡೆಯುವುದಾದರೆ ಹೊಡೆ. ಸಾಯಲು ನಾನು ಹೆದರುವುದಿಲ್ಲ. ಇಷ್ಟು ಜನ ಮಡಿದ ಸಿಪಾಯಿಗಳೊಂದಿಗೆ ನಾನೂ ಒಬ್ಬಳು" ಎಂದು ಉತ್ತರವಿತ್ತಳು.

ರೋಜನು ಝುಲಕಾರಿಯ ಈ ಮತಿಗೆಟ್ಟ ಕೆಲಸಕ್ಕೆ ಕಾರಣವೇನೆಂದು ಯೋಚಿಸ

ಲಾರಂಭಿಸಿದನು.

ಕಾರಣವು ತಿಳಿದನಂತರ ದಂಗು ಬಡೆದು ಹೋದನು.

ಸ್ಟುವರ್ಟ್—ಅವಳು ಹುಚ್ಚಿ.

ರೋಜನು ತಲೆಯನ್ನಲ್ಲಾಡಿಸುತ್ತಾ "No Stuart, if one percent of Indian women become so mad as this girl we have to leave all that we have in this country". (ಇಲ್ಲ ಸ್ಟುವರ್ಟ್, ಭಾರತೀಯ ಸ್ತ್ರೀಯರಲ್ಲಿ ಸೇಕಡಾ ಒಬ್ಬಳು ಈ ಹುಡುಗಿಯಂತೆ ಹುಚ್ಚಳಾದರೆ ನಾವು ಈ ದೇಶದಲ್ಲಿ ನಮ್ಮದಾಗಿರುವುದನ್ನೆಲ್ಲವನ್ನೂ ಬಿಟ್ಟು ಓಡಿ ಹೋಗಬೇಕಾಗುವುದು) ಎಂದು ಹೇಳಿದನು.

ಸ್ಟುವರ್ಟನಿಗೆ ಎಲ್ಲವೂ ಅರ್ಥವಾಯಿತು.

ರೋಜನು "ಈ ಸ್ತ್ರೀಯು ನಮ್ಮನ್ನು ತನ್ನ ಮೋಸಜಾಲದಲ್ಲಿ ಬೀಳಿಸಿ ರಾಣಿಯು ಓಡಿ ಹೋಗುವುದಕ್ಕೆ ಸಮಯ ಕೊಡಲು ಈ ಆಟವನ್ನು ಹೂಡಿರುವಳು. ಆದರೆ ಬೋಕರನೇನೋ ರಾಣಿಯನ್ನು ಅನುಸರಿಸಿ ಹೋಗಿದ್ದಾನೆ. ಆತನು ಇವಳ ಮಾಯಾಜಾಲದಲ್ಲಿ ಸಿಕ್ಕದೇ ಮುಂದೆ ಹೋಗಿದ್ದಾನೆಂಬ ಆಶೆಯಿದೆ" ಎಂದನು.

ಜನರಲ್ ರೋಜನು ಝಲಕಾರಿಯನ್ನು ಹಿಂಸಿಸಲಿಲ್ಲ. ಅವಳನ್ನು ಒಂದು ವಾರ ಬಂಧನದಲ್ಲಿಟ್ಟು ನಂತರ ಬಿಡುಗಡೆ ಮಾಡಿದನು.

## ೭೬

ಬೆಳಗಾಗುವ ವೇಳೆಗೆ ರಾಣಿಯು ಭಾಂಡೇರಿನ ಹತ್ತಿರ ಹರಿಯುತ್ತಿರುವ ಪಹುಜ್ ನದಿಯನ್ನು ಸೇರಿದಳು. ಜಾಗ್ರತೆಯಾಗಿ ಸ್ನಾನಪಾನಗಳನ್ನು ಮುಗಿಸಿಕೊಂಡು ದಾಮೋದರರಾಯನಿಗೆ ಅಲ್ಪಾಹಾರವನ್ನು ಕೊಟ್ಟಳು. ಅವಳ ಸಂಗಡಿಗರೂ ಜಲಪಾನ ಮಾಡಿದರು. ರಾಣಿಯೂ ಕೆಲವು ಬೊಗಸ ನೀರನ್ನು ಕುಡಿದಳು. ಝಾನ್ಸಿಯ ದುರ್ದಶೆ ಮತ್ತು ತನ್ನ ಪ್ರೀತಿಪಾತ್ರರಾದ ಅನೇಕರು ಮಡಿದುಹೋದ ಕಾರಣ ಅವಳ ಹೃದಯವು ತುಂಬಿಬಂದು ಊಟದ ಹೆಸರೇ ಅಸಹನೀಯವಾಯಿತು.

ಕಡೆಯ ಬೊಗಸೆ ನೀರನ್ನು ಕುಡಿಯುತ್ತಿದ್ದಂತೆಯೇ ಝಾನ್ಸಿಯ ಕಡೆಯಿಂದ ಧೂಳೆದ್ದು ಬರುತ್ತಿರುವುದು ಕಾಣಿಸಿತು. ತನ್ನನ್ನು ಅನುಸರಿಸಿ ಶತ್ರುಗಳು ಬರುತ್ತಿರುವರೆಂದು ರಾಣಿಗೆ ಅರಿವಾಯಿತು.

ಗುಲ್‌ಮಹಮ್ಮದ್ದನು ದುರ್ಬೀನಿನಿಂದ ನೋಡಿ "ಈ ಆಂಗ್ಲೇಯರು ಇಲ್ಲಿಯೂ ನಮ್ಮನ್ನು ಅಟ್ಟಿಸಿಕೊಂಡು ಬರುತ್ತಿದ್ದಾರೆ. ಮಹಾರಾಣಿ, ನೀವು ಮುಂದೆ ಸಾಗಿ,

ನಾವು ಇವರನ್ನು ನೋಡಿಕೊಳ್ಳುವೆವು” ಎಂದನು.

ರಾಣಿಯು “ಇಲ್ಲ” ಎಂದು ಹೇಳಿ ಒಡನೆಯೆ ದಾಮೋದರರಾಯನನ್ನು ಬೆನ್ನಿಗೆ ಕಟ್ಟಿಕೊಂಡು ಕುದುರೆಯನ್ನು ಹತ್ತಿದಳು.

“ಈ ರೀತಿಯಾಗಿ ನಾವುಗಳು ವೃಥಾ ಸತ್ತು ಮಡಿದುಹೋಗುತ್ತೇವೆ. ಇಲ್ಲೇ ಹತ್ತಿರದಲ್ಲಿ ಚಿಕ್ಕ ಚಿಕ್ಕ ಗುಡ್ಡಗಳಿವೆ. ಇವುಗಳ ಮರೆಯಲ್ಲಿ ನಿಂತುಕೊಳ್ಳೋಣ. ವೈರಿಯ ಪಡೆಯು ಹತ್ತಿರ ಬರುತ್ತಲೇ ಗುಂಡು ಹಾರಿಸೋಣ. ಅವರು ಬಂದೂಕ ಅಥವಾ ಪಿಸ್ತೂಲಿನಿಂದ ಉತ್ತರ ಕೊಡುವರು. ನಂತರ ಒಡನೆಯೇ ಕತ್ತಿಯಿಂದ ಆಕ್ರಮಣ ಮಾಡಬೇಕು” ಎಂದು ರಾಣಿಯು ಉಪದೇಶವಿತ್ತಳು.

ಗುಲ್‌ಮಹಮ್ಮದ್ದನಿಗೆ ರಾಣಿಯು ಎಷ್ಟು ದೊಡ್ಡ ಪಡೆಯನ್ನಾದರೂ ಸ್ವಲ್ಪ ಮಂದಿಯನ್ನಿಟ್ಟುಕೊಂಡೇ ಎದುರಿಸಬಲ್ಲಳು ಎಂಬುದು ವ್ಯಕ್ತವಾಯಿತು.

ರಾಣಿಯ ಅನುಚರರು ಅವಳ ಆದೇಶದಂತೆಯೇ ಕಾರ್ಯಗತರಾದರು.

ಲೆಫ್ಟಿನೆಂಟ್ ಬೋಕರನ ಪಡೆಯು ಸವಾರರ ಪಡೆಯಾಗಿದ್ದಿತು. ಅತಿವೇಗದಿಂದ ಅವರು ಕುದುರೆಗಳನ್ನು ಓಡಿಸಿಕೊಂಡು ಬರುತ್ತಿದ್ದರು. ಪಿಸ್ತೂಲಿನ ಆಯದಲ್ಲಿ ಬಂದೊಡನೆಯೇ ರಾಣಿಯ ತುಕ್ಕಡಿಯು ಅವರ ಮೇಲೆ ಗುಂಡುಹಾರಿಸಿತು. ಇದರಿಂದ ಭಯಂಕರ ಪ್ರಭಾವವಾಯಿತು. ಬೋಕರನ ದಳದಲ್ಲಿ ಪಿಸ್ತೂಲು ಬಂದೂಕಗಳೇನೋ ಇದ್ದವು. ಆದರೆ ಬಂದೂಕಗಳು ಒರೆಯಲ್ಲಿದ್ದವು. ಗಾಬರಿಗೊಂಡು ಅವರು ತಮ್ಮ ಪಿಸ್ತೂಲುಗಳನ್ನು ಹಾರಿಸಿ ಅವುಗಳನ್ನು ಖಾಲಿಮಾಡಿದರು. ರಾಣಿಯು ತಕ್ಷಣವೇ ಖಡ್ಗಪ್ರಯೋಗವನ್ನು ಪ್ರಾರಂಭಿಸಿದಳು. ಆಂಗ್ಲೇಯರ ಪಡೆಯ ಇಬ್ಬರು ಮೂವರು ಸವಾರರೊಂದಿಗೆ ರಾಣಿಯ ಪ್ರತಿಯೊಬ್ಬ ಅನುಚರನೂ ಕಾದಾಡಬೇಕಾಯಿತು. ಒಬ್ಬ ಸವಾರನನ್ನು ಕುದುರೆಯ ಸಮೇತ ರಾಣಿಯು ತನ್ನ ಚಾಕಚಕ್ಯತೆಯಿಂದ ಸೀಳಬಡಿದಳು. ಬೋಕರನು ರಾಣಿಯ ಮೇಲೆ ಕುದುರೆಯನ್ನು ಜೋರಾಗಿ ಓಡಿಸಿಕೊಂಡು ಹೋಗಿ ತಾಗಿಸಿದನು. ರಾಣಿಯಾದರೋ ಅತ್ಯಂತ ಚತುರತೆಯಿಂದ ತನ್ನ ಕುದುರೆಯನ್ನು ಹಿಂದುಹಿಂದಕ್ಕೆ ನಡೆಸಿ ಬೋಕರನ ಪ್ರಯತ್ನವನ್ನು ನಿಷ್ಫಲಗೊಳಿಸಿದಳು. ಪುನಃ ಅವನ ಮೇಲೆ ಬಿದ್ದು ಖಡ್ಗಪ್ರಯೋಗಮಾಡಿದಳು.

ಬೋಕರನು ಗಾಯಗೊಂಡು ಕೆಳಗೆ ಬಿದ್ದನು. ಉಳಿದ ಪಡೆಯು ತನ್ನ ಪ್ರಾಣರಕ್ಷಣೆಗಾಗಿ ಓಡಿಹೋಯಿತು. ಹೀಗೆ ಓಡುತ್ತಿದ್ದ ಸವಾರನೊಬ್ಬನು ರಾಣಿಯ ಮೇಲೆ ಗುರಿಯಿಟ್ಟು ಗುಂಡು ಹೊಡೆದನು. ರಾಣಿಯೇನೋ ಆ ಗುಂಡಿನಿಂದ ತಪ್ಪಿಸಿಕೊಂಡಳು. ಆದರೆ ಗೋಲಿಯು ಕುದುರೆ ಹಿಂಭಾಗಕ್ಕೆ ತಾಗಿ ಗಾಯಪಡಿಸಿಹೋಯಿತು.

ರಾಣಿಯ ಅನುಚರರಲ್ಲಿ ಕೇವಲ ಮುಂದರಿ, ಗುಲ್‌ಮಹಮ್ಮದ್, ದೇಶ್

ಮುಖ್ ಮತ್ತು ರಘುನಾಥಸಿಂಹರ ಹೊರತಾಗಿ ಬಾಕಿ ಎಲ್ಲರೂ ಮಡಿದು ಹೋದರು. ಆದರೆ ಈ ವೀರರು ಬೋಕರನ ಪಡೆಯನ್ನು ಎದುರಿಸಿ ಅವರನ್ನು ಹಿಂದಕ್ಕೆ ಓಡುವಂತೆ ಮಾಡಿದರು. ಬೋಕರನನ್ನು ಅವನ ಪಡೆಯ ಸವಾರರು ಝಾನ್ಸಿಗೆ ಎತ್ತಿಕೊಂಡು ಹೋದರು. ಅವರು ಹಿಂದಿರುಗಿದನಂತರ ರೋಜ್ ಸಾಹೇಬನಿಗೆ ಝಲಕಾರಿಯ ಕೃತ್ಯದ ಮರ್ಮವು ಚೆನ್ನಾಗಿ ಅರ್ಥವಾಯಿತು.

ರಾಣಿಯು ಪಹುಜ್ ನದಿಯನ್ನು ದಾಟಿ ಕಾಲ್ಪಿಯ ಕಡೆ ಶೀಘ್ರವಾಗಿ ಮುಂದು ವರಿದಳು.

ಮಾರ್ಗದಲ್ಲಿ ಅವಳ ಪ್ರಿಯ ಕುದುರೆಯು ಇದ್ದಕ್ಕಿದ್ದಂತೆಯೇ ನಿಂತಿತು. ಅದರ ಘಾಯದಿಂದ ಬಹಳ ರಕ್ತಸ್ರಾವವಾಗಿ ಅತ್ಯಂತ ಶ್ರಮದಿಂದ ಮುಂದುವರಿಯಬೇಕಾ ಯಿತು. ಅದೂ ಕೊನೆಗೆ ಪ್ರಾಣವನ್ನು ನೀಗಿತು. ಅಲ್ಲಿ ಹಳ್ಳಿಯವನೊಬ್ಬನು ತನ್ನ ಉತ್ತಮಾಶ್ವವನ್ನು ರಾಣಿಗೆ ಕೊಟ್ಟನು. ರಾಣಿಯು ನೀರನ್ನು ಮಾತ್ರ ಸೇವಿಸುತ್ತಾ ಮಧ್ಯರಾತ್ರಿಯ ವೇಳೆಗೆ ೧೦೨ ಮೈಲಿ ಮಾರ್ಗವನ್ನು ಪ್ರಯಾಣಮಾಡಿ ಕಾಲ್ಪಿಯನ್ನು ಸೇರಿದಳು. ದಿನವೆಲ್ಲಾ ಏನೂ ಆಹಾರವನ್ನು ತೆಗೆದುಕೊಳ್ಳದೆ ಆ ಸುಡುವ ಬಿಸಿಲಿ ನಲ್ಲಿ ಪ್ರಯಾಣಮಾಡಿದರೂ ಕಾಲ್ಪಿಗೆ ಬಂದೊಡನೆಯೇ ಕಾಶೀಬಾಯಿಯ ಮತ್ತು ಜ್ಯೂಹಿಯ ವಿಚಾರವಾಗಿ ತಾತ್ಯಾನನ್ನು ಪ್ರಶ್ನಿಸಿದಳು.

"ಕಾಶೀಬಾಯಿಯು ಝಾನ್ಸಿಯ ಸಂಗ್ರಾಮದಲ್ಲಿ ವೀರಸ್ವರ್ಗವನ್ನು ಹೊಂದಿದಳು. ಜೂಹಿಯು ಉಳಿದುಕೊಂಡಳು. ಈಗ ಅವಳು ರಾವ್‌ಸಾಹೇಬನೊಡನೆ ಶಿಬಿರ ದಲ್ಲಿರುವಳು, ಅಪ್ಪಣೆಯಾದರೆ ಕರೆಸುತ್ತೇನೆ" ಎಂದು ತಾತ್ಯಾ ಉತ್ತರವಿತ್ತನು.

"ಬೇಡ, ನಾಳೆ ಸಾಯಂಕಾಲ ಅವಳನ್ನು ಸಂಧಿಸುತ್ತೇನೆ" ಎಂದು ರಾಣಿಯು ನಿಷೇಧಿಸಿದಳು.

ಇದಾದನಂತರ ತಾತ್ಯಾನು ಸವಿಸ್ತಾರವಾಗಿ ಝಾನ್ಸಿಯ ಯುದ್ಧದ ವೃತ್ತಾಂತ ವನ್ನು ಜಾಗ್ರತೆಯಾಗಿ ಹೇಳಿದನು. ರಾಣಿಯು ಧೈರ್ಯದಿಂದ ಕೇಳಿದಳು. ನಂತರ ಸ್ನಾನಮಾಡಿ, ಶುಭ್ರವಸ್ತ್ರವನ್ನು ಧರಿಸಿ ಹಣ್ಣಿನ ರಸವನ್ನು ಕುಡಿದು ಮಲಗಿ ಕೊಂಡಳು.

ಆ ದಿನ ಝಾನ್ಸಿಯಲ್ಲಿ ಅತ್ಯಂತ ದುರಂತವಾದ ಘಟನೆಯೊಂದು ನಡೆಯಿತು. ಅದು ಝಾನ್ಸಿಯು ಎಂದೆಂದಿಗೂ ಮರೆಯದಂತಹ ಘಟನೆ, ಆಂಗ್ಲೇಯರ ಮೇಲಿನ ಉಗ್ರ ಕಳಂಕ.

ಕಿಲ್ಲೆಯ ಅಧಿಕಾರವನ್ನು ವಹಿಸಿಕೊಂಡನಂತರ ಅಸಂಖ್ಯಾತ ಮನೆಗಳನ್ನು ಸುಟ್ಟರು. ಬಾಲಕರೂ, ಯುವಕರೂ ವೃದ್ಧರಾದಿಯಾಗಿ ಎಲ್ಲರನ್ನೂ ಗೋಲಿಯಿಂದ ಹಾರಿಸಿದರು. ವಿಪುಲವಾದಂತಹ ದರೋಡೆಯು ನಡೆಯಿತು. ಹೆಣಗಳು ರಾಶಿ

ರಾಶಿಯಾಗಿ ಬಿದ್ದವು. ದನಕರುಗಳು ಅನಾಥವಾಗಿ ಅಲೆದಾಡಿ ಸುಟ್ಟುಹೋದವು. ಏಳು ದಿನಗಳವರೆಗೂ ಹೆಣಗಳು ಕೊಳೆತು ನಾರುತ್ತಿದ್ದುವು. ಸುಮಾರು ಸಹಸ್ರ ನಿರಪರಾಧಿ ವ್ಯಕ್ತಿಗಳ ವಧೆಯು ನಡೆಯಿತು.

ಮಹಾಲಕ್ಷ್ಮಿಯ ಮಂದಿರವನ್ನು ಲೂಟಿಮಾಡಿದರು.

ಆಂಗ್ಲೇಯ ಸೇನೆಯ ನಾಯಕರೂ, ಉನ್ನತಾಧಿಕಾರಿಗಳು ಮೊದಲುಗೊಂಡು ಎಲ್ಲರೂ ಒಂದು ಅತ್ಯಂತ ಘೋರಕೃತ್ಯದಲ್ಲಿ ಭಾಗವಹಿಸಿದರು. ಷೇಕ್ಸ್‌ಪಿಯರ್, ಮಿಲ್ಟನ್, ಸ್ಕಾಟ್ ಮತ್ತು ಬರ್ಕ್ ಇವರುಗಳ ದೇಶದಲ್ಲಿ ಶಿಕ್ಷಿತರಾಗಿ ವಿಜ್ಞಾನವನ್ನು ಅರಿತಿದ್ದ ಅಧಿಕಾರಿಗಳು ದೇವಾಲಯದ ಮೂರ್ತಿಗಳನ್ನು ಅವುಗಳ ಪೀಠದಿಂದ ಎತ್ತಿ ಕೊಂಡೊಯ್ದು ತಮ್ಮ ಪಡಖಾನೆಗಳನ್ನು ಅಲಂಕರಿಸುವುಕ್ಕೆ ಉಪಯೋಗಿಸಿಕೊಂಡರು. ಮತ್ತು ಈ ಕೃತ್ಯವನ್ನು ಕುರಿತು ಆಂಗ್ಲೇಯ ಐತಿಹಾಸಿಕನೊಬ್ಬನು "ಮೂರ್ತಿಗಳನ್ನು ಅಪಹರಿಸುವುದು ಲೂಟಿಯಲ್ಲ. ಇದು ಕೇವಲ ಕುತೂಹಲದಿಂದ ಉದ್ಭವಿಸಿದ ಜಿಜ್ಞಾಸೆಯನ್ನು ಪೂರ್ತಿಗೊಳಿಸುವುದಕ್ಕಾಗಿ ಮಾಡಿದ ಕೃತ್ಯ" ಎಂದು ಬರೆದಿದ್ದಾನೆ.

ಮುರಳಿಮನೋಹರನ ಮಂದಿರದ ಮೂರ್ತಿಯನ್ನು ರಕ್ಷಿಸಲು ಪ್ರಯತ್ನಿಸಿದ ಪೂಜಾರಿಯನ್ನು ಮಂದಿರದಲ್ಲಿಯೇ ಹತಮಾಡಿದರು. ಆತನ ಯೌವ್ವನಸ್ಥನಾದ ಪುತ್ರನನ್ನು ಮಂದಿರದ ಹೊರಗಡೆ ಕರೆತಂದು ಗೋಲಿಯಿಂದ ಹೊಡೆದು ಕೊಂದರು. ನಂತರ ಆತನ ವೃದ್ಧಮಾತೆಗೆ ಪುತ್ರನು ಏನಾದನು, ಎಲ್ಲಿ ಹೋದನೆಂಬುದು ತಿಳಿಯಲಿಲ್ಲ.*

ಮೊದಲನೆಯ ದಿನ ಆಂಗ್ಲೇಯರು ಲೂಟಿಮಾಡಿದರು. ಎರಡನೆಯ ದಿನ ಮದರಾಸಿನ ಪಡೆಗೆ ಲೂಟಿಮಾಡಲು ಅನುಮತಿಕೊಟ್ಟರು. ಮೂರನೆಯ ದಿನ ಹೈದರಾಬಾದು ನೈಜಾಮನ ದಂಡಿಗೆ ಅಪ್ಪಣೆ ದೊರಕಿತು. ಕಾಳು, ಕಡ್ಡಿ, ಪಾತ್ರೆ ಮುಂತಾದವುಗಳನ್ನೂ ಕೂಡ ಬಿಡದೆ ಲೂಟಿಮಾಡಿದರು.

ಒಂದೇ ಒಂದು ದೇವಸ್ಥಾನವು ಇವರ ಹಾವಳಿಯಿಂದ ತಪ್ಪಿಸಿಕೊಂಡಿತು. ಅದು ಬಿಹಾರಿಲಾಲನ ಮಂದಿರ. ಅದೊಂದು ಮೂಲೆಯಲ್ಲಿದ್ದುದರಿಂದ ಯಾರೂ ಅದರ ಗೊಡವೆಗೆ ಹೋಗಲಿಲ್ಲ.

ಆರಂಭದ ಕಗ್ಗೊಲೆಯಾದನಂತರ ಕೆಲವು ಮಂದಿ ಮಾಧವರಾವ್ ಭಿಡೆಯ ತೋಟದಲ್ಲಿ ಮುಚ್ಚಿಟ್ಟುಕೊಂಡರು. ಒಬ್ಬ ಆಂಗ್ಲೇಯ ಅಧಿಕಾರಿಯ ಹೃದಯದಲ್ಲಿ ಕೊಂಚ ಮಾನವತೆಯ ಕುರುಹು ಉಳಿದಿದ್ದು ಅವರ ವಧೆಯನ್ನು ತಡೆದನು. ಆ

---

* ವೃದ್ಧ ಪೂಜಾರಿಯ ಹೆಸರು ರಾಮಚಂದ್ರ ಗೊಲ್ವಾಲ್‌ಕರ್. ಆತನ ಮಗನ ಹೆಸರು ಕೃಷ್ಣರಾವ್.

ತೋಟಕ್ಕೆ ನಾಲ್ಕು ಕಡೆಯೂ ಎತ್ತರವಾದ ಗೋಡೆಯಿದ್ದಿತು. ಪುಣೆಯ ಕಡೆಯ ಒಬ್ಬ ಶಾಸ್ತ್ರಿಯು ದೌರ್ಭಾಗ್ಯದಿಂದ ಝಾನ್ಸಿಯಲ್ಲಿ ಬಂದು ಸಿಕ್ಕಿ ಬಿದ್ದಿದ್ದನು. ಆತನು ರಾತ್ರಿಯೆಲ್ಲಾ ಗೋಡೆಯ ಪಕ್ಕದಲ್ಲಿದ್ದ ಒಂದು ಹಳ್ಳದಲ್ಲಿ ಅವಿತುಕೊಂಡಿದ್ದನು. ಆತ ನೊಂದಿಗೆ ಬೆನ್ನಿಗೆ ಬೆನ್ನುಹತ್ತಿಕ್ಕಿಕೊಂಡು ಒಬ್ಬ ಸ್ತ್ರೀಯು ಪ್ರಾಣದಾಶೆಯಿಂದ ಕುಳಿತಿದ್ದಳು. ಸಮಯ ನೋಡಿ ಶಾಸ್ತ್ರಿಯು ತನ್ನ ಮನೆಯನ್ನು ಸೇರಿಕೊಂಡನು. ಆತನಿಗೆ ತಂಬಾಕನ್ನು ಸೇವಿಸುವ ಅಭ್ಯಾಸವಿದ್ದಿತು. ಆದರೆ ಲೂಟಿಯಾದ ದಿನ ತಂಬಾಕನ್ನು ಲೂಟಿಗಾರರು ತೆಗೆದುಕೊಂಡು ಹೋಗಿದ್ದರು. ಆ ಸಮಯಕ್ಕೆ ಸರಿಯಾಗಿ ಕೆಲವು ಜನ ಮದರಾಸಿನ ಸೈನಿಕರು ಮತ್ತೆ ಆ ಮನೆಯೊಳಗೆ ನುಗ್ಗಿ ಉಳಿದಬಳಿದ ಪಾತ್ರೆಯನ್ನು ತೆಗೆದುಕೊಂಡರು. ಶಾಸ್ತ್ರಿಯೂ ತನ್ನ ಅತ್ಯಂತ ಆಸೆಯನ್ನು ಆಗ ತೀರಿಸಿಕೊಂಡನು.

ಲೂಟಿಮಾಡುತ್ತಿದ್ದ ಸೈನಿಕರನ್ನು ಕುರಿತು ಶಾಸ್ತ್ರಿಯು "ನಿಮ್ಮಲ್ಲಿ ಸ್ವಲ್ಪ ತಂಬಾಕುವಿದ್ದರೆ ದಯವಿಟ್ಟು ಕೊಡಿ" ಎಂದು ಕೇಳಿಕೊಂಡನು. ಪಾತ್ರೆಗೆ ಬದಲಾಗಿ ಸ್ವಲ್ಪ ತಂಬಾಕುವು ಅವನಿಗೆ ದೊರಕಿತು. ವಿದೇಶೀ ಸೈನಿಕರಾಗಿದ್ದರೆ ಬಹುಶಃ ಪಾಷಾಣ ದೊರಕುತ್ತಿದ್ದಿತೋ ಏನೋ?

ಜನರಲ್ ರೋಜನ ಒಂದು ಪಡೆಯು ಅಲೆದಾಡುತ್ತಾ ಬೀದಿಯಲ್ಲಿ ಸಿಕ್ಕವರನ್ನು ಹೊಡೆಯುತ್ತಲೂ, ಹೊಡೆಸಿಕೊಳ್ಳುತ್ತಲೂ ಮಹಾರಾಣಿ ಪುರವನ್ನು ಹೊಕ್ಕಿ ಬಂದರು. ಝಾನ್ಸಿಯ ಪತನದ ಸಮಾಚಾರವನ್ನು ಕೇಳಿಯೂ ಕೂಡ ಕಾಶೀನಾಥ ಭೈಯ್ಯಾ ಮತ್ತು ಆನಂದರಾಯರು ಈ ಪಡೆಯ ಕೈಗೆ ಸಿಕ್ಕಿಬಿದ್ದರು. ಮಹುವಿನ ಗಡಿಯು ಬಹಳ ಚಿಕ್ಕದು. ಕೋಟೆಯಲ್ಲಿ ತೋಪುಗಳು ಇರಲಿಲ್ಲ. ಆದ್ದರಿಂದ ಅವರು ತಮ್ಮ ಚಿಕ್ಕ ಬಂದೂಕಗಳನ್ನು ತೆಗೆದುಕೊಂಡು ಕೋಟೆಯ ಹೊರಗಡೆ ಇದ್ದ ಸಣ್ಣ ಸಣ್ಣ ಗುಡ್ಡಗಳ ಹಿಂದೆ ಅಡಗಿಕೊಂಡು ಶತ್ರುಗಳನ್ನು ಎದುರಿಸಿದರು. ವೀರಾವೇಶದಿಂದ ಹೋರಾಡಿ ಎಲ್ಲರೂ ಸತ್ತುಹೋದರು. ಆನಂದರಾಯನ ಪುತ್ರನೂ ಅವರ ಜೊತೆಯಲ್ಲಿಯೇ ಇದ್ದನು. ಸಾಯುವ ಮುನ್ನ ಆನಂದರಾಯನು ಅವನನ್ನು ಕುರಿತು "ಒಂದು ವೇಳೆ ಯಾವಾಗಲಾದರೂ ರಾಣೀ ಸಾಹೇಬರ ದರ್ಶನವಾದರೆ ಮಹುವು ಝಾನ್ಸಿಗಿಂತ ಯಾವ ರೀತಿಯಲ್ಲೂ ಹಿಂದುಳಿಯಲಿಲ್ಲವೆಂದು ತಿಳಿಸು" ಎಂದು ಹೇಳಿದನು.

ಆ ಪುತ್ರನು ಕೆಲವು ತಿಂಗಳುಗಳನಂತರ ಸೆರೆ ಸಿಕ್ಕಿದನು. ಆದರೆ ಆಗತಾನೆ ಪ್ರಕಟನೆಯಾದ ವಿಕ್ಟೋರಿಯಾ ರಾಣಿಯ ಕ್ಷಮಾ ಭಿಕ್ಷೆಯು ದೊರಕಿ ಫಾಸಿಯಿಂದ ತಪ್ಪಿಸಿಕೊಂಡನು.

ಈ ವಿಧವಾದ ಅನೇಕ ಘಟನೆಗಳು ಝಾನ್ಸಿಯ ಜಿಲ್ಲೆಯಲ್ಲಿದ್ದ ಸಣ್ಣಸಣ್ಣ

ಕೋಟೆಕೊತ್ತಲಗಳಲ್ಲಿ ನಡೆಯಿತು ಮತ್ತು ಜನತೆಗೆ ಶಸ್ತ್ರಾಸ್ತ್ರಗಳನ್ನುಪಯೋಗಿಸುವ ಸಂದರ್ಭವೂ ಒದಗಿತು.

ಎಂಟನೆಯ ದಿನ ಝಾನ್ಸಿಯಲ್ಲಿ ರೋಜನು ಘೋಷಣೆ ಮಾಡಿ ಪ್ರಪಂಚವು ಭಗವಂತನದೆಂದೂ, ರಾಜ್ಯವು ಬಾದಷಹನದೆಂದೂ, ಅಧಿಕಾರವು ಕಂಪೆನಿಯ ಸರ್ಕಾರದ್ದೆಂದೂ ಸಾರಿದನು.

ಆದರೆ ಈ ಏಳು ದಿವಸಗಳ ಪರ್ಯಂತ ವಾಯುವಿನಲ್ಲಿ ಸಂಚರಿಸುತ್ತಿದ್ದ ಘೋಷಣೆ ಯಾದರೋ "ಪ್ರಪಂಚವು ಸೈತಾನನದು, ರಾಜ್ಯವೂ ಸೈತಾನನದು, ಅಧಿಕಾರವೂ ಸೈತಾನನದು."

ರೋಜ್ ಸಾಹೇಬನಿಗೆ ಝಾನ್ಸಿಯ ಜಿಲ್ಲೆಯಲ್ಲಿ ಕಂಪೆನಿ ಸರ್ಕಾರವನ್ನು ಸ್ಥಾಪಿಸಲು ಸುಮಾರು ಒಂದು ತಿಂಗಳಕಾಲ ಹಿಡಿಯಿತು.

## ೭೭

ಕಾಲ್ಪಿಯು ಯಮುನಾನದಿಯ ತೀರದಲ್ಲಿದ್ದ ಒಂದು ದೊಡ್ಡನಗರವಾಗಿದ್ದಿತು. ಒಂದುಕಡೆ ಮಹತ್ತರವಾದ ಕಿಲ್ಲೆ, ಮೂರು ಕಡೆ ಪ್ರಾಕಾರದ ಕೋಟೆ, ನಾಲ್ಕನೆಯ ಕಡೆ ಯಮುನಾ ನದಿ. ಕಿಲ್ಲೆಯ ಪಶ್ಚಿಮಕ್ಕೆ ಒಂದು ಮೈದಾನ, ಆದರಾಚೆ ನಗರ. ನಗರಕ್ಕೆಸ್ವಲ್ಪ ದೂರದಲ್ಲಿ "ಚಾರಾಸಿಗುಂಬಸ್" ಎಂಬ ಕ್ಷೇತ್ರ. ಛತ್ರಸಾಲನನಂತರ (ಬುಂದೇಲುಖಂಡದ ಪ್ರಾಚೀನ ಅರಸ) ಕಾಲ್ಪಿ ಪ್ರದೇಶವು ಗೋವಿಂದಪಂತನ ಆಳ್ವಿಕೆಗೆ ಬಂದಿತು. ಸನ್ ೧೮೦೬ ರ ಸಂಧಿಯ ಮೇರೆ ಆಂಗ್ಲೇಯರು ಗೋವಿಂದಪಂತನ ವಂಶಜರಿಂದ ಕಾಲ್ಪಿಯನ್ನು ಹೊಂದಿದ್ದರು. ಸನ್ ೧೮೨೪ ರಲ್ಲಿ ಆದೇ ವಂಶಜನಾದ ಒಬ್ಬ ನಾನಾಪಂಡಿತ್ ಎಂಬುವನು ಕಾಲ್ಪಿಯನ್ನು ಮತ್ತೆ ತನ್ನ ವಶಮಾಡಿಕೊಂಡನು. ಆದರೆ ಝಾನ್ಸಿಯ ರಾಜ ರಾಮಚಂದ್ರರಾಯನ ಸಹಾಯದಿಂದ ಆಂಗ್ಲೇಯರು ಪುನಃ ಕಾಲ್ಪಿಯನ್ನು .ವಶಪಡಿಸಿಕೊಂಡರು. ಸನ್ ೧೮೫೭ ನೇ ವಿಪ್ಲವದಲ್ಲಿ ಕಾಲ್ಪಿಯ ಛಾವನಿಯು ಕಾನ್ಪುರದಿಂದ ಬಂದ ಕ್ರಾಂತಿಕಾರರ ಪಾಲಾಯಿತು. ಸ್ವಲ್ಪ ಕಾಲಾನಂತರ ರಾವ್‌ಸಾಹೇಬನು ತನ್ನ ಸೇನೆಯನ್ನು ಕರೆತಂದು ಅಲ್ಲಿ ನೆಲಸಿದನು. ಆದರ ತರುವಾಯ ಕಾಲ್ಪಿಯು ಕ್ರಾಂತಿಕಾರರ ಒಂದು ಪ್ರಧಾನ ಕೇಂದ್ರವಾಯಿತು.

ರಾಣಿಯು ಕಾಲ್ಪಿಯನ್ನು ಸೇರಿದಾಗ ರಾವ್‌ಸಾಹೇಬ್—ನಾನಾಸಾಹೇಬನ ತಮ್ಮ—ಮತ್ತು ತಾತ್ಯಾ ಅಲ್ಲಿಯೇ ಇದ್ದರು.

ಮಾರನೆಯ ದಿನ ರಾಣಿಯು ಇವರನ್ನು ಭೇಟಿ ಮಾಡಿದಳು. ಮತ್ತು ಅವರು ರಾಣಿಯನ್ನು ಹೃತ್‌ಪೂರ್ವಕವಾಗಿ ಆದರಿಸಿ ಸತ್ಕರಿಸಿದರು.

ಆದರೆ ರಾಣಿಯು ಆ ಸತ್ಕಾರಗಳ ಅಪೇಕ್ಷಿಯಾಗಿರಲಿಲ್ಲ. ಅವಳಿಗೆ ಬೇಕಾಗಿದ್ದುದು ಕೆಲಸ. ಕಾಲ್ಪಿಯ ಸ್ಥಿತಿಯು ಅಸ್ತವ್ಯಸ್ಥವಾಗಿದ್ದಿತು. ತಾತ್ಯಾ ಉತ್ಕೃಷ್ಟ ಸೇನಾಪತಿಯಾಗಿದ್ದರೂ ಸೇನೆಯು ಪ್ರಬಂಧವು ಅವ್ಯವಸ್ಥಿತವಾಗಿದ್ದಿತು. ಇದಕ್ಕೆ ತಾತ್ಯಾನ ಸ್ವಭಾವದೋಷವು ಕಾರಣವಾಗಿದ್ದಿತು—ಅದೇನೆಂದರೆ ರಾವ್‌ಸಾಹೇಬನನ್ನು ತನ್ನ ತನುಮನದ ಸ್ವಾಮಿಯೆಂದು ಭಾವಿಸುವುದು. ಮತ್ತು ತನ್ನ ಸೈನಿಕರ ತಪ್ಪುಗಳನ್ನು ಮನ್ನಿಸುತ್ತಲೇ ಇರುವುದು. ರಾವ್‌ಸಾಹೇಬನಿಗೂ ಮತ್ತು ಆತನ ಸೈನಿಕರಿಗೂ ಆತನು ಅತ್ಯಂತ ಪ್ರಿಯ ಸ್ನೇಹಿತನಾಗಿದ್ದನು. ಆದರೆ ಇದರಿಂದ ಸೈನ್ಯದ ಅವ್ಯವಸ್ಥೆಯು ಸರಿಹೋಗಲು ಅವಕಾಶವಿರಲಿಲ್ಲ.

ರಾಣಿಯು ಈ ವಿಚಾರವನ್ನು ಸೂಕ್ಷ್ಮವಾಗಿ ಗ್ರಹಿಸಿದಳು.

ವಿಶ್ರಾಂತಿ ಹೊಂದಿದನಂತರ ಆಕೆಯು ಸಾಯಂಕಾಲ ಅವರನ್ನು ಭೇಟಿ ಮಾಡಿದಳು.

ರಾಣಿಯು ಸೇನೆಯ ಅನುಶಾಸನ, ಕವಾತು, ಯುದ್ಧಸಾಮಗ್ರಿ ಇತ್ಯಾದಿಗಳನ್ನು ಕುರಿತು ಪ್ರಶ್ನಿಸಿದಳು. ಯುದ್ಧ ಸಾಮಗ್ರಿಯೊಂದು ಬಿಟ್ಟು ಮಿಕ್ಕ ಎಲ್ಲಾ ವಿಚಾರದಲ್ಲಿಯೂ ಅವಳಿಗೆ ಸಂತುಷ್ಟಿದಾಯಕವಾದ ಉತ್ತರ ದೊರೆಯಲಿಲ್ಲ.

ರಾಣಿಯು ಅಂತ್ಯದಲ್ಲಿ "ರಾವ್‌ಹೇಬ್, ಅನೇಕ ನ್ಯೂನತೆಗಳಿವೆ" ಎಂದಳು.

ರಾವ್‌ಸಾಹೇಬನು ಒಡನೆಯೆ "ಎಲ್ಲವೂ ಶೀಘ್ರದಲ್ಲಿಯೇ ಸರಿಹೋಗುವುದು. ಇದೇ ಸೈನ್ಯವೂ ಮತ್ತು ಇದೇ ತಾತ್ಯಾನೂ ಮೂರು ದೊಡ್ಡ ದೊಡ್ಡ ಜನರಲ್ಲರನ್ನು ಸೋಲಿಸಿ ಬಹುಮಂದಿಯನ್ನು ತೀರಿಸಿದರು." ಎಂದು ಉತ್ತರವಿತ್ತನು;

ರಾಣಿಯು "ನಾಲ್ಕನೆಯವನನ್ನೂ ಸೋಲಿಸಬಹುದಾಗಿದ್ದಿತು. ಆದರೆ ನಮ್ಮಿಂದ ಅನಿವಾರ್ಯವಾದ ತಪ್ಪೊಂದು ನಡೆಯಿತು" ಎಂದಳು.

ತಾತ್ಯಾನು ಅವಳ ಮುಖವನ್ನೇ ನೋಡತೊಡಗಿದನು.

"ಅಂದು ನಮ್ಮ ಗೋಲಂದಾಜಿಗಳು ಭೀಷಣತರವಾದ ಗುಂಡಿನ ಸುರಿಮಳೆಯನ್ನು ಮಾಡುವುದಿಲ್ಲವೆಂದರು. ನಾನು ಅದಕ್ಕೆ ಸಮ್ಮತಿಯಿತ್ತೆ—ನಮ್ಮ ಗೋಲೀಬಾರಿನಿಂದ ನಿಮ್ಮ ಸೈನ್ಯಕ್ಕೆ ನಷ್ಟವಾದೀತೆಂದು ಹೆದರಿದೆ. ಆದರೂ ತಪ್ಪಾಯಿತು. ಇದನ್ನು ಒಪ್ಪಿಕೊಳ್ಳಲೇ ಬೇಕು" ಎಂದಳು ರಾಣಿ.

"ಅಂದು ನಿಮ್ಮ ಸೈನಿಕರು ಕೋಟೆಯ ಹೊರಗಡೆ ಬಂದು ಆಂಗ್ಲೇಯರ ಮೇಲೆ ಆಕಸ್ಮಿಕ ಧಾಳಿ ಮಾಡಬೇಕಾಗಿದ್ದಿತು" ಎಂದು ತಾತ್ಯಾನು ಹೇಳಿದನು.

ರಾಣಿ—ಗುಡ್ಡಗಳು ಮರೆಯಾದುದರಿಂದ ಕಾಲ್ಪಿಯ ಸೇನೆಯು ಅಗೋಚರವಾಯಿತು. ಯಾವ ಕಡೆಯಿಂದ ಸೈನ್ಯವು ಕಾಣಬರುವುದೆಂಬುದೇ ತಿಳಿಯದಾಯಿತು. ಅಷ್ಟರಲ್ಲಿಯೇ ಸಂಜೆಯು ಮೂಡಿ ಕಾಲ್ಪಿ ಸೈನ್ಯವು ಓಡಿಹೋಯಿತೆಂದೂ, ಝಾನ್ಸಿಯು

ಏಕಾಕಿನಿಯಾಯಿತೆಂದೂ ಸುದ್ದಿಯು ಬಂದಿತು.

ರಾವ್—ಈಗೆಲ್ಲವೂ ಸರಿಹೋಗುವುದು. ತಾವು ಚಿಂತಿಸಬೇಡಿ. ನಾನಾ ಸಾಹೇಬನು ಲಕ್ನೋವಿನಿಂದ ಪ್ರಯತ್ನಿಸುತ್ತಿರುವನು. ಕಾನ್ಪುರ ಮತ್ತು ಶಹಗಡದ ರಾಜ ಮತ್ತು ಬಾಂದಾವಿನ ನವಾಬರು ಸೈನ್ಯ ಸಮೇತರಾಗಿ ಶೀಘ್ರದಲ್ಲಿಯೇ ಕಾಲ್ಪಿಗೆ ಬರುವರು. ನಾವು ಇಲ್ಲಿಯೇ ಯೋಜನೆ ರಚಿಸಿಕೊಂಡು ಪುನಃ ಕಾನ್ಪುರ ಮತ್ತು ಝಾನ್ಸಿಗಳನ್ನು ವಶಮಾಡಿಕೊಳ್ಳೋಣ.

ಸಂಧ್ಯಾ ಸಮಯದಲ್ಲಿ ಜೂಹ್ಯಿಯು ರಾಣಿಯ ಬಳಿಗೆ ಬಂದು ಬಿಕ್ಕಿ ಬಿಕ್ಕಿ ಅತ್ತಳು. ರಾಣಿಯು ಅವಳನ್ನು ಸಮಾಧಾನಪಡಿಸಿ "ಜೂಹಿ, ತಪಸ್ಸಿನಲ್ಲಿ ಕ್ಷಯವು ಮೊದಲು ನಂತರ ಅಕ್ಷಯ. ಈ ಯುದ್ಧವು ಸ್ವರಾಜ್ಯಸ್ಥಾಪನೆಯ ಅಂತಿಮ ಪ್ರಯತ್ನವಲ್ಲ. ಮತ್ತು ನಾವೇ ಅಂತಿಮ ಸಾಧಕರೂ ಅಲ್ಲ" ಎಂದು ಹೇಳಿದಳು.

ನಂತರ ರಾಣಿಯು ತನ್ನ ಸ್ತ್ರೀ ಪುರುಷ ವೀರಾಗ್ರಣಿಗಳ ಬಲಿದಾನದ ಕತೆಯನ್ನು ವರ್ಣಿಸಿದಳು.

"ಮೋತೀಬಾಯಿಯೊಂದಿಗೆ ನಾನೂ ಗಾಯಗೊಂಡಿದ್ದರೆ ತಮ್ಮ ಈ ಮಡಿಲಲ್ಲಿಯೇ ಪ್ರಾಣವನ್ನು ನೀಗಬಹುದಾಗಿದ್ದಿತು" ಎಂದು ಜ್ಯೂಹಿಯು ಹೇಳಿದಳು.

"ಸುಮ್ಮನೆ ಪ್ರಾಣತ್ಯಾಗ ಮಾಡುವುದರಲ್ಲಿ ಪ್ರಯೋಜನವಿಲ್ಲ, ಮುಂದೆ ಮಾಡಬೇಕಾದುದು ಬಹಳವಿದೆ" ಎಂದಳು ರಾಣಿ.

ಮಾರನೆಯ ದಿನವೇ ರಾಣಿಯು ಪೇಶ್ವೆಯ ಸೈನ್ಯವನ್ನು ಸುವ್ಯವಸ್ಥೆ ಮಾಡಲು ಪ್ರಾರಂಭಿಸಿದಳು. ಸ್ವಲ್ಪಕಾರ್ಯವು ಕೈಗೂಡಿತು. ಅನೇಕರು ಪೇಶ್ವೆಯ ಸಡಿಲ ಆಳ್ವಿಕೆಯಲ್ಲಿ ಹೇಗೇಗೋ ಇದ್ದರು.

ಕಾಲ್ಪಿಯ ಸೈನ್ಯದ ಶಿಥಿಲ ಸಂಘಟನೆಯನ್ನು ನೋಡಿ ರಾಣಿಯ ಹೃದಯವು ದುಃಖ ಭರಿತವಾಯಿತು.

## ೭೮

ಏಪ್ರಿಲ್ ತಿಂಗಳ ಮೂರನೆಯ ವಾರದಲ್ಲಿ ಬಾನ್ಪುರ, ಶಹಗಡ ಮತ್ತು ಬಾಂದಾವಿನಿಂದ ಸೈನ್ಯಗಳು ಕಾಲ್ಪಿಗೆ ಬಂದವು. ಜನರಲ್ ರೋಜನು ಝಾನ್ಸಿಯ ಸುವ್ಯವಸ್ಥೆಯನ್ನು ಮಾಡಿ ಏಪ್ರಿಲ್ ೨೫ ನೇ ತಾರೀಖು ಕಾಲ್ಪಿಯ ಮೇಲೆ ದಂಡೆತ್ತಿ ಹೋಗುವುದಕ್ಕೆ ಆಜ್ಞೆಯಿತ್ತನು. ಅದೇ ಸಮಯದಲ್ಲಿ ಆತನಿಗೆ ರಾಣಿಯು ಕೋಂಚಿನ ಮೂಲಕ ಝಾನ್ಸಿಯ ಮೇಲೆ ದಂಡೆತ್ತಿ ಬರುವಳೆಂದು ಸಮಾಚಾರ ತಿಳಿಯಿತು. ರೋಜನ ಒಂದು ದಳವು ಪೂಂಚ್‌ಪಹಡ್ ಗಾಂವ್ ಎಂಬ ಸ್ಥಳವನ್ನು ಸೇರಿತು.

ಶತ್ರುಗಳೊಡನೆ ಯುದ್ಧವು ಸೈಯದ್‌ನಗರ್ ಮತ್ತು ಕೊಟಾರಾಗಳಲ್ಲಿ ನಡೆದು ಆಂಗ್ಲೇಯರು ಸೋತರು.

ಕೋಂಚನ್ನು ಅಧೀನಮಾಡಿಕೊಳ್ಳುವುದಕ್ಕಾಗಿ ಜನರಲ್ ರೋಜನು ಮೊದಲು ಲುಹಾರಿ ಕಿಲ್ಲೆಯನ್ನು ಆಕ್ರಮಿಸಲು ಪ್ರಯತ್ನಿಸಿದನು. ಕೋಂಚಿನಲ್ಲಿ ಪೇಶ್ವೆಯ ಸೈನ್ಯವು ಹೇರಳವಾಗಿ ಸೇರಿದ್ದಿತು. ಬಾನ್ಪುರ ಮತ್ತು ಶಹಗಡಗಳ ರಾಜನೂ ಮತ್ತು ಬಾಂದಾವಿನ ನವಾಬನೂ ಅಲ್ಲಿಗೆ ಬಂದರು. ಪುನಃ ೨೦೦೦೦ ಮಂದಿ ಸೈನಿಕರ ಜಮಾವಣೆಯಾಯಿತು. ರಾಣಿ ಮತ್ತು ತಾತ್ಯಾ ನುರಿತ ಸೇನಾಪತಿಗಳು. ಇನ್ನೇನು ಕಮ್ಮಿ? ಈ ಸೈನ್ಯದಲ್ಲಿ ಏನು ಕೊರತೆಯಿದ್ದಿತೋ ಅದು ರಾಣಿಗೆ ತಿಳಿದಿದ್ದಿತು. ಈ ಸೈನ್ಯದಲ್ಲಿ ಅನೇಕ ಢಕಾಯಿತರೂ ಮೋಸಗಾರರೂ ಸೇರಿಬಿಟ್ಟಿದ್ದರು. ಅವರಿಗೆ ಜಯಾಪಜಯಗಳನಂತರ ದೊರಕುವ ಲೂಟಿಯಲ್ಲಿ ಇದ್ದಷ್ಟು ಅಭಿರುಚಿ ಸ್ವರಾಜ್ಯ ಸ್ಥಾಪನೆ ಅಥವಾ ಯುದ್ಧದಲ್ಲಿರಲಿಲ್ಲ. ಸಮಯ ದೊರಕಿದರೆ ತಮ್ಮ ಪಕ್ಷದವರನ್ನೇ ಲೂಟಿಮಾಡುವಷ್ಟು ಅಧಮರಾಗಿದ್ದರು. ಈ ಸೇನೆಯಲ್ಲಿ ಮುಕ್ಕಾಲು ಜನರು ಕವಾತು, ತರಬೇತುಗಳನ್ನು ಅರಿತಿರಲಿಲ್ಲ. ಮತ್ತು ಶಾಸನ ಬದ್ಧರಾಗಿ ನಡೆಯುವುದನ್ನು ಕೇಳಿಯೇ ಇರಲಿಲ್ಲ. ಅವರು ಕೇವಲ ತಮ್ಮ ಸರದಾರನ ಅಥವಾ ತಮ್ಮನ್ನು ಯಾರು ಸೈನ್ಯಕ್ಕೆ ಸೇರಿಸಿಕೊಂಡರೋ ಅವರ ಆಜ್ಞೆಯನ್ನು ಮಾತ್ರ ಪಾಲಿಸಲು ಸಿದ್ಧರಿದ್ದರು. ಅದೂ ಕೂಡ ಅವರ ಅನುಕೂಲಕ್ಕೆ ತಕ್ಕಂತೆ ಮಾಡುತ್ತಿದ್ದರು. ರಾಣಿಯ ಇಚ್ಛೆಯು ನಡೆಯುವಂತಿದ್ದರೆ ಅವರಲ್ಲಿ ಅರ್ಧ ಜನರಿಗಿಂತ ಹೆಚ್ಚಾದವರನ್ನು ಹಿಂದಕ್ಕೆ ಕಳುಹಿಸುತ್ತಿದ್ದಳು.

ಕೇವಲ ಹೆಸರಿಗೆ ಮಾತ್ರ ರಾವ್‌ಸಾಹೇಬನು ಈ ಸೇನೆಯ ಪ್ರಧಾನ ಸಂಚಾಲಕನಾಗಿದ್ದನು. ವಾಸ್ತವದಲ್ಲಿ ಯಾರೂ ಒಗ್ಗಟ್ಟಾಗಿ ಸೇರಿ ಕೆಲಸಮಾಡಲು ಸಿದ್ಧರಿರಲಿಲ್ಲ. ಸಂಪೂರ್ಣ ಅಧಿಕಾರವು ಒಬ್ಬನಲ್ಲಿರಲಿಲ್ಲ. ಯುದ್ಧದಲ್ಲಿ ಸಫಲತೆಯನ್ನು ಹೊಂದಬೇಕಾದರೆ ಏಕಾಧಿಪತ್ಯವು ಅಗತ್ಯ. ಅದು ಈ ಸೇನೆಯಲ್ಲಿರಲಿಲ್ಲ.

ಅತ್ತ ರೋಜನು ಕೋಂಚನ್ನು ವಶಪಡಿಸಿಕೊಳ್ಳುವುದಕ್ಕೆ ಲುಹಾರಿ ಕಿಲ್ಲೆಯು ಪ್ರಥಮ ಹಂತವೆಂದು ಭಾವಿಸಿ ಅದನ್ನು ಹೊಂದುವ ಪ್ರಯತ್ನದಲ್ಲಿದ್ದನು. ಈ ಕಡೆಯಾದರೋ ಕೋಂಚಿನಲ್ಲಿ ರಾತ್ರಿಯವೇಳೆ ರಾವ್‌ಸಾಹೇಬ್, ಬಾನ್ಪುರ ಮತ್ತು ಶಹಗಡಗಳ ರಾಜ ಮತ್ತು ಬಾಂದಾವಿನ ನವಾಬಇವರಿಗೆ ನೃತ್ಯವನ್ನು ನೋಡುವ ಗೀಳಿದ್ದಿತು. ಇವರುಗಳು ರಾಣಿಯ ಶಿಬಿರದಲ್ಲಿದ್ದಂತಹ ಝಾನ್ಸಿಯ ಜೂಹಿಯು ಬಹಳ ಚೆನ್ನಾಗಿ ನರ್ತನ ಮಾಡುವಳೆಂದು ಕೇಳಿದ್ದರು. ಆದುದರಿಂದ ಭಂಗಿಯನ್ನು ಸೇವಿಸಿದ ಮೇಲೆ ಅವಳನ್ನು ಕರೆ ತರಲೇಬೇಕೆಂದು ಸಂಕಲ್ಪಮಾಡಿದ್ದರು.

ರಾವ್‌ಸಾಹೇಬನಿಗೆ ಮತ್ತೇರಿತು. ಅವನಿಗೆ ಯೌವನವು ಉಕ್ಕುತ್ತಿದ್ದಿತು.

ತಾತ್ಯಾನನ್ನು ಕರೆದನು. ತಾತ್ಯಾ ಭಂಗಿಯನ್ನು ಸೇವಿಸಿರಲಿಲ್ಲ. ಸೇವಿಸುತ್ತಲೂ ಇರಲಿಲ್ಲ.

ರಾವ್‌ಸಾಹೇಬನು "ಇಂದು ಮಧ್ಯಾಹ್ನ ಬಹಳ ಸೆಖೆಯಾಗಿತ್ತು. ಈಗ ಸ್ವಲ್ಪ ತಣ್ಣಗಿದೆ. ಎಲ್ಲರೂ ಆನಂದದಲ್ಲಿ ಮುಳುಗಿದ್ದಾರೆ. ಯುದ್ಧದ ಮೇಲೆ ಯುದ್ಧವು ನಡೆಯುತ್ತಲೇಯಿರುತ್ತದೆ. ಮಧ್ಯೆ ಮಧ್ಯೆ ಸ್ವಲ್ಪ ಆನಂದವೂ ಇರಬೇಕು" ಎಂದನು.

ತಾತ್ಯಾನು ಉಕ್ಕಿ ಬಂದ ಕೋಪವನ್ನಡಗಿಸಿಕೊಳ್ಳುತ್ತಾ "ಅಪ್ಪಣೆಯಾಗಲಿ" ಎಂದು ನಿವೇದನ ಮಾಡಿಕೊಂಡನು.

ಬಾಂದಾವಿನ ನವಾಬನು "ಅರೇ, ಆಜ್ಞೆ ಮತ್ತೇನಿದ್ದೀತು. ಯಾರನ್ನಾದರೂ ನರ್ತಿಸಿ ಗಾನ ಮಾಡಲು ಕರೆದುಕೊಂಡು ಬಾ" ಎಂದನು.

ಬಾನ್ಪುರದ ರಾಜನು "ಸರದಾರ್ ಸಾಹೇಬರೇ, ತಾವು ಭಂಗಿಯೆಂಬ ಅಮೃತ ಸೇವೆಯನ್ನು ಮಾಡುವುದಿಲ್ಲ. ಆದುದರಿಂದ ನಿಮಗೆ ಅದರ ಸುಖವು ತಿಳಿಯದು. ನಮ್ಮಗಳ ಮನವು ಪ್ರಫುಲ್ಲವಾದನಂತರ ಈ ವಿಧವಾದ ಸುಖವಿಲಾಸಗಳನ್ನಪೇಕ್ಷಿಸುತ್ತದೆ" ಎಂದನು.

ಶಹಗಡದ ರಾಜನು ಅಮಲು ಹೆಚ್ಚಿ ಮದಾಂಧನಾಗಿ "ಭೈ, ಟೋಪೆಸಾಬ್, ಝೂನ್ಸಿಯ ತಾಫೆಯವಳು ಶಿಬಿರದಲ್ಲಿರುವಳಂತೆ, ಅವಳ ನೃತ್ಯ ಗಾನಗಳನ್ನು ಯಾವಾಗ ಸವಿಯಲು ಸಾಧ್ಯ" ಎಂದನು.

ತಾತ್ಯಾ ನಿಸ್ತಬ್ಧನಾದನು.

ರಾವ್‌ಸಾಹೇಬನು "ಅವಳ ಹೆಸರು ಜೂಹಿ. ಅತ್ಯಂತ ಸುಂದರವಾದ ಹೆಸರು. ಸಿಪಾಯಿಗಿರಿಯನ್ನೂ ಮಾಡುತ್ತಾಳೆ. ನೃತ್ಯಗಾಯನಗಳನ್ನೂ ಮಾಡುತ್ತಾಳೆ. ಝೂನ್ಸಿಯ ನಾಟಕಶಾಲೆಯಲ್ಲಿ ಅತ್ಯುತ್ತಮವಾಗಿ ಅಭಿನಯಮಾಡುತ್ತಿದ್ದಳು. ಒಳ್ಳೆಯ ಹಾವಭಾವಗಳು. ಇಲ್ಲಿಗೆ ಬಂದಾಗಿನಿಂದ ಅವಳು ದುಃಖಿನಿಯಾಗಿ ಉನ್ಮತ್ತೆಯಂತಿದ್ದಳು. ಈಗ ಅವಳ ಸ್ವಾಮಿನಿಯು ಬಂದು ಸಂತುಷ್ಟಳಾಗಿರುವಳು. ನೃತ್ಯ ಗಾನಮಾಡುವುದಿಲ್ಲವೆಂಬುದಕ್ಕೆ ಯಾವ ಕಾರಣವೂ ಇಲ್ಲ. ರಾತ್ರಿಯೂ ಬಹಳವಾಗಿಲ್ಲ. ಒಂದೆರಡು ಗಂಟೆಗಳ ಕಾಲ ರಂಗು ರಸಿಕತೆಗಳಿಂದ ಕಳೆಯೋಣ. ಅವಳನ್ನು ಕರೆದುಕೊಂಡು ಬಾ" ಎಂದನು.

ತಾತ್ಯಾನು ಹಣೆಯ ಮೇಲಿನ ಬೆವರನ್ನು ಒರಸಿಕೊಂಡು "ಅಪ್ಪಣೆಯಂತೆ, ಆದರೆ ರಾಣಿ ಸಾಹೇಬ್—" ಎಂದು ನಿಲ್ಲಿಸಿದನು.

ನವಾಬ್—ಆದರೆ ಹೋದರೆ ಅನ್ನುವುದೇನು?

ರಾವ್‌ಸಾಹೇಬ್—ರಾಣಿಯು ಪೂಜೆಯಲ್ಲಿರುತ್ತಾಳೆ. ಆದುದರಿಂದ ಜೂಹಿ

ಯನ್ನು ಕರೆದುಕೊಂಡು ಬಾ.

ತಾತ್ಯಾ ಹೊರಟುಹೋದನು. ಆ ಮಂಡಲಿಯ ಮದವು ಇನ್ನೂ ಹೆಚ್ಚಿತು.

ತಾತ್ಯಾ ಜ್ಯೂಹಿಯನ್ನು ಏಕಾಂತದಲ್ಲಿ ಕರೆದನು. ಆಕೆಯು ಅತ್ಯಂತ ಪ್ರಸನ್ನ ಳಾಗಿದ್ದಳು.

ಜ್ಯೂಹಿ—ಸರದಾರ್ ಸಾಹೇಬ್, ತಾವು ಇಷ್ಟು ತೊಂದರೆಯನ್ನು ತೆಗೆದು ಕೊಂಡು ಇಲ್ಲಿಯವರೆಗೆ ಬಂದ ಕಾರಣವನ್ನು ಕೇಳಬಹುದೆ?

ತಾತ್ಯಾ—ಒಂದು ಮಾತನ್ನು ಹೇಳಲು ಬಂದೆ.

ಜ್ಯೂಹಿ—ಆ ಮಾತನ್ನು ಕೇಳಲು ವರ್ಷಾಂತರದಿಂದ ಕಾತರದಿಂದ ಕಾಯು ತ್ತಿದ್ದೇನೆ.

ತಾತ್ಯಾ—ನಿಮ್ಮಲ್ಲಿ ಒಂದು ವಿನಂತಿ ಮಾಡಿಕೊಳ್ಳಲು ಬಂದೆ.

ಜ್ಯೂಹಿ—ನಮ್ಮ ಸರದಾರರು ನನ್ನಲ್ಲಿ ವಿನಂತಿ ಮಾಡಬೇಕೆ! ಯಾವ ಒಂದು ಮಾತನ್ನು ಕೇಳುವುದಕ್ಕೋಸ್ಕರ ವರ್ಷಾಂತರಗಳ ತಪಸ್ಸು ಮಾಡಿ ನನ್ನ ತನುಮನ ಗಳನ್ನು ನಿಬಂಧನೆಯಲ್ಲಿಟ್ಟುಕೊಂಡಿದ್ದೇನೋ ಆ ಮಾತನ್ನು ಕೇಳುವ ಭಾಗ್ಯವು ತಮ್ಮ ಜೂಹಿಗೆ ಇಂದು ಉಯಿಸಿದೆ. ಆದರೆ—"

ತಾತ್ಯಾ—ಆದರೆ ಏನು ಜ್ಯೂಹಿ?

ಜ್ಯೂಹಿ—ಸರದಾರರೆ, ಆದರೆ ಮೊದಲು ನನ್ನ ರಾಣಿಯ ಸ್ವರಾಜ್ಯ ಸಂಗ್ರಾಮವು ಸಫಲವಾಗಲಿ. ನಂತರ ನಾನು ನಿಮ್ಮ ಆಜನ್ಮ ಸಂಗಾತಿಯಾಗುವೆನು. ಬಹಳ ದಿವಸಗಳಿಂದ ಈ ಮಾತನ್ನು ಹೇಳಬೇಕೆಂದು ಸಂಕಲ್ಪ ಮಾಡಿದೆ. ಇಂದು ತಾವು ಕೃಪೆಗೈದು ಅವಕಾಶ ಕಲ್ಪಿಸಿಕೊಡಲು ಲಜ್ಜೆ ಸಂಕೋಚಗಳನ್ನು ತ್ಯಜಿಸಿ ಮನಬಿಚ್ಚಿ ಹೇಳಿರುವೆನು.

ಪೇಶ್ವೆಯ ಪ್ರಧಾನ ಸೇನಾಪತಿಯು ಅವನತಮಸ್ತಕನಾದನು. ಕೆಲವು ಕ್ಷಣ ಗಳ ನಂತರ ಧೈರ್ಯತಂದುಕೊಂಡು "ನನ್ನ ವಿನಂತಿಯು—ನನ್ನ ಪ್ರಾರ್ಥನೆಯೇ ನೆಂದರೆ...." ಎಂದನು.

ಜೂಹಿಯು ಆತನನ್ನು ತಡೆದು "ನಿಮ್ಮ ಬಾಯಿಯಿಂದ ಪ್ರಾರ್ಥನೆ ಎಂಬ ಶಬ್ದ ವನ್ನು ಕೇಳಲಾರೆನು. ಅಪ್ಪಣೆಯಾಗಲಿ, ನಿಮ್ಮ ಜೂಹಿಯ ಶಿರವು ತಮ್ಮ ಪಾದದ ಅಡಿಯಲ್ಲಿರುವುದು. ಆದರೆ ಯಾವ ಶರತ್ತನ್ನು ನಿವೇದನ ಮಾಡಿರುವೆನೋ ಅದು ಮಾತ್ರ ಅಚಲ" ಎಂದು ಹೇಳಿದಳು.

ತಾತ್ಯಾವಿನ ಹೃದಯವು ಧಡಧಡನೆ ಹೊಡೆದುಕೊಳ್ಳಲಾರಂಭಿಸಿತು. ಮುಷ್ಟಿ ಬಿಗಿದು, ಧೈರ್ಯತಾಳಿ "ನೀವು ರಾವ್ ಸಾಹೇಬನ ಶಿಬಿರಕ್ಕೆ ಬನ್ನಿ, ಅಲ್ಲಿರುವ ಬಾಂದಾವಿನ ನವಾಬ್ ಸಾಹೇಬ, ಶಹಪುರ ಮತ್ತು ಬಾನ್ಪುರಗಳ ರಾಜರುಗಳು

ನಿಮ್ಮ ನೃತ್ಯಗಾನಗಳ ರಸಾಸ್ವಾದನೆ ಮಾಡಬೇಕೆಂದು ಆಶಿಸುತ್ತಿರುವರು. ಇದೇ ಈ ದಿನದ ಪ್ರಾರ್ಥನೆ" ಎಂದನು.

ಜೂಹಿ—ಈ ಮಾತೆ, ಈ ಪ್ರಾರ್ಥನೆಯೆ? ಸರದಾರರೇ, ನಾನು ನನ್ನ ಮನಸ್ಸನ್ನು ಬಿಚ್ಚಿ ತೋರಿಸಿರುವೆನು. ಅಲ್ಲದೆ ನಾನು ಝಾನ್ಸಿಯ ರಾಣಿಯ ಸಿಪಾಯಿ. ಯಾವ ರಾಜ ನವಾಬನಿಗಾಗಲೀ ಕಡಿಮೆಯಾದವಳಲ್ಲವೆಂಬುದು ನಿಮ್ಮ ಸ್ಮರಣೆ ಯಲ್ಲಿರಲಿ. ಇವರುಗಳು ನನ್ನನ್ನು ವೇಶ್ಯಾ ಪುತ್ರಿಯೆಂದು ಭಾವಿಸಿರಬಹುದು. ಆದರೆ ನಾನು ವೇಶ್ಯೆಯೂ ಅಲ್ಲ ಮತ್ತು ನೃತ್ಯಗಾನ ಪ್ರದರ್ಶಿಸಲು ಇಚ್ಛಿಸುವುದೂ ಇಲ್ಲ.

ಸರದಾರ್ ಸಾಹೇಬರೇ, ಆ ಮಂಡಲಿಯಲ್ಲಿ ನನ್ನ ಪ್ರಸ್ತಾಪವನ್ಯಾರು ಮಾಡಿದರು. ನಿಮ್ಮ ಬಾಯಿಯಿಂದಾದರೂ ಈ ಮಾತು ಹೇಗೆ ಹೊರಟಿತು.

ತಾತ್ಯಾ—ನನ್ನನ್ನು ನಂಬಿ ಜೂಹಿ. ನಾನು ಈ ಪ್ರಸ್ತಾಪಮಾಡಲಿಲ್ಲ. ನಾನು ಕೇವಲ ರಾವ್‌ಸಾಹೇಬರ ಅಪ್ಪಣೆಯನ್ನು ಭಗವಂತನ ಅಪ್ಪಣೆಯಂತೆ ಶಿರಸಾವಹಿಸುವೆನು. ಅವರು ಹೇಳಿದ್ದರಿಂದ ನಿಮ್ಮ ಬಳಿಗೆ ಬರುವ ಸಾಹಸವನ್ನು ಮಾಡಿದೆ.

ಜೂಹಿ—ನನ್ನನ್ನು ನೀವು, ನೀವು ಎಂದು ಸಂಬೋಧಿಸಿ ಅಪಮಾನ ಮಾಡಬೇಡಿ. ದಯವಿಟ್ಟು ನೀನು ಎಂದೇ ಸಂಬೋಧಿಸಿ. ಅವರುಗಳಿಗೆ ನಾನು ಜನರಲ್ ರೋಜನೇ ಮುಂತಾದ ಅಧಿಕಾರಿಗಳ ಮುತ್ತಾತಂದಿರನ್ನೂ ನಡುಗಿಸುವ ಧೈರ್ಯ ಮತ್ತು ಸಾಹಸ ಹೊಂದಿರುವ ಮಹಾರಾಣಿಯ ಸೈನ್ಯದ ಕರ್ನಲ್ ಎಂಬದಾಗಿ ತಿಳಿಸಿಬಿಡಿ.

ತಾತ್ಯಾ ಅಲ್ಲಿಂದ ಹೊರಟು ಹೋದನು. ಅವನು ಪುನಃ ಪೇಶ್ವೆಯ ಬಳಿಗೆ ಬರುವ ವೇಳೆಗೆ ಭಂಗಿಯು ತನ್ನ ಮಹತ್ವಾದ ಚಟುವಟಿಕೆಯನ್ನು ಪ್ರಾರಂಭಿಸಿದ್ದಿತು. ಅವರು ಮೊದಲಿನ ಚಟವನ್ನು ಮರೆತು ಬೇರೊಂದನ್ನು ಹಿಡಿದಿದ್ದರು. ಆದ್ದರಿಂದ ಆತನಿಗೆ ಬದಲು ಹೇಳುವ ಅವಶ್ಯಕತೆಯೇ ಇರಲಿಲ್ಲ.

ಜೂಹಿಯು ರಾಣಿಯ ಶಿಬಿರಕ್ಕೆ ಹೋದಳು. ರಾಣಿಯು ಆ ಸಮಯದಲ್ಲಿ ಗೀತಾ ಪಠಣದಲ್ಲಿ ಮಗ್ನಳಾಗಿದ್ದಳು. ರಾಣಿಯು ಲೋಕಾಭಿರಾಮವಾಗಿ "ಎಲ್ಲಿಗೆ ಹೋಗಿದ್ದೆ. ಜೂಹಿ?" ಎಂದು ಕೇಳಿದಳು.

ಜೂಹಿಯು ತುಂಬಿದ ಧ್ವನಿಯಲ್ಲಿ ಮೇಲುಸಿರು ಬಿಡುತ್ತಾ "ಸರದಾರ್ ಸಾಹೇಬರು ಬಂದಿದ್ದರು" ಎಂದಳು.

ರಾಣಿ—ಯಾವ ಸರದಾರರು? ನನಗೇನೋ ಎಲ್ಲರೂ ಸರದಾರರಂತೆಯೇ ಕಾಣುತ್ತಾರೆ. ಪ್ರಪಂಚದಲ್ಲಿ ಯಾವ ಸೇನೆಯಲ್ಲಿಯೂ ಇಲ್ಲಿ ಕಂಡುಬರುವ ಅವ್ಯವಸ್ಥೆಯು ಇರಲಾರದು. ಎಲ್ಲರೂ ಅವನ ಆಜ್ಞೆಯನ್ನು ಪರಿಪಾಲಿಸಿ ತಗ್ಗಿ ನಡಿಯು

ವಂತಹ ಸರ್ವಾಧಿಕಾರಿಯೊಬ್ಬನಿಲ್ಲ.

ಜೂಹಿ—ಸರದಾರ್ ತಾತ್ಯಾ ಸಾಹೇಬರು ಬಂದಿದ್ದರು.

ರಾಣಿ—ಏನು ಹೇಳಿದರು?

ಜೂಹಿ—ಶ್ರೀಮಂತ್ ರಾವ್‌ಸಾಹೇಬ್ ಪೇಶ್ವೆಯವರು ನೃತ್ಯಗಾನಮಾಡಲು ಕರೆಯುತ್ತಾರೆ ಎಂದು ಹೇಳಿದರು. ಸಭೆಯಲ್ಲಿ ಬಾಂದಾ, ಬಾನ್ಪುರ ಮತ್ತು ಶಹ ಗಡದ ಅರಸರೂ ಇರುವರಂತೆ.

ರಾಣಿ—ಹಾ! ಇಂತಹ ಮೋಜೋ? ನೀನೇನು ಉತ್ತರ ಕೊಟ್ಟೆ?

ಜೂಹಿ—ನಾನು ರಾಣೀ ಸಾಹೇಬರ ಕರ್ನಲ್ಲು. ನೃತ್ಯಗಾನಮಾಡುವವಳಲ್ಲ ಎಂದು.

ರಾಣಿ—ಜೂಹಿ, ನಿನ್ನ ಯೋಗ್ಯತೆಗೆ ತಕ್ಕಂತೆ ಉತ್ತರ ಕೊಟ್ಟೆ. ಒಂದೆರಡು ದಿನ ಗಳಲ್ಲೇ ಕೋಂಚಿನಲ್ಲಿ ಯುದ್ಧ ನಡೆಯುವ ಸಂಭವವಿದೆ. ಇವರ ಸ್ಥಿತಿಯೋ ಹೀಗಿದೆ. ಇವರುಗಳಿಗೆ ಅವರ ಗುಣದೋಷಗಳನ್ನು ಇದ್ದದ್ದು ಇದ್ದಂತೆಯೇ ಹೇಳಬೇಕೆಂದು ಮನಸ್ಸು ಹಾತೊರೆಯುತ್ತಿದೆ. ಆದರೆ ಈಗ ಅದಕ್ಕೆ ತಕ್ಕ ಸಮಯವಲ್ಲ. ಯಾವಾಗ ಲಾದರೂ ಹೇಳಲೇ ಬೇಕಾಗುವುದು. ಮತ್ತು ಏನಾದರೂ ......ಶಿಕ್ಷೆ...."

## ೭೯

ಮರುದಿನ ಲುಹಾರಿ ಕೋಟೆಯು ಶತ್ರುವಶವಾಯಿತೆಂದೂ, ಮತ್ತು ರೋಜನು ಕೋಂಚನ್ನು ಸ್ವಾಧೀನ ಪಡಿಸಿಕೊಳ್ಳಲು ಮುನ್ನುಗ್ಗುತ್ತಿರುವನೆಂದೂ ಸಂದೇಶವು ದೊರಕಿತು. ಪೇಶ್ವೆ ಮುಂತಾದವರಿಗೆ ತಮ್ಮ ಸೇನೆಯ ಅಗ್ರಭಾಗವನ್ನು ಬಲಪಡಿಸಿ ಸುಸಂಘಟಿತಮಾಡಿ ಯುದ್ಧಮಾಡುವುದು ಅಭ್ಯಾಸವಾಗಿದ್ದಿತು. ಜನರಲ್ ರೋಜನಿಗೆ ಇವರ ಸೇನೆಯ ಹಿಂಭಾಗವು ಅಷ್ಟು ಸುವ್ಯವಸ್ಥೆಯಲ್ಲಿರುವುದಿಲ್ಲವೆಂದು ತಿಳಿದಿದ್ದಿತು. ಆದುದರಿಂದ ಅವನು ಶತ್ರುಗಳನ್ನು ಆಕ್ರಮಣಮಾಡಲು ತನ್ನ ಸೈನ್ಯವನ್ನು ಮೂರು ಭಾಗವಾಗಿ ವಿಂಗಡಿಸಿ ಅದರ ಎರಡು ಭಾಗವನ್ನು ಕೋಂಚಿನ ಸೇನೆಯ ಎದುರಾಗಿ ತೆಗೆದುಕೊಂಡು ಹೊರಟನು. ಪೇಶ್ವೆಯ ಸೈನ್ಯಕ್ಕೆ ತಮ್ಮ ಎದುರುಬಂದ ಪಡೆಯು ಮಾತ್ರ ಗೋಚರವಾಯಿತು. ಅದರೊಂದಿಗೆ ತಾತ್ಯಾವನ್ನು ಹೋರಾಡಲು ನೇಮಿ ಸಿದನು. ಮಹಾರಾಣಿ ಲಕ್ಷ್ಮೀಬಾಯಿಯನ್ನು ಹಿಂಬದಿಯಲ್ಲಿಡಿಸಿದನು. ಎರಡು ಕಡೆಯಿಂದಲೂ ಘೋರಯುದ್ಧವಾಯಿತು.

ಮೊದಲೇ ರಚಿಸಿದ ಸೂಚನೆಯಂತೆ ರೋಜನ ಹಿಂಭಾಗದ ಪಡೆಯು ಧಾಳಿ ಮಾಡಿತು. ಮತ್ತು ಅದರ ತೋಪಿನ ಪ್ರಹಾರದಿಂದ ಕೋಂಚಿನ ಸೇನೆಯು ಬಹಳ

ವಾಗಿ ಗಾಯಗೊಂಡು ಓಡಿಹೋಯಿತು. ತಾತ್ಯಾ ಮತ್ತು ಲಕ್ಷ್ಮೀಬಾಯಿಯರು ತಮ್ಮ ಕೌಶಲ್ಯದಿಂದ ಆ ಸೇನೆಯನ್ನು ರೋಜನ ವ್ಯೂಹದಿಂದ ತಪ್ಪಿಸಿದರು. ಆದರೆ ಕೋಂಚನ್ನು ರೋಜನು ವಶಪಡಿಸಿಕೊಂಡನು. ಅದರೊಂದಿಗೆ ಎಂಟು ತೋಪುಗಳೂ, ಅನೇಕ ಯುದ್ಧ ಸಾಮಗ್ರಿಗಳೂ ಆತನ ಕೈವಶವಾದುವು. ರೋಜನಿಗೆ ಉಳಿದ ಸೇನೆ ಸಾಮಗ್ರಿ ಮತ್ತು ಎಲ್ಲ ಸರದಾರರನ್ನೂ ಯಾವ ಕೌಶಲ್ಯದಿಂದ ಯಾರು ಬಿಡಿಸಿ ಕೊಂಡುಹೋದರು ಎಂಬುದೇ ಆಶ್ಚರ್ಯವಾಗಿದ್ದಿತು. ಬಾರಿಬಾರಿಗೂ ಅವನ ಸಂದೇಹವು ತಾತ್ಯಾಟೋಪೆ ಮತ್ತು ಝಾನ್ಸಿಯ ರಾಣಿಯ ಮೇಲೆಯೇ ನೆಡುತ್ತಿದ್ದಿತು.

ತಾತ್ಯಾಟೋಪೆಯು ಕೋಂಚನ್ನು ಬಿಟ್ಟು ಕಾಲ್ಪಿಗೆ ಹೋಗಲೇ ಇಲ್ಲ. ಆತನು ತನ್ನ ತಂದೆ ಇರುವಲ್ಲಿಗೆ ಹೋದನು. ಆ ಸಮಯದಲ್ಲಿ ಆತನು ಪೇಶ್ವೆಯ ಮಾತನ್ನೂ ಪಾಲಿಸದೇ ಹೋದನು.

ಪೇಶ್ವೆಯು ತನ್ನ ಸೇನೆಯೊಂದಿಗೆ ಕಾಲ್ಪಿಗೆ ಹಿಂದಿರುಗಿ ಶ್ವಾಸವೆಳೆದುಕೊಂಡನು. ಬಹುಶಃ ಅಂದು ರಾತ್ರಿ ಭಂಗಿ ಸೇವನೆಯಾಗಲಿಲ್ಲ. ಮಾರನೆಯ ದಿನ ಮುಂದಿನ ಯೋಜನೆಯನ್ನು ಮಾಡಲು ಸರದಾರರ ಒಂದು ಸಭೆಯನ್ನು ಕೂಡಿಸಿದನು. ಅದರಲ್ಲಿ ರಾಣಿಯೂ ಇದ್ದಳು.

ರಾವ್‌ಸಾಹೇಬನು ಕೋಂಚಿನ ಸೋಲಿಗೆ ಯಾರ ಮೇಲೆಯೂ ದೋಷಾ ರೋಪಣೆ ಮಾಡದೆ ಕೇವಲ ತಪ್ಪಿಸಿಕೊಂಡು ಬಂದ ಚಾತುರ್ಯವನ್ನು ಕುರಿತು ಪ್ರಶಂಸೆಮಾಡಿದನು. ತರುವಾಯ ಮುಂದಿನ ಯೋಜನೆಯ ಮಾತು ಆರಂಭಿಸಿತು.

ರಾಣಿಯು ತನ್ನ ಸ್ಥಾನದಿಂದೆದ್ದು ಸೊಂಟದಲ್ಲಿದ್ದ ತನ್ನ ಕತ್ತಿಯನ್ನು ಸೆಳೆದು ಪೇಶ್ವೆಯ ಮುಂದೆ ಅದರ ಹಿಡಿಯು ಬರುವಂತೆ ಇಟ್ಟು ಪುನಃ ತನ್ನ ಸ್ಥಾನವನ್ನು ಅಲಂಕರಿಸಿ "ತಮ್ಮ ಪೂರ್ವಜರು ಈ ಕತ್ತಿಯನ್ನು ನಮ್ಮ ಕೈಗೆ ಕೊಟ್ಟರು, ಭಗವಂತನ ಕೃಪೆಯಿಂದ ನಾನೂ ಮತ್ತು ನನ್ನ ಪೂರ್ವಜರೂ ಇದರ ಉಚಿತ ಪ್ರಯೋಗ ಮಾಡಿದೆವು. ಆದರೆ ಈಗ ಈ ಖಡ್ಗವು ತಮ್ಮ ಕೃಪೆಯಿಂದ ವಂಚಿತವಾಯಿತು. ಆದುದರಿಂದ ಇದನ್ನು ಹಿಂದಿರುಗಿ ಸ್ವೀಕರಿಸಿ" ಎಂದಳು.

ಸಭೆಯಲ್ಲಿದ್ದ ಸರದಾರರೆಲ್ಲರೂ ಸ್ತಂಭೀ ಭೂತರಾದರು.

ರಾವ್‌ಸಾಹೇಬನು "ನೀವೂ ಮತ್ತು ನಿಮ್ಮ ಪೂರ್ವಿಕರೂ ಸ್ವರಾಜ್ಯ ಸ್ಥಾಪನೆಗಾಗಿ ಮಾಡಿರುವುದೆಲ್ಲವೂ ಚಿರಸ್ಮರಣೀಯವಾಗಿದೆ. ನೀವು ಝಾನ್ಸಿಯಲ್ಲಿ ಆಂಗ್ಲೇಯರನ್ನು ಹೇಗೆ ಎದುರಿಸಿ ಯುದ್ಧ ಮಾಡಿದಿರೆಂಬದು ಅವರ್ಣನೀಯ. ಕೋಂಚಿನಿಂದ ನಮ್ಮ ಸೇನೆ ಮತ್ತು ಯುದ್ಧ ಸಾಮಗ್ರಿಗಳನ್ನು ಉಳಿಸಿಕೊಂಡು ಕರೆತರುವುದರಲ್ಲಿ ತಮ್ಮ ಚಾತುರ್ಯವು ಅತುಳವಾಗಿದೆ. ನಿಮಗೆ ಸರಿಸಮಾನರಾದಂತಹ ಸೇನಾಪತಿಗಳು ಯಾರಿದ್ದಾರು? ನೀವು ಯಾವ ಯೋಜನೆಯನ್ನು ತಿಳಿಸುತ್ತೀರೋ ಅದನ್ನು ನಾವು ಶಿರಸಾ

ವಹಿಸಿ ನಡೆಸುವೆವು. ನೀವು ಈ ವೀರಾಗ್ರಣಿಗಳಿಗೆ ಕೃಪೆಮಾಡಿ ತಮ್ಮ ಬೆಂಬಲ ಕೊಟ್ಟು ಸ್ವರಾಜ್ಯ ಸ್ಥಾಪನೆಯ-ದೃಢ ಸಂಕಲ್ಪವನ್ನು ನೆನಪಿನಲ್ಲಿಟ್ಟು ಕೊಳ್ಳಿ" ಎಂದನು.

ರಾಣಿಯು "ಕೋಂಚಿನ ಯುದ್ಧದಲ್ಲಿ ನಿಮ್ಮ ಸೇನೆಯ ಪ್ರಬಂಧವು ಸ್ವಲ್ಪವೂ ಚೆನ್ನಾಗಿರಲಿಲ್ಲ. ಸೇನೆಯಲ್ಲಿ ವ್ಯವಸ್ಥೆಯೇ ಇರಲಿಲ್ಲ. ಆಂಗ್ಲೇಯ ಸೇನೆಯಾದರೋ ತನ್ನ ಸುವ್ಯವಸ್ಥೆಯ ಕಾರಣ ಎಲ್ಲೆಲ್ಲೂ ವಿಜಯವನ್ನು ಗಳಿಸುತ್ತಿದೆ. ನಮ್ಮ ಸೈನಿಕರು ಶೌರ್ಯ ಪರಾಕ್ರಮಗಳಲ್ಲಿ ಆಂಗ್ಲೇಯರಿಗಿಂತ ಮುಂದುವರಿದಿದ್ದಾರೆ. ಆದರೆ ವ್ಯವಸ್ಥೆ ಮತ್ತು ದೂರದೃಷ್ಟಿಯಿಂದ ಮಾಡಿದ ಯೋಜನೆಗಳು ಇಲ್ಲದ ಕಾರಣ ಅವರ ಶೌರ್ಯವೆಲ್ಲವೂ ವ್ಯರ್ಥವಾಗುತ್ತಿದೆ. ಝಾನ್ಸಿಯ ಸಹಾಯಕ್ಕಾಗಿ ತಮ್ಮ ಅಪಾರ ಸೈನ್ಯವು ಬಂದಿತು. ಆದರೆ ಶಿಸ್ತಿಲ್ಲದ ಕಾರಣ ಸೋತು ಓಡಿಹೋಗಬೇಕಾಯಿತು. ಎಲ್ಲಿಯವರೆಗೆ ನೀವು ನಿಮ್ಮ ಸೈನ್ಯಗಳನ್ನು ಸರಿಯಾದ ಸ್ಥಿತಿಯಲ್ಲಿಟ್ಟು ಒಗ್ಗಟ್ಟಿನಿಂದ ಕೆಲಸಮಾಡಿಸುವುದಿಲ್ಲವೋ ಅಲ್ಲಿಯವರೆಗೆ ಯುದ್ಧದಲ್ಲಿ ಯಶಃಪ್ರಾಪ್ತಿಯಾಗವುದಿಲ್ಲ. ಒಂದು ವ್ಯಕ್ತಿಯನ್ನು ಮುಖ್ಯಾಧಿಕಾರಿಯೆಂದು ಒಪ್ಪಿಕೊಳ್ಳದೆ ತಮ್ಮತಮ್ಮ ಮನ ಬಂದಂತೆ ಯೋಜನೆಗಳನ್ನು ಕಲ್ಪಿಸಿ ಮಾತುಗಳಲ್ಲಿ ಕಾಲಹರಣ ಮಾಡುವುದು ಅವ್ಯವಸ್ಥೆಯ ಫಲ" ಎಂದಳು.

ರಾವ್‌ಸಾಹೇಬನು ಕತ್ತಿಯನ್ನು ಕೈಗೆ ತೆಗೆದುಕೊಂಡು ರಾಣಿಯ ಮುಂದೆ ನಮ್ರತೆಯಿಂದ ಹೋಗಿ ನಿಂತು "ತಾವು ದಯಮಾಡಿ ಈ ಖಡ್ಗವನ್ನು ಗ್ರಹಣಮಾಡಿ. ತಮ್ಮ ಒಪ್ಪಿಗೆಯು ಸರ್ವಸಮ್ಮತವು" ಎಂದನು.

ರಾಣಿಯು ಕತ್ತಿಯನ್ನು ಸ್ವೀಕರಿಸಿ ಒರೆಯಲ್ಲಿರಿಸಿದಳು.

ನೆರೆದಿದ್ದ ಸರದಾರರು ರಾವ್‌ಸಾಹೇಬನನ್ನು ಪ್ರಧಾನ ಸೇನಾಪತಿಯಾಗಿ ಚುನಾಯಿಸಿದರು. ಆತನು ಅದನ್ನು ಸ್ವೀಕರಿಸಿದನು.

ಸರದಾರರು ರಾಣಿಯನ್ನು ಪ್ರಧಾನ ಸೇನಾಪತಿಯನ್ನಾಗಿ ಚುನಾಯಿಸದೇ ಇತಿಹಾಸದಲ್ಲಿ ತಮ್ಮ ಪರಾಜಯುವನ್ನು ಬರೆದು ಕೊಂಡರು. ಆದರೆ ಯೋಜನೆಯನ್ನು ಹೂಡುವುದಕ್ಕೆ ರಾಣಿಯನ್ನು ಒತ್ತಾಯ ಪಡಿಸಿದರು. ರಾಣಿಯು ಯುದ್ಧ ರಚನೆಯನ್ನು ತಿಳಿಸಿದಳು. ಅದರಂತೆ ಸೈನ್ಯವನ್ನು ನಿಲ್ಲಿಸಲಾಯಿತು, ತೋಪುಗಳನ್ನು ಸ್ಥಾಪಿಸಲಾಯಿತು. ಗೋಲಂದಾಜಿಗಳನ್ನು ನೇಮಿಸಿ ನಿಯುಕ್ತಮಾಡಿ ಸರದಾರರನ್ನು ಬೇರೆ ಬೇರೆ ಸ್ಥಾನಗಳಿಗೆ ವಿಂಗಡಿಸಲಾಯಿತು.

ರಾಣಿಗೆ ಕೆಂಪು ವಸ್ತ್ರಧಾರಿಗಳಾದ ೨೫೦ ಮಂದಿ ಸವಾರರನ್ನು ಕೊಟ್ಟು ರಣಭೂಮಿಯ ಎಡಭಾಗದ ರಕ್ಷಣೆಯ ಭಾರವನ್ನು ವಹಿಸಲಾಯಿತು.

# ೮೦

ರಾಣಿಯು ಯಾವ ಯಾವ ಸರದಾರನಿಗೆ ಯಾವ ಯಾವ ಸ್ಥಾನವು ನಿರ್ದಿಷ್ಟ ಮಾಡಲಾಗುವುದೋ ಅವರು ಅಲ್ಲಿಯೇ ಇದ್ದು ಹೊಡೆದಾಡಬೇಕೆಂದೂ, ಎಂತಹ ಪ್ರಲೋಭ ಅಥವಾ ಉತ್ತೇಜನ ದೊರಕಿದರೂ ತಮ್ಮ ಸ್ಥಾನವನ್ನು ಬಿಟ್ಟು ಆಂಗ್ಲೇಯರ ಸೇನೆಯ ಮೇಲೆ ಧಾಳಿ ಮಾಡಬಾರದೆಂದೂ. ಯಾವಾಗ ರಿಸಾಲೆಗಾಗಲಿ (ಅಶ್ವಸೇನೆ) ಅಥವಾ ಪದಾತಿ ಸೈನ್ಯಕ್ಕಾಗಲೀ ಆದೇಶ ದೊರಕುವುದೋ ಆಗ ಅವು ಸೂಚಿಸದ ಕಡೆ ಯುದ್ಧಮಾಡಬೇಕೆಂದೂ ನಿರ್ದೇಶಿಸಿದಳು.

ರಾವ್‌ಸಾಹೇಬನು ಆ ಹೇಳಿಕೆಯನ್ನು ಸಮರ್ಥಿಸುತ್ತಾ "ಹಾಗೆಯೇ ಆಗುವುದು; ಹಾಗೆಯೇ ಆಗಬೇಕು. ಎಲ್ಲರೂ ಇದನ್ನು ಮರೆಯಬಾರದು" ಎಂದು ಹೇಳಿದನು.

ರಾವ್‌ಸಾಹೇಬನು ಸಹಜವಾಗಿಯೇ ಸಂತೋಷಿಯೂ ಮಹತ್ವಾಕಾಂಕ್ಷಿಯೂ ಆಗಿದ್ದನು. ನಾನಾಸಾಹೇಬನು ಲಕ್ನೋವಿನ ಜಯಪರಾಜಯಗಳಲ್ಲಿ ಒಂದೇ ಸಮನಾಗಿ ಮುಳುಗಿರದೆ ಒಂದು ವೇಳೆ ಕಾಲ್ಪಿಯಲ್ಲಿಯೇ ಇದ್ದಿದ್ದರೆ, ಅವನೂ, ಲಕ್ಷ್ಮೀಬಾಯಿ ಮತ್ತು ತಾತ್ಯಾಟೋಪೆ ಮೂವರೂ ಕೂಡಿ ಜನರಲ್ ರೋಜನಂತಹ ಅತ್ಯಂತ ಯೋಗ್ಯ ಮತ್ತು ರಣಕುಶಲ ಸೇನಾಪತಿಯನ್ನೂ ಮೀರಿಸುವಂತಹ ಪ್ರಬಲರಾಗುತ್ತಿದ್ದರು. ಆದರೆ ರಾವ್‌ಸಾಹೇಬನ ಲೋಕಪ್ರಿಯತೆ, ಉದಾರತೆ, ಸಡಿಲ ಸ್ವಭಾವ ಮತ್ತು ಸಹಜವರ್ತಿಗುಣಗಳಿಗಾಗಿ ಅವನನ್ನು ಪ್ರಧಾನ ಸೇನಾಪತಿಯಾಗಿ ಚುನಾಯಿಸಿದರೇ ವಿನಹ ಯೋಗ್ಯತೆಗಲ್ಲ. ಆತನು ಪ್ರಧಾನ ಸೇನಾಪತಿಯ ಕಾರ್ಯವನ್ನು ನಿರ್ವಹಿಸಲು ಅಶಕ್ತನಾಗಿದ್ದನು. ಆ ಸ್ಥಾನಕ್ಕೆ ರಾಣಿಯಂತಹ ತಪಸ್ವಿಯೂ ತೇಜಸ್ವಿಯೂ ಆದ ವ್ಯಕ್ತಿಯನ್ನು ಚುನಾಯಿಸಬಹುದಾಗಿದ್ದಿತು.

ರೋಜನಿಗೆ ಇವರ ಪಡೆಯ ರಚನೆಯು ಸುಲಭವಾಗಿ ತಿಳಿದುಹೋಯಿತು. ನಿರ್ದಿಷ್ಟಸ್ಥಾನಗಳಿಂದ ಈ ಸೈನ್ಯವನ್ನು ಹೊಡೆದೆಬ್ಬಿಸಿದರೆ ನಂತರ ಪೂರ್ಣ ಅವ್ಯವಸ್ಥೆಯು ಏರ್ಪಡುವುದು ಎಂದು ಈತನಿಗೆ ಗೋಚರವಾಯಿತು.

ಕೋಂಚಿನ ಸೋಲಿನಿಂದಲೂ ಮತ್ತು ರಾಣಿಯು ಮಾಡಿದ ಭರ್ತ್ಸನೆಯಿಂದಲೂ ಪೇಶ್ವೆಯ ಸೇನೆಯು ಆಂಗ್ಲೇಯರನ್ನು ಹೊಡೆದು ಓಡಿಸುವುದಕ್ಕಾಗಿ ಹಲ್ಲುಮುಡಿ ಕಚ್ಚಿ ಸಮಯ ಹೊಂಚುತ್ತಿದ್ದರು. ತಮ್ಮ ಇಚ್ಛೆಯನ್ನು ಪೂರ್ಣಗೊಳಿಸಿ ಕೊಳ್ಳಲು ಸಹಾಯಕವಾಗುವಂತೆ ರಾಣಿಯ ನಿಷೇಧವನ್ನು ಲೆಕ್ಕಿಸದೇ ಚೆನ್ನಾಗಿ ಭಂಗಿಯ ಸೇವನೆಮಾಡಿದರು.

ರೋಜನ ಒಂದು ಸಣ್ಣ ತುಕ್ಕಡಿಯು ಕೆಲವು ಚಿಕ್ಕ ತೋಪುಗಳೊಂದಿಗೆ ಮುಂದೆ

ಬಂದಿತು. ಕಾಲ್ಪಿಯ ಸೈನ್ಯವು ಇದನ್ನು ಕಂಡು ರೋಜನ ಸಂಪೂರ್ಣ ಸೇನೆಯು ಬಂದಿತೆಂದು ತಿಳಿದುಕೊಂಡಿತು. ತಕ್ಷಣ ತಮ್ಮ ನಿರ್ದಿಷ್ಟ ಸ್ಥಾನಗಳನ್ನು ಬಿಟ್ಟು ಆ ಪಡೆಯ ಮೇಲೆ ಬಿದ್ದರು. ಆ ಕಾಲದಲ್ಲಿ ಗುಂಡಿನ ಮಳೆ ಯೊಂದಿಗೆ ಹೊಡೆದಾಟವು ಶುರುವಾಯಿತು. ರಾಣಿಯು ಇದನ್ನು ತಡೆಯುವಂತೆ ಸಂದೇಶಿಸಿದಳು. ಆದರೆ ರಾವ್‌ಸಾಹೇಬನು ಅದನ್ನು ಕಾರ್ಯಗತ ಮಾಡಲಾಗ ಲಿಲ್ಲ. ಈ ಸುಸಮಯವನ್ನುಪಯೋಗಿಸಿಕೊಂಡು ರೋಜನು ತನ್ನ ಇದ್ದಬದ್ದ ಸೈನ್ಯ ವನ್ನೆಲ್ಲಾ ಕರೆದು ಕೊಂಡು ಬಂದು ಗುಂಡಿನ ಮಳೆಯನ್ನಾರಂಭಿಸಿದನು. ಕಾಲ್ಪಿಯ ಸೈನ್ಯದವರು ತಮ್ಮ ನಿರ್ದಿಷ್ಟಸ್ಥಾನವನ್ನು ತ್ಯಜಿಸಿದ್ದ ಕಾರಣ ಎಲ್ಲವೂ ಜಾಗ್ರತೆಯಾಗಿ ನಾಶವಾಗಲಾರಂಭಿಸಿತು. ಅವರ ಸಂಸ್ಥಾನೀಕ ಸೇನಾಪತಿಗಳೆಲ್ಲರೂ ಹಿಮ್ಮೆಟ್ಟಿ ಓಡಿಹೋಗಲು ನಿಶ್ಚಯಿಸಿದರು. ರಾಣಿಯು ಅವರನ್ನು ನಿಂದಿಸುವುದರಲ್ಲಿ ಪ್ರಯೋಜನ ವಿಲ್ಲವೆಂದು ಅರಿತು ಅವರಲ್ಲಿ ಧೈರ್ಯವನ್ನು ಹುರಿದುಂಬಿಸಲೆತ್ನಿಸಿ" ನೀವು ಎಲ್ಲೆಲ್ಲಿರು ವಿರೋ ಅಲ್ಲಲ್ಲಿಯೇ ನಿಲ್ಲಿ. ಹಿಮ್ಮೆಟ್ಟ ಬೇಡಿ. ನಾನು ಇವರ ತೋಪುಗಳನ್ನ ಶಾಂತ ಗೊಳಿಸುವೆನು. ಯಾವಾಗ ಅವು ಶಾಂತವಾಗುವುವೋ ಆಗ ಎರಡು ಪಾರ್ಶ್ವ ಗಳಿಂದಲೂ ಅಶ್ವಾರೋಹಿಗಳನ್ನೂ, ಮಧ್ಯೆ ಪದಾತಿ ತುಪಾಕಿ ಸೈನ್ಯವನ್ನೂ ಕಳುಹಿಸಿ" ಎಂದು ಹೇಳಿದಳು.

ರಾಣಿಯ ಕೈಕೆಳಗೆ ಕೇವಲ ೨೫೦ ಮಂದಿ ಸವಾರರಿದ್ದರು. ಅವರು ತಮ್ಮ ಮುಖಂಡಳನ್ನು ಚೆನ್ನಾಗಿ ಅರಿತು ಅವಳಲ್ಲಿ ಅಪಾರಭಕ್ತಿಯನ್ನಿಟ್ಟಿದ್ದರು. ಈ ಸೈನ್ಯ ವನ್ನು ಐದು ಭಾಗವಾಗಿ ವಿಂಗಡಿಸಿ, ಒಂದೊಂದು ವಿಭಾಗಕ್ಕೂ ದೇಶಮುಖ, ಗುಲ್ ಮಹಮ್ಮದ್, ರಘುನಾಥಸಿಂಹ, ಜೂಹಿ ಇವರನ್ನು ಮುಖಂಡರನ್ನಾಗಿ ನೇಮಿಸಿ ತನ್ನ ಅಧೀನದಲ್ಲಿ ಒಂದು ವಿಭಾಗವನ್ನಿರಿಸಿಕೊಂಡಳು. ಮುಂದರಿಯು ಅವಳ ವಿಭಾಗದಲ್ಲಿಯೇ ಇದ್ದಳು. ಯಮುನಾ ನದಿಯ ತೀರದ ಒಂದು ಗುಡ್ಡದಿಂದ ದುರ್ಬೀನಿನ ಮೂಲಕ ರಣಕ್ಷೇತ್ರವನ್ನು ಕೆಲಹೊತ್ತು ಪರೀಕ್ಷಿಸಿ ನೋಡಿದಳು. ಅವಳಿಗೆ ರೋಜನ ಸೈನ್ಯದ ಬಲಹೀನ ಭಾಗವು ವ್ಯಕ್ತವಾಯಿತು.

ರಾಣಿಯು ತನ್ನ ಐದು ವಿಭಾಗಗಳನ್ನೂ ರೋಜನ ಸೈನ್ಯದ ಬಲಭಾಗದ ಕಡೆಗೆ ಸ್ವಲ್ಪ ದೂರ ತೆಗೆದುಕೊಂಡು ಹೋಗಿ ನಂತರ ಅವನ್ನು ಬೇರ್ಪಡಿಸಿ, ಪಕ್ಷಿಗಳ ಮೇಲೆ ಬೀಸುವ ಬಲೆಯಂತೆ ಅವನ ಸೈನ್ಯದ ಮೇಲೆ ಬಿದ್ದಳು. ಈ ಆಕ್ರಮಣವು ಬಿರುಗಾಳಿ ಯಂತೆ ಬೀಸಿ ಆಂಗ್ಲೇಯ ಸೈನ್ಯವನ್ನು ಹಿಮ್ಮೆಟ್ಟುವಂತೆ ಮಾಡಿತು. ಆಂಗ್ಲೇಯ ಸೈನಿಕರೂ ಹುದ್ದೇದಾರರೂ ತುಂಡರಿಸಿ ಹೋದರು. ರಾಣಿಯು ಶೌರ್ಯ, ವಿವೇಕ, ಕೌಶಲ್ಯಗಳಿಂದ ಯುದ್ಧಮಾಡಿದ ಕಾರಣ ಆಂಗ್ಲೇಯರ ತೋಪುಖಾನೆಯು ಕೆಲ ವರೆಗೆ ತಣ್ಣಗಾಯಿತು. ಗೋಲಂದಾಜಿಗಳು ಆಕ್ರಮಣದಿಂದ ಸ್ತಬ್ಧರಾದರು.

ರಾಣಿಯು ಕೊಲ್ಲುತ್ತಾ, ಕೆಡುವುತ್ತಾ ತೋಪಿನಿಂದ ೨೦ ಅಡಿ ಅಂತರದ ವರೆಗೂ ಹೋದಳು. ಆಗ ಕಾಲ್ಪಿಯ ಸೇನೆಯು ಮುಂಬರಿಯಿತು. ಆದರೆ ಸಿಪಾಯಿಗಳು ಭಂಗಿಯನ್ನು ಸೇವಿಸಿದ್ದ ಅಮಲಿನಲ್ಲಿ ಆಜ್ಞೆಗಳನ್ನು ಸರಿಯಾಗಿ ಪಾಲಿಸಲು ಅಸಮರ್ಥರಾದರು. ಕೇವಲ ರಾಣಿಯ ಅದ್ಭುತ ಪರಾಕ್ರಮವೊಂದೇ ಈ ಸೈನಿಕರ ಅಮಲನ್ನೂ ಮತ್ತು ಅವರ ಸರದಾರರ ಮೂರ್ಖತನವನ್ನೂ ಸ್ವಲ್ಪ ಮುಚ್ಚುತ್ತಿದ್ದಿತು. ರಾಣಿಯು ತನ್ನ ಕುದುರೆಯ ಲಗಾಮನ್ನು ತನ್ನ ಹಲ್ಲಿನಿಂದ ಕಚ್ಚಿ ಎರಡು ಕೈಗಳಲ್ಲಿಯೂ ಖಡ್ಗಪ್ರಯೋಗ ಮಾಡಲುಪಕ್ರಮಿಸಿದಳು. ಪೇಶ್ವೆಯ ಸೈನ್ಯವು ಧೈರ್ಯದಿಂದ ಕಾದಾಡಿತು. ರಾಣಿಯು ಆಕ್ರಮಣಮಾಡಿದ ಆಂಗ್ಲೇಯರ ಅಳಿದುಳಿದ ಗೋಲಂದಾಜಿಗಳು ಮೈದಾನವನ್ನು ಬಿಟ್ಟು ಓಡಿದರು. ಬ್ರಿಗೆಡಿಯರ್ ಸ್ಟುವರ್ಟನು ಪರಿಸ್ಥಿತಿಯು ಕೆಟ್ಟದ್ದುದನ್ನು ನೋಡಿ ಒಡನೆಯೆ ಚಿಕ್ಕ ತೋಪುಗಳ ಪಡೆಯನ್ನು ತೆಗೆದುಕೊಂಡು ಮುಂಬರಿದು ಬಂದು ಗುಂಡಿನ ವರ್ಷವನ್ನು ಕರೆದನು. ಇದರಿಂದ ಆತನು ಓಡಿಹೋಗುತ್ತಿದ್ದ ಗೋಲಂದಾಜಿಗಳನ್ನು ಉತ್ಸಾಹಗೊಳಿಸಿದನು. ರೋಜನು ಒಂದೆಡೆ ಒಂಟೆಯ—ತೋಪುಖಾನೆಯನ್ನು ಇರಿಸಿಕೊಂಡಿದ್ದನು.

ತಮ್ಮ ಸೇನೆಯು ಹಿಮ್ಮೆಟ್ಟುತ್ತಿರುವ ಸಮಾಚಾರವು ತಿಳಿದೊಡನೆಯೇ ಅವನು ಈ ತೋಪುಖಾನೆಯನ್ನು ತೆಗೆದುಕೊಂಡು ಬಂದು ಗುಂಡುಹಾರಿಸುವುದಕ್ಕೆ ಪ್ರಾರಂಭಿಸಿದನು. ಕಾಲ್ಪಿಯ ಸೇನೆಯು ಛಿನ್ನಭಿನ್ನವಾಗಲಾರಂಭಿಸಿತು. ರಾಣಿಯು ತನ್ನ ದಳವನ್ನು ತೆಗೆದುಕೊಂಡು ರೋಜನನ್ನು ಎದುರಿಸಲು ಹೋದಳು. ಆದರೆ ಅಮಲಿನಲ್ಲಿದ್ದ ಸಿಪಾಯಿಗಳಿಗೆ ಭಂಗಿಯು ಪಲಾಯನ ಸೂತ್ರವನ್ನು ಹೇಳಿತು. ಅವರು ಕಂಬಿ ಕಿತ್ತರು. ವಿವಶಳಾಗಿ ರಾಣಿಯು ತನ್ನ ಪಡೆಯನ್ನು ರಣಭೂಮಿಯಿಂದ ಹಿಂದಿರುಗಿಸಬೇಕಾಯಿತು. ಅಪೇಕ್ಷಿಸಿದಂತೆ ಅವಳ ಸೈನಿಕರಲ್ಲಿ ಬಹಳ ಕಡಿಮೆ ಮಂದಿ ಜನರು ಮಡಿದರು. ಉಳಿದ ಸೈನಿಕರೊಂದಿಗೆ ಅವಳು ರಾವ್‌ಸಾಹೇಬನ ಶಿಬಿರಕ್ಕೆ ಬಂದು ತಲಪಿದಳು.

ಇನ್ನೂ ಎರಡು ದಿನ ಪೈಶಾಚಿಕ ಕೊಲೆಯೇರ್ಪಟ್ಟಿತು. ಆದರೆ ಅದನ್ನು ಯುದ್ಧವೆಂದು ಕರೆಯಲಾಗುವುದಿಲ್ಲ. ಪೇಶ್ವೆಯ ಸೈನ್ಯದ ಅನೇಕ ಸಿಪಾಯಿಗಳು ಅಂತಿಮ ವಿಜಯವು ತಮಗಿಲ್ಲವೆಂದು ಭಾವಿಸಿ ತಮ್ಮ ತಮ್ಮ ಹಳ್ಳಿಗಳಿಗೆ ಓಡಿಹೋದರು.

ಮತ್ತೆರಡು ದಿನ ಪೇಶ್ವೆಯು ಆಂಗ್ಲೇಯರೊಂದಿಗೆ ವ್ಯರ್ಥವಾದ ತೋಪಿನ ಯುದ್ಧವನ್ನು ನಡೆಸಿದನು. ಈ ಸೈನ್ಯದಲ್ಲಿ ದರೋಡೆಕಾರರು ಮತ್ತು ಮೋಸಗಾರರೇ ಅಧಿಕವಾಗಿದ್ದರು. ಪೇಶ್ವೆಯು ಸೋತನೆಂಬುದು ಅರಿವಾದೊಡನೆಯೇ ಅವರು ಕಾಲ್ಪಿಯನ್ನು ಲೂಟಮಾಡಿದರು.

ಪೇಶ್ವೆಯು ಕಾಲ್ಪಿಯನ್ನು ತ್ಯಜಿಸಬೇಕಾಯಿತು. ಅವನೊಂದಿಗೆ ಸ್ವಲ್ಪ ಸೇನೆಯು ಹಿಂಬಾಲಿಸಿತು. ರಾಣಿಯು ತನ್ನ ಐದು ಮಂದಿ ದಳಪತಿಗಳು ಮತ್ತು ಅಳಿದುಳಿದ ಕೆಂಪು ವಸ್ತ್ರಧಾರಿ ಸೈನ್ಯದೊಂದಿಗೆ ಹೊರಟು ಹೋದಳು. ಈ ಸೋತು ನಶಿಸಿ ಹೋದ ದಳವು ಗವಾಲಿಯರಿಗೆ ನೈರುತ್ಯ ದಿಕ್ಕಿನಲ್ಲಿ ನಾಲ್ವತ್ತಾರು ಮೈಲಿ ದೂರದಲ್ಲಿದ್ದ ಗೋಪಾಲ ಪುರದಲ್ಲಿ ಹೋಗಿ ನೆಲಸಿತು. ಕೋಂಚಿನ ಪರಾಜಯವಾದ ಮೇಲೆ ತಾತ್ಯಾಟೋಪೆಯು ಜಾಲೋವಿನಲ್ಲಿದ್ದ ತನ್ನ ತಂದೆಯ ಬಳಿಗೆ ಬಂದಿದ್ದನು. ಕಾಲ್ಪಿಯ ಪರಾಭವದ ವೃತ್ತಾಂತವನ್ನು ಕೇಳಿ ಅವನಿಗೆ ವ್ಯಸನವಾಗಿ ಆತನು ಪೇಶ್ವೆಯ ಬಳಿಗೆ ಗೋಪಾಲ ಪುರಕ್ಕೆ ಬಂದು ಸೇರಿದನು. ಬಾಂದಾವಿನ ನವಾಬನೂ ಅಲ್ಲಿ ಇಲ್ಲಿ ಅಲೆದಾಡುತ್ತಾ ಅದೇ ಸ್ಥಳವನ್ನು ಸೇರಿದನು. ರಾಜಾಮರ್ದನ್‌ಸಿಂಹ ಮತ್ತು ರಾಜ ಭಕ್ತಬಲಿ ಇದರ ತರುವಾಯ ಯುದ್ಧದಲ್ಲಿ ಕಾಲಿಡಲಿಲ್ಲ. ಕೆಲವು ಕಾಲಾನಂತರ ರಾಜಾ ಭಕ್ತಬಲಿಯನ್ನು ಆಂಗ್ಲೇಯರು ಬಂಧಿಸಿ ಲಾಹೋರಿಗೆ ಕಳುಹಿಸಿದರು. ಮರ್ದನಸಿಂಹನೂ ಕೈದಿಯಾದನು.

ರೋಜನಿಗೆ ಕಾಲ್ಪಿಯಲ್ಲಿ ಪೇಶ್ವೆಯ ಅನೇಕ ಅಮೂಲ್ಯ ಯುದ್ಧಸಾಮಗ್ರಿಗಳು ದೊರಕಿದವು—೧೫ ತೋಪುಗಳು, ೭೦೦ ಮಣ ಮದ್ದು, ಅಸಂಖ್ಯವಾದ ಬಂದೂಕು, ಕತ್ತಿಗಳೂ, ಮತ್ತು ಹೊಸಮಾದರಿಯ ಶಸ್ತ್ರಾಸ್ತ್ರಗಳನ್ನು ತಯಾರಿಸುವ ಯಂತ್ರೋಪಕರಣಗಳೂ ಅವುಗಳಲ್ಲಿದ್ದವು. ರೋಜನು ಈ ವಿಜಯವನ್ನು ಮೇ ೨೪ ನೆಯ ತಾರೀಖು ಗಳಿಸಿದನು. ಅಂದೇ ರಾಣಿ ವಿಕ್ಟೋರಿಯಾವಿನ ಜನ್ಮದಿನ. ಆದುದರಿಂದ ಆಂಗ್ಲೇಯರು ಅತಿವಿಜೃಂಭಣೆಯಿಂದ ಕಾಲ್ಪಿಯ ಮೇಲೆ ತಮ್ಮ ಧ್ವಜವನ್ನೇರಿಸಿ, ಕೊಳ್ಳೆಹೊಡೆದು ತಂದ ಸಕ್ಕರೆಯನ್ನು ಪ್ರಸಾದದಂತೆ ಸ್ವೀಕರಿಸಿ ನಂತರ ಕಾಲ್ಪಿಯನ್ನು ತತ್ಪರತೆಯಿಂದ ಲೂಟಿ ಮಾಡಿದರು.

ಜನರಲ್ ರೋಜನು ನರ್ಮದಾನದಿಯ ಉತ್ತರಭಾಗದಿಂದ ಕಾಲ್ಪಿಯವರೆಗೆ ತನ್ನ ಅಧೀನಮಾಡಿಕೊಂಡನು. ವ್ಹಿಟ್‌ಲಾಕನು ನರ್ಮದಾ ತೀರದಿಂದ ಈಶಾನ್ಯ ದಿಕ್ಕಿಗೆ ನಡೆದು ಕರ್ವಿ, ಮಹೋಬ, ಬಾಂದಾ ಇತ್ಯಾದಿಗಳನ್ನು ಲೂಟಿಮಾಡಿ ಮೆಟ್ಟಿ ತುಳಿದು ಕಾಲ್ಪಿಯಲ್ಲಿ ಬಂದು ರೋಜನನ್ನು ಸೇರಿದನು. ರಾಜಪುತ್ರಸ್ಥಾನದ ಕಡೆಯಿಂದ ಕರ್ನಲ್ ಸ್ಮಿತ್ತನು ತನ್ನ ಸೇನೆಯನ್ನು ತೆಗೆದುಕೊಂಡು ಆಗ್ರಾವಿನ ಮೂಲಕ ಗವಾಲಿಯರಿನ ಕಡೆ ಬರುತ್ತಿದ್ದನು. ಕ್ರಾಂತಿಕಾರರ ಮುಖಂಡರುಗಳನ್ನು ಹಿಡಿಯಲು ಹಳ್ಳಿಹಳ್ಳಿಯಲ್ಲಿಯೂ ಇನಾಮು, ಜಹಗೀರುಗಳನ್ನು ಕೊಡುತ್ತಾಹೋದರು.

ರಾವ್‌ಸಾಹೇಬನ ಬಳಿ ಧನವಂತರೂ, ಮತ್ತು ಸರದಾರರೂ ಅಧಿಕ ಸಂಖ್ಯೆಯಲ್ಲಿದ್ದು ಸೇನೆಯು ಬಹಳ ಕಡಿಮೆಯಾಗಿದ್ದಿತು. ತೋಪುಗಳೂ ಇರಲಿಲ್ಲ, ಯುದ್ಧಸಾಮಗ್ರಿಯೂ ಉಳಿದಿರಲಿಲ್ಲ. ಆಡಳಿತವಂತೂ ಯಾವಾಗ್ಯೂ ಇರಲಿಲ್ಲ.

ದಿನವೆಲ್ಲಾ ಬಿಸಿಗಾಳಿಯು ಸುಯ್ಯೆಂದು ಬೀಸುತ್ತಿದ್ದಿತು. ರಾತ್ರಿಯೂ ಅದರ ಪರಿಣಾಮವಾಗಿ ಬಿಸಿಯಾಗಿದ್ದಿತು. ನಕ್ಷತ್ರಗಳು ಧೂಳಿನಿಂದ ಮುಚ್ಚಿ ಹೋಗಿದ್ದವು ಗೋಪಾಲಪುರದ ಒಂದು ತೋಟದಲ್ಲಿ ರಾವ್‌ಸಾಹೇಬ್, ತಾತ್ಯಾಟೋಪೆ, ಬಾಂದಾವಿನ ನವಾಬ ಮುಂತಾದವರು ಮುಂದಿನ ಯೋಜನೆಯನ್ನು ನಡೆಸುತ್ತಿದ್ದರು. ಕಗ್ಗತ್ತಲೆಯು ಮೂಡಿದ್ದಿತು. ಅವರ ಬಳಿ ಯಾವ ಬೆಳಕೂ ಇರಲಿಲ್ಲ. ಆದುದರಿಂದ ಯಾರ ಮುಖದ ಮೇಲೆ ಯಾವ ಭಾವವು ಉದ್ಭವಿಸುತ್ತಿದ್ದಿತೋ ಯಾರಿಗೂ ಅರಿವಾಗುತ್ತಿರಲಿಲ್ಲ.

ರಾಣಿ ಲಕ್ಷ್ಮೀಬಾಯಿಯು ತನ್ನ ಶಿಬಿರದಲ್ಲಿದ್ದಳು. ಆ ದರ್ಬಾರಿಗೆ ಬಂದಿರಲಿಲ್ಲ.

"ಹೇಗಾದರೂ ನಾಗಪುರವನ್ನು ತಲಪಿದರ ಸೈನ್ಯ ಸಂಗ್ರಹಣ ಮಾಡಬಹುದು. ಇಂದೋರಿನ ಛಾವನಿಯಲ್ಲಿ ತಕ್ಕ ಮಟ್ಟಿಗೆ ಸಹಾಯ ದೊರಕಬಹುದು" ಎಂದು ರಾವ್‌ಸಾಹೇಬನು ಹೇಳಿದನು.

ಬಾಂದಾವಿನ ನವಾಬನು ತನ್ನ ಭಯವನ್ನು ಪ್ರಕಟಿಸುತ್ತಾ "ಹೈದರಾಬಾದ್ ನಿಜಾಮನ ದೆಸೆಯಿಂದ ನಾಗಪುರದ ನೆರೆಯಲ್ಲಿರುವದು ಅಸಾಧ್ಯ" ಎಂದು ಹೇಳಿದನು.

ತಾತ್ಯಾ—ನಿಜಾಮನ ಭಯವೇನೂ ನಮಗಿಲ್ಲ. ಅಲ್ಲಿನ ಜನರು ಖಂಡಿತವಾಗಿ ನಮ್ಮೊಡನೆ ಸಹಕರಿಸುತ್ತಾರೆ.

ರಾವ್—ಅಲ್ಲಿಂದ ಮಹಾರಾಷ್ಟ್ರಕ್ಕೆ ಹೋಗುವುದಕ್ಕೆ ಸುಲಭವಾಗುವುದು. ಬೆಟ್ಟಗುಡ್ಡಗಳು, ಕೋಟೆ, ಘಟ್ಟಗಳು ಮತ್ತು ನದಿಗಳು ಎಲ್ಲಾ ವಿಧವಾದ ಯುದ್ಧಗಳಿಗೂ ಉಪಯೋಗವಾಗಿವೆ.

ನವಾಬ್—ಆದರೆ ಅಲ್ಲಿಯವರೆಗೆ ಹೋಗಿ ಸೇರುವುದು ಹೇಗೆ ?

ತಾತ್ಯಾ—ಅಲ್ಲಿಗೆ ತಲಪಿಸುವ ಭಾರವನ್ನು ನಾನು ವಹಿಸುತ್ತೇನೆ.

ನವಾಬ್—ಗೂಢಚಾರರಿಂದ ದೊರಕಿರುವ ಸಮಾಚಾರದ ಮೇರೆ ನಾವು ಅಲ್ಲಿಗೆ ಸೇರುವುದು ಯಾವ ಸಂದರ್ಭದಲ್ಲಿಯೂ ಅಸಾಧ್ಯವೆಂದು ತಿಳಿವಿರುವೆನು. ನಾವು ಈಗ ಒಂದು ಪಂಜರದಲ್ಲಿ ಸಿಕ್ಕಿಬಿದ್ದಂತಾಗಿದೆ.

ರಾವ್—ಔಧಿನ ಕಡೆಗೆ ಹೋಗುವುದು ಉಚಿತ. ಅಲ್ಲವೆ ಮಾರ್ಗವು ಸರಳವಾಗಿದೆ. ಅಲ್ಲಿನ ಜನರು ಇನ್ನೂ ಅದಮ್ಯರಾಗಿರುವರು. ಲಕ್ನೋವಿನ ಪತನವಾದರೆ ಏನಾದಂತಾಯಿತು ? ನಾನಾಸಾಹೇಬನು ಈಗಲೂ ಅಲ್ಲಿಯೇ ಇರುವನು. ಬೇಗಂ ಸಾಹೇಬರೂ ಅಲ್ಲಿಯೇ ಇದ್ದಾರೆ.

ತಾತ್ಯಾ—ಔಧಿನಲ್ಲಿ ನಾವು ಬಹಳ ಕೆಲಸ ನಡೆಸಬಹುದು. ಆದರೆ ಒಂದು ತೊಂದರೆಯಿದೆ.

ರಾವ್—ಅದೇನು ?

ಉತ್ತಮ ಸೈನಿಕಳು ಮತ್ತು ಯುದ್ಧ ರಂಗದಲ್ಲಿ ವಿಜಯವನ್ನೇ ಗಳಿಸಿ ಕೊಡ ಬಲ್ಲವಳು. ಆದರೆ ಎಷ್ಟಾದರೂ ಆಕೆಯು ಸ್ತ್ರೀ. ನಾವು ಪ್ರಪಂಚವನ್ನು ಅರಿತಿರುವಷ್ಟು ಆಕೆಯು ಅರಿತಿಲ್ಲ.

ನವಾಬ್—ಹಾಗಾದರೂ ಆಕೆಯು ೧೦ ತಿಂಗಳ ಕಾಲ ಝಾನ್ಸಿಯಲ್ಲಿ ಚೆನ್ನಾಗಿ ರಾಜ್ಯವಾಳಿ, ಪ್ರಜೆಗಳು ಸಂತುಷ್ಟರಾಗಿ ಅವಳಿಗೋಸ್ಕರ ಪ್ರಾಣ ಒಪ್ಪಿಸಲು ಸಿದ್ಧರಿದ್ದರಲ್ಲಾ?

ರಾವ್—ಅದೇನೋ ನಿಶ್ಚಯ. ಸಲಹೆಯನ್ನು ತೆಗೆದುಕೊಳ್ಳುವುದರಲ್ಲಿ ಯಾವ ಅಡ್ಡಿಯೂ ಇಲ್ಲ. ಅದರಂತೆ ನಡೆಯುವುದೂ ಬಿಡುವುದೂ ನಮ್ಮ ಕೈಯ್ಯಲ್ಲಿದೆ.

ತಾತ್ಯಾ—ಆಕೆಯನ್ನು ಬೆಳಿಗ್ಗೆ ಇಲ್ಲಿಗೆ ಕರೆದುಕೊಂಡು ಬರಲೆ?

ಸರದಾರ—ಈಗಾಗಲೇ ಬೆಳಕು ಹರಿಯುವುದರಲ್ಲಿದೆ. ಆದುದರಿಂದ ಬೆಳಕು ಹರಿದು ಸ್ವಲ್ಪ ಕಾಲಾನಂತರ ಕರೆದುಕೊಂಡು ಬನ್ನಿ. ಆಕೆಯೂ ಭಜನೆ ಪೂಜನೆಗಳಲ್ಲಿ ನಿಮಗ್ನಳಾಗಿರುವಳು. ಅದುವರೆಗೆ ನಾವು ಸ್ವಲ್ಪ ಭಂಗಿ ಸೇವನೆ ಮಾಡೋಣ. ಭಂಗಿಯನ್ನು ಕುಡಿದು ಬಹಳ ದಿನಗಳಾದವು. ಯಾರಿಂದಲೂ ಸರಿಯಾದ ಸಲಹೆಯು ಸಿಕ್ಕದಿದರೆ ವಿಜಯಲಕ್ಷ್ಮಿಯ ಮೇಲೆ ಭರವಸೆಯಿಟ್ಟು ಎಲ್ಲವನ್ನೂ ತಿಳಿಸುವೆನು.

ರಾವ್—ಅದೇನೋ ಸರಿಯೆ. ಆಂಗ್ಲೇಯರು ಈಗ ನಮ್ಮಿಂದ ಬಹಳ ದೂರ ದಲ್ಲಿದ್ದಾರೆ, ಗಾಳಿಯಲ್ಲೇನೂ ತೂರಿಬರುವಂತಿಲ್ಲ. ಆದರೂ ಅಣ್ಣ, ಭಂಗಿಯನ್ನು ಬಹಳವಾಗಿ ಸೇವಿಸಬಾರದು. ಇಲ್ಲದಿದ್ದರೆ ರಾಣಿಯು ಅಧಿಕವಾಗಿ ಆಕ್ಷೇಪಿಸುವಳು.

ಈ ವಿಧವಾಗಿ ರಾತ್ರಿಯೆಲ್ಲಾ ವಾದವಿವಾದಗಳು ನಡೆದರೂ ಇವರಿಂದ ಯಾವ ಖಚಿತವಾದ ನಿಶ್ಚಯವನ್ನೂ ಮಾಡಲಾಗಲಿಲ್ಲ.

ಬೆಳಗಾದನಂತರ ತಾತ್ಯಾ ರಾಣಿಯನ್ನು ಕರೆದುಕೊಂಡು ಬಂದನು. ಅವಳಿಗೆ ಹಿಂದಿನ ರಾತ್ರಿ ನಡೆದ ಅಧಿವೇಶನದ ಪರಿಚಯವನ್ನು ಆತನು ಸಂಕ್ಷೇಪವಾಗಿ ಮಾಡಿ ಕೊಟ್ಟಿದ್ದನು.

ಅವರೆಲ್ಲರೂ ಭಂಗಿಯನ್ನು ಸೇವಿಸಿ ನಿವೃತ್ತರಾಗಿದ್ದರು. ಗುಡಿಗುಡಿ ಹುಕ್ಕೆ ಗಳು ಅಲ್ಲಿಯೇ ಬಿದ್ದಿದ್ದವು. ಅಷ್ಟರಲ್ಲಿ ರಾಣಿಯು ಅಲ್ಲಿಗೆ ಬಂದಳು. ಅವರೆಲ್ಲರೂ ಅವಳನ್ನು ಮರ್ಯಾದೆಯಿಂದ ಕಾಣುತ್ತಿದ್ದ ಕಾರಣ ಅಲ್ಲಿದ್ದ ಹುಕ್ಕೆ ಮುಂತಾದುವನ್ನು ತೆಗೆಯಲಾಯಿತು.

ಪೇಶ್ವೆಯ ಸೈನ್ಯದ ಅಧೋಗತಿಯು ಅವಳಿಗೆ ಚೆನ್ನಾಗಿ ತಿಳಿದಿದ್ದಿತು. ಆದರೂ ತನ್ನ ದುಃಖವನ್ನು ನುಂಗಿಕೊಂಡು ಪರಿಸ್ಥಿತಿಯನ್ನು ಅರಿತುಕೊಳ್ಳಲು ಪ್ರಶ್ನೆಮಾಡಿ ದಳು. ಹಿಂದಿನ ರಾತ್ರಿಯ ಸಭೆಯ ನಿರ್ಣಯವೇ ಅವಳಿಗೆ ದೊರಕಿದ ಉತ್ತರ ವಾಯಿತು—ನಾವು ಪಂಜರದಲ್ಲಿ ಸಿಕ್ಕಿಬಿದ್ದ ಪಕ್ಷಿಯಂತಾದೆವು.

ರಾಣಿಯು "ನಾವು ಇದುವರೆಗೂ ಒಗ್ಗಟ್ಟಿನಿಂದ ಆಂಗ್ಲೇಯರೊಡನೆ ಎಲ್ಲೆಲ್ಲಿ ಕಾದಾಡಿದೆವೊ ಅಲ್ಲಲ್ಲಿಯೇ ಕಿಲ್ಲೆಗಳ ಆಶ್ರಯಹೊಂದಿ ಒಂದು ಮಹತ್ತರವಾದ ಕಿಲ್ಲೆಯನ್ನು ಸಾಧಿಸಿಕೊಳ್ಳಬೇಕು. ಅಲ್ಲಿಯೇ ತೋಪುಗಳನ್ನು ಎರಕ ಹೊಯ್ಯ ಬಹುದು. ಮತ್ತೆ ಕಾರ್ಯವು ತನ್ನಷ್ಟಕೆ ತಾನೇ ಪ್ರಾರಂಭವಾಗುವುದು" ಎಂದು, ರಾಣಿಯು ಹೇಳಿದಳು.

ರಾವ್‌ಸಾಹೇಬ್—ಆದರೆ ಝಾನ್ಸಿ ಅಥವಾ ಕಾಲ್ಪಿಯ ದುರ್ಗಗಳು ನಮಗೆ ಸಿಗುವಂತಿಲ್ಲ—ಅದರಲ್ಲಿಯೂ ಈ ಅವಸ್ಥೆಯಲ್ಲಿ.

ರಾಣಿ—ಇವೆರಡನ್ನು ಕೆಲವು ದಿನ ಮರೆತು ಬಿಡಿ.

ತಾತ್ಯಾ—ನರವಾರಿನ ಕಿಲ್ಲೆಯು ಚೆನ್ನಾಗಿರುವುದು, ಹತ್ತಿರವೇ ಸಿಂಧ್ ನದಿ, ಅಕ್ಕಪಕ್ಕದಲ್ಲಿ ಅರಣ್ಯವಿರುವುದು.

ನವಾಬ್—ಕರೇರಾ ಕಿಲ್ಲೆಯೂ ಚೆನ್ನಾಗಿರುವುದು.

ರಾಣಿ—ಇಲ್ಲ.

ರಾವ್—ಹಾಗಾದರೆ ಮತ್ತಾವ ಕಿಲ್ಲೆ ?

ರಾಣಿ—ಗವಾಲಿಯರ್ ಕಿಲ್ಲೆ. ಅದು ಇಲ್ಲಿಂದ ಅತ್ಯಂತ ಸಮೀಪದಲ್ಲಿದೆ.

ರಾವ್—ಗವಾಲಿಯರಿನ ಕಿಲ್ಲೆಯೆ !

ನವಾಬ್—ಗವಾಲಿಯರಿನದೆ!

ರಾಣಿ—ಹೌದು. ಗವಾಲಿಯರಿನ ವಾಸ್ತವ ಸ್ಥಿತಿಯನ್ನು ಮತ್ತೆ ಪರಿಶೋಧಿಸಿ ಬೇಗನೆ ಅದರ ಆಕ್ರಮಣ ಮಾಡಬೇಕು. ಅಲ್ಲಿಯ ರಾಜನೂ ಮತ್ತು ಒಬ್ಬಿಬ್ಬ ಸರದಾರರೂ ಆಂಗ್ಲೇಯರ ಪಕ್ಷಪಾತಿಗಳು. ಆದರೆ ಜನರೂ, ಸೇನೆಯೂ ಅವರ ಪಕ್ಷಪಾತಿಗಳಲ್ಲ. ಸೇನೆಯು ಪ್ರಬಲತೆಯಿಂದ ನಮ್ಮ ಪಕ್ಷನಹಿಸದಿದ್ದರೂ ಆಕ್ರಮಿಸಿದ ಮೇಲೆ ನಮ್ಮ ಕಡೆಯೇ ವಾಲುವುದು. ಗವಾಲಿಯರಿನಲ್ಲಿ ತಯಾರಾಗಿ ಸಿದ್ಧವಾಗಿರುವ ಸಾಮಗ್ರಿಗಳೂ ಒಳ್ಳೊಳ್ಳೆಯ ತೋಪುಗಳೂ, ಮದ್ದು ಗುಂಡು, ಸಾವಿರಾರು ಮಣ ತುಪಾಕಿಯ ಮದ್ದು ಇನ್ನೂ ಅನ್ಯ ಪ್ರಕಾರವಾದ ಯುದ್ಧ ಸಲಕರಣೆಗಳ ಅಖಂಡ ವಾದ ಸಂಪತ್ತಿಯಿದೆ.

ನವಾಬ್—ಆದರೆ....

ರಾವ್—ಮತ್ತೆ....

ರಾಣಿ—ಆದರ ಹೋದರೆ ಏನೂ ಇಲ್ಲ. ಕಿಲ್ಲೆಯಿಲ್ಲದೆ ಪ್ರಯಾಸಪಡುವುದು ಆತ್ಮವಧೆಗೆ ಸಮಾನ. ಗವಾಲಿಯರಿನ ದುರ್ಗವನ್ನೊಂದು ಉಳಿದು ಮಿಕ್ಕ ಕಿಲ್ಲೆಗಳು ಸ್ವಪ್ನಪ್ರಾಯ.

ರಾವ್—ರಾಣಿ ಸಾಹೇಬರು ಹೇಳುವುದು ಯುಕ್ತವೆಂದು ತೋರುತ್ತದೆ.

ಯೋಚಿಸಿ ನೋಡಿ ನವಾಬ್‌ಸಾಹೇಬರೇ. ತಾತ್ಯಾ ನೀನೇನು ಹೇಳುವೆ?

ನವಾಬ್—ನಾವೇನೋ ರಾಣೀ ಸಾಹೇಬರ ಸಲಹೆಯನ್ನು ಒಪ್ಪಲು ಸಿದ್ಧನಾಗಿದ್ದೇನೆ. ಆದರೆ ಆಕ್ರಮಿಸುವ ಮುನ್ನ ಗವಾಲಿಯರಿನ ಸೇನೆ ಅಥವಾ ಕೆಲವು ಸರದಾರರನ್ನು ಸಂಧಿಸುವುದು ಅವಶ್ಯ.

ತಾತ್ಯಾ—ಅಲ್ಲಿಯ ಪರಿಸ್ಥಿತಿಯು ನನಗೆ ಚೆನ್ನಾಗಿ ತಿಳಿದಿದೆ. ಮುಹೂರ್‌ಕರ್ ಬಲವಂತರಾವ್ ಮತ್ತು ದಿನಕರರಾವ್ ಇವರನ್ನುಳಿದು ಮಿಕ್ಕ ಎಲ್ಲಾ ಸರದಾರರೂ ಸ್ವರಾಜ್ಯ ಸ್ಥಾಪನೆಯ ಪಕ್ಷವನ್ನು ಅನುಮೋದಿಸುವರು. ಸೇನೆಯ ಹೆಚ್ಚು ಅಂಶವು ನಮ್ಮ ಪರವಾಗುವುದು.

ರಾಣಿ—ಮತ್ತೊಂದು ಬಾರಿ ಹೋಗಿ ನೋಡು- ಶೀಘ್ರವಾಗಿ ಹೋಗಿ ಪತ್ತೆ ಹಚ್ಚಿ ಬೇಗನೆ ಬರಬೇಕು.

ರಾವ್—ವೇಗದಲ್ಲಿ ತಾತ್ಯಾ ಎಂತಹ ಶಾರ್ದೂಲವನ್ನೂ ಮೀರಿಸುವನು. ಅಪ್ಪಣೆಯನ್ನು ಪಡೆದು ತಾತ್ಯಾ ಗವಾಲಿಯರಿನ ಕಡೆಗೆ ನಡೆದನು.

## ೮೧

ಸಾಯಂಕಾಲವಾಗುತ್ತಲೇ ರಾಣಿ ಕೆಲವು ಕಾಲ ಧ್ಯಾನಮಗ್ನಳಾಗಿದ್ದಳು. ಧ್ಯಾನಾನಂತರ ಶಿಬಿರದ ಹೊರಗೆ ಬರುತ್ತಲೇ ದೇಶಮುಖ, ರಘುನಾಥಸಿಂಹ ಮತ್ತು ಗುಲ್‌ಮುಹಮ್ಮದ್ದರು ಆಗಮಿಸಿದರು.

ಆ ವೇಳೆಗೆ ರಾಣಿಯ ಬಳಿ ಕೆಂಪು ಸಮವಸ್ತ್ರಧಾರಿ ಅಶ್ವಾರೋಹಿಗಳು ೨೦೦ ಮಂದಿ ಮಾತ್ರವಿದ್ದರು. ಇದರಲ್ಲಿ ಹಿಂದೂ ಮುಸಲ್ಮಾನರಿಬ್ಬರೂ ಇದ್ದರು. ಈ ಸೈನ್ಯದ ಪ್ರಧಾನ ಸೇನಾಧಿಪತಿ ರಾಣಿ. ಅವಳ ಕೈಕೆಳಗೆ ಈ ಮೂವರು ಪುರುಷ ಸರದಾರು ಮತ್ತು ಇಬ್ಬರು ಸ್ತ್ರೀಯರು—ಅವರಲ್ಲಿ ಮುಂದರಿಯಂತೂ ರಾಣಿಯನ್ನು ಛಾಯೆಯಂತೆ ಅನುಸರಿಸುತ್ತಿದ್ದಳು. ಈ ಚಿಕ್ಕ ಸೈನ್ಯವು ಸಂಯಮ ನಿಷ್ಠವಾಗಿ ಅವಳನ್ನು ಪರಮಭಕ್ತಿಯಿಂದ ಸೇವಿಸುತ್ತಿದ್ದಿತು.

ರಘುನಾಥಸಿಂಹನು "ದಿವಾನ್ ಜವಾಹರಸಿಂಹನು ತನ್ನ ಸರಹದ್ದಿನಿಂದ ಈಚೆಗೆ ಬರಲಾರದವನಾಗಿದ್ದಾನೆ, ಸರ್ಕಾರ್. ಆತನು ಸ್ವಲ್ಪ ಸೈನ್ಯವನ್ನೇನೋ ಶೇಖರಿಸಿದ್ದನು. ಕಂಪೆನಿಯ ಸೈನ್ಯವು ಅವರನ್ನು ತಡೆಗಟ್ಟುತ್ತಿದೆ. ಒಂದು ವೇಳೆ ಅವರು ಈ ಕಡೆ ಬಂದರೂ ಬರಬಹುದು" ಎಂದು ಹೇಳಿದನು.

ಗುಲ್ ಮುಹಮ್ಮದ್ದನು "ಸರ್ಕಾರ್, ನಾನು ನಮ್ಮ ದೇಶಕ್ಕೆ ಹೋಗಲು ಸಾಧ್ಯವಿದ್ದರೆ ಶತ್ರುಗಳನ್ನು ಸದೆಬಡಿಯುವಷ್ಟು ಪಠಾಣರನ್ನು ಕರೆತರುತ್ತಿದ್ದೆ" ಎಂದನು.

ದೇಶಮುಖನು "ಸಿಪಾಯಿಗಳು ಮುಂದಿನ ಆಜ್ಞೆಯನ್ನು ಎದುರು ನೋಡುತ್ತಿರು ವರು" ಎಂದು ರಾಣಿಯನ್ನು ಪ್ರಾರ್ಥಿಸಿದನು.

ರಾಣಿಯು "ರಾವ್‌ಸಾಹೇಬ್ ಪೇಶ್ವೆಯು ಪ್ರಧಾನ ಸೇನಾಪತಿಯು. ನಾನು ಈಗ ಏನನ್ನೂ ಹೇಳಲು ಸಮರ್ಥಳಲ್ಲ. ಆದರೆ ಶೀಘ್ರದಲ್ಲಿಯೇ ಏನಾದರೊಂದು ಆಗ ಬಹುದೆಂದು ಹೇಳಬಲ್ಲೆ" ಎಂದು ಉತ್ತರವಿತ್ತಳು.

ದೇಶಮುಖ—ನಮ್ಮ ಸೈನ್ಯವು ಯುದ್ಧ ಮಾಡುವುದಕ್ಕೆ ಬೇಸರಿಸಿಕೊಳ್ಳುತ್ತಿದೆ.

ರಾಣಿ—ಇದು ಸೈನಿಕರ ಗುಣವಲ್ಲ ಆದರೆ ಒಂದು ದೋಷ. ಬೇಸರಪಡ ಕೂಡದು. ಅವರುಗಳಿಗೆ ಸಮಯಕ್ಕೆ ಸರಿಯಾಗಿ ಊಟ, ಉಪಚಾರ, ವಿಶ್ರಾಮ ವೇತನಗಳು ದೊರಕುತ್ತಿವೆಯೆ ?

ಆ ಮೂವ್ವರು ಸರದಾರರೂ ಅಹುದೆಂದು ಉತ್ತರವಿತ್ತರು.

ರಾಣಿ—ಯಾವ ಸಮಯದಲ್ಲಿಯೇ ಆಗಲಿ ಸ್ವಲ್ಪವಾದರೂ ಹೆಚ್ಚು ಕಡಿಮೆ ಯಾದರೆ ಒಡನೆಯೇ ನನಗೆ ತಿಳಿಸಬೇಕು. ನನ್ನ ಬಳಿ ಇನ್ನೂ ಹೇರಳವಾದಷ್ಟು ಒಡವೆ ವಸ್ತುಗಳಿವೆ. ನಿಮುಗಾಗಲೀ ಅಥವಾ ನಿಮ್ಮ ಸೈನಿಕರಿಗಾಗಲೀ ಯಾವ ಪ್ರಕಾರ ವಾದ ಕಷ್ಟವೂ ಉಂಟಾಗಬಾರದೆಂಬುದೇ ನನ್ನ ಆಶಯ.

"ಎಂದಿಗೂ ಹಾಗಾಗುವುದಿಲ್ಲ" ಎಂದು ಹೇಳುತ್ತಾ ಆ ಮೂವ್ವರೂ ಹೊರಟು ಹೋದರು. ಊಟವಾದನಂತರ ರಾಣಿಯು ಮಲಗಿದಳು. ಮುಂದರಿಯು ಅವಳ ಕಾಲೊತ್ತ ತೊಡಗಿದಳು.

ರಾಣಿಯು ಕಾಲನ್ನು ಎಳೆದು ಕೊಳ್ಳುತ್ತಾ "ನಿನ್ನ ಈ ಅಭ್ಯಾಸವು ಏತಕ್ಕೆ ಹೋಗುವುದಿಲ್ಲವೋ ತಿಳಿಯದು. ನನ್ನ ಶರೀರವು ನೋಯುತ್ತಿಲ್ಲ. ಝಾನ್ಸಿ ಯಿಂದ ಕಾಲ್ಪಿಗೆ ಬಂದ ದಿನವೇ ಶರೀರದಲ್ಲಿ ವೇದನೆಯುಂಟಾಗಲಿಲ್ಲ, ಇಂದೇನು ? ಯಾವ ಕಷ್ಟ ಕಾರ್ಯವನ್ನೂ ಮಾಡಿಲ್ಲ !" ಎಂದಳು.

ಮುಂದರಿಯು ಹಠದಿಂದಲೂ ವೈಯ್ಯಾರದಿಂದಲೂ "ಹೌದು, ಹೋಗುವುದಿಲ್ಲ. ನಿಮಗೆ ಎಂತಹ ಕಷ್ಟವು ತಲೆಯ ಮೇಲೆ ಬಿದ್ದರೂ ಅದನ್ನು ಕಷ್ಟವಲ್ಲವೆಂದೇ ಹೇಳು ತ್ತೀರಿ" ಎಂದು ಪುನಃ ಕಾಲೊತ್ತ ತೊಡಗಿದಳು.

"ಏನು ನೀನು ಆಜನ್ಮ ಪರ್ಯಂತ ನನ್ನ ಕಾಲೊತ್ತುತ್ತಿರುವೆಯಾ ?"

"ಅಹುದು ಆಜನ್ಮ ಪರ್ಯಂತ ಒತ್ತುವೆನು."

"ಸೈನ್ಯದ ಕರ್ನಲ್ ಆಗಿಯೂ ?"

"ಒಂದು ವೇಳೆ ಜನರಲ್ಲಳಾದರೂ ಈ ಕಾಲೊತ್ತುವುದನ್ನು ತ್ಯಜಿಸುವುದಿಲ್ಲ."

"ಕಾಲೊತ್ತುವ ಜನರಲ್ಲನ ಹೆಸರನ್ನು ಕೇಳಿ ಜನರೇನನ್ನುವರು ?"

"ಈ ಪಾದ ಧೂಳಿಯಲ್ಲಿ ಜನರಲ್ಲುಗಳನ್ನು ಉತ್ಪಾದನೆ ಮಾಡುವ ಯೋಗ್ಯತೆ

ಯಿದೆಯೆಂದು ಯಾರಿಗೆ ಗೋಚರವಾಗುವುದಿಲ್ಲವೊ ಅವರು ಏನು ಬೇಕಾದರೂ ಹೇಳಿ ಕೊಂಡು ಹೋಗಲೇಳಿ."

"ಇರಬಹುದು. ಆದರೆ ನನ್ನ ಮಾತಿನಲ್ಲಿ ಈ ಗುಣವಿಲ್ಲ. ಈ ಜನರಿಗೆ ಸಲಹೆಕೊಡುತ್ತೇನೆ. ಆಗಲಿ—ಆಗಲಿ ಎಂದು ಅದಕ್ಕೆ ಸಮ್ಮತಿಸುತ್ತಾರೆ. ಆದರೆ ತಮ್ಮ ಮನಬಂದಂತೆ ಮಾಡುತ್ತಾರೆ. ಕಾಲ್ಪಿಯ ಯುದ್ಧವೇನು ಗೆಲ್ಲಲು ಕಷ್ಟ ವಾಗಿದ್ದಿತೆ ?"

"ಇವರಲ್ಲಿ ಯಾರೂ ರಣಪಂಡಿತರೇ ಇಲ್ಲ."

"ತಾತ್ಯಾಟೋಪೆಯೊಬ್ಬನಿದ್ದಾನೆ. ಆದರೆ ಅವನ ಮಾತೇನೂ ನಡೆಯುವುದಿಲ್ಲ. ಮತ್ತು ಅವನು ಅವಶ್ಯಕತೆಗಿಂತ ಹೆಚ್ಚಾಗಿ ಆಜ್ಞಾನುವರ್ತಿಯಾಗಿದ್ದಾನೆ. ವಿರೋಧಿಸಿ ಮಾತನಾಡುವುದು ಅವನಿಗೆ ಬರುವುದೇ ಇಲ್ಲ."

"ಅವನು ಕಾಲ್ಪಿಯ ಯುದ್ಧ ನಡೆಯುವಾಗ ಮನೆಗೆ ಹೊರಟು ಹೋಗಿದ್ದನು."

"ಆಗ ಅವನಿಗೆ ವ್ಯಸನವೇರ್ಪಟ್ಟಿದ್ದಿತು. ಅದರ ಕಾರಣ ತಿಳಿಸುವುದು ದಂಡ. ನಿನಗೆಲ್ಲಾ ತಿಳಿದೇ ಇದೆ. ಅಷ್ಟುಮಂದಿ ಅಸಂಖ್ಯಾತ ಸೇನಾಪತಿಗಳಲ್ಲಿ ಯಾರಿ ಗಾದರೂ ಸ್ವಲ್ಪ ಬುದ್ಧಿ ಇದ್ದಿದ್ದರೆ ಅವರಿಗೆ ಈ ವ್ಯಸನವು ಸಂಘಟಿಸುತ್ತಿರಲಿಲ್ಲ. ಆದರೆ ಅವನು ವ್ಯಸನಿಯೂ ಮೂರ್ಖನೂ ಆಗಿದ್ದಾನೆ."

"ಇದೇ ಮಾತನ್ನೇ ಜೂಹಿಯೂ ಮತ್ತು ನಮ್ಮ ಇತರ ಸರದಾರರೂ ಹೇಳು ತ್ತಾರೆ."

ಗುಲ್‌ಮುಹಮ್ಮದ್ದನು ಮಾತನಾಡುವಾಗ ಎಂತಹ ಒರಟನಂತೆ ಕಂಡರೂ ಅವನು ವಾಸ್ತವವಾಗಿ ಒಳ್ಳೆಯ ಚತುರ. ವೀರನಾದ ದಳನಾಯಕನು. ಅಂತೆಯೇ ದೇಶಮುಖ ಮತ್ತು ರಘುನಾಥಸಿಂಹರಿರುವರು.

"ಹೌದು, ಸರ್ಕಾರ್."

"ಒಂದು ಮಾತು ತಿಳಿಸುವೆಯಾ ಮುಂದರಿ."

"ಅಪ್ಪಣೆಯಾಗಲಿ ಪ್ರಭು."

"ನೀನು ಈ ಪ್ರಪಂಚದಲ್ಲಿ ಯಾರನ್ನು ಹೆಚ್ಚಾಗಿ ಅಪೇಕ್ಷಿಸುತ್ತೀ? ನಿಜ ಹೇಳ ಬೇಕು."

"ನಿಜವನ್ನೇ ಹೇಳುತ್ತೇನೆ—ನಾನು ಎಲ್ಲರಿಗಿಂತ ನಿಮ್ಮನ್ನು ಹೆಚ್ಚಾಗಿ ಅಪೇಕ್ಷಿಸು ತ್ತೇನೆ. ಇದು ಭಗವಂತನಿಗೆ ಗೊತ್ತು."

"ನನ್ನ ತರುವಾಯ ಯಾರನ್ನು ?"

ಮುಂದರಿಯು ರಾಣಿಯ ಕಾಲನ್ನು ಹಿಡಿದು ತಲೆ ತಗ್ಗಿಸಿದಳು.

"ಮತ್ತಾರಿದ್ದಾರೆ ಸರ್ಕಾರ್ ?"

"ಹೆಸರು ಹೇಳಲೆ ?"

"ಬೇಡ."

"ಮುಂದರಿ ನೀನು ವಿವಾಹ ಮಾಡಿಕೊಳ್ಳಲೇಬೇಕು."

"ಯಾವಾಗ ತಾವು ಸ್ವರಾಜ್ಯ ಸ್ಥಾಪನೆ ಮಾಡುವಿರೋ ಆಗ ಮಾಡಿಕೊಳ್ಳು ವೆನು."

"ಸ್ವರಾಜ್ಯಸ್ಥಾಪನೆಯು ಕಾಲಾನುಕ್ರಮದಲ್ಲಿ ಆಗುವುದು. ಆದರೆ ನೀನು ಏತಕ್ಕೆ ವಿವಾಹವಾಗುವುದನ್ನು ನಿಲ್ಲಿಸಿದೆ ?"

"ಅದು ಜೀವನದ ಮುಖ್ಯ ಕಾರ್ಯವಲ್ಲ."

"ಇದು ನಿನ್ನ ಇಚ್ಛಾನುಸಾರ. ನನ್ನ ಅನುಮತಿಯೇನೋ ಇದೆ."

"ಮದುವೆಯಾಗುವುದು ಅಸಂಭವ; ಸರ್ಕಾರ್ ನಾನು ಪಣತೊಟ್ಟದ್ದೇನೆ."

"ಜೂಹಿಯು ಪಣತೊಟ್ಟದ್ದಾಳೆ. ಅವಳನ್ನು ನೋಡಿದರೆ ನನಗೆ ಪರಿತಾಪ ವಾಗುತ್ತದೆ."

"ಅವಳು ಸಾಯುವವರೆಗೆ ಕುಮಾರಿಯಾಗಿರುವೆನೆಂದು ಪಣತೊಟ್ಟದ್ದಾಳೆ."

"ಅದು ಅಸಂಭವವೇನಲ್ಲ."

"ನಾನು ತಮ್ಮನ್ನು ಒಂದು ಮಾತು ಕೇಳಲಪೇಕ್ಷಿಸುತ್ತೇನೆ."

"ಕೇಳು."

"ನೀವಿರುವಷ್ಟು ನಿರ್ಭಯರಾಗಿ ಮತ್ತಾರಾದರೂ ಇರಬಲ್ಲರೆ ?"

"ಅಗತ್ಯವಾಗಿ. ಅದೇನೂ ಕಷ್ಟಸಾಧ್ಯವಲ್ಲ."

"ಅಂದರೆ ಹೇಗೆ ?"

"ಸುಲಭವಾಗಿಯೆ. ಹೆಚ್ಚು ಶಾರೀರಿಕ ಶ್ರಮ, ದೇವರ ಧ್ಯಾನ ಮತ್ತು ದೃಢ ವಿಶ್ವಾಸಗಳಿಂದ ಸುಲಭ ಸಾಧ್ಯವಾಗುತ್ತದೆ."

"ಮುಂದರಿಯು ಗದ್ಗದಿತಳಾದಳು. ಕೆಲವು ಕ್ಷಣ ಸುಮ್ಮನಿದ್ದು ಒಮ್ಮಿಂ ದೊಮ್ಮೆ ಹೇಳಿದಳು, "ಬಾಯಿಸಾಹೇಬ್, ನಾನು ನಿಮ್ಮ ಕಣ್ಣಮುಂದೆ ಪ್ರಾಣತ್ಯಜಿ ಸಿದರೆ ನನಗೆ ಅತ್ಯಂತ ಸುಖವಾಗಿರುವುದು. ಮೋತೀಬಾಯಿಗೆ ಒದಗಿದ ಮೃತ್ಯುವಿ ಗಾಗಿ ಹಾರೈಸುತ್ತಿರುವೆನು."

"ನಾನು ಹೇಳಿದ ಮಾತು ಇದಕ್ಕಿಂತ ಮಿಗಿಲಾದುದು."

## ೮೨

ಸರ್ಕಲುಗಳಲ್ಲಿ ಆಂಗ್ಲೇಯರು, ಹೋಲ್ಕರ್ ಮತ್ತು ಸಿಂಧ್ಯರವರಲ್ಲಿ ಪರಸ್ಪರ

ಯುದ್ಧದ ಕಾರಣದಿಂದ ಮೊದಲೇ ಕ್ಷೀಣವಾಗಿದ್ದ ಸಿಂಧ್ಯನ ಸೇನೆಯನ್ನು ಸೋಲಿಸಿದರು. ಆಗಿನಿಂದ ಗವಾಲಿಯರಿನಲ್ಲಿ ಕೇವಲ ೧೦೦೦೦ ಸಿಪಾಯಿಗಳನ್ನೊಳಗೊಂಡ ಸೇನೆಯನ್ನು ಇಟ್ಟುಕೊಳ್ಳಲು ಅಧಿಕಾರವನ್ನು ಕೊಟ್ಟು, ಆಂಗ್ಲೇಯ ರೆಸಿಡೆಂಟನೊಬ್ಬನು ಅಲ್ಲಿನ ರಾಜ್ಯಸೂತ್ರವನ್ನು ನಡೆಸುತ್ತಿದ್ದನು. ಸನ್ ೧೮೫೩ ರಲ್ಲಿ ಜಯಾಜಿರಾಯನಿಗೆ ಶಾಸನಾಧಿಕಾರವು ದೊರಕಿತು. ಆದರೆ ಆಳ್ವಿಕೆಯು ರೆಸಿಡೆಂಟರ ಕೈಯಲ್ಲಿಯೇ ಇದ್ದಿತು. ಇದಕ್ಕೆ ಮೇಲ್ಪಟ್ಟ ಸಲಹೆಗಳಿಗೆ ಆಗ್ರಾದಲ್ಲಿ ಲೆಫ್ಟಿನೆಂಟ್ ಗೌರ್ನರ್ ಒಬ್ಬನಿದ್ದನು.

ಗವಾಲಿಯರಿನಲ್ಲಿ ಸಿಂಧ್ಯನ ಹತ್ತುಸಹಸ್ರ ಸೇನೆಯೊಂದಿಗೆ ಒಂದು ತರ ಬೇತಾದ ಆಂಗ್ಲೇಯ ಸೈನ್ಯವನ್ನು ಇವರು ಪೋಷಿಸಬೇಕಾಗಿದ್ದಿತು. ಈ ಸಹಾಯಕ ಸೈನ್ಯವು ಸನ್ ೧೮೫೭ ನೇ ದಂಗೆಯಲ್ಲಿ ಭಾಗವಹಿಸಿತು. ತಾತ್ಯಾ ಇಲ್ಲಿಗೆ ಆಗಾಗ್ಯೆ ಬಂದು ಹೋಗುತ್ತಿದ್ದನು. ಈ ಸೈನ್ಯವು ತಾತ್ಯಾವಿನೊಡನೆ ಕಾನ್ಪುರವನ್ನು ಸೇರಿತು. ಆದರೆ ಈ ಸೈನ್ಯವು ಜಯಾಜಿರಾವ್ ಮತ್ತು ದಿವಾನ್ ದಿನಕರರಾಯರ ಕೌಶಲ್ಯದಿಂದ ಗವಾಲಿಯರಿನಲ್ಲಿದ್ದ ಆಂಗ್ಲೇಯರಿಗೆ ಯಾವ ನಷ್ಟವನ್ನುಂಟುಮಾಡಲಾಗದೇ ಅವರು ಸುರಕ್ಷಿತವಾಗಿ ಆಗ್ರಾವನ್ನು ತಲಪಿದರು. ಜಿಯಾಜಿರಾಯನು ಹೇಗೆಯೋ ತನ್ನ ಸೇನೆಯನ್ನು ತಹಬಂದಿಗೆ ತಂದನು. ಒಂದು ವೇಳೆ ಗವಾಲಿಯರಿನ ಸೇನೆಯು ಆಂಗ್ಲೇಯರಿಗೆ ವಿರುದ್ಧವಾಗಿದ್ದಿದ್ದರೆ, ನಿಜಾಮ್ ಮತ್ತು ಸಿಖ್ಖ ರಾಜ್ಯಗಳು ಕಂಪೆನಿಯ ಸರ್ಕಾರ್‌ದೊಂದಿಗಿದ್ದರೂ ಆಂಗ್ಲೇಯರಿಗೆ ಹಿಂದೂಸ್ಥಾನದಲ್ಲಿ ರಾಜ್ಯಕಟ್ಟಲು ಸರ್ವಥಾ ಆಗುತ್ತಿರಲಿಲ್ಲ. ಗವಾಲಿಯರ್ ಅಂತಹ ಪ್ರಬಲವಾದ ರಾಜ್ಯವೇನಾಗಿರಲಿಲ್ಲ. ಆದರೆ ಗವಾಲಿಯರಿಗೆ ವಿರುದ್ಧವಾಗಿ ಹೋಗಿದ್ದರೆ ಆಂಗ್ಲೇಯರಿಗೆ ಪ್ರತಿಕೂಲವಾಗಿ ಸ್ವತಂತ್ರಸ್ಥಾಪನೆಯ ಚಳುವಳಿಯು ಅತ್ಯಂತ ವೇಗದಿಂದ ಅಕ್ಕ ಪಕ್ಕದಲ್ಲಿದ್ದ ರಾಜ್ಯಗಳಿಗೂ, ವಿಂಧ್ಯ ಖಂಡ ಮತ್ತು ದಕ್ಷಿಣ ಭಾರತಗಳಲ್ಲೂ ಹರಡಿ ಆಂಗ್ಲೇಯರಿಗೆ ರಾಜ್ಯ ಕಟ್ಟಲು ಎಂದೆಂದಿಗೂ ಅವಕಾಶವಿಲ್ಲದಂತಾಗುತ್ತಿದ್ದಿತು.

ತಾತ್ಯಾ ಗವಾಲಿಯರನ್ನು ಸೇರಿದಾಗ ಅಲ್ಲಿನ ಸೈನ್ಯದ ಒಂದು ದೊಡ್ಡ ವಿಭಾಗವನ್ನು ಮತ್ತು ಸರದಾರರನೇಕರನ್ನು ರಾಣಿ ಮತ್ತು ಪೇಶ್ವೆಯರಿಗೆ ಬೆಂಬಲಗರಾಗುವಂತೆ ಪರಿವರ್ತಿಸಿದನು. ಸಿಂಧ್ಯನ ಸರ್ಕಾರಕ್ಕೆ ಪೇಶ್ವೆಯ ಸೈನ್ಯವು ಗೋಪಾಲಪುರದ ಬಳಿ ಬಂದು ಸೇರುವುದೆಂಬ ವಿಚಾರವು ದೊರಕಿ, ಒಡನೆಯೇ ಗೌರ್ನರ್‌ಜನರಲ್ಲನಿಗೆ ಸಮಾಚಾರವನ್ನು ತಿಳಿಸಿ ತಮ್ಮ ದೃಢರಾಜ ಭಕ್ತಿಯ ಆಶ್ವಾಸನವನ್ನಿತ್ತಿದ್ದಿತು.

ಗೌರ್ನರ್‌ಜನರಲ್ ಲಾರ್ಡ್ ಕ್ಯಾನಿಂಗನು ಇಂಗ್ಲೆಂಡಿಗೆ "ಸಿಂಧ್ಯನು ಕ್ರಾಂತಿಕಾರರೊಂದಿಗೆ ಸೇರಿದರೆ ನಾನು ನಾಳೆಯೇ ಇಲ್ಲಿಂದ ಗಂಟು ಮೂಟೆ ಕಟ್ಟಿಕೊಂಡು ಹೊರಡಬೇಕಾದ ಪ್ರಮೇಯವು ಬರಬಹುದು" ಎಂದು ಒಂದು ತಾರನ್ನು ಕಳುಹಿಸಿ

ದನು. *

ತಾತ್ಯಾ ಗವಾಲಿಯರಿನಿಂದ ಮರುದಿನವೆ ಹಿಂತಿರುಗಿ ಅಲ್ಲಿನ ವಿದ್ಯಮಾನಗಳನ್ನು ರಾವ್‌ಸಾಹೇಬ್ ಮುಂತಾದವರಿಗೆ ತಿಳಿಸಿದನು. ರಾಣಿಯು ಒಡನೆಯೆ ಆಕ್ರಮಣ ಮಾಡಲು ಸೂಚನೆಯಿತ್ತಳು.

ರಾವ್‌ಸಾಹೇಬನು ಸಿಂಧ್ಯನಿಗೆ ಒಂದು ಪತ್ರವನ್ನು ಬರೆದು "ನಾವು ಸ್ವರಾಜ್ಯ ಸ್ಥಾಪನೆಯ ಪ್ರಯತ್ನದಲ್ಲಿ ದಕ್ಷಿಣದ ಕಡೆಗೆ ಹೋಗುತ್ತಲಿದ್ದೇವೆ. ತಾವು ನಮ್ಮ ಹಿಂದಿನ ನೆಂಟಸ್ತಿಕೆಯನ್ನು ನೆನಪಿನಲ್ಲಿಟ್ಟು ನಮಗೆ ಸಹಾಯವನ್ನು ಮಾಡಿ" ಎಂದು ತಿಳಿಸಿದನು. ದಿವಾನ ದಿನಕರರಾಯನು ಅದಕ್ಕೆ ಕೊಟ್ಟ ಉತ್ತರವು ಅಡ್ಡಗೋಡೆಯ ಮೇಲೆ ದೀಪವನ್ನಿಟ್ಟಂತೆ ಇದ್ದಿತು. ಅದರಲ್ಲಿ ಸಮ್ಮತಿಯಾಗಲೀ ನಿರಾಕರಣೆಯಾಗಲೀ ಇರಲಿಲ್ಲ. ದಿನಕರರಾಯನು ರೆಸಿಡೆಂಟಿಗೆ ಈ ವಿಷಯವಾಗಿ ಸೂಚನೆಯಿತ್ತನು.

ಪೇಶ್ವೆಯ ಸೈನ್ಯವು ಕಾಲ್ಪಿಯ ಯುದ್ಧವಾದ ನಾಲ್ಕು ದಿನಗಳ ನಂತರ ಗವಾಲಿಯರ್ ಸಂಸ್ಥಾನವನ್ನು ಪ್ರವೇಶಿಸಿತು. ಸಿಂಧ್ಯನ ಒಬ್ಬ ಸೈನ್ಯಾಧಿಕಾರಿಯು ೪೦೦ ಪದಾತಿ ಮತ್ತು ೧೫೦ ಸವಾರರೊಂದಿಗೆ ಅದನ್ನು ತಡೆಗಟ್ಟಲು ಹೋದನು. ಆತನು ಸ್ವಲ್ಪ ಹೊಡೆದಾಟವಾದ ಮೇಲೆ ಹಿಮ್ಮೆಟ್ಟಿದನು. ಎರಡು ದಿನಗಳ ನಂತರ ರಾವ್‌ಸಾಹೇಬನ ಸೈನ್ಯವು ಗವಾಲಿಯರಿನಿಂದ ೯ ಮೈಲಿ ದೂರದಲ್ಲಿದ್ದ ಒಂದು ಹಳ್ಳಿಯಲ್ಲಿ ಶಿಬಿರ ಬಿಟ್ಟಿತು. ರಾವ್‌ಸಾಹೇಬನು ಮತ್ತೆ ಸಹಾಯಕ್ಕಾಗಿ ಸಿಂಧ್ಯನಿಗೆ ಒಂದು ಪತ್ರವನ್ನು ಬರೆದನು. ಇದರ ವಿಚಾರವಾಗಿ ಗವಾಲಿಯರಿನ ರಾಜ ಸಭೆಯಲ್ಲಿ ವಾದವಿವಾದಗಳು ನಡೆದವು. ಒಡನೆಯೆ ಕ್ರಾಂತಿಕಾರರ ಮೇಲೆ ಧಾಳಿ ಮಾಡಬೇಕೆಂಬುದು ಸಿಂಧ್ಯನ ಮತವಾಗಿದ್ದಿತು. ರೋಜನು ಬರುವವರೆಗೂ ಅವರನ್ನು ಹೇಗಾದರೂ ತಡೆದಿಟ್ಟಿರಬೇಕೆಂಬುದಾಗಿಯೂ ಮತ್ತು ತನ್ನ ಸೇನೆಯನ್ನು ಹತೋಟಿಯಲ್ಲಿಟ್ಟುಕೊಂಡಿರಬೇಕೆಂಬುದಾಗಿಯೂ ದಿವಾನನ ಅಭಿಪ್ರಾಯವಾಗಿದ್ದಿತು. ರಾಜನು ಅದಕ್ಕೆ ಸಮ್ಮತಿಸಲಿಲ್ಲ. ಜೂನ್ ಮೊದಲನೆಯ ತಾರೀಖು ಪೇಶ್ವೆಯ ಸೈನ್ಯವನ್ನು ಎದುರಿಸುವುದಕ್ಕಾಗಿ ೬ ಸಾವಿರ ಪದಾತಿ ಸೈನ್ಯ, ೧೨೦೦ ಉತ್ತಮ ಸವಾರರು ಮತ್ತು ೮ ಆಧುನಿಕ ದೊಡ್ಡ ತೋಪುಗಳನ್ನು ತೆಗೆದುಕೊಂಡು ಮುರಾರ್‌ಗೆ ಪೂರ್ವದಲ್ಲಿದ್ದ ಬಹದ್ದೂರ್ ಗಾಂವ್ ಎಂಬ ಹಳ್ಳಿಯ ಸಮೀಪದಲ್ಲಿ ತಕ್ಕ ಸ್ಥಾನವನ್ನು ಆಕ್ರಮಿಸಿಕೊಂಡನು. ಪ್ರಾತಃಕಾಲವಾದೊಡನೆಯೇ ಸಿಂಧ್ಯನು ಪೇಶ್ವೆಯ ಸೈನ್ಯದೆಡೆಗೆ ತೋಪುಹಾರಿಸಲು ಪ್ರಾರಂಭಿಸಿದನು. ಅವರ ತಲೆಯ ಮೇಲೆ ತೋಪುಗಳು ಸಿಡಿಯುವ

---

* "If the Scindhia join the mutiny I shall have to pack off tomorrow."

ವರೆಗೂ ತಾತ್ಯನೂ ಮತ್ತು ರಾವ್‌ಸಾಹೇಬನೂ ತಮ್ಮನ್ನು ಬರಮಾಡಿಕೊಳ್ಳಲು ಸಿಂಧ್ಯನು ತೋಪಿನ ಸಲಾಮನ್ನು ಹಾರಿಸುತ್ತಿರುವನೆಂದು ನಂಬಿದ್ದರು. ಅದುವರೆಗೂ ಪೇಶ್ವೆಯ ಸೈನ್ಯವು ಯುದ್ಧಕ್ಕಾಗಿ ತಯಾರಾಗಿರಲಿಲ್ಲ. ರಾಣಿಯ ಆಜ್ಞೆಯಂತೆ ರಘುನಾಥಸಿಂಹನು ಸಿದ್ಧವಾಗಲು ತುತ್ತೂರಿಯನ್ನು ಊದಿದನು. ಆದರೆ ಆ ನಿರುಪಯೋಗಿ ಸೈನ್ಯದಲ್ಲಿ ತುತ್ತೂರಿಯ ಶಬ್ದವನ್ನು ಕೇಳುವವರಾರಿದ್ದರು? ಸಿಂಧ್ಯನ ಗೋಲಂದಾಜಿಗಳು ಪೇಶ್ವೆಯ ಶಿಬಿರದ ಮೇಲೆ ಪುನಃಪುನಃ ಗುಂಡಿನಮಳೆ ಸುರಿಸಲು ಆಗ ಗಲಭೆ ಏರ್ಪಟ್ಟಿತು.

ಆದರೆ ರಾಣಿ, ಅವಳ ದಳಪತಿಗಳು ಮತ್ತು ಸವಾರರು ಮೊದಲೇ ಸೊಂಟ ಕಟ್ಟಿ ಯುದ್ಧಕ್ಕೆ ಸಿದ್ಧರಾಗಿದ್ದರು. ತಾತ್ಯಾಟೋಪೆಯನ್ನು ಶಿಬಿರದ ವ್ಯವಸ್ಥೆಯನ್ನು ಮಾಡಲುಬಿಟ್ಟು ಕೇವಲ ತನ್ನ ೨೫೦ ಮಂದಿ ಸವಾರರೊಡನೆ ರಾಣಿಯು ಸಿಂಧ್ಯನ ಸೈನ್ಯವನ್ನು ಎದುರಿಸಲು ಹೊರಟಳು. ಕೆಲವು ಗೋಲಂದಾಜಿಗಳು ಮರಣಹೊಂದಿದರು. ಇನ್ನು ಕೆಲವರು ತೋಪುಗಳನ್ನು ಬಿಟ್ಟು ಓಡಿದರು. ತಾತ್ಯಾಟೋಪೆಯು ತಕ್ಷಣವೆ ತನ್ನ ಶಿಬಿರದ ಸೈನ್ಯವನ್ನು ಇಬ್ಭಾಗ ಮಾಡಿ, ಉಳಿಸಿ, ಬೇರೊಂದು ಕಡೆಗೆ ರವಾನಿಸಿದನು. ಆತನು ಈ ವಿದ್ಯೆಯಲ್ಲಿ ನಿಪುಣನಾಗಿದ್ದನು. ಲಕ್ಷ್ಮೀಬಾಯಿಯ ಪರಾಕ್ರಮವನ್ನೂ ಮತ್ತು ಬೇರೊಂದು ದಿಕ್ಕಿನಿಂದ ಬರುತ್ತಿರುವ ತಾತ್ಯಾನ ಸೈನ್ಯವನ್ನೂ ಕಂಡು ಸಿಂಧ್ಯನ ೬ ಸಹಸ್ರ ಪದಾತಿ ಸೈನ್ಯವು ರಣರಂಗವನ್ನು ತ್ಯಜಿಸಿ ಓಡಿಹೋಯಿತು. ಆದರೆ ೧೨೦೦ ಸವಾರರು ಮಾತ್ರ ಸಂಗಡಲೇ ಇದ್ದರು. ಇವರೊಂದಿಗೆ ಲಕ್ಷ್ಮೀಬಾಯಿಯ ಸವಾರರು ಹೋರಾಡಬೇಕಾಯಿತು. ಸ್ವಲ್ಪಹೊತ್ತಿನವರೆಗೂ ತೀವ್ರ ಖಡ್ಗಪ್ರಯೋಗವನ್ನು ಮಾಡಿ ಲಕ್ಷ್ಮೀಬಾಯಿಯ ಸವಾರರ ಮುಂದೆ ನಿಲ್ಲಲಾರದೆ ಓಡಿಹೋಗಲುಪಕ್ರಮಿಸಿದರು. ಜಿಯಾಜಿರಾಯನು ಒಡನೆಯೆ ರಣರಂಗವನ್ನು ಬಿಟ್ಟು ಹಿಮ್ಮೆಟ್ಟಿದನು. ಮೊದಲು ಅರಮನೆಯ ರಸ್ತೆಯನ್ನು ಹಿಡಿದು ನಂತರ ದಿನಕರರಾಯ ಮತ್ತು ಒಬ್ಬಿಬ್ಬರು ನಂಬಿಕಸ್ತರಾದ ಸರದಾರರೊಂದಿಗೆ ಧೋಲ್ಪುರದ ಮಾರ್ಗವಾಗಿ ಆಗ್ರಾವನ್ನು ತಲಪಿದನು. ಅಲ್ಲಿನ ಕೋಟೆಯಲ್ಲಿ ಅವರಿಗೆ ಆಶ್ರಯ ದೊರಕಿತು.

## ೭೩

ಸಿಂಧ್ಯನು ಆಗ್ರಾವಿಗೆ ಹೊರಟು ಹೋದಮೇಲೆ ಅವನ ರಾಣಿಯರು ನರವರವೆಂಬ ಕಿಲ್ಲೆಗೆ ಹೊರಟುಹೋದರು. ಪೇಶ್ವೆಯ ಸೈನ್ಯವು ಸಂತೋಷ ಮತ್ತು ಅಟ್ಟಹಾಸದಿಂದ ನಗರ ಪ್ರವೇಶಮಾಡಿತು. ಗವಾಲಿಯರಿನಲ್ಲಿ ಉಳಿದಿದ್ದ ಸೈನ್ಯವು ಒಟ್ಟು

ಗೂಡಿ ಕುಶಾಲು ತೋಪುಗಳನ್ನು ಹಾರಿಸಿ ಆತನ ಅಧೀನವಾಯಿತು. ಪೇಶ್ವೆಯು ಜಂಭದಿಂದ ಮಂಗಳವಾದ್ಯಗಳೊಂದಿಗೆ ಸಿಂಧ್ಯನ ಅರಮನೆಯನ್ನು ಪ್ರವೇಶಿಸಿ ಅಲ್ಲಿ ಶಿಬಿರವನ್ನು ಸ್ಥಾಪಿಸಿದನು. ರಾಣಿಯು ತನ್ನ ಶಿಬಿರವನ್ನು ನೌಲಕಾಬಾಗ್ ಎಂಬಲ್ಲಿ ಸ್ಥಾಪಿಸಿದಳು. ಪೇಶ್ವೆಯ ಸರದಾರರು ಶಹರಿನ ಬೇರೆ ಬೇರೆ ಮಹಲ್ಲುಗಳಲ್ಲಿ ಬಿಡಾರ ವಿಟ್ಟರು. ತಾತ್ಯನ ಪಡೆಗೆ ಕಿಲ್ಲೆಯ ಹೆಬ್ಬಾಗಿಲನ್ನು ತೆರೆಯಲಾಯಿತು. ಅಪಾರವಾದ ಯುದ್ಧ ಸಾಮಗ್ರಿಗಳು ಅವರ ವಶವಾಯಿತು. ಕಿಲ್ಲೆಯ ಮೇಲೆ ಪೇಶ್ವೆಯ ಧ್ವಜವು ಹಾರಾಡಿತು. ಸಿಂಧ್ಯನ ಖಜಾನೆಯೂ ಕೈವಶವಾಯಿತು. ಈಗ ಪೇಶ್ವೆಯ ಸರಿಸಮಾನ ರಾರಿದ್ದರು!

ಕಂಪೆನಿಯ ಎದುರಾಳಿಗಳಾದ ಪೇಶ್ವೆಯ ಸೈನಿಕರು ರೆಸಿಡೆನ್ಸಿಗೆ ಬೆಂಕಿಯನ್ನಿಟ್ಟು ಅದನ್ನು ಲೂಟಿಮಾಡಿದರು. ಇದಲ್ಲದೆ ಆಂಗ್ಲೇಯರ ಪಕ್ಷಪಾತಿಗಳಾದ ದಿವಾಣ ದಿನಕರರಾಯ, ಸರದಾರ್ ಬಲವಂತರಾವ್, ಸರದಾರ್ ಮಹೂರ್‌ಕರ್ ಮುಂತಾದ ವರ ಮನೆಗಳೂ ಲೂಟಿಯಾದವು. ಒಂದು ಬಾರಿ ಮನವು ಹತೋಟಿ ಮೀರಿದರೆ ಅದಕ್ಕೆ ಮಿತಿಯೇ ಇರುವುದಿಲ್ಲ—ನಗರದ ಲೂಟಿಯು ಪ್ರಾರಂಭವಾಗಿ ಸಕಾಲದಲ್ಲಿ ಪೇಶ್ವೆಗೆ ಈ ವರ್ತಮಾನವು ತಿಳಿಯಿತು. ಆತನು ತಾತ್ಯನನ್ನು ಕಳುಹಿಸಿ ಈ ಲೂಟಿ ಯನ್ನು ನಿಲ್ಲಿಸಿದನು.

ಗವಾಲಿಯರಿನ ರಾಜಸಭಿಕರು ಪೇಶ್ವೆಗೆ ಅನುಕೂಲರಾಗಿದ್ದು ಜನತೆಯೂ ಕೂಡ ಅವರೊಂದಿಗೆ ಸಹಕರಿಸಿತು. ವಿಜಯ ಪ್ರಾಪ್ತಿಯ ಹರ್ಷ ಮತ್ತು ಗರ್ವಗಳಿಂದ ಪೇಶ್ವೆಯ ಹೃದಯವು ತುಂಬಿಬಂದು ಕಟ್ಟಳೆಯ ಪ್ರಕಾರ ಸಿಂಹಾಸನಾರೂಢನಾಗಲು ನಿಶ್ಚಯಿಸಿದನು. ಜ್ಯೋತಿಷ್ಕರು ಶುಭ ಮುಹೂರ್ತವನ್ನು ನಿಶ್ಚಯಿಸಿದರು. ಪೇಶ್ವೆಯು ತನ್ನ ಗುರಿಯು ಸ್ವರಾಜ್ಯಸ್ಥಾಪನೆಯೆಂಬುದನ್ನು ಮರೆತು ತನ್ನ ವೈಭವದಲ್ಲಿ ಮೆರೆಯ ಲಾರಂಭಿಸಿದನು

ಜೂನ್ ೩ನೆಯ ತಾರೀಖು ಫೂಲ್‌ಬಾಗ್ ಎಂಬಲ್ಲಿ ದೊಡ್ಡ ರಾಜ್ಯ ಸಭೆಯು ನಡೆಯಿತು. ಪೇಶ್ವೆಯು ರಾಜಯೋಗ್ಯವಾದ ಉಡುಪುಗಳನ್ನು ಧರಿಸಿ, ಕಿವಿಗಳಲ್ಲಿ ಮುತ್ತಿನ ಹತ್ತಕಡುಕು, ಕೊರಳಿನಲ್ಲಿ ಮುತ್ತು ಮತ್ತು ರತ್ನಗಳ ಕಂಠಿಯನ್ನು ಧರಿಸಿ ಠೀವಿಯಿಂದ ವಂದಿಮಾಗಧರ ಘೋಷಣೆಯೊಡನೆ ಮಂಗಳವಾದ್ಯಗಳು ಮೊರೆಯು ತ್ತಿರಲು ಸಿಂಹಾಸನಾರೂಢನಾದನು. ಸರದಾರರು ನಜರೊಪ್ಪಿಸಿದರು. ಪೇಶ್ವೆಯು ಅವರನ್ನು ಅಭಿನಂದಿಸಿ ಅವರಿಗೆ ಕಿಲ್ಲತ್ತುಗಳನ್ನು ಕೊಟ್ಟು ಸನ್ಮಾನಿಸಿದನು. ಅಷ್ಟ ಪ್ರಧಾನ, ಏಕ ಪ್ರಧಾನ ಮಂತ್ರಿಗಳನ್ನು ನಿಯಮಿಸಿದನು. ತಾತ್ಯಾಟೋಪೆಯನ್ನು ಪ್ರಧಾನ ಸೇನಾಪತಿಯನ್ನಾಗಿ ಮಾಡಿ ತನ್ನ ಸೇನೆಗೆ ೨೦ ಲಕ್ಷ ರೂಪಾಯಿಗಳನ್ನು ಹಂಚಿದನು. ಅಸಂಖ್ಯಾತ ಬ್ರಾಹ್ಮಣರಿಗೆ ಭೂರಿಭೋಜನಗಳನ್ನೇರ್ಪಡಿಸಿ ಸಹಸ್ರಾರು

ಮುಂದಿಯನ್ನು ಪಾಕಶಾಲೆಯ ಕಾರ್ಯಕ್ಕೆ ನೇಮಿಸಿದನು. ಭೂರಿಭೋಜನ, ಬಾದಾಮಿಯಪೂರಿ, ಸೇವಿಸಲು ಭಂಗಿ ಎಲ್ಲವೂ ಏರ್ಪಾಡಾದವು.

ಈ ಆನಂದದ ಹೊಳೆಯಲ್ಲಿ ಮಿಾಯದಿದ್ದವರೆಂದರೆ ರಾಣಿ ಲಕ್ಷ್ಮೀಬಾಯಿ ಮತ್ತು ಅವಳ ಐದು ಜನ ನಾಯಕರು. ಅವಳ ಕೆಂಪುವಸ್ತ್ರಧಾರಿ ಸೈನ್ಯವು ಇನಾಮು ಸ್ವೀಕರಿಸುವುದರಲ್ಲಿ ಮಾತ್ರ ಭಾಗವಹಿಸಿತು.

ಗಾಯನವಾದನಗಳಿಗೆ ಗವಾಲಿಯರು ಪ್ರಸಿದ್ಧವಾಗಿದ್ದಿತು. ಆದುದರಿಂದ ಅದರ ಸಂಪೂರ್ಣ ಉಪಯೋಗವನ್ನು ಪಡೆಯಲಾಯಿತು. ನೃತ್ಯಗಾಯನಗಳಲ್ಲಿ ಹಗಲೂ ರಾತ್ರಿಗಳು ಕಳೆದು ಹೋದವು. ತನ್ನ ಕಲಾ ಕೌಶಲ್ಯವನ್ನು ಇವರ ಮುಂದೆ ಪ್ರದರ್ಶಿಸಲು ಅವಕಾಶ ದೊರೆಯದಂತೆ ಒಬ್ಬ ಗಾಯಕಿಯಾಗಲೀ, ನರ್ತಕಿಯಾಗಲೀ ಗವಾಲಿಯರಿನಲ್ಲಿರಲಿಲ್ಲ. ಕವಿ ಸಮ್ಮೇಳನವೇರ್ಪಟ್ಟು ಕಲ್ಪನೆಯ ಸೇತುವೆಯನ್ನು ಕಟ್ಟಿ ಭೂವ್ಯೋಮಾಕಾಶಗಳನ್ನು ಒಂದು ಮಾಡಿದರು. ಕೆಲವರು ಪೇಶ್ವೆಯನ್ನು ಶ್ರೀರಾಮಚಂದ್ರನಿಗೆ ಹೋಲಿಸಿದರು. ಮತ್ತೊಬ್ಬರು ಇಂದ್ರನಿಗೆ ಹೋಲಿಸಿದರು. ಮತ್ತೊಂದೆಡೆ ವಿದೂಷಕರು ಪರಿಹಾಸ, ಅಟ್ಟಹಾಸಗಳನ್ನು ಮಾಡಿ ಎಲ್ಲರನ್ನು ನಗೆ ಗಡಲಿನಲ್ಲಿ ಮುಳುಗಿಸುತ್ತಿದ್ದರು.

ರಾಣಿಯು ಯಾವ ಉತ್ಸವಗಳಲ್ಲಿಯೂ ಸೇರುತ್ತಿರಲಿಲ್ಲ. ಈ ವೈರಾಗ್ಯ ವೃತ್ತಿಯಿಂದಾಗಿ ಅವಳನ್ನು ಯಾವ ಉತ್ಸವಕ್ಕೂ ಆಹ್ವಾನಿಸುತ್ತಿರಲಿಲ್ಲ.

ತಾತ್ಯಾನ ಮನದಲ್ಲಿ ಅಭುಕ್ತವಾಗಿದ್ದ ವಾಸನೆಯೊಂದು ಉಕ್ಕಿ ಬಂದು ಅವನೂ ತನ್ನ ಸ್ವಾಮಿ ಪೇಶ್ವೆಯೊಂದಿಗೆ ನೃತ್ಯಗೀತೆಗಳಲ್ಲಿ ಮುಳುಗಿಹೋದನು.

ನೃತ್ಯಗಾನಗಳ ಒಂದು ಸಮ್ಮೇಳನದಲ್ಲಿ ರಾಣಿಯು ಸರದಾರರನ್ನು ಬಲಾತ್ಕಾರವಾಗಿ ಕರಸಲಾಯಿತು. ರಾಣಿಯ ಅನುಮತಿ ಪಡೆದು ಮುಂದರಿಯ ಹೊರತಾಗಿ ಬಾಕಿ ಎಲ್ಲರೂ ಹೋಗಿದ್ದರು. ಸಮ್ಮೇಳನದಲ್ಲಿ ಗವಾಲಿಯರಿನ ಉತ್ತಮ ದರ್ಜೆಯ ಪ್ರಸಿದ್ಧಗಾಯಕ ನರ್ತಕಿಯರು ಪ್ರದರ್ಶನವಿತ್ತರು. ಪೇಶ್ವೆಯು "ನೃತ್ಯಗಾನಗಳೊಂದಿಗೆ ಹಾವ ಭಾವಗಳನ್ನು ಪ್ರದರ್ಶಿಸಿರಿ." ಎಂದು ಆಜ್ಞೆಯಿತ್ತನು. ಅವರುಗಳೂ ವಿಸ್ತಾರವಾಗಿ ಹಾವಭಾವಗಳನ್ನು ಪ್ರದರ್ಶಿಸಲಾರಂಭಿಸಿದರು.

ಜೂಹಿಯು ಮನವಿಟ್ಟು ಗಮನಿಸಿ ನೋಡುತ್ತಿದ್ದಳು. ಆಕೆಯು ಗಾಯನದಲ್ಲಿ ತಾಳಕ್ಕೆ ಸರಿಯಾಗಿ ತನ್ನ ಹೆಜ್ಜೆಯಿಂದ ತಾಳ ಹಾಕುತ್ತಾ ತಲೆಯನ್ನು ತೂಗಿಸುತ್ತಿದ್ದಳು. ಒಂದೆಡೆ ಪಕ್ಕವಾದ್ಯದವನ ಅಜಾಗರೂಕತೆಯಿಂದ ನರ್ತಕಿಯು ಕ್ಷಣಾರ್ಧಕ್ಕೆ ಮೊದಲೇ ಗೆಜ್ಜೆಯನ್ನು ಧ್ವನಿಗೈದಳು. ಜೂಹಿಯು ಪಕ್ಕಕ್ಕೆ ತಿರುಗಿ ಮುಖವನ್ನು ಸಿಂಡರಿಸಿಕೊಂಡಳು. ತಾತ್ಯಾ ಧ್ಯಾನಪೂರ್ವಕವಾಗಿ ನರ್ತಕಿಯ ಸುಂದರ ರೂಪ, ಕಲಾಪೂರ್ಣ ನೃತ್ಯ, ಹಾವ ಭಾವ ಪ್ರದರ್ಶನಗಳನ್ನು ನೆಟ್ಟಗಣ್ಣಿನಿಂದ ನೋಡುತ್ತಿ

ದ್ದನು. ಜೂಹಿಯು ತಾತ್ಯಾನ ಈ ಭಂಗಿಯನ್ನು ನೋಡಿದಳು. ಅವಳ ಮನದಲ್ಲೊಂದು ನೋವುಂಟಾಯಿತು.

ದೇಶಮುಖ ರಘುನಾಥಸಿಂಹ ಮತ್ತು ಗುಲ್‌ಮಹಮ್ಮದರು ಪಕ್ಕದಲ್ಲಿಯೇ ಮಂಡಿಸಿದ್ದರು.

ಗುಲ್‌ಮಹಮ್ಮದ್ದನು ಮೆತ್ತಗೆ "ತಮ್ಮಾ, ಇದೆಲ್ಲವೂ ವಿಚಿತ್ರವಾಗಿದೆ. ನಮ್ಮ ಕಡೆ ಯಾರೂ ಹೀಗೆ ಕುಣಿಯುವುದಿಲ್ಲ" ಎಂದನು.

ದೇಶಮುಖ—ಗವಾಲಿಯರು ಈ ವಿಚಾರದಲ್ಲಿ ಬಹಳ ಪ್ರಸಿದ್ಧಿ ಹೊಂದಿದೆ.

ಗುಲ್‌ಮಹಮ್ಮದ್—ಆದರೆ ಆಂಗ್ಲೇಯರೊಂದು ವೇಳೆ ಈ ಹೊತ್ತಿಗೆ ಬಂದು ಬಿಟ್ಟರೆ ?

ದೇಶಮುಖ—ಆಗ ಎಲ್ಲರೂ ಪರಾರಿಯಾಗಬೇಕು.

ರಘುನಾಥಸಿಂಹ—ಆಗ ಯಾರೂ ಉಳಿಯುವುದೂ ಇಲ್ಲ.

ಗುಲ್—ಬೇಕಾದಷ್ಟು ನೋಡಿಯಾಯಿತು. ದಣಿದು ಹೋದೆವು. ನಮ್ಮ ರಾಣಿಯು ಈ ವೇಳೆಗೆ ಮಲಗಿ ಬಿಟ್ಟಿರಬಹುದು. ಶಿಬಿರದಲ್ಲಿ ಯಾರೂ ಇಲ್ಲ. ಬನ್ನಿ ಹೋಗೋಣ.

ಜೂಹಿಯು ಇದನ್ನು ಕೇಳಿಸಿಕೊಂಡು ಹೊರಡಲು ಆತುರಪಡಿಸಿದಳು.

ಪೇಶ್ವೆಯಿಂದ ಕ್ಷಮೆ ಬೇಡಿ ಅನುಮತಿಪಡೆದರು. ತಾತ್ಯಾ ಜೂಹಿಯ ಕಡೆಗೆ ಒಂದು ಬಾರಿ ನೋಡಿ ಅಭಿಮಾನದಿಂದ ತಲೆಯನ್ನು ತೂಗಿದನು. ಇವರೆಲ್ಲರೂ ಶಿಬಿರಕ್ಕೆ ಹಿಂದಿರುಗಿದರು.

ಸ್ವಲ್ಪಕಾಲ ಉತ್ಸವವು ನಿಂತಿತು. ಮಧ್ಯದಲ್ಲಿ ಒದಗಿದ ಈ ವಿಘ್ನದಿಂದ ರಸಿಕರಿಗೆ ಸ್ವಲ್ಪ ಅಸಮಾಧಾನವಾಯಿತು. ಅವರಲ್ಲೊಬ್ಬರು "ಈ ಕೆಂಪು ವಸ್ತ್ರಧಾರಿಗಳಾರು?" ಎಂದು ಕೇಳಿದರು.

ಪೇಶ್ವೆಯು "ಏನೂ ಪರವಾಗಿಲ್ಲ, ಎಲ್ಲರೂ ನಮ್ಮವರೆ, ಬುಂದೇಲುಖಂಡದ ಕೇಂದ್ರ ಝಾನ್ಸಿಯವರು ಸ್ವಲ್ಪ ಹಳ್ಳಿಗಾಡಿನವರು" ಎಂದನು.

ತಾತ್ಯಾವಿಗೆ ರಾಣಿಯ ನೆನಪು ಬಂದು ಕಂಪಿಸಿದನು. ಆದರೆ ಅವನೇನನ್ನೂ ಹೇಳಲಿಲ್ಲ—ಏನುತಾನೆ ಹೇಳಲು ಸಾಧ್ಯ!

ಉತ್ಸವವು ರಾತ್ರಿಯೆಲ್ಲಾ ನಡೆಯಿತು. ಮುಂಜಾನೆ ಚೆನ್ನಾಗಿ ಭಂಗಿ ಸೇವನೆಯಾಯಿತು. ನಂತರ ಶ್ರೀಖಂಡ ಲಡ್ಡುಗಳ ಭೂರಿಭೋಜನವಾಗಿ ದಿನವೆಲ್ಲಾ ಮಲಗಿ ನಿದ್ರಿಸಿದರು. ರಾತ್ರೆ ಪುನಃ ನೃತ್ಯಗೀತೆಗಳು ಆರಂಭವಾದವು. ಸ್ವಲ್ಪ ವಿರಾಮ ದೊರಕಿದಾಗ "ಬ್ರಾಹ್ಮಣ ಭೋಜನ ಯಥಾವಿಧಿಯಾಗಿ ನಡೆಯುತ್ತಿದೆಯೆ? ಸೈನಿಕರೆಲ್ಲರೂ ಆಮೋದಪ್ರಮೋದಗಳಲ್ಲಿ ಸಂತುಷ್ಟರಾಗಿರುವರೇ ಇಲ್ಲವೆ ?" ಎಂದು

ವಿಚಾರಣೆ ನಡೆಯುತ್ತಿದ್ದಿತು. ಇದೇ ದಿನಚರಿಯಾಯಿತು.

ಲಡ್ಡು ಶ್ರೀಖಂಡಗಳನ್ನು ತಿಂದು ಅನೇಕ ಬ್ರಾಹ್ಮಣರು ರೋಗಗ್ರಸ್ತರಾದರು. ಅವರಲ್ಲಿ ನಾರಾಯಣಶಾಸ್ತ್ರಿಯೂ ಒಬ್ಬ. ಭೋಟಿಯು ಅವನಿಗೆ ಮಾಡಿದ ಶುಶ್ರೂಷೆಯ ಫಲವಾಗಿ ಅವನು ಶೀಘ್ರವಾಗಿ ಗುಣಹೊಂದಿದನು. ಭೋಟಿಯು ಸ್ವಲ್ಪ ಹಣಕಾಸು ಮಾಡಿಕೊಳ್ಳಲು ಆಶಿಸಿ ಪೇಶ್ವೆಯ ದರ್ಬಾರಿನಲ್ಲಿ ನೃತ್ಯಮಾಡಲು ಸಂಕಲ್ಪಿಸಿಕೊಂಡಳು. ನಾರಾಯಣನು ಬೇಡವೆಂದು ಹೇಳಿ "ನನಗೆ ಸ್ವಲ್ಪ ತಿರುಗಾಡಲು ಶಕ್ತಿ ಬಂದನಂತರ ಹೇರಳವಾಗಿ ಧನಸಂಪಾದನೆ ಮಾಡುವೆನು. ನೀನು ಇವರ ಮುಂದೆ ನೃತ್ಯ ಮಾಡಲು ಹೋಗಬೇಡ. ಇವರು ಉತ್ತಮ ರಸಿಕರಲ್ಲ" ಎಂದನು.

ಭೋಟಿ—ನಿಮಗೆ ನನ್ನ ಮೇಲೆ ಭರವಸೆಯಿಲ್ಲವೆ ?

ನಾರಾಯಣ—ನಂಬಿಕೆಯೇನೋ ಇದೆ. ಪೂರ್ಣನಂಬಿಕೆ ಇದೆ, ಆದರೆ ಈ ಕೆಲಸವು ಹೇಯವಾದುದು.

ಭೋಟಿ—ನಾನು ಸೈನ್ಯದ ಶಿಬಿರಗಳಲ್ಲಿ ನರ್ತಿಸಿ ಗಾಯನ ಮಾಡುತ್ತಿದ್ದೆನಲ್ಲಾ. ಆ ಕೆಲಸವೇನು ಶ್ರೇಷ್ಠವಾಗಿದ್ದಿತೆ ?

ನಾರಾ—ಅದರ ಉದ್ದೇಶವು ಶ್ರೇಷ್ಠವಾಗಿದ್ದಿತು.

ಭೋಟಿ—ನಮ್ಮ ಬಳಿ ಈಗ ಹಣ ಕಾಸೇನೂ ಇಲ್ಲ. ನೀವಿನ್ನೂ ಓಡಿಯಾಡಲು ಕಾಲಾವಕಾಶ ಬೇಕು. ನಾನು ಇಂದಿನ ನೃತ್ಯದಲ್ಲಿಯೇ ಹೇರಳವಾದ ದ್ರವ್ಯವನ್ನು ತರುವೆನು. ಮನವೊಂದು ದೊಡ್ಡದಿದ್ದರೆ ಯಾವ ಕಾರ್ಯವೂ ಹೇಯವೆನಿಸುವುದಿಲ್ಲ.

ಶಾಸ್ತ್ರಿಗೆ ಭೋಟಿಯ ಹಠವನ್ನು ನಿಭಾಯಿಸಲೇ ಬೇಕಾಯಿತು. ಭೋಟಿಯು ಸುಂದರ ವೇಶದಲ್ಲಿ ಪೇಶ್ವೆಯ ಉತ್ಸವಕ್ಕೆ ಹೋಗಿ ಅಲ್ಲಿ ನೃತ್ಯಗಾಯನ ಮಾಡಿದಳು.

ಅವಳ ಗಾನವು ಸಾಧಾರಣವಾಗಿದ್ದಿತು. ಆದರೆ ಅವಳ ಮಧುರ ಶಾರೀರವೇ ಅದರ ವಿಶೇಷತೆಯಾಗಿದ್ದಿತು. ನೃತ್ಯವೂ ಬಿಗಿಯಾಗಿ ಲಯವೂ ಧೃತಗತಿಯದಾಗಿದ್ದಿತು. ಸುಂದರಳಾದುದರಿಂದ ಡೊಂಕುಮುಚ್ಚಿ ಅಪಮಾನಿತಳಾಗಲಿಲ್ಲ

ಅವಳ ಸರಳ ನೃತ್ಯಗಾನವನ್ನು ನೋಡಿ ಪೇಶ್ವೆಯು ಮುಗ್ಧನಾದನು. ಅವರಿಗೆ ತಕ್ಕ ಪುರಸ್ಕಾರವನ್ನು ಕೊಟ್ಟು "ನೀನೇನು ಇಲ್ಲಿಯವಳೆ? ನಿನ್ನ ನೃತ್ಯವು ಶಾಸ್ತ್ರ ಸಮ್ಮತವಲ್ಲದಿದ್ದರೂ ಮನಮೋಹಕವಾಗಿದೆ. ನೀನು ಇಲ್ಲಿಗೆ ಆಗಾಗ ಬರುತ್ತಿರು" ಎಂದನು.

ಭೋಟಿ—ನಾನು ಝಾನ್ಸಿಯವಳು. ಸ್ವಲ್ಪಕಾಲದಿಂದ ಲಷ್ಕರಿನಲ್ಲಿದ್ದೇನೆ.

ತಾತ್ಯಾ ಭೋಟಿಯನ್ನು ಬಹಳ ಹೊತ್ತಿನವರೆಗೆ ಗಮನಿಸಿ ನೋಡುತ್ತಿದ್ದನು. ಅವಳಾರು ? ಎಂಬ ಶಂಕೆಯನ್ನು ತೋರೆದು ಅವಳನ್ನು ಗುರುತಿಸಲು ಪ್ರಯತ್ನಿಸಿದನು.

ತಾತ್ಯಾ ರಾವ್‌ಸಾಹೇಬನೊಂದಿಗೆ "ಈಕೆಯು ಜಾತಿಯಲ್ಲಿ ಝಾಡಮಾಲಿಯು, ಶ್ರೀಮಂತ್ ಸರ್ಕಾರ್" ಎಂದು ಹೇಳಿದನು.

ಪೇಶ್ವೆ—ಝಾಡಮಾಲಿಯೆ ?

ತಾತ್ಯಾ—ಸರ್ಕಾರ್, ಹೌದು.

ಪೇಶ್ವೆ—ಆದರೇನು ? ಅವಳಲ್ಲಿ ವಿದ್ಯೆಯಿದೆ. ನರ್ತನವೊಂದೇ ಏಕೆ, ಭ್ರಮೆಯನ್ನೂ ಹಿಡಿಸುತ್ತಾಳೆ.

ತಾತ್ಯಾ—ಇವಳು ನಾರಾಯಣ ಶಾಸ್ತ್ರಿಯೊಂದಿಗೆ ಝಾನ್ಸಿಯಿಂದ ಓಡಿಹೋಗಿದ್ದಳು.

ಪೇಶ್ವೆ—ನಾರಾಯಣಶಾಸ್ತ್ರಿಯೊಂದಿಗೆ! ಬ್ರಾಹ್ಮಣನನ್ನು ಪತಿತನನ್ನಾಗಿ ಮಾಡಿ! ಅಲ್ಲಿಗೆ ರಾವ್‌ಸಾಹೇಬನ ಕಲಾಪ್ರೇಮವು ಸಮಾಪ್ತಿಯಾಯಿತು. ಕೋಪದಿಂದ "ನೀನು ಇಲ್ಲಿಯವರೆಗೆ ಬರಲು ನಿನಗೆಷ್ಟು ಧೈರ್ಯ ?" ಎಂದು ಕೇಳಿದನು.

ಭೋಟಿ—ದೇಶಸೇವೆ ಮಾಡಲು ಭಾವನಿಗಳಿಗೆ ಹೇಗೆ ಹೋಗುತ್ತಿದ್ದೆನೋ ಹಾಗೆ.

ಪೇಶ್ವೆಯು ತಾತ್ಯನ ಕಡೆಗೆ ನೋಡಿದನು.

ತಾತ್ಯಾ—ಸೈನ್ಯದ ಶಿಬಿರಗಳಲ್ಲಿ ಕ್ರಾಂತಿಯ ವಿಷಯವಾಗಿ ಪ್ರಕಟಣೆಯ ಪ್ರಚಾರವನ್ನು ವಿಶೇಷವಾಗಿ ಮಾಡಿದ್ದಾಳೆ.

ಪೇಶ್ವೆ—ಆದರೇನು ? ಅವಳು ಈಗ ಮಾಡುತ್ತಿರುವುದೂ ಝಾನ್ಸಿಯಲ್ಲಿ ಮಾಡಿದುದೂ ದಂಡನಾರ್ಹವಾದ ಕೆಲಸಗಳು.

ಭೋಟಿಯು ಈ ಮಾತನ್ನು ಕೇಳಿ ಸ್ವಲ್ಪವೂ ಕುಂದದೇ ಹೇಳಿದಳು. "ನನಗೆ ದೊರೆಯಬೇಕಾದುದು ದಂಡನೆಯೋ ಇನಾಮೋ ದೊರಕಿಬಿಟ್ಟಿತು."

ಪೇಶ್ವೆ—ನೀನು ಇನ್ನು ಮುಂದೆ ಗವಾಲಿಯರಿನಲ್ಲಿರಲಾಗುವುದಿಲ್ಲ. ಇದು ನನ್ನ ರಾಜ್ಯ. ಒಡನೆಯೆ ಇಲ್ಲಿಂದ ಹೊರಡು.

ಭೋಟಿ—ಎಲ್ಲಿ ಹೋಗಲಿ ?

ಪೇಶ್ವೆ—ಆಂಗ್ಲೇಯರ ರಾಜ್ಯದಲ್ಲಿ ಎಲ್ಲಿಗೆ ಬೇಕಾದರೂ ಹೋಗು.

ಭೋಟಿ—ಹೋಗುವೆನು, ಆದರೆ ಆಂಗ್ಲೇಯರ ರಾಜ್ಯಕ್ಕಲ್ಲ. ಏಕೆಂದರೆ ಅವರು ನಮ್ಮನ್ನು ಮನ್ನಿಸುವುದಿಲ್ಲ.

ಭೋಟಿಯು ಅಲ್ಲಿಂದ ಹಿಂತಿರುಗಿ ಬಂದು ನಾರಾಯಣ ಶಾಸ್ತ್ರಿಗೆ ಬಹುಮಾನದ ಹಣವನ್ನು ಕೊಟ್ಟು ಅಲ್ಲಿ ನಡೆದ ವಿಷಯವನ್ನೆಲ್ಲಾ ತಿಳಿಸಿದಳು.

ಮೊದಲವನಿಗೆ ಕೋಪ ಬಂದು "ಈ ಅಪವಿತ್ರವಾದ ಹಣವನ್ನು ಸ್ವೀಕರಿಸುವುದಿಲ್ಲ. ನಡೆ, ಭೋಟಿ, ಪೇಶ್ವೆಯ ಅತ್ಯಾಚಾರವು ಎಲ್ಲಿ ಇಲ್ಲವೋ ಅಲ್ಲಿಗೆ

ಹೋಗೋಣ.” ಎಂದನು.

ಭೋಟೆ—ಹಣವು ಅಪವಿತ್ರವಾದುದಲ್ಲ. ಅದನ್ನು ನಾನು ಬೆವರು ಸುರಿಸಿ ಸಂಪಾದಿಸಿರುವೆನು. ಪ್ರಪಂಚದಲ್ಲಿ ಎಲ್ಲಾ ಕಡೆಯೂ ಪೇಶ್ವೆಯ ರಾಜ್ಯವೇನಿಲ್ಲ.

ನಾರಾಯಣ—ಆದರೆ ಜಾತಿ ಪಂಥಗಳ ರಾಜ್ಯವೇ ತಾನೆ ಎಲ್ಲ ಕಡೆಯೂ.

ಭೋಟೆ—ನೀವು ವೈಷ್ಣವರಾದ ಮೇಲೆ ಜಾತಿ ಪಂಥಗಳೆಂಬ ಭೂತಗಳೆಲ್ಲವೂ ಓಡಿ ಹೋಗುತ್ತದೆಂದು ಹೇಳುತ್ತೀರಿ.

ನಾರಾಯಣ—ನಾನು ಹೇಳುವುದು ಸುಳ್ಳಲ್ಲ. ನಡೆ, ಇದೇ ವೇಶವು ನಮ್ಮನ್ನು ಕಾಪಾಡುತ್ತದೆ.

ಅವರಿಬ್ಬರೂ ಹೊರಟುಹೋದರು. ಮತ್ತೆ ಅವರು ಪೇಶ್ವೆಯ ಕಣ್ಣಿಗೆ ಬೀಳಲಿಲ್ಲ.

ಅತ್ತ ರೋಜನಿಗೆ ಜೂನ್ ಮೊದಲನೆಯ ತಾರೀಖಿನ ದಿನವೇ ಕ್ರಾಂತಿಯು ಗವಾಲಿಯರಿನ ಕಡೆಗೆ ಹರಡುತ್ತಿದೆ ಎಂಬುದು ವಿದಿತವಾಯಿತು. ಅವನು ಕಾಲ್ಪಿಯ ವಿಜಯದನಂತರ ರಜವನ್ನು ತೆಗೆದುಕೊಂಡು ಬೊಂಬಾಯಿಗೆ ಹೋಗುವುದರಲ್ಲಿದ್ದನು. ಈ ವಿಷಯವನ್ನು ಕೇಳಿದೊಡನೆಯೇ ತನ್ನ ರಜವನ್ನು ನಿರಾಕರಿಸಿ ತನ್ನ ದಳಪತಿಗಳನ್ನು ಗವಾಲಿಯರಿನ ಕಡೆಗೆ ಹೋಗುವಂತೆ ತ್ವರಿತವಾಗಿ ಆಜ್ಞೆಯನ್ನಿತ್ತನು. ಜೂನ್ ೪ನೆಯ ತಾರೀಖು ಗವಾಲಿಯರ ಪತನವಾಯಿತೆಂದೂ, ರಾಜನೂ ಮತ್ತು ದಿನಕರ ರಾವ್ ಇಬ್ಬರೂ ಆಗ್ರಾವಿಗೆ ಓಡಿಹೋಗಿ ಶರಣು ಹೊಂದಿದರೆಂದೂ ಅವನಿಗೆ ತಿಳಿಯಿತು. ಅದನ್ನರಿತು ಆತನು ನಿಸ್ತಬ್ಧನಾದನು. ಕಾಲ್ಪಿಯಲ್ಲಿ ಇಂತಹ ಭೀಕರ ಸೋಲನ್ನು ಅನುಭವಿಸಿದನಂತರವೂ ಗವಾಲಿಯರನ್ನು ಹಸ್ತಗತಮಾಡಿಕೊಳ್ಳುವ ಸಾಹಸವನ್ನು ಯಾರು ಮಾಡಬಲ್ಲರು? ಯಾರು ಇಂತಹ ಅದ್ಭುತವನ್ನೆಸಗಬಲ್ಲರು? ಯಾರಿಗೆ ಇಂತಹ ಆಕಾಂಕ್ಷೆಯು ಸಾಧ್ಯ?

ರೋಜನು “ಇದು ಝಾನ್ಸಿಯ ರಾಣಿಯಲ್ಲದೇ ಮತ್ತಾರೂ ಇರಲಾರರು. ಝಾನ್ಸಿಯ ರಾಣಿಯನ್ನು ಸೆರೆಹಿಡಿಯದಿದ್ದರೆ ಅಥವಾ ಕೊಲ್ಲದಿದ್ದರೆ ಹಿಂದೂಸ್ಥಾನದಲ್ಲಿ ನಮ್ಮ ರಾಜ್ಯವು ಶಾಶ್ವತವಾಗಿ ನಿಲ್ಲುವುದಿಲ್ಲ” ಎಂದು ಯೋಚಿಸಿ ದೃಢಸಂಕಲ್ಪದಿಂದ ರೋಜನು ತನ್ನ ಕಾರ್ಯಕ್ಕಿಳಿದನು.

## ೮೪

ರಾಣಿಯು ಪೇಶ್ವೆಯನ್ನು ಭೇಟಿಮಾಡಿ ಈ ಉತ್ಸವಗಳನ್ನು ನಿಲ್ಲಿಸುವಂತೆ ಹೇಳಬೇಕೆಂದು ಪ್ರಯತ್ನಿಸಿದಳು. ಆದರೆ ಅವನಾದರೋ ನೃತ್ಯಗೀತವು ಮುಗಿದರೆ ಭಂಗಿ

ಮತ್ತು ನಿದ್ರೆ; ಅವು ತಪ್ಪಿದರೆ ಪುನಃ ನೃತ್ಯಗೀತಗಳಲ್ಲಿ ಮಗ್ನನಾಗುತ್ತಿದ್ದನು. ತಾತ್ಯನಾದರೋ ಈ ಸರಸಗಳಲ್ಲಿ ಮುಳುಗಿದ್ದುದಲ್ಲದೆ ಯಾವ ಆಂಗ್ಲೇಯ ಜನರಲ್ಲನೂ ಅವರನ್ನು ಎದುರಿಸಲು ಸಾಧ್ಯವಿಲ್ಲವೆಂಬ ಮೂಢ ಭರವಸೆಯನ್ನು ಹೊಂದಿದ್ದನು.

ಒಂದು ದಿನ ಮೂರನೆಯ ಝಾವದಲ್ಲಿ ರಾಣಿಗೆ ಈ ಐಶ್ವರ್ಯ ಪ್ರಮತ್ತನಾದ ಪೇಶ್ವೆಯೊಂದಿಗೆ ಮಾತನಾಡುವ ಅವಕಾಶವು ದೊರಕಿತು. ರಾಣಿಯು ದುಃಖಿನಿಯೂ ಕ್ಷುಬ್ಧಳೂ ಆಗಿದ್ದಳು. ಪೇಶ್ವೆಯು ಆಗತಾನೆ ನಿದ್ರೆಯಿಂದ ಎದ್ದಿದ್ದನು. ರಾತ್ರಿಯ ಆಮೋದಪ್ರಮೋದ ಮತ್ತು ಹಗಲಿನ ಭಂಗಿಸೇವನೆ ಇವುಗಳ ಮದದ ನಶೆಯು ಇನ್ನೂ ಇದ್ದಿತು. ಆತನ ಕಣ್ಣುಗಳು ಕೆಂಪಗಿದ್ದು ಆಕಳಿಸಿ ಮೈ ಮುರಿಯುತ್ತಿದ್ದನು. ಅಭಿವಾದನೆಯಾದನಂತರ ಆತನು ರಾಣಿಯೊಂದಿಗೆ "ಹಗಲೂ ರಾತ್ರಿಯೂ ಬಹು ಸೆಖೆಯಾಗುತ್ತಿದೆ" ಎಂದನು.

'ಆಗಾಗಲೆ ಬದಲಾಯಿಸುತ್ತಿದೆ. ಎಂಟು ಹತ್ತು ದಿನಗಳಲ್ಲಿ ಮಳೆ ಬರಬಹದು.'

'ಇನ್ನೂ ನಕ್ಷತ್ರಗಳು ಹೊಳೆಯುತ್ತಿವೆ.'

'ಆದರೆ ಇಂತಹ ದಿನಗಳಲ್ಲಿ ಛತ್ರಪತಿ ಶಿವಾಜಿ ಮತ್ತು ಪಂತಪ್ರಧಾನ ಬಾಜೀರಾಯರು ತಮ್ಮ ಪರಾಕ್ರಮವನ್ನು ಪ್ರಕಾಶಪಡಿಸುತ್ತಿದ್ದರು.'

'ನಾವೂ ಕೂಡ ಗವಾಲಿಯರಿನ ಮಹಾರಾಜರೂ ಆಂಗ್ಲೇಯರೂ ಎಂದಿಗೂ ಮರೆಯದಂತಹ ಪರಾಕ್ರಮವನ್ನು ಪ್ರದರ್ಶಿಸಿದ್ದೇವೆ.'

'ಆದರೆ ಈ ದಿನಗಳಲ್ಲಿಯೇ ನಮ್ಮ ನಿಮ್ಮ ಮೇಲೆ ವಿಪತ್ತಿನ ಕಾಲಮೇಘವು ಕವಿದಿದೆ. ಇದು ಕೆಲವೇ ದಿನಗಳಲ್ಲಿ ಕಷ್ಟದ ಮಳೆಗರೆಯುವುದು.'

'ನನ್ನ ಸೈನ್ಯವು ಧೈರ್ಯದಿಂದ ಯುದ್ಧ ಮಾಡುವುದು. ಆ ವೇಳೆಗೆ ಮಳೆ ಹೊಯ್ದು ನದಿ ನಾಲೆಗಳು ತುಂಬಿ ಶತ್ರುಗಳು ನಮ್ಮನ್ನೇನೂ ಮಾಡಲು ಸಾಧ್ಯವಾಗುವುದಿಲ್ಲ.'

'ಅದೇ ನದಿ ನಾಲೆಗಳು ನಮ್ಮನ್ನೂ ನಿರುಪಾಯರನ್ನಾಗಿ ಮಾಡಿ ಅಸಮರ್ಥರನ್ನಾಗಿಸುವುದು. ಸೇನೆಯಲ್ಲಿ ಮೊದಲೇ ಬೇಕಾದಷ್ಟು ಅವ್ಯವಸ್ಥೆಯಿದೆ. ನಂತರ ಅವು ಕೆಲಸವನ್ನೂ ಮಾಡಲಾರವೇ ನಿಸ್ತೇಜವಾಗುವುವು.'

'ನಮ್ಮ ಬಳಿ ಇಷ್ಟು ದೊಡ್ಡ ಕೋಟೆಯಿದೆಯಲ್ಲ, ಬಾಯಿಸಾಹೇಬ್ ?'

'ಒಂದುವೇಳೆ ಕೋಟೆಯು ಕೈಬಿಟ್ಟರೆ ?'

'ಆಗ ನಾವು ನಿಸ್ಸಂದೇಹವಾಗಿ ನಾಶವಾಗುವೆವು.'

'ಆಂಗ್ಲೇಯರ ಪಡೆಯು ಎಲ್ಲೆಡೆಗಳಿಂದಲೂ ನಮ್ಮ ಮೇಲೆ ಧಾಳಿಮಾಡಲು ಬರುತ್ತವೆ. ಸ್ವಲ್ಪವೇ ಕಾಲಾವಕಾಶವಿದೆ. ನಿಮ್ಮ ಸೇನೆಯನ್ನು ಶಿಬಿರಕ್ಕೆ ತಂದು ಹತೋಟಿಯಲ್ಲಿಟ್ಟುಕೊಳ್ಳಿ. ತಕ್ಕ ಕಾಯಿದೆಗಳನ್ನು ಜಾರಿಗೆ ತನ್ನಿ. ಕಿಲ್ಲೆಯೊಳಗೆ

ಸೇರಿಕೊಂಡು ಯುದ್ಧಮಾಡುವ ಯೋಚನೆಯನ್ನು ಬಿಟ್ಟು ಆಂಗ್ಲೇಯರ ಸೈನ್ಯಕ್ಕೆ ಎದುರಾಗಿ ಹೊರಗಡೆ ಹೋಗಿ ಯುದ್ಧಮಾಡಿ. ಎಲ್ಲಕ್ಕಿಂತಲೂ ಮುಖ್ಯವಾಗಿ ಸಿಂಧ್ಯನ ಈ ಸೇನೆಯನ್ನು ನಮ್ಮ ಸರದಾರರಿಗೆ ವಿಭಾಗಿಸಿ ಕೊಟ್ಟು ಕಠಿಣ ಶಾಸನವನ್ನು ಜಾರಿಗೆ ತನ್ನಿ.' 'ಆಗಲಿ, ಬಾಯಿಸಾಹೇಬ್, ಎಲ್ಲವೂ ಹಾಗೆಯೇ ನಡೆಯುವುದು. ಈಗಲೂ ಕೂಡ ಮುಖ್ಯವಾದ ಕಾರ್ಯಗಳು ನಡೆಯುತ್ತಿವೆ. ಧರ್ಮದ ಆಧಾರದ ಮೇಲೆಯೇ ಎಲ್ಲವೂ ನಿಂತಿರುವುದು. ಧರ್ಮವೇ ವಿಜಯಕ್ಕೆ ಮುಖ್ಯ ಕಾರಣ. ಆದುದರಿಂದ ಧರ್ಮವನ್ನು ಮಾಡುತ್ತಿರುವೆನು. ಬ್ರಾಹ್ಮಣರಿಗೆ ಔತಣವನ್ನು ಮಾಡುವುದರಿಂದ ಅವ ರಿಂದ ವಿಜಯ ದೊರಕಲೆಂದು ಆಶೀರ್ವಾದ ದೊರಕುತ್ತಿದೆ. ದೂರದೂರದಿಂದ ಬ್ರಾಹ್ಮಣರು ಭೋಜನ ಮತ್ತು ದಕ್ಷಿಣೆಗಳಿಗೆ ಧಾವಿಸಿ ಬರುತ್ತಿರುವರು. ಇವರ ಆಶೀರ್ವಾದವೇನು ಫಲವಿಲ್ಲದೆಯೇ ಹೋಗುತ್ತದೆಯೆ?'

"ನಾನು ಬ್ರಾಹ್ಮಣ ಭೋಜನ ಮಾಡಿಸ ಬೇಡಿ ಎಂದು ಹೇಳುವುದಿಲ್ಲ. ಆದರೆ ಸೇನೆಯನ್ನು ಸುವ್ಯವಸ್ಥಿಗೊಳಿಸಿ ಮತ್ತು ಮುಂದೆ ಹೋಗಿ ಆಂಗ್ಲೇಯ ಸೇನೆಯನ್ನು ಎದುರಿಸುವುದಕ್ಕೆ ಬೇಕಾದ ವ್ಯೂಹರಚನೆಗೂ ಅಷ್ಟೇ ಮಹತ್ವ ಕೊಡಿ."

"ನೀವಿದ್ದೀರಿ; ತಾತ್ಯಾ, ಬಾಂದಾವಿನ ನವಾಬ ಎಲ್ಲರೂ ಇರುವಾಗ ಆಂಗ್ಲೇ ಯರು ನಮಗೇನು ಕೆಡಕು ಮಾಡಲು ಸಾಧ್ಯ?"

"ಆಂಗ್ಲೇಯರು ಅತ್ಯಂತ ಚತುರರು ಮತ್ತು ಕಾರ್ಯವಾಸಿಗಳು. ನೀವು ನಾಟ್ಯರಂಗದಲ್ಲಿ ಕಳೆಯುವ ವೇಳೆಯನ್ನು ಅವರು ತಮ್ಮ ಯೋಜನೆಗಳನ್ನು ಸುಪ್ರ ಬಂಧ ಗೊಳಿಸುವುವರಲ್ಲಿ ಕಳೆಯುತ್ತಾರೆ."

"ನಮ್ಮ ಯೋಜನೆಗಳು ಸಿದ್ಧವಾಗಿಯೇ ಇವೆ. ಮತ್ತೇನುಮಾಡಬೇಕಾಗಿದೆ? ಒಂದು ಮಾತು ಬಾಕಿ ಇದ್ದಿತು. ಅದೂ ಮುಗಿಯಿತು. ಜನರು ಮತ್ತು ಸೈನಿಕರು ರಾಜನ ನಾಯಕತ್ವವಲ್ಲದೆ ಮತ್ತಾವುದನ್ನೂ ಒಪ್ಪುವುದಿಲ್ಲ. ಆದುದರಿಂದ ಪೇಶ್ವೆಯ ಪಟ್ಟವನ್ನೂ ಸ್ವೀಕಾರ ಮಾಡಿದ್ದೇನೆ. ಇಲ್ಲದಿದ್ದರೆ ಜನರು ನನ್ನನ್ನು ಸಾಧಾರಣ ವ್ಯಕ್ತಿಯೆಂದು ಭಾವಿಸಿ ನನ್ನ ನಾಯಕತ್ವವನ್ನು ಅಂಗೀಕರಿಸುವುದೇ ಇಲ್ಲ."

"ನನಗೆ ನಿಮ್ಮಲ್ಲಿ ಈ ಪರಿವರ್ತನೆಯನ್ನು ನೋಡಿ ಆಶ್ಚರ್ಯವಾಗುತ್ತಿದೆ."

"ಎಂತಹ ಪರಿವರ್ತನೆ?"

"ಭಂಗಿ, ನಾಟ್ಯರಂಗ ಮತ್ತು ಹಗಲು ಹೊತ್ತಿನಲ್ಲಿಯೇ ದೀರ್ಘನಿದ್ದೆ."

"ಪೇಶ್ವೆಯ ಪದವಿಯನ್ನು ಸ್ವೀಕಾರ ಮಾಡಿದ ಮೇಲೆ ಈ ಉತ್ಸವ ದರ್ಬಾರು ಗಳೆಲ್ಲಾ ಅನಿವಾರ್ಯವಲ್ಲವೆ? ಇಲ್ಲದಿದ್ದರೆ ಇವನೆಂತಹ ರಾಜ? ಎಂತಹ ಆಮೋದ ಗಳೂ ಇಲ್ಲದೆ ಸಿಂಹಾಸನದಮೇಲೆ ಕುಳಿತು ಅರಮನೆಗೆ ಹೋಗಿ ಸೇರಿಕೊಂಡ ಎನ್ನು ತ್ತಾರೆ. ಇಲ್ಲಿನ ಸರದಾರರು ನೃತ್ಯಗಾನಗಳ ರಸಿಕರು, ಅವರ ಮನಸ್ಸಂತೋಷ ಪಡಿ

ಸುವುದು ಅವಶ್ಯಕವಾಗಿದ್ದಿತು. ಆದುದರಿಂದ ಮಾಡಲೇ ಬೇಕಾಯಿತು. ಅವರ ಸಹಾನುಭೂತಿಯಿಲ್ಲವೆ ಕೆಲಸ ನಡೆಯುವುದಿಲ್ಲ."

"ಇವೆಲ್ಲವೂ ಇನ್ನೆಷ್ಟು ದಿನ ನಡೆಯುವುದು?"

"ಆಗಿಯೇ ಹೋಯಿತು. ಇನ್ನು ಸ್ವಲ್ಪವೇ ದಿನ. ಆದರೆ ಬ್ರಾಹ್ಮಣ ಭೋಜನ, ದಾನಗಳು ನಿರಂತರವಾಗಿರುವುವು. ದಾನಮಾಡಿ ಪಡೆದ ಆಶೀರ್ವಾದದಿಂದ ಸ್ಥಾಪನೆಯಾಗಲಿರುವ ಸ್ವರಾಜ್ಯವು ಅಕ್ಷಯವಾಗಿರುವುದು. ಛತ್ರಪತಿ ಶಿವಾಜಿಯೂ ಕೂಡ ಕರ್ಮಕಾಂಡವನ್ನು ಬಹಳವಾಗಿ ಆದರಿಸುತ್ತಿದ್ದರು ಎಂದು ನಿಮಗೂ ತಿಳಿದಿದೆ. ನಿಮ್ಮೊಡನೆ ಧರ್ಮದ ವಿಷಯವಾಗಿ ತರ್ಕಮಾಡಲು ಯೋಗ್ಯತೆ ನನಗೆಲ್ಲಿದೆ?"

"ಧರ್ಮದ ಗತಿಯನ್ನು ಮಹಾತ್ಮರೇ ಬಲ್ಲರು. ಬ್ರಾಹ್ಮಣ ಭೋಜನ ದಾನ ಧರ್ಮಗಳ ಜೊತೆಗೆ ಒಡನೆಯೆ ಸೇನೆಯನ್ನೂ ಸುವ್ಯವಸ್ಥಿಗೊಳಿಸಿ ಎಂದು ಹೇಳಬಲ್ಲೆ. ಅವರಿಗೆ ಕೆಲಸ ಕಾರ್ಯಗಳನ್ನು ಕಲ್ಪಿಸಿ ಈ ಭೋಗಲಾಲಸೆಗಳನ್ನು ಸಮಾಪ್ತಿಗೊಳಿಸಿ."

## ೮೫

ರಾಣಿಯು ಎಷ್ಟು ತಿಳುವಳಿಕೆಯನ್ನು ಹೇಳಿದರೂ ರಾವ್‌ಸಾಹೇಬನು ಕೇಳಲಿಲ್ಲ. ಭಂಗಿ ಮತ್ತು ನಾಟ್ಯರಂಗಗಳ ಅದೇ ಕಾರ್ಯಕ್ರಮವು ಜಾರಿಯಲ್ಲಿದ್ದಿತು. ಲಡ್ಡು ಮತ್ತು ಶ್ರೀಖಂಡಗಳಿಗೆ ಹೇರಳವಾಗಿ ಸಕ್ಕರೆಯು ಖರ್ಚಾಗಿ ಸಿಪಾಯಿಗಳಿಗೆ ಭಂಗಿಗೆ ಸಕ್ಕರೆ ಸಿಗುವುದು ದುರ್ಲಭವಾಯಿತು. ಶ್ರೀಖಂಡಿಗೋಸ್ಕರ ಮೊಸರಿನ ಬೆಲೆಯು ಹೆಚ್ಚಿ ಮಜ್ಜಿಗೆಯು ಸಿಗುವುದೂ ಕಷ್ಟವಾಯಿತು.

ಬ್ರಾಹ್ಮಣ ಭೋಜನ ಮತ್ತು ದಾನ ಧರ್ಮಗಳ ಮರೆಯಲ್ಲಿ ಲೆಖ್ಖವಿಲ್ಲದಷ್ಟು ಭಿಕ್ಷಾಟನೆ ಹೆಚ್ಚಿತು. ಇದಕ್ಕೆ ಯಾವ ಪ್ರತಿಬಂಧವೂ ಇರದೆ ಅನೇಕ ಸಿಪಾಯಿಗಳೂ ಕೂಡ ಈ ಬಿಟ್ಟಿ ಊಟ ಉಪಚಾರಗಳ ಸುಖಜೀವನದಲ್ಲಿ ನಿರತರಾದರು.

ರಾಣಿ ಲಕ್ಷ್ಮೀಬಾಯಿಯು ಝಾನ್ಸಿಯ ಕಿಲ್ಲೆಯು ಶತ್ರುಗಳಿಂದ ಸುತ್ತುವರಿಯಲ್ಪಟ್ಟಾಗಲೂ ಕೂಡ ತಾನು ಸ್ವತಂತ್ರಳಿದ್ದಳೆಂದೂ, ಸ್ವಾತಂತ್ರ್ಯದಲ್ಲಿರುವ ಗವಾಲಿಯರಿನ ಕಿಲ್ಲೆಯಲ್ಲಿ ತಾನು ಕೇವಲ ಖೈದಿಯಂತಿರುವುದನ್ನು ಮನಗೊಂಡಳು.

ರಾಣಿಯು ಯಾವ ಸ್ಥಳದಲ್ಲಿದ್ದರೂ ಆ ಸ್ಥಳದ ನಾಲ್ಕು ಕಡೆಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಿ ನೋಡುವುದು ಅವಳ ಸ್ವಭಾವವಾಗಿದ್ದಿತು. ಈ ಸೂಕ್ಷ್ಮ ಪರಿಚಯದಿಂದ ಯುದ್ಧಕ್ಕೆ ಬೇಕಾದ ಏರ್ಪಾಡು, ಸೈನ್ಯರಚನೆ ಮುಂತಾದುವನ್ನು ಮಾಡುವುದಕ್ಕೆ ಬಹಳ ಅನುಕೂಲವಾಗುತ್ತಿದ್ದಿತು. ಅವಳ ರಣನೀತಿಯಲ್ಲಿ ಇದಕ್ಕೆ ಹೆಚ್ಚು ಪ್ರಾಮುಖ್ಯತೆಯಿದ್ದಿತು.

ಗವಾಲಿಯರಿನ ಕೋಟೆ ಮತ್ತು ಅದಕ್ಕೆ ಪಶ್ಚಿಮ ದಕ್ಷಿಣದಲ್ಲಿದ್ದ ಬೆಟ್ಟಗಳು ಗವಾಲಿಯರಿನ ಬಡಾವಣೆಗಳಿಗೂ, ನಗರಕ್ಕೂ ರಕ್ಷಣೆ ಕೊಡುತ್ತವೆಯೆಂದು ಅವಳಿಗೆ ವಿದಿತವಾಯಿತು ಪೂರ್ವಕ್ಕೆ ಇದ್ದ ಬೆಟ್ಟಗುಡ್ಡಗಳ ಶ್ರೇಣಿಯು ಲಷ್ಕರಿನಿಂದ ಸುಮಾರು ಎರಡು ಮೈಲಿ ದೂರವಿದ್ದಿತು—ಇದೂ ರಕ್ಷಣೆಗೆ ಸಾಧನವಾಗಿದ್ದಿತು. ಆದರೆ ಈಶಾನ್ಯ ದಿಕ್ಕಿನಲ್ಲಿದ್ದ ಮುರಾರಿನ ಕಡೆ ಯಾವ ರಕ್ಷಣೆಯೂ ಇರಲಿಲ್ಲ. ಅದನ್ನು ಮುಚ್ಚುವಂತೆ ಸೋನಾರೇಖೆಯೆಂಬ ಹೆಸರಿನ ಒಂದು ನಾಲೆಯು ಲಷ್ಕರಿನ ಮೂರು ಕಡೆಗಳನ್ನೂ ಬಳಸಿ ಸೀಳಿಕೊಂಡು ಮುರಾರಿನ ಕಡೆ ಹರಿಯುತ್ತಿದ್ದಿತು. ಆದರೆ ಇದೊಂದು ಮಜಬೂತಾದ ರಕ್ಷಣೆಯೇನಾಗಿರಲಿಲ್ಲ. ಅದೊಂದು ಅಡಚಣೆಯೆಂದೇ ಭಾವಿಸಬಹುದಾಗಿದ್ದಿತು. ಇವನ್ನು ಹೊರತಾಗಿ ದಕ್ಷಿಣದಲ್ಲಿ ಒಂದು ಬೆಟ್ಟಗುಡ್ಡಗಳ ಶ್ರೇಣಿಯಿದೆ. ಅದರ ಮುಂಭಾಗದಲ್ಲಿ ಒಂದು ದುರ್ಗಿಯ ಮಂದಿರವಿದ್ದಿತು. ಈ ಪರ್ವತಶ್ರೇಣಿಯು ಶತ್ರುಗಳಿಗೆ ಲಾಭದಾಯಕವಾಗಿದ್ದಿರಬಹುದು. ಅಲ್ಲದೆ ಪೂರ್ವದಲ್ಲಿರುವ ಬೆಟ್ಟಗಳು ಶತ್ರುಗಳಿಗೆ ತಮ್ಮ ತೋಪುಗಳನ್ನಿರಿಸಲು ದೊರಕಿದರೆ ನಗರದ ಲಷ್ಕರ್ ಮುಂತಾದ ಬಡಾವಣೆಗಳೂ, ಗವಾಲಿಯರ್ ಅಂತೆಯೇ ಮುರಾರಿನ ವಸತಿಗಳೂ ತೊಂದರೆಯಲ್ಲಿ ಸಿಕ್ಕಿಬೀಳುವುವು. ಒಂದು ವೇಳೆ ಪೇಶ್ವೆಯ ಸೈನ್ಯವು ಎಲ್ಲಾ ದಿಕ್ಕಿನಿಂದಲೂ ಮುನ್ನುಗ್ಗಿ ಬರುತ್ತಿರುವ ಆಂಗ್ಲೇಯ ಸೇನೆಯನ್ನು ಮುಂಬಂದು ಎದುರಿಸದಿದ್ದರೆ ಕಡೆಯ ಪಕ್ಷ ತಮ್ಮ ತೋಪುಗಳನ್ನು ಈ ಬೆಟ್ಟಗಳ ಮೇಲೆ ಸರಿಯಾದ ಸ್ಥಾನಗಳಲ್ಲಿ ನಿಲ್ಲಿಸಿ ಹಾರಿಸಬಹುದೆಂದು ರಾಣಿಯ ಇಚ್ಛೆಯಿದ್ದಿತು. ಆದರೆ ಆ ಭಂಗಿಯ ಅಮಲಿನಲ್ಲಿಯೂ, ಶ್ರೀಖಂಡದ ಹೊಳೆಯಲ್ಲಿಯೂ ಅವಳ ಮಾತನ್ನು ಕೇಳುವವರಾರು ?

ಈ ನಿರೀಕ್ಷಣೆಯ ಅವಸರದಲ್ಲಿ ಅವಳಿಗೆ ಒಬ್ಬ ಗಂಗಾದಾಸ್ ಎಂಬ ಪೂಜ್ಯ ವೃದ್ಧನು ದೊರಕಿದನು. ಇವನ ಕುಟೀರವು ಕಿಲ್ಲೆಯ ನೈರುತ್ಯದಕಡೆ ಸೋನಾರೇಖಾ ನಾಲೆಯ ಉತ್ತರಕ್ಕೆ ಸ್ವಲ್ಪ ದೂರದಲ್ಲಿದ್ದಿತು. ಬಾಬಾ ಗಂಗಾದಾಸನ ಮನೆಯು ಒಂದು ಹುಲ್ಲಿನ ಜೋಪಡಿ. ಈ ಸ್ಥಳಗಳನ್ನು ಪರೀಕ್ಷಿಸುತ್ತಿರುವಾಗ ರಾಣಿಗೆ ಬಹಳ ನೀರಡಿಕೆಯಾಯಿತು. ಗಂಗಾದಾಸನು ಅವಳಿಗೆ ನೀರು ತಂದು ಕೊಟ್ಟನು. ಆಗ ಅವನಿಗೆ ಈಕೆಯು ಝಾನ್ಸಿಯ ರಾಣಿಯೆಂಬುದು ತಿಳಿಯಿತು. ರಾಣಿಯು ಅವನ ಚಕ್ಷುಗಳಲ್ಲಿ ಶಾಂತಿಯ ಅದ್ಭುತ ಆಕರ್ಷಣೆಯನ್ನು ಕಂಡಳು. ಪೇಶ್ವೆಯು ತನ್ನ ಬುದ್ಧಿವಾದವನ್ನು ಆಲಿಸದ ದಿನದಿಂದ ಅವಳ ಮನಸ್ಸು ಬಹಳ ಖಿನ್ನವಾಗಿದ್ದಿತು. ಮೇಲಿಂದ ಮೇಲೆ ಸ್ಥಳ ಪರೀಕ್ಷೆಮಾಡಿ ಯುದ್ಧದ ನಕ್ಷೆಗಳನ್ನು ರಚಿಸುತ್ತಿದ್ದಳು. ತನ್ನ ಸಿಪಾಯಿಗಳಿಗೆ ಕವಾತು ತರಪೇತುಗಳನ್ನು ಕೊಡುತ್ತಿದ್ದಳು. ಕಾಲಕ್ಕೆ ಸರಿಯಾಗಿ ಪೂಜೆ ಪುರಸ್ಕಾರಗಳನ್ನು ಮಾಡುತ್ತಿದ್ದಳು. ಆದರೆ ಮನಸ್ಸಿನ ಉದಾಸೀನತೆಯು

ಕಳೆಯುತ್ತಿರಲಿಲ್ಲ.

ಇನ್ನೂ ಸಂಜೆ ಮೂಡುವುದರಲ್ಲಿದ್ದು ಬಿಸಿಗಾಳಿಯು ಸುಯ್ಯನೆ ಬೀಸುತ್ತಿದ್ದಿತು. ರಾಣಿಯು ಮುಂದರಿಯೊಡನೆ ಸ್ತ್ರೀ ವೇಷದಲ್ಲಿ ಬಾಬಾ ಗಂಗಾದಾಸನ ಕುಟೀರಕ್ಕೆ ಬಂದಳು. ಕುದುರೆಗಳನ್ನು ಒಂದು ಮರಕ್ಕೆ ಕಟ್ಟಿ ಆತನಿಗೆ ಬಂದು ನಮಸ್ಕರಿಸಿದಳು. ಆತನು ಉಪಚರಿಸಿ ಕುಡಿಯಲು ತಣ್ಣೀರನ್ನು ಕೊಟ್ಟನು.

ರಾಣಿ—ನಾನು ನಿಮ್ಮಲ್ಲಿ ಒಂದು ವಿಚಾರವನ್ನು ಕೇಳಲು ಬಂದಿರುವೆನು. ನನ್ನ ಮನವು ಅಶಾಂತಿಯಿಂದ ಕೂಡಿದೆ. ನಿಮ್ಮ ಉತ್ತರದಿಂದ ಶಾಂತಿಯು ಲಭಿಸುವುದೆಂದು ಆಶೆಯಿದೆ.

ಬಾಬಾ—ನನಗೆ ರಾಮಭಜನೆಯ ಹೊರತಾಗಿ ಮತ್ತೇನೂ ತಿಳಿಯದು.

ರಾಣಿ—ನೀವು ಬ್ರಾಹ್ಮಣ ಭೋಜನಕ್ಕೆ ಹೋಗಿದ್ದಿರಾ?

ಬಾಬಾ—ಇಲ್ಲ, ನನಗೆ ಇಲ್ಲಿಯೇ ಸಾಕಾದಷ್ಟು ಆಹಾರ ದೊರೆಯುವುದು.

ರಾಣಿ—ಆದುದರಿಂದಲೇ ನಿಮ್ಮ ಬಳಿಗೆ ಬಂದೆ. ನೀವು ನಿರಾಕರಿಸಲಾಗದು. ಉತ್ತರಿಸಲೇ ಬೇಕು. ನೀವು ನಿಮ್ಮ ಮನಸ್ಸಿಗೆ ಮಾತ್ರ ಶಾಂತಿ ದೊರಕಿಸಿಕೊಂಡರೇನಾದ ಹಾಗಾಯಿತು? ನಮಗೆ ಶಾಂತಿಯನ್ನು ಗಳಿಸಿಕೊಡಿ.

ಬಾಬಾ—ಮಗಳೇ ಕೇಳು. ತಿಳಿದಿದ್ದರೆ ಹೇಳುತ್ತೇನೆ.

ರಾಣಿ—ಇಲ್ಲಿ ಇನ್ನು ಕೆಲವು ದಿನಗಳಲ್ಲಿ ಯುದ್ಧವಾಗುವ ಸಂಭವವಿದೆ. ನಿಮ್ಮ ಕುಟೀರವು ಸುರಕ್ಷಿತ ಸ್ಥಾನದಲ್ಲಿಲ್ಲ. ಆದುದರಿಂದ ಯಾವುದಾದರೂ ಸರಿಯಾದ ಸ್ಥಾನಕ್ಕೆ ಹೋಗಿ.

ಬಾಬಾ—ಇದು ಸುರಕ್ಷಿತವಾಗಿಯೇ ಇದೆ. ನೀನು ಕೇಳಬೇಕೆಂಬ ಪ್ರಶ್ನೆಯನ್ನು ಕೇಳು.

ರಾಣಿ—ಈ ದೇಶಕ್ಕೆ ಸ್ವರಾಜ್ಯವು ಹೇಗೆ ಪ್ರಾಪ್ತಿಯಾಗುವುದು?

ಬಾಬಾ—ಈ ಪ್ರಶ್ನೆಗೆ ಉತ್ತರವನ್ನು ರಾಜರುಗಳು ಕೊಡಬಲ್ಲರು.

ರಾಣಿ—ಅವರಿಂದ ಉತ್ತರ ಕೊಡಲಾಗುವುದಿಲ್ಲ. ಆದುದರಿಂದಲೇ ನಿಮ್ಮನ್ನು ಕೇಳಲು ಬಂದೆ.

ಬಾಬಾ—ಹೇಗೆ ಪ್ರಾಪ್ತವಾಗುತ್ತಾ ಬರುತ್ತಿದೆಯೋ ಹಾಗೆಯೇ ಪ್ರಾಪ್ತವಾಗುವುದು.

ರಾಣಿ—ಹೇಗೆ, ಬಾಬಾಜಿ?

ಬಾಬಾ—ಸೇವೆ, ತಪಸ್ಸು ಬಲಿದಾನಗಳಿಂದ.

ರಾಣಿ—ನಾವುಗಳು ಹೇಗೆ ಸ್ವರಾಜ್ಯವನ್ನು ಸ್ಥಾಪಿಸುವುದು ಸಾಧ್ಯ?

ಬಾಬಾ—ಹಳ್ಳವು ಹೇಗೆ ತುಂಬುತ್ತದೆ? ತಳಹದಿಯು ಹೇಗೆ ಮೇಲೇರುತ್ತದೆ?

ಒಂದು ಕಲ್ಲು, ಅದರ ಮೇಲೆ ಮತ್ತೊಂದು, ನಂತರ ಮಗದೊಂದು ಇದೇ ಪ್ರಕಾರ. ನಂತರ ಅದರ ಮೇಲೆ ಕಟ್ಟಡವು ನಿಲ್ಲುತ್ತದೆ. ತಳಹದಿಯ ಕಲ್ಲು ಕಟ್ಟಡವನ್ನು ನೋಡಲಾಗುವುದಿಲ್ಲ. ಆದರೆ ಕಟ್ಟಡವು ತಳಹದಿಯ ಭರವಸೆಯ ಮೇಲೆ ನಿಂತಿದೆ. ಆ ಹಳ್ಳವಾಗಲೀ, ತಳಪಾಯವಾಗಲೀ ಒಂದು ಕಲ್ಲಿನಿಂದ ಸಂಪೂರ್ಣವಾಗಲಿಲ್ಲ, ಒಂದು ದಿನದಲ್ಲಿ ಕಟ್ಟಿ ಮುಗಿಯಲಿಲ್ಲ. ಹಾಗೆಯೇ ಅನವರತ ಪ್ರಯತ್ನ, ನಿರಂತರ ಬಲಿದಾನ ಅವಶ್ಯಕ.

ರಾಣಿ—ನಮ್ಮ ಜೀವನಕಾಲದಲ್ಲಿ ಸ್ವರಾಜ್ಯ ಸ್ಥಾಪನೆಯು ಆಗಬಹುದೆ?

ಬಾಬಾ—ಈ ಮೋಹವೇತಕ್ಕೆ? ನೀನು ಪ್ರಾರಂಭಿಸಿದ ಕಾರ್ಯವನ್ನು ಮುಂದುವರಿಸಿರುವೆ. ಬೇರೆಯವರು ಬರುತ್ತಾರೆ. ಅವರೂ ಇವನನ್ನು ಮುಂದುವರಿಸುತ್ತಾ ಹೋಗುತ್ತಾರೆ. ಈಗ ತೊಂದರೆಯಿದೆ. ಸ್ವರಾಜ್ಯ ಸ್ಥಾಪನೆಯ ಆದರ್ಶವಾದಿಗಳು ತಮ್ಮ ಚಿಕ್ಕ ಪುಟ್ಟ ರಾಜ್ಯಗಳನ್ನು ಕಟ್ಟಿ ಕುಳಿತುಬಿಡುತ್ತಾರೆ. ಜನರಿಗೆ ಮತ್ತು ಅವರಿಗೆ ಇರತಕ್ಕಂತಹ ಅಂತರವು ಕಡಿಮೆಯಾಗದು. ಜನರು ತ್ರಾಸಗೊಂಡಿದ್ದಾರೆ. ಯಾವಾಗ ಜನತೆಯ ಪೂರ್ಣ ಸಹಕಾರವು ರಾಜ್ಯಕ್ಕಾಗಿ ದೊರಕುತ್ತದೋ, ಮತ್ತು ರಾಜನು ಭೋಗವಿಲಾಸೆಯ ದಾಸತ್ವವನ್ನು ತ್ಯಜಿಸಿ ಪ್ರಜೆಗಳ ಸೇವಕನಾಗುವನೋ ಆಗ ಸ್ವರಾಜ್ಯದ ತಳಹದಿಯು ಹಾಕಲ್ಪಟ್ಟು ಭವನವನ್ನು ಕಟ್ಟಲು ಪ್ರಾರಂಭವಾಗಿದೆಯೆಂದು ತಿಳಿದುಕೊ. ಶಾಶ್ವತವಾದ ಧರ್ಮದ ರೂಪವೇ ಕೆಟ್ಟುಹೋಗಿದೆ. ಅದನ್ನು ಸುಧಾರಿಸಿದ ವಿನಹ ಭವನವು ನಿಲ್ಲುವುದಿಲ್ಲ.

ರಾಣಿ—ನಾವು ಪ್ರಯತ್ನ ಮಾಡುತ್ತಿರೋಣವೆ ?

ಬಾಬಾ—ಅವಶ್ಯ, ನೀನು ಭಗವಾನ್ ಶ್ರೀಕೃಷ್ಣನ ಮತ್ತು ಗೀತೆಯ ಪರಮ ಭಕ್ತಳು.

ರಾಣಿ—ನಿಮಗೆ ಹೇಗೆ ಗೊತ್ತು ?

ವೃದ್ಧನು ನಸುನಕ್ಕು "ಎಲ್ಲರೂ ಹೇಳುತ್ತಾರೆ" ಎಂದನು.

ರಾಣಿ—ನಾನು ಗೀತಾ ಪಠನವನ್ನೇನೋ ಮಾಡುತ್ತೇನೆ. ನೋಡಿದರೆ ನೀವು ಮಹಾತ್ಮರೆಂದೇ ವ್ಯಕ್ತವಾಗುತ್ತದೆ.

ಬಾಬಾ—ಗೃಹಸ್ಥನಿಗಿಂತ ಮಿಗಿಲಾದ ಸಾಧುವಿಲ್ಲ. ನನ್ನಿಂದ ಇನ್ನೇನೂ ಸಾಧ್ಯವಾಗಲಿಲ್ಲ. ಆದುದರಿಂದ ಈ ಜೋಪಡಿಯನ್ನು ಹಾಕಿ ಕುಳಿತೆ.

ಸೂರ್ಯಾಸ್ತಮಾನವಾಗುವ ವೇಳೆಯಾಯಿತು. ರಾಣಿಗೆ ಸಂಜೆಯ ಪೂಜೆ ಧ್ಯಾನಗಳ ನೆನಪು ಬಂದು "ಬಾಬಾಜೀ, ಮತ್ತೆಯಾವಾಗಲಾದರೂ ದರ್ಶನವನ್ನು ತೆಗೆದುಕೊಳ್ಳುತ್ತೇನೆ. ನಿಮ್ಮ ಇಷ್ಟು ಮಾತುಗಳಿಂದ ನನ್ನ ಚಿತ್ತಕ್ಕೆ ಶಾಂತಿಯುಂಟಾಯಿತು." ಎಂದು ನಮಸ್ಕರಿಸಿ ಹೊರಟಳು.

ರಸ್ತೆಯಲ್ಲಿ ಮುಂದರಿಯು "ತಾವೂ ಇದೇ ಮಾತುಗಳನ್ನು ಹೇಳುತ್ತಿರುತ್ತೀರಿ" ಎಂದಳು.

ರಾಣಿಯು "ಆದರೆ ಬಾಬಾವಿನ ಮಟ್ಟಕ್ಕೇರುವುದಕ್ಕೆ ಬಹಳಕಾಲ ಬೇಕು" ಎಂದು ಉತ್ತರವಿತ್ತಳು.

## ೮೭

ರಾವ್‌ಸಾಹೇಬ್ ಪೇಶ್ವೆಯ ಬ್ರಾಹ್ಮಣ ಭೋಜನ ಮುಂತಾದ ಕಟ್ಟಲೆಗಳು ನಡೆಯುತ್ತಲೇ ಇದ್ದವು. ಇತ್ತ ಜನರಲ್ ರೋಜನ ಧ್ಯೇಯ ಸಾಧನೆಗಳು ಪ್ರಬಲವಾದುವು.

ಆತನು ತನ್ನ ಸೈನ್ಯವನ್ನು ಅನೇಕ ಭಾಗಗಳನ್ನಾಗಿ ವಿಂಗಡಿಸಿ ಅನುಭವಸ್ಥರಾದ ಅಧಿಕಾರಿಗಳ ಮೇಲ್ವಿಚಾರಣೆಯಲ್ಲಿಟ್ಟನು. ಬ್ರಿಗೇಡಿಯರ್ ಸ್ಮಿತ್ತನನ್ನು ಗವಾಲಿಯರಿನ ಪೂರ್ವಕ್ಕೆ ಐದು ಮೈಲಿ ದೂರದಲ್ಲಿರುವ ಕೋಟಾವಿನ ಧರ್ಮಶಾಲೆಯ ಬಳಿ ಕಳುಹಿಸಿದನು. ಮತ್ತೊಂದು ಭಾಗವನ್ನು ಆಗ್ರಾ—ಗವಾಲಿಯರಿನ ರಸ್ತೆಯಲ್ಲಿರುವಂತೆ ಆಜ್ಞೆಮಾಡಿದನು. ತಾನೊಂದು ಪ್ರಬಲ ದಳವನ್ನು ತೆಗೆದುಕೊಂಡು ಕಾಲ್ಪಿಯಿಂದ ಗವಾಲಿಯರಿನ ಕಡೆ ಜೂನ್ ೬ ನೇ ತಾರೀಖು ಹೊರಟನು. ದಾರಿಯಲ್ಲಿ ಬ್ರಿಗೇಡಿಯರ್ ಸ್ಟುವರ್ಟನು ಸಸೈನ್ಯನಾಗಿ ಅವನನ್ನು ಸಂಧಿಸಿದನು. ಜೂನ್ ೧೬ ನೇ ತಾರೀಖು ಜನರಲ್ ರೋಜನು ಹಿಂದೆ ಜಯಾಜಿರಾಯನು ಸೋಲನ್ನು ಪಡೆದ ಬಹದ್ದೂರ್ ಪೂರ್ ಎಂಬ ಗ್ರಾಮವನ್ನು ಸೇರಿದನು. ಅವನೊಡನೆ ಮಧ್ಯ ಭಾರತ ಮತ್ತು ಗವಾಲಿಯರಿನ ಪೊಲಿಟಿಕಲ್ ಏಜೆಂಟನಿದ್ದನು. ಆತನು ಆ ಸಮಯದಲ್ಲಿ ಒಂದು ಯುಕ್ತಿಯನ್ನು ಹೂಡಿ ಆಗ್ರಾವಿನಿಂದ ಜಯಾಜಿರಾವ್ ಮತ್ತು ದಿನಕರರಾಯರನ್ನು ಬರಮಾಡಿಕೊಂಡನು.

ಮುರಾರಿನಲ್ಲಿ ಪೇಶ್ವೆಯ ಸೈನ್ಯವು ಹೆಚ್ಚಾಗಿದ್ದು ಇತರ ಸ್ಥಾನಗಳಲ್ಲಿ ಅಸ್ತವ್ಯಸ್ತವಾಗಿ ಹರಡಿತ್ತು. ಅವರಲ್ಲಿ ಅಧಿಕ ಸಂಖ್ಯೆ ಸಿಂಧ್ಯನ ಸೇನೆಯ ನೌಕರರೇ ಆಗಿದ್ದರು. ಹತ್ತುಹನ್ನೆರಡು ದಿವಸಗಳನ್ನು ವ್ಯರ್ಥವಾಗಿ ಕಳೆಯದೇ ಈ ಸೈನಿಕರನ್ನು ಪಂಗಡಗಳಾಗಿ ವಿಭಾಗಿಸಿ ತಮ್ಮ ಕಡೆಯ ಯೋಗ್ಯ ದಳಪತಿಗಳ ಅಧೀನದಲ್ಲಿಟ್ಟು ಮೊದಲಿನಿಂದಲೇ ತಕ್ಕ ಶಾಸನವನ್ನು ಮಾಡಿದ್ದರೇ ಪರಿಸ್ಥಿತಿಯು ಇಷ್ಟು ಹತೋಟಿಗೆಡುತ್ತಿರಲಿಲ್ಲ.

ಜನರಲ್ ರೋಜನು ಎರಡು ಗಂಟೆಯ ಘೋರಯುದ್ಧದಲ್ಲಿ ಪೇಶ್ವೆಯ ಮುರಾರಿನಲ್ಲಿದ್ದ ಸೇನೆಯನ್ನು ಸೋಲಿಸಿ ಮುರಾರನ್ನು ತನ್ನ ಕೈವಶಮಾಡಿಕೊಂಡನು.

ಪೇಶ್ವೆಯ ಈ ಪರಾಜಿತ ಸೈನ್ಯವು ಹಿಮ್ಮೆಟ್ಟಿ ಗವಾಲಿಯರಿಗೆ ಹಿಂತಿರುಗಿತು. ಆಗ ರಾವ್ ಸಾಹೇಬನ ಅಮಲು ಇಳಿಯಿತು.

ರೋಜನು ಜಿಯಾಜಿರಾಯನ ಮೂಲಕ ಗವಾಲಿಯರಿನ ಪಡೆಗೆ ಸೇರಿದ ಪೇಶ್ವೆಯ ಆ ಸೈನಿಕರಿಗೆ ಕ್ಷಮಾಭಿಕ್ಷೆಯನ್ನು ಕೊಡಿಸಿದನು ಮತ್ತು ಲಿಖಿತ ಘೋಷಣೆಯ ಮೂಲಕ ಆಂಗ್ಲೇಯರು ಗವಾಲಿಯರಿನ ರಾಜನಿಗೆ ಪುನಃ ಸಿಂಹಾಸನವನ್ನು ಕೊಡಿಸುವುದಕ್ಕಾಗಿಯೇ ಯುದ್ಧಮಾಡಲು ಬಂದಿದ್ದಾರೆ ಎಂದು ಪ್ರಕಟಿಸಿದನು. ಸೈನಿಕರು ಮತ್ತು ಸವಾರರಲ್ಲಿ ಇದರಿಂದ ವೈಮನಸ್ಯ ಉಂಟಾಯಿತು. ಅವರ ಮನವಿಳಿದು ಉತ್ಸವದ ಫಲವು ವ್ಯರ್ಥವಾಯಿತು.

ಪೇಶ್ವೆಯೂ ಮತ್ತು ಬಾಂದಾವಿನ ನವಾಬನೂ ಕಿಂಕರ್ತವ್ಯತಾ ಮೂಢರಾದರು. ಏನು ಮಾಡಬೇಕೆಂಬುದೇ ತೋಚುತ್ತಿರಲಿಲ್ಲ. ಆಗ ರಾಣಿಯ ನೆನಪು ಬಂದಿತು. ಆದರೆ ಅವಳ ಬಳಿಗೆ ಹೋಗಲು ಧೈರ್ಯವಿರಲಿಲ್ಲ. ಮುಖವನ್ನಾದರೂ ಹೇಗೆ ತೋರಿಸುವುದು ?

ತಾತ್ಯಾನನ್ನು ಕಳುಹಿಸಿದರು.

ತಾತ್ಯ ತನ್ನಲ್ಲಿದ್ದ ಧೈರ್ಯವನ್ನೆಲ್ಲಾ ಒಂದುಗೂಡಿಸಿ ಅವಳ ಬಳಿಗೆ ಹೋದನು. ಆ ಸಮಯದಲ್ಲಿ ಅವಳೊಡನೆ ಜೂಹಿ ಮತ್ತು ಮುಂದರಿಯು ಇದ್ದರು. ತಾತ್ಯಾ ನಮಸ್ಕರಿಸಿ ಕೈಜೋಡಿಸಿಕೊಂಡು ನಿಂತನು.

ರಾಣಿಯು "ಏನು ಸರದಾರರೇ ? ಈ ತೋಪುಗಳು ಎಲ್ಲಿ ಹಾರುತ್ತಿವೆ ?" ಎಂದು ವ್ಯಂಗ್ಯವಾಗಿ ಕೇಳಿದಳು.

ತಾತ್ಯಾನು ನಮ್ರತೆಯಿಂದ "ಈಗ ಕ್ಷಮೆಬೇಡುವುದಕ್ಕೆ ಕೂಡ ಸಮಯವಿಲ್ಲ, ಬಾಯಿಸಾಹೇಬ್" ಎಂದನು.

ರಾಣಿ—ಏನು ಭಂಗಿ ಸೇವಿಸುವುದಕ್ಕೂ ಸಮಯವಿಲ್ಲವೆ ? ಒಂದು ಪದವನ್ನು ಕೇಳುವುದಕ್ಕೆ ವಿರಾಮವಿಲ್ಲವೆ ?

ತಾತ್ಯಾನು "ರಕ್ಷಿಸು, ಮಹಾತಾಯಿ," ಎಂದು ಅವಳ ಪಾದಕ್ಕೆರಗಲು ಹೋದನು.

ರಾಣಿಯು ಅವನನ್ನು ಅಷ್ಟರಲ್ಲೇ ತಡೆದು ಹಿಡಿದಳು.

ಜೂಹಿ "ಸರ್ಕಾರ್, ಮನ್ನಿಸಿ ಬಿಡಿ" ಎಂದಳು.

ರಾಣಿಯು ಮುಗುಳ್ನಗೆ ನಕ್ಕು "ತಾತ್ಯಾ, ನಿನ್ನಲ್ಲಿ ನನಗೆ ಬಹಳ ದೊಡ್ಡ ಭರವಸೆಯಿದ್ದಿತು. ಈಗಲೂ ದೃಢಮನಸ್ಸಿದ್ದರೆ ಅನೇಕ ಕಾರ್ಯಗಳನ್ನು ಮಾಡಬಹುದು" ಎಂದಳು.

ತಾತ್ಯಾ—ಯಾವ ಆಜ್ಞೆಯನ್ನು ಕೊಡುತ್ತೀರೋ ಅದನ್ನು ಶಿರಸಾವಹಿಸಿ ಪಾಲಿ

ಸುತ್ತೇನೆ. ನಿಮಗೆ ಪಶ್ಚಾತ್ತಾಪ ಪಡುವ ಅವಸರಕೊಡುವುದಿಲ್ಲ.

ರಾಣಿಯು ತನ್ನ ಮೇಲುಸಿರನ್ನು ತಡೆದುಕೊಂಡು "ಬಹುಶಃ ಇದು ನನ್ನ ಕಡೆಯ ಯುದ್ಧವಾಗುವುದು. ಏನು ಮುಂದರಿ, ನಿನಗೆ ಬಾಬಾ ಗಂಗಾದಾಸರು ಹೇಳಿದಮಾತು ನೆನಪಿದೆಯೇ?" ಎಂದು ಕೇಳಿದಳು.

ಜೂಹಿಯು "ಹ್ಹಾಗೆಂದಿಗೂ ಆಗುವುದಿಲ್ಲ, ಸರ್ಕಾರ್" ಎಂದಳು.

ರಾಣಿಯು ಗಂಭೀರವಾಣಿಯಿಂದ "ಸ್ವರಾಜ್ಯಭವನದ ತಳಪಾಯವು ಒಂದೆರಡು ಕಲ್ಲುಗಳಿಂದ ಕಟ್ಟಲಾಗುವುದಿಲ್ಲ." ಎಂದು ನುಡಿದಳು.

ತಾತ್ಯಾ ಧೈರ್ಯವನ್ನು ತಂದುಕೊಡು ಕಾತರತೆಯಿಂದ ಬಾಯಿತೆರೆಯ್ಯಹೋದನು.

ರಾಣಿಯು ಮತ್ತೆ ನಸುನಕ್ಕು ತಾತ್ಯನಿಗೆ ಆಶ್ವಾಸನವಿತ್ತಳು "ಗಾಬರಿಯಾಗಬೇಡ. ಪೇಶ್ವೆಗೆ ಧೈರ್ಯದಿಂದ ಕೆಲಸಮಾಡೆಂದು ಹೇಳು. ಯಾವ ಯೋಜನೆಯನ್ನು ತಿಳಿಸುವೆನೋ ಅದರನುಸಾರವಾಗಿ ಕೆಲಸವು ನಡೆಯಲಿ. ಒಂದು ವೇಳೆ ವಿಜಯ ಪ್ರಾಪ್ತಿಯಾಗ ಬಹುದು. ಹಾಗೆ ಒಂದು ಸಮಯ ನಾವು ಗೆಲ್ಲದೇ ಹೋದರೆ ಯುದ್ಧ ಸಾಮಗ್ರಿಗಳನ್ನೂ ಮತ್ತು ಸೇನೆಯನ್ನೂ ದಕ್ಷಿಣದ ಕಡೆಗೆ ಕೊಂಡುಹೋಗಲು ತಕ್ಕ ಏರ್ಪಾಡಿರಬೇಕು. ನೀನು ಈ ಕೆಲಸದಲ್ಲಿ ಅಗ್ರಗಣ್ಯನು."

ಆಕೆಯು ತಾತ್ಯಾನಿಗೆ ಸ್ವಲ್ಪ ಹೊತ್ತಿನೊಳಗಾಗಿಯೇ ತನ್ನ ಯೋಜನೆಯನ್ನು ಸವಿಸ್ತಾರವಾಗಿ ಹೇಳಿದಳು. ಐದು ಜನ ಸರದಾರರನ್ನು ಮುಂದಿರಿಸಿದಳು.

ಗವಾಲಿಯರಿನ ಪೂರ್ವದ ದಿಶೆಯ ರಕ್ಷಣೆಯನ್ನು ತಾನೇ ವಹಿಸಿದಳು. ಅಧಿಕಾರವು ಇನ್ನೂ ಪ್ರಸರವಾಗದಿದ್ದಂತಹ ಪೂರ್ವ ದಿಕ್ಕಿನ ಬೆಟ್ಟಗುಡ್ಡಗಳ ಮೇಲೆ ತೋಪುಗಳನ್ನೂ ಅವುಗಳ ಹಿಂದೆ ಅಲ್ಲಲ್ಲೆ ಪದಾತಿ ಮತ್ತು ಸವಾರರ ಸ್ಥಾನಗಳನ್ನೂ ನಿಯುಕ್ತಮಾಡಿದಳು. ಇವೆಲ್ಲಕ್ಕೂ ಮುಂಭಾಗದಲ್ಲಿ ಮತ್ತು ಮಧ್ಯಮಧ್ಯದಲ್ಲಿ ತನ್ನ ಕೆಂಪು ವಸ್ತ್ರಧಾರಿ ಸವಾರರನ್ನೂ ಮತ್ತು ಅಕ್ಕಪಕ್ಕದ ಗುಡ್ಡಗಳ ಮೇಲೆ ತೋಪುಗಳನ್ನೂ ದಕ್ಷಿಣ ದಿಕ್ಕಿನ ವರೆಗೆ ನಿಲ್ಲಿಸಿದಳು. ಉತ್ತರದ ರಕ್ಷಣೆಯನ್ನು ತಾತ್ಯಾನಿಗಿತ್ತಳು. ಆತನು ರೋಹಿಲಖಂಡ ಮತ್ತು ಔಧಿನ ಅವಶಿಷ್ಟ ಸೇನೆಯಿಂದ ತನ್ನ ಪಡೆಯನ್ನು ರಚಿಸಿದ್ದನು. ಈ ಪಡೆಯನ್ನು ತೋಪುಗಳ ಸಮೇತ ಶೇಖರಿಸಿದ್ದನು. ಪಶ್ಚಿಮದ ರಕ್ಷಣೆಯು ರಾವ್‌ಸಾಹೇಬನದಾಯಿತು. ಇವನೊಡನೆ ಇದ್ದ ಸೈನ್ಯದಲ್ಲಿ ಸಿಂಧ್ಯನ ಸೈನಿಕರು ಅಧಿಕಾಂಶದಲ್ಲಿದ್ದರು. ನಗರದ ಒಳಗಣ ಮತ್ತು ಹೊರಗಣ ರಕ್ಷಣೆಯ ಪಾಲು ಬಾಂದಾ ನವಾಬನದಾಯಿತು. ಖಾಸ್ ಕಿಲ್ಲೆಯ ರಕ್ಷಣೆಯನ್ನು ಹೆಚ್ಚಾಗಿ ಗಣಿಸಬೇಕಾಗಲಿಲ್ಲ. ತೋಪುಗಳು, ಗೋಲಂದಾಜಿಗಳು ಮತ್ತು ಕೆಲವು ಸಿಪಾಯಿಗಳು ಹೆಚ್ಚೆಂದು ತೋರಿತು. ಏಕೆಂದರೆ ಯಾವ ಮಹತ್ವ ಕಾರಣವೂ ಇಲ್ಲದೆ ಕೋಟೆಯೊಳಗೆ ಸೇರಿಕೊಂಡು ಯುದ್ಧಮಾಡುವುದು ಮರಾಟರ ಯುದ್ಧದ ಪದ್ಧತಿಗೆ

ವಿರುದ್ಧವಾಗಿದ್ದಿತು.

ರಾಣಿಯು ತನ್ನ ಸೈನಿಕರನ್ನು ತರಪೇತು ಮಾಡಿ ಅವರಿಗೆ ಎಲ್ಲಾ ವಿಷಯಗಳನ್ನೂ ತಿಳಿಸಿದಳು.

ಜೂನ್ ೧೭ ನೇ ತಾರೀಖು ಪ್ರಾತಃಕಾಲ ಬ್ರಿಗೆಡಿಯರ್‌ಸ್ಮಿತ್ತನು ರಣ ಕಹಳೆಯನ್ನು ಮೊಳಗಿಸಿದನು. ಯುದ್ಧವು ಆರಂಭವಾಯಿತು. ಬ್ರಿಗೆಡಿಯರ್‌ಸ್ಮಿತ್ತನ ಆಕ್ರಮಣವು ಕೋಟಾ ಸರಾಯಿಸಿಂದ, ಪೂರ್ವದಿಕ್ಕಿನಲ್ಲಿ ಶಹರಿನ ಮೇಲೆ, ಲಕ್ಷ್ಮೀಬಾಯಿಯ ಸೈನ್ಯದ ಘಟ್ಟವಿದ್ದ ಕಡೆ ನಡೆಯಬೇಕಾಗಿದ್ದಿತು. ಆಂಗ್ಲೇಯ ಸೈನ್ಯವು ರಾಣಿಯ ತೋಪಿನ ಅಂತರದಲ್ಲಿ ಬಂದೊಡನೆಯೇ ರಾಣಿಯು ತನ್ನ ಗೋಲಂದಾಜಿಗಳಿಗೆ ಸಂಕೇತ ಮಾಡಿದಳು. ಗುಂಡಿನ ವರ್ಷವು ಬಿದ್ದು ಆಂಗ್ಲೇಯ ಸೈನ್ಯವು ದುರ್ಗತಿಗೀಡಾದರೂ ಹಿಮ್ಮೆಟ್ಟಲಿಲ್ಲ. ಒಡನೆಯೆ ಕೆಂಪು ವಸ್ತ್ರಧಾರಿ ಸವಾರರು ಧಾಳಿಮಾಡಿದರು. ಆಗ ಸ್ಮಿತ್ತನು ಒಂದು ಯುಕ್ತಿಯನ್ನು ಹೂಡಿದನು—ತನ್ನ ಬಲವನ್ನು ಇನ್ನೂ ಸ್ವಲ್ಪ ಹಿಮ್ಮೆಟ್ಟಿಸಿ ರಾಣಿಯ ಸೈನ್ಯವು ಮುಂದೆ ಬರಲು ಅವಕಾಶವಿತ್ತನು. ಅವರು ಮುಂದುವರಿದುದರಿಂದ ಅವರಿದ್ದ ಸ್ಥಾನವು ಖಾಲಿಯಾಯಿತು. ಆಗ ಸ್ಮಿತ್ತನು ಅನೇಕ ದಿಕ್ಕುಗಳಿಂದ ರಾಣಿಯ ಸ್ಥಾನದ ಮೇಲೆ ಆಕ್ರಮಣಮಾಡಿದನು. ಘೋರಯುದ್ಧವಾಯಿತು. ಕತ್ತಿಗಳು ಮಸೆದವು. ಇದುವರೆಗೂ ಸುಮ್ಮನೆ ನಿಂತಿದ್ದ ತನ್ನ ಇನ್ನೆರಡು ಪಡೆಗಳನ್ನು ಸ್ಮಿತ್ತನು ರಾಣಿಯ ಅಕ್ಕ ಪಕ್ಕಗಳಲ್ಲಿ ಎದುರಿಸಲು ಕಳುಹಿಸಿದನು. ರಾಣಿಯ ಸವಾರರು ಆಗ ಹಿಮ್ಮೆಟ್ಟಬೇಕಾಯಿತು. ಬ್ರಿಗೆಡಿಯರ್ ಸ್ಮಿತ್ತನು ತನ್ನ ಮುಂದಿದ್ದ ಶ್ರೇಣಿಯನ್ನು ಭೇದಿಸಿಕೊಂಡು ಸವಾರರ ಸಮೇತ ಮುಂದುವರಿಯಲು ಸಂಕಲ್ಪಿಸಿದನು. ಅವನ ಉದ್ದೇಶವು "ಫುಲ್ ಬಾಗ್"ನ್ನು ಆಕ್ರಮಿಸಿಕೊಳ್ಳಬೇಕೆಂದಿದ್ದಿತು.

ರಾಣಿಯು ತನ್ನ ಸವಾರರು ಹಿಮ್ಮೆಟ್ಟುತ್ತಿರುವುದನ್ನು ನೋಡಿ ತನ್ನ ಕುದುರೆಯನ್ನು ಧಾವಿಸಿಕೊಂಡು ಬಂದು ಅವರನ್ನು ಸಮೀಪಿಸಿದಳು. ಗುಲ್‌ಮಹಮ್ಮದ್ದನು ಅವಳ ಕಣ್ಣಿಗೆ ಬಿದ್ದು ಅವನ ಬಳಿಗೆ ಕುದುರೆಯನ್ನು ಓಡಿಸಿಕೊಂಡು ಹೋಗಿ, ಕತ್ತಿಯನ್ನು ಆಂಗ್ಲೇಯರ ಕಡೆಗೆ ತೋರಿಸುತ್ತಾ "ಖಾಁ, ಇಂದೇಕೆ ಕೈ ಬಿದ್ದು ಹೋಯಿತು?" ಎಂದು ಕೇಳಿದಳು. ಗುಲ್‌ಮಹಮ್ಮದ್ದನು ಚೀತ್ಕಾರ ಮಾಡುತ್ತಾ "ಹುಜೂರ್, ಈಗ ನಮ್ಮ ಕೈವಾಡವನ್ನು ನೋಡಿ" ಎಂದು ಕೂಗಿ ಹೇಳಿದನು.

ಪಠಾಣರ ಸರದಾರನು ಚೀತ್ಕಾರ ಮಾಡುತ್ತಾ, ಗದ್ದಲವೆಬ್ಬಿಸುತ್ತಾ ತನ್ನ ಸವಾರರಿಗೆ ಉತ್ತೇಜನ ಕೊಡುತ್ತಾ ಮುಂದುವರಿದನು. ರಾಣಿಯೂ ಅವನೊಂದಿಗೇ ಇದ್ದಳು.

ಗುಲ್‌ಮಹಮ್ಮದ್ದನು ರಾಣಿಯೊಡನೆ "ಹುಜೂರ್, ಜೂಹಿ ಸರದಾರಳ ತೋಪು

ಗಳನ್ನು ದಯವಿಟ್ಟು ಸರಿಪಡಿಸಿ" ಎಂದು ಪ್ರಾರ್ಥಿಸಿದನು.

ರಾಣಿಯು ಅಲ್ಲಿಂದ ಧಾವಿಸಿಹೋದಳು. ಒಂದು ಗುಡ್ಡದ ಹಿಂಬದಿಯಲ್ಲಿ ಜೂಹಿಯು ತೋಪುಗಳನ್ನಿರಿಸಿ ಹಾರಿಸುವುದಕ್ಕೆ ಸಿದ್ಧಳಾಗಿದ್ದಳು. ಆದರೆ ರಾಣಿಯ ಸವಾರರು ಹಿಮ್ಮೆಟ್ಟಿದುದನ್ನು ನೋಡಿ ವ್ಯವಸ್ಥೆ ತಪ್ಪಿದ್ದಳು. ಇದನ್ನು ಕಂಡು ಆಂಗ್ಲೇಯ ಸವಾರರು ಆ ಕಡೆಗೆ ಮುನ್ನುಗ್ಗಿ ಓಡುತ್ತಿದ್ದರು.

ರಾಣಿಯು "ಜೂಹಿ, ತೋಪಿನ ಬಾಯಿಯನ್ನು ಒಂದು ಅಂಗುಲದಷ್ಟು ಕೆಳಗಿಳಿಸು" ಎಂದು ಆದೇಶಿಸಿದಳು.

ಜೂಹಿಯು "ಅಪ್ಪಣೆ" ಎಂದು ಉತ್ಸಾಹಿತಳಾಗಿ ಕೇಳಿ ತನ್ನ ಅನುಚರರ ಸಹಾಯದಿಂದ ಒಡನೆಯೆ ಹಾಗೆ ಮಾಡಿದಳು.

"ಚಲಾಯಿಸು" ಎಂದು ರಾಣಿಯು ಆಜ್ಞೆಮಾಡಿದಳು. ತೋಪು "ಢಂ!" ಎಂದಿತು. ಆಂಗ್ಲೇಯ ಸವಾರರು ಹೆದರಿ ಹಿಮ್ಮೆಟ್ಟಿದರು.

ಅಲ್ಲಿಂದ ರಾಣಿಯು ಬೇರೊಂದು ಸ್ಥಾನಕ್ಕೆ ಹೋದಳು. ಅವಳು ಹೋದೆಡೆಯೆಲ್ಲಾ ತನ್ನ ಸಿಪಾಯಿಗಳಿಗೆ ತುರಂತ ಆಜ್ಞೆ ಮಾಡುತ್ತಿದ್ದಳು.

ಅವಳ ಯೋಧರ ಸಂಖ್ಯೆಯು ಕಡಿಮೆಯಿದ್ದರೂ ಕೂಡ ಅವರು ಅವಳ ಮೇಲೆ ಅಚಲವಾದ ವಿಶ್ವಾಸವನ್ನಿಟ್ಟಿದ್ದರು. ಎರಡು ಕೈಗಳಿಂದಲೂ ಒಂದೇ ರೀತಿಯಾಗಿ ಕೌಶಲ್ಯದಿಂದ ಕತ್ತಿಯನ್ನು ಪ್ರಯೋಗಿಸುವ ಅವರ ರಾಣಿ ಅವರೊಂದಿಗಿದ್ದಳು.

ಆಂಗ್ಲೇಯರು ಶೌರ್ಯದಿಂದ ಹೋರಾಡಿದರು, ಅನೇಕರು ಮಡಿದರು. ರಾಣಿಯ ಆ ಅಲ್ಪ ಸಂಖ್ಯಾತ ಸೈನಿಕರು ಅದ್ಭುತಗಳನ್ನೆಸಗಿದರು. ಅವಳ ಆಜ್ಞೆಯನ್ನು ತಪ್ಪದೆ ಪರಿಪಾಲಿಸುತ್ತಾ ಆಂಗ್ಲೇಯರನ್ನು ಶೀಘ್ರವಾಗಿ ಓಡಿಸಿಬಿಟ್ಟರು. ಬ್ರಿಗೆಡಿಯರ್ ಸ್ಮಿತ್ತನಿಗೆ ರಾಣಿಯು ಆ ದಿನ ಚತುರತೆಯಲ್ಲಿಯೂ ಮತ್ತು ಧೈರ್ಯಸಾಹಸಗಳಲ್ಲಿಯೂ ಸರಿಸಾಟಿಯಾದಳು. ಸ್ಮಿತ್ತನು ಅವಳ ವ್ಯೂಹವನ್ನು ಭೇದಿಸಲಾಗಲಿಲ್ಲ. ಆತನು ಲಕ್ಷ್ಮೀಬಾಯಿಯ ಮುಂದೆ ಸೋತು ಓಡಬೇಕಾಯಿತು. ಆಂಗ್ಲೇಯರು ಆ ದಿನದ ಯುದ್ಧವನ್ನು ಮುಕ್ತಾಯಗೊಳಿಸಿ ಚೇತರಿಸಿಕೊಂಡರು.

ರಾಣಿಯೂ ಮತ್ತು ಅವಳ ಸರದಾರರೂ ಅಂದು ಬಹಳ ಶ್ರಮವಹಿಸಿದ್ದರು. ಆದರೂ ಆ ರಾತ್ರಿಯೂ ಕೂಡ ಬಹಳ ಹೊತ್ತಿನವರೆಗೆ ಬೇರೆ ಕಾರ್ಯಕ್ರಮದಲ್ಲಿ ತೊಡಗಿದ್ದು—ಯೋಜನೆಗಳನ್ನು ಕ್ರಮಪಡಿಸಿ, ಬದಲಾವಣೆಮಾಡಿ, ಸಲಹೆ ಸಮ್ಮತಿಗಳನ್ನು ಕೊಟ್ಟು, ಆ ದಿನದ ಯುದ್ಧದಲ್ಲಿ ಯಾವ ಯಾವ ಯೋಧರು ವಿಶೇಷ ಧೈರ್ಯ ಸಾಹಸಗಳನ್ನು ತೋರಿದ್ದರೋ ಅವರನ್ನು ಶ್ಲಾಘಿಸಿ ಪುರಸ್ಕಾರವನ್ನಿತ್ತಳು. ಅಲ್ಲದೆ ಗುಲ್‌ಮುಹಮ್ಮದ್ದನನ್ನು ಕುಮಾರ ಶ್ರೇಣಿಗೇರಿಸಿದಳು.

ಗವಾಲಿಯರಿನ ಸೇನೆಯ ಮೇಲೆ ಜಯಾಜೀರಾಯನ ಆ ಘೋಷಣೆಯ

ಪ್ರಭಾವವು ಬೀರಿದ್ದಿತು. ಆದರೆ ಆ ದಿನ ಆ ಸೈನ್ಯವು ತಾತ್ಯನಿಗಾಗಲೀ, ಪೇಶ್ವೆಗಾಗಲೀ ವಿಶ್ವಾಸಘಾತುಕಕಾರ್ಯವನ್ನೇನೂ ಸ್ಪಷ್ಟವಾಗಿ ಮಾಡಿರಲಿಲ್ಲ. ಆದರೆ ರಾಣಿಗೇನೋ ಸಂದೇಹವಿದ್ದಿತು. ತಾತ್ಯನೂ, ರಾವ್‌ಸಾಹೇಬನೂ ಆ ಸಂದೇಹವನ್ನು ನಿವಾರಣೆ ಮಾಡಿದರು. ವಿಶ್ವಾಸಘಾತುಕತೆಯನ್ನು ಮಾಡಿದ್ದರೂ ಏನಾಗುತ್ತಿದ್ದಿತು? ಮರುದಿನದ ಯುದ್ಧದಲ್ಲಿ ಅವರು ಅಸಹಾಯರಾಗಿ ಅವರಿಗೆ ದೊರಕಿದ್ದ ಸಾಧನೆಯನ್ನೇ ಪುನಃ ತರಬೇಕಾಯಿತು.

## ೮೭

೧೮ ನೇ ಜೂನ್, ಜ್ಯೇಷ್ಠ ಶುಕ್ಲ ಸಪ್ತಮಿ ಶುಕ್ರವಾರವು ಉದಯಿಸಿ ಸೂರ್ಯನ ಕಿರಣಗಳು ಬೆಳಗಿದವು. ಉಷೆಯು ತನಗೆ ಸ್ವಾಭಾವಿಕವಾದ ಮಂದ ಹಾಸವನ್ನು ಬೀರಿದಳು. ರಾಣಿಯು ಸ್ನಾನಧ್ಯಾನಗಳನ್ನು ಮಾಡಿ ಗೀತೆಯ ೧೮ ನೇ ಅಧ್ಯಾಯವನ್ನು ಪಾರಾಯಣ ಮಾಡಿ ಮುಗಿಸಿದ್ದಳು. ಚಿಟ್ಟೆಗಳ ಝೇಂಕಾರ ಶಬ್ದಗಳ ನಡುವೆ ಒಂದೆರಡು ಪಕ್ಷಿಗಳ ಕಲರವವೂ ಕೇಳಿಸಿತು. ರಾಣಿಯು ತನ್ನ ರಿಸಾಲೆಯ ಕೆಂಪು ಸಮವಸ್ತ್ರವನ್ನು ಧರಿಸಿದ್ದಳು. ಸೊಂಟದ ಎರಡು ಬಗಲಿಗೂ ಒಂದೊಂದು ಕತ್ತಿಯನ್ನು ಕಟ್ಟಿಕೊಂಡು ಪಿಸ್ತೂಲನ್ನು ಸಿಕ್ಕಿಸಿಕೊಂಡಳು. ಯುದ್ಧ ದಲ್ಲಿ ತನ್ನ ಸೈನಿಕರು ಸುಲಭವಾಗಿ ಗುರುತಿಸುವಂತೆ ಕಂಠದಲ್ಲಿ ಮುತ್ತಿನ ಮತ್ತು ವಜ್ರದ ಮಾಲೆಯನ್ನು ಧರಿಸಿದಳು. ಲೋಹದ ಕುಲಾವಿಯ ಮೇಲೆ ಚಂದೇರಿಯ ಸರಿಗೆ ಕೆಂಪು ರುಮಾಲನ್ನು ಕಟ್ಟಿದಳು. ಲೋಹದ ಕೈಕವಚ ಮತ್ತು ಭುಜಬಂದ ಗಳನ್ನು ಹಾಕಿಕೊಂಡಳು. ಇಷ್ಟರಲ್ಲಿ ಅವಳ ಐದು ಮಂದಿ ಸರದಾರರು ಅಲ್ಲಿಗೆ ಬಂದರು.

ಮುಂದರಿಯು "ಸರ್ಕಾರ್, ಕುದುರೆಯು ಕುಂಟುತ್ತಿದೆ. ನಿನ್ನೆಯ ಯುದ್ಧದಲ್ಲಿ ಗಾಯಗೊಂಡಿರಬೇಕು. ಅಥವಾ ಎಡವಿರಬೇಕು" ಎಂದಳು.

ರಾಣಿಯು "ಬೇರೆ ಒಳ್ಳೆಯ ಮತ್ತು ಪುಷ್ಟವಾದ ಕುದುರೆಯೊಂದನ್ನು ತೆಗೆದು ಕೊಂಡು ಬಾ" ಎಂದು ಆಜ್ಞೆಯಿತ್ತಳು.

ಮುಂದರಿಯು ಕುದುರೆಯನ್ನು ತರಲು ಹೋಗಿ ಅಶ್ವಬಲದಲ್ಲಿದ್ದಂತಹ ಒಂದು ಬಹಳ ಪುಷ್ಟಿಯಾದ ಮತ್ತು ನೋಡಲು ಸುಂದರವಾದ ಒಂದು ಕುದುರೆಯನ್ನು ಚುನಾಯಿಸಿದಳು.

ಅಶ್ವಶಾಲೆಯ ಪ್ರಹರಿಯು "ಇದು ನಮ್ಮ ಸಿಂಧ್ಯ ಮಹಾರಾಜರ ಖಾಸಾ ಕುದುರೆ" ಎಂದನು.

ಮುಂದರಿಯು "ಖಾಸಾ ಕುದುರೆಯೇ ಬೇಕು. ನಮ್ಮ ಮಹಾರಾಣಿಯ ಸವಾರಿಗೆ ಸರಿಹೋಗುತ್ತದೆ" ಎಂದಳು.

ಪ್ರಹರಿ—ಝಾನ್ಸಿಯ ಮಹಾರಾಣಿ ಸಾಹೇಬರ ಸವಾರಿಗೇನು?

ಮುಂದರಿ—ಹೌದು.

ಪ್ರಹರಿ—ಹಾಗಾದರೆ ಸರಿ. ನಮ್ಮ ಮಹಾರಾಜರು ಇದರ ಮೇಲೆ ಕುಳಿತಾಗ ಅದು ಬಹಳ ಉದ್ವೇಗದಿಂದ ಹೋಗುತ್ತಿದ್ದಿತು. ಇದರ ಓಟದಲ್ಲಿ ಒಂದು ವಿಧವಾದ ತೇಜಸ್ಸೂ, ಶೋಭೆಯೂ ಇರುವುದು.

ಮುಂದರಿ—ಅದೇಕೆ?

ಪ್ರಹರಿ—ಇದನ್ನು ಮಹಾರಾಣಿಯವರು ಸವಾರಿ ಮಾಡದಿದ್ದರೆ ಪಶ್ಚಾತ್ತಾಪ ಪಡುವರು.

ಮುಂದರಿಯು ಆತುರದಲ್ಲಿದ್ದುದರಿಂದ ಪ್ರಹರಿಯೊಡನೆ ಹೆಚ್ಚು ಮಾತು ಬೆಳಸದೆ ಕುದುರೆಯನ್ನು ತೆಗೆದುಕೊಂಡು ಹೊರಟುಹೋದಳು.

ರಾಣಿಯು ತನ್ನ ಸರದಾರರಿಗೆ ತಕ್ಕ ಆದೇಶವಿತ್ತಳು.

ರಾಣಿ—ಕುಮಾರ್ ಗುಲ್‌ಮುಹಮ್ಮದ್, ಇಂದು ನಿನ್ನ ವೈಶಿಷ್ಟ್ಯದಲ್ಲಿ ವೈಶಿಷ್ಟ್ಯವನ್ನು ತೋರಿಸಬೇಕು. ನಿನ್ನೆಯ ಯುದ್ಧದ ಪರಿಸ್ಥಿತಿಯನ್ನು ನೋಡಿ ಇಂದು ವಿಜಯದ ಆಶೆಯುಂಟಾಗುತ್ತಿದೆ. ಆದರೆ ಉತ್ತರ ಮತ್ತು ಪಶ್ಚಿಮ ದಿಕ್ಕಿನ ಸ್ಥಾನಗಳು ಕೈಬಿಟ್ಟು ಹೋದರೆ ಅವನ್ನು ಪುನಃ ಪಡೆಯುವುದಕ್ಕೂ ಮತ್ತು ಅವಶ್ಯಬಿದ್ದರೆ ದಕ್ಷಿಣಕ್ಕೆ ಹಿಮ್ಮೆಟ್ಟುವುದಕ್ಕೂ ತಯಾರಾಗಿರಬೇಕು.

ಗುಲ್—ಸರ್ಕಾರ್, ನಾವು ಪಠಾಣರೆಲ್ಲರೂ ಇಂದು ಯುದ್ಧದಲ್ಲಿ ಪ್ರಾಣತ್ಯಾಗ ಮಾಡಲು ಪ್ರತಿಜ್ಞೆಮಾಡಿದ್ದೇವೆ. ಯಾರು ಉಳಿಯುವರೋ ಅವರು ದಕ್ಷಿಣಕ್ಕೆ ಹೋಗಿ ರಾಹತ್‌ಗಡವನ್ನು ತೆಗೆದುಕೊಳ್ಳಬೇಕು. ಅಲ್ಲಿ ನಮ್ಮ ಪಠಾಣರು ಬಹಳ ಮಂದಿ ಮಡಿದಿದ್ದಾರೆ. ಅಲ್ಲಿ ಅವರಿಗೆ ತಕ್ಕ ಸ್ಮಾರಕವನ್ನೇರ್ಪಡಿಸಬೇಕು.

ರಾಣಿ—ಇಲ್ಲ, ಕುಮಾರ್ ಸಾಹೇಬ್, ನಾವು ಗೆಲ್ಲುತ್ತೇವೆ. ಇಲ್ಲಿ ನಮ್ಮ ಕೈಯ್ಯಲ್ಲೇನೂ ಉಳಿಯದಿದ್ದರೆ ಆಗ ದಕ್ಷಿಣಕ್ಕೆ ಹೋಗುವ ಮಾತು. ಸೈನಿಕನಿಗೆ "ಗೆಲ್ಲುವುದು" ಮೊಟ್ಟಮೊದಲಿನ ಆಕಾಂಕ್ಷೆಯಾಗಿರಬೇಕು. ಆ ಮೇಲೆ ನೀನು ಹೇಳಿದಂತೆ ಜೀವಸಹಿತ ತಪ್ಪಿಸಿಕೊಂಡು ಹೋಗಿ ಪುನಃ ಎಲ್ಲಿಯಾದರೂ ಒಂದುಗೂಡಿ ಶತ್ರುಗಳ ಮೇಲೆ ಯುದ್ಧಹೂಡುವುದು.

ಮುಂದರಿ—ಸರ್ಕಾರ್, ಸ್ವಲ್ಪ ಪಾನೀಯವನ್ನು ಸ್ವೀಕರಿಸಿ. ಈಗಲೇ ಬಿಸಿಲೇರುತ್ತಿದೆ. ಬಿಸಿಗಾಳಿಯು ಬಹಳ ಜೋರಾಗಿ ಬೀಸುವಂತೆ ತೋರುತ್ತಿದೆ.

ರಾಣಿ—ನೀವುಗಳು ಏನಾದರೂ ಉಪಹಾರವನ್ನು ಸ್ವೀಕರಿಸಿ. ದಾಮೋದರ

ರಾಯನಿಗೆ ಹಸಿವಾಗದಂತೆ ಚೆನ್ನಾಗಿ ತಿನ್ನಿಸಿ ಕುಡಿಸಿರಿ. ನಾನು ಪಾನಕವನ್ನು ಮಾತ್ರ ತೆಗೆದುಕೊಳ್ಳುತ್ತೇನೆ.

ಜೂಹಿ—ನಾನೂ ಪಾನಕವನ್ನೇ ಕುಡಿಯುತ್ತೇನೆ.

ರಾಣಿ—ನೀನೋ ದೇಶ್‌ಮುಖ್?

ದೇಶಮುಖ್—ನಾನು ಸ್ವಲ್ಪ ತಿಂದು ಬಂದಿದ್ದೇನೆ.

ರಾಣಿ—ರಘುನಾಥಸಿಂಹ್?

ರಘು—ನಾನು ಅಲ್ಪಾಹಾರವನ್ನು ಸೇವಿಸುವೆನು.

ರಾಣಿ—ನೀನೂ ಮತ್ತು ಮುಂದರಿಯೂ ಬೇಗನೆ ಊಟಮಾಡಿ ಪಾನಕವನ್ನು ತಯಾರುಮಾಡಿಕೊಂಡು ಬನ್ನಿ.

ಮುಂದರಿಯೂ ರಘುನಾಥಸಿಂಹನೂ ಹೊರಟು ಹೋದರು. ಅಲ್ಲಿಗೆ ಬಂದ ದಾಮೋದರರಾಯನಿಗೆ ರಾಣಿಯೇ ಸ್ವತಃ ಊಟಮಾಡಿಸಿ ಕುಡಿಸಲು ನೀರು ಕೊಟ್ಟಳು.

ರಾಣಿ—ಜೂಹಿ, ನೀನು ಇಂದು ಶತ್ರುಗಳನ್ನು ಧೂಳಿಬ್ಬಿಸುವಂತೆ ಗುಂಡಿನ ಮಳೆಗರೆಯಬೇಕು.

ಜೂಹಿ—ಇಂದು ನಾನೇನು ಮಾಡುತ್ತೇನೋ ಅದನ್ನು ಹೇಳಲಾರೆ. ಆದರೆ ನಿದ್ರೆಯಿಂದ ಏಳುತ್ತಲೇ ಏನು ಪಣ ತೊಟ್ಟೆನೋ ಅದಕ್ಕನುಸಾರವಾಗಿ ಕೆಲಸ ಮಾಡುವೆನು.

ರಾಣಿ—ಆದರೆ ಮಾಡುವ ಕೆಲಸವನ್ನು ಸಾವಧಾನದಿಂದ ಮಾಡಬೇಕು. ಕೇವಲ ಉತ್ತೇಜನ ಕೊಡುವುದರಿಂದ ಸಹಾಯವೇನಾಗುವುದಿಲ್ಲ.

ಜೂಹಿ—ಆದುದರಿಂದಲೇ ನಾನು ನಗುತ್ತಿರುವೆನು. ಒಂದು ಆಕಾಂಕ್ಷೆ ಮಾತ್ರ ನನ್ನ ಮನಸ್ಸಿನಲ್ಲಿ ಉಳಿದಿದೆ—ನಿಮಗೆ ನನ್ನ ಸಂಗೀತವನ್ನು ಲಾಲಿಸಲಾಗಲಿಲ್ಲ.

ರಾಣಿ—ಎಂದಾದರೊಂದು ದಿನ ಕೇಳುವೆನು.

ಜೂಹಿ—ಹಾಂ! ಸರ್ಕಾರ್ ಖಂಡಿತವಾಗಿಯೂ.

ಜೂಹಿಯು ಸ್ವಲ್ಪ ಹೆಚ್ಚು ನಕ್ಕಳು.

ರಾಣಿ—ನಿನ್ನ ನಗುವು ಇಂದು ಸ್ವಲ್ಪ ಭೀಕರವಾಗಿದೆ.

ಜೂಹಿ—ಕಾರ್ಯವು ಇದಕ್ಕಿಂತಲೂ ಭೀಕರವಾಗಿದೆ, ಸರ್ಕಾರ್.

## ೮೮

ಮುಂದರಿ ಮತ್ತು ರಘುನಾಥಸಿಂಹರು ಆಹಾರವನ್ನು ಸ್ವೀಕರಿಸದೇ ಬುತ್ತಿಯನ್ನು ಕಿಸೆಯಲ್ಲಿರಿಸಿ, ಬೆನ್ನಿಗೆ ಪಕಾಲಿಯನ್ನು ಕಟ್ಟಿಕೊಂಡು, ಬೇಗನೆ ಪಾನಕವನ್ನು

ತಯಾರುಮಾಡಿದರು.

"ಮುಂದರಿಬಾಯಿ, ರಾಣೀ ಸಾಹೇಬರಿಂದ ಒಂದು ಕ್ಷಣವೂ ಬೇರೆಯಾಗ ಕೂಡದು. ಅವರು ತಮ್ಮ ಕಡೆಯ ಯುದ್ಧವನ್ನು ಮಾಡಲು ಹೊರಟಿರುವ ಎಂದು ರಘುನಾಥಸಿಂಹನು ಹೇಳಿದನು.

ಮುಂದರಿ—ನೀವೆಲ್ಲಿರುವಿರಿ?

ರಘುನಾಥಸಿಂಹ—ಎಲ್ಲಿರಬೇಕೆಂದು ಅಪ್ಪಣೆಯಾಗುವುದೋ ಅಲ್ಲಿರುವೆನು ಹಾಗೂ ನಿಮ್ಮಗಳ ಸಮೀಪದಲ್ಲೇ ಇರಲು ಪ್ರಯತ್ನಿಸುವೆನು.

ಮುಂದರಿ—ನೀವು ನನ್ನ ಹತ್ತಿರದಲ್ಲೇ ಇರಬೇಕೆಂಬುದು ನನ್ನ ಆಶಯ. ನಾನಿಂದು ದೇಹತ್ಯಾಗಮಾಡುವೆನೆಂದು ನನಗೆ ತೋರುತ್ತಿದೆ. ನಿಮ್ಮ ಬಳಿಯಲ್ಲಿದ್ದರೆ ನನಗೆ ಶಾಂತಿ ದೊರಕುವುದು.

ರಘುನಾಥಸಿಂಹ—ನಾನೂ ಉಳಿಯುವುದಿಲ್ಲ. ರಾಣಿ ಸಾಹೇಬರನ್ನು ಹೇಗಾದರೂ ಸುರಕ್ಷಿತರನ್ನಾಗಿಡಬೇಕು. ನಾನೂ ಒಡನೆಯೇ ನಿನ್ನನ್ನು ಸ್ವರ್ಗದಲ್ಲಿ ಸೇರುವೆನು. ಅದರಲ್ಲೇನಾದರೂ ಸ್ವಲ್ಪ ಹಿಂದುಮುಂದಾಗಬಹುದು.

ಹೀಗೆಂದು ಹೇಳಿ ಆತನು ಒಣನಗೆ ನಕ್ಕನು.

ಮುಂದರಿಯು ಕಂಬನಿಗೂಡಿದ ಕಣ್ಣುಗಳಿಂದ ರಘುನಾಥಸಿಂಹನನ್ನು ನೋಡಿದಳು. ಏನನ್ನೋ ಹೇಳಲು ಯತ್ನಿಸಿ ಅವಳ ತುಟಿಗಳು ಅದುರಿದುವು. ರಘುನಾಥಸಿಂಹನ ಕಣ್ಣುಗಳು ಕಣ್ಣೀರಿನಿಂದ ತೊಯ್ದು ಮಬ್ಬಾದುವು.

ದೂರದಲ್ಲಿ ಶತ್ರುಗಳ ರಣಕಹಳೆಯು ಮೊಳಗಿತು. ಮುಂದರಿಯು ತಲೆಬಾಗಿ ರಘುನಾಥಸಿಂಹನಿಗೆ ಪ್ರಣಾಮ ಮಾಡಿದಳು. ಆ ಪ್ರಯತ್ನದಲ್ಲಿ ತನ್ನ ಕಣ್ಣೀರನ್ನು ಜಾಗ್ರತೆಯಾಗಿ ಒರಸಿಕೊಂಡಳು. ರಘುನಾಥಸಿಂಹನು ಮುಂದರಿಗೆ ವಂದಿಸಿದನು. ನಂತರ ಅವರಿಬ್ಬರೂ ಪಾನಕವನ್ನು ಕುಡಿದು ಶೀಘ್ರವಾಗಿ ರಾಣಿಯ ಬಳಿಗೈತಂದರು.

ಮುಂದರಿಯು ಜೂಹಿಗೂ, ರಘುನಾಥಸಿಂಹನು ರಾಣಿಗೂ ಪಾನಕವನ್ನು ನೀಡಿದರು. ಆಂಗ್ಲೇಯರ ತುತ್ತೂರಿಯ ಶಬ್ದವು ಸ್ಪಷ್ಟವಾಗಿ ಕೇಳಿಬಂದಿತು. ತೋಪುಗಳು ಢಂ! ಢಂ! ಎಂದು ಘರ್ಜಿಸಿದುವು. ಆ ಘರ್ಜನೆಯನ್ನು ಭೇದಿಸಿಕೊಂಡು ಗುಂಡುಗಳು ಹಾರಿದುವು. ರಾಣಿಗೆ ಮತ್ತೊಂದು ಬಟ್ಟಲು ಶರಬತ್ತನ್ನು ಕುಡಿಯಲೂ ಸಾಧ್ಯವಾಗಲಿಲ್ಲ.

ರಾಣಿಯು ದೇಶಮುಖನನ್ನು ಕುರಿತು "ನೀನು ಇಂದು ದಾಮೋದರರಾಯನನ್ನು ನಿನ್ನ ಬೆನ್ನಿನ ಹಿಂದೆ ಕಟ್ಟಿಕೊ. ಒಂದು ವೇಳೆ ನಾನು ಮಡಿದರೆ ಈತನನ್ನು ಹೇಗಾದರೂ ಮಾಡಿ ದಕ್ಷಿಣಕ್ಕೆ ಸುರಕ್ಷಿತವಾಗಿ ಕರೆದು ಕೊಂಡು ಹೋಗು. ನಿನಗೆ ಇಂದು ನನ್ನ ಪ್ರಾಣರಕ್ಷಣೆಗಿಂತ ನಿನ್ನ ಪ್ರಾಣರಕ್ಷಣೆ ಮಾಡಿಕೊಳ್ಳುವುದು ಅತ್ಯಾವಶ್ಯಕ.

ಮತ್ತೊಂದು ವಿಷಯವೇನೆಂದರೆ ನನ್ನ ಮರಣಾನಂತರ ಈ ವಿಧರ್ಮಿಗಳಾರೂ ನನ್ನ ದೇಹವನ್ನು ಮುಟ್ಟದಿರಲಿ. ಶೀಘ್ರವಾಗಿ ನನ್ನ ಕುದುರೆಯನ್ನು ತೆಗೆದುಕೊಂಡು ಬಾ" ಎಂದು ಆಜ್ಞೆಯಿತ್ತಳು.

ಮುಂದರಿಯು ಕುದುರೆಯನ್ನು ತಂದಳು. ಅವಳ ಕಣ್ಣುಗಳು ಚಲಚಲಿಸುತ್ತಿದ್ದುವು. ಪೂರ್ವದಲ್ಲಿ ಅರುಣೋದಯವಾಗಿ ತೋಪುಗಳು ದಡಬಡಿಸಿದುವು.

ರಾಣಿಯು ನಸುನಕ್ಕು "ಇವು ತಾತ್ಯಾನ ತೋಪುಗಳಿಗೆ ಜವಾಬು" ಎಂದಳು.

ಮುಂದರಿಯ ಹನಿಗೂಡಿ ಥಳಗುಟ್ಟುತ್ತಿರುವ ಕಣ್ಣುಗಳನ್ನು ನೋಡಿ ರಾಣಿಯು "ಇದು ಕಣ್ಣೀರಿಡುವ ಸಮಯವಲ್ಲ, ಶೀಘ್ರವಾಗಿ ನಿನ್ನ ಕುದುರೆಯನ್ನು ಹತ್ತು" ಎಂದು ತ್ವರೆಗೊಳಿಸಿದಳು.

ನಂತರ ತನಗಾಗಿ ತಂದಿದ್ದ ಕುದುರೆಯನ್ನು ನೋಡಿ "ಇದು ಅಶ್ವಶಾಲೆಯನ್ನು ಪ್ರೀತಿಸುವ ಪ್ರಾಣಿ. ಇನ್ನೊಂದು ಸರಿಯಾದ ಅಶ್ವವನ್ನು ಹುಡುಕಲು ಇದು ಸಮಯವಲ್ಲ. ಇದರಿಂದಲೇ ಕಾರ್ಯಸಾಧಿಸುವೆನು" ಎಂದು ಹೇಳಿದಳು. ಜೂಹಿಯ ತಲೆಯನ್ನು ನೇವರಿಸಿ "ನಿನ್ನ ತೋಪಿನೆಡೆಗೆ ನಡೆ, ಜೂಹಿ. ಇಂದು ವೈರಿಗಳನ್ನು ಚೆನ್ನಾಗಿ ಸತಾಯಿಸು" ಎಂದು ಹುರಿದುಂಬಿಸಿದಳು.

ಜೂಹಿಯು ಪ್ರಣಾಮಮಾಡಿ ಹೊರಡುವಾಗ "ನಾನು ಯೋಚಿಸಿದಂತೆ ನಿಮಗೆ ನನ್ನ ಅಭಿನಯವನ್ನು ಈ ಜೀವಮಾನದಲ್ಲಿ ತೋರಿಸಲಾಗಲಿಲ್ಲ. ಆಗಲಿ." ಎಂದು ಹೇಳಿ ಹೊರಟಳು.

ಆಂಗ್ಲೇಯರು ಗುಂಡಿನ ಮಳೆಗರೆದರು. ರಾಣಿಯ ಸರದಾರ ಸವಾರರೆಲ್ಲರೂ ಅಶ್ವಾರೋಹಿಗಳಾಗಿ ಸಿದ್ಧರಾದರು. ಜೂಹಿಯ ತೋಪುಗಳು ಕಾದಕಬ್ಬಿಣವನ್ನು ಗುಳಿದುವು. ಇಷ್ಟರಲ್ಲಿಯೇ ಚೆನ್ನಾಗಿ ಸೂರ್ಯೋದಯವಾಯಿತು.

ಸೂರ್ಯನ ಆ ಕಿರಣಗಳು ರಾಣಿಯ ಸುಂದರವದನವನ್ನು ಪ್ರದೀಪ್ತಿಗೊಳಿಸಿದುವು. ನೇತ್ರಗಳು ಜಾಜ್ವಲ್ಯಮಾನವಾಗಿ ಹೊಳೆದುವು. ಅವುಗಳಲ್ಲಿ ಅವರ ಚಮತ್ಕಾರವು ಪ್ರತಿಬಿಂಬಿತವಾದುವು. ಕೆಂಪು ವಸ್ತ್ರದ ಮೇಲೆ ಮುತ್ತು ಪಚ್ಚೆಗಳ ಕಂಠೀಸರವು ಹೊಳೆಯುತ್ತಿದ್ದಿತು. ಒರೆಯಿಂದ ಸೆಳೆದ ಖಡ್ಗವು ಕೈಯಲ್ಲಿ ಥಳಥಳಿಸಿತು.

ರಾಣಿಯು ಕುದುರೆಗೆ ಹಿಮ್ಮಡಿಯನ್ನು ತಾಗಿಸಿ ಚಬುಕಾಯಿಸಿದಳು. ಕುದುರೆಯು ಮುಂದುವರೆಯಲು ಸ್ವಲ್ಪ ಹಿಂಜರಿದು ನಂತರ ಚುರುಕಾಯಿತು. ಬಹಳ ದಿನಗಳಿಂದ ಅಶ್ವಶಾಲೆಯಲ್ಲಿ ಕಟ್ಟಿದ್ದುದರಿಂದ ಹೀಗಿದ್ದು ಬಹುಶಃ ಸ್ವಲ್ಪ ಹೊತ್ತಿನ ಮೇಲೆ ಮೈಗೆ ಕಾವೇರಿ ಸರಿಯಾಗಬಹುದೆಂದು ರಾಣಿಯು ಯೋಚಿಸಿದಳು.

ಉತ್ತರ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ತಾತ್ಯಾಟೋಪೆ ಮತ್ತು ರಾವ್ ಸಾಹೇಬರು ಸಸೈನ್ಯರಾಗಿ ಸಿದ್ಧರಾಗಿದ್ದರು. ದಕ್ಷಿಣದಲ್ಲಿ ಬಾಂದಾವಿನ ನವಾಬ

ನಿದ್ದನು. ರಾಣಿಯು ಪೂರ್ವದಿಂದ ಆಕ್ರಮಣವನ್ನು ಆರಂಭಿಸಿದಳು.

ಹಿಂದಿನ ದಿನದ ಸೋಲಿನಿಂದ ಆಂಗ್ಲೇಯ ಜನರಲ್ಲನು ತಟಸ್ಥನಾಗಿ ಚಿಂತಾ ಕ್ರಾಂತನಾಗಿದ್ದನು. ಇವರು ತಮ್ಮ ಪದಾತಿ ಸೈನ್ಯವನ್ನು ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ, ತಗ್ಗು ಪ್ರದೇಶದಲ್ಲಿ ಕಾಣದಂತೆ ಮರೆಮಾಡಿಟ್ಟರು. ತಮ್ಮ ಹುಜರ್ (Hussers) ಸವಾರರನ್ನು ಬೇರೆ ಬೇರೆ ದಿಕ್ಕುಗಳಿಂದ ತಂದು ಆಕ್ರಮಣಮಾಡ ಬೇಕೆಂದು ಯೋಜನೆ ಹೂಡಿದ್ದರು. ಅವರಿಗೆ ಬೆಂಬಲವಾಗಿ ತೋಪುಗಳಿದ್ದುವು ಹುಜರ್ ಸೇನೆಯು ಬಂದೂಕಗಳ ಮೂಲಕ ತನ್ನ ಮೊಟ್ಟಮೊದಲಿನ ಧಾಳಿಯನು. ಪ್ರಾರಂಭಿಸಿತು. ಅದಕ್ಕೆ ಪ್ರತ್ಯುತ್ತರವು ಬಂದೂಕಿನಿಂದಲೇ ದೊರಕಿತು. ರಾಣಿಯ್ನು ಧಾಳಿಯ ಮೇಲೆ ಧಾಳಿ ಮಾಡಿ ಹುಜರ್ ಸೇನೆಯನ್ನು ಹಿಂದೂಡಿದಳು; ಅಶ್ವಾರೋಹಿ ಸೈನ್ಯಗಳ ಓಡಾಟದಿಂದ ಗಗನವು ಧೂಳಿನಿಂದ ತುಂಬಿತು. ರಾಣಿಯ ರಣಕೌಶಲ್ಯ ವನ್ನು ನೋಡಿ ಆಂಗ್ಲೇಯ ಜನರಲ್ಲುಗಳು ಬೆರಗಾದರು. ಬಹಳ ಹೊತ್ತಾದರೂ ಆಂಗ್ಲೇಯರಿಗೆ ಪೇಶ್ವೆಯ ಸ್ಥಾನವನ್ನು ಬೇಧಿಸಿಕೊಂಡು ಹೋಗಲು ಅವಕಾಶ ದೊರಕ ಲಿಲ್ಲ.

ಜೂಹಿಯ ತೋಪುಗಳು ಒಂದೇ ಸಮನೆ ವಿಷವನ್ನು ಕಾರುತ್ತಿದ್ದವು. ಅವುಗಳನ್ನು ಶಾಂತಗೊಳಿಸಲು ಮಾಡಿದ ಆಂಗ್ಲೇಯರ ಪ್ರಯತ್ನಗಳೆಲ್ಲವೂ ನಿಷ್ಫಲವಾದವು. ಹುಜರ್ ಸವಾರರು ಅಧಿಕ ಸಂಖ್ಯೆಯಲ್ಲಿ ಮೇಲಿಂದ ಮೇಲೆ ಬಂದು ಮಡಿದು ಹೋಗು ತ್ತಿದ್ದರು. ಅವರು ಈ ತೋಪುಗಳ ಕಾರ್ಯಾಚರಣೆಯನ್ನು ನಿಲ್ಲಿಸಲು ನಿಶ್ಚಯ ಮಾಡಿದ್ದರು. ರಾಣಿಯು ಇದನ್ನರಿತು ಜೂಹಿಗೆ ಸಹಾಯವನ್ನು ಕಳುಹಿಸಿದಳು. ಅದೇ ಸಮಯಕ್ಕೆ ಸರಿಯಾಗಿ ಪೇಶ್ವೆಯ ಅಧೀನದಲ್ಲಿದ್ದ ಗವಾಲಿಯರಿನ ಅಧಿಕಾಂಶ ಸೇನೆಯೂ ಮತ್ತು ಸರದಾರರೂ "ತಮ್ಮ ಮಹಾರಾಜನ" ಶರಣು ಹೊಂದಿದರೆಂಬ ಸಮಾಚಾರವು ಅವಳಿಗೆ ತಿಳಿಯಿತು.

ಮುಂದರಿಯು "ಇಂದು ಬೆಳಿಗ್ಗೆ ಅಶ್ವಶಾಲೆಯ ಪ್ರಹರಿಯು ಗುರುಗುಟ್ಟುತ್ತಾ ತನ್ನ ಮಹಾರಾಜನ ಸ್ಮರಣ ಮಾಡುತ್ತಿದ್ದನು. ಗವಾಲಿಯರಿನ ಸೇನೆಯು ಏನಾದರೂ ಗಡಿಬಿಡಿ ಮಾಡುವುದೆಂದು ನನಗೆ ಸಂದೇಹವಿದ್ದಿತು" ಎಂದಳು.

"ಹೆಚ್ಚು ಕಾಲಾವಕಾಶವಿಲ್ಲದಿದ್ದುದರಿಂದ ಏನೂಮಾಡಲು ಸಾಧ್ಯವಿರಲಿಲ್ಲ. ಈಗ ಏನು ಸಂಭವ ಸಾಧ್ಯವಿದೆಯೋ ಅದನ್ನು ಮಾಡು" ಎಂದು ರಾಣಿಯು ಹೇಳಿದಳು.

ಇವರ ಕೆಂಪು ವಸ್ತ್ರಧಾರಿ ಸೈನ್ಯವು ಕತ್ತಿಗಳನ್ನು ಒರೆಗಳಿಂದ ಸೆಳೆದು ಮುನ್ನು ಗ್ಗಿತು. ಆ ಧೂಳು ಮುಚ್ಚಿದ ಅಂಬರದಲ್ಲಿ ಇವನ ಖಡ್ಗಗಳು ಥಳಥಳನೆ ಹೊಳೆ ಹೊಳೆಯುತ್ತಿದ್ದು ಅವುಗಳ ಪ್ರಕಾಶವು ಕಣ್ಣುಗಳನ್ನು ಕೋರೈಸುತ್ತಿದ್ದುವು.

ಸ್ವಲ್ಪ ಹೊತ್ತಿನ ನಂತರ ಗವಾಲಿಯರಿನ ಸೇನೆಯು ಶತ್ರುಪಕ್ಷವನ್ನು ಸೇರಿದ

ಕಾರಣ ರಾವ್‌ಸಾಹೇಬನ ಎರಡು ಸೈನ್ಯಸ್ಥಾನಗಳೂ ಶತ್ರುಗಳ ಕೈವಶವಾಗಿ ಆಂಗ್ಲೇಯರು ಅವುಗಳನ್ನು ಆಕ್ರಮಿಸುತ್ತಿರುವರೆಂಬ ಸಮಾಚಾರವು ರಾಣಿಗೆ ತಿಳಿಯಿತು. ರಾಣಿಯ ಹಿಂದೆ ಪದಾತಿ ಸೈನ್ಯವಿದ್ದಿತು. ಪರಿಸ್ಥಿತಿಯನ್ನು ಹತೋಟಿಗೆ ತರಲು ಅದಕ್ಕೆ ಆಜ್ಞೆಯಿತ್ತು ಅವಳು ಬೇರೊಂದು ಕಡೆಗೆ ಹೋದಳು. ಅತ್ತ ಹುಜರ್ ಸೈನ್ಯವು ಜೂಹಿಯ ತೋಪುಗಳ ಮೇಲೆ ಬಿದ್ದಿತು. ಖಡ್ಗಪ್ರಯೋಗಕ್ಕೆ ತುತ್ತಾಗಿ ಜೂಹಿಯು ಅಸುವನ್ನು ನೀಗಿದಳು. ಸಾಯುವ ಮುನ್ನ ಹಾ! ಎನ್ನುವಷ್ಟು ಸಮಯವೂ ದೊರಕಿರಲಿಲ್ಲ. ತುಂಡರಿದು ಹೋಗಿದ್ದಳು. ಆದರೆ ಶತ್ರುವಿನ ಖಡ್ಗವು ಅವಳನ್ನು ಛೇದಿಸಿದಾಗ ಅವಳು ಯಾವ ಮಾತನ್ನು ಆಡಬೇಕೆಂದಿದ್ದಳೊ ಅದು ಅವಳ ಮುಖದಲ್ಲಿ ಮೂಡಿದ್ದ ಕ್ಷೀಣವಾದ ಮುಗುಳ್ನಗೆಯಾಗಿ ಅವಳ ಮೃತ ದೇಹದ ಅಧರಗಳಲ್ಲಿ ವೇದಿತವಾಗಿದ್ದು ಅನಂತವಾಗಿ ನಿಂತಿತು.

ಹುಜರ್ ಸೈನಿಕರು ಅವಳ ವಸ್ತ್ರವನ್ನು ಕತ್ತರಿಸಿ ನೋಡಿದ ಮೇಲೆ ಈ ತೋಪುಗಳ ಸರದಾರನು ಒಬ್ಬ ಗೌರವರ್ಣದ ಸ್ತ್ರೀ ಎಂಬುದು ವ್ಯಕ್ತವಾಯಿತು.

ಆ ಹೊತ್ತಿಗೆ ಸರಿಯಾಗಿ ಬ್ರಿಗೆಡಿಯರ್ ಸ್ಮಿತ್ತನು ಗುಪ್ತವಾಗಿರಿಸಿದ್ದ ಪದಾತಿ ಸೈನ್ಯವನ್ನು ಆ ಸ್ಥಳದಿಂದ ಹೊರಗೆ ತಂದನು. ಅದು ರಾಣಿಯ ಹಿಂದಿದ್ದ ಪದಾತಿ ಸೈನ್ಯವನ್ನು ಎರಡು ಪಾರ್ಶ್ವಗಳಿಂದಲೂ ಮುತ್ತಿಗೆ ಹಾಕಿತು. ಪೇಶ್ವೆಯ ಸೈನ್ಯವು ಇದನ್ನು ಕಂಡು ಗಾಬರಿಗೊಂಡು ದಿಕ್ಕೆಟ್ಟು ಓಡಲಾರಂಭಿಸಿತು. ರಾಣಿಯು ಆದಷ್ಟು ಉತ್ತೇಜನ ಪ್ರೋತ್ಸಾಹಗಳನ್ನಿತ್ತಳು. ಆದರೆ ಅವರೆಡೆಗೆ ಆ ಪರಾರಿಯಾಗುತ್ತಿದ್ದ ಸೈನ್ಯದ ಮಧ್ಯದಿಂದ ಆಂಗ್ಲೇಯರ ಸಂಗೀನು ಮತ್ತು ಹುಜರ್ ಕುದುರೆಗಳು ಅಡ್ಡವಾಗಿ ಬಂದವು. ಆಂಗ್ಲೇಯರ ತೋಪು ಬಂದೂಕಗಳು ಪೇಶ್ವೆಯ ಸೈನ್ಯವನ್ನು ಸಂಹರಿಸಿದವು. ಪೇಶ್ವೆಯ ಎರಡು ತೋಪುಗಳು ಶತ್ರುವಶವಾದುವು. ಆಂಗ್ಲೇಯ ಸೈನ್ಯವು ಒಂದು ಪ್ರವಾಹಬಂದ ನದಿಯಂತೆ ಮುಂದರಿಯುತ್ತಿದ್ದಿತು.

ರಾಣಿಯನ್ನು ರಕ್ಷಿಸಲು ಕೆಂಪು ಸಮವಸ್ತ್ರಧಾರಿ ಅಶ್ವಸೇನೆಯು ಅಸಾಧಾರಣ ಶೌರ್ಯವನ್ನು ಪ್ರದರ್ಶಿಸಿತು. ಬಂದೂಕು, ತೋಪು, ಖಡ್ಗಗಳನ್ನಾವುದನ್ನೂ ಲಕ್ಷಿಸಲಿಲ್ಲ. ಗಂಟೆಗಳಕಾಲ ಈ ತೇಜಸ್ವಿದಳವು ಆಂಗ್ಲೇಯರನ್ನು ಎದುರಿಸಿ ಕಾದಾಡಿತು. ರಾಣಿಯು ಮೆಲ್ಲಮೆಲ್ಲನೆ ತನ್ನ ಅಳಿದುಳಿದ ಸೇನೆಯನ್ನು ಸೇರಲು ದಕ್ಷಿಣಕ್ಕೆ ಸರಿದಳು. ಅಡ್ಡವಾಗಿ ಬಂದ ಹುಜರ್ ಸವಾರರು ಮತ್ತು ಆಂಗ್ಲೇಯರ ತೋಪು ಸಂಗೀನುಗಳಿಂದಾಗಿ ರಾಣಿಗೆ ಆ ಪರಾರಿಯಾಗುತ್ತಿದ್ದ ಪದಾತಿ ಸೈನ್ಯವನ್ನು ಸೇರುವುದು ಅಸಂಭವವಾಗಿದ್ದಿತು. ಆದರೂ ಅವಳ ಕೆಂಪು ಸಮವಸ್ತ್ರಧಾರಿ ಶೂರರು ಅವಳಿಗೆ ನೆರವಿತ್ತರು.

ರಾಣಿಯು ಕುದುರೆಯ ಲಗಾಮನ್ನು ಹಲ್ಲಿನಿಂದ ಕಚ್ಚಿಕೊಂಡು ತನ್ನ ಎರಡು

ಕೈಬಾಹುಗಳಿಂದ ಖಡ್ಗಪ್ರಯೋಗಮಾಡುತ್ತಾ ದಾರಿಮಾಡಿಕೊಂಡು ಹೊರಟಳು. ಆಗ್ನೇಯ ದಿಕ್ಕಿನಲ್ಲಿ ಸೋನಾರೇಖಾ ನಾಲೆಯಿದ್ದಿತು. ಅದರಿಂದ ಮುಂದೆ ಹೋದರೆ ಬಾಬಾಗಂಗಾದಾಸನ ಕುಟೀರ. ಕುಟೀರದ ಹಿಂಭಾಗದಲ್ಲಿ ಆಗ್ನೇಯಕ್ಕೆ ಸರಿದರೆ ಹಿಮ್ಮೆಟ್ಟುತ್ತಿರುವ ಪೇಶ್ವೆಯ ಪದಾತಿ ಸೈನ್ಯ.

ಮುಂದರಿಯು ರಾಣಿಯೊಡನೆಯೇ ಇದ್ದಳು. ಅಕ್ಕಪಕ್ಕದಲ್ಲಿ ರಘುನಾಥಸಿಂಹ ಮತ್ತು ದೇಶಮುಖರಿದ್ದರು. ಹಿಂಭಾಗದಲ್ಲಿ ಕುಮಾರ್ ಗುಲ್‌ಮಹಮ್ಮದ್ದನೂ ಮತ್ತು ಅಳಿದುಳಿದ ೨೦-೨೫ ಮಂದಿ ಕೆಂಪು ವಸ್ತ್ರಧಾರಿ ಸವಾರರೂ ಅವರೆಲ್ಲರನ್ನೂ ಹಿಂಬಾಲಿಸುತ್ತಿದ್ದರು. ಆಂಗ್ಲೇಯರು ಈ ದಳವನ್ನು ಸ್ವಲ್ಪ ಹೊತ್ತಿನಲ್ಲಿಯೇ ನಾಲ್ಕು ಕಡೆಯಿಂದಲೂ ಸುತ್ತುಗಟ್ಟಿದರು. ಆದರೆ ಅವರೆಲ್ಲರೂ ಗುಂಪಾಗಿದ್ದುಕೊಂಡೇ ಆ ಮುತ್ತಿಗೆಯನ್ನು ಎದುರಿಸುತ್ತಲೇ ಹೋಗುತ್ತಿದ್ದರು.

ಆದರೆ ರಾಣಿಯು ತನ್ನ ಎರಡು ಕೈಗಳಲ್ಲಿದ್ದ ಖಡ್ಗಗಳಿಂದ ಮುಂದೆ ದಾರಿ ಬಿಡಿಸುತ್ತಾ ಹೋಗುತ್ತಿದ್ದಂತೆಯೇ ಹಿಂದೆ ಅವಳ ವೀರ ಸವಾರರ ಸಂಖ್ಯೆಯು ನಶಿಸಿ ಹೋಗುತ್ತಾ ಬಂದು ಶೂನ್ಯವಾಯಿತು. ಅದೇ ಸಮಯಕ್ಕೆ ಸರಿಯಾಗಿ ತಾತ್ಯಾಟೋಪೆಯು ತನ್ನ ರುಹೇಲಿ ಮತ್ತು ಔಧಿನ ಸೈನ್ಯದೊಂದಿಗೆ ಆಂಗ್ಲೇಯರ ವ್ಯೂಹದ ಮೇಲೆ ಬಿದ್ದನು. ತಾತ್ಯನು ಎಂತಹ ಕಠಿಣವ್ಯೂಹವನ್ನೂ ಒಳಹೊಕ್ಕು ಭೇಧಿಸುವುದರಲ್ಲಿ ಘನಪಂಡಿತನಾಗಿದ್ದನು. ಆಂಗ್ಲೇಯರು ರಾಣಿಯ ಹಿಂಬದಿಯಲ್ಲಿದ್ದ ಅಲ್ಪ ಸಂಖ್ಯಾತ ಕೆಂಪು ಸಮ ವಸ್ತ್ರಧಾರಿ ಸಿಪಾಯಿಗಳನ್ನು ಸವೆಬಡಿಯಲು ತಮ್ಮ ಕೆಲವು ಸೈನಿಕರನ್ನು ಬಿಟ್ಟು ತಾತ್ಯಾವಿನ ದಳವನ್ನು ಎದುರಿಸಲು ಹೋದಳು. ಸೂರ್ಯನು ಮುಳುಗಲು ಇನ್ನೂ ಸ್ವಲ್ಪ ಹೊತ್ತಿದ್ದಿತು.

ರಾಣಿಯ ದಳದ ಅಂತಿಮ ಸವಾರನೂ ಮಡಿದು ಬಿದ್ದನು. ಅವಳೊಡನೆ ಕೇವಲ ನಾಲ್ಕು ಸರದಾರರೂ ಮತ್ತು ಅವರ ಖಡ್ಗಗಳೂ ಉಳಿದವು. ಅವಳನ್ನು ಹಿಂಬಾಲಿಸುತ್ತಾ ೧೦-೧೫ ಮಂದಿ ಸಶಸ್ತ್ರ ಆಂಗ್ಲೇಯ ಸವಾರರೂ, ಅವಳೆದುರಿಗೆ ಸಂಗೀನುಗಳನ್ನು ಹೊತ್ತು ಆಂಗ್ಲೇಯ ಪದಾತಿ ಸೈನಿಕರೂ ಯುದ್ಧಕ್ಕೆ ಸಿದ್ಧರಿದ್ದರು.

ರಾಣಿಯು ಹಿಂದಿರುಗಿ ನೋಡಿದಳು—ರಘುನಾಥಸಿಂಹ ಮತ್ತು ಗುಲ್‌ಮಹಮ್ಮದ್ದರು ಖಡ್ಗಗಳಿಂದ ಆಂಗ್ಲೇಯ ಸವಾರರನ್ನು ತರಿಯುತ್ತಾ ಬರುತ್ತಿದ್ದರು. ಒಂದೆಡೆ ರಾಮಚಂದ್ರ ದೇಶಮುಖನು ದಾಮೋದರರಾಯನನ್ನು ರಕ್ಷಿಸಿಕೊಂಡು ಹೋಗುವ ಚಿಂತೆಯಲ್ಲಿ ಹೊಡೆದಾಡುತ್ತಿದ್ದನು. ರಾಣಿಯು ದೇಶಮುಖನಿಗೆ ಸಹಾಯ ವನ್ನೀಡುವಂತೆ ಮುಂದರಿಗೆ ಸಂಜ್ಞೆಮಾಡಿದಳು. ನಂತರ ಸಂಗೀನುಗಳನ್ನು ಹೊತ್ತು ಬರುತ್ತಿದ್ದ ಪದಾತಿ ಸೈನಿಕರನ್ನು ಸ್ವಯಂ ಎದುರಿಸಿ ಎರಡು ಕೈಗಳಿಂದಲೂ ಖಡ್ಗ ಪ್ರಯೋಗ ಮಾಡುತ್ತಾ ಮಾರ್ಗವನ್ನು ಬಿಡಿಸಿಕೊಂಡು ಮುಂದೆಹೊರಟಳು. ಬ್ಬಬ

ಸಂಗೀನುದಾರನ ಹೊಡೆತವು ರಾಣಿಯ ವಕ್ಷಸ್ಥಳದ ಕೆಳಗೆ ತಾಗಿತು. ಒಡನೆಯೇ ಆ ವೈರಿಯನ್ನು ತನ್ನ ಕತ್ತಿಯಿಂದ ತುಂಡರಿಸಿದಳು. ಏಟೇನೋ ಗುರುತರವಾದುದು. ಆದರೆ ಕರುಳಿಗೆ ಏನೂ ಅಪಾಯವಾಗಲಿಲ್ಲ. ಗಾಯದಿಂದ ನೆತ್ತರು ಹರಿದೋಡಿತು. ರಾಣಿಯು "ಸ್ವರಾಜ್ಯಭವನದ ತಳಹದಿಯ ಕಲ್ಲನ್ನು ತಯಾರಿಸಲು ಹೋಗುತ್ತಿರುವೆನು" ಎಂದು ಯೋಚಿಸಿದಳು.

ಆ ಸಂಗೀನುದಾರನು ಮಡಿದುದನ್ನು ಕಂಡು ಮಿಕ್ಕವರೆಲ್ಲರೂ ಓಡಿಹೋದರು. ಮಾರ್ಗವು ಸುಲಭವಾಗಿ ರಾಣಿಯೂ ಅವಳ ಸಂಗಡಿಗರೂ ಮುಂದುವರಿದರು.

ರಘುನಾಥಸಿಂಹನು ಬಳಿಯಲ್ಲಿಯೇ ಇದ್ದನು. ರಾಣಿಯು "ಆಂಗ್ಲೇಯರು ನನ್ನ ದೇಹವನ್ನು ಮುಟ್ಟಬಾರದು" ಎಂದಳು.

ಗುಲ್‌ಮುಹಮ್ಮದ್ದನು ಈ ಮಾತನ್ನು ಕೇಳಿ ಅರ್ಥಮಾಡಿಕೊಂಡನು. ಆತನು ಇನ್ನೂ ತೀವ್ರವಾಗಿ ಯುದ್ಧ ಮಾಡಿದನು.

ಒಬ್ಬ ಆಂಗ್ಲೇಯನು ಮುಂದರಿಯ ಮೇಲೆ ಪಿಸ್ತೂಲನ್ನು ಹಾರಿಸಿದನು. ಅವಳ ಮುಖದಿಂದ "ಬಾಯಿಸಾಹೇಬ್ ನಾನು ಸತ್ತೆ. ನನ್ನ ದೇಹವನ್ನು........ಭಗವಾನ್" ಎಂಬ ಮಾತುಗಳು ಹೊರಬಿದ್ದುವು. ಕಡೆಯ ಮಾತನ್ನು ಹೇಳುತ್ತಲೇ ಅವಳ ದೃಷ್ಟಿಯನ್ನು ರಘುನಾಥಸಿಂಹನೆಡೆಗೆ ಹೊರಳಿಸಿದಳು.

ರಾಣಿಯು ಹಿಂದಿರುಗಿ ನೋಡಿದಳು. ರಘುನಾಥಸಿಂಹನಿಗೆ "ಅವಳನ್ನು ರಕ್ಷಿಸಿ. ಅವಳ ಶರೀರವನ್ನು ಶತ್ರುಗಳು ಮುಟ್ಟಬಾರದು" ಎಂದು ಹೇಳಿ ತನ್ನ ಕುದುರೆಯನ್ನು ತಿರುಗಿಸಿಕೊಂಡು ಆಂಗ್ಲೇಯರೊಡನೆ ಮಹತ್ತರವಾದ ಕತ್ತಿಯುದ್ಧವನ್ನು ಮಾಡಿದಳು. ಅನೇಕರು ಮಡಿದರು. ಮುಂದರಿಯನ್ನು ಹೊಡೆದವನೂ ಮಡಿದನು.

ರಘುನಾಥಸಿಂಹನು ತನ್ನ ಕುದುರೆಯಿಂದ ಧುಮುಕಿ ತನ್ನ ರುಮಾಲನ್ನು ಹರಿದು ಅದರ ತುಂಡಿನಿಂದ ಮುಂದರಿಯ ಶವವನ್ನು ತನ್ನ ಬೆನ್ನಿಗೆ ಕಟ್ಟಿಕೊಂಡು ಕುದುರೆಯ ಮೇಲೆ ಕುಳಿತು ಮುಂದಕ್ಕೆ ಹೊರಟನು.

ಗುಲ್‌ಮುಹಮ್ಮದ್ದನು ಇತರ ಆಂಗ್ಲೇಯ ಸವಾರರೊಂದಿಗೆ ಹೋರಾಡಿದನು. ರಾಣಿಯು ಸೋನಾರೇಖಾ ನಾಲೆಯ ಕಡೆಗೆ ಹೊರಟಳು. ದೇಶಮುಖನು ಅವಳೊಡನೆಯೇ ಹೊರಟನು.

ಕೇವಲ ನಾಲ್ಕೈದು ಮಂದಿ ಆಂಗ್ಲೇಯ ಸವಾರರು ಉಳಿದಿದ್ದರು. ಗುಲ್‌ಮುಹಮ್ಮದ್ದನು ಅವರನ್ನು ಮೋಸಗೊಳಿಸಿ ರಾಣಿಯೆಡೆಗೆ ಹೋದನು. ರಾಣಿಯು ಭರದಿಂದ ನಾಲೆಯ ದಡವನ್ನು ಸಮೀಪಿಸಿದಳು. ಕುದುರೆಯು ಮುಂದೆ ಹೊರಡಲು ಹಿಂಜರಿಯಿತು. ಸ್ವಲ್ಪವೂ ಅಲುಗಲಿಲ್ಲ. ರಾಣಿಯು ಕುದುರೆಯನ್ನು ಸಂತೈಸಿದಳು. ಎಷ್ಟೋ

ಪ್ರಯತ್ನಪಟ್ಟಳು. ಆದರೆ ಎಲ್ಲವೂ ವ್ಯರ್ಥವಾಯಿತು.

ಆ ವೇಳೆಗೆ ಆಂಗ್ಲೇಯ ಸವಾರರು ಅಲ್ಲಿಗೆ ಬಂದು ಸೇರಿದರು.

ಒಬ್ಬ ಪರಂಗಿಯವನು ಪಿಸ್ತೂಲನ್ನು ತೆಗೆದು ರಾಣಿಯ ಕಡೆಗೆ ಹಾರಿಸಿದನು. ಗೋಲಿಯು ಆಕೆಯ ಎಡ ತೊಡೆಗೆ ತಗುಲಿತು. ಆಕೆಯ ಕಂಠದಲ್ಲಿ ಥಳನೆ ಹೊಳೆಯುತ್ತಿದ್ದ ಕಂಠೀಸರವು ತನ್ನದಾಗಬಹುದೆಂಬ ದುರಾಸೆಯಿಂದ ಆ ಆಂಗ್ಲೇಯ ಸವಾರನು ಪಿಸ್ತೂಲನ್ನು ಹಾರಿಸಿದನು. ರಾಣಿಯು ತನ್ನ ಎಡಗೈಯ್ಯಲ್ಲಿದ್ದ ಕತ್ತಿಯನ್ನು ಬಿಸುಟು ಕುದುರೆಯ ಕತ್ತಿನ ಮೇಲಿನ ಕೂದಲನ್ನು ಹಿಡಿದುಕೊಂಡು ಮತ್ತೊಂದು ತೊಡೆ ಮತ್ತು ಕೈಯ್ಯಿನ ಸಹಾಯದಿಂದ ಕುದುರೆಯ ಮೇಲಿನಿಂದ ಬೀಳದಂತೆ ಸಂಬಾಳಿಸಿಕೊಂಡಳು. ಅಷ್ಟರಲ್ಲಿ ಆ ಸವಾರನು ಇನ್ನೂ ಸಮೀಪಕ್ಕೆ ಬಂದನು. ರಾಣಿಯು ತನ್ನ ಬಲಗೈಯ್ಯಲ್ಲಿದ್ದ ಕತ್ತಿಯಿಂದ ಅವನ ಪ್ರಾಣ ಹರಣಮಾಡಿದಳು. ಆತನನ್ನು ಅನುಸರಿಸಿ ಮತ್ತೊಬ್ಬ ಸವಾರನು ಮುಂದೆ ಬಂದನು.

ರಾಣಿಯು ಮುಂದೆ ಹೋಗುವುದಕ್ಕೋಸ್ಕರ ಹಿಮ್ಮಡಿಯಿಂದ ಕುದುರೆಯ ಪಕ್ಕೆಯನ್ನು ಒತ್ತಿದಳು.

ಎಷ್ಟು ಪ್ರಯತ್ನಿಸಿದರೂ ಕುದುರೆ ಅಲುಗದೆ ಹಿಂದಿನ ಎರಡು ಕಾಲುಗಳ ಮೇಲೆ ನಿಂತುಕೊಂಡಿತು. ರಾಣಿಯು ಕುದುರೆಯನ್ನು ಎಳೆಯ ಬೇಕಾಯಿತು. ಒಂದು ತೊಡೆಯು ನಿರ್ಬಲವಾಗಿ ಬಹು ವೇದನೆಗೊಳಗಾಗಿದ್ದಿತು. ನೆತ್ತರು ಪಕ್ಕೆಯಿಂದಲೂ ತೊಡೆಯ ಗಾಯದಿಂದಲೂ ಪ್ರವಹಿಸುತ್ತಿದ್ದಿತು.

ಗುಲ್ ಮುಹಮ್ಮದ್ದನು ಸವಾರನ ಮೇಲೆ ಬಂದು ಬಿದ್ದನು.

ಆದರೆ ಆ ಆಂಗ್ಲೇಯ ಸವಾರನು ಗುಲ್ ಮುಹಮ್ಮದ್ದನು ತನ್ನ ಮೇಲೆ ಬೀಳುವುದಕ್ಕೆ ಮೊದಲೇ ತನ್ನ ಕತ್ತಿಯಿಂದ ರಾಣಿಯ ತಲೆಗೆ ಪ್ರಹಾರ ಮಾಡಿದ್ದನು. ಅದು ಅವಳ ತಲೆಯ ಬಲಭಾಗಕ್ಕೆ ಬಿದ್ದು ಬಲಗಣ್ಣು ಹೊರ ಹೊಮ್ಮುವಂತೆ ಮಾಡಿತು. ಅಷ್ಟಾದರೂ ಆಕೆಯು ಆ ಘಾತುಕನ ಮೇಲೆ ಬಲವಾಗಿ ಪ್ರಯೋಗಿಸಿದಳು. ವೈರಿಯ ಹೆಗಲು ಕತ್ತರಿಸಿ ಹೋಯಿತು. ಗುಲ್ ಮುಹಮ್ಮದ್ದನು ಅವನ ಮೇಲೆ ಖಡ್ಗ ಪ್ರಯೋಗ ಮಾಡಿ ತುಂಡರಿಸಿದನು.

ಉಳಿದ ಮೂವ್ವರು ಆಂಗ್ಲೇಯ ಸವಾರರೊಡನೆ ಗುಲ್ ಮುಹಮ್ಮದ್ದನು ಕಾದಾಡಿ ಒಬ್ಬನನ್ನು ಗಾಯಪಡಿಸಿ ಮತ್ತೊಬ್ಬನ ಕುದುರೆಯನ್ನು ಕೊಂದನು. ಆ ಮೂವ್ವರೂ ಗಾಬರಿಗೊಂಡು ರಣರಂಗವನ್ನು ಬಿಟ್ಟು ಓಡಿ ಹೋದರು. ನಂತರ ಗುಲ್ ಮುಹಮ್ಮದ್ದನು ಹಿಂತಿರುಗಿ ನೋಡಿದಾಗ ರಾಮಚಂದ್ರ ದೇಶಮುಖನು ಕುದುರೆಯಿಂದ ಕೆಳಗೆ ಬೀಳುತ್ತಿದ್ದ ರಾಣಿಗೆ ಆಸರೆಕೊಟ್ಟು ನಿಂತಿದ್ದನು.

ಬೆಳಗ್ಗಿನಿಂದ ಆಯಾಸಗೊಂಡು ಕ್ಷುತ್ ಪಿಪಾಸೆಗಳಿಂದ ತೊಳಲಿ, ಧೂಳು ರಕ್ತ

ಗಳಿಂದ ತೊಯ್ದು ಹೋಗಿದ್ದ ಗುಲ್ ಮುಹಮ್ಮದ್ದನು ಪಶ್ಚಿಮ ದಿಕ್ಕಿಗೆ ತಿರುಗಿ "ಖುದಾ ಪಾಕ್ ಪರವರದಿಗಾರ್ ರಹಮ್ ರಹಮ್" ಎಂದು ಹೇಳಿದನು.

ಆ ಮೂಢನಂಬಿಕೆಯ ಯೋಧನ ಕಣ್ಣುಗಳಿಂದ ಕಣ್ಣೀರಿನ ಹೊಳೆಯು ಹರಿದು ಚಿಕ್ಕ ಮಗುವಿನಂತೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು.

ರಘುನಾಥಸಿಂಹ ಮತ್ತು ದೇಶಮುಖರು ರಾಣಿಯನ್ನು ಜಾಗರೂಕತೆಯಿಂದ ಕುದುರೆಯ ಮೇಲಿನಿಂದಿಳಿಸಿದರು. ಆವೇಶಭರಿತರಾಗಿ ಆ ಮೊಂಡ ಕುದುರೆಯನ್ನು ಹೊಡೆದರು. ಅದು ತನ್ನ ಅಶ್ವಶಾಲೆಯಿದ್ದ ಕಡೆಗೆ ಓಡಿಹೋಯಿತು.

ರಘುನಾಥಸಿಂಹನು ದೇಶಮುಖನನ್ನು ಕುರಿತು "ಒಂದು ಕ್ಷಣವೂ ವಿಳಂಬ ಮಾಡಕೂಡದು. ಬಹಳ ಜಾಗರೂಕತೆಯಿಂದ ಈಕೆಯನ್ನು ನಿನ್ನ ಕುದುರೆಯ ಮೇಲಿರಿಸಿಕೊಂಡು ಬಾಬಾ ಗಂಗಾದಾಸನ ಕುಟೀರದತ್ತ ನಡೆ, ಹೊತ್ತು ಮುಳುಗುವು ದರಲ್ಲಿದೆ" ಎಂದನು.

ದೇಶಮುಖನ ಕಂಠವು ರುದ್ಧವಾಯಿತು. ಬಾಲಕ ದಾಮೋದರರಾಯನು ತನ್ನ ತಾಯಿಗಾಗಿ ಗುಪ್ತಸ್ವರದಲ್ಲಿ ಅಳುತ್ತಿದ್ದನು.

ರಾಮಚಂದ್ರ ದೇಶಮುಖನು ಆತನನ್ನು ಸಂತೈಸುತ್ತಾ "ಅಳಬೇಡ ಕಂದಾ, ಒಳ್ಳೆಯ ಔಷಧಿಯನ್ನು ಕೊಟ್ಟು ಗುಣಪಡಿಸೋಣ" ಎಂದು ಹೇಳಿದನು.

ರಾಮಚಂದ್ರನು ರಘುನಾಥಸಿಂಹನ ಸಹಾಯದಿಂದ ರಾಣಿಯನ್ನು ಮೆಲ್ಲನೆ ತನ್ನ ಕುದುರೆಯ ಮೇಲೇರಿಸಿಕೊಂಡನು.

ರಘುನಾಥಸಿಂಹನು ಅಳುತ್ತಿದ್ದ ಗುಲ್‌ಮುಹಮ್ಮದ್ದನನ್ನು ಕುರಿತು "ಕುಮಾರ್ ಸಾಹೇಬ್, ಈ ದೌರ್ಬಲ್ಯದಿಂದ ಕೆಲಸವು ಇನ್ನೂ ಕೆಡುವುದು. ನಿಮ್ಮ ರಾಣಿಯು ಹೇಳಿದ ವಾಕ್ಯವನ್ನು ನೆನಪಿನಲ್ಲಿಟ್ಟುಕೊಳ್ಳಿ. ಇನ್ನೂ ಆಂಗ್ಲೇಯರು ಕೊಲ್ಲುತ್ತಾ ಮಡಿಯುತ್ತಾ ಓಡಿಯಾಡುತ್ತಿರುವರು. ಒಂದು ವೇಳೆ ಅವರೇನಾದರೂ ಇಲ್ಲಿಗೆ ಬಂದರೆ ರಾಣೀ ಸಾಹೇಬರ ಶರೀರದ ಗತಿಯೇನಾಗುವುದು ?" ಎಂದನು.

ಗುಲ್‌ಮುಹಮ್ಮದ್ದನು ಎಚ್ಚರಗೊಂಡು ತನ್ನ ರುಮಾಲಿನ ತುದಿಯಿಂದ ಕಣ್ಣೀರನ್ನೊರಸಿಕೊಂಡನು. ಗಂಟಲು ಒಣಗಿ ಹೋಗಿದ್ದಿತು. ಮುಂದೆ ಹೊರಡಲು ಸಂಜ್ಞೆಮಾಡಿದನು. ಅವರೆಲ್ಲರೂ ಜಾಗ್ರತೆಯಾಗಿ ಹೊರಟು ಬಾಬಾ ಗಂಗಾದಾಸನ ಕುಟೀರವನ್ನು ಸೇರಿದರು.

## ೮೯

ಖಿನ್ನವದನನಾದ ದಾಮೋದರರಾಯನನ್ನು ಒಂದೆಡೆ ಕುಳ್ಳಿರಿಸಿ ರಾಮಚಂದ್ರ

ರಾಯನು ತನ್ನ ಸಮವಸ್ತ್ರವನ್ನು ಹಾಸಿ ರಾಣಿಯನ್ನು ಅದರ ಮೇಲೆ ಮಲಗಿಸಿ ತನ್ನ ರುಮಾಲನ್ನು ಹರಿದು ಆಕೆಯ ಗಾಯಗೊಂಡ ತಲೆಗೆ ಪಟ್ಟಿಯನ್ನು ಕಟ್ಟಿದನು. ಮುಂದರಿಯ ಶವವನ್ನು ರಘುನಾಥಸಿಂಹನು ತನ್ನ ವಸ್ತ್ರದ ಮೇಲೆ ಒಂದೆಡೆ ಮಲಗಿಸಿದನು. ಗುಲ್‌ಮಹಮ್ಮದನು ಕುದುರೆಗಳನ್ನು ಸ್ವಲ್ಪ ದೂರ ಕರೆದುಕೊಂಡು ಹೋಗಿ ಯಾರಿಗೂ ಸುಲಭವಾಗಿ ಗೋಚರವಾಗದಂತೆ ಒಂದು ಮರದಡಿ ಕಟ್ಟಿದನು.

ಬಾಬಾ ಗಂಗಾದಾಸನು ಅವರನ್ನು ಗುರುತಿಸಿ "ಸೀತಾಸಾವಿತ್ರಿಗಳ ದೇಶದ ಮಹಿಳೆಯರಿವರು" ಎಂದನು.

ರಾಣಿಯು ನೀರಿಗಾಗಿ ಬಾಯನ್ನು ತೆರೆದಳು. ಗಂಗಾದಾಸನು ಒಡನೆಯೇ ಗಂಗಾಜಲವನ್ನು ತಂದು ರಾಣಿಗೆ ಕುಡಿಸಿದನು. ಆಗ ಆಕೆಗೆ ಸ್ವಲ್ಪ ಚೇತನವುಂಟಾಯಿತು.

ಪೀಡಿತ ಸ್ವರದಿಂದ ನಿಧಾನವಾಗಿ "ಹರಹರ ಮಹದೇವ್" ಎಂದಳು. ಮುಖವು ಬಳಲಿ ಬಿಳುಪೇರಿತು. ಮತ್ತೆ ಅಚೇತನಳಾದಳು.

ಬಾಬಾ ಗಂಗಾದಾಸನು ಪಶ್ಚಿಮ ದಿಕ್ಕಿನೆಡೆಗೆ ನೋಡಿ "ಇನ್ನೂ ಸ್ವಲ್ಪ ಬೆಳಕಿದೆ. ಹೆಚ್ಚು ಕಾಲಾವಕಾಶವಿಲ್ಲ. ಸ್ವಲ್ಪ ದೂರದಲ್ಲಿಯೇ ಒಂದು ಹುಲ್ಲಿನ ಮೆದೆಯಿರುವುದು. ಅದರ ಮೇಲೆಯೇ ಚಿತೆಯನ್ನೇರ್ಪಡಿಸಿ" ಎಂದನು.

ಮುಂದರಿಯ ಶವದತ್ತ ನೋಡಿ "ಈಕೆಯು ರಾಣೀಲಕ್ಷ್ಮೀಬಾಯಿಯೊಡನೆ ಅನೇಕ ಬಾರಿ ಈ ಕುಟೀರಕ್ಕೆ ಬಂದಿರುವಳು. ಇವಳಿಗೆ ಪ್ರಾಣಾಂತವಾಗಿದೆ" ಎಂದು ಹೇಳಿದನು.

ರಘುನಾಥಸಿಂಹನು ರುದ್ಧಕಂಠಿತನಾಗಿ "ಹಾಂ" ಎಂದನು.

ಅವಳ ಬಾಯಿಯಲ್ಲಿಯೂ ಗಂಗಾದಾಸನು ಕೆಲವು ತೊಟ್ಟು ಗಂಗಾಜಲವನ್ನು ಹಾಕಿದನು.

ರಾಣಿಗೆ ಪುನಃ ಸ್ವಲ್ಪ ಜ್ಞಾನವು ಬಂದಿತು. ರಘುನಾಥಸಿಂಹ ಮುಂತಾದವರಿಗೆ ಇದು ಸೂಕ್ಷ್ಮವಾಗಿ ತಿಳಿಯಿತು. ದಾಮೋದರರಾಯನೂ ಬಳಿಗೆ ಬಂದನು. ಅವನಿಗೆ ತನ್ನ ತಾಯಿಯು ಬದುಕಿಕೊಂಡಳೆಂದೂ ಪುನಃ ಎದ್ದು ನಿಲ್ಲುವಳೆಂದೂ ಭಾವನೆಯುಂಟಾಗಿ ಉತ್ಸುಕತೆಯಿಂದ ಎವೆಯಿಕ್ಕದೆ ನೋಡಿದನು.

ರಾಣಿಯ ಮುಖದಿಂದ ಅತ್ಯಂತ ಅಸ್ಪಷ್ಟವಾಗಿ "ಓಂ, ವಾಸುದೇವಾಯನಮಃ" ಎಂಬ ಶಬ್ದವು ಹೊರಟಿತು. ತದನಂತರ ಹೊರಟುದೆಲ್ಲವೂ ಅಸ್ಪಷ್ಟವಾಗಿದ್ದಿತು. ತುಟಿಗಳು ಅದುರುತ್ತಿದ್ದವು. ಅಲ್ಲಿದ್ದವರು ಕಿವಿಗೊಟ್ಟು ಕೇಳಲಾರಂಭಿಸಿದರು. ಆದರೆ ಕೇವಲ ಮೂರು ಅಸ್ಫುಟವಾದ ಶಬ್ದಗಳು ಮಾತ್ರ ಕೇಳಿಬಂದವು.

"ದ....ಹ....ತಿ....ನೈ....ನಂ....ಪಾ....ವ....ಕಃ"

ಅವಳ ಮುಖವು ಪ್ರದೀಪ್ತವಾಯಿತು.

ಸೂರ್ಯಾಸ್ತವಾಯಿತು. ಮುಳುಗುತ್ತಿದ್ದ ಸೂರ್ಯನು ಪಶ್ಚಿಮದಲ್ಲಿ ದಿಗಂತದಲ್ಲಿದ್ದನು. ಅವನ ಅಗಣಿತ ಕಿರಣಗಳು ಆಕಾಶವನ್ನೆಲ್ಲಾ ವ್ಯಾಪಿಸಿದ್ದವು.

ದೇಶಮುಖನು ವಿಲಪಿಸುತ್ತಾ ಹೇಳಿದನು. "ಝಾನ್ಸಿಯ ಸೂರ್ಯಾಸ್ತವಾಗಿ ಹೋಯಿತು."

ರಘುನಾಥಸಿಂಹನು ಶೋಕದಿಂದ ಪ್ರಲಾಪಿಸುತ್ತಾ ಅಶ್ರುಧಾರೆ ಹರಿಸಿದನು.

ದಾಮೋದರರಾಯನು ಚೀತ್ಕಾರ ಮಾಡಿದನು.

ಬಾಬಾ ಗಂಗಾದಾಸನು "ಪ್ರಕಾಶವು ಅನಂತವಾದುದು. ಅದು ಒಂದೊಂದು ಕಣವನ್ನೂ ಭಾಸಮಾನ ಮಾಡುತ್ತಿರುವುದು. ಪುನಃ ಉದಯವಾಗುವುದು. ಪುನಃ ಪ್ರತ್ಯೇಕ ಕಣವೂ ಮುಕುಳಿತವಾಗುವುದು" ಎಂದನು.

## ೯೦

ಬಾಬಾ ಗಂಗಾದಾಸನು ಅವರಿಗೆ ಜ್ಞಾನೋದಯ ಮಾಡುತ್ತಾ "ಝಾನ್ಸಿಯ ರಾಣಿಯು ಗತಿಸಿದುದನ್ನು ಅಸ್ತವಾಗಿ ಹೋಯಿತೆಂದು ಹೇಳುವಿರಾ! ಇದು ಕೇವಲ ನಿಮ್ಮ ಮೋಹ. ಅವಳು ಅಸ್ತವಾಗಲಿಲ್ಲ. ಆದರೆ ಅಮರಳಾಗಿ ಹೋದಳು. ಈ ಹೇಡಿತನವನ್ನು ತ್ಯಜಿಸಿ ಆ ಹುಲ್ಲಿನ ಬಣವೆಯ ಮೇಲೆ ಈ ಇಬ್ಬರು ದೇವಿಯರ ಶವಗಳ ದಹನ ಸಂಸ್ಕಾರಮಾಡಿ. ಆಂಗ್ಲೇಯರು ಇವರನ್ನು ಹುಡುಕುತ್ತಾ ಬರುತ್ತಿರಬಹುದು. ತ್ವರೆಮಾಡಿ" ಎಂದನು.

ರಘುನಾಥಸಿಂಹ ಮತ್ತು ದೇಶಮುಖರು ಸ್ವಲ್ಪ ಸಮಾಧಾನ ತಂದುಕೊಂಡರು.

ದೇಶಮುಖನು "ಬಣವೆಯು ದೊಡ್ಡದಾಗಿದೆಯೆ?" ಎಂದು ಕೇಳಿದನು.

ಬಾಬಾ ಗಂಗಾದಾಸನು "ಬಣವೆಯು ಚಿಕ್ಕದಾಗಿದೆ" ಎಂದು ಉತ್ತರವಿತ್ತನು.

ದೇಶಮುಖನು ಕಷ್ಟಪೂರ್ಣ ಸ್ವರದಿಂದ "ಝಾನ್ಸಿಯ ರಾಣಿಯ ಶವ ಸಂಸ್ಕಾರಕ್ಕೆ ಸೌದೆಯೂ ಕೂಡ ಸುಲಭವಾಗಿ ದೊರಕುತ್ತಿಲ್ಲ. ಹುಲ್ಲಿನಿಂದ ಹುಟ್ಟಿದ ಅಗ್ನಿಯು ಈ ಎರಡು ಶವಗಳನ್ನೂ ಕೇವಲ ಮೇಲೆ ಮಾತ್ರ ಸುಡುವುದು, ಬೆಳಗಾಗುತ್ತಲೇ ಶತ್ರುಗಳು ಇವರ ಅರ್ಧ ದಗ್ಧ ಶರೀರಗಳನ್ನು ಕಂಡು ನಗುವರು. ಬಹುಶಃ ಎಲ್ಲಿಯಾದರೂ ಬಿಸಾಡಲೂ ಬಹುದು" ಎಂದನು.

ಬಾಬಾ ಗಂಗಾದಾಸನು ತಲೆಯೆತ್ತಿ ತನ್ನ ಗುಡಿಸಲಿನತ್ತ ನೋಡಿ "ಈ ಕುಟೀರದಲ್ಲಿ ಬೇಕಾದಷ್ಟು ಸೌದೆಯಿದೆ. ಇದನ್ನು ಕೆಡವಿ ಅಂತ್ಯೇಷ್ಟಿಗೆ ಆರಂಭಮಾಡಿ" ಎಂದನು.

ರಘುನಾಥಸಿಂಹನು "ನಿಮ್ಮ ಕುಟೀರದ ಮರವೇ? ನೀವು ಕೃಪೆಮಾಡಿದರೆ...." ಎಂದು ಪ್ರಾರ್ಥಿಸಿದನು.

ಬಾಬಾ ಗಂಗಾದಾಸನು "ಏನು ?" ಎಂದು ಕೇಳಿದನು.

ರಘುನಾಥಸಿಂಹನು "ಪುನಃ ಕುಟೀರವನ್ನು ಕಟ್ಟಲು ನಿಮಗೆ ತೊಂದರೆಯಾಗುವುದು. ಆದುದರಿಂದ ತಾವು ಸ್ವಲ್ಪ ಕಾಣಿಕೆಯನ್ನು ಸ್ವೀಕರಿಸಬೇಕು" ಎಂದನು.

ಗಂಗಾದಾಸನು ನಸುನಕ್ಕು "ಈ ಮರವು ನನ್ನದಲ್ಲ. ಯಾರು ಮೊದಲು ನನಗೆ ಇದನ್ನು ಕೊಟ್ಟನೋ ಪುನಃ ಅವನೇ ಕೊಡುತ್ತಾನೆ. ಹೊತ್ತು ಮಾಡಬೇಡಿ, ಕುಟೀರವನ್ನು ಕೆಡವಿ" ಎಂದನು.

ದೇಶಮುಖನು "ಅದರೊಳಗಿರುವ ಸಾಮಾನುಗಳನ್ನು ಹೊರಗೆ ತೆಗೆಯಬೇಕು" ಎಂದನು.

ಬಾಬಾ ಒಳಗೆ ಹೋಗಿ ಒಂದು ಕಂಬಳಿ, ಸೋರೆಬುರುಡೆ, ಚಾಪೆ ಮತ್ತು ಲಂಗೋಟಿಗಳನ್ನು ಹೊರಗೆ ತಂದು "ಸಾಕು, ಮತ್ತೇನಿಲ್ಲ ತ್ವರೆಮಾಡಿ" ಎಂದನು.

ಎರಡು ಶವಗಳನ್ನು ಹೊರಗೆ ತಂದಿರಿಸಿ ದಾಮೋದರರಾಯನನ್ನು ಒಂದೆಡೆ ಕುಳ್ಳಿರಿಸಿ ಆ ಮೂವ್ವರು ಯೋಧರು ಕುಟೀರವನ್ನು ಕೆಡವಲಾರಂಭಿಸಿದರು. ಕ್ಷಣಾರ್ಧದಲ್ಲಿ ಕುಟೀರವನ್ನು ಕೆಡವಿ ಸೌದೆಯನ್ನು ಒಂದೆಡೆ ಜೋಡಿಸಿದರು.

ಬಣವೆಯ ಸ್ವಲ್ಪ ಹುಲ್ಲನ್ನು ಕುದುರೆಗಳಿಗೆ ಹಾಕಿ ಉಳಿದುದನ್ನು ಚಿತೆಯ ಮೇಲಿರಿಸಿದರು.

ರಾಣಿಯ ಕೊರಳಿನಲ್ಲಿದ್ದ ಕಂಠಿಯನ್ನು ತೆಗೆದು ದಾಮೋದರರಾಯನ ಬಳಿಯಿಟ್ಟರು. ಮುತ್ತಿನ ಒಂದು ಚಿಕ್ಕ ಕಂಠಿಯನ್ನು ಅವಳ ಕೊರಳಿನಲ್ಲಿಯೇ ಬಿಟ್ಟರು. ಹಾಗೆಯೇ ಅವಳ ಕವಚ ಮತ್ತು ಅಸ್ತ್ರವನ್ನು ಅಲ್ಲಿಯೇ ಬಿಟ್ಟರು.

ಚಿತೆಯನ್ನು ಸಜಾಯಿಸಿದನಂತರ ರಾಣಿ ಲಕ್ಷ್ಮೀಬಾಯಿ ಮತ್ತು ಮುಂದರಿಬಾಯಿಯರ ಶವಗಳನ್ನು ದೇಶಮುಖನು ಚಿತೆಯಮೇಲಿಟ್ಟು ಅಗ್ನಿ ಸಂಸ್ಕಾರ ಮಾಡಿದನು. ತನ್ನ ಮತ್ತು ರಘುನಾಥಸಿಂಹನ ಸಮವಸ್ತ್ರಗಳನ್ನು ಚಿತೆಯಮೇಲಿಟ್ಟರು. ಕ್ಷಣಾರ್ಧದಲ್ಲಿ ಚಿತೆಯು ಪ್ರಜ್ವಲಿತವಾಗಿ ಉರಿಯಲಾರಂಭಿಸಿತು.

ಆ ಕುಟೀರದ ನೆಲದಮೇಲೆ ರಕ್ತವು ಹರಿದಿದ್ದಿತು. ಅದನ್ನು ದೇಶಮುಖನು ತೊಳೆದನು. ಆದರೆ ಆ ರಕ್ತದ ಕಣಗಳು ಪೃಥ್ವಿಯಮೇಲೆ ಬರೆದಿಟ್ಟ ಇತಿಹಾಸವು ಶಾಶ್ವತವಾಗಿ ನಿಂತಿತು.

## ೯೧

ಸ್ವಲ್ಪ ದೂರದಲ್ಲಿ ಕುದುರೆಗಳ ಖುರಪುಟ ಧ್ವನಿಯು ಕೇಳಿಬಂತು. ಅದು ಆಂಗ್ಲೇಯರ ದಸ್ತೆಯದಾಗಿದ್ದಿತು.

ದೇಶಮುಖ—ರಾಣೀ ಸಾಹೇಬರನ್ನು ಹುಡುಕುತ್ತಾ ಶತ್ರುಗಳು ತಿರುಗಾಡುತ್ತಿರುವರು.

ರಘುನಾಥಸಿಂಹ—ನೀವು ದಾಮೋದರ ರಾಯನನ್ನು ಕರೆದುಕೊಂಡು ಒಡನೆಯೇ ಪಾರಾಗಿಹೋಗಿ.

ದೇಶಮುಖ—ಏನು ದಿವಾಣ ಸಾಹೇಬರೆ, ನೀವು ಝಾನ್ಸಿಯ ಕಡೆಗೆ ಹೋಗುವಿರಾ ?

ರಘು—ಝಾನ್ಸಿಯಲ್ಲಿ ಈಗ ನನಗೇನಿದೆ? ನಾನು ಈ ಸವಾರರೊಡನೆ ಹೋರಾಡಿ ಅವರನ್ನು ಕೊಂದು ಮಡಿಯುವೆನು. ಇವರು ಚಿತೆಯ ಬಳಿಗೆ ಬಂದು ಧೂಳೆಬ್ಬಿಸುವರು. ಹೊರಡಿ ಬೇಗನೆ ಹೊರಡಿ. ರಾತ್ರಿಯೆಲ್ಲಾದರೂ ಅಡಗಿದ್ದು ವಿಶ್ರಾಮ ಹೊಂದಿ.

ದೇಶಮುಖ—ಈ ಕಂಠೀಸರವನ್ನೇನು ಮಾಡಬೇಕು.?

ರಘುನಾಥ—ಯುದ್ಧದಲ್ಲಿ ಮಡಿದ ಯೋಧರ ಹೆಂಡಿರು ಮಕ್ಕಳಿಗೆ ಹಂಚಿಬಿಡಿ ಅಥವಾ ಏನನ್ನಾದರೂ ಮಾಡಿ.

ದೇಶಮುಖನು ದಾಮೋದರರಾಯನನ್ನು ಬೆನ್ನಿಗೆ ಕಟ್ಟಿಕೊಂಡು ಕುದುರೆಯನ್ನು ಹತ್ತಿ ಹೊರಟುಬಿಟ್ಟನು.

ರಘುನಾಥಸಿಂಹನು ಗುಲ್‌ಮುಹಮ್ಮದ್ದನನ್ನು ಕುರಿತು “ಕುಮಾರ್ ಸಾಹೇಬರೇ, ತಾವೂ ಹೊರಡಿ. ನನ್ನ ಕುದುರೆಯನ್ನು ಬಿಟ್ಟುಬಿಡಿ. ಅದನ್ನು ಯಾರಾದರೂ ಪೋಷಿಸಿಕೊಳ್ಳುವರು. ಕುದುರೆಯ ಬೆನ್ನಿನ ಮೇಲಿರುವ ನನ್ನ ಬಂದೂಕ ಮತ್ತು ಮದ್ದು ಗುಂಡುಗಳ ಚೀಲವನ್ನು ದಯವಿಟ್ಟು ತಂದುಕೊಡಿ” ಎಂದನು.

ಗುಲ್‌ಮುಹಮ್ಮದ್ದನು ಕುದುರೆಯ ಬಳಿಗೆ ಹೋಗಿ ಅಲ್ಲಿದ್ದ ತುಪಾಕಿ ಮತ್ತು ಮದ್ದುಗುಂಡುಗಳನ್ನು ತೆಗೆದುಕೊಂಡು ಎರಡು ಕುದುರೆಗಳನ್ನೂ ಲಗಾಮಿನ ಸಹಿತ ಬಿಟ್ಟುಬಿಟ್ಟನು.

ಗುಲ್‌ಮುಹಮ್ಮದ್ದನು ಬಂದೂಕ ಮುಂತಾದವುಗಳನ್ನು ಕೊಡುತ್ತಾ “ದಿವಾಣ ಸಾಹೇಬರೆ, ನಾನೆಲ್ಲಿಗೆ ಹೋಗಲಿ? ನಾನು ರಾಹತಗಡದಿಂದ ಹೊರಟಾಗ ೫೦೦ ಮಂದಿ ಪಠಾಣರಿದ್ದರು. ಈಗ ಒಬ್ಬನು ಉಳಿದಿದ್ದೇನೆ. ಒಬ್ಬಂಟಿಗನಾಗಿ ಎಲ್ಲಿಗೆ ಹೋಗಲಿ?

ನಾನೂ ಹೊಡೆದಾಡಿ ಸಾಯುತ್ತೇನೆ. ನನ್ನನ್ನು ಹೊರದೂಡಬೇಡಣ್ಣಾ" ಎಂದನು.

ರಘುನಾಥಸಿಂಹನು "ನೀವು ಜೀವಂತರಿದ್ದು ಈ ಪವಿತ್ರ ಎಲುಬು ಭಸ್ಮಗಳನ್ನು ಯಾವ ಆಂಗ್ಲೇಯನೂ ಮುಟ್ಟದಂತೆ ಕಾಪಾಡಬೇಕು. ನಾನು ಅತ್ಯಂತ ಅವಸರ ದಲ್ಲಿದ್ದೇನೆ. ಆಂಗ್ಲೇಯರು ರಸ್ತೆಯಲ್ಲಿ ಬರುತ್ತಿರಬಹುದು. ಅವರನ್ನು ಇಲ್ಲಿಗೆ ಬರುವ ಮುಂಚೆಯೇ ಎದುರಿಸಬೇಕು" ಎಂದು ಹೇಳಿ ತನ್ನ ಬಂದೂಕಕ್ಕೆ ಮದ್ದು ತುಂಬಿಸಿದನು.

ರಘುನಾಥಸಿಂಹನು ನಂತರ ಉನ್ಮತ್ತನಂತೆ ನಕ್ಕನು. ಗುಲ್ ಮುಹಮ್ಮದ್ದನು ಒಂದು ಕ್ಷಣ ಯೋಚಿಸಿ ಹೇಳಿದನು. "ಈ ಫಕೀರ್ ಸಾಹೇಬರು ಎಲುಬುಗಳ ರಕ್ಷಣೆಯನ್ನು ನೋಡಿಕೊಳ್ಳುವರು."

"ಫಕೀರ್ ಸಾಹೇಬರು ಮಾಡುವುದಿಲ್ಲ. ಬೇಕಾದರೆ ನೀವು ಮಾಡಬಹುದು" ಎಂದು ರಘುನಾಥಸಿಂಹನು ಉತ್ತರಿಸಿದನು.

ಹಾಗೆಯೇ ಆಗಲಿ. ನಾನು ಜೀವಂತನಿದ್ದು ಈ ಅಸ್ತಿಯನ್ನು ಕಾಪಾಡಿ ಅದರ ಮೇಲೊಂದು ಬೃಂದಾವನವನ್ನು ಕಟ್ಟುತ್ತೇನೆ."

"ನಿಮ್ಮ ಬಂದೂಕವನ್ನು ನನಗೆ ಕೊಡಿ, ಕುಮಾರ್ ಸಾಹೇಬ್" ಎಂದು ರಘುನಾಥಸಿಂಹನು ಪ್ರಸ್ತಾಪ ಮಾಡಿದನು.

ಗುಲ್ ಮುಹಮ್ಮದ್ದನು ಅವನ ಮಾತನ್ನು ಪ್ರವಾದಿಸಿ "ಈಗ ನಾನು ಕುಮಾರ್ ಸಾಹೇಬನಲ್ಲ. ನಾನೊಬ್ಬ ಫಕೀರ. ನನ್ನ ಹೆಸರು ಗುಲ್‌ಸಾಯಿ" ಎಂದು ಹೇಳಿ ತನ್ನ ಬಂದೂಕವನ್ನು ಕೊಟ್ಟುಬಿಟ್ಟನು.

"ಮದ್ದನ್ನು ಸ್ವಲ್ಪ ಬಂದೂಕಿಗೆ ತುಂಬಿಕೊಡಿ" ಎಂದು ರಘುನಾಥಸಿಂಹನು ಅನುರೋಧಿಸಿದನು.

"ಸಾಕಣ್ಣ, ಇನ್ನುಮೇಲೆ ಬಂದೂಕವನ್ನೇ ಆಗಲಿ ಅಥವಾ ಯಾವ ಆಯುಧ ವನ್ನೇ ಆಗಲಿ ಮುಟ್ಟುವುದಿಲ್ಲ. ಭಗವಂತನ ಸ್ಮರಣೆಯಲ್ಲಿ ನನ್ನ ಜೀವಮಾನವನ್ನು ಕಳೆಯುವೆನು."

ಗುಲ್ ಮುಹಮ್ಮದ್ದನು ಒಂದೆಡೆಗೆ ಹೋಗಿ ತನ್ನ ಸಮವಸ್ತ್ರವನ್ನು ತೆಗೆದು ಉರಿ ಯುತ್ತಿರುವ ಚಿತೆಯಲ್ಲಿ ಹಾಕಿ ಭಸ್ಮಮಾಡಿದನು. ತನ್ನ ರುಮಾಲಿನ ತುದಿಯನ್ನು ಹರಿದು ಕೌಪೀನವನ್ನಾಗಿ ಕಟ್ಟಿ ಉಳಿದ ಭಾಗವನ್ನು ಹೊದೆದುಕೊಳ್ಳಲು ಇಟ್ಟು ಕೊಂಡನು.

ನಂತರ ಕೇಕೇ ಹಾಕಿ ನಗುತ್ತಾ "ಅಣ್ಣಾ, ಈಗ ನಾನು ಪೂರ್ಣ ಸ್ವತಂತ್ರನಾದೆ" ಎಂದನು.

ರಘುನಾಥಸಿಂಹನು ಎರಡು ಬಂದೂಕಗಳನ್ನೂ ಮದ್ದುಗೋಲಿಗಳಿಂದ ಭರ್ತಿ

ಮಾಡಿ, ಮದ್ದಿನ ಚೀಲವನ್ನು ಬಗಲಿಗೆ ನೇತುಹಾಕಿಕೊಂಡು ಗುಲ್‌ಮಹಮ್ಮದ್ದನಿದ್ದೆಡೆ ಹೋಗಿ ಆತನನ್ನು ಕಂಡು ವಿಸ್ಮಿತನಾದನು.

"ನೀನಾದರೋ ಪಕ್ಕಾ ಫಕೀರನಾದೆ! ಆಗಲಿ, ಸಲಾಮ್, ಕುಮಾರ್‌ಸಾಯಿ ಸಾಹೇಬ್. ನಾನೇನಾದರೂ ತಪ್ಪು ಮಾಡಿದ್ದರೆ ಕ್ಷಮಿಸಿಬಿಡು."

"ಸಲಾಮ್."

ನಂತರ ರಘುನಾಥಸಿಂಹನು ಖುರ ಪುಟವು ಕೇಳಿಬರುತ್ತಿದ್ದ ದಿಕ್ಕನ್ನು ಹಿಡಿದು ಹೊರಟು ಒಂದೆಡೆ ಮರೆಯಾಗಿ ಆಸರೆಹೊಂದಿ ಮಲಗಿಕೊಂಡನು. ಆಂಗ್ಲೇಯರ ಅಶ್ವದಳವು ಬರುತ್ತಿರುವುದನ್ನು ನಿರೀಕ್ಷಣೆ ಮಾಡುತ್ತಿದ್ದನು.

ಢಂ! ಢಂ! ಎಂದು ಬಂದೂಕವನ್ನು ಚಲಾಯಿಸಿದನು.

ಢಂ! ಢಂ! ಎಂದು ಆಂಗ್ಲೇಯ ದಳದ ಉತ್ತರವು ದೊರಕಿತು.

ಬಹಳ ಹೊತ್ತಿನವರೆಗೆ ಸವಾರರನ್ನು ಒಬ್ಬೊಬ್ಬರನ್ನಾಗಿ ವಿಂಗಡಿಸಿ ಕೊಲ್ಲುತ್ತಿದ್ದು ಒಂದು ಗೋಲಿಯು ಆತನಿಗೆ ತಗುಲಿ ಸತ್ತು ಬಿದ್ದನು.

ಚಿತೆಯು "ಸುಯ್, ಸುಯ್!" ಎಂದು ಉರಿಯುತ್ತಿದ್ದಿತು.

ಗುಲ್‌ಮುಹಮ್ಮದ್ದನು ಚಿತೆಯಿಂದ ಸ್ವಲ್ಪ ದೂರದಲ್ಲಿ ಹೋಗಿ ತನ್ನ ರುಮಾಲನ್ನು ಕಂಬಳಿಯಂತೆ ಹೊದೆದುಕೊಂಡು ಮಲಗಿಕೊಂಡನು.

ಬಹಳ ದಣಿದಿದ್ದನಾದುದರಿಂದ ನಿದ್ದೆಯು ಜಾಗ್ರತೆಯಾಗಿ ಹತ್ತಿತು. ಮುಂಜಾನೆ ಎಚ್ಚರವಾದಾಗ ಕಣ್ತೆರೆದು ನೋಡಿದಾಗ ಚಿತೆಯಿದ್ದ ಸ್ಥಾನದಲ್ಲಿ ಬೆಂದುಹೋಗಿದ್ದ ಅಸ್ತಿಗಳೂ ಬೂದಿಯೂ ಕಾಣಿಸಿದವು.

ಅವನ ಬಾಯಿಯಿಂದ "ಓಹೊ! ರಾಣಿ ಸಾಹೇಬರ ಮತ್ತು ಆ ಸುಂದರ ಹುಡುಗಿಯ ಈ ಮೂಳೆಗಳು ಮಾತ್ರ ಉಳಿದುಕೊಂಡಿರುವುವು" ಎಂಬ ಮಾತುಗಳು ಹೊರಟವು.

ಒಡನೆಯೆ ಅವನ ಮನವು ನುಡಿಯಿತು "ಅದೆಂದಿಗೂ ಆಗದು, ಆಕೆಯು ಸತ್ತಿಲ್ಲ, ಸಾಯುವುದೂ ಇಲ್ಲ. ಆ ಶವಕ್ಕೆ ಇನ್ನೂ ಪ್ರಾಣವಿರುವುದು."

ಚಿತೆಯು ಆರಿ ತಣ್ಣಗಾದ ಮೇಲೆ ಗುಲ್‌ಮುಹಮ್ಮದನು ಆ ಸ್ಥಾನದಲ್ಲಿ ಒಂದು ಚಿಕ್ಕ ಬೃಂದಾವನವನ್ನು ಕಟ್ಟಿ ಅಲ್ಲಿಯೇ ದೊರಕಿದ ಹೂವುಗಳಿಂದ ಅದನ್ನು ಅಲಂಕರಿಸಿದನು.

ಆಂಗ್ಲೇಯರ ದಳವೊಂದು ರಾಣಿಯನ್ನು ಹುಡುಕುತ್ತಾ ಆ ಸ್ಥಳಕ್ಕೆ ಬಂದಿತು.

ಆಗತಾನೆ ಕಟ್ಟಿದ ಬೃಂದಾವನವು ಇನ್ನೂ ಪೂರ್ತಿಯಾಗಿ ಒಣಗಿರಲಿಲ್ಲ. ಆ ದಳದ ಮುಖ್ಯಾಧಿಕಾರಿಗೆ ಕುತೂಹಲವುಂಟಾಗಿ ಗುಲ್‌ಮುಹಮ್ಮದ್ದನನ್ನು ಕುರಿತು "ಇದು ಯಾರ ಸಮಾಧಿ, ಸಾಯಿ ಸಾಹೇಬ್ ?" ಎಂದು ಕೇಳಿದನು. ಗುಲ್‌ಮಹ

ಮ್ಮದ್ದನು "ನಮ್ಮ ಪೀರ್‌ಸಾಹೇಬರದು. ಅವರೊಬ್ಬ ಮಹಾಶಕ್ತಿವಂತರು" ಎಂದು ಉತ್ತರವಿತ್ತನು.

ಸಮಾಪ್ತ

# ಪರಿಶಿಷ್ಟ

೧

ಅನೇಕ ದಿನಗಳವರೆಗೆ ರಾಣಿಯ ದೇಹಾಂತವಾದ ವಿಷಯವು ಪತ್ತೆಯಾಗಲಿಲ್ಲ. ವಿಷಯವು ತಿಳಿದ ಮೇಲೆ ಜನರಲ್ ರೋಜನು "ಅವರೆಲ್ಲರಲ್ಲಿಯೂ ಈಕೆಯೇ ಸರ್ವ ಶ್ರೇಷ್ಠಳು ಮತ್ತು ಸರ್ವೋತ್ಕೃಷ್ಟ ವೀರಳು" ಎಂದು ಶ್ಲಾಘಿಸಿದನು. (She was the best and the bravest of them all).

ಜೂನ್ ೧೮ ನೇ ತಾರೀಖು ಸೂರ್ಯಾಸ್ತಕ್ಕೆ ಮುನ್ನವೇ ರಾವ್ ಸಾಹೇಬನ ಸೈನ್ಯ ಸ್ಥಾನಗಳನ್ನು ಆಂಗ್ಲೇಯರು ವಶಪಡಿಸಿಕೊಂಡರು. ಕೆಲವು ಕಾಲದವರೆಗೆ ತಾತ್ಯಾಟೋಪೆಯು ದುಃಸ್ಥಿತಿಯನ್ನು ಸರಿಪಡಿಸಲು ಅತ್ಯಂತ ಪ್ರಯಾಸಪಟ್ಟನು. ಆದರೆ ಅಂತ್ಯದಲ್ಲಿ ರಣಕ್ಷೇತ್ರವನ್ನು ತ್ಯಜಿಸಬೇಕಾಯಿತು. ರಾವ್‌ಸಾಹೇಬನು ಬೈತಿಟ್ಟುಕೊಂಡು ಸಾಧುವೇಷದಲ್ಲಿ ಅಲೆದಾಡುತ್ತಾ ನಾಲ್ಕು ವರ್ಷಗಳ ನಂತರ ಕೈಸೆರೆ ಸಿಕ್ಕಿದನು. ಅವನನ್ನು ಬಿಟ್ಠೂರಿನಲ್ಲಿ ಗಲ್ಲಿಗೇರಿಸಿದರು. ಆತನ ಸಂಪೂರ್ಣ ಜೀವನ ದಲ್ಲಿ ಆತನ ಅಂತ್ಯವೇ ಮಹತ್ವ ಪೂರ್ಣವುಳ್ಳದಾಗಿದ್ದಿತು. ಆಂಗ್ಲೇಯರ ಮುಯ್ಯಿ ತೀರಿಸಿಕೊಳ್ಳುವ ಆಕಾಂಕ್ಷೆಯು ಅವನನ್ನು ಬಿಟ್ಠೂರಿನಲ್ಲಿ ಗಲ್ಲಿಗೇರಿಸಬೇಕೆಂದಿದ್ದಿತು. ತಾತ್ಯಾಟೋಪೆಯು ಯಾವಾಗಲೂ ಸೋಲನ್ನು ಒಪ್ಪಿಕೊಳ್ಳಲಿಲ್ಲ. ಆತನು ಲಕ್ಷ್ಮೀ ಬಾಯಿಯ ರಾಜನೀತಿ, ಆದರ್ಶ ಮತ್ತು ರಣಪಾಂಡಿತ್ಯದ ನಿಜ ಅನುಚರನೂ ಉತ್ತ ರಾಧಿಕಾರಿಯೂ ಆಗಿದ್ದನು. ಆಂಗ್ಲೇಯರು ೧೮೫೮ ರ ಅಂತ್ಯದವರೆಗೆ ಹಿಂದೂಸ್ಥಾನ ವನ್ನೆಲ್ಲಾ ತಮ್ಮ ಸೈನ್ಯವೆಂಬ ಗಾಣದಲ್ಲಿ ಹಾಕಿ ಅರೆದರೂ ಆತನು ವಿದ್ಯುತ್ತಿನಂತೆ ಇಲ್ಲಿ ಹಾರಿ, ಅಲ್ಲಿ ತೋರಿ, ಅವರಿಗೆ ಕಣ್ಣು ಮುಚ್ಚಾಲೆ ಆಟವಾಡಿಸಿದನು. "ಇಷ್ಟೆಲ್ಲಾ ಸೋಲುಗಳುಂಟಾದರೂ ತಾನು ಪುನಃ ದೇಶವನ್ನು ಎಚ್ಚರಗೊಳ್ಳಿಸಿ ನಿಲ್ಲಿಸುವೆನು ಎಂದು ತಾತ್ಯನು ವಿಶ್ವಾಸ ಹೊಂದಿದ್ದನು. ಆದರೆ ಈ ಭಾಗ್ಯ ಹೀನ ದೇಶದಲ್ಲಿ, ಹಿಂದಿನಿಂದ ನಡೆದು ಬರುತ್ತಿದ್ದಂತೆ, ರಾಜಪುಟಾಣದ ತಾತ್ಯನ ಮಿತ್ರ ರಾಜನೊಬ್ಬನು ವಿಶ್ವಾಸ ಘಾತುಕನಾಗಿ ಅವನನ್ನು ಸೆರೆಹಿಡಿಸಿದನು. ತಾತ್ಯಾಟೋಪೆಯನ್ನು ೧೮೫೯ರಲ್ಲಿ ಶಿವ ಪುರಿಯಲ್ಲಿ ಗಲ್ಲಿಗೇರಿಸಲಾಯಿತು.

ತಾತ್ಯನ ಮರಣವು ಅವನ ಜೀವನಕ್ಕಿಂತಲೂ ಹೆಚ್ಚು ಜಾಜ್ವಲ್ಯ ಮಾನವಾಗಿ ದ್ದಿತು. ಗಲ್ಲಿಗೇರಿಸುವಾಗ ಆತನು ಯೋಗಿಯಂತೆ ಶಾಂತ ಪೂರ್ಣನಾಗಿದ್ದನು. "ನಾನು ಮಾಡಿದುದೆಲ್ಲವೂ ನನ್ನ ಪ್ರಭು ಪೇಶ್ವೆಯ ಆಜ್ಞಾನು ಪರವಾಗಿದ್ದಿತೇ ಹೊರತು ನಾನಾವ

ಕೆಡುಕನ್ನೂ ಮಾಡಲಿಲ್ಲ" ಎಂದು ಹೇಳಿದನು. ನಾನಾಸಾಹೇಬನ ಪತ್ತೆ ಹಚ್ಚಲಾಗಲಿಲ್ಲ. ನವೆಂಬರು ಮೊದಲನೆಯ ತಾರೀಖು, ೧೮೫೮ರಲ್ಲಿ, ವಿಕ್ಟೋರಿಯಾ ರಾಣಿಯ ಪ್ರಸಿದ್ಧ ಪತ್ರಿಕೆಯು ಘೋಷಿತವಾಯಿತು. ಬಾಂದಾವಿನ ನವಾಬನು ಆತ್ಮ ಸಮರ್ಪಣೆ ಮಾಡಿಕೊಂಡು ಶರಣಾಗತನಾಗಲು ಆತನಿಗೆ ನಿವೃತ್ತಿ ವೇತನವು ದೊರಕಿತು. ಕಂಪೆನಿಯ ಕೇವಲ ಕೆಲವು ಆಂಗ್ಲೇಯ ಬಂಡವಾಳಗಾರ ಮತ್ತು ವ್ಯಾಪಾರಿಗಳ ರಾಜ್ಯವು ಸಮಾಪ್ತಗೊಂಡು ಈ ಪುರಾತನ ದೇಶವು ನೂತನ ಇಂಗ್ಲೆಂಡಿನ ಸಮಗ್ರ ಬಂಡವಾಳಗಾರರ ಕೇಂದ್ರವಾಗಿ ಶಾಸನ ರೂಢಿಯಾಗಿ ಪರಿಗಣಿತವಾಯಿತು.

ಝಾನ್ಸಿಯ ಹೃದಯದಲ್ಲಿ ಝಾನ್ಸಿಯ ರಾಣಿಯ ರಾಜ್ಯವು ಶಾಶ್ವತವಾಗುತ್ತಿದ್ದಿತು—ಲಾವಣಿಗಳಲ್ಲಿ, ಹಳ್ಳಿಗಳಲ್ಲಿ, ಶಹರುಗಳಲ್ಲಿ ಕೂಲಿಕಾರರೂ ರೈತಾಪಿಜನರೂ ಅದರ ಸತ್ಯಾಂಶವನ್ನು ಪ್ರಕಟಿಸುತ್ತಲಿದ್ದರು. ಅವರ ಒಂದು ಸ್ಮೃತಿಯು ಝಾನ್ಸಿಯ ನಗರದಲ್ಲಿ ಈಗಲೂ ವಾಡಿಕೆಯಲ್ಲಿದೆ—ಹೋಲಿ ಹಬ್ಬದ ದಿನ ಕಾಮದಹನವಾದ ಮಾರನೆಯ ದಿನ, ಪ್ರಥಮೆಯನ್ನು ಸೂತಕದ ದಿನವೆಂದು ಅನುಸರಿಸುತ್ತಾರೆ.

ಒಂದು ವೇಳೆ ಹೈದರಾಬಾದಿನ ನಿಜಾಮನೂ, ಗವಾಲಿಯರಿನ ಸಿಂಧ್ಯನೂ ಆಂಗ್ಲೇಯರ ಪಕ್ಷವನ್ನು ವಹಿಸದಿದ್ದಿದ್ದರೆ ಆಂಗ್ಲೇಯರು ೧೮೫೮ ರ ನಂತರ ಈ ದೇಶದಲ್ಲಿ ನಿಲ್ಲಲು ಅಸಾಧ್ಯವಾಗುತ್ತಿದ್ದಿತು.

ಅವರು ಆಗ ಹೊರಟು ಹೋಗಿದ್ದರೆ ತದನಂತರ ಇಲ್ಲೇನಾಗುತ್ತಿದ್ದಿತು? ಅದು ಈ ದೇಶದ ವಿವೇಕಿ ಅವಿವೇಕಿಗಳಿಗೆ ಒಂದು ದೊಡ್ಡ ಸಮಸ್ಯೆಯಾಗುತ್ತಿದ್ದಿತು.

ಸೈನ್ಯಕ್ಕೆ ಚುನಾಯಿತರಾದ ಹಿಂದೂಸ್ಥಾನೀಯರನ್ನು ಮಾತ್ರ ಭರ್ತಿಮಾಡಿಕೊಳ್ಳಬೇಕು, ರಾಜ್ಯಭಾರದ ಉನ್ನತ ಪದವಿಗಳನ್ನು ಅವರಿಂದ ದೂರಮಾಡಬೇಕು, ದೇಶದ ಜನರನ್ನು ನಿಶ್ಯಸ್ತ್ರರನ್ನಾಗಿ ಮಾಡಿ ಪಂಜರದಲ್ಲಿನ ಮೃಗಪಕ್ಷಿಗಳಂತೆ ಪ್ರದರ್ಶಿಸಬೇಕು ಎಂಬುದು ಆಂಗ್ಲೇಯರಿಗೆ ವಿದಿತವಾಯಿತು.

ಆದರೆ ರಾಜನವಾಬರನ್ನು ತಮ್ಮ ಹತೋಟಿಯಲ್ಲಿಟ್ಟುಕೊಳ್ಳುವುದು ಅತ್ಯವಶ್ಯಕವೆಂದು ಅವರಿಗೆ ಅರಿವಾಯಿತು.

ಹಿಂದೂಸ್ಥಾನಕ್ಕೆ ಮಹೋಪಕಾರ ಮಾಡಿದಂತೆ ದತ್ತು ಸ್ವೀಕಾರವನ್ನು ಪರಿಗಣಿಸಿ ಧಾರ್ಮಿಕ ಸ್ವಾತಂತ್ರ್ಯವನ್ನು ಒಪ್ಪಿಕೊಂಡರು.

ಝಾನ್ಸಿಯ ರಾಣಿ, ತಾತ್ಯಾಟೋಪೆ, ಬಹದ್ದೂರ್‌ಶಹ ಇತ್ಯಾದಿಗಳನಂತರ ಜನಿಸಿದವರನೇಕರು ಅಮರವಾದ ಭಾರತೀಯ ಆತ್ಮದೊಂದಿಗೆ ತಮ್ಮ ಅಖಂಡ ಕೆಲಸವನ್ನು ಜರುಗಿಸುತ್ತಿರುವರು. ಅವರಲ್ಲಿ ಕೇವಲ ಕೆಲವರ ಹೆಸರನ್ನು ಮಾತ್ರ ಉದಾಹರಣೆಯಾಗಿ ಹೇಳಬಹುದು—ರಾಮಕೃಷ್ಣ ಪರಮಹಂಸ, ಸ್ವಾಮಿ ದಯಾನಂದ, ಸ್ವಾಮಿ ವಿವೇಕಾನಂದ, ಮಹಾತ್ಮಾ........ಇನ್ನೂ.......ಹೀಗೆಯೇ........

೨

ಝಾನ್ಸಿಯಲ್ಲಿ ಯಜ್ಞೋಪವೀತದ ಆಂದೋಲನವು ಘೋರ ರೂಪವನ್ನು ಹೊಂದುವುದರಲ್ಲಿದ್ದಿತು. ಆದರೆ ಬಿಟ್ಟೂರಿನ ನೆಂಟರೆದುರಿಗೆ ಸಂಕೋಚಕ್ಕೊಳಪಟ್ಟು ರಾಜಾ ಗಂಗಾಧರರಾಯನು ಸ್ವಲ್ಪ ಮೃದುವಾದನು. ಗ್ಲಾನಿಯುತರು ಯಜ್ಞೋಪವೀತವನ್ನು ಧರಿಸಿದ್ದರು. ಮತ್ತು ಆದರ ಮೇಲೆ ಆಣೆಯಿಟ್ಟು ಹೊಡೆದಾಡಲು ಸಿದ್ಧರಿದ್ದರು. ಉಪನ್ಯಾಸದಲ್ಲಿ ಜಾತಿಯ ಹೆಸರನ್ನು ಕೊಟ್ಟಿಲ್ಲ.

೩

ಪಜನೇಶನು ಯಾವ ಸ್ತ್ರೀಯ ಪ್ರೇಮಕ್ಕೆ ವಶೀಭೂತನಾಗಿ ಹೋಗಿದ್ದನೋ ಅವಳ ಜಾತಿಯನ್ನು ತನ್ನ ಕವಿತೆಯಲ್ಲಿ ಬರೆದಿದ್ದನು. ಆ ಛಂದವು ಕವಿಯ ಸ್ವಚ್ಛಂದತೆ ಮತ್ತು ಆ ಸಮಯದ ಪರಿಸ್ಥಿತಿಯ ದ್ಯೋತಕವಾಗಿದೆ. ಈ ಛಂದವು ಮೂಲಗ್ರಂಥದಲ್ಲಿ ಹಿಂದೀಭಾಷೆಯಲ್ಲಿ ಬರೆಯಲ್ಪಟ್ಟಿದೆ.

೪

ಹೃದಯೇಶನು ತನ್ನ ಸ್ವಹಸ್ತದಿಂದ ಬರೆದಂತಹ ಪೂರಾ ಕವಿತೆಯು ಶ್ರೀ ಭಗವಾನ್ ದಾಸ್ ಸೇಠರಿಂದ ಕೊಡಲ್ಪಟ್ಟು ಮೂಲಗ್ರಂಥಕರ್ತರ ಬಳಿಯಿದೆ. ಇದನ್ನು ಮೂಲ ಗ್ರಂಥದಲ್ಲಿ ಹಿಂದೀ ಭಾಷೆಯಲ್ಲಿ ಬರೆದಿದೆ.

೫

ನಾರಾಯಣಶಾಸ್ತ್ರಿಯ ಪ್ರಿಯನಾಯಕೆ ಛೋಟಿಯ ನಿಜವಾದ ಹೆಸರು 'ಮಛರಿಯಾ' ಎಂದು ಜನರು ಹೇಳುತ್ತಾರೆ. ಉಪನ್ಯಾಸದಲ್ಲಿ ಬಂದಿರುವ ಹೆಸರುಗಳೆಲ್ಲವೂ ವಾಸ್ತವಿಕವಾದುವು. ಕೇವಲ ಈ ಮಛರಿಯಾ ಎಂಬ ಹೆಸರನ್ನು ಮಾತ್ರ ಬದಲಾಯಿಸಿ ಛೋಟಿ ಎಂಬ ಹೆಸರಿಡಲಾಗಿದೆ. ಝಾನ್ಸಿಯ ಜನ ಪರಂಪರೆಯಲ್ಲಿ ನಾರಾಯಣಶಾಸ್ತ್ರಿಯ ತಂತ್ರಬಲವು ಬಹುಸಂಕೇತ ಪೂರ್ಣವಾದ ಪರಿಣಾಮವನ್ನುಂಟುಮಾಡಿದೆ. ಒಂದು ದಿನ ನಾರಾಯಣ ಶಾಸ್ತ್ರಿಯು ಕಾಳೀ ಪೂಜೆಮಾಡಿ ಮಾಂಸ ಮತ್ತು ಮದ್ಯವನ್ನು ಸೇವಿಸಬೇಕೆಂದು ಸಜ್ಜು ಮಾಡಿಕೊಂಡಿದ್ದಾಗ ರಾಜಾ ಗಂಗಾಧರರಾಯನು ಪರೀಕ್ಷೆ ಮಾಡುವುದಕ್ಕೋಸ್ಕರ ಅಲ್ಲಿಗೆ ಬಂದನು. ರಾಜನು

"ಸೀಸೆಯಲ್ಲೇನಿದೆ ?" ಎಂದನು.

ಶಾಸ್ತ್ರಿಯು "ಹಾಲು" ಎಂದು ಉತ್ತರವಿತ್ತನು.

"ಬಟ್ಟಲಿನಲ್ಲೇನಿದೆ ಶಾಸ್ತ್ರೀ ಜೀ ?"

"ಗುಲಾಬಿಯ ಹೂವು."

ರಾಜನು ಸೀಸೆಯನ್ನೂ ಬಟ್ಟಲನ್ನೂ ಪರೀಕ್ಷಿಸಲು ಸೀಸೆಯಲ್ಲಿ ಹಾಲು ಬಟ್ಟಲಲ್ಲಿ ಗುಲಾಬಿ ಹೂವು ಇದ್ದಿತು. ಜನ ಪರಂಪರೆಯು ೬೦ ವರ್ಷಗಳ ಅಂತರದಲ್ಲಿ ಒಂದು ವಾಸ್ತವ್ಯಕ್ಕೆ ಈ ರೂಪವನ್ನು ಕೊಟ್ಟು ತಮ್ಮ ಸ್ವಾಭಾವಿಕವಾದ ಪ್ರಶಂಸೆ ಅಲ್ಲದೆ ಲೋಕಾ

ಚಾರಕ್ಕೆ ವಿರುದ್ಧವಾದ ಕೃತ್ಯವನ್ನು ಅವರು ತಮ್ಮ ಕಥೆಗಳಲ್ಲಿ ನಿರೂಪಣೆಮಾಡಿದ್ದರೆ ಅದನ್ನು ಅರ್ಥಮಾಡಿಕೊಳ್ಳುವುದರಲ್ಲಿ ಕಷ್ಟವೇನಿರಕೂಡದು.

೬

ಗಂಗಾಧರರಾಯನು ಅತ್ಯಂತ ಕೋಪಿಷ್ಠನು. ಅವನ ಅತ್ಯಾಚಾರಗಳ ವಿಷಯವಾಗಿ ಅನೇಕ ಕಥೆಗಳು ಪ್ರಸಿದ್ಧವಾಗಿವೆ. ಆದರೂ ಕೂಡ ರಾಣೀ ಲಕ್ಷ್ಮೀಬಾಯಿಯಿಂದಾಗಿ ಆ ಅತ್ಯಾಚಾರಗಳೆಲ್ಲವೂ ಬಹು ಸೌಮ್ಯರೂಪವನ್ನು ತಾಳಿದ್ದುವು. ಮತ್ತು ಈಗಲೂ ಹಾಗೆಯೇ ಇವೆ.

೭

ಝಾನ್ಸಿಯ ಮಹಾರಾಷ್ಟ್ರರಲ್ಲಿ ಅರಶಿನ ಕುಂಕುಮದ ಉತ್ಸವವು ಬಹು ವಿಜೃಂಭಣೆಯಿಂದ ನಡೆಯುತ್ತಿದ್ದಿತು. ಸಾಧಾರಣ ಜನತೆಯು ಇದರಲ್ಲಿ ಭಾಗವಹಿಸುತ್ತಿದ್ದಿತು. ಈಗಲೂ ಉತ್ಸವವು ನಡೆದರೂ ವರ್ತಮಾನಕಾಲದ ಜನಜೀವನವು ಬಹುವಾಗಿ ಬದಲಿಸಿರುವುದರಿಂದ ಹಿಂದಿನಷ್ಟು ವಿಜೃಂಭಣೆಯಿಲ್ಲ. ರಾಣಿ ಲಕ್ಷ್ಮೀಬಾಯಿಯು ಈ ಉತ್ಸವವನ್ನು ಎಷ್ಟು ವೈಭವದಿಂದ ನಡೆಸುತ್ತಿದ್ದಳೆಂಬುದು ಆಕೆಯ ಸಮಕಾಲೀನ ವಿಷ್ಣುರಾವ್‌ಗೋಡಶೆಯ "ಮಾಝಾಪ್ರವಾಸ್" ಎಂಬುದರಲ್ಲಿ ವರ್ಣಿತವಾಗಿದೆ.

೮

೧೮೦೨ ರಲ್ಲಿ ಆಂಗ್ಲೇಯರೊಂದಿಗೆ ಪೇಶ್ವೆಯು ಮಾಡಿಕೊಂಡ ಸಂಧಿಯನ್ನು ಫಾರಸನೀಸ್ ತನ್ನ ಪುಸ್ತಕದಲ್ಲಿ ಉಲ್ಲೇಖಿಸಿದ್ದಾನೆ.

೯

ಬಗ್ಗೀದಾವೂಜು ಜಾತಿಯಲ್ಲಿ ಅಕ್ಕಸಾಲೆ. ಆತನು ಝಾನ್ಸಿಯ ಗಂಧೀಗರ್ ಮೊಹಲ್ಲೆಯಲ್ಲಿ ವಾಸಿಸುತ್ತಿದ್ದನು. ನತ್ಥೇಖಾನನು ದಂಡೆತ್ತಿ ಬಂದುದನ್ನು ಸಮರ್ಥಿಸಿ ಒಂದು ರಾಯಸವನ್ನು ಬರೆದಿದ್ದಾನೆ. ಅದು ಶ್ರೀ ನಾರಾಯಣದಾಸ್ ಶೃಂಗೀಕೃಷ್ಣರ ಬಳಿ ಇದೆ. ಅದು ಮೂಲಗ್ರಂಥಕರ್ತರಿಗೆ ದೊರಕಿ ಮಂಜೂ ಛಂದಸ್ಸಿನಲ್ಲಿ ಬರಯಲಾಗಿದೆ. ಝಾನ್ಸಿಯು ೧೮೫೭ ರ ವಿಪ್ಲವದಲ್ಲಿ ಹುರುಪಿನಿಂದ ಭಾಗವಹಿಸಿತು. ಜನತೆಯ ಯಾವ ಜಾತಿಯವರೂ ಹುಮ್ಮಸ್ಸಿನಿಂದ ಇದರಲ್ಲಿ ಭಾಗವಹಿಸಲಿಲ್ಲವೆಂದು ಹೇಳಲಾಗುವುದಿಲ್ಲ. ಉನಾವ್ ದ್ವಾರದ ಮೇಲೆ ನೇಯ್ಗೆಯವರು ತೋಪುಗಳನ್ನಿಟ್ಟುಕೊಂಡು ಅವುಗಳ ಮುಖ್ಯಸ್ಥನಾಗಿ ಪೂರಣ್ ಕೋರಿಯೆಂಬುವನು ಕೆಲಸಮಾಡಿದನೆಂಬುದು ಐತಿಹಾಸಿಕ ನಿಜಾಂಶ. ಆತನ ಮೊಮ್ಮಗನು ಮೂಲಗ್ರಂಥಕರ್ತರಿಗೆ ಈ ಎಲ್ಲ ಘಟನೆಗಳ ವರ್ಣನೆಯನ್ನೂ ಮತ್ತು ಝಲಕಾರಿಯ ವಿಕಟ ನಿರ್ಭಯ ಪರಾಕ್ರಮವನ್ನೂ ತಿಳಿಸಿದನು. ಜನರಲ್ ರೋಜನು ತನ್ನ ಡೈರಿಯಲ್ಲಿ ಝಲಕಾರಿಯ ಘಟನೆಯನ್ನು ಬರೆದಿಲ್ಲ. ಆದರೆ ನೇಯ್ಗೆಯವರಲ್ಲಿ ಅದು ವಿಖ್ಯಾತವಾಗಿದೆ. ೧೮೫೮ ರ

ನಾಲ್ಕನೇ ಏಪ್ರಿಲ್ ರಾತ್ರಿ ರಾಣಿಯು ಕೋಟೆಯಿಂದ ಹೊರಬಿದ್ದನಂತರ ಬೆಳಗ್ಗಿನ ಜಾವ ಐದು ಗಂಟೆಗೆ ಕುದುರೆಯ ಮೇಲೆ ಕುಳಿತು ರೋಜನ ಬಳಿಗೆ ಹೋಗಿ "ರಾಣಿಯನ್ನು ಎಲ್ಲಿ ಹುಡುಕುತ್ತಿದ್ದೀರಿ? ನಾನೇ ರಾಣಿ. ನನ್ನನ್ನು ಹಿಡಿಯಿರಿ" ಎಂದು ಹೇಳಿದಳು. ಝಲಕಾರಿಯು ಬಹಳ ವೃದ್ಧಳಾದ ನಂತರ ಮರಣ ಹೊಂದಿದಳು. ಮೂಲಗ್ರಂಥಕರ್ತರಿಗೆ ಅವಳನ್ನು ನೋಡುವ ಸೌಭಾಗ್ಯವು ದೊರಕಲಿಲ್ಲ. ರಾಣಿಯ ವಿಚಾರವಾಗಿ ವಿಷಯಗಳನ್ನು ಪತ್ತೇ ಹಚ್ಚುತ್ತಿರುವಾಗ ಈ ನೇಯ್ಗೆಯವರ ಸಂಪರ್ಕವುಂಟಾಗಿ ಆಕೆಯು ಮರಣಹೊಂದಿದ ವಿಚಾರವು ತಿಳಿಯಿತು. ಝಾನ್ಸಿಯಲ್ಲಿ ಅತ್ಯಂತ ಉಚ್ಚ ಜಾತಿಯವರೆಂದು ಕರೆಯಲ್ಪಡುವವರು ನೇಯ್ಗೆಯವರ ಕೈಯ್ಯಿಂದ ನೀರನ್ನು ಕುಡಿಯುತ್ತಾರೆ.

ಅವರ ಮನೆಗಳು ಆಗತಾನೆ ಯಾವುದೋ ಯಜ್ಞವನ್ನು ಸಮಾಪ್ತಗೊಳಿಸಿ ಇದ್ದಂತೆ ಬಹು ಸ್ವಚ್ಛವಾಗಿರುವುವು. ಝಲಕಾರಿಯನ್ನು ಅರಶಿನ ಕುಂಕುಮದ ಮಹೋತ್ಸವದಲ್ಲಿ ರಾಣಿಯು ಅಪ್ಪಿಕೊಂಡಿದ್ದರೆ ಅದೇನು ಅತಿಶಯೋಕ್ತಿಯಲ್ಲ.

೧೦

ಆಂಗ್ಲೇಯ ಐತಿಹಾಸಿಕರು ಆಂಗ್ಲೇಯರು ಝಾನ್ಸಿಯನ್ನು ವಶಪಡಿಸಿಕೊಳ್ಳ ಬೇಕೆಂದಿದ್ದಾಗ ರಾಣಿಯು "ನನ್ನ ಝಾನ್ಸಿಯನ್ನು ಕೊಡುವುದಿಲ್ಲ" ಎಂದು ಹೇಳಿದ ಳೆಂದು ಬರೆದಿದ್ದಾರೆ. ಇದನ್ನೇ ಅನೇಕ ಭಾರತೀಯ ಲೇಖಕರೂ ಬರೆದಿದ್ದಾರೆ. ರಾಣಿಯು ಹಿಂದೀ ಮತ್ತು ಮರಾಠಿ ಭಾಷೆಗಳನ್ನರಿತಿದ್ದಳು. ಅವಳು ಝಾನ್ಸಿಗೆ ಬಂದ ಮೇಲೆ ಬುಂದೇಲುಖಂಡಿಯನ್ನು ಕಲಿತುಕೊಂಡಳೆಂಬುದು ಅವಳ ಕುಶಾಗ್ರಮತಿಯನ್ನು ಸೂಚಿಸುವುದು. ಅವಳು ಉಚ್ಚರಿಸಿದ ವಾಕ್ಯವನ್ನು ತಿರುಗುಮುರುಗುಮಾಡಿ ಎಲಿಸ್ಸನು ತನ್ನ ಲೇಖನದಲ್ಲಿ ಬರೆದಿದ್ದಾನೆ. ಮತ್ತು ಭಾರತೀಯ ಲೇಖಕರು ಅದನ್ನು ಸಂಶೋಧಿಸದೆ ಹಾಗೆಯೇ ಬರೆದಿರುವರು. ೧೮೫೭ ರ ವೇಳೆಗೆ ಆಂಗ್ಲೇಯರು ಸುಮಾರಾಗಿ ಹಿಂದೀ ಭಾಷೆಯನ್ನು ಮಾತನಾಡುತ್ತಿದ್ದರು. ಆದರೆ ಆ ಭಾಷೆಯನ್ನು ಕುರೂಪ ಗೊಳಿಸುವುದು ಅವರ ಸ್ವಭಾವಸಿದ್ಧ ಉಪೇಕ್ಷೆಗೆ ಒಂದು ಉದಾಹರಣೆ. ಅವರು ಇಂದಿಗೂ ಫ್ರೆಂಚ್ ಜರ್ಮನ್ ಮತ್ತು ರಷ್ಯನ್ ಭಾಷೆಗಳನ್ನು ಕುರೂಪಗೊಳಿಸುತ್ತಲೆ ಇರುವರು. ಇಂದಿಗೂ ಅಮೇರಿಕಾದೇಶದಲ್ಲಿ ಪ್ರಾಜ್ಞರು ಈ ಆಂಗ್ಲೇಯರು ವಿರೂಪ ಗೊಳಿಸುವುದನ್ನು ಕಂಡು ಹುಬ್ಬುಗಂಟಿಕ್ಕುತ್ತಾರೆ. ರಾಣಿಯ ಮುಖದಿಂದ ಹೊರ ಬಿದ್ದ ವಾಕ್ಯವನ್ನು ಸರಿಯಾಗಿ ಬರೆಯುವುದರಲ್ಲಿ ಎಲಿಸ್ಸನಾಗಲೀ ಅಥವಾ ಯಾವ ಆಂಗ್ಲೇಯನಿಗಾಗಲಿ ಶ್ರದ್ಧೆ ಏನಿದ್ದಿತು ?

೧೧

ರಾಣಿಯು ವೀರಾಗ್ರಣಿಗಳ ಒಂದು ಕುಮಾರ ಮಂಡಳಿಯನ್ನು ಸ್ಥಾಪಿಸಿದ್ದಳು.

ಆಕೆಯು ಸ್ತ್ರೀ ಪುರುಷರನ್ನು ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದಳು. ನಿರಂತರವೂ ಝಾನ್ಸಿಯ ರಕ್ಷಣೆಗಾಗಿ ಜೀವ ಕೊಡಬಲ್ಲ ಯೋಧರ ಅವಶ್ಯಕತೆಯು ಬಹಳವಾಗಿದ್ದಿತು. ಆದುದರಿಂದ ಇವರಲ್ಲಿ ಸತ್ಪಾತ್ರರನ್ನು ಕುಮಾರರೆಂದು ಸಂಬೋಧಿಸಲಾಗುತ್ತಿದ್ದಿತು. ರಾಣಿಯು ಈ ಉಪಾಧಿಯನ್ನು ಕೊಟ್ಟವರಲ್ಲಿ ಒಬ್ಬನಾದರೂ ಆತ್ಮ ಸಮರ್ಪಣೆ ಮಾಡಿಕೊಳ್ಳಲು ಹಿಂದೆಗೆಯಲಿಲ್ಲ.

೧೨

ರಾಣಿಯು ನಿರ್ಮಿಸಿದ ಸ್ತ್ರೀ ಸೈನ್ಯವು ಭಾರತದ ಒಂದು ಅಚ್ಚರಿ. ರಾಣಿಯ ಎದುರಾಳಿಗಳಾಗಿ ಯುದ್ಧಮಾಡಿದ ಜನರಲ್ ರೋಜ್, ಜನರಲ್ ಸ್ಟುವರ್ಟ್, ಡಾಕ್ಟರ್ ಲೋ ಮುಂತಾದವರು ದುರ್ಬೀನಿನ ಮೂಲಕ ಈ ಸ್ತ್ರೀ ಸೇನೆಯ ನಿಯಮ, ಸಂಯಮ, ಶೌರ್ಯ, ಪರಾಕ್ರಮ ಮತ್ತು ಎದುರಾಳಿಗಳನ್ನು ಎಚ್ಚರದಪ್ಪಿಸಿ ಯುದ್ಧ ಮಾಡುವ ದೃಢತೆ ಮುಂತಾದುವನ್ನೆಲ್ಲಾ ಕಣ್ಣಾರೆ ಕಂಡಿದ್ದರು. ಈ ಸೇನೆಯಲ್ಲಿ ಬಹಳ ಕಡಿಮೆ ಮಹಾರಾಷ್ಟ್ರ ಸ್ತ್ರೀಯರೂ ಮತ್ತು ಹೆಚ್ಚು ಭಾಗ ವಿವಿಧ ಜಾತಿಯ ಬುಂದೇಲು ಖಂಡಿ ಸ್ತ್ರೀಯರೂ ಇದ್ದರು. ಒಂದು ವೇಳೆ ಲಕ್ಷ್ಮೀಬಾಯಿ ಸ್ವರಾಜ್ಯಸ್ಥಾಪನೆಯ ಯತ್ನದಲ್ಲಿ ಸಫಲಗೊಂಡಿದ್ದರೆ ಇಂದಿಗೆ ಒಂದಂಶ ಉಳಿದಿರುವ ಅಧೋಗತಿಯಲ್ಲಿ ಎಂದಿಗೂ ಇರುತ್ತಿರಲಿಲ್ಲ. "ಮಾಝಾ ಪ್ರವಾಸ"ವನ್ನು ಬರೆದಿರುವ ವಿಷ್ಣುರಾವ್ ಗೋಡಶೆಯು ಝಾನ್ಸಿಗೆ ಬಂದಾಗ ಅಲ್ಲಿನ ಸ್ತ್ರೀಯರ ಸ್ವಾತಂತ್ರ್ಯವನ್ನು ಕಂಡು ವಿಸ್ಮಿತನಾದನು. ಅವನಿಗೆ ಸ್ವಲ್ಪ ಕೋಪವೂ ಬಂದಿತು. ಮತ್ತೆಲ್ಲಿಯೂ ಆತನು ಕಂಡಿರದಂತಹ ಸ್ತ್ರೀಯರು ಶೃಂಗಾರ ದರ್ಪಗಳೊಂದಿಗೆ ಸಂಧ್ಯಾಕಾಲದಲ್ಲಿ ದೇವಾಲಯಗಳಿಗೆ ಹೋಗುತ್ತಿದ್ದ ಸೋಜಿಗವು ವಿಷ್ಣುರಾಯನಿಗೆ ಬಹಳ ಕಟುತರವಾಗಿ ಕಂಡಿತು. ಆದರೆ ಇನ್ನೆಲ್ಲಾದರೂ ಸ್ತ್ರೀಯರ ಪಡೆಯಿತ್ತೇನು? ಯಾವುದಾದರೂ ರೆಜಿಮೆಂಟಿದ್ದಿತೆ? ಅಲ್ಲಿ ಯಾರಾದರೂ ಕರ್ನಲ್ ಅಥವಾ ಕ್ಯಾಪ್ಟನ್ ಇದ್ದಳೆ? ಬೆಳಗಿನ ಹೊತ್ತು ಪೆರೇಡಿನಲ್ಲಿ ಪುರುಷರಿಗೆ ಕವಾತು ಹೇಳಿಕೊಡುವಂತಹ ಸ್ತ್ರೀಯರೂ, ಕುದುರೆಯಸವಾರಿಯಲ್ಲಿ ಪುರುಷರನ್ನು ಸೋಲಿಸುವಂತಹ ಸ್ತ್ರೀಯರೂ ಸಾಯಂಕಾಲ ದೇವಸ್ಥಾನಕ್ಕೆ ಹೋಗುವಾಗ ಲಜ್ಜೆ ನಾಚಿಕೆಗಳಿಂದ ಅವಕುಂಠನವನ್ನೆಳೆದುಕೊಂಡು ಸುಂದರ ಸ್ತ್ರೀವರ್ಣನೆಗೆ ವಸ್ತುಗಳಾಗಿ ತೋರುತ್ತಿದ್ದರು. ಆದರೆ ಮಾಝಾ ಪ್ರವಾಸದ ಲೇಖಕನು ಇದರ ನಿಜಾಂಶವನ್ನು ತಿಳಿದಿರಲಿಲ್ಲ.

ರಾಣಿಯು ಮುಟ್ಟಿದ ಮಣ್ಣು ಭಂಗಾರವಾಗಿ ಯಾವ ಒಣ ಮರದ ತುಂಡನ್ನು ಮುಟ್ಟಿದರೆ ಅದು ಚಿಗುರುತ್ತಿದ್ದಿತೆಂದು ಮೂಲಗ್ರಂಥಕರ್ತರ ಅಜ್ಜಿ ಮುತ್ತಜ್ಜಿಯರು ಹೇಳುತ್ತಿದ್ದರಂತೆ. ಇಂದು ಆ ರಾಣಿಯು ಪ್ರಾಪ್ತವಾಗುವಂತಿಲ್ಲ. ಆದರೆ ಆ ಹೆಸರೇ ಮಣ್ಣನ್ನು ಹೊನ್ನು ಮಾಡಿರುವುದು ಮತ್ತು ಎಲ್ಲಿಯವರೆಗೆ ಭಾರತವು ಭಾರತವಾಗಿರು

ವುದೋ ಅಲ್ಲಿಯವರೆಗೆ ಆ ಹೆಸರು ಈ ಕಾರ್ಯವನ್ನು ಮಾಡುತ್ತಲೇ ಇರುವುದು.

ಈ ಕಾರಣದಿಂದಲೇ ಲಕ್ಷ್ಮೀಬಾಯಿಯು ಆಂಗ್ಲೇಯ ಜನರಲ್ಲುಗಳ ಮುಂದೆ ಮಹಲಿನ ಗವಾಕ್ಷದಲ್ಲಿ ಒಬ್ಬಂಟಿಗಳನ್ನಾಗಿ ಅವರನ್ನು ಎದುರಿಸಿದಳು. ಇದೇ ಕಾರಣ ದಿಂದ ಸದಾಶಿವನೇವಾಲ್ಕರನು ತಾನು ಝಾನ್ಸಿಯ ರಾಜನೆಂಬುದಾಗಿ ಘೋಷಿಸಿದರೂ ಸಂಪೂರ್ಣ ತರಪೇತಾಗದಂತಹ ಸೇನೆಯನ್ನು ತೆಗೆದುಕೊಂಡು ಮಣ್ಣನ್ನು ಸ್ವರ್ಣಮಾಡಿ ಕರೇರಾ ದುರ್ಗವನ್ನು ಮುತ್ತಿಗೆ ಹಾಕಿ ಸದಾಶಿವರಾಯನನ್ನು ಸೋಲಿಸಿದಳು. ಇದೇ ಕಾರಣದಿಂದಲೇ ಆಕೆಯು ನತ್ಥೇಖಾನನ ೨೦ ಸಹಸ್ರ ಸೈನ್ಯವನ್ನು ಎದುರಿಸಿ, ಝಾನ್ಸಿಯ ಸ್ತ್ರೀಪುರುಷ ಸೈನಿಕರ ಸಹಾಯದಿಂದ ಹೊಡೆದೋಡಿಸಿದಳು.

ಸಾಗರಸಿಂಹನೆಂಬ ಢಕಾಯಿತನನ್ನು ಜನರಲ್ಲನನ್ನಾಗಿ ಮಾರ್ಪಡಿಸಿದಳು. ಆತನು ಖಂಡೇರಾಯ ದ್ವಾರದ ರಕ್ಷಣೆಯನ್ನು ಮಾಡುತ್ತಾ ಮಡಿದು ಅಮರನಾದನು.

೧೩

ಜಾರ್ಜ ರಸಲ್ಲನು ೧೮೩೨ ರಲ್ಲಿ ಡಿಲ್ಲಿಗೆ ಕಳುಹಿಸಿದಂತಹ ಆವೇದನ ಪತ್ರದ ಅನುವಾದವು ಫಾರಸನೀಸನ ಪುಸ್ತಕದಲ್ಲಿದೆ. ಅದರ ಸಾರಾಂಶವನ್ನು ಈ ಉಪನ್ಯಾಸದಲ್ಲಿ ಕೊಡಲಾಗಿದೆ.

೧೪

ಸರ್‌ಜಾರ್ಜ ಮಾಲಕಮ್ಮನು ೧೮೨೫ ರಲ್ಲಿ ಮಧ್ಯದೇಶದ ಪ್ರಧಾನ ಸೇನಾಪತಿ ಮತ್ತು ಗೌರ್ನರಾಗಿದ್ದನು. ಆತನು Memories of Central India ಎಂಬ ಪುಸ್ತಕವನ್ನು ಬರೆದಿರುವನು. ಈಗ ಆ ಪುಸ್ತಕವು ದೊರೆಯುವುದು ದುರ್ಲಭ. ಮೂಲ ಗ್ರಂಥಕರ್ತರಿಗೆ ಕಲ್ಕತ್ತೆಯ ಇಂಪೀರಿಯಲ್ ಲೈಬ್ರರಿಯಿಂದ ಈ ಪುಸ್ತಕವು ದೊರಕಿ ಅದರಲ್ಲಿ ಮಾಲಕಮ್ಮನು "ನಮಗೆ ಹಿಂದೂಸ್ಥಾನೀಯರ ದೇಶವನ್ನು ಹಿಂದಿರುಗಿ ಕೊಡಬೇಕಾಗುವಂತಹ ಕಾಲವು ಇಂದಲ್ಲದಿದ್ದರೂ ಮುಂದೆ ಎಂದಾದರೂ ಅವಶ್ಯಕವಾಗಿ ಬಂದೇ ಬರುವುದು" ಎಂದು ಬರೆದಿರುವನೆಂದು ತಿಳಿದು ಬಂದಿದೆ.

೧೫

ಗವಾಲಿಯರಿನಿಂದ ನಾಟಕಮಂಡಳಿಯು ೧೮೫೮ ನೇ ಜನವರಿ ತಿಂಗಳಲ್ಲಿ ಝಾನ್ಸಿಗೆ ಬಂದಿದ್ದಿತು. ರಾಣಿಯು ಹೇಗೆ ಸೈನ್ಯದ ತರಪೇತು ವ್ಯವಸ್ಥೆಗಳಿಗೆ ಮನ ವೀಯ್ಯುತ್ತಿದ್ದಳೋ ಅಂತೆಯೇ ಕಲೋಪಾಸಕಳೂ ಆಗಿದ್ದಳು. ಆಕೆಯು ಈ ನಾಟಕ ಮಂಡಳಿಯವರು ನಟಿಸಿದ ಹರಿಶ್ಚಂದ್ರ ನಾಟಕಕ್ಕೆ ನಾಲ್ಕು ಸಹಸ್ರ ರೂಪಾಯಿಗಳ ಪುರಸ್ಕಾರವನ್ನಿತ್ತಳು. ಗಾಯಕರೂ ವೈಣಿಕರೂ, ಪಕ್ಕವಾದ್ಯಗಾರರೂ ಅವಳ ಆಶ್ರಯು ಹೊಂದಿದ್ದರು. ಸುಖಲಾಲ್ ಚಿತ್ರಕಾರನು ಜಾತಿಯಲ್ಲಿ ಕೃಷಿಕನಾಗಿದ್ದರೂ ಅವನ ಚಿತ್ರಕಲೆಗೆ ಆಕೆಯು ಹೇರಳವಾದ ಪುರಸ್ಕಾರ ಕೊಟ್ಟಿದ್ದಳು. ಪುಸ್ತಕದಲ್ಲಿ ಕೊಟ್ಟ

ರುವ ರಾಣಿಯ ಮತ್ತು ಗಂಗಾಧರರಾಯನ ಚಿತ್ರಪಟಗಳು ಆತನ ಕಲಾಕೃತಿಗಳು.

೧೬

ವಿಷ್ಣುರಾವ್ ಗೋಡಶೆಯು ಪುಣೆಯಿಂದ ಗವಾಲಿಯರಿಗೆ ಹೋಗುವಾಗ ಮಾರ್ಗದಲ್ಲಿ ಝಾನ್ಸಿಗೆ ಬಂದಿದ್ದನು. ಆತನು ಭಟ್ಟ ಭಿಕ್ಷುಕನು. ರಾಣಿಯು ಝಾನ್ಸಿಯಲ್ಲಿ ಯಜ್ಞಮಾಡಿದಾಗ ಆತನು ಹಾಜರಿದ್ದು ಯುದ್ಧದ ಸಮಯದಲ್ಲಿ ಕಿಲ್ಲೆಯೊಳಗೇ ಇದ್ದನು. ಆತನು ಕಣ್ಣಾರೆ ಕಂಡ ಆ ದಿನದ ದೃಶ್ಯಗಳನ್ನು ತನ್ನ ಮಾಝಾ ಪ್ರವಾಸದಲ್ಲಿ ಬರೆದಿಟ್ಟಿದ್ದಾನೆ. ಈ ಉಪನ್ಯಾಸದ ಕೆಲವು ಘಟನೆಗಳು ಮಾಝಾ ಪ್ರವಾಸದ ಆಧಾರದ ಮೇಲೆ ಬರೆಯಲ್ಪಟ್ಟಿವೆ. ಅದರ ಸತ್ಯಾಂಶದ ನಿರ್ಧಾರವು ವದಂತಿಗಳಿಂದಲೂ ಮತ್ತು ಜನರಲ್ ರೋಜನ ಬರವಣಿಗೆಗಳಿಂದಲೂ ಆಗುತ್ತದೆ. ಪಾರಸನೀಸನು ತನ್ನ ಪುಸ್ತಕಕ್ಕೆ ಬೇಕಾದ ವಸ್ತುವನ್ನು ವಿಷ್ಣುರಾವಿನ ಗ್ರಂಥದಿಂದ ಪಡೆದಿದ್ದಾನೆ. ಆದರೆ ಇದನ್ನು ಸೂಚಿಸಿಲ್ಲ. ಕಡೆಯಪಕ್ಷ ಹಿಂದಿಯ ಅನುವಾದದಲ್ಲಿಯಾದರೂ ಈ ವಿಚಾರವು ಮೂಲಗ್ರಂಥಕರ್ತರಿಗೆ ಕಂಡು ಬರಲಿಲ್ಲ.

ಯಜ್ಞದ ಸಮಯದಲ್ಲಿ ಯಜ್ಞವಿಧಾನದ ಸಮಸ್ಯೆಯೊಂದು ಉದ್ಭವಿಸಿತು. ಅದು ಈ ಉಪನ್ಯಾಸದಲ್ಲಿದೆ. ಆ ಸಮಸ್ಯೆಯನ್ನು ವಿಷ್ಣುರಾಯನು ತನ್ನ ಶಾಸ್ತ್ರಜ್ಞಾನದಿಂದ ಬಿಡಿಸಿದನು. ಆತನು ಸ್ವಲ್ಪ ಡಂಭದಿಂದ—ಆ ಡಂಭವು ಉಚಿತವಾದುದೇ—ತನ್ನ ಪಾಂಡಿತ್ಯವರ್ಣನೆಯನ್ನು ಮಾಝಾ ಪ್ರವಾಸದಲ್ಲಿ ಮಾಡಿದ್ದಾನೆ.

೧೭

೧೮೫೮ ರಲ್ಲಿ ರಾಣಿ ಲಕ್ಷ್ಮೀಬಾಯಿಯ ಮಹಲ್ಲು ಪುಸ್ತಕಾಲಯದೊಂದಿಗೆ ಸುಟ್ಟು ಹೋಯಿತು. ಪುಸ್ತಕಾಲಯವೇನೋ ಪೂರ್ಣವಾಗಿ ಭಸ್ಮವಾಯಿತು. ಆದರೆ ಮಹಲು ಸ್ವಲ್ಪ ಮಟ್ಟಿಗೆ ಉಳಿದುಕೊಂಡಿತು. ೧೮೯೬ ರಲ್ಲಿ ಅದಕ್ಕೆ ಪುನಃ ಬೆಂಕಿ ಬಿದ್ದಿತು. ಮೂಲಗ್ರಂಥಕರ್ತರು ಆ ವೇಳೆಗೆ ಸುಮಾರು ೫-೬ ವರ್ಷದವರು. ಅವರ ಕಣ್ಣ ಮುಂದೆಯೇ ಉರಿಯುತ್ತಿದ್ದುದನ್ನು ಕಂಡು ಅಲ್ಲಿ ನಿಂತಂತೆಯೇ ಅವರು ರೋಧಿಸುತ್ತಿದ್ದರೆಂದೂ, ಬಹುಶಃ ಆ ಅಶ್ರುಗಳು ಅವರ ಮುತ್ತಜ್ಜಿಯಿಂದ ಕೇಳಿದ ಕಥೆಗಳ ಪ್ರಯುಕ್ತವಿರಬಹುದೆಂದೂ ಬರೆದಿದ್ದಾರೆ. ೧೯೧೬ ರಲ್ಲಿ ಬಕ್ಷಿಯ ಮನೆಯ ಪತ್ತೆಯು ಗ್ರಂಥಕರ್ತರಿಗೆ ತಿಳಿಯಿತು. ಇಂದಿಗೂ ಅವರ ಜಾತಿಯಲ್ಲಿ ಅವರ ಹೆಸರಿಗೆ ಎಷ್ಟು ಪ್ರಾಮುಖ್ಯತೆಯಿದೆ ಎಂದರೆ ಮಕ್ಕಳಿಗೆ ಭಾವು ಎಂದು ಹೆಸರಿಡಲಾಗುತ್ತದೆ. ಈ ಮನೆಯು ಇನ್ನೂ ಒಳ್ಳೆಯ ಸ್ಥಿತಿಯಲ್ಲಿದ್ದು ಶ್ರೀ ಜಿನದಾಸ್ ಕೋಜರವರ ಅಧೀನದಲ್ಲಿದೆ.

೧೮

ಇತ್ತೀಚಿಗೆ ಶ್ರೀ ಸಿ. ಎಮ್. ಕಿಂಕೇಡ್, ನಿವೃತ್ತ ಐ. ಸಿ. ಎಸ್. ರವರು ಆಂಗ್ಲೇಯ ಭಾಷೆಯಲ್ಲಿ "Laxmibai, Rani of Jhansi" ಎಂಬ ಪುಸ್ತಕ

ತಾತ್ಯಾ—ಆ ಪ್ರದೇಶದಲ್ಲಿ ಕೋಟೆ ಕೊತ್ತಲುಗಳು ಬಹಳ ಕಡಿಮೆಯಿವೆ.

ನವಾಬ್—ಇನ್ನೂ ಒಂದು ಭಾರಿ ಅಡಚಣೆಯಿದೆ. ಆಂಗ್ಲೇಯರ ಅಸಂಖ್ಯಾತ ಸೇನೆಯು ಔಧಿನಲ್ಲಿ ಹರಡಿದೆ. ಇನ್ನೂ ಕಲ್ಕತ್ತೆಯಿಂದ ಬರುವುದಿದೆ.

ಒಬ್ಬ ಸರದಾರ—ನನಗೇನೋ ಸೈನ್ಯವನ್ನು ಚಿಕ್ಕ ಚಿಕ್ಕ ವಿಭಾಗಗಳನ್ನಾಗಿ ಮಾಡಿ, ಇಲ್ಲಿ ಅಲ್ಲಿ ಹರಡಿ ಆಂಗ್ಲೇಯರ ಇಲಾಖೆಯನ್ನು ಲೂಟಿ ಮಾಡುವುದನ್ನು ಪ್ರಾರಂಭಿಸುವುದನ್ನು ಉತ್ತಮವೆಂದು ತೋರುವುದು.

ಎರಡನೆಯ ಸರದಾರ—ಹೊಸ ಹೊಸಬರನ್ನೂ ಈ ವಿಭಾಗಗಳಿಗೆ ಸೇರಿಸಿ ಕೊಳ್ಳುತ್ತಾ ಹೋಗಬಹುದು. ಹೀಗೆ ಕಷ್ಟವಿಲ್ಲದೆ ದೊಡ್ಡ ಸೇನೆಯೊಂದು ಸೇರಿ ನಾವು ಆಂಗ್ಲೇಯರನ್ನು ಸದೆ ಬಡಿಯಬಹುದು.

ತಾತ್ಯಾ—ಇದಕ್ಕೆ ಎಷ್ಟು ದಿನ ಹಿಡಿಯಬಹುದು ?

ರಾವ್—ಸಮಯಕ್ಕೇಕೆ ಚಿಂತೆ ? ಆಂಗ್ಲೇಯರ ಸೇನೆಯಲ್ಲಿ ಇನ್ಯಾರಾದರೂ ಮುಖಂಡರು ಬರಬಹುದು. ಆಗ ತೋಪುಗಳು ನಮ್ಮ ವಶವಾಗಿ ನಮ್ಮ ಕೆಲಸ ಸಾಧನೆಯಾಗುವುದು.

ನವಾಬ್—ಇನ್ನು ತೋಪುಗಳು ಹಿಂದೂಸ್ಥಾನಿ ಸೈನ್ಯದ ಕೈಗೆಂದಿಗೂ ಬರುವುದಿಲ್ಲ. ತೋಪುಖಾನೆಗಳನ್ನು ಆಂಗ್ಲೇಯರು ತಮ್ಮ ವಶದಲ್ಲಿಟ್ಟುಕೊಳ್ಳಲು ಪ್ರಾರಂಭಿಸಿದ್ದಾರೆ.

ಮತ್ತೊಬ್ಬ ಸರದಾರ—ಆದರೆ ಜನರ ಬಳಿ ಶಸ್ತ್ರಾಸ್ತ್ರಗಳಿವೆ.

ನವಾಬ್—ನೀವು ಸೈನ್ಯ ಜಮಾವಣೆ ಮಾಡುವುದರಲ್ಲಿ ಆಂಗ್ಲೇಯರು ಪ್ರಜೆಗಳ ಬಳಿಯಿರುವ ಶಸ್ತ್ರಾಸ್ತ್ರಗಳೆಲ್ಲವನ್ನು ತಮ್ಮ ಅಸ್ತ್ರಾಗಾರದಲ್ಲಿರಿಸಿಕೊಳ್ಳುವರು.

ರಾವ್—ಮತ್ತೆ ಕಾಲ್ಪಿಯು ನಮ್ಮ ವಶವಾದರೆ ನಮ್ಮ ಕಷ್ಟವೆಲ್ಲವೂ ದೂರವಾಗುವುದು.

ನವಾಬ್—ನಾವೇನೋ ದಿಲ್ಲಿ ಮತ್ತು ಲಕ್ನೋ ನಮ್ಮ ಕೈಗೆ ಬರಬೇಕೆಂದು ಆಶಿಸುತ್ತೇವೆ. ಆದರೆ ಆಶಿಸಿದರೇನಾಯಿತು ?

ಸರದಾರ—ನಾನು ಹೇಳುವುದನ್ನು ಸ್ವಲ್ಪ ಕೇಳಿ, ಚಿಕ್ಕ ಚಿಕ್ಕ ತುಕ್ಕಡಿಗಳ ಮೂಲಕ ಕೊಳ್ಳೆ ಹೊಡೆಯುವುದನ್ನು ಪ್ರಾರಂಭಿಸಿ.

ತಾತ್ಯಾ—ಜನತೆಯು ಸಹಕರಿಸುವುದಿಲ್ಲ.

ರಾವ್—ನೀನು ಔಧಿನ ಸಿಪಾಯಿಗಳನ್ನು ಸೈನ್ಯಕ್ಕೆ ಸೇರಿಸಿ ನಮ್ಮಬಳಿಗೆ ಕರೆದುಕೊಂಡು ಬಾ.

ತಾತ್ಯಾ—ಅಪ್ಪಣೆಯಂತೆ.

ನವಾಬ್—ಆದರೆ ಇದಕ್ಕೆ ಕಾಲಾವಕಾಶವು ಬೇಕು, ಅದುವರೆಗೆ ನಾವೂ ನೀವೂ

ಏನು ಮಾಡಬೇಕು.

ರಾವ್—ಹಾಗಾದರೆ ರಾಜಾ ಭಕ್ತಬಲಿಯನ್ನು ಮತ್ತು ರಾಜಾ ಮರ್ದನ ಸಿಂಹರನ್ನು ಬುಂದೇಲು ಖಂಡದ ಸೇನೆಯ ಸಮೇತ ಕರೆಸೋಣ.

ನವಾಬ್—ಅವರು ನಮ್ಮೊಡನೆ ಸಹಕರಿಸುವವರಿದ್ದರೆ ಈ ವೇಳೆಗಾಗಲೇ ಗೋಪಾಲಪುರಕ್ಕೆ ಯಾವಾಗಲೋ ಬಂದು ಸೇರುತ್ತಿದ್ದರು.

ರಾವ್—ಹಾಗಾದರೆ ನಾವೇನು ಮಾಡೋಣ ?

ಸರದಾರನೊಬ್ಬ—ರಾಜಪುತಾನದ ಕಡೆಗೆ ಹೋಗೋಣ. ಅಲ್ಲಿನ ಛಾವನಿಯವರು ಇದುವರೆಗೆ ಏನೂ ಮಾಡಿಲ್ಲ.

ತಾತ್ಯಾ—ಅಲ್ಲಿಯವರು ಮುಕ್ಕಾಲುಪಾಲು ನಮ್ಮೊಡನೆ ಸೇರುವರು.

ರಾವ್—ನನ್ನ ಮನವು ದಕ್ಷಿಣ ಭಾರತದಲ್ಲಿ ಹೆಚ್ಚು ಭರವಸೆಯನ್ನಿಟ್ಟಿದೆ.

ನವಾಬ್—ಆದರೆ ಅಲ್ಲಿಗೆ ಹೇಗೆ ಹೋಗಿ ತಲಪುವುದು?

ತಾತ್ಯಾ—ನಾನು ಮೊದಲೇ ಹೇಗಾದರೂ ಅಲ್ಲಿಗೆ ತಲಪಿಸುವೆನೆಂದು ನಿವೇದನೆ ಮಾಡಿಕೊಂಡಿದ್ದೇನೆ.

ನವಾಬ್—ನಾನೂ ಮೊದಲೇ ಝಾನ್ಸಿ, ಸಾಗರ, ಸಿಹೌರ ಮುಂತಾದ ಸ್ಥಳಗಳಲ್ಲಿ ಆಂಗ್ಲೇಯರ ಸೈನ್ಯವು ಬಹುವಾಗಿದ್ದುಕೊಂಡು ನಾವು ಪಂಜರದಲ್ಲಿ ಸೆರೆಸಿಕ್ಕ ಪಕ್ಷಿಗಳಂತಾಗಿದ್ದೇವೆಂದು ತಿಳಿಸಿದ್ದೇನೆ.

ಸರದಾರ—ಹಾಗಾದರೆ ನಾವು ಆಂಗ್ಲೇಯರ ಕೈಗೆ ಬೀಳಬೇಕೆ?

ನವಾಬ್—ಇದನ್ನು ನಾನೆಂದಿಗೂ ಹೇಳಲಿಲ್ಲ.

ರಾವ್—ಹಾಗಿದ್ದ ಪಕ್ಷದಲ್ಲಿ ಯಾವುದಾದರೂ ಆಂಗ್ಲೇಯರ ಛಾವನಿಯ ಮೇಲೆ ಬಿದ್ದು ಅದನ್ನು ಧ್ವಂಸಮಾಡುತ್ತಾ ಮುನ್ನುಗ್ಗಿ ನಮ್ಮ ಭಾಗ್ಯ ಪರೀಕ್ಷೆ ಮಾಡೋಣ.

ನವಾಬ್—ಆದರೆ ದೊಡ್ಡ ದೊಡ್ಡ ತೋಪುಗಳಿಲ್ಲದೇ ಛಾವನಿಯನ್ನು ಆಕ್ರಮಣ ಮಾಡಲು ಹೋಗುವುದು ಮೃತ್ಯುವಿನ ದವಡೆಯಲ್ಲಿ ಸಿಕ್ಕಿದಂತೆ.

ರಾವ್—ಒಂದು ವೇಳೆ ತಾತ್ಯಾ ಮಹಾರಾಷ್ಟ್ರಕ್ಕೆ ಹೋಗಿ ಅಲ್ಲಿಯ ಜನರನ್ನು ಜಾಗ್ರತೆಗೊಳಿಸಿದರೆ ಆಂಗ್ಲೇಯರು ಅಲ್ಲಿನ ತೊಡಕಿನಲ್ಲಿ ಸಿಕ್ಕಿ ಬೀಳುವರು. ಆ ಅಂತರದಲ್ಲಿ ನಾವು ಜಾಗ್ರತೆಯಾಗಿ ಮಹಾರಾಷ್ಟ್ರವನ್ನು ಸೇರಬಹುದು.

ನವಾಬ್—ಮತ್ತೆ ಅದುವರೆಗೆ ಇಲ್ಲಿ ನಾವೇನು ಮಾಡೋಣವೆಂಬ ಪ್ರಶ್ನೆಯು ಬರುತ್ತದೆ.

ತಾತ್ಯಾ—ರಾಣಿ ಸಾಹೇಬರ ಸಲಹೆಯನ್ನು ಕೇಳೋಣ.

ರಾವ್—ರಾಣಿ ಸಾಹೇಬರ ಸಲಹೆಯನ್ನೇನೋ ಒಪ್ಪಲು ಸಿದ್ಧ. ಆಕೆಯು

ವನ್ನು ಬರೆದಿರುವರು. ಪುಸ್ತಕದಲ್ಲಿ ೧೦೨ ಪುಟಗಳಿವೆ. ಅದರಲ್ಲಿ ಕೇವಲ ೧೪ ಪುಟಗಳು ರಾಣಿ ಲಕ್ಷ್ಮೀಬಾಯಿಗಾಗಿ ಮೀಸಲಿವೆ. ಪುಸ್ತಕದ ಹೆಸರು ಮಾತ್ರ ಝಾನ್ಸಿಯ ರಾಣಿ ಲಕ್ಷ್ಮೀಬಾಯಿ. ಈ ೧೪ ಪುಟಗಳಲ್ಲಿಯೂ ಅನೇಕ ತಪ್ಪುಗಳಿವೆ. ಆತನು ಜನರಲ್ ರೋಜನನ್ನು ಪ್ರಶಂಸಿಸುತ್ತಾ "ಅತ್ಯಂತ ಚತುರನೂ, ಶಕ್ತಿಯುತನೂ ಆದ ಸೇನಾಪತಿ" ಎಂದು ಹೇಳಿರುವಲ್ಲಿ ರಾಣಿಯ ಪ್ರಶಂಸೆಯನ್ನೂ ಸ್ವಲ್ಪ ಮಟ್ಟಿಗೆ ಮಾಡಿರುವನು—He (Gen. Rose) was a man of boundless energy and of the highest military talents; ರಾಣಿಯ ಪರವಾಗಿ—She was an educated and polished lady—ಎಂದು ಬರೆದಿರುವನು. ಶ್ರೀ ಕಿಂಕೇಡರ ಕಲ್ಪನೆಯಲ್ಲಿ ಲಕ್ಷ್ಮೀಬಾಯಿಗೆ ಶಸ್ತ್ರವಿದ್ಯೆಯು ತಿಳಿದಿರಲಿಲ್ಲವೆಂದೂ, ಆಕೆಯು ಕ್ರಾಂತಿ ಎಬ್ಬಿಸಲಿಲ್ಲವೆಂದೂ ಭಾವಿಸಿದ್ದಾರೆ. ಅವರು ಆಕೆಯು ಒಂದು ಕೈಬಿಟ್ಟುಹೋದ ಸಮಸ್ಯೆಗಾಗಿ ಹೊಡೆದಾಡಿದಳೆಂದು ಹೇಳಿದ್ದಾರೆ. ಇದು ಆಂಗ್ಲೇಯರಗೆ ರುಚಿಸಬಹುದು. ಆದರೆ ಭಾರತೀಯರಿಗಲ್ಲ. ರಾಣಿಯು ಸ್ವರಾಜ್ಯಕ್ಕಾಗಿ ಯುದ್ಧಮಾಡಿ, ಸ್ವರಾಜ್ಯಕ್ಕಾಗಿ ಮಡಿದು, ಸ್ವರಾಜ್ಯ ಭವನಧ ತಳಹದಿಯಾಳೆಂಬುದರಲ್ಲಿ ಸಂದೇಹವಿಲ್ಲ. ಆಕೆಯ ದೇಶಬಾಂಧವರು ಇದನ್ನೇ ಒಪ್ಪಿದ್ದಾರೆ. ಮತ್ತು ಎಲ್ಲಿಯವರೆಗೆ ಭಾರತದಲ್ಲಿ ನಾರಿತ್ವ ಮತ್ತು ನರತ್ವಗಳಿರುವುವೋ ಅಲ್ಲಿಯವರೆಗೆ ಈ ಮಾತೇ ನಿಲ್ಲುವುದು.

ಈ ಪರಿಶಿಷ್ಟವನ್ನು ಶ್ರೀ ಕಿಂಕೇಡರನ್ನಾಗಲೀ ಮತ್ತಾವ ಗ್ರಂಥವನ್ನಾಗಲೀ ಅವಹೇಳನ ಮಾಡಲು ಬರೆದಿಲ್ಲ. ಆದರೆ ಯಾರಿಗೆ ಭ್ರಮೆ ನಿವಾರಣೆಯಾಗಿ ವಾಸ್ತವಾಂಶವು ತಿಳಿಯಬೇಕೋ ಅವರು ಈ ಉಪನ್ಯಾಸವನ್ನು ಓದಬಹುದು.

೧೯

ಮದುವೆಯ ಬಳುವಳಿಯಲ್ಲಿ ಅದರ ಹೆಸರೇ ಇಲ್ಲ. ಮಾಝಾ ಪ್ರವಾಸದ ಲೇಖಕನು ಉಜ್ಜಯಿನಿಯಲ್ಲಿ ಒಂದು ಯಜ್ಞದ ಪ್ರಸಂಗದಲ್ಲಿ ಒಬ್ಬ ಬ್ರಾಹ್ಮಣನಿಗೆ ೧೭ ಮಂದಿ ದಾಸಿಯರನ್ನು ದಾನವಾಗಿ ಕೊಟ್ಟರೆಂದೂ, ಅವರು ಆ ಬ್ರಾಹ್ಮಣನ ಹಿಂದೆಯೇ ಗಂಟುಮೂಟೆ ಕಟ್ಟಿಕೊಂಡು ಹೋದರೆಂದೂ ಬರೆದಿದ್ದಾನೆ. ಝಾನ್ಸಿಯ ರಾಣಿಗೂ ಅನೇಕ ಮಂದಿ ದಾಸಿಯರು ದೊರೆತಿದ್ದರೂ ಕೂಡ ಅವಳು ಅವರೊಂದಿಗೆ ಸದಾ ಸಖೀ ಭಾವದಿಂದ ವರ್ತಿಸುತ್ತಿದ್ದಳು.

೨೦

ಸುಂದರಿಯು ಕೆಲಸಮಾಡುತ್ತಿದ್ದ ಬುರುಜಿಯು ಈಗಲೂ ಶಿಥಿಲವಾಗಿ ನಿಂತಿದೆ. ಸುಂದರಿ ಬಾಯಿಯ ತೋಪಿನೊಡನೆ ಹೊಡೆದಾಡಿ ಮಡಿದ ಆಂಗ್ಲೇಯರ ಸಮಾಧಿಗಳು ಆಕೆಯ ಪರಾಕ್ರಮವನ್ನು ಸಾರುತ್ತಾ ಓರ್ಛಾದ್ವಾರದ ಹೊರಗಡೆ ಇಂದಿಗೂ ಇವೆ.

೨೧

ಕಾಶೀಬಾಯಿಗಾಗಲೀ ಜೂಹಿಗಾಗಲೀ ಯಾವ ನಿರ್ಮಿತ ಸಮಾಧಿಯೂ ಇ ಆದರೆ ಝಾನ್ಸಿಯ ಜನತೆಯ ಹೃದಯ ಮಂದಿರದಲ್ಲಿ ಪೂಜಿಸಲ್ಪಡುತ್ತಿರುವವರಿ ಸಮಾಧಿಯ ಅವಶ್ಯಕತೆಯೇಸಿದೆ? ಸೌಂದರ್ಯ ಮತ್ತು ಕಾರ್ಯಗಳ ಸಮ್ಮೇಳನ ಈ ಪ್ರಪಂಚದಲ್ಲಿ ಕಂಡುಬರುವುದು ದುರ್ಲಭ. ಆದರೆ ಅವರಲ್ಲಿ ಇವೆರಡೂ ಇದ್ದವು

೨೨

ರಾಣಿಗೆ ಅಶ್ವ ಪರೀಕ್ಷೆಯ ಪರಿಚಯವು ಚೆನ್ನಾಗಿದ್ದಿತು. ಒಂದು ಬಾರಿ ವರ್ತಕನು ಎರಡು ಕುದುರೆಗಳನ್ನು ಮಾರಾಟಕ್ಕೆ ತಂದನು. ಒಂದೊಂದಕ್ಕೂ ಒಂದೊಂದು ಸಹಸ್ರರೂಪಾಯಿ ಬೆಲೆ ಕಟ್ಟಿದನು. ರಾಣಿಯು ಒಡನೆಯೆ ಕುದುರೆಗಳನ್ನು ಪರೀಕ್ಷಿಸಿದಳು. ತದನಂತರ ಒಂದರ ಬೆಲೆಯನ್ನು ೧೦೦೦ ರೂಪಾಯಿಯೆಂದೂ ಮತ್ತೊಂದು ಕುದುರೆಗೆ ೫೦ ರೂಪಾಯಿಯೆಂದೂ ಬೆಲೆ ಕಟ್ಟಿದಳು. ಎರಡು ಕುದುರೆಗಳು ನೋಡಲು ಒಂದೇ ತರಹವಾಗಿದ್ದುವು. ಅಲ್ಲಿದ್ದವರೆಲ್ಲರೂ ಆಶ್ಚರ್ಯ ಚಕಿತರಾದರು ವರ್ತಕನಿಗೇನೋ ತನ್ನ ಕುದುರೆಗಳ ಅರಿವಿದ್ದಿತು. ಆದರೂ ಕುತೂಹಲವನ್ನು ನಿವಾರಿಸಿಕೊಳ್ಳುವುದಕ್ಕೋಸ್ಕರ ಆತನು "ಈ ಕುದರೆಗೆ ಒಂದು ಸಹಸ್ರ ಮತ್ತೊಂದಕ್ಕೆ ೫೦ ರೂಪಾಯಿ ಏತಕ್ಕೆ, ಸರ್ಕಾರ್?" ಎಂದು ಕೇಳಿದನು. ರಾಣಿಯು ೫೦ ರೂಪಾಯಿ ಬೆಲೆ ಕಟ್ಟಿದ ಕುದುರೆಯ ಎದೆಯೊಳಗೆ ಒಂದು ಹಳೆಯ ಗಾಯವಿದೆ ಎಂದಳು. ವ್ಯಾಪಾರಿಯು ತಲೆತಗ್ಗಿಸಿದನು.

೨೩

ರಾಮಚಂದ್ರ ದೇಶಮುಖನು ದಾಮೋದರರಾಯನನ್ನು ಗವಾಲಿಯರಿನಿಂದ ಕರೆದುಕೊಂಡು ಹೋಗಿ ಕೆಲವು ದಿನಗಳವರೆಗೆ ಅರಣ್ಯದಲ್ಲಿ ಅಡಗಿಕೊಂಡಿದ್ದನು. ವಿಕ್ಟೋರಿಯಾ ರಾಣಿಯ ಕ್ಷಮಾ ಘೋಷಣೆಯು ದೊರೆತನಂತರ ದಾಮೋದರರಾಯನನ್ನು ಕರೆದುಕೊಂಡು ಇಂದೋರಿನಲ್ಲಿ ಬಹಿರಂಗಕ್ಕೆ ಬಂದನು. ದಾಮೋದರರಾಯನ ದೇಹಾಂತವಾಗಿ ಕೆಲವೇ ವರ್ಷಗಳಾದುವು. ರಾಮಚಂದ್ರ ದೇಶಮುಖನು ಸುಮಾರು ೧೮೮೫ ರಲ್ಲಿ ಕಾಲವಾದನು. ಮೂಲಗ್ರಂಥಕರ್ತರು ದಾಮೋದರರಾಯನೊಂದಿಗೆ ಸಂಧಿಸಿ ಸಂಭಾಷಿಸಿರುವರು.

೨೪

ರಾಣೀ ಲಕ್ಷ್ಮೀಬಾಯಿಯ ಸಹೋದರನ ಮರಿಮಗಳು—ಶ್ರೀಮತಿ ಶೇವ ಎಂಬುವರು ನಾಗಪುರದಲ್ಲಿರುವರು. ಆಕೆ ಕರ್ವೆ ವಿಶ್ವವಿದ್ಯಾನಿಲಯದ ಪದವೀಧರಳು. ಅವರು ಈ ಪುಸ್ತಕವನ್ನು ಮರಾಠಿ ಭಾಷೆಯಲ್ಲಿ ಅನುವಾದಿಸಿರುವರು.

---